ಶ್ರೀಃ

ಶ್ರೀಮನ್ಮೂಲರಾಮೋ ವಿಜಯತೆ

ಶ್ರೀಮದ್ರಾಘವೇಂದ್ರ ಗುರುಸಾರ್ವಭೌಮೋ ವಿಜಯತೆ

ಶ್ರೀಮದ್ರಾಘವೇಂದ್ರ ಗುರುಸಾರ್ವಭೌಮರವರಿಂದ ವಿರಚಿತವಾದ

# ತಂತ್ರದೀಪಿಕೆಯ

## ಜಿಜ್ಞಾಸಾಧಿಕರಣ ವಾಕ್ಯಾರ್ಥ ಸಂಗ್ರಹ

ಮತ್ತು

## ಶ್ರೀ ವಿಷ್ಣುಸರ್ವೋತ್ತಮತ್ವ ಸಮರ್ಥನ.

ಕನ್ನಡಾನುವಾದ ಲೇಖಕರು :

ಪಂಡಿತರಾಜ, ಸಚ್ಛಾಸ್ತ್ರ ರತ್ನಾಕರ ಇತ್ಯಾದಿ ಬಿರುದಭೂಷಿತರಾದ

**ಶ್ರೀ ಮಾಗಡಿ ರಂಗನಾಥಾಚಾರ್ಯರು**

ಪ್ರಕಾಶಕರು :

ಶ್ರೀಗುರುಸಾರ್ವಭೌಮ ಸಂಸ್ಕೃತ ವಿದ್ಯಾಪೀಠ, ಮಂತ್ರಾಲಯ

ಎಮ್ಮಿಗನೂರು ತಾಲ್ಲೂಕು, ಕರ್ನೂಲು ಜಿಲ್ಲಾ (ಎ.ಪಿ.)

ಶ್ರೀ

ಶ್ರೀಮನ್ಮೂಲರಾಮೋ ವಿಜಯತೆ

ಶ್ರೀಮದ್ರಾಘವೇಂದ್ರಗುರುಸಾರ್ವಭೌಮೋ ವಿಜಯತೆ

ಶ್ರೀಮದ್ರಾಘವೇಂದ್ರ ಗುರುಸಾರ್ವಭೌಮರವರಿಂದ ವಿರಚಿತವಾದ

# ತಂತ್ರದೀಪಿಕೆಯ ಜಿಜ್ಞಾಸಾಧಿಕರಣ ವಾಕ್ಯಾರ್ಥ ಸಂಗ್ರಹ

## ಮತ್ತು

# ಶ್ರೀ ವಿಷ್ಣುಸರ್ವೋತ್ತಮತ್ವ ಸಮರ್ಥನ.


ಕನ್ನಡಾನುವಾದ ಲೇಖಕರು:
ಕೇಂದ್ರ ಮತ್ತು ರಾಜ್ಯ ಪ್ರಶಸ್ತಿ ಪುರಸ್ಕೃತರಾದ
ಪಂಡಿತರಾಜ, ಸಚ್ಛಾಸ್ತ್ರ ರತ್ನಾಕರ ಇತ್ಯಾದಿ ಬಿರುದಭೂಷಿತರಾದ
ಶ್ರೀ ಮಾಗಡಿ ರಂಗನಾಥಾಚಾರ್ಯರು
ಶ್ರೀ ಗುರುಸಾರ್ವಭೌಮ ಪತ್ರಿಕಾ ಸಂಪಾದಕರು
ಮಂತ್ರಾಲಯ.



ಪ್ರಕಾಶಕರು:
ಶ್ರೀ ಗುರುಸಾರ್ವಭೌಮ ಸಂಸ್ಕೃತ ವಿದ್ಯಾಪೀಠ, ಮಂತ್ರಾಲಯ
ಎಮ್ಮಿಗನೂರು ತಾಲ್ಲೂಕು, ಕರ್ನೂಲು ಜಿಲ್ಲಾ (ಎ.ಪಿ.)
1993

# ವಿಷಯಾನುಕ್ರಮಣಿಕೆ

☆ ☆ ☆

# ವಿಶೇಷ ವಾಕ್ಯಾರ್ಥಗಳ ಸಂಗ್ರಹದಲ್ಲಿರುವ ರಹಸ್ಯ ಸ್ವಾರಸ್ಯವಾಕ್ಯಾರ್ಥಗಳು



# ವಿಶೇಷವಾಕ್ಯಾರ್ಥಗಳ ನಿರೂಪಣೆಯಲ್ಲಿನ ರಹಸ್ಯವಿಷಯಗಳು.

**ಪ್ರಸ್ಥಾನಭೇದಶ್ಲೋಕಾರ್ಥಸಂಗ್ರಹದಲ್ಲಿ**

ಇದರ ಒಳರಹಸ್ಯವನ್ನು ಶುದ್ಧಾ ಶುದ್ಧಾ ಪಕ್ಷಿಯ ಕಥೆಯಲ್ಲಿ ವಿವರಿಸಲಾಗಿದೆ. ಕ್ಷುದ್ರಶಂಕೆಗೆ ಪರಿಹಾರವನ್ನು ತೋರಿಸಲಾಗಿದೆ.



**ಶ್ರೀವಿಷ್ಣುಸರ್ವೋತ್ತಮತ್ವಸಮರ್ಥನೆಯ ಪ್ರಕರಣದಲ್ಲಿ**



**ಶ್ರೀಹರಿಸರ್ವೋತ್ತಮತ್ವ ಪ್ರತಿಪಾದಕವಾದ ಕಂಡುಮುನಿಗೆ ಸಿದ್ಧಿಪ್ರದವಾದ**
**ಬ್ರಹ್ಮಪಾರಸ್ತೋತ್ರದ ಅರ್ಥದ ವಿವರಣೆ** 

# ವಿಶೇಷಾರ್ಥ ನಿರೂಪಣೆ

ಸರ್ವೋತ್ತಮನಾದ ಶ್ರೀಮನ್ನಾರಾಯಣ ಆಜ್ಞೆಯಂತೆ ತತ್ತ್ವಜ್ಞಾನ ಕಾರ್ಯಕ್ಕಾಗಿ ಅವತರಿಸಿದ ಪ್ರಧಾನವಾಯುದೇವನ ಮೂರನೇ ಅವತಾರಭೂತರಾದ ಶ್ರೀಮದಾನಂದತೀರ್ಥಭಗವತ್ಪಾದರು ರಚಿಸಿದ ಮೂವತ್ತೇಳು ಅಥವಾ ಮೂವತ್ತೊಂಭತ್ತು ಗ್ರಂಥರತ್ನಗಳಲ್ಲಿ ಬ್ರಹ್ಮಸೂತ್ರಗಳಿಗೆ ಸಂಬಂಧಿಸಿದಂತೆ, ಬ್ರಹ್ಮಸೂತ್ರಭಾಷ್ಯ, ಅಣುಭಾಷ್ಯ ಅನುವ್ಯಾಖ್ಯಾನ ನ್ಯಾಯವಿವರಣಗಳು ಸೇರಿವೆ.

ಇವುಗಳಲ್ಲಿ ಬ್ರಹ್ಮಸೂತ್ರಭಾಷ್ಯವು ಶ್ರೀಮನ್ಮಧ್ವವಿಜಯಕಾರರ ವಚನದಂತೆ ಅವ್ಯಕ್ತತರ್ಕತತಿ ರೂಪವಾಗಿಯೂ, ಅನು ವ್ಯಾಖ್ಯಾನವು ವ್ಯಕ್ತತರ್ಕತತಿ ರೂಪವಾಗಿಯೂ, ಅಣುಭಾಷ್ಯವು ಸಂಗ್ರಹಭಾಷ್ಯರೂಪವಾಗಿಯೂ ಇರುತ್ತದೆ.

ಇವುಗಳ ಪೈಕಿ ಬ್ರಹ್ಮಸೂತ್ರಭಾಷ್ಯದಲ್ಲೂ, ಅಣುಭಾಷ್ಯದಲ್ಲೂ ಆರಂಭದ ಮಂಗಳ ಪದ್ಯವು ಸಮಾನವಾದ ಆನು ಪೂರ್ವಿಯಿಂದ ಕೂಡಿದ ಒಂದೇ ತರಹೆಯ ಮಂಗಳಪದ್ಯವಿದೆ. ನಾರಾಯಣಂಗುಣೈಸ್ಸರ್ವೈರುದೀರ್ಣಂದೋಷವರ್ಜಿತಮ್ ಜ್ಞೇಯಂಗಮ್ಯಂಗುರೂಂಶ್ಚಾಪಿನತ್ವಾ ಸೂತ್ರಾರ್ಥ ಉಚ್ಯತೆ ಎಂದೇ ಹೇಳಿದ್ದಾರೆ.

ಇದರ ವಿಷಯದಲ್ಲಿ ಅದ್ವೈತ ತತ್ವಸುಧಾಕಾರರು ಒಂದು ಆಕ್ಷೇಪವನ್ನು ಎತ್ತಿದ್ದಾರೆ ಅದೇನೆಂದರೆ ಒಂದೇ ಶ್ಲೋಕವನ್ನು ಒಂದೇ ವ್ಯಕ್ತಿಯಿಂದ, ಒಂದೇ ಉದ್ದೇಶ್ಯದಿಂದ, ಒಂದೇ ಅರ್ಥವುಳ್ಳದಾದನ್ನಾಗಿ ಶ್ರೀಮಧ್ವಾಚಾರ್ಯರು ಎರಡೂ ಗ್ರಂಥಗಳಲ್ಲಿ ರಚಿಸಿದ್ದಾರೆ, ಎಂದು ನಮ್ಮ ಭಾಷ್ಯಕಾರರ ಮೇಲೆ ನ್ಯೂನತಾರೂಪವಾಗಿ ಆಕ್ಷೇಪಿಸಿರುವರು. ಇದಕ್ಕೆ ಅಣುಭಾಷ್ಯಗ್ರಂಥದ ವಿಭಿನ್ನವ್ಯಾಖ್ಯಾನಕಾರರ ವ್ಯಾಖ್ಯಾನದ ದೃಷ್ಟಿಯಿಂದ ತಕ್ಕ ಉತ್ತರವನ್ನೀಯಲಾಗಿದೆ. ಇದರಿಂದ ಶ್ರೀಮಧ್ವರ ನಿರೂಪಣೆಯಲ್ಲಿ ಯಾವ ಕುಂದಕಕ್ಕೂ ಅವಕಾಶವಿರುವುದಿಲ್ಲ.

ಅಣುಭಾಷ್ಯದ ವಿಚಾರವಾಗಿ ಪ್ರಸಕ್ತವಾದ ಗ್ರಂಥಗಳು ಮತ್ತು ಕೆಲವು ವ್ಯಾಖ್ಯಾನಗಳ ವಿವರ:-

ಶ್ರೀಮನ್ಮಧ್ವರು ರಚಿಸಿರುವ ಅಣುಭಾಷ್ಯದ ವಿಚಾರವಾಗಿ ಶ್ರೀಸುಮಧ್ವವಿಜಯ ಶ್ಲೋಕವು ಈ ರೀತಿ ಇದೆ.

**ಅನಂತೋಽರ್ಥಃ ಪ್ರಕಟಿತಃತ್ವಯಾಣೌಭಾಷ್ಯಸಂಗ್ರಹೇ**
**ಅಹೋ ಆತ್ಮಕರಿಷ್ಟಪ್ಯಾಕೃಷ್ಣೇನೇವಾನನಾಂತರೇ ।। ಇತಿ ।।**

ಅಭಿಪ್ರಾಯ :- ಶ್ರೀಮಧ್ವರು ತಮ್ಮ ಅಸಾಧಾರಣವಾದ ಗ್ರಂಥರಚನಾಸಾಮರ್ಥ್ಯವನ್ನು ತಿಳಿಸಲಿಕ್ಕಾಗಿ ತಮ್ಮ ಅಣುವೇದಾಂತ ಭಾಷ್ಯದಲ್ಲಿ ಅಪರಿಮಿತವಾದ ಅರ್ಥವನ್ನು, ಶ್ರೀಕೃಷ್ಣಪರಮಾತ್ಮನು ತನ್ನ ಪುಟ್ಟ ಬಾಯಲ್ಲಿ ಯಶೋದಾದೇವಿಗೆ ಬ್ರಹ್ಮಾಂಡವನ್ನೇ ಹೇಗೆ ತೋರಿಸಿದನೋ ಅದರಂತೆ ತೋರಿಸಿರುತ್ತಾರೆ ಇದು ಆಶ್ಚರ್ಯ ಎಂದು ಪ್ರಶಂಸಿಸಲಾಗಿದೆ. ಇದು ಒಬ್ಬ ವ್ಯಾಖ್ಯಾನಕಾರರ ವಿವರಣೆಯು.

ಮತ್ತೊಬ್ಬ ವ್ಯಾಖ್ಯಾನಕಾರರು

೨ ಬ್ರಹ್ಮಸೂತ್ರಭಾಷ್ಯಾರ್ಥದ ಸಂಕೋಚಕಥನ ರೂಪವಾದ, ಅಣುವೇದಾಂತ ಭಾಷ್ಯದಲ್ಲಿ ಅಪರಿಮಿತವಾದ ಅರ್ಥವು ಪ್ರಕಟವಾಗಿದೆ. ಇದು ಆಶ್ಚರ್ಯವೆಂದು ನಿರೂಪಿಸಿದ್ದಾರೆ.

೩ ಅಣುಭಾಷ್ಯದ ಕಡೆಯಲ್ಲಿ ಶ್ರೀಮಧ್ವರೇನೇ ತಾವು ರಚಿಸಿರುವ ಅಣುಭಾಷ್ಯವು " ಸರ್ವಶಾಸ್ತ್ರಾರ್ಥ ಸಂಗ್ರಹ " ವೆಂದು ಹೇಳಿದ್ದಾರೆ.

**" ಪೂರ್ಣಪ್ರಜ್ಞೇನಮುನಿನಾ ಸರ್ವಶಾಸ್ತ್ರಾರ್ಥ ಸಂಗ್ರಹಃ**
**ಕೃತೋಽಯಂ ಪ್ರೀಯತಾಂ ತೇನಪರಮಾತ್ಮಾರಮಾಪತಿಃ ।।೧೩।।**

ಇಲ್ಲಿ ತೋರಿಸಿದ ಸರ್ವಶಾಸ್ತ್ರಾರ್ಥ ಸಂಗ್ರಹ ಎಂಬ ಪದಕ್ಕೆ ಪ್ರಾಚೀನ ವ್ಯಾಖ್ಯಾನಕಾರರು " ಸರ್ವಶಾಸ್ತ್ರಂ = ಸರ್ವಪ್ರಮೇಯ ವಿಷಯಂ = ತದ್ಬ್ರಹ್ಮಮೀಮಾಂಸಾಶಾಸ್ತ್ರಂ = ತದರ್ಥಸ್ಯ - ಸಂಗ್ರಹಃ - ಅಯಂಬುದ್ಧ್ಯಾರೋಹಾರ್ಥಂ - ಕೃತಃ = **ಸಂಕುಚ್ಯಪಿಂಡೀಕೃತ್ಯ - ಬುದ್ಧ್ಯಾರೋಹಾರ್ಥಂ - ಉಕ್ತಃ** ಇತ್ಯರ್ಥಃ ಎಂದು ಪ್ರಾಚೀನಟೀಕಾಕಾರರಾದ ಶ್ರೀನಾರಾಯಣ ಪಂಡಿತಾಚಾರ್ಯರ ವಿವರಣೆಯಾಗಿದೆ. ಇತಿ ಶ್ರೀಮದ್ಬ್ರಹ್ಮಸೂತ್ರಾಣುಭಾಷ್ಯ ಟೀಕಾಯಾಂ ಚತುರ್ಥಾಧ್ಯಾಯಃ ಸಮಾಪ್ತ ।" ಎಂದಿದೆ. ಈ ಪ್ರಾಚೀನ ಟೀಕಾರೀತ್ಯಾ = ಅಣುಭಾಷ್ಯಾರ್ಥವು = ಸಮಗ್ರಬ್ರಹ್ಮಮೀಮಾಂಸಾಶಾಸ್ತ್ರಾರ್ಥವು " ಸಂಕುಚ್ಯಪಿಂಡೀಕೃತ್ಯ " ಬುದ್ಧಿಗೆ ಗೋಚರವಾಗುವಂತೆ ರಚಿತವಾಗಿದೆಯೆಂದು ಅಭಿಪ್ರಾಯ.

೪. ಅಣುಭಾಷ್ಯಕ್ಕೆ ಮತ್ತೊಂದು ವ್ಯಾಖ್ಯಾನವಾಗಿರುವ ಫಲಾರೀಯದಲ್ಲಿ ಈ ಮಂಗಳಪದ್ಯದಲ್ಲಿನ ನಿರೂಪಣೆಯಲ್ಲಿ ಇತರರು ಶಂಕಿಸಬಹುದಾದುದನ್ನು ತಾವೇ ಶಂಕಿಸಿ ಅದಕ್ಕೆ ತಕ್ಕ ಉತ್ತರವನ್ನು ತೋರಿಸಿ, ಶಂಕಾಪರಿಹಾರ ಪ್ರಕಾರವನ್ನು ವ್ಯಕ್ತಪಡಿಸಿದ್ದಾರೆ.

ಅದರ ವಾಕ್ಯಗಳು ಈ ರೀತಿ ಇವೆ.

**" ನನು ಸೂತ್ರಾರ್ಥಉಚ್ಯತೆ" ಇತಿ ಪ್ರತಿಜ್ಞಾ ಅನುಪಪನ್ನಾ ಉತ್ತರತ್ರಸರ್ವಸೂತ್ರಾಣಾಂ ವ್ಯಾಖ್ಯಾನಾದರ್ಶನಾತ್ ಇತಿಚೇತ್ ಸತ್ಯಂ ಭಾಷ್ಯಾದೇವ ಸರ್ವಸೂತ್ರಾಣಾಂ ವ್ಯಾಖ್ಯಾತತ್ವೇನ, ಅತ್ರಪ್ರತ್ಯಧಿಕರಣಂ ತಾತ್ಪರ್ಯಮಾತ್ರಸ್ಯೈವೋಚ್ಯಮಾನತ್ವಾತ್। ತಾತ್ಪರ್ಯಕಥನಸ್ಯಾಪಿ ವ್ಯಾಖ್ಯಾನತ್ವಸ್ಯ ಸುಪ್ರಸಿದ್ಧತ್ವಾತ್ ಅತಃ ಯುಕ್ತೇಯಂ ಪ್ರತಿಜ್ಞಾ ಇತಿ**

ಅಭಿಪ್ರಾಯ :- ಅಣುಭಾಷ್ಯದ ಮಂಗಳ ಪದ್ಯದಲ್ಲೂ, ಸೂತ್ರಭಾಷ್ಯದ ಮಂಗಳ ಪದ್ಯದಲ್ಲೂ ಏಕ ರೀತಿಯಾಗಿ " ಸೂತ್ರಾರ್ಥ ಉಚ್ಯತೆ " ಎಂದೇ ಪ್ರತಿಜ್ಞೆ ಮಾಡಿದ್ದಾರೆ. ಆದರೆ ಸೂತ್ರಭಾಷ್ಯದಲ್ಲಿನ ಪ್ರತಿಜ್ಞೆಗೆ ಅನುಗುಣವಾಗಿ, ಸೂತ್ರಭಾಷ್ಯದಲ್ಲಿ ಸಕಲಸೂತ್ರಗಳಿಗೂ ವಿವರವಾದ ವ್ಯಾಖ್ಯಾನವು ಕಂಡುಬಂದಿದೆ. ಅದರಂತೆ ಅಣುಭಾಷ್ಯದಲ್ಲಿ ಸಕಲಸೂತ್ರಗಳ ಪದಗಳನ್ನು ಹಿಡಿದು ವ್ಯಾಖ್ಯಾನವನ್ನು ಮಾಡಿಲ್ಲ. ಆದಕಾರಣ ಅಣುಭಾಷ್ಯದಲ್ಲಿನ " ಸೂತ್ರಾರ್ಥಉಚ್ಯತೆ " ಎಂಬ ಪ್ರತಿಜ್ಞೆಯು ಅನುಪಪನ್ನವಾಗಿದೆ" ಎಂದು ನನು ಇತ್ಯಾದಿಯಾಗಿ ಶಂಕಿಸಲಾಗಿದೆ. ಇದು ನಿಜವಾದ ಪರಿಸ್ಥಿತಿ ಎಂಬ ಅಭಿಪ್ರಾಯದಿಂದ " ಸತ್ಯಂ " ಎಂದು ಒಪ್ಪಿಕೊಂಡು, ಬ್ರಹ್ಮಸೂತ್ರಭಾಷ್ಯಕ್ಕೂ, ಅಣುಭಾಷ್ಯಕ್ಕೂ ಇರತಕ್ಕ ವ್ಯತ್ಯಾಸವನ್ನು ಮುಂದಿನ ವಾಕ್ಯದಲ್ಲಿ ವಿವರಿಸಿದ್ದಾರೆ. ಅಣುಭಾಷ್ಯದಲ್ಲಾದರೋ ಕೇವಲ ಸಮಗ್ರ ಅಧಿಕರಣಗಳ ತಾತ್ಪರ್ಯಾರ್ಥವನ್ನು ಮಾತ್ರ ಸಂಗ್ರಹವಾಗಿ ತಿಳಿಸಲಾಗಿದೆ. ತಾತ್ಪರ್ಯಾರ್ಥಕಥನವೂ ಸದ್ವ್ಯಾಖ್ಯಾನರೂಪವೇ ಆಗಿರುವುದರಿಂದ " ಸೂತ್ರಾರ್ಥ " ಉಚ್ಯತೆ ಎಂಬ ಅಣುಭಾಷ್ಯದ ಆದಿಯಲ್ಲಿನ ಪ್ರತಿಜ್ಞೆಯು ಯುಕ್ತವೇ ಆಗಿದೆಯೆಂದು ಹಿಂದಿನ ಶಂಕೆಯ ಪರಿಹಾರವನ್ನು ಪ್ರತಿಜ್ಞೆಗೆ ಸಾರ್ಥಕ್ಯವನ್ನು ತೋರಿಸಿದ್ದಾರೆ.

ಇದೇ ರೀತಿ ಈ ವ್ಯಾಖ್ಯಾನಕಾರರು ಮುಂದೆ ಅಣುಭಾಷ್ಯದ ಕಡೆಯಲ್ಲಿರತಕ್ಕ " ಸರ್ವಶಾಸ್ತ್ರಾರ್ಥಸಂಗ್ರಹಃ " ಎಂಬ ಪದಕ್ಕೆ " **ಶಿಷ್ಯಾಣಾಂ ಅಲ್ಪ ಶಕ್ತಿಕಾಯ ಜನಾನಾಯ ಗ್ರಂಥಸ್ಯಾಸ್ಯಸ್ಯೇತಿ. ಅರ್ಥಾಧಿಕ್ಯಂಚದರ್ಶಯನ್ ಸ್ವಕೃತ ಗ್ರಂಥಸ್ಯ ಪರಿಪೂರ್ತಿಮೇವ ಫಲಸ್ಯೇನ ಪ್ರಾರ್ಥಯತೇ ಪೂರ್ಣಪ್ರಜ್ಞೇನೇತಿ** ಎಂದಿದ್ದಾರೆ.

ಅಣುಭಾಷ್ಯಕ್ಕೆ ಅತ್ಯಮೋಘವ್ಯಾಖ್ಯಾನವಾದ ತತ್ತ್ವಮಂಜರೀವ್ಯಾಖ್ಯಾನಕಾರರಾದ ಶ್ರೀರಾಘವೇಂದ್ರಗುರುಸಾರ್ವಭೌಮರು ತತ್ವಮಂಜರಿಯಲ್ಲಿ "ಸರ್ವಶಾಸ್ತ್ರಾರ್ಥಸಂಗ್ರಹ" ವೆಂಬ ಮೂಲವಲ್ಲಿನಪದಕ್ಕೆ, "**ಏವಂ ಸಮಾಪಿತಗ್ರಂಥೋ ಭಗವಾನ್, ಶಿಷ್ಯಾಣಾಮಾದರಾತಿಶಯ ಜನನಾಯ ಗ್ರಂಥಸ್ಯಾಲ್ಪತ್ವೇಽಪಿ (= ಅಣುಭಾಷ್ಯಸ್ಯ - ಅಲ್ಪತ್ವೇಽಪಿ = ಅತಿಸಂಗ್ರಹರೂಪತ್ವೇಽಪಿ) ಅರ್ಥಾಧಿಕ್ಯಂ ದರ್ಶಯನ್ ಕೃತಗ್ರಂಥಂ ಈಶ್ವರೇಽರ್ಪಯತಿ**" ಎಂದಿದ್ದಾರೆ, **ಆಹಾ** ಅತಿಸೂಕ್ಷ್ಮ ದೃಷ್ಟಿಯಿಂದ ಪರಿಶೀಲಿಸಿದಾಗ "ಶ್ರೀಮಧ್ವರ ಗ್ರಂಥರಚನೆಯ ಅದ್ಭುತಸಾಮರ್ಥ್ಯವು" ಅಹೋ! ಎಂದು ಆಶ್ಚರ್ಯ ರೂಪವಾಗಿರುವುದನ್ನು ವ್ಯಕ್ತಪಡಿಸಿರುವುದರಿಂದ

ಸೂತ್ರಾರ್ಥಉಚ್ಯತೆ = ೧ ಎಂಬಲ್ಲಿ ಸೂತ್ರಾರ್ಥ ಪದಘಟಕವಾದ ಅರ್ಥಶಬ್ದಕ್ಕೆ ಸೂತ್ರಭಾಷ್ಯರೀತ್ಯಾ ಅವ್ಯಕ್ತತರ್ಕತತಿರೂಪವಾದ ಅರ್ಥವೆಂದು,

ಪ್ರತಿಪದ ಸೂತ್ರವ್ಯಾಖ್ಯಾನ ರೂಪವಾದ ಭಾಷ್ಯವೆಂದೂ

೨ ಅನುವ್ಯಾಖ್ಯಾನವಲ್ಲಿ ವ್ಯಕ್ತತರ್ಕತತಿರೂಪವಾದ ಅತಿವಿಸ್ತಾರರೂಪವಾದ ಸೂತ್ರವ್ಯಾಖ್ಯಾನವೆಂದೂ

೩ ಅಣುಭಾಷ್ಯವಲ್ಲಿ ಅತಿಚಮತ್ಕಾರವಾಗಿ ಇಡೀ ಸಮಗ್ರಬ್ರಹ್ಮಮೀಮಾಂಸಾಶಾಸ್ತ್ರಾರ್ಥದ ಸಂಗ್ರಹರೂಪವಾದ ಪಿಂಡೀಕೃತವಾದ ಅರ್ಥದ ನಿರೂಪಣೆಯೆಂದೂ ತೀರ್ಮಾನಿಸಬೇಕಾಗಿದೆ.

ಇದರಿಂದ, ಬ್ರಹ್ಮಸೂತ್ರವ್ಯಾಖ್ಯಾನರೂಪಗಳಾದ

೧. ಸೂತ್ರಭಾಷ್ಯ ೨. ಅನುವ್ಯಾಖ್ಯಾನ ೩. ಅಣುಭಾಷ್ಯ

ಈ ಗ್ರಂಥಗಳ ಉದ್ದೇಶವೂ ಬೇರೆಯಾಗಿದೆ.

೨. ನಿರೂಪಣೆಯಲ್ಲಿಯೂ ವ್ಯತ್ಯಾಸವಿದೆ.

೩. ಅರ್ಥವೂ ಸಹ ವಿಶೇಷಾಭಿಪ್ರಾಯ ಗರ್ಭಿತವಾಗಿರುವ ಪ್ರಯುಕ್ತ

ಇತರರ ಯಾವ ಕ್ಷುದ್ರಶಂಕೆಗೂ ಅವಕಾಶವಿಲ್ಲ. ಮತ್ತು ನಮ್ಮ ಶ್ರೀಮದಾಚಾರ್ಯರ ಗ್ರಂಥಗಳ ಗಹನವಾದ ಅರ್ಥ ನಿರೂಪಣೆಯ ಮರ್ಮವನ್ನೇ ಇತರವಾದಿಗಳು ಗ್ರಹಿಸಿಲ್ಲ.

ಶ್ರೀಹರಿವಾಯುಗಳ ಅನುಗ್ರಹ ವಿಶೇಷವಿಲ್ಲದವರಿಗೆ ಶ್ರೀಮಧ್ವರವಾಙ್ಮಯದ ನಿಗೂಢಾಭಿಪ್ರಾಯಗಳೇ ಹೊಳೆಯುವುದಿಲ್ಲ.

ಮುಕ್ತಿಯೋಗ್ಯರ ವರ್ಗದಲ್ಲೂ ಕೂಡ ಅವರವರ ಯೋಗ್ಯತೆಗೆ ತಕ್ಕಂತೆಯೇ ಅರ್ಥವಿಶೇಷಗಳ ಸ್ಫೂರ್ತಿಯು ಉಂಟಾಗುತ್ತದೆಯೆಂಬ ರಹಸ್ಯಸಂಗತಿಯನ್ನು ನ್ಯಾಯಸುಧಾಕಾರರು ಅನುವ್ಯಾಖ್ಯಾನದ "ಬಹುಜ್ಞಾ ಏವಜಾನಂತಿ ವಿಶೇಷೇಣಾರ್ಥಮೇತಯೋಃ" ಎಂಬಲ್ಲಿ ವ್ಯಕ್ತಪಡಿಸಿರುತ್ತಾರೆ.

ಈ ಎಲ್ಲವನ್ನೂ ಕೂಲಂಕಷವಾಗಿ ಪರಿಶೀಲಿಸಿದಾಗ ಶ್ರೀನಾರಾಯಣಪಂಡಿತಾಚಾರ್ಯರು ಸೂತ್ರಭಾಷ್ಯದ ವಿಷಯದಲ್ಲಿ ಹೇಳಿರುವ

" **ಅಸ್ಮದೂಷ್ಮಮಕರೋದನಂತಧೀಃ ಭೂತಭಾವಿ ಭವದಾತ್ಮಭಿಃ ಕ್ವಚಿತ್**" ಎಂಬ ವಾಣಿಯು ಅಕ್ಷರಶಃ ಸತ್ಯ,ಸತ್ಯ,ಸತ್ಯ ಎಂದು ಘಂಟಾಘೋಷವಾಗಿ ಹೇಳತಕ್ಕದ್ದಾಗಿದೆ. ಇಂತಹ ಅಪಾರಮಹಿಮೋಪೇತವಾಗಿರುವುದರಿಂದಲೇ ಶ್ರೀಮಧ್ವರ ಅತಿಪವಿತ್ರವಾದ ಸೂತ್ರಭಾಷ್ಯವು " **ಗಾಂಗಮಂಗಳತರಂಗ ಭಂಗದ ಶ್ರಾಂತಸುಶ್ರಿ ಶ್ರೀಹರಿವೇಶ್ಮ ಕೃಷ್ಣಮಃ ಯದ್ಗತ್ಮೈಕತಮ ವರ್ಣಲೇಖಕಃ ಸತ್ಯತೀರ್ಥ ಇಹ ಭಾಷ್ಯಮಾಲಿಖತ್** " ಎಂದು ಸೂತ್ರಭಾಷ್ಯದಮಹಿಮಾತಿಶಯವನ್ನು ಸಾತ್ವಿಕ ಅಧಿಕಾರಿಜನತೆಯ ತಿಳವಳಿಕೆಗಾಗಿ ಪ್ರವೃತ್ತಿಗಾಗಿ ವ್ಯಕ್ತಪಡಿಸಿರುವರು.

ತನಗೆ ಸಿಕ್ಕಿದ ಐಶ್ವರ್ಯಪ್ರದವಾದ, ಅಮೂಲ್ಯವಾದ ಬಲಮುರೀಶಂಖವನ್ನು ತ್ಯಜಿಸಿದವನು, ಹೇಗೆ ಮೂರ್ಖನೋ ಅದರಂತೆ ಮೋಕ್ಷಾದಿ ಪುರುಷಾರ್ಥಪ್ರದವಾದ ಶ್ರೀಮಧ್ವರ ಭಾಷ್ಯವನ್ನು ಬಿಟ್ಟವನು ಪುರುಷಾರ್ಥಗಳಿಂದ ಭ್ರಷ್ಟನಾದ ನೀಚಬುದ್ಧಿಯುಳ್ಳವನೆಂದು **ಅಪ್ರಮೇಯಮತಿಶಾಸ್ತ್ರ ಮೀದೃಶಂ ಯಸ್ತ್ಯಜತ್ಯುಪನತಂ ಸುದುರ್ಲಭಮ್ ತಸ್ಯ ತುಲ್ಯ ಮತಿರೇಷದುರ್ಜನೋ ಸಾಧವಾಸ್ಯಸದೃಶೋऽಸ್ತಿ ನೀಚಧೀಃ** ಎಂದು, ಶ್ರೀಶೋಭನಭಟ್ಟರು (ಶ್ರೀ ಪದ್ಮನಾಭತೀರ್ಥರ ಪೂರ್ವಾಶ್ರಮದ ಹೆಸರು) ಹೇಳಿರುವರು.

ಆದುದರಿಂದ ಪೂರ್ವಪುಣ್ಯಕ್ಕೆ ಫಲಪ್ರದನಾದ ಪರಮಾತ್ಮನ ದಯೆಯಿಂದ ಲಬ್ಧವಾಗಿರುವ ಪವಿತ್ರವಾದ ಶ್ರೀವೈಷ್ಣವ ಜನ್ಮವು ಲಭಿಸಿರುವ ಸುವರ್ಣಾವಕಾಶದ ಸಮಯದಲ್ಲಿ ಅಧಿಕಾರಿಚೇತನರಾದ ಶ್ರೀಹರಿಗುರುಭಕ್ತಿಸಂಪನ್ನರಾದ ಸಕಲ ಮಾಧ್ವರೂ ಸಹ ಅವರು ಲೌಕಿಕವ್ಯವಹಾರಾಸಕ್ತರಾಗಿರಲಿ, ವೈದಿಕರೇ ಆಗಿರಲಿ, " ನನ್ನಸಮಾನರಿಲ್ಲವೆಂದು " ದುರಹಂಕಾರವನ್ನು ಬಿಟ್ಟು ಸುರಾಪಾನಮಾತದಂತೆ, ತಾನು ಅಸ್ವತಂತ್ರನು ಪರಮಾತ್ಮನು ಸ್ವತಂತ್ರನೆಂಬ ದೃಢನಿಶ್ಚಯದಿಂದ " ನಪಿಬಾ ಬೌಗಾಥಾಃ " ಎಂದು ಆದರ್ಶಪ್ರಾಯವಾಗಿ ಶ್ರೀಟೀಕಾರಾಯರು ಮಾರ್ಗದರ್ಶನಮಾಡಿರುವಂತೆ ವಿಷ್ಣುಭಕ್ತಿಭರಿತರಾಗಿ ಶ್ರೀಮನ್ಮಧ್ವರ ಭಾಷ್ಯವನ್ನು " ಮನೋವಾಗ್ಭಿರಾವರ್ತಯಂತೇ ಸ್ವಶಕ್ತ್ಯಾ " ಎಂದು ಶೀಪದೇವವಾದಯಂತೆ ನಿರಂತರಶ್ರವಣಮನನಾದಿಗಳನ್ನು ಮಾಡುತ್ತಾ ಈ ವೈಷ್ಣವ ಜನ್ಮವನ್ನು ಸಾರ್ಥಕಗೊಳಿಸಿ ಸರ್ವೋತ್ತಮನಾದ ಶ್ರೀಹರಿಯ ಮತ್ತು ಗುರುಗಳ ಪರಮಾನುಗ್ರಹಕ್ಕೆ ಪಾತ್ರರಾಗಬೇಕೆಂಬುದೇ ಮುಖ್ಯವಾಗಿ ಗಮನಿಸಬೇಕಾದ ಸಂಗತಿಯಾಗಿದೆ.

॥ ಶ್ರೀ ॥

## ॥ ಶ್ರೀಮನ್ಮೂಲರಾಮೋ ವಿಜಯತೇ ॥

## ಅನುಗ್ರಹವಚನ

ಶ್ರೀ ಮದ್ಧಂಸನಾಮಕ ಪರಮಾತ್ಮನಿಂದ ಪ್ರಾರಂಭವಾದ ಅವಿಚ್ಛಿನ್ನವಾದ ಸಾಕ್ಷಾತ್ಪರಂಪರೆಗೆ ಸೇರಿದವರೂ, ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ಸುಪ್ರತಿಷ್ಠಿತವಾದ ವೇದಾಂತವಿದ್ಯಾಸಾಮ್ರಾಜ್ಯದ ಭವ್ಯದಿವ್ಯ ಪೀಠಾಧಿಪತಿಗಳೂ, ಕಲಿಯುಗದ ಕಲ್ಪವೃಕ್ಷ ಕಾಮಧೇನುಗಳೆಂಬ ದಿಗಂತವಿಶ್ರಾಂತ ಕೀರ್ತಿಪ್ರತಿಷ್ಠೆಗಳಿಂದ ವಿಶ್ವವಿಖ್ಯಾತರಾದ ಸಿದ್ಧಿಪ್ರದ ಶ್ರೀಮಂತ್ರಾಲಯ ಕ್ಷೇತ್ರದಲ್ಲಿ ಭವ್ಯದಿವ್ಯವೃಂದಾವನದಲ್ಲಿ ಸಶರೀರ ಮೂರ್ತಿಮತ್ತಾಗಿ ಬೃಂದಾವನದಲ್ಲಿ ಪ್ರವೇಶಿಸಿ ಸನ್ನಿಹಿತರಾಗಿ ಭಕ್ತರ ಇಷ್ಟಾರ್ಥಗಳನ್ನು ಕರುಣಿಸುತ್ತಿರುವವರೂ ಆದ ಶ್ರೀಮದ್ರಾಘವೇಂದ್ರಗುರುಸಾರ್ವಭೌಮರವರ ಭವ್ಯದಿವ್ಯ ಪರಂಪರೆಯಲ್ಲಿ ಪೀಠಾಧಿಪತಿಗಳಾಗಿ ಮುಂದುವರೆದವರೂ ಶ್ರೀಮತ್ಸುಯಮೀಂದ್ರತೀರ್ಥ ಶ್ರೀಪಾದಂಗಳವರ ಕರಕಮಲ ಸಂಜಾತ ಶ್ರೀಮತ್ಸುಜಯೀಂದ್ರ ತೀರ್ಥ ಶ್ರೀಪಾದ ವರಕುಮಾರರೂ ಆದ

### ಶ್ರೀ ೧೦೦೮ ಶ್ರೀಮತ್ಸುಶಮೀಂದ್ರತೀರ್ಥಶ್ರೀಪಾದಂಗಳವರ
### ಅನುಗ್ರಹವಿಶೇಷವಚನ.

ಸಮಗ್ರಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ವ್ಯಾಖ್ಯಾನವಾಗಿ ರಚಿತಗಳಾಗಿರುವ ಪೂರ್ವಪ್ರಸ್ಥಾನಭಾಷ್ಯ, ಉತ್ತರಪ್ರಸ್ಥಾನ ಭಾಷ್ಯಗಳೆನಿಸಿದ, ಬ್ರಹ್ಮಸೂತ್ರಭಾಷ್ಯ, ಅನುವ್ಯಾಖ್ಯಾನಗಳಿಗೆ ವ್ಯಾಖ್ಯಾನ ರೂಪವಾಗಿ ರಚಿತಗಳಾಗಿರುವ ಪ್ರಾಚೀನ ನವೀನ ಟೀಕೆಗಳಲ್ಲಿಯೂ ಮೇರುಕೃತಿಗಳಾದ ಶ್ರೀಮನ್ನ್ಯಾಯಸುಧಾ, ವ್ಯಾಸತ್ರಯಗಳಲ್ಲಿಯೂ ಸಹ ವಿಮರ್ಶಿತವಾಗಿ ಅಂತಿಮವಾಗಿ ನಿರ್ಣಯಿಸಲ್ಪಟ್ಟಿರುವ ಸಿದ್ಧಾಂತಾರ್ಥಗಳನ್ನೆಲ್ಲಾ **"ಪ್ರಸ್ಥಾನಭೇದ ಪ್ರೋಕ್ತಾರ್ಥ ಸಂಗ್ರಹೋಽಪ್ಯಯಂ ಮಮ"** ಎಂಬ ವಚನದಂತೆ, ಅತಿಚಿಕ್ಕವಾಕ್ಯಗಳಲ್ಲಿ ಬ್ರಹ್ಮಸೂತ್ರಾರ್ಥಗಳನ್ನು ಕ್ರೋಢೀಕರಿಸಿ, ಜಿಜ್ಞಾಸುವರ್ಗದ ಹಿಂದಿನ ಎಲ್ಲಾ ನಿರ್ಣೀತ ವಾಕ್ಯಾರ್ಥಗಳ ಮನಸ್ಸಕ್ಕೆ ಮಹೋಪಕಾರಕವಾಗಿ ಆದರ್ಶಪ್ರಾಯವಾಗಿ ಅಸಾಧಾರಣವಾಗಿ ಉಜ್ವಲವಾಗಿ ಶ್ರೀಮದ್ರಾಘವೇಂದ್ರ ಗುರುಸಾರ್ವಭೌಮರಿಂದ ರಚಿತವಾದ ಕೃತಿರತ್ನವೇ ತಂತ್ರದೀಪಿಕೆಯು. ಇದರಲ್ಲಿನ ಪ್ರತಿಯೊಂದು ಅಧಿಕರಣಗಳಲ್ಲಿಯೂ ಪ್ರಸ್ಥಾನಭೇದ ಪ್ರೋಕ್ತಾರ್ಥಗಳನ್ನು ಗ್ರಂಥಕಾರರಿಂದ ಸಂಗೃಹೀತವಾದವುಗಳನ್ನು ಸರಳ ಕನ್ನಡಭಾಷೆಯಲ್ಲಿ ಮುಕ್ತಿಯೋಗ್ಯ ಚೇತನರಿಗೆ ಅರ್ಥವಾಗುವಂತೆ ವಿವರಿಸಿ ರಚಿಸಬೇಕೆಂದು ನಮ್ಮ ಗುರುವರೇಣ್ಯರಾದ ಶ್ರೀಮತ್ಸುಜಯೀಂದ್ರತೀರ್ಥರ ಆಜ್ಞೆಯಪ್ರಕಾರ ನಮ್ಮ ಸಂಸ್ಥಾನದ ಆಸ್ಥಾನಪಂಡಿತವರೇಣ್ಯರಾದ, ಪಂಡಿತಪ್ರಕಾಂಡ, ಪಂಡಿತರಾಜ, ಶ್ರೀಮಾಗಡಿ ರಂಗನಾಥಾಚಾರ್ಯರು ಸರಳ ಕನ್ನಡಭಾಷೆಯಲ್ಲಿ ರಚಿಸಿದ್ದಾರೆ.

ಇದರ ಜೊತೆಗೆ **"ವಿಷ್ಣೋಃ ಸರ್ವೋತ್ತಮತ್ವಂ ಚ ಸರ್ವದಾ ಪ್ರತಿಪಾದಯ"** ಎಂಬ ಶ್ರೀಮದಾಚಾರ್ಯರ ದಿವ್ಯ ಸಂದೇಶಕ್ಕೆ ತಕ್ಕಂತೆ ಸಕಲಮುಕ್ತಿಯೋಗ್ಯರು ಅತ್ಯವಶ್ಯವಾಗಿ ತಿಳಿಯಲೇಬೇಕಾಗಿರುವ ಶ್ರೀಹರಿಸರ್ವೋತ್ತಮತ್ವವನ್ನೂ ಸುಪ್ರಮಾಣವಾಗಿ ಸಾಧಿಸಿ ಪ್ರಕಟಿಸಬೇಕೆಂಬ ನಮ್ಮ ಆಜ್ಞೆಯಪ್ರಕಾರ ಆ ಭಾಗವನ್ನೂ ಮತ್ತು ಅದರ ಜೊತೆಗೆ ನಿತ್ಯವೂ ದೇವರ ಪೂಜಾಕಾಲದಲ್ಲಿ ಪಠಿಸುವ ಸಂಪ್ರದಾಯಬದ್ಧವಾದ ಕಂಡುಮುನಿಗೆ ಸಿದ್ಧಿಪ್ರದವಾದ ಶ್ರೀವಿಷ್ಣುಪುರಾಣೋಕ್ತವಾದ ಬ್ರಹ್ಮಪಾರ ಸ್ತೋತ್ರವನ್ನು ಶ್ರೀದತ್ತಾತ್ರೇಯಾಚಾರ್ಯರಿಂದ ವಿರಚಿತವಾಗಿರುವ ಸುಬೋಧಿನೀ ವ್ಯಾಖ್ಯಾನ ಸಹಿತವಾಗಿ, ವಿಶೇಷಾರ್ಥಗಳೊಡನೆ ಶ್ರೀಮಾಗಡಿ ರಂಗನಾಥಾಚಾರ್ಯರು ಬರೆದುದನ್ನು ನಮ್ಮ ಆಜ್ಞಾಪ್ರಕಾರ ಮಂತ್ರಾಲಯದ ಶ್ರೀಗುರುಸಾರ್ವಭೌಮ ಸಂಸ್ಕೃತವಿದ್ಯಾಪೀಠದ ಅಧ್ಯಕ್ಷರಾದ ಶ್ರೀಯುತಪಂಡಿತವರೇಣ್ಯ ಶ್ರೀರಾಜಾಗಿರಿಯಾಚಾರ್ಯರ ನಿರ್ದೇಶನದಂತೆ ಶ್ರೀಗುರುಸಾರ್ವಭೌಮ ಸಂಸ್ಕೃತವಿದ್ಯಾಪೀಠದ ವತಿಯಿಂದ ಪ್ರಕಟಿಸಲಾಗಿದೆ.

ಈ ಗ್ರಂಥವನ್ನು ನಮ್ಮ ಗುರುಗಳ ಮೂಲಕ ಶ್ರೀರಾಘವೇಂದ್ರಗುರುಸಾರ್ವಭೌಮಾಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಮನ್ಮೂಲರಾಮದೇವರಿಗೆ ಸಮರ್ಪಿಸುತ್ತೇವೆ. ಈ ರೀತಿ ಶ್ರೀಮದಾನಂದತೀರ್ಥಭಗವತ್ಪಾದರ ದಿವ್ಯ ಸಂದೇಶದಂತೆ ನಿರಂತರ ಶ್ರೀಹರಿಸರ್ವೋತ್ತಮತ್ವ ಪ್ರತಿಪಾದನೆಯಲ್ಲೇ ಇಡೀ ಜೀವನವನ್ನೇ ಮೀಸಲಾಗಿಟ್ಟಿರುವ ನಮ್ಮ ಶ್ರೀಮಠದ ಆಸ್ಥಾನವಿದ್ವಾಂಸರಾದ ಪಂಡಿತರಾಜ ಶ್ರೀಮಾಗಡಿ ರಂಗನಾಥಾಚಾರ್ಯರಿಗೆ ಅಸ್ಮದುಪಾಸ್ಯ ಶ್ರೀಮದ್ರಾಘವೇಂದ್ರ ಗುರುಸಾರ್ವಭೌಮಾಂತರ್ಗತ ಶ್ರೀಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಮನ್ಮೂಲರಾಮದೇವರು ಇತೋಪ್ಯತಿಶಯಿತವಾದ ಜ್ಞಾನ ಭಕ್ತಿ ವೈರಾಗ್ಯಾದಿ ಸಕಲಶ್ರೇಯಸ್ಸನ್ನೂ ಅನುಗ್ರಹಿಸಲೆಂದು ಶ್ರೀಮನ್ಮೂಲರಾಮದೇವರನ್ನು ಪ್ರಾರ್ಥಿಸುತ್ತೇವೆ.

ಇತಿ ನಾರಾಯಣ ಸ್ಮರಣೆಗಳು.

ತಾ.೨೮ - ೮ - ೧೯೯೩

ಮಂತ್ರಸಿದ್ಧಿಪ್ರದ ಮಂತ್ರಾಲಯಕ್ಷೇತ್ರ

☆ ☆ ☆

ಶ್ರೀ

ಶ್ರೀಮನ್ಮೂಲರಾಮೋ ವಿಜಯತೆ

ಶ್ರೀಮದ್ರಾಘವೇಂದ್ರಗುರುಸಾರ್ವಭೌಮೋ ವಿಜಯತೆ

**ಶ್ರೀಮದ್ರಾಘವೇಂದ್ರ ಗುರುಸಾರ್ವಭೌಮರವರಿಂದ ವಿರಚಿತವಾದ**

# ತಂತ್ರದೀಪಿಕೆಯ ಮುನ್ನುಡಿ

ಸರ್ವೋತ್ತಮನಾದ ಶ್ರೀಮನ್ನಾರಾಯಣನಿಂದ ಬ್ರಹ್ಮಾದಿಗಳಿಗೆ ಉಪದಿಷ್ಟವಾದ ಶ್ರೀ ವಿಷ್ಣು ಸರ್ವೋತ್ತಮತ್ವ ವಿಷಯಕವಾದ ತತ್ವಜ್ಞಾನವು ಸಂಪ್ರದಾಯಬದ್ಧವಾಗಿ ಉಪದಿಷ್ಟವಾದ ಕ್ರಮದಲ್ಲಿಯೇ ವೈವಸ್ವತ ಮನ್ವಂತರದ ಮಹಾ ಯುಗಗಳಲ್ಲಿ ಇಪ್ಪತ್ತೆಂಟನೆಯ ಕೃತಯುಗದಲ್ಲಿ ಅನ್ಯಥಾ ಜ್ಞಾನಕ್ಕೆ ಅವಕಾಶವಾಗದೇ ಸುಸ್ಥಿರವಾಗಿತ್ತು. ಆ ತತ್ವಜ್ಞಾನವು ತ್ರೇತಾಯುಗದಲ್ಲಿ ಹಿಂದಿನಂತೆ ಕೆಲವರಲ್ಲಿ ಮಾತ್ರ ಉಳಿದಿದ್ದಾದರೂ ಕಾಲಮಹಿಮೆಯಿಂದ ಕಾಲಕ್ರಮದಲ್ಲಿ ಕೆಲವರಿಗೆ ಶ್ರೀವಿಷ್ಣುವಿನ ಗುಣೋತ್ಕರ್ಷಜ್ಞಾನವೇ ತತ್ವಜ್ಞಾನವೋ ಅಥವಾ ಐಕ್ಯಜ್ಞಾನವೇ ತತ್ವಜ್ಞಾನವೋ ಎಂಬ ಸಂದೇಹವೂ ಮತ್ತು ಕೆಲವರಿಗೆ ಜೀವಬ್ರಹ್ಮೈಕ್ಯಜ್ಞಾನವೇ ತತ್ವಜ್ಞಾನವು, ಶ್ರೀ ವಿಷ್ಣುವಿನ ಗುಣೋತ್ಕರ್ಷ ಜ್ಞಾನವು ತತ್ವಜ್ಞಾನವಲ್ಲವೆಂಬ ವಿಪರೀತ ಜ್ಞಾನವು ಉಂಟಾಯಿತು. ಕಾಲಮಹಿಮೆಯಿಂದ ಕೃತಯುಗಕ್ಕಿಂತಲೂ, ತ್ರೇತಾಯುಗಕ್ಕಿಂತಲೂ ಬೇರೆಯಾದ ಇಪ್ಪತ್ತೆಂಟನೆಯ ದ್ವಾಪರ ಯುಗದಲ್ಲಿ 'ದ್ವಾವೇವ ಧರ್ಮಪಾದೌ ಪರಂಯಸ್ಮಿನ್ ಯುಗೇ ಪ್ರಾಪ್ತೇ" ಎಂಬ ತತ್ವಪ್ರದೀಪದ ನಿರ್ವಚನದಂತೆ ಕ್ರಮವಾಗಿ ಕ್ಷೀಣಿಸುತ್ತಾ ಕಟ್ಟಕಡೆಗೆ ಧರ್ಮವು ಏಕಾಂಶದಿಂದ ಉಳಿದಿರಬಹುದಾದ ಯುಗದಲ್ಲಿ (ದ್ವಾಪರಯುಗದಲ್ಲಿ) ಪಾದದ್ವಯಕ್ಕೆ ಹ್ರಾಸವು ಕಂಡುಬಂದಿದ್ದು ಮಾತ್ರವಲ್ಲದೇ ಮಹಾತಪಸ್ವಿಗಳಾದ ಗೌತಮ ಋಷಿವರೇಣ್ಯರ ಶಾಪದಿಂದ ಭೂಲೋಕದಲ್ಲಿ ಎಲ್ಲೆಡೆಯಲ್ಲಿಯೂ ಹಿಂದಿನ ಕೃತಯುಗದ ತತ್ವಜ್ಞಾನವು ಪೂರ್ತಿಯಾಗಿ ಚ್ಯುತಿಯನ್ನು ಹೊಂದಿತು. ಶಾಪದ ಪ್ರಭಾವದಿಂದ ದ್ವಾಪರ ಯುಗದಲ್ಲಿ ನಿಜವಾದ ತತ್ವಜ್ಞಾನವೆಂಬ ಶ್ರೀ ವಿಷ್ಣು ಸರ್ವೋತ್ತಮತ್ವ ಜ್ಞಾನಕ್ಕೆ ಪೂರ್ತಿ ಧಕ್ಕೆ ಬಂದೊದಗಿವಾಗ ಸಂಪ್ರದಾಯ ಪ್ರವರ್ತಕರೇ ಇಲ್ಲದಾಗಿದ್ದಾಗ ಮುಕ್ತಿಯೋಗ್ಯ ರಾದ ಸಜ್ಜನರ ವೃಂದದಲ್ಲಿ ಕೃಪಾಳುಗಳಾದ ಬ್ರಹ್ಮಾದಿ ದೇವತೆಗಳು ಅನಂತಕಲ್ಯಾಣ ಗುಣಪರಿಪೂರ್ಣನಾದ ಸಕಲ ದೋಷ ರಹಿತನಾದ ಸರ್ವೋತ್ತಮನಾದ ಶ್ರೀಮನ್ನಾರಾಯಣನನ್ನು ಧರ್ಮ ತತ್ತ್ವಜ್ಞಾನಗಳ ಪುನರುಜ್ಜೀವನಕ್ಕಾಗಿ ಭಕ್ತಿಪೂರ್ವಕ ವಾಗಿ ಪ್ರಾರ್ಥಿಸಿದರು.

ಆಗ ಶರಣಾಗತರಾದ ಭಕ್ತರಾದ ದೇವತೆಗಳಿಂದ ಪ್ರಾರ್ಥಿತನಾದ ಪರಮಾತ್ಮನು ತತ್ವಜ್ಞಾನ ಕಾರ್ಯ ಕ್ಕಾಗಿಯೇ ಪರಾಶರನಾಮಕ ಋಷಿಗಳಿಂದ ಸತ್ಯವತೀದೇವಿಯ ಮೂಲಕ ಶ್ರೀ ವೇದವ್ಯಾಸರೂಪದಿಂದ ಅಭಿವ್ಯಕ್ತ ನಾದನು. ಶ್ರೀವ್ಯಾಸರೂಪದಿಂದ ವ್ಯಕ್ತನಾದ ಪರಮಾತ್ಮನು ಹಿಂದೆಯೇ ಶ್ರೀಮನ್ನಾರಾಯಣನಿಂದ (ಶ್ರೀ ಹಯಗ್ರೀವ ರೂಪದಿಂದ) ಮೂಲ ವೇದದಿಂದ ಭಾಗಿಸಲ್ಪಟ್ಟ ಋಕ್, ನಿಗದ, ಸಾಮ, ಅಥರ್ವವೆಂಬ ಹೆಸರಿನಿಂದ ಉಪವೇದಗಳೆಂದು ಕರೆಯಲ್ಪಟ್ಟ ಭಾಗಗಳಿಂದ ಮತ್ತೆ ಶ್ರೀ ವೇದವ್ಯಾಸರೂಪದಿಂದ ಅವಾಂತರ ವೇದವೆಂದು ಪ್ರಸಿದ್ಧವಾದ ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ಅಥರ್ವಣ ವೇದಗಳೆಂದು ನಾಲ್ಕು ಹೆಸರಿನಿಂದ ವಿಭಾಗ ಮಾಡಿದನು. ಋಕ್‌ನಿಗದ ಸಾಮಗಳೆಂಬ ಮೂಲವೇದದಿಂದ ಉದ್ಧೃತವಾದವುಗಳನ್ನು ಉಪವೇದಗಳೆಂದು ಕರೆಯಲಾಗಿದೆ. ಮೂಲವೇದದಿಂದ ಉಪವೇದಗಳು ಅದರಿಂದ ಅವಾಂತರ ವೇದಗಳು ಉದ್ಧೃತವಾಗಿವೆಯೆಂದು ಪುರಾಣಗಳಿಂದ ತಿಳಿಯಲ್ಪಟ್ಟಿದೆ. ಆ ಶ್ರೀ ವೇದ ವ್ಯಾಸರು ಎಲ್ಲಾ

ವೇದಗಳ ಅಧ್ಯಯನ ಕಾರ್ಯದಲ್ಲಿಯೂ ಸಕಲ ವೇದೋಕ್ತ ಕರ್ಮಗಳ ಆಚರಿಸುವಿಕೆಯಲ್ಲಿಯೂ ಅಶಕ್ತರಾದ ಸಜ್ಜನರಲ್ಲಿನ ಕೃಪಾದೃಷ್ಟಿಯಿಂದ ಶಾಖಾಭೇದವನ್ನು ಕ್ರಮಭೇದವನ್ನು ವ್ಯವಸ್ಥೆಗೊಳಿಸಿದರು. ಋಗ್ವೇದವನ್ನು ೨೪ ಭಾಗಗಳನ್ನಾಗಿಯೂ ಯಜುರ್ವೇದವನ್ನು ೧೦೧ ಶಾಖೆಗಳನ್ನಾಗಿಯೂ, ಸಾಮವೇದವನ್ನು ೧೦೦೦ ಶಾಖೆಗಳನ್ನಾಗಿಯೂ ಮತ್ತು ಅಥರ್ವಣ ವೇದವನ್ನು ೧೨ ಶಾಖೆಗಳನ್ನಾಗಿಯೂ ವಿಭಾಗಮಾಡಿದರು. ಈ ರೀತಿ ಅನಂತ ಶಾಖಾತ್ಮಕಗಳಾದ ವೇದಗಳ ತತ್ತ್ವಾರ್ಥಗಳ ನಿಷ್ಕೃಷ್ಟ ಜ್ಞಾನಕ್ಕಾಗಿ ಆ ವೇದಾರ್ಥಗಳನ್ನು ನಿಶ್ಚಯಿಸುವ ನ್ಯಾಯಗಳಿಂದ (ಯುಕ್ತಿಗಳಿಂದ) ಕೂಡಿದ ವೇದಾರ್ಥ ನಿರ್ಣಾಯಕ ನ್ಯಾಯ ನಿಬಂಧನಾತ್ಮಕ ಸೂತ್ರಗಳನ್ನು ರಚಿಸಿದರು. ಈ ಸೂತ್ರಗಳೇ ಬ್ರಹ್ಮಸೂತ್ರಗಳೆಂದೂ, ವೇದಾಂತ ಸೂತ್ರಗಳೆಂದೂ, ಉತ್ತರಮೀಮಾಂಸಾ ಸೂತ್ರಗಳೆಂದೂ, ಬ್ರಹ್ಮಮೀಮಾಂಸಾ ಸೂತ್ರಗಳೆಂದೂ ಶಾರೀರಕ ಮೀಮಾಂಸಾ ಸೂತ್ರಗಳೆಂದೂ ಪ್ರಸಿದ್ಧಗಳಾಗಿವೆ.

ಗೌತಮ ಋಷಿಗಳ ಶಾಪದ ವಿವರಣೆಯನ್ನು ತತ್ತ್ವಪ್ರದೀಪಕಾರರು ಉದಾಹರಿಸುವುದನ್ನು ತತ್ತ್ವಪ್ರಕಾಶಿಕಾ ಭಾವದೀಪಕಾರರಾದ ಶ್ರೀರಾಘವೇಂದ್ರ ಗುರುಸಾರ್ವಭೌಮರು ಭಾವದೀಪದಲ್ಲಿ ಈ ಕೆಳಕಂಡಂತೆ ಸಂಗ್ರಹಿಸಿರುತ್ತಾರೆ.

"ದುರ್ಭಿಕ್ಷೋಪಹತಾ ಋಷಯೋ ಗೌತಮಂ ತಪಃ ಪ್ರಭಾವ ಸಮೃದ್ಧಂ ತದಾಶ್ರಮ-
ಮಾಶ್ರಿತ್ಯ ಚಿರಕಾಲಂ ತೇನ ಸಮ್ಮಾನಿತಾಃ ತತ್ರ ಸುಖಮುಷಿತ್ವಾ ಕಾಲೇನ ಸುಭಿಕ್ಷಂ
ಸ್ವದೇಶಂ ಯಿಯಾಸವಸ್ತದನುಜ್ಞಾಂ ಯಾಚಮಾನಾ ಅಪಿ ಗೌತಮೇನಾಲಬ್ಧಾನುಜ್ಞಾಃ
ಶಿವಶಿರಃಸ್ಥಾಂ ಸುರಸರಿತಂ ಸಹಸ್ರೀಂ ನಿಷ್ಕಾಸಯಂತ್ಯಾ ಭವಾನ್ಯಾ ಚೋದಿತೇನ ವಿಘ್ನೇಶ್ವ-
ರೇಣೋಪದಿಷ್ಟೋಪಾಯಾಃ ಜ್ಞಾನಾದಿತಪೋಬಲೇನ ಕಾಂಚನ ಗಾಂ ತದಾಶ್ರಮಸ್ಥ-
ಸಸ್ಯ ಗ್ರಾಹಿಣೀಂ ವಿದಧುಃ।

ಗೌತಮಸ್ತಾಮಪಕ್ರಾಮಯಿತುಂ ಸ್ಪೃಷ್ಟಯಷ್ಟಿಮಾತ್ರೇಣ ಸಹಸಾ ನಿಪತಿತಾಂ ಗಾಂ
ಅವಲೋಕ್ಯ ಪರಿತಪ್ತಮನಾ ಬಭೂವ।

ತದೇವ ಲಬ್ಧಾಂತರಾ ವಿಪ್ರಾ ನಾಯಂ ಗೌತಮೋ ಭೋಜ್ಯಾನ್ನ
ಇತ್ಯುಕ್ತ್ವಾ ಪ್ರತಸ್ಥಿರೇ।

ತತೋ ಗೌತಮಶ್ಚಿರಕಾಲಚೀರ್ಣತಪಃಪ್ರಭಾವೇಣ
ಪರಿತೋಷಿತಪಶುಪತಿಶಿರೋಽವತಾರಿತಯಾ ಸುರಸರಿತಾ
ಗಾಂ ಪರಿಷಿಚ್ಯ ಉತ್ಥಾಪಯಾಮಾಸ।

ತತಃ ಕಿಮೇತದಿತಿ ವಿಚಿಂತ್ಯ ವಿಪ್ರಕೃತಮತ್ರಮಾದಿಸರ್ವಂ ನಿಶ್ಚಿತ್ಯ ತಾನ್
"ಜ್ಞಾನಹೀನಾ ಭವೇ
ಯುರೇತೇ" ಇತಿ ಶಶಾಪೇತಿ ಶಾಪಕ್ರಮಸ್ಯ ತತ್ತ್ವಪ್ರದೀಪೇ ಉಕ್ತತ್ವಾತ್ ನಾತ್ರತದುಕ್ತಿಃ"
ಇತಿ.

ತತ್ತ್ವಪ್ರದೀಪೋಕ್ತವಾದ ಈ ಗೌತಮಶಾಪದ ಕನ್ನಡದ ವಿವರಣೆಯು ಈ ಕೆಳಗೆ ಕಂಡಂತಿದೆ:

ಹಿಂದೆ ಒಮ್ಮೆ ಭೂಲೋಕದಲ್ಲಿ ಹನ್ನೆರಡು ವರ್ಷದ ಅವಧಿಯಲ್ಲಿ ಮಳೆಯಿಲ್ಲದ ದುರ್ಭಿಕ್ಷವು ಉಂಟಾಯಿತು. ಆಯಾ ಆಶ್ರಮವಾಸಿಗಳಾದ ಋಷಿಗಳೆಲ್ಲಾ ಜೀವನಕ್ಕೆ ತುಂಬಾ ತೊಂದರೆಯಾಯಿತು. ಆದರೆ ಮಹಾತಪಸ್ವಿಗಳಾದ ಗೌತಮರ ತಪಃ ಪ್ರಭಾವದಿಂದ ಆ ಗೌತಮರ ಆಶ್ರಮವು ದುರ್ಭಿಕ್ಷೆಯ ಬಾಧ್ಯವಾಗದೇ ಸಸ್ಯಸಮೃದ್ಧಿಯಿಂದ

ಕೂಡಿತ್ತು. ಅಲ್ಲಿ ಯಜ್ಞಯಾಗಾದಿಗಳೂ, ಹವ್ಯಕವ್ಯಾದಿಗಳೂ, ಪಾಠಪ್ರವಚನಗಳೂ ನಿರಂತರವಾಗಿ ನಿರ್ವಿಘ್ನವಾಗಿ ಸಾಗುತ್ತಿದ್ದವು. ದುರ್ಭಿಕ್ಷೆಯ ಕ್ಲೇಶದಿಂದ ಪರಿತಪಿಸುತ್ತಿದ್ದ ಋಷಿಗಳೆಲ್ಲರೂ ಸುಸಮೃದ್ಧಿಯಿಂದ ಕೂಡಿದ ಗೌತಮರ ಆಶ್ರಮಕ್ಕೆ ಹೋಗಿ ಅವರಿಂದ ಆದರಿಸಲ್ಪಟ್ಟವರಾಗಿ ಚಿರಕಾಲ ಅಲ್ಲಿ ನಿರ್ವಿಘ್ನವಾಗಿ ಪಾಠಪ್ರವಚನಗಳಲ್ಲಿ ತತ್ಪರರಾಗಿ ನೆಮ್ಮದಿಯಿಂದಿದ್ದರು. ಹೀಗಿರುವಲ್ಲಿ ಕಾಲಕ್ರಮದಲ್ಲಿ ಎಲ್ಲ ಕಡೆಯಲ್ಲಿಯೂ ಸುವೃಷ್ಟಿಯಾಗಿ ದುರ್ಭಿಕ್ಷವು ಕಳೆದುಹೋಗಿ ಸುಭಿಕ್ಷವಾಯಿತು. ಆಗ ಬೇರೆ ಬೇರೆ ಜಾಗಗಳಿಂದ ಬಂದಿದ್ದ ಎಲ್ಲ ಋಷಿಗಳಿಗೆ ತಮ್ಮ ತಮ್ಮ ಆಶ್ರಮಗಳಿಗೆ ತೆರಳಬೇಕೆಂಬ ಹಂಬಲಿಕೆಯು ಉಂಟಾಗಿ ತಮ್ಮ ಊರುಗಳಿಗೆ ತೆರಳಲು ಗೌತಮರ ಅನುಮತಿಯನ್ನು ಕೇಳಿದರು. ಅತಿಥಿ ಅಭ್ಯಾಗತರ ಸತ್ಕಾರ್ಯದಲ್ಲಿ ಆಸಕ್ತರಾದ ಗೌತಮರು ಅವರಿಗೆ ಸುಲಭವಾಗಿ ಅನುಮತಿಯನ್ನೀಯಲಿಲ್ಲ. ಗೌತಮರನ್ನು ತಿರಸ್ಕರಿಸಿ ಸ್ನೇಹದ ಭಂಗಕ್ಕೆ ಚ್ಯುತಿಯನ್ನು ತಂದುಕೊಂಡು ಹೊರಡುವ ಧೈರ್ಯವೂ ಸಹ ಆ ಋಷಿಗಳಿಗೆ ಉಂಟಾಗದೆ ಚಿಂತಾಕ್ರಾಂತರಾಗಿದ್ದರು.

ಹೀಗಿರುವಲ್ಲಿ ತನ್ನ ಗಂಡನ ತಲೆಯ ಮೇಲಿರುವ ಗಂಗೆಯನ್ನು ಅಲ್ಲಿಂದ ಹೊರಡಿಸುವ ಇಚ್ಛೆಯಿಂದ ಪಾರ್ವತಿಯು ಮಗನಾದ ವಿಘ್ನೇಶ್ವರನನ್ನು ಆ ಬ್ರಾಹ್ಮಣರಲ್ಲಿಗೆ ಕಳುಹಿಸಿದಳು. ಬ್ರಹ್ಮಚಾರಿ ವೇಷಧಾರಿಯಾಗಿ ಬಂದ ಗಣೇಶನು ಚಿಂತಾಕ್ರಾಂತರಾಗಿದ್ದ ಬ್ರಾಹ್ಮಣರ ಸಮೀಪಕ್ಕೆ ಬಂದು "ಎಲೈ ಪೂಜ್ಯರಾದ ತಪೋಧನರೇ, ನೀವೆಲ್ಲಾ ತಪೋಧನರಾಗಿದ್ದೀರಿ. ಬಹಳ ಕಾಲದಿಂದ ಪರಾನ್ನದಿಂದ ಕಾಲಕಳೆಯುತ್ತಿದ್ದೀರಿ. ಪರಾನ್ನ ಭೋಜನವು ತಪಸ್ಸಿನ ಕ್ಷೀಣತೆಗೆ ಕಾರಣವಾಗುತ್ತದೆ. ನಿಮ್ಮ ನಿಮ್ಮ ಆಶ್ರಮಗಳಿಗೆ ಬೇಗ ಬೇಗ ತೆರಳಿರಿ. ಇದಕ್ಕೆ ನಾನೊಂದು ಉಪಾಯವನ್ನು ಹೇಳುತ್ತೇನೆ. ನಿಮ್ಮ ತಪೋಬಲದಿಂದ ಒಂದು ಹಸುವನ್ನು ನಿರ್ಮಿಸಿರಿ. ಅದು ಗೌತಮರ ಆಶ್ರಮದಲ್ಲಿನ ಪೈರುಗಳನ್ನು ತಿನ್ನುತ್ತಿರುವಂತೆ ಇರಲಿ. ಅದನ್ನು ನೋಡಿ ಗೌತಮರು ಓಡಿಸಲು ಪ್ರಯತ್ನ ಪಡುತ್ತಾರೆ. ಆಗ ಅದು ಕೂಡಲೇ ಪ್ರಾಣ ಹೋಗಿ ಬಿದ್ದುಬಿಡುತ್ತದೆ. ಆಗ ನೀವು ಗೌತಮರಿಗೆ ಹೇಳಿಬಿಡಿರಿ. ಈ ಹಸುವು ಈಗ ಮೃತವಾಗಿದೆ. ಇದರಿಂದ ನಿಮಗೆ ಗೋಹತ್ಯಾ ದೋಷವು ಬಂದಿದೆ. ಗೋಹತ್ಯೆ ಮಾಡಿದ ಇಂತಹವರ ಅನ್ನವನ್ನು ಊಟಮಾಡಬಾರದು ಎಂದು ಹೇಳಿ ನಿಮ್ಮ ನಿಮ್ಮ ಆಶ್ರಮಗಳಿಗೆ ಹೋಗಿ ಎಂದು ಉಪಾಯವನ್ನ ಗಣಪತಿಯು ಅವರಿಗೆ ಹೇಳಿದನು.

ದೈವಸಂಕಲ್ಪದಂತೆ ಆ ಋಷಿಗಳು ಹಾಗೆಯೇ ಮಾಡಿ ಗೌತಮರ ಆಶ್ರಮದಿಂದ ಹೊರಟುಹೋದರು. ಆಗ ಋಷಿಶ್ರೇಷ್ಠರಾದ ಗೌತಮರು ಉಗ್ರವಾದ ತಪಸ್ಸಿನಿಂದ ರುದ್ರದೇವನನ್ನು ಸಂತೋಷಗೊಳಿಸಿ ಒಂದಂಶದಿಂದ ಆ ರುದ್ರನ ತಲೆಯ ಮೇಲಿರುವ ಮಂದಾಕಿನಿಯನ್ನು ಕರೆತಂದು ಆ ಗಂಗೆಯ ನೀರಿನಿಂದ ಸತ್ತುಬಿದ್ದಿದ್ದ ಆ ಹಸುವಿಗೆ ಅಭಿಷೇಕ ಮಾಡಿದರು. ಆ ಕೂಡಲೇ ಅದು ಮೇಲಕ್ಕೆದ್ದಿತು. ಅದೇ ಗೋದಾವರಿ ಎಂದು ಇಂದಿಗೂ ಜೀವನದಿಯಾಗಿ ಜಗತ್ತಿನಲ್ಲಿ ಪ್ರಸಿದ್ಧವಾಗಿದೆ. ಇಷ್ಟಾದ ತರುವಾಯ ಗೌತಮರಿಗೆ, ಇದೇನಿದು ? ಇದಕ್ಕೆ ಕಾರಣ ವೇನು ? ನಾನು ಆ ಹಸುವಿಗೆ ಪ್ರಾಣಾಪಾಯವಾಗುವಂತೆ ಹೊಡೆದಿಲ್ಲ. ಕೇವಲ ಕಮಂಡಲು ನೀರನ್ನು ಮಾತ್ರ ಎರಚಿದೆ. ಅಷ್ಟುಮಾತ್ರಕ್ಕೆ ಕೆಳಕ್ಕೆ ಬಿದ್ದಿತು. ಗಂಗೆಯ ನೀರು ತಾಕಿದ ಕೂಡಲೇ ಎದ್ದಿತು. ಇದು ಏನೋ ತುಂಬಾ ಆಶ್ಚರ್ಯಕರವಾದ ಸಂಗತಿಯಾಗಿದೆ. ಇದರ ಹಿನ್ನೆಲೆಯು ಏನೋ ಇರಬೇಕೆಂದು ಮನಸ್ಸಿನಲ್ಲಿ ಆಲೋಚಿಸಿ ಯೋಗಸಮಾಧಿಗೆ ಕುಳಿತರು. ಪಾರ್ವತೀದೇವಿಯ ಪ್ರೇರಣೆ, ಗಣೇಶನ ಉಪದೇಶ, ಋಷಿಗಳ ಚೇಷ್ಟೆ ಎಲ್ಲವೂ ಕರತಲಾಮಲಕವಾದಂತೆ ಗೌತಮರಿಗೆ ಭಾಸ ವಾಯಿತು. ತಮ್ಮಿಂದ ಉಪಕೃತರಾಗಿದ್ದರೂ ಧರ್ಮಮೂಢರಾಗಿ ತಮ್ಮನ್ನು ಅಪವಾದಕ್ಕೆ ಗುರಿಮಾಡಿದುದೆಲ್ಲ ವನ್ನೂ ಸಹಿಸಿಕೊಂಡ ಗೌತಮರು "ಧರ್ಮಮೂಢರಾದ ಈ ಋಷಿಗಳೆಲ್ಲಾ ತತ್ತ್ವಜ್ಞಾನಹೀನರಾಗಲಿ, ಇವರ ಜ್ಞಾನ ಭಂಡಾರವೆಲ್ಲಾ ನಾಶವಾಗಲಿ" ಎಂದು

ಕಟ್ಟಿಬಿಟ್ಟರು. ಇದೇ ಗೌತಮ ಶಾಪದ ಸಾರಾಂಶವಾಗಿದೆ. 'ಈ ಸಂಗತಿಯೇ ಸೂತ್ರ ಭಾಷ್ಯದಲ್ಲಿ ಉದಾಹರಿಸಿರುವ ತದ್ಯೋಕ್ತಂ ಸ್ಕಾಂದೇ ಎಂದು ಪ್ರಾರಂಭವಾಗಿರುವ ಭಾಗದಲ್ಲಿ ಮೂರನೇ ವಾಕ್ಯವಾಗಿ ಗೌತಮಸ್ಯ ಋಷೇಃ ಶಾಪಾತ್'' ಎಂಬುದರಿಂದ ಸೂಚಿತವಾಗಿರುವ ಕಥೆಯಾಗಿದೆ. ಇದನ್ನು ತತ್ವಪ್ರದೀಪ ಕಾರರು ಸಂಗ್ರಹಿಸಿ ತಿಳಿಸಿರುತ್ತಾರೆ. ಭಾವದೀಪಕಾರರು ಅದರ ಸಾರಾಂಶವನ್ನು ತೋರಿಸಿರುತ್ತಾರೆ.

ಶ್ರೀವೇದವ್ಯಾಸರು ವೇದಾರ್ಥ ನಿರ್ಣಯಕಗಳಾದ ಬ್ರಹ್ಮಮೀಮಾಂಸಾ ಶಾಸ್ತ್ರವನ್ನು ರಚಿಸಿರುವುದು ಮಾತ್ರವಲ್ಲದೆ ಮುಮುಕ್ಷುಗಳಾದ ಸಾತ್ವಿಕರಾದ ವೇದೋಕ್ತಜ್ಞಾನಕ್ಕೆ ಅನಧಿಕಾರಿಗಳಾದ ಸ್ತ್ರೀಶೂದ್ರಾದಿಗಳಿಗೂ ಸಹ ಮೋಕ್ಷವಾಗಲೆಂಬ ಅನುಕಂಪದಿಂದ ಸಕಲ ವೇದೋಕ್ತಾರ್ಥಗಳಿಂದ ಕೂಡಿರುವ ವೇದಾನುಕ್ತವಾದ, ಈಶ್ವರ ಜ್ಞಾನದೃಷ್ಟವಾದ ಅರ್ಥದಿಂದ ಗರ್ಭಿತವಾದ, ಪರೋಕ್ಷಾರ್ಥವಾದ, ನಿರ್ಣಯ ಸರ್ವಶಾಸ್ತ್ರೋತ್ತಮವಾದ ಮಹಾಭಾರತವನ್ನೂ ರಚಿಸಿದ್ದಾರೆ. ಭಾಗವತ ಮಹಾಪುರಾಣವನ್ನೂ ಹದಿನೆಂಟು ಪುರಾಣಗಳನ್ನೂ ರಚಿಸಿ ತತ್ವಜ್ಞಾನ ಮಾರ್ಗಕ್ಕೆ ಮಹೋಪಕಾರವನ್ನೂ ಮಾಡಿರುತ್ತಾರೆ.

ಸೂತ್ರಕಾರರಾದ ಶ್ರೀವೇದವ್ಯಾಸರೇ ಪುರಾಣ ನಿರ್ಮಾತೃಗಳೆಂಬುದು ಸುಪ್ರಸಿದ್ಧವಾದ ಸಂಗತಿಯಾಗಿದೆ. ಆ ಪುರಾಣ ಗಳಾದರೋ ಸಾತ್ವಿಕ, ತಾಮಸ, ರಾಜಸಗಳೆಂಬ ವಿಭಾಗದಿಂದ ಕೂಡಿದೆ. ತಾಮಸ ವರ್ಗಕ್ಕೆ ಸೇರಿದ ಶೈವಪುರಾಣದಲ್ಲಿ ಶಿವನೇ ಸರ್ವೋತ್ತಮನೆಂದು ಪ್ರತಿಪಾದಿತವಾಗಿದೆ. ಇದು ವಿಷ್ಣುವಿನ ಸರ್ವೋತ್ತಮತ್ವವನ್ನು ಅಥ ಇಂದ ಇತಿ ವರೆವಿಗೆ ಸಕಲ ವೇದಗಳೂ ತಿಳಿಸುತ್ತಿರುವಾಗ ಅದಕ್ಕೆ ವಿರುದ್ಧವಾಗಿರುವ ಪ್ರಯುಕ್ತ, ಪರಮಾತ್ಮನ ಸಕಲ ವಚನಗಳೂ ಪರಮ ಪ್ರಮಾಣ ವೆಂದು ವೇದವೇ ಘೋಷಿಸುತ್ತಿರುವುದರಿಂದ ಆ ಶೈವ ಪುರಾಣಕ್ಕೂ, ತಾಮಸ ಪುರಾಣಾದಿಗಳಾದ ಸ್ಕಾಂದಾದಿಗಳಿಗೂ ಪ್ರಾಮಾಣ್ಯವು ಹೇಗೆಂಬ ಶಂಕೆಯು ಉಂಟಾಗುವುದು ಸಹಜವಾಗಿದೆ.

''ಸರ್ವತ್ರ ಭಗವತ್ಪ್ರಮಾಣಾತ್ ಭಗವದ್ವಚನ ಪ್ರಾಮಾಣ್ಯಂ'' ಎಂದು ಮೂಲ ಶ್ರುತಿವಚನವಿದೆ. ಮತ್ತೊಂದು ಶಂಕೆಯೂ ಸಹ ಇಲ್ಲಿ ಉಂಟಾಗುತ್ತದೆ. ಬುದ್ಧರೂಪಿಯಾದ ಪರಮಾತ್ಮನ ವಚನಗಳಿಗೆ ಪ್ರಾಮಾಣ್ಯವು ಹೇಗೆ ? ಈ ರೀತಿ ಉಂಟಾಗತಕ್ಕ ಶಂಕೆಗಳಿಗೆ ತತ್ವಪ್ರದೀಪಕಾರರು ತೋರಿಸಿರುವ ಉತ್ತರವು ಬಹು ರಂಜಕವಾಗಿದೆ. ತತ್ವಪ್ರದೀಪದ ವಾಕ್ಯಗಳನ್ನೇ ಉದಾಹರಿಸಿ ಅದರ ವಿವರಣೆಯನ್ನು ಕನ್ನಡದಲ್ಲಿ ಕೊಡಲಾಗಿದೆ.

**ತತ್ವಪ್ರದೀಪ : ನ ಚ ಬುದ್ಧರೂಪೇಃ ವಿಪ್ರಲಂಭಕತ್ವಂ ವಿಷ್ಣೋಃ ಶಂಕ್ಯಮ್ ।**
**ತತ್ರ ಶ್ರೋತೃಣಾಂ ಅಸುರಾಣಾಂ ಅಯೋಗ್ಯತ್ವಾತ್ ಅನ್ಯಥಾಮತಿರ್ಜಾತಾ ।**
**ನಾನ್ಯಥಾವಚನನಿಮಿತ್ತಾ ।**
**ಇತರೇಷಾಂ ರಾಗಾದಿಮತ್ವಾತ್ ಅನ್ಯಥಾಮತಿಯುಕ್ತಾ ವಿಷ್ಣೋಸ್ತು ತದಭಾವಶ್ಚೇತ್**
**ಪ್ರವೃತ್ತ್ಯದೋಷತ್ವೇ ದೋಷಃ ।**
**ನ ಏವ ಹಿ. ತಾನಿ ಸೂಕ್ತಾನಿ ತತ್ವವಿಷಯಾಣಿ ಶ್ರುತಾಂತಸಂಹಿತಾಯಾಂ ಅಂಜಸಾ**
**ದೇವೇಭ್ಯೋ ವ್ಯಾಖ್ಯಾನಿ ।**
**ನ ಚ ಪುರಾಣಾದಿಷ್ವನ್ಯಥೋಕ್ತಿಃ ।**
**ಯತಃ ಸೂತ್ರಕರ್ತಾ ಭಗವಾನ್ ವ್ಯಾಸ ಏವ ಪುರಾಣಾದಿಕರ್ತಾಪಿ ।**
**ನ ಚ ತದ್ವಾಕ್ಯಂ ಕ್ವಚಿದಪ್ರಮಾಣಮಾಶಂಕ್ಯಮ್ ।**
**ಆಪ್ತ ತಮತ್ವಾತ್ ।**
**''ಸರ್ವತ್ರಭಗವತ್ಪ್ರಮಾಣಾತ್ ಭಗವದ್ವಚನ ಪ್ರಾಮಾಣ್ಯಮ್'' ಇತಿ ಮೂಲಶ್ರುತಿಃ ।**

**ಪೂರ್ವಪಕ್ಷ ಸಿದ್ಧಾಂತವಿಭಾಗಾಪರಿಜ್ಞಾನಕೃತಶ್ಚ ತತ್ರಮೋಹಃಸ್ಯಾತ್ ।**
**ತಚ್ಚ ಭಾಷಾರೀತಿ ವಿಶೇಷಾಜ್ಞಾನಾತ್ ಭವತಿ ।**
**ತಥಾ ಚ ಬ್ರಾಹ್ಮೇ ।**
**ಭಾಷಾತ್ರಯಂ ನ ಜಾನಾತಿ ರೀತೀನಾಂ ಶತಮೇವ ಚ ।**
**ಪುರಾಣಾರ್ಥಂ ವದನ್ಯಾತಿ ನರಕಂ ನಾತ್ರ ಸಂಶಯಃ । ಇತಿ ॥**

**ನ ಚ ಪುರಾಣಾನಾಂ ಸ್ವತಃ ಅನ್ಯೋನ್ಯಂ ವಾ ವಿರೋಧಃ ।**
**ಶೈವಾದಿ ಪುರಾಣೇಷು ದರ್ಶನಭಾಷಾ ಪ್ರಾಚುರ್ಯಾತ್**
**ವೇದಾನನುಸಾರಿತ್ವಮಿವಪ್ರತೀಯತೆ ।**
**ನತು ತದಸ್ತಿ ।**
**ತತ್ರಾಪಿ ವಿಷ್ಣೋಃ ಸರ್ವೋತ್ತಮತ್ವಮೇವ ಸಿದ್ಧಾಂತಸಾರಃ ।**
**ತತ್ರ ತತ್ರ ತದುಕ್ತೇಃ ।**
**ಪೂರ್ವಪಕ್ಷಾಧಿಕ್ಯಂ ದುರ್ಜನಮೋಹನಾರ್ಥಮಿತಿ ದರ್ಶನ ರಹಸ್ಯಮ್ ।**
**ತಸ್ಮಾದಯಮಾಚಾರ್ಯಾಃ ಆಪ್ತತಮ ಇತಿ ಸಿದ್ಧಮ್ ।**
**ಯದುಕ್ತಯಃ ಕ್ವಾಪಿ ನಾನ್ಯಥಾ ದೃಶ್ಯಂತೇ ತತ್ರಾಪ್ಯಂ ಶಂಕಮಾನಾಃ ಕುತ್ರ**
**ನಿಶ್ಚಿನ್ವೀರನ್ನಿತಿ'' ॥**

ಮೇಲೆ ಕಂಡ ತತ್ವಪ್ರದೀಪಕಾರರ ವಾಕ್ಯಗಳಿಂದ ಅನೇಕ ಬಗೆಗಳಾದ ಸಂದೇಹಗಳು ಪರಿಹಾರವಾಗುತ್ತವೆ. ಶ್ರೀ ವೇದ ವ್ಯಾಸರ ಬಗ್ಗೆ ಮತ್ತು ಶ್ರೀ ಬುದ್ಧರೂಪಿಯ ಪರಮಾತ್ಮನ ವಿಚಾರವಾಗಿ ಮತ್ತು ಶ್ರೀಮಧ್ವರ ಸೂತ್ರಭಾಷ್ಯದ ಪ್ರಾರಂಭ ದಲ್ಲಿಯೇ ತಾಮಸಪುರಾಣದ ಸ್ಕಾಂದವಚನವನ್ನು ತಚ್ಚೋಕ್ತಂ ಸ್ಕಾಂದೇ ಎಂದು ಉದಾಹರಿಸಿರುವ ವಿಷಯವಾಗಿ ಸಾಮಾನ್ಯವಾಗಿ ಜಿಜ್ಞಾಸು ವರ್ಗಕ್ಕೆ ಉಂಟಾಗಬಹುದಾದ ಎಲ್ಲ ಬಗೆಗಳಾದ ಶಂಕೆಗಳಿಗೂ ತಕ್ಕ ಉತ್ತರವನ್ನು ಕಾಣಬಹು ದಾಗಿದೆ. ಅದರ ಸಾರಾಂಶವು ಈ ಕೆಳಗೆ ಕಂಡಂತಿದೆ.

ಶ್ರೀಮನ್ನಾರಾಯಣನೇ ಬುದ್ಧರೂಪಿಯಾಗಿ ಉಪದೇಶವನ್ನಿತ್ತಿದ್ದಾನೆ. ಇದು ಸತ್ಯವಾದ ಸಂಗತಿ. ಆದರೆ ಆಗಿನ ಶ್ರೋತೃಗಳಾದವರೆಲ್ಲಾ ದೈತ್ಯರು. ಅಸುರರೆಲ್ಲಾ ತತ್ವಜ್ಞಾನಕ್ಕೆ ಅನರ್ಹರು. ಅವರ ಸ್ವರೂಪಕ್ಕೆ ತಕ್ಕಂತೆ ಅವರಿಗೆಲ್ಲಾ ಅನ್ಯಥಾ ಜ್ಞಾನವೇ ಉಂಟಾಯಿತು. ಆ ಪರಮಾತ್ಮನೇ ಅದೇ ಉಪದೇಶ ವಾಕ್ಯಗಳಿಗೆ ತತ್ವವಿಷಯವಾಗಿ ಪ್ರಶಾಂತ ಸಂಹಿತೆಯಲ್ಲಿ ವಿಸ್ತಾರವಾಗಿ ವ್ಯಾಖ್ಯಾನ ಮಾಡಿ ಉಪದೇಶವಿತ್ತಿದ್ದಾನೆ. ಇದರ ಮರ್ಮವನ್ನು ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯದ ೩೨ ನೆಯ ಅಧ್ಯಾಯದಲ್ಲಿ ತಿಳಿಯಬಹುದಾಗಿದೆ.

ಶ್ರೀ ಬಾದರಾಯಣರು ರಚಿಸಿರುವ ಪುರಾಣವೃಂದದಲ್ಲಿ ತಾಮಸ ಪುರಾಣವೆನಿಸಿದ ಸ್ಕಾಂದ ಪುರಾಣವೂ ಸೇರಿದೆ. ಆದರೆ ಇದರಲ್ಲಿ ಒಂದು ದರ್ಶನ ರಹಸ್ಯವುಂಟು. ಪುರಾಣವಾಙ್ಮಯವು ಭಾಷಾತ್ರಯದಿಂದ ಕೂಡಿದೆ. ಒಂದು ನೂರು ರೀತಿಗಳ ಕ್ರಮದಿಂದ ಇವೆ. ಸಮಾಧಿಭಾಷಾ, ದರ್ಶನಭಾಷಾ, ಗುಹ್ಯಭಾಷಾ ಎಂಬ ಪ್ರಭೇದದಿಂದ ಅರ್ಥವು ನಿರೂಪಿ ಸಲ್ಪಟ್ಟಿದೆ. ಸಮಾಧಿ ಭಾಷಾದಿಂದ ಶ್ರೀವಿಷ್ಣುವಿನ ಸರ್ವೋತ್ತಮತ್ವವು ಉಕ್ತವಾಗಿದೆ. ಇದಕ್ಕೆ ವಿರುದ್ಧವಾಗಿ ಶಿವನ ಉತ್ಕರ್ಷವು ಶೈವದರ್ಶನ ಭಾಷೆಯಲ್ಲಿ ತಾಮಸ ಜನ ಮೋಹನಕ್ಕಾಗಿಯೂ ಉಕ್ತವಾಗಿದೆ.

ಈ ಎರಡು ನಿರೂಪಣೆಗಳಿಗಿಂತಲೂ ಬೇರೆ ಕ್ರಮದಿಂದ ಗೂಢಾರ್ಥಕವಾದ ಪದಗಳ ಜೋಡಣೆಯಿಂದ ಗುಹ್ಯ ಭಾಷೆಯು ಕೆಲವು ವಿಷಯಗಳನ್ನು ತಿಳಿಸುತ್ತದೆ.

ಈ ರೀತಿ ಇರತಕ್ಕ ಮೂರು ಭಾಷಾಕ್ರಮಗಳಲ್ಲಿ ಶ್ರೀ ವಿಷ್ಣು ಸರ್ವೋತ್ತಮತ್ವಕ್ಕೆ ಮೀಸಲಾದ ಸಮಾಧಿಭಾಷೆಯಿಂದ ಉಕ್ತವಾಗಿರುವುದೆಲ್ಲವೂ ಅಂಗೀಕಾರಕ್ಕೆ ಅರ್ಹವಾಗಿದೆ. ಈ ಸಮಾಧಿ ಭಾಷೆಗೆ ವಿರೋಧವಿಲ್ಲದಿರುವ ದರ್ಶನೋಕ್ತವಾದುದನ್ನು ಮಾತ್ರ ಸ್ವೀಕರಿಸಬೇಕು. "ಯಚ್ಚಾನುಕೂಲಮೇತಸ್ಯ ತಚ್ಚಶಾಸ್ತ್ರಂ ಪ್ರಕೀರ್ತಿತಂ" ಎಂದು ಪ್ರಮಾಣ ವಚನ ಇದೆ.

ಯಾರಿಗೆ ಭಾಷಾತ್ರಯದ ಜ್ಞಾನವೇ ಇಲ್ಲವೋ, ಯಾವನು ನೂರು ರೀತಿಗಳ ಪರಿಚಯವನ್ನು ಪಡೆದಿಲ್ಲವೋ, ಅಂಥವನಿಗೆ ಪುರಾಣಗಳ ಅರ್ಥವನ್ನು ಹೇಳುವ ಅಧಿಕಾರವೇ ಇಲ್ಲ. ಅವುಗಳ ಪರಿಜ್ಞಾನವೇ ಇಲ್ಲದೆ ಪುರಾಣಗಳ ಅರ್ಥಗಳನ್ನು ನಿರೂಪಿಸುವವನಿಗೆ ನರಕವು ತಪ್ಪಿದ್ದಲ್ಲ. ಇದರಲ್ಲಿ ಸಂದೇಹವೇ ಇಲ್ಲವೆಂದು ಬ್ರಾಹ್ಮಪುರಾಣವಚನವಿದೆ. ಪ್ರಕೃತದಲ್ಲಿ ಶೈವಪುರಾಣಾದಿಗಳಲ್ಲಿ ಶಿವನ ಉತ್ತಮತ್ವವು ದರ್ಶನಭಾಷಾ ಪ್ರಾಚುರ್ಯದಿಂದ ನಿರೂಪಿತವಾಗಿರುವುದಕ್ಕೆ ವೇದದ ವಿರೋಧವು ಆಪಾತತಃ ಕಂಡುಬಂದರೂ ಅಂತಿಮವಾಗಿ ದರ್ಶನ ಭಾಷೆಯ ಶೈಲಿಯಲ್ಲಿ ಉತ್ತಮ ದೇವತೆ ಯೆಂದು ಪ್ರತಿಪಾದಿಸಲ್ಪಟ್ಟಿರುವ ಆ ದೇವತೆಯ ಮುಖದಿಂದಲೇ ಶ್ರೀ ವಿಷ್ಣು ಸರ್ವೋತ್ತಮತ್ವವು ಉಕ್ತವಾಗಿದೆ. ಆದಕಾರಣ ಆ ಗ್ರಂಥಗಳಿಗೂ ಸಹ ಮುಖ್ಯತಾತ್ಪರ್ಯವು ಶ್ರೀಹರಿ ಸರ್ವೋತ್ತಮತ್ವದಲ್ಲಿಯೇ ಉಂಟೆಂದು ತಿಳಿಯಬೇಕು. ಇದೇ ಸಿದ್ಧಾಂತಸಾರವು. ದುರ್ಜನಮೋಹನಕ್ಕಾಗಿ ಪೂರ್ವಪಕ್ಷದ ಆಧಿಕ್ಯವು ಅಲ್ಲಿ ಕಂಡುಬಂದಿದೆ. ಈ ದರ್ಶನ ರಹಸ್ಯವನ್ನು ಶ್ರೀ ಮಧ್ವಾಚಾರ್ಯರು ಸೂತ್ರಭಾಷ್ಯದಲ್ಲಿ ಜಿಜ್ಞಾಸಾಧಿಕರಣದ ಕಡೆಯಲ್ಲಿ "ಬ್ರಾಹ್ಮೇಚ ಬ್ರಹ್ಮ ವೈವರ್ತೇ" ಎಂದೂ, "ಶೈವೇ ಚ ಸ್ಕಾಂದೇ" ಎಂದು ಆಯಾ ದೇವತೆಗಳಿಂದಲೇ ಉಕ್ತವಾಗಿರುವ ವಚನಗಳಿಂದ ಶ್ರೀ ಹರಿ ಸರ್ವೋತ್ತಮತ್ವವನ್ನು ಸಮರ್ಥಿಸಿರುತ್ತಾರೆ.

ಚತುರ್ಮುಖ ಬ್ರಹ್ಮನ ಉತ್ತಮತ್ವಕ್ಕೆ ಮೀಸಲಾದ ಬ್ರಹ್ಮವೈವರ್ತ ಪುರಾಣದಲ್ಲಿ ಚತುರ್ಮುಖನು ನಾರದರಿಗೆ ಎಲೈ ನಾರದನೇ! ನಾನಾಗಲಿ ಶಿವನಾಗಲಿ ಇತರ ಯಾವ ದೇವತೆಯೇ ಆಗಲಿ ಆ ವಿಷ್ಣುವಿನ ಶಕ್ತಿಯ ಏಕದೇಶವನ್ನೂ ಸಹ ಪಡೆದಿಲ್ಲ. ಬಾಲಕನು ಆಟವಾಡುವ ಬೊಂಬೆ ಸಾಮಾನುಗಳಿಂದ ಆಟವಾಡುವಂತೆ ಆ ಶ್ರೀಹರಿಯು ಆಟದ ಬೊಂಬೆಗಳಂತಿರುವ ಕೇವಲ ಅಸ್ವತಂತ್ರರಾದ ನಮ್ಮಿಂದ ಕ್ರೀಡಿಸುತ್ತಿದ್ದಾನೆಂದೂ, ಸಕಲ ದೇವತೆಗಳೂ ಅಸ್ವತಂತ್ರರೆಂದೂ, ಶ್ರೀ ವಿಷ್ಣುವೇ ಸರ್ವತಂತ್ರ ಸ್ವತಂತ್ರನೆಂದೂ, ನಾರದರನ್ನು ಕುರಿತು ಹೇಳಿಕೊಂಡಿರುತ್ತಾನೆ. ಆ ವಾಕ್ಯವು ಈ ರೀತಿ ಇದೆ.

"ನಾಹಂ ಚ ಚ ಶಿವೋऽನ್ಯೇಚ ತಚ್ಛಕ್ತ್ಯೇಕಾಂಶ ಭಾಗಿನಃ
ಬಾಲಃ ಕ್ರೀಡನಕೈರ್ಯದ್ವತ್ ಕ್ರೀಡತ್ಯಸ್ಮಾಭಿರಚ್ಯುತಃ ॥ ಇತಿ ಬ್ರಹ್ಮವೈವರ್ತೇ ।

ಶಿವನ ಸರ್ವೋತ್ತಮತ್ವವನ್ನು ಶೈವದರ್ಶನ ಭಾಷೆಯಿಂದ ತಿಳಿಸುವ ಸ್ಕಾಂದಪುರಾಣದಲ್ಲಿ ಶಿವನು ಶ್ರೀವಿಷ್ಣುವನ್ನು ಕುರಿತು –

ಎಲೈ ಅಚ್ಯುತನೇ! ನೀನು ನಮ್ಮ ವಿಷಯದಲ್ಲಿ ಪರಾಙ್ಮುಖನಾದರೆ, ಅನುಗ್ರಹವನ್ನು ತೋರದಿದ್ದರೆ ಚತುರ್ಮುಖ ಬ್ರಹ್ಮನೇ ಮೊದಲಾದ ನಾವೆಲ್ಲರೂ ಸಹ ನಾಯಿಗೆ ಅನ್ನ ಬೇಯಿಸುವ ಶ್ವಪಚನಿಗಿಂತಲೂ ನೀಚವಾದ ದುರ್ಗತಿಗೆ ಹೋಗುತ್ತೇವೆ. ಎಂದು ಹೇಳುತ್ತಾನೆ. ಆ ವಾಕ್ಯವು ಹೀಗಿದೆ –

ಶ್ವಪಚಾದಪಿ ಕಷ್ಟತ್ವಂ ಬ್ರಹ್ಮೇಶಾನಾದಯಃ ಸುರಾಃ ।
ತದೈವಾಚ್ಯುತ ಯಾಸ್ಯೇವ ಯದೈವ ತ್ವಂ ಪರಾಙ್ಮುಖಃ ॥ ಇತಿ

ಈ ಎಲ್ಲವನ್ನೂ ಕೂಲಂಕಷವಾಗಿ ಪರಿಶೀಲಿಸಿದರೆ ಸಕಲ ಪುರಾಣಗಳಿಗೂ ಶ್ರೀಹರಿಯ ಸರ್ವೋತ್ತಮತ್ವದಲ್ಲಿಯೇ ಮುಖ್ಯ ತಾತ್ಪರ್ಯವೆಂಬುದನ್ನು ಮನಗಾಣಬಹುದಾಗಿದೆ. ಆದ್ದರಿಂದ ಶ್ರೀಮನ್ಮಧ್ವಾಚಾರ್ಯರು ಸಮಾಧಿ ಭಾಷೆಯ ಶೈಲಿಗೆ ಒಳಪಟ್ಟು ವೇದಾದಿಗಳಿಗೆ ವಿರುದ್ಧವಲ್ಲದ ಸ್ಕಾಂದಪುರಾಣ ವಾಕ್ಯವನ್ನು ಪ್ರಮಾಣವಾ। ಉದಾಹರಿಸಿರುವುದು ಸಂಗತವೇ ಆಗಿದೆ.

**ರಹಸ್ಯವು** – ದೇವರಹಸ್ಯ, ವೇದರಹಸ್ಯ ಮತ್ತು ಧರ್ಮರಹಸ್ಯವೆಂದು ಸಾಮಾನ್ಯವಾಗಿ ಮೂರು ಬಗೆಯೆಂಬುದನ್ನು ಜ್ಞಾನಿಗಳು ವಿಭಾಗ ಮಾಡಿರುತ್ತಾರೆ. ಇದರಲ್ಲಿ ಪ್ರಧಾನ ವಾಯುವಿಗೇನೆ ಬ್ರಹ್ಮತ್ವವು, ರುದ್ರನಿಗೇನೇ ಶೇಷತ್ವವು, ದೇವತೆಗಳಲ್ಲಿ ತಾರತಮ್ಯವು, ದೇವತ್ವಯೋಗ್ಯರಾದ ಜೀವರಿಗೆ ಮಾತ್ರ ದೇವಪದವೀ ಇತ್ಯಾದಿ ದೇವರಹಸ್ಯವು.

**ಉದಾಹರಣೆ** :– ಉಗ್ರತಪಾ ಎಂಬ ಹೆಸರಿನ ರುದ್ರಪದವಿಗೆ ಯೋಗ್ಯನಾದ ಜೀವನೇ ಸಾಧನ ಸಂಪತ್ತಿನಿಂದ ರುದ್ರ ಪದವಿಯನ್ನು ಪಡೆಯುತ್ತಾನೆ. ಆ ಪದವಿಗೆ ಅನರ್ಹರಾದ ಇತರ ಜೀವರಿಗೆ ಅದಕ್ಕೆ ತಕ್ಕ ಸಾಧನೆಗಳನ್ನು ಆಚರಿಸುವ ಯೋಗ್ಯತೆಯೂ ಇಲ್ಲ. ಅದನ್ನು ಪಡೆಯಲು ಶಕ್ಯವೂ ಇಲ್ಲ. ಒಂದು ವೇಳೆ ತನ್ನ ಯೋಗ್ಯತೆಗೆ ಮೀರಿದ ಆ ಪದವಿಯನ್ನು ಪಡೆಯಲು ಪ್ರಯತ್ನಿಸಿದರೆ ಅಧಃ ಪಾತವೇ ಉಂಟಾಗುತ್ತದೆ. ಈ ರುದ್ರ ಪದವಿಗೆ ಯೋಗ್ಯನಾದ ಉಗ್ರತಪಾ ಎಂಬ ವ್ಯಕ್ತಿಯು ಬ್ರಹ್ಮಪದವಿಗೆ ಯೋಗ್ಯನಾದ ಲಾತವ್ಯ ಎಂಬ ಋಜುಜೀವನಿಂದ ಬ್ರಹ್ಮಮಾನದಿಂದ ಎಪ್ಪತ್ತೈದು ವರ್ಷಗಳ ಪರ್ಯಂತವಾಗಿ ಶ್ರವಣ ಮಾಡಿರುತ್ತಾನೆ. ಒಂದು ದಿನವೂ ಸಹ ಪರಮಾತ್ಮನ ಮಹಿಮೆಯ ಶ್ರವಣರಹಿತನಾಗಿರಲಿಲ್ಲ. ಅಂದರೆ ಅಷ್ಟು ಕಾಲ ಪರ್ಯಂತವಾಗಿ ಪ್ರತಿದಿನವೂ ಶ್ರವಣಾವೃತ್ತಿಯನ್ನು ಮಾಡಿದ್ದಾನೆ. ಬ್ರಹ್ಮಮಾನದಿಂದ ಪರಿಗಣಿತವಾದ ಎಪ್ಪತ್ತೈದು ವರ್ಷಗಳಲ್ಲಿ ಉಗ್ರತಪಾ ಎಂಬ ರುದ್ರಪದವಿಗೆ ಯೋಗ್ಯನಾದ ಜೀವನು ಋಜುಜೀವನಾದ ಲಾತವ್ಯನಿಂದ ಶ್ರವಣಾವೃತ್ತಿಯನ್ನು ಆಚರಿಸಿದ್ದಾನೆಂಬುದರಲ್ಲಿ ನ್ಯಾಯರತ್ನಾವಳೀಕಾರರು ಆ ಕಾಲಮಾನವನ್ನು ಈ ರೀತಿ ವಿವರಿಸುತ್ತಾರೆ. ತೊಂಭತ್ತೊಂಭತ್ತು ಬ್ರಹ್ಮ ಮಹಾಕಲ್ಪಗಳಿಗೆ ಮುಂಚೆ ಮಹಾಕಲ್ಪದ ಆದಿಭಾಗವನ್ನಾರಂಭಿಸಿ ಬ್ರಹ್ಮಮಾನ ಪರಿಗಣಿತವಾದ ಎಪ್ಪತ್ತೈದು ಸಂವತ್ಸರ ಕಾಲ ಪರ್ಯಂತವಾಗಿ ಶ್ರವಣ ಮಾಡಿರುತ್ತಾನೆಂದು ಅರ್ಥ ಮಾಡಿರುತ್ತಾರೆ. ಈ ರೀತಿ ಬ್ರಹ್ಮಮಾನದ ಎಪ್ಪತ್ತೈದು ವರ್ಷಗಳವರೆವಿಗೆ ಶ್ರವಣಾಭ್ಯಾಸವನ್ನೂ, ಬ್ರಹ್ಮಮಾನದಿಂದ ಪರಿಗಣಿತವಾದ ಇಪ್ಪತ್ತೈದು ಸಂವತ್ಸರ ಕಾಲದಿಂದ ಮನನ ಮತ್ತು ಧ್ಯಾನಗಳೆಂಬ ಉಪಾಸನವನ್ನು ಉಗ್ರತಪನು ಆಚರಿಸುತ್ತಾನೆ.

ಗರುಡ ಪದವಿಗೆ ಯೋಗ್ಯನಾದ ಸುಮುಖನೆಂಬ ಜೀವನ ದೆಶೆಯಿಂದ ಸುನಂದನೆಂಬ ಇಂದ್ರಪದವಿಗೆ ಯೋಗ್ಯನಾದ ಜೀವನು ಹತ್ತುಮನ್ವಂತರಕಾಲ ಶ್ರವಣವನ್ನೂ, ನಾಲ್ಕು ಮನ್ವಂತರ ಕಾಲ ಮನನ ಧ್ಯಾನಗಳನ್ನು ಆಚರಿಸಿ ಇಂದ್ರಪದವಿಗೆ ಬಂದಿದ್ದಾನೆ. ಸೂರ್ಯಪದವಿಗೆ ಅರ್ಹನಾದ ಸುರೂಪ ಎಂಬ ಜೀವನು ಸುಮುಖನಿಂದಲೇ ನಾಲ್ಕು ಮನ್ವಂತರಗಳ ಕಾಲ ಶ್ರವಣವನ್ನೂ, ಒಂದು ಮನ್ವಂತರ ಕಾಲ ಮನನಧ್ಯಾನಗಳನ್ನೂ ಮಾಡಿ ಆ ಪದವಿಗೆ ಬಂದಿರುತ್ತಾನೆ. ಶಾಂತರೂಪನೆಂಬ ಚಂದ್ರಪದವಿಗೆ ಅರ್ಹನಾದ ಜೀವನೂ ಸಹ ಸೂರ್ಯಪದವಿಗೆ ಅರ್ಹನಾದ ಸುರೂಪನಂತೆಯೇ ಸಾಧನವನ್ನು ಮಾಡಿರುತ್ತಾನೆ. ಅನಂತರದಲ್ಲಿ ಪರಮಾತ್ಮನ ಅನುಗ್ರಹದಿಂದ ಚಂದ್ರಪದವಿಯನ್ನು ಪಡೆದಿರುತ್ತಾನೆ. ಇದೆಲ್ಲಾ ದೇವರಹಸ್ಯಕ್ಕೆ ಸೇರಿದ ವಿಷಯಗಳಾಗಿವೆ.

ಇಲ್ಲಿ ಶ್ರವಣಾವೃತ್ತಿಯೆಂದರೆ ಒಂದು ವಾಕ್ಯದಿಂದ ತಿಳಿದ ತತ್ವವನ್ನು ಪುನಃ ಪುನಃ ಅದೇ ವಾಕ್ಯದಿಂದಾಗಲೀ, ಬೇರೆ ವಾಕ್ಯದಿಂದಾಗಲಿ, ತಿಳಿಯುವಿಕೆಯು ಶ್ರವಣಾ ವೃತ್ತಿಯು. ಮನನಾವೃತ್ತಿಯೆಂದರೆ ಒಂದುಯುಕ್ತಿಯಿಂದ ಅನುಸಂಧಾನ ಮಾಡಿದ ತತ್ವವನ್ನು, ಅದೇ ಯುಕ್ತಿಯಿಂದಾಗಲೀ, ಮತ್ತೆ ಮತ್ತೆ ವಿಶೇಷವಾದ ಅಂಶಗಳಿಂದ ತಿಳಿಯುವಿಕೆಯು (ಅನುಚಿಂತನವು) ಮನನಾವೃತ್ತಿಯು.

**ವೇದರಹಸ್ಯ** :– ವೇದದಲ್ಲಿ ''ಹಿರಣ್ಯಗರ್ಭಃ ಸಮವರ್ತತಾಗ್ರೇ'', ''ಏಕೋ ರುದ್ರೋ ನ ದ್ವಿತೀಯಾಯ ತಸ್ಥೇ'' ಇತ್ಯಾದಿ ವೇದವಾಕ್ಯಗಳಲ್ಲಿ ಹಿರಣ್ಯಗರ್ಭ ಎಂದೂ, ರುದ್ರ ಎಂದೂ, ಬೇರೆ ಬೇರೆ ದೇವತೆಗಳನ್ನು ತಿಳಿಸುವ ಪದಗಳು ಇದ್ದಾಗ್ಯೂ ಮತ್ತು ಅವ್ಯಕ್ತ ಜ್ಯೋತಿಃ, ಪಂಚಜನ, ಆಕಾಶ, ಪ್ರಕೃತಿ ಮಾಯಾ, ಸ್ತ್ರೀ, ಪುರುಷಃ, ಯೋನಿ, ಶೂನ್ಯಂ, ತುಚ್ಛ, ಅಭಾವ, ನಾಶ ಇತ್ಯಾದಿ ಶಬ್ದಗಳು ವೇದದಲ್ಲಿ ಕಂಡುಬಂದಾಗ್ಯೂ ಆ ಎಲ್ಲ ಬಗೆಯಾದ ಶಬ್ದಗಳೂ ಸಹ ''ಯೋ ದೇವಾನಾಂ ನಾಮಧಾ ಏಕಏವ'' (ಋಕ್ ಸಂಹಿತಾ) ಎಂಬಂತೆ ಪರಮಾತ್ಮ ವಾಚಕಗಳೇ ಆಗಿವೆ.

ಮಾಂ ವಿಧತ್ತೇ ಅಭಿಧತ್ತೇ ಮಾಂ ವಿಕಲ್ಪ್ಯಾಪೋಹ್ಯತೇ ಹ್ಯಹಮ್ ।
ಇತ್ಯಸ್ಯಾ ಹೃದಯಂ ಸಾಕ್ಷಾತ್ ನಾನ್ಯೋ ಮದ್ವೇದ ಕಶ್ಚನ ॥
(ಭಾಗವತ ಸ್ಕಂಧ ೧೧. ಅ. ೩೧. ಶ್ಲೋ. ೪೩)

ಮತ್ತು ವೇದೈಶ್ಚಸರ್ವೈರಹಮೇವ ವೇದ್ಯಃ (ಭಗವದ್ಗೀತಾ) ಎಂಬ ಪ್ರಮಾಣಗಳಂತೆ ಪರಮಮುಖ್ಯ ವೃತ್ತಿಯಿಂದ ವಿಷ್ಣುವನ್ನು ಮಾತ್ರ ಹೇಳುತ್ತಿವೆಯೆಂಬುದು ವೇದರಹಸ್ಯವು.

ಸಜ್ಜನರಿಗೆ ಯಾವುದು ಅತ್ಯಂತ ಹಿತವೋ ಅದೇ ಸತ್ಯವೆಂಬುದಾಗಿ ''ಯತ್ಸತಾಂ ಹಿತಮತ್ಯಂತಂ ತತ್ಸತ್ಯಮಿತಿ ಗೀಯತೇ'' ಎಂಬ ಪ್ರಮಾಣ ವಚನವು ತಿಳಿಸುತ್ತಲಿದೆ. ಇದು ಧರ್ಮರಹಸ್ಯವು.

ಅಥವಾ ದ್ರೌಪದೀ ದೇಹದಲ್ಲಿ ಐದು ಜನ ದೇವತಾಸ್ತ್ರೀಯರ ಇರುವಿಕೆಯು ದೇವರಹಸ್ಯವು. ಕುಂತೀದೇವಿಗೆ ದೂರ್ವಾಸರಿಂದ ಅಥರ್ವಣ ಮಂತ್ರಾದಿಗಳ ಉಪದೇಶವು ವೇದರಹಸ್ಯವು. ಇತ್ಯಾದಿ ರೀತಿಯಿಂದ ರಹಸ್ಯತತ್ವವನ್ನು ಅರಿಯಬೇಕೆಂದು ಶ್ರೀ ವಾದಿರಾಜ ಗುರುವರೇಣ್ಯರು ಶ್ರೀಮನ್ಮಹಾಭಾರತ ಲಕ್ಷಾಲಂಕಾರದಲ್ಲಿ ವಿವರಿಸಿರುತ್ತಾರೆ.

**ಬ್ರಹ್ಮಸೂತ್ರಗಳ ಪ್ರಾಮಾಣ್ಯ ವಿಚಾರ** :– ಬ್ರಹ್ಮಸೂತ್ರಗಳು ವೇದಾರ್ಥಗಳ ನಿರ್ಣಾಯಕಗಳಾದ ನ್ಯಾಯಗಳಿಂದ ಕೂಡಿದ ನಿರ್ಣಾಯಕ ಶಾಸ್ತ್ರವಾಗಿದೆ. ಸರ್ವೋತ್ತಮ ಪ್ರಮಾಣವೆನಿಸಿದೆ. ಅಥರ್ವಣೋಪನಿಷತ್ತಿನಲ್ಲಿಯ ''ಅಥ ಪರಾ ಯಯಾ ತದಕ್ಷರಮಧಿಗಮ್ಯತೇ'' ಎಂಬ ವಾಕ್ಯವು ಬ್ರಹ್ಮಮೀಮಾಂಸಾ ಸೂತ್ರಗಳನ್ನು ಪರವಿದ್ಯೆಯೆಂದು ಕರೆದು ಅದಕ್ಕೆ ಸರ್ವೋತ್ತಮ ಪ್ರಾಮಾಣ್ಯವನ್ನು ನಿರೂಪಿಸುತ್ತಲಿದೆ. ಅಥರ್ವಣ ಆಗಮದಿಂದ ಬ್ರಹ್ಮಸೂತ್ರಗಳಿಗೆ ಸರ್ವೋತ್ತಮ ಪ್ರಾಮಾಣ್ಯವನ್ನು ನಿಷ್ಕರ್ಷಗೊಳಿಸಿ ಅನುಮಾನದಿಂದಲೂ ಪ್ರಾಮಾಣ್ಯವನ್ನು ಅನುವ್ಯಾಖ್ಯಾನದಲ್ಲಿ ಶ್ರೀಮನ್ಮಧ್ವರು ಸಾಧಿಸಿರುವುದನ್ನು ಶ್ರೀಮನ್ನ್ಯಾಯ ಸುಧಾಕಾರರು ಸಮರ್ಥಿಸಿ ವಿವರಿಸಿರುತ್ತಾರೆ. ಆಪ್ತವಾಕ್ಯವಾಗಿಯೂ, ಶ್ರುತಿ ಸಂವಾದಿ ಯಾಗಿರುವುದರಿಂದಲೂ ಯುಕ್ತಿ ಸಂವಾದಿಯಾಗಿರುವುದರಿಂದಲೂ ಮೂರು ಬಗೆಯಿಂದ ತ್ರಿವಿಧವಾಗಿ

ಪ್ರಮಾಣ ವೆಂದೆನಿಸಿದ ಬ್ರಹ್ಮಸೂತ್ರಗಳ ಮಹತ್ವವನ್ನು ಶ್ರೀಮದಾನಂದ ತೀರ್ಥ ಭಗವತ್ಪಾದರು ಅನುವ್ಯಾಖ್ಯಾನದಲ್ಲಿ ಪ್ರತಿಪಾದಿಸಿರುವಂತೆ ಮತ್ತಾವ ಭಾಷ್ಯಕಾರರೂ ಸಹ ಈ ಶೈಲಿಯಲ್ಲಿ ಪ್ರತಿಪಾದಿಸಿಲ್ಲ.

**ಭಾಷ್ಯಗಳ ವಿಚಾರ** :– ಬ್ರಹ್ಮಸೂತ್ರಗಳಿಗೆ ಶ್ರೀಮದಾನಂದ ತೀರ್ಥರ ಭಾಷ್ಯವು ಇಪ್ಪತ್ತೆರಡನೆಯ ಭಾಷ್ಯವಾಗಿದೆ. ಇದಕ್ಕೆ ಮುಂಚಿತವಾಗಿ ಇಪ್ಪತ್ತೊಂದು ಜನ ಭಾಷ್ಯಗಳನ್ನು ರಚಿಸಿರುತ್ತಾರೆ. ಅವರ ಹೆಸರುಗಳು ಈ ರೀತಿ ಇವೆ.

೧. ಭಾರತೀಶ ವಿಜಯ
೨. ಸಚ್ಚಿದಾನಂದ
೩. ಬ್ರಹ್ಮಘೋಷ
೪. ಶತಾನಂದ
೫. ಉದ್ವರ್ತ
೬. ವಿಜಯ
೭. ರುದ್ರಭಟ್ಟ
೮. ವಾಮನ
೯. ಯಾದವ ಪ್ರಕಾಶ
೧೦. ರಾಮಾನುಜ
೧೧. ಭರ್ತೃಪ್ರಪಂಚ
೧೨. ದ್ರವಿಡ
೧೩. ಬ್ರಹ್ಮದತ್ತ
೧೪. ಭಾಸ್ಕರ
೧೫. ವಿಶಾಖ
೧೬. ವೃತ್ತಿಕಾರಕ
೧೭. ವಿಜಯಭಟ್ಟ
೧೮. ವಿಷ್ಣುಕ್ರಾಂತ
೧೯. ವಾದೀಂದ್ರ
೨೦. ಮಾಧವದಾಸಕ
೨೧. ಶಂಕರ

ಈ ಪೈಕಿ ಶಂಕರ ಮತ್ತು ರಾಮಾನುಜರ ಭಾಷ್ಯಗಳು ಪ್ರಸಿದ್ಧವಾಗಿದೆ.

ಶ್ರೀಮದಾನಂದತೀರ್ಥ ಭಗವತ್ಪಾದರ ಭಾಷ್ಯವು ಇಪ್ಪತ್ತೆರಡನೆಯದಾಗಿದೆ. ಶ್ರೀ ಮಧ್ವಭಾಷ್ಯದ ಹಿನ್ನೆಲೆ ಮತ್ತು ಅದರ ಮಹಿಮೆ.

ಶ್ರೀ ಮನ್ನಾರಾಯಣನು ರಾಮಕೃಷ್ಣಾದಿ ರೂಪಗಳಿಂದ ಬಲಕಾರ್ಯವನ್ನು ದತ್ತವ್ಯಾಸಾದಿರೂಪಗಳಿಂದ ಜ್ಞಾನ ಕಾರ್ಯವನ್ನೂ ಯಶಸ್ವಿಯಾಗಿ ನಿರ್ವಹಿಸಿದ್ದಾನೆ.

**ಶ್ರೀವೇದವ್ಯಾಸರುನಾಸ್ತಿ ನಾರಾಯಣ ಸಮಂ ನಭೂತಂ ನಭವಿಷ್ಯತಿ ।**
**ಏತೇನ ಸತ್ಯವಾಕ್ಯೇನ ಸರ್ವಾರ್ಥಾನ್ ಸಾಧಯಾಮ್ಯಹಮ್ ॥**

ಎಂದು ಪ್ರತಿಜ್ಞೆ ಮಾಡಿ –

**ಸತ್ಯಂ ಸತ್ಯಂ ಪುನಃ ಸತ್ಯಂ ಉದ್ಧೃತ್ಯ ಭುಜಮುಚ್ಯತೇ ।**
**ವೇದಶಾಸ್ತ್ರಾತ್ ಪರಂ ನಾಸ್ತಿ ನದೈವಂ ಕೇಶವಾತ್ಪರಮ್ ॥**

ಎಂದು ಎರಡು ತೋಳುಗಳನ್ನೆತ್ತಿ ಶಪಥಪೂರ್ವಕವಾಗಿ ಶ್ರೀಹರಿಯ ಸರ್ವೋತ್ತಮತ್ವವನ್ನು ಸಾಧಿಸಿರುತ್ತಾರೆ. ಅಂದರೆ ಶ್ರೀ ವೇದವ್ಯಾಸರಿಗೆ ಶ್ರೀಹರಿಸರ್ವೋತ್ತಮತ್ವದಲ್ಲಿಯೇ ಮಹಾತಾತ್ಪರ್ಯವೆಂಬುದು ಸಿದ್ಧವಾದ ವಿಷಯವಾಗಿದೆ.

ಅವರಿಂದ ರಚಿತವಾದ ಬ್ರಹ್ಮಸೂತ್ರಗಳಿಗೂ ಸಹ ಶ್ರೀವಿಷ್ಣುಸರ್ವೋತ್ತಮತ್ವದಲ್ಲೇ ಮಹಾತಾತ್ಪರ್ಯವೆಂಬುವುದರಲ್ಲಿ ಯಾವ ಸಂದೇಹವೂ ಇಲ್ಲ.

ಹೀಗಿರುವಲ್ಲಿ ಶ್ರೀ ವೇದವ್ಯಾಸರ ಈ ಬ್ರಹ್ಮಸೂತ್ರಗಳಿಗೆ ಇಪ್ಪತ್ತೊಂದು ಭಾಷ್ಯಗಳು ಪ್ರವೃತ್ತವಾಗಿರುವುದಾದರೂಆಯಾ ಭಾಷ್ಯಕಾರರು ಸೂತ್ರಕಾರರಿಗೆ ಸಮ್ಮತವಾದ ಅರ್ಥವನ್ನು ವಿವರಿಸದೇ ''ಅವಿದ್ಯಾ

ಪಟಲಪಿಹಿತನಯನರಾಗಿರುವುದರಿಂದ ಸೂತ್ರಕಾರರ ಅಭಿಪ್ರಾಯಕ್ಕೆ ವಿರುದ್ಧವಾಗಿ ತಮ್ಮ ಬುದ್ಧಿಗೆ ತೋಚಿದ ಅರ್ಥವನ್ನೇ ಭಾಷ್ಯದ ನೆಪದಿಂದ ವಿವರಿಸಿದ್ದಾರೆ. ಇದರಿಂದ ಬ್ರಹ್ಮಸೂತ್ರಗಳ ನಿಜವಾದ ಅಭಿಪ್ರಾಯವನ್ನೇ ಮರೆಮಾಚಿದಂತಾಯಿತು.

ಇತರ ಭಾಷ್ಯಕಾರರು ಬ್ರಹ್ಮಸೂತ್ರಗಳಲ್ಲಿ ಕೆಲವು ಸೂತ್ರಗಳನ್ನು ಸಿದ್ಧಾಂತಸೂತ್ರಗಳೆಂದೂ, ಮತ್ತೆ ಕೆಲವು ಸೂತ್ರಗಳನ್ನು ಪೂರ್ವಪಕ್ಷ ಸೂತ್ರಗಳೆಂದೂ ವ್ಯಾಖ್ಯಾನ ಮಾಡಿರುತ್ತಾರೆ. ಇದು ಸೂತ್ರಕಾರರಾದ ಶ್ರೀ ವೇದವ್ಯಾಸರಿಗೆ ಅಸಮ್ಮತವಾದ ವಿಚಾರವಾಗಿದೆ. ಬ್ರಹ್ಮಮೀಮಾಂಸಾ ಶಾಸ್ತ್ರದಲ್ಲಿನ ೫೬೪ ಸೂತ್ರಗಳೂ ಸಹ ಸಿದ್ಧಾಂತ ಸೂತ್ರಗಳೇ ಆಗಿವೆ. ಇದನ್ನು ನಮ್ಮ ಶ್ರೀಮದಾನಂದತೀರ್ಥರು ಭಾಷ್ಯವಾಕ್ಯದಲ್ಲಿ ಸ್ಪಷ್ಟಪಡಿಸಿದ್ದಾರೆ. ''ವಿಷ್ಣು ಪರತಾಯಾಃ ಪ್ರತಿಸೂತ್ರಂ ನಿರ್ಣೇಷ್ಯಮಾಣತ್ವಾತ್ ಸೂತ್ರಾಣಾಂ ಶ್ರುತ್ಯರ್ಥನಿರ್ಣಾಯಕತ್ವಂ ಚ ತತ್ರ ತತ್ರ ಸ್ಫುಟಮೇವೇತಿ ಭಾವೇನ ತದರ್ಥ ನಿರ್ಣಯಾಯೇತ್ಯುಕ್ತಮ್ (ಗುರ್ವರ್ಥ ದೀಪಿಕಾ) ಪ್ರತಿಸೂತ್ರವೂ ವಿಷ್ಣುಪರವೇ ಆಗಿದೆ ಎಂಬ ರಹಸ್ಯಾಂಶವನ್ನು ತದರ್ಥನಿರ್ಣಯಾಯ ಬ್ರಹ್ಮಸೂತ್ರಾಣಿ ಚಕಾರ ಎಂಬ ಭಾಷ್ಯದಲ್ಲಿನ ತದರ್ಥನಿರ್ಣಯಾಯ ಎಂಬ ಪದದಿಂದ ಸೂಚಿತವಾಗಿರುವುದನ್ನು ವ್ಯಾಖ್ಯಾಕಾರರು ಸ್ಪಷ್ಟಪಡಿಸಿದ್ದಾರೆ. ಸೂತ್ರಲಕ್ಷಣದಲ್ಲಿನ ''ಸಾರವದ್ವಿಶ್ವತೋಮುಖಂ'' ಎಂಬ ವಿಶೇಷಣ ದೃಷ್ಟಿಯಿಂದ ಎಲ್ಲಾ ಸೂತ್ರಗಳಿಗೂ ಸಾರವತ್ತ್ವವೇ ಇಲ್ಲಿ ವಿವಕ್ಷಿತವಾಗಿದೆಯೆಂದೇ ಹೇಳಬೇಕು. ಕೆಲವು ಸೂತ್ರಗಳಲ್ಲಿ ಇತಿಚೇನ್ನ ಎಂಬುದಾಗಿ ಪೂರ್ವ ಪಕ್ಷಾಂಶವನ್ನು ಸೂತ್ರ ಶರೀರದಲ್ಲಿಯೇ ಸೂತ್ರಕಾರರು ಅಳವಡಿಸಿ ನಿರಾಕರಿಸುವುದನ್ನು ಕಾಣಬಹುದಾಗಿದೆ. ಉದಾ - ''ಗೌಣಶ್ಚೇನ್ನಾತ್ಮಶಬ್ದಾತ್'' ಇತ್ಯಾದಿ. ಮತ್ತೆ ಕೆಲವು ಕಡೆ ಜೈಮಿನ್ಯಾದಿ ಋಷಿಗಳ ಅಭಿಪ್ರಾಯವನ್ನೂ ಉದಾಹರಿಸಿ ಶ್ರೀ ವೇದವ್ಯಾಸರ ಅಭಿಪ್ರಾಯಕ್ಕೂ ಪರಸ್ಪರ ವಿರೋಧವಿದ್ದಂತೆ ಆಪಾತತಃ ತೋರಿಬಂದರೂ ಸಹ ವಿಚಾರ ಮಾಡಲಾಗಿ ಯಾವ ವಿರೋಧವೂ ಇರುವುದಿಲ್ಲ. ಅಧಿಕಾರಿ ವಿವಕ್ಷಾಭೇದೇನ ಶ್ರೀಬಾದರಾಯಣರ ಏಕದೇಶ ಅಭಿಪ್ರಾಯವನ್ನೇ ಅವರ ಶಿಷ್ಯರಾದ ಜೈಮಿನ್ಯಾದಿಗಳು ಹೇಳಿದ್ದಾರೆ. ಆದಕಾರಣ ವಿರೋಧವಿಲ್ಲವೆಂದು ಶ್ರೀಮದಾಚಾರ್ಯರು ಆ ಎಲ್ಲಾ ಬಗೆಯಾದ ವಿರೋಧಗಳನ್ನು ಪ್ರಮಾಣ ವಾಕ್ಯಗಳ ಉದಾಹರಣ ಮೂಲಕವಾಗಿ ಪರಿಹರಿಸಿರುತ್ತಾರೆ. ಈ ದೃಷ್ಟಿಯಿಂದಲೂ ಸಕಲ ಬ್ರಹ್ಮಸೂತ್ರಗಳೂ ಸಿದ್ಧಾಂತ ಸೂತ್ರಗಳೇ ಆಗಿವೆ.

> ''ಕೃಷ್ಣ ದ್ವೈಪಾಯನಮತಾದೇಕ ದೇಶವಿದಃ ಪರೇ ।
> ವದಂತಿ ತೇ ಯಥಾಪ್ರಜ್ಞಂ ನ ವಿರೋಧಃ ಕಥಂಚನ'' ಇತಿ ಪಾದ್ಮೇ

ಎಂಬ ದೇವತಾಧಿಕರಣದಲ್ಲಿನ ವಾಕ್ಯವೂ ಸಹ ಇದೇ ಅಭಿಪ್ರಾಯವನ್ನು ವ್ಯಕ್ತೀಕರಿಸುತ್ತದೆ.

> ''ಸರ್ವಾಧ್ಯಕ್ಷೈವ ಕೃಷ್ಣಸ್ಯ ಶ್ರೀಕದೇಶವಿಚಿಂತಿತಮ್ ।
> ಶ್ರೀಕೃಷ್ಣ ಮುಖಯೋಃ ಬುದ್ಧ್ಯಾಯಾಸ್ತಸ್ಯತಂ ನ ವಿರುಧ್ಯತೇ'' ॥ಇತಿ ಬ್ರಾಹ್ಮೇ ॥

ಶ್ರೀ ವೇದವ್ಯಾಸರ ಅವತಾರಕ್ಕೆ ಮುಂಚಿತವಾಗಿ ಇದ್ದಂತೆ, ಪುನಃ ತತ್ವಜ್ಞಾನಕ್ಕೆ ಇತರ ಕುಭಾಷ್ಯಗಳಿಂದ ತೊಂದರೆಯುಂಟಾಗಿ ಸಾತ್ವಿಕ ವರ್ಗಕ್ಕೆ ಮೋಕ್ಷ ಮಾರ್ಗದರ್ಶಕರೇ ಇಲ್ಲದಂತಾಯಿತು. ಶ್ರೀ ವೇದವ್ಯಾಸರೂಪಿಯಾದ ಪರಮಾತ್ಮನಿಂದ ಉಪದಿಷ್ಟವಾದ ತತ್ತ್ವವು ಕಣ್ಮರೆಯಾಯಿತು. ಮೋಕ್ಷಯೋಗ್ಯರಾದ ಸಾತ್ವಿಕಚೇತನರು ದಾರುಣವಾದ ಪರಿಸ್ಥಿತಿಯನ್ನು ಎದುರಿಸುವ ಘೋರವಾದ ಸಂದರ್ಭವು ಉಂಟಾದಾಗ ಸ್ವರ್ಗದಲ್ಲಿ ಕೃಪಾಳುಗಳಾದ ಬ್ರಹ್ಮಾದಿ ದೇವತೆಗಳು ಹಿಂದಿನಂತೆ ಪುನಃ ಶ್ರೀಮನ್ನಾರಾಯಣನನ್ನು ಮೊರೆಹೊಕ್ಕರು. ಆಗ ಶ್ರೀಹರಿಯು ತತ್ವಜ್ಞಾನ ಕಾರ್ಯವನ್ನು ಯಶಸ್ವಿಗೊಳಿಸಲು ಕ್ರಿಯುಗಕಾಲಿಯಾದುದರಿಂದ ಸ್ವಸಂಕಲ್ಪದಂತೆ ತಾನು ಈ ಕಲಿಕಾಲದಲ್ಲಿ ಅವತಾರ ಮಾಡುವಂತಿಲ್ಲವೆಂದು ಮುಖ್ಯಪ್ರಾಣನಿಗೆ ಅವತಾರವೆ ಇಲ್ಲದ ಪ್ರಯುಕ್ತ ತನ್ನ ಕಾರ್ಯವನ್ನು ನಿರ್ವಹಿಸುವ ಸರ್ವಸಾಮರ್ಥ್ಯದಿಂದ ಕೂಡಿದ

ಪ್ರಧಾನ ವಾಯುದೇವನಿಗೆ ಅಪ್ಪಣೆ ಮಾಡಿದನು. ಅದರ ಫಲವಾಗಿ ಪ್ರಧಾನ ವಾಯುದೇವರು ಶ್ರೀಮನ್ಮಧ್ವರೂಪದಿಂದ ಅವತರಿಸಿದರು. ಹಿಂದೆ ರಾಮಾವತಾರಕಾಲದಲ್ಲಿ ಹನುಮಂತನಾಗಿಯೂ, ಕೃಷ್ಣಾವತಾರ ಕಾಲದಲ್ಲಿ ಭೀಮಸೇನನಾಗಿಯೂ ಭಗವತ್ಕಾರ್ಯಸಾಧಕರಾದ ವಾಯುದೇವರೇ ಶ್ರೀವೇದವ್ಯಾಸಾವತಾರ ಕಾರ್ಯವನ್ನು ಅಂದರೆ ತತ್ವಜ್ಞಾನ ಕಾರ್ಯವನ್ನು ಶ್ರೀಮದಾನಂದತೀರ್ಥರೂಪದಿಂದ ಸಾಧಿಸಿದ್ದಾರೆ.

ಶ್ರೀಮನ್ಮಧ್ವಾಚಾರ್ಯರು ಪ್ರಪ್ರಥಮವಾಗಿ ಭಗವದ್ಗೀತೆಗೆ ಭಾಷ್ಯವನ್ನು ಬರೆದು ಬದರೀಕ್ಷೇತ್ರಕ್ಕೆ ತೆರಳಿ ಅಲ್ಲಿರುವ ಶ್ರೀಮನ್ನಾರಾಯಣನ ಸನ್ನಿಧಾನದಲ್ಲಿ ಪ್ರವಚನ ನಡೆಸಿದಾಗ ಅದರಿಂದ ತೃಪ್ತನಾದ ಪರಮಾತ್ಮನೇ ಅವರ ಮಂಗಳ ಪದ್ಯದಲ್ಲಿದ್ದ "ಶಕ್ತಿತಃ" ಎಂಬ ಪದವನ್ನು ಬದಲಾಯಿಸಿ "ಲೇಶತಃ' ಎಂದು ತಿದ್ದಿರುವುದು ಅದ್ಭುತ ಸಂಗತಿಯಾಗಿದೆ. ಇದರಿಂದ ಪರಮಾತ್ಮನಿಗೆ ಶ್ರೀಮಧ್ವರ ಗೀತಾಭಾಷ್ಯವು

"ಗೀತಾಭಾಷ್ಯಂ ಚಕಾರಾಸೌ ಪ್ರಥಮಂ ತುಷ್ಟಿದಂ ಹರೇಃ" ।

ಎಂಬ ಶ್ರೀ ವ್ಯಾಸರಾಜರು ನುಡಿದಿರುವಂತೆ ಅತ್ಯಂತ ಪ್ರೀತಿಕರವಾಗಿದೆ. ಬದರೀಕ್ಷೇತ್ರದಲ್ಲಿದ್ದ ಶ್ರೀಮನ್ಮಧ್ವ ಗುರುಗಳು ಒಂದು ಮಂಡಲ ಪರ್ಯಂತಕಾಷ್ಠಮೌನವ್ರತಧಾರಿಗಳಾಗಿ ಘೋರವಾದ ತಪಸ್ಸನ್ನು ಆಚರಿಸಿದರು. ಆಗ ತೇಜೋರೂಪದಿಂದ ಅಲ್ಲಿಗೆ ಆಗಮಿಸಿದ ಶ್ರೀ ವೇದವ್ಯಾಸರ ಸೂಚನೆಯಂತೆ ಅಮಾನುಷ ರೀತಿಯಲ್ಲಿ ಉತ್ತರ ಬದರೀ ಕ್ಷೇತ್ರಕ್ಕೆ ಹೋಗಿ ತಮ್ಮ ಸಾಕ್ಷಾತ್ ಗುರುಗಳಾದ ಶ್ರೀ ವೇದವ್ಯಾಸರಲ್ಲಿಯೇ ಅತಿ ಕ್ಷಿಪ್ರಕಾಲದಲ್ಲಿ ಮತ್ತೂ ವಿಶೇಷಾಕಾರವಾಗಿ ತತ್ವಜ್ಞಾನವನ್ನು ಪಡೆದು ಗುರುಗಳಾದ ಶ್ರೀ ವೇದವ್ಯಾಸರೊಂದಿಗೆ ಮತ್ತೂ ಉತ್ತರ ಭಾಗದಲ್ಲಿದ್ದ ತಾಪಸರೂಪಿಗಳಾದ ಶ್ರೀಮನ್ನಾರಾಯಣ ದೇವರಲ್ಲಿಗೆ ಹೋದಾಗ ಆ ಭಗವಂತನು ಈ ರೀತಿ ಅಪ್ಪಣೆ ಮಾಡಿದನು.

"ಕುರು ಭಾಷ್ಯಂ ಅವಿಲಂಬಿತಂ ವ್ರಜೇಃ ಸುಮತೇಃ ಯೋಜನ ಕವೇ ಶ್ರುತಿಸ್ಮೃತೀಃ"

ಎಂದು ಅಪ್ಪಣೆ ಮಾಡಿದನು.

ಅದರ ಸಾರಾಂಶವು ಈ ರೀತಿ ಇದೆ. "ಎಲೈ ಜ್ಞಾನಿಯಾದ ಮಧ್ವನೇ! ನೀನು ದುಷ್ಟರು ಮಾಡಿರುವ ದುಃಶಾಸ್ತ್ರಗಳನ್ನು ಖಂಡಿಸಿ ಸಾತ್ವಿಕಜನತೆಗೆ ಉತ್ತಮ ಗತಿಪ್ರದವಾದ ತತ್ವಜ್ಞಾನಕ್ಕೋಸ್ಕರ ಬ್ರಹ್ಮಸೂತ್ರಗಳಿಗೆ ಭಾಷ್ಯವನ್ನು ರಚಿಸು. ಇಲ್ಲಿಂದ ಬೇಗನೇ ಹೊರಡು. ವೇದಗಳಿಗೂ ಅದಕ್ಕನುಸಾರಿಗಳಾದ ಸ್ಮೃತಿಗಳಿಗೂ ಸಿದ್ಧಾಂತಗಳ ತಾತ್ಪರ್ಯಗಳನ್ನು ಸ್ಪಷ್ಟಪಡಿಸು. ಬ್ರಹ್ಮಸೂತ್ರಗಳಲ್ಲಿ ಶ್ರೀವೇದವ್ಯಾಸರು ನಿರ್ಣಯಿಸಿರುವ ನಮಗೆ ಸಮ್ಮತವಾದ ಸಿದ್ಧಾಂತದ ಪರವಾಗಿರುವ ವ್ಯಾಖ್ಯಾನವನ್ನು ಮಾಡು" ಎಂದು ಅಪ್ಪಣೆ ಮಾಡಿದನು.

ಆ ಭಗವಂತನ ಆಜ್ಞೆಯಂತೆ ಶ್ರೀಮದಾನಂದ ತೀರ್ಥರು ಶ್ರೀ ವೇದವ್ಯಾಸರ ಮುಖಾರವಿಂದದಿಂದಲೇ ಬ್ರಹ್ಮಸೂತ್ರಗಳ ಅರ್ಥವನ್ನು ಶ್ರವಣ ಮಾಡಿ ಬ್ರಹ್ಮಸೂತ್ರಭಾಷ್ಯವನ್ನು ವಿರಚಿಸಿರುತ್ತಾರೆ. ಬ್ರಹ್ಮಸೂತ್ರಭಾಷ್ಯದ ಮಹಿಮೆಯು ಅತಿ ಮಹತ್ವದಿಂದ ಕೂಡಿದೆ. ಶ್ರೀಮದಾನಂದತೀರ್ಥ ಭಗವತ್ಪಾದರ ಭಾಷ್ಯದ ಮಹಿಮೆಯನ್ನು ಶ್ರೀ ಸುಮಧ್ವವಿಜಯಕಾರರು ಬಹುರಮಣೀಯವಾದ ಸರಣಿಯಲ್ಲಿ ವರ್ಣಿಸಿರುತ್ತಾರೆ. ಅದರ ಸಾರಾಂಶವನ್ನು ಇಲ್ಲಿ ಸಂಗ್ರಹಿಸಿರುತ್ತೇವೆ.

ವ್ಯಾಸದೇವಹೃದಯಾತಿವಲ್ಲಭಂ ವಾಸುದೇವಮಗಣೇಯಸದ್ಗುಣಮ್ ।
ಸಾಧಯತ್ಸಕಲದೋಷವರ್ಜಿತಂ ಜ್ಞಾನಭಕ್ತಿದಮನಂತಸೌಖ್ಯದಮ್ ॥೧॥

ಉಕ್ತಮುಕ್ತಮಭಿಧೇಯಮುತ್ತಮಂ ವೇದವಾಕ್ಯಮನುವಾದಯನ್ಮುಹುಃ ।
ವ್ಯಂಜಯತ್ ಸ್ಮೃತಿವಚೋಭರಂಜಸಾ ತಸ್ಯ ಚಾರ್ಥಮತಿಯುಕ್ತಯುಕ್ತಿಮತ್ ॥ ೨ ॥

ಬಾಲಸಂಘಮಪಿ ಬೋಧಯದ್ ಭೃಶಂ ದುರ್ನಿರೂಪವಚನಂ ಚ ಪಂಡಿತೈಃ ।
ಅಪ್ರಮೇಯಹೃದಯಂ ಪ್ರಸಾದವತ್ ಸೌಮ್ಯಕಾಂತಿ ಚ ವಿಪಕ್ಷಭೀಷಣಮ್ ॥ ೩ ॥

ಅಸ್ತದೂಷಣಮವಂಧ್ಯಭಾಷಣಂ ಲಕ್ಷಿತಂ ಸಕಲಲಕ್ಷಣೈಃ ಸಮಮ್ ।
ಮಾನನೀಯಮಪಿ ನಾಕಿನಾಯಕೈಃ ರೂಪಮನ್ಯದಿವ ಧನ್ಯಮಾತ್ಮನಃ ॥೪॥

ಏಕವಿಂಶತಿಕುಭಾಷ್ಯದೂಷಕಂ ಬ್ರಹ್ಮಸೂತ್ರಗಣಭಾಷ್ಯಮದ್ಭುತಮ್ ।
ಅನ್ಯದೂಷ್ಯಮತನೋದನಂತಧೀಃ ಭೂತಭಾವಿಭವದಾತ್ಮಭಿಃ ಕ್ವಚಿತ್ ॥ ೫ ॥

ಗಾಂಗಮಂಗಳತರಂಗಭಂಗದಭ್ರಾಂತಸುಭ್ರಿಹರಿವೇಶ್ಯಕೃತ್ಸಮಃ ।
ಯದ್ಗತೈಕತಮವರ್ಣಲೇಖಕಃ ಸತ್ಯತೀರ್ಥ ಇಹ ಭಾಷ್ಯಮಾಲಿಖತ್ ॥೬ ॥

**ತಾತ್ಪರ್ಯ** :- ಶ್ರೀಮನ್ಮಧ್ವಾಚಾರ್ಯರ ಬ್ರಹ್ಮಸೂತ್ರಭಾಷ್ಯವು ಶ್ರೀ ವೇದವ್ಯಾಸರ ಅಭಿಪ್ರಾಯಕ್ಕೆ ಅನುಸಾರಿಯಾಗಿದೆ. ಶ್ರೀವೇದವ್ಯಾಸರಿಗೆ ಸಮ್ಮತವಾದ ಅರ್ಥವನ್ನೇ ಪ್ರತಿಪಾದಿಸುತ್ತಲಿದೆ. ಶ್ರೀಮನ್ನಾರಾಯಣನು ಅಗಣ್ಯಕಲ್ಯಾಣಗುಣಪರಿಪೂರ್ಣನೆಂದೂ, ಸಕಲ ದೋಷದೂರನೆಂದೂ, ಭಾಷ್ಯದಲ್ಲಿ ಸಾಧಿಸಿರುತ್ತಾರೆ. ಶ್ರೀಮದಾಚಾರ್ಯರು ತನ್ನ ಭಕ್ತವೃಂದಕ್ಕೆ ಶ್ರೀ ವಿಷ್ಣುವಿನ ಭಕ್ತಿಯನ್ನು ತತ್ತ್ವಜ್ಞಾನವನ್ನೂ ಅನುಗ್ರಹಿಸಿರುವಂತೆ ಅವರ ಭಾಷ್ಯವೂ ಸಹ ನಿರಂತರವಲ್ಲಿ ಭಾಷ್ಯವನ್ನು ಪ್ರವಚನಾದಿಗಳ ಮೂಲಕ ಅರ್ಥಾನುಸಂಧಾನಪೂರ್ವಕವಾಗಿ ಸೇವಿಸುವವರಿಗೆ ವೈರಾಗ್ಯ ಭಕ್ತಿ ಜ್ಞಾನಾದಿಗಳನ್ನು ಉಂಟುಮಾಡಿ ಕಡೆಗೆ ಮೋಕ್ಷವನ್ನೇ ಕೊಡತಕ್ಕದ್ದಾಗಿದೆ.

ಮತ್ತು ಶ್ರೀಮದಾಚಾರ್ಯರು ತಮ್ಮ ಪ್ರವಚನ ಕಾಲದಲ್ಲಿ ಪ್ರತಿಯೊಂದು ವಿಷಯಕ್ಕೂ ಪ್ರಮಾಣವಾಗಿ ವೇದವಾಕ್ಯಗಳನ್ನೇ ಉದಾಹರಿಸಿ, ಅದರ ಅರ್ಥವಿವರಣೆಯಿಂದ ಕೂಡಿದ ಸ್ಮೃತಿವಚನಗಳನ್ನು ಹೇಳಿ ಶ್ರೋತೃವೃಂದದ ಸಂದೇಹ ಭ್ರಾಂತಿಗಳನ್ನು ಪರಿಹರಿಸುತ್ತಲಿದ್ದರು. ಅದರಂತೇ ಅವರ ಭಾಷ್ಯವೂ ಸಹ ಪ್ರತಿಯೊಂದು ಪ್ರಮೇಯದ ನಿರೂಪಣೆಯ ಸಂದರ್ಭದಲ್ಲೂ ಶ್ರುತಿವಚನಗಳಿಂದಲೂ, ಸ್ಮೃತಿವಚನಗಳಿಂದಲೂ ಯುಕ್ತಿಜಾಲಗಳಿಂದಲೂ ಕೂಡಿದೆ. ಈ ಭಾಷ್ಯವು ಶ್ರೀಮದಾಚಾರ್ಯರ ಮತ್ತೊಂದು ಸ್ವರೂಪದಂತೆಯೇ ಇದೆ. ಶ್ರೀಮದಾನಂದತೀರ್ಥರು ಅಲ್ಪಮತಿಗಳಿಗೂ ಅರ್ಥವಾಗುವಂತೆ ತತ್ತ್ವನಿರೂಪಣೆಯನ್ನು ಮಾಡುತ್ತಿದ್ದರು. ಅವರ ವಾಕ್ಯದ ಗಾಢವಾದ ಅರ್ಥವನ್ನು ಸುಲಭವಾಗಿ ತಿಳಿಯಲು ಎಂತಹ ಪಂಡಿತರಿಗೂ ಸಾಧ್ಯವಾಗುತ್ತಿರಲಿಲ್ಲ. ಪಂಡಿತಪ್ರಕಾಂಡರಿಗೂ ದುರ್ಗಮವಾಗಿತ್ತು. ಅವರ ವದನಾರವಿಂದವು ಪ್ರಸನ್ನತೆಯಿಂದ ಕಂಗೊಳಿಸುತ್ತಲಿತ್ತು. ಪ್ರತಿವಾದಿಗಳಿಗೆ ಭಯಂಕರರಾಗಿದ್ದರು. ಅವರ ಸ್ವರೂಪದಂತೆಯೇ ಭಾಷ್ಯವೂ ಸಹ ಬಾಲಕರಿಗೆ ಸುಬೋಧವಾಗಿಯೂ ಪಂಡಿತಪ್ರವರರಿಗೂ ದುರ್ಗಮವಾಗಿಯೂ ಇದೆ. ಸರಳವಾದ ಶಬ್ದದಿಂದಲೂ, ಮಿತಮಿತವಾದ ನುಡಿಗಳಿಂದಲೂ ಕೂಡಿತವಾಗಿದ್ದರೂ ಅತಿಶಯವಾಗಿ ದೃಢವಾದ ಯುಕ್ತಿಪುಂಜದಿಂದ ರಂಜಿತವಾಗಿ ಪ್ರತಿವಾದಿಗಳಿಗೆ ಅಜೇಯವಾಗಿ ಭಯಂಕರವಾಗಿದೆ. ಇಂತಹ ಆಶ್ಚರ್ಯಕರವಾದ ಭಾಷ್ಯವನ್ನು ಶ್ರೀಮದ್ವರು ರಚಿಸಿದ್ದಾರೆ.

ಶ್ರೀಮದಾನಂದತೀರ್ಥರ ಸ್ವರೂಪವು ಕಾಮಕ್ರೋಧಾದಿ ದೋಷರಹಿತವಾಗಿದೆ. ಸತ್ಯವಾದ ಹಿತಮಿತವಾದ ಮಾತುಗಳುಳ್ಳದ್ದಾಗಿದೆ. ಮಹಾತ್ಮರಿಗಿರಬೇಕಾದ ಅಂದರೆ ಋಜುವರೇಣ್ಯರಿಗಿರಬೇಕಾದ ಮೂವತ್ತೆರಡು ಲಕ್ಷಣಗಳಿಂದ ಕೂಡಿದುದಾಗಿ ದೇವೋತ್ತಮರಿಂದಲೂ ಪೂಜ್ಯವಾದುದಾಗಿದೆ. ಅದರಂತೆ ಅವರ ಭಾಷ್ಯವೂ ಸಹ ಅಪಶಬ್ದಾದಿ ದೋಷಗಳಿಲ್ಲದೇ, ಸ್ವರ್ಥವಾದ ನಿರೂಪಣೆಯಿಂದ ಕೂಡದೇ ಭಾಷ್ಯಕ್ಕೆ ಇರಬೇಕಾದ ಸಕಲ ಲಕ್ಷಣಗಳಿಂದಲೂ ಕೂಡಿ, ದೇವೋತ್ತಮರಿಗೂ ಅತ್ಯಾದರಣೀಯವಾಗಿದೆ. ಈ ಭಾಷ್ಯವು ಪ್ರವಚನ ಮಾಡುವವರಿಗೆ ಅಪಾರ ಪುಣ್ಯಪ್ರದವಾಗಿದೆ. ಇಂತಹ ಅದ್ಭುತವಾದ ಭಾಷ್ಯವನ್ನು ಶ್ರೀಮದಾಚಾರ್ಯರು ಪರಮಾತ್ಮನ ಆಜ್ಞೆಯಂತೆ ರಚಿಸಿದ್ದಾರೆ.

ಭಾಷ್ಯಕ್ಕೆ ಸಾಮಾನ್ಯವಾಗಿ ದಾರ್ಶನಿಕರು ಒಂದು ಲಕ್ಷಣವನ್ನು ಈ ಕೆಳಕಂಡಂತೆ ಹೇಳಿದ್ದಾರೆ.

**ಸೂತ್ರಾರ್ಥೋ ವರ್ಣ್ಯತೇ ಯತ್ರ ವಾಕ್ಯೈಃ ಸೂತ್ರಾನುಕಾರಿಭಿಃ ।**
**ಸ್ವಪದಾನಿ ಚ ವರ್ಣ್ಯಂತೇ ಭಾಷ್ಯಂ ಭಾಷ್ಯವಿದೋ ವಿದುಃ ॥**

ಎಂದು ಭಾಷ್ಯದ ಲಕ್ಷಣವಾಗಿದೆ. ಸೂತ್ರದಲ್ಲಿನ ಪದಗಳನ್ನು ಉಲ್ಲೇಖಿಸಿ ಆ ಸೂತ್ರಕಾರರಿಗೆ ಪರಮಸಮ್ಮತವಾದ ಅರ್ಥವನ್ನು ಕ್ರೋಢೀಕರಿಸಿ ಆ ಸೂತ್ರ ಘಟಕ ಪದಗಳನ್ನು ಪ್ರತಿಬಿಂಬಿಸುವ ಪರ್ಯಾಯ ಪದಗಳಿಂದಲೂ ಅದರ ಜೊತೆಗೆ ತಮ್ಮ ಪದಗಳಿಂದಲೂ ಸೂತ್ರಾರ್ಥವನ್ನು ವಿವರಿಸುವ ಗ್ರಂಥವನ್ನು ಭಾಷ್ಯವೆಂದು ಜ್ಞಾನಿಗಳು ಹೇಳುತ್ತಾರೆ. ಇಂತಹ ಭಾಷ್ಯದ ಲಕ್ಷಣವು ಅನ್ವರ್ಥವಾಗಿ ಸಾಕ್ಷಾತ್ ಶ್ರೀವೇದವ್ಯಾಸರ ಶಿಷ್ಯರಾದ ಶ್ರೀಮನ್ಮಧ್ವಾಚಾರ್ಯರ ಭಾಷ್ಯದಲ್ಲಿ ಕಂಡುಬರುತ್ತದೆಯೇ ಹೊರತು ಇತರ ಸೂತ್ರಭಾಷ್ಯಗಳಲ್ಲಿ ಕಂಡುಬರುವುದಿಲ್ಲ. ಅವುಗಳಲ್ಲಿ ಬ್ರಹ್ಮಸೂತ್ರಕಾರರಾದ ಶ್ರೀ ಬಾದರಾಯಣರಿಗೆ ಸಮ್ಮತವಾದ ಪ್ರಧಾನ ವಿಷಯವಾದ ಶ್ರೀಹರಿಯ ಸರ್ವೋತ್ತಮತ್ವವೇ ಪ್ರತಿಪಾದಿಸಲ್ಪಟ್ಟಿಲ್ಲ. ಸಮರ್ಥಿಸಲ್ಪಟ್ಟಿಲ್ಲ.

ಮತ್ತೊಂದು ಅದ್ಭುತವಾದ ಮಹಿಮೆಯನ್ನು ಶ್ರೀಮದಾನಂದತೀರ್ಥರ ಭಾಷ್ಯದಲ್ಲಿ ಕಾಣುತ್ತಿದ್ದೇವೆ. ಈ ಭಾಷ್ಯಕ್ಕೆ ಮುಂಚೆ ಇಪ್ಪತ್ತೊಂದು ಜನ ಭಾಷ್ಯಕಾರರು ಭಾಷ್ಯಗಳನ್ನು ರಚಿಸಿದ್ದಾಗ್ಯೂ, ಅವೆಲ್ಲದರ ನಿರೂಪಣೆಗಳೂ ಶ್ರೀವೇದವ್ಯಾಸರಿಗೆ ವಿರುದ್ಧವಾಗಿರುವ ಪ್ರಯುಕ್ತ ಶ್ರೀಮಧ್ವಾಚಾರ್ಯರು ಆ ಭಾಷ್ಯಗಳ ಅರ್ಥವನ್ನು ಖಂಡಿಸಿರುತ್ತಾರೆ. ಹಿಂದೆ ಹುಟ್ಟಿದ, ಈಗ ಹುಟ್ಟಿರುವ, ಮುಂದೆ ಹುಟ್ಟಲಿರುವ ಯಾವ ವಾದಿಗೂ ಇದನ್ನು (ಶ್ರೀಮಧ್ವರ ಭಾಷ್ಯವನ್ನು) ಖಂಡಿಸಲು ಸಾಧ್ಯವೇ ಇಲ್ಲ. ಹೇಗೆ ಅವರ ಸ್ವರೂಪವು ಇತರ ಸರ್ವ ಜೀವರಿಗೂ ಅಜೇಯವಾದ ದೇವೋತ್ತಮ ಸ್ವರೂಪವಾಗಿದೆಯೋ ಅದರಂತೆ ಅವರ ಭಾಷ್ಯವೂ ಸಹ ಸರ್ವ ಅಜೇಯ ಸ್ವರೂಪವುಳ್ಳದ್ದಾಗಿದೆ. ಹಿಂದಿನ, ಇಂದಿನ, ಮುಂದಿನ ಯಾವ ಪ್ರಕಾಂಡ ಪಂಡಿತನೇ ಆಗಲಿ ಶ್ರೀಮಧ್ವರ ಭಾಷ್ಯದ ಒಂದು ಅಕ್ಷರವನ್ನೂ ಸಹ ಖಂಡಿಸಲಾರನು. ಇಂತಹ ಅದ್ಭುತವಾದ ಶ್ರೀಮದಾನಂದತೀರ್ಥ ಭಗವತ್ಪಾದರ ಭಾಷ್ಯವನ್ನು ದೇವತೆಗಳೂ ಸಹ ಬಂದು ಕೇಳಿ ಸಂತೋಷಪಟ್ಟಿರುತ್ತಾರೆ. ಈಗಲೂ ಸಹ ಶೇಷದೇವರು ತಮ್ಮ ಲೋಕದಲ್ಲಿ ಸನಕಾದಿಗಳಿಗೆ ಅದರ ಅರ್ಥಗಾಂಭೀರ್ಯವನ್ನು ವಿವರಿಸುತ್ತಲಿದ್ದಾರೆ.

ಇಷ್ಟೇ ಅಲ್ಲದೆ ಮತ್ತೊಂದು ಅಸಾಧಾರಣವಾದ ಮಹಿಮಾತಿಶಯವನ್ನು ನಮ್ಮ ಶ್ರೀಮದಾಚಾರ್ಯರ ಭಾಷ್ಯಕ್ಕಿರುವುದನ್ನು ಸಕಲಸಚ್ಚೇತನರೂ ತಿಳಿಯಬೇಕಾಗಿದೆ.

ಪರಮಮಂಗಳಕರವಾದ ದೇವಗಂಗೆಯ ತರಂಗಗಳಿಂದ ನಿರಂತರವೂ ತಾಡಿತವಾಗಿ ಅತಿಪವಿತ್ರವೆನಿಸಿದ ಗಂಗಾತಟದಲ್ಲಿ ಸಕಲ ಸಂಪದ್ಭರಿತವಾಗಿ ಪರಮಸುಂದರವಾದ ಶ್ರೀವಿಷ್ಣುದೇವಾಲಯವನ್ನು ರಚಿಸಿದವನಿಗೆ ಯಾವ ಪುಣ್ಯ ರಾಶಿಯು ಲಭಿಸುವುದೋ ಅಂತಹ ಪುಣ್ಯವು ಶ್ರೀಪೂರ್ಣಪ್ರಜ್ಞಾಚಾರ್ಯರ ಪವಿತ್ರವಾದ ಭಾಷ್ಯದಲ್ಲಿನ ಒಂದೇ ಒಂದು ಅಕ್ಷರವನ್ನು ಭಕ್ತಿಯಿಂದ ಅರ್ಥಾನುಸಂಧಾನಪೂರ್ವಕವಾಗಿ ಲೇಖನ ಮಾಡಿದವನಿಗೂ ಲಭಿಸುತ್ತದೆ. ಇಂತಹ ಅತ್ಯಂತ ಪವಿತ್ರವಾದ ಸೂತ್ರಭಾಷ್ಯವನ್ನು ಶ್ರೀಮನ್ಮಧ್ವರು ರಚಿಸಿದ್ದಾರೆ.

ಬ್ರಹ್ಮಸೂತ್ರಗಳ ಅದ್ಭುತವಾದ ಮಹತ್ತ್ವವನ್ನು ಶ್ರೀಮದಾಚಾರ್ಯರು ಪ್ರಮಾಣ ವಾಕ್ಯವನ್ನನುಸರಿಸಿ ಅನುವ್ಯಾಖ್ಯಾನದಲ್ಲಿ ತೋರಿಸಿರುವುದು ಆಶ್ಚರ್ಯಕರವಾಗಿದೆ.

ಬ್ರಹ್ಮಸೂತ್ರಗಳಲ್ಲಿನ ಪ್ರತಿಸೂತ್ರ, ಪ್ರತಿಪದ, ಪ್ರತ್ಯಕ್ಷರವೂ ಸಹ ವಾಸುದೇವ, ಸಂಕರ್ಷಣ, ಅನಿರುದ್ಧ, ಪ್ರದ್ಯುಮ್ನರೆಂಬ ಭಗವಂತನ ಚತುರ್ಮೂರ್ತಿಗಳನ್ನು ನಾರಾಯಣ ಸಹಿತವಾಗಿ ಪಂಚ, ಪಂಚ ಭಗವದ್ರೂಪಗಳನ್ನು ಪ್ರತಿಪಾದಿಸುತ್ತಲಿವೆ. ಆದರೆ ಆ ನಿಗೂಢಾರ್ಥಗಳು ಅಧಿಕಾರಿ ವರ್ಗದಲ್ಲಿ ತಾರತಮ್ಯಾನುಸಾರವಾಗಿ ಅವರವರ ಯೋಗ್ಯತೆಗೆ ತಕ್ಕಂತೆ ವಿಶೇಷಾರ್ಥಗಳು ಸ್ಫುರಿಸುತ್ತವೆ. ಚತುರ್ಮುಖರೇ ಅವುಗಳನ್ನು ಬಲ್ಲವರಾಗಿರುವವರು ಎಂಬ ರಹಸ್ಯ ಸಂಗತಿಯ ವಿಷಯದಲ್ಲಿ ಬೃಹತ್ತಂತ್ರಪ್ರಮಾಣವನ್ನು ಅನುವ್ಯಾಖ್ಯಾನದಲ್ಲಿ ಉದಾಹರಿಸಿರುತ್ತಾರೆ. ಆ ಅನುವ್ಯಾಖ್ಯಾನಕ್ಕೆ ಅವತಾರಿಕಾರೂಪವಾಗಿರುವ ನ್ಯಾಯಸುಧಾ ವಾಕ್ಯವೂ ಸಹ ಬಹಳ ಮಾರ್ಮಿಕವಾಗಿದೆ.

**ಸುಧಾ:-** "**ಸರ್ವಜ್ಞ ಕಲ್ಪೇನ ತತ್ತ್ವೋಪದೇಶಾಯ ಪ್ರವೃತ್ತೇನ ಭಗವತಾಽಽಚಾರ್ಯೇ-ಣೈವಂ ಸೂತ್ರೇಷು ವ್ಯಾಖ್ಯಾತೇಷು ಶಿಷ್ಯಾಣಾಂ ಏತಾವನ್ಮಾತ್ರಾರ್ಥಾನ್ಯೇತಾನೀತಿ ಪ್ರತೀತಿ: ಸ್ಯಾತ್ ।**
**ತಾಂ ನಿರಾಕರ್ತುಮಾಹ ॥ ವಾಸುದೇವಾದೀತಿ ॥**

**ಅನುವ್ಯಾಖ್ಯಾನ :-** **ವಾಸುದೇವಾದಿ ರೂಪೇಣ ಚತುರ್ಮೂರ್ತಿಶ್ಚ ಸರ್ವಶಃ ।**
**ಅಥವಾ ಪಂಚಮೂರ್ತಿಸ್ತು ಪ್ರೋಕ್ತೋಽಧಿಕರಣಂ ಪ್ರತಿ ॥**

**ಪ್ರತಿಸೂತ್ರಂ ಪ್ರತಿಪದಂ ಪ್ರತ್ಯಕ್ಷರಮಥಾಪಿವಾ ।**
**ತೈಸ್ತೈರ್ಯುಕ್ತಿಶ್ರುತಿನ್ಯಾಯವಿಶೇಷೈಃ ಯೋಗ್ಯತಾ ಯಥಾ ॥**

**ಬೃಹತ್ತಂತ್ರಪ್ರಮಾಣೇನ ಬಹ್ವರ್ಥಮಪಿ ಸಂಗ್ರಹಾತ್ ।**
**ಉಚ್ಯತೇ ನರಬುದ್ಧೀನಾಮಪಿ ಕಿಂಚಿದ್ಗ್ರಹಾರ್ಥತಃ ॥**

**ಅಭಿಪ್ರಾಯ** :- ತತ್ತ್ವೋಪದೇಶಕ್ಕಾಗಿ ಪ್ರವೃತ್ತರಾದಪೂಜ್ಯರಾದ ಆಚಾರ್ಯರು ಬ್ರಹ್ಮಸೂತ್ರಗಳಿಗೆ ಸೂತ್ರಭಾಷ್ಯ ಮತ್ತು ಅನುವ್ಯಾಖ್ಯಾನಗಳಲ್ಲಿ ಎಷ್ಟು ಅರ್ಥಗಳನ್ನು ನಿರೂಪಿಸಿರುವರೋ ಈ ಸೂತ್ರಗಳಿಗೆ ಅಷ್ಟೇ ಅರ್ಥವಿದೆ. ಬೇರೇ ಅರ್ಥವಿಲ್ಲವೆಂದು ಶಿಷ್ಯರಿಗೆ ಪ್ರತೀತಿಯು ಉಂಟಾಗಬಹುದು. ಅದನ್ನು ನಿರಾಕರಿಸಲು ಅನುವ್ಯಾಖ್ಯಾನಕಾರರು ವಾಸುದೇವಾದೀತಿ ಎಂದು ಪ್ರಾರಂಭಿಸುತ್ತಾರೆ.

ಬ್ರಹ್ಮಸೂತ್ರದಲ್ಲಿನ ಪ್ರತಿಸೂತ್ರ, ಪ್ರತಿಪದ, ಅದರಲ್ಲಿನ ಪ್ರತ್ಯಕ್ಷರಗಳಿಗೆ ನಾರಾಯಣ, ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಮತ್ತು ಅನಿರುದ್ಧರೆಂಬ ಭಗವಂತನ ರೂಪವಿಶೇಷಗಳ ಪ್ರತಿಪಾದಕತ್ವವು ಇರುತ್ತದೆ. ಅಲೌಕಿಕಗಳಾದ ಅರ್ಥಗಳ ಪ್ರತಿಪಾದನೆಗೆ ಅವಶ್ಯ ಬೇಕಾದ ಶ್ರುತಿಗಳು ಯುಕ್ತಿಗಳು ಅಧಿಕಾರಿಚೇತನ ಯೋಗ್ಯತೆಗೆ ತಕ್ಕಂತೆ ತೋರುತ್ತವೆ. ಈ ವಿಷಯವು ಬೃಹತ್ತಂತ್ರವೆಂಬ ಪ್ರಮಾಣ ಗ್ರಂಥದಲ್ಲಿ ಉಕ್ತವಾಗಿದೆ.

ಅಲೌಕಿಕಗಳಾದ ಅಷ್ಟು ಅರ್ಥಗಳಿರುವುದಾಗ್ಯೂ ಮಾನವರ ಅಲ್ಪವನ್ನು ಗ್ರಹಿಸುವ ಬುದ್ಧಿಯ ಮಟ್ಟಕ್ಕೆ ತಕ್ಕಂತೆ ಭಾಷ್ಯಕಾರರು ಅಲೌಕಿಕಗಳಾದ ಅರ್ಥಗಳನ್ನು ಸ್ಪಷ್ಟವಾಗಿ ಹೇಳಿಲ್ಲ. ಇದರಿಂದ ಭಾಷ್ಯವಾಗಲೀ ಅನುವ್ಯಾಖ್ಯಾನವಾಗಲೀ ಸೂತ್ರದ ಲೇಶಮಾತ್ರವಾದ ಅರ್ಥವನ್ನು ಹೇಳುತ್ತಿದೆಯೆಂದು ಜಿಜ್ಞಾಸುಗಳಿಗೆ ಇದರ ವಿಷಯದಲ್ಲಿ ಅನಾದರವು ಉಂಟಾಗದಿರಲೆಂಬ ಅಭಿಪ್ರಾಯದಿಂದ ಮುಂದಿನ ಅನುವ್ಯಾಖ್ಯಾನವು ಹೊರಟಿದೆ.

''ಗ್ರಂಥೋಽಯಮಪಿ ಬಹ್ವರ್ಥೋ ಭಾಷ್ಯಂಚಾತ್ಯರ್ಥ ವಿಸ್ತರಂ ।
ಬಹುಜ್ಞಾ ಏವ ಜಾನಂತಿ ವಿಶೇಷೇಣಾರ್ಥಮೇತಯೋಃ ॥

**ಅಭಿಪ್ರಾಯ :-** ತಸ್ಮಾನ್ನ ಹಾಗುಣೋ, ವಿಷ್ಣುರ್ನಾಮ್ನಾಮಪುನರುಕ್ತಿತಃ ॥

॥ ಇತಿ ಅನುವ್ಯಾಖ್ಯಾನಮ್ ॥

ಹೇಗೆ ಬ್ರಹ್ಮಸೂತ್ರಗಳು ಅನೇಕಾರ್ಥಗಳಿಂದ ಕೂಡಿವೆಯೋ ಅದರಂತೆ ಶ್ರೀಮದಾನಂದತೀರ್ಥ ಭಗವತ್ಪಾದರ ಅನುವ್ಯಾಖ್ಯಾನವೂ, ಸೂತ್ರಭಾಷ್ಯವೂ ಬಹ್ವರ್ಥಗರ್ಭಿತಗಳಾಗಿವೆ. ಬಹುಜ್ಞರೇ ಆ ಅರ್ಥವಿಶೇಷಗಳನ್ನು ತಿಳಿಯುತ್ತಾರೆ. ವ್ಯಾಖ್ಯಾನ ಸಾಮಗ್ರೀ ಪರಿಜ್ಞಾನವಿಲ್ಲದಿರುವ ಅಲ್ಪಜ್ಞರಿಗೆ ಆ ರಹಸ್ಯಾರ್ಥಗಳು ತೋರದೇ ಇದ್ದಾಗ್ಯೂ ಮಹಾಜ್ಞಾನಿಗಳಾದ ಶೇಷದೇವರೇ ಮೊದಲಾದವರು ಆ ವಿಶೇಷಾರ್ಥಗಳನ್ನು ಬಲ್ಲವರಾಗಿರುವರು.

ಶ್ರೀಪೂರ್ಣಪ್ರಜ್ಞಾಚಾರ್ಯರು ಬ್ರಹ್ಮಸೂತ್ರಗಳಿಗೆ ಮೇಲೆ ತಿಳಿಸಿದ ಮಹತ್ವದಿಂದ ಕೂಡಿದ ಸೂತ್ರಭಾಷ್ಯ ಮತ್ತು ಅನುವ್ಯಾಖ್ಯಾನಗಳನ್ನೂ ರಚಿಸಿರುವುದಲ್ಲದೇ ನ್ಯಾಯವಿವರಣೆಯೆಂಬ ಸೂತ್ರಘಟಕನ್ಯಾಯಗಳ ವಿವರಣಾತ್ಮಕವಾದ ಗ್ರಂಥವನ್ನೂ, ಸಮಗ್ರ ಬ್ರಹ್ಮಸೂತ್ರಗಳ ಅರ್ಥಾನುಸಂಧಾನಕ್ಕಾಗಿ ಅಣುಭಾಷ್ಯವನ್ನೂ ರಚಿಸಿದ್ದಾರೆ.

**ಪ್ರಾಚೀನ ಟೀಕಾಗ್ರಂಥಗಳು :-** ಶ್ರೀಮದಾಚಾರ್ಯರ ಸಾಕ್ಷಾತ್ ಶಿಷ್ಯರಾದ ಶೇಷಾಂಶಸಂಭೂತರಾದ ಶ್ರೀಪದ್ಮನಾಭ ತೀರ್ಥರು ಶ್ರೀಮಧ್ವರ ಭಾಷ್ಯಭಾವವನ್ನು ತೆರೆಯ ಮರೆಯಲ್ಲಿ ಸಹಸ್ರವದನವುಳ್ಳ ಶೇಷರೂಪದಿಂದ ಸಹಸ್ರವದನಗಳಿಂದ ವ್ಯಾಖ್ಯಾನ ಮಾಡುತ್ತಿದ್ದರಂತೆ.

ಶ್ರೀಪದ್ಮನಾಭ ತೀರ್ಥರ ಅಲೌಕಿಕವಾದ ಚರ್ಯೆಯು ಅತ್ಯಾಶ್ಚರ್ಯಕರವಾಗಿತ್ತು. ಈ ಐತಿಹ್ಯಸಂಗತಿಯನ್ನು ಶ್ರೀರಾಘವೇಂದ್ರವಿಜಯವೆಂಬ 'ಮಹಾಕಾವ್ಯ' ನಿರ್ಮಾತೃಗಳಾದ ವಿದ್ವತ್ಕವಿಕುಲಾವತಂಸರಾದ ಶ್ರೀನಾರಾಯಣಾಚಾರ್ಯರು ಆ ಕಾವ್ಯದಲ್ಲಿ ಉಲ್ಲೇಖಿಸಿರುತ್ತಾರೆ.

**ಶ್ಲೋಕ :-** ವ್ಯಾಖ್ಯಾಸು ಯಃ ಫಣಿನಿಸೂತ್ರಭಾಷ್ಯವ್ಯಾಖ್ಯಾದಶಾಂ ವ್ಯಂಜಯತಿ ಸ್ಮ ಸಾಕ್ಷಾತ್ ।
ಧನ್ಯೋ ಯವನ್ಯಾ ಪ್ರತಿಬಾಧನೇನ ಸಹಸ್ರಧಾ ಸೂತ್ರಪದಾಶಯಾನಾಮ್ ॥

(ಶ್ರೀ ರಾಘವೇಂದ್ರವಿಜಯ ಮಹಾಕಾವ್ಯ)

ಶ್ರೀಮಧ್ವರ ಭಾಷ್ಯಪ್ರವಚನ ಕಾಲದಲ್ಲಿ ಅವರ ಸನ್ನಿಧಾನದಲ್ಲೇ ಇದ್ದು, ಅನುಭವಿಸಿದ ಪ್ರತ್ಯಕ್ಷ ಸಾಕ್ಷಿಗಳಾದ ಸುಮಧ್ವ ವಿಜಯಕಾರರೂ ಅದರ ಶ್ರೀ ಭಾವಪ್ರಕಾಶಿಕಾ ಎಂಬ ವ್ಯಾಖ್ಯಾಕಾರರೂ ಆದ ನಾರಾಯಣ ಪಂಡಿತಾಚಾರ್ಯರೂ ಸಹ ಕೃಷ್ಣಪಕ್ಷದ ರಾತ್ರಿ ಸಮಯದಲ್ಲಿ ಒಂದಾವರ್ತಿ ನಡೆದ ಘಟನೆಯನ್ನು ಭಾವಪ್ರಕಾಶಿಕೆಯಲ್ಲಿ ಉದಾಹರಿಸಿರುವರು.

''ವಿಚಂದ್ರಯಾಂ ಕ್ಷಪಾಯಾಂ ತು ಚಂದ್ರಿಕಾಭ್ರಮಿಣೋ ಜನಾಃ ।
ಶೇಷಸ್ಯ ಶೇದಸ್ಯಥ ತಂ ಯಾಂತಂ ಮಧ್ವೋ ವ್ಯದರ್ಶಯತ್ ॥ ಭಾವಪ್ರಕಾಶಿಕಾ ॥

**ಅಭಿಪ್ರಾಯ :-** ದೇವತೆಗಳೂ ಸಹ ಶ್ರೀಮದಾನಂದತೀರ್ಥ ಭಗವತ್ಪಾದರ ಭಾಷ್ಯಪ್ರವಚನವನ್ನು ಕೇಳುತ್ತಿದ್ದ ರಹಸ್ಯವಿಷಯಗಳನ್ನು ಮೇಲಿನ ಭಾವಪ್ರಕಾಶಿಕೆಯು ಸೂಚಿಸುತ್ತಲಿದೆ. ಒಮ್ಮೆ ಶ್ರೀಮನ್ಮಧ್ವ ಗುರುಗಳು ಕೃಷ್ಣಪಕ್ಷದ ರಾತ್ರಿ

ವೇಳೆಯಲ್ಲಿ ಸೂತ್ರಭಾಷ್ಯವನ್ನು ಪಾಠ ಹೇಳುತ್ತಲಿದ್ದರು. ಆಗ ಆಕಾಶ ಮಾರ್ಗದಲ್ಲಿ ವಿಚಿತ್ರವಾದ ಕಾಂತಿಪುಂಜವು ಶಿಷ್ಯರಿಗೆಲ್ಲಾ ಗೋಚರವಾಯಿತು.

ಅದನ್ನು ಕಂಡ ಶಿಷ್ಯವರ್ಗವು ಗುರುಗಳನ್ನು ಕುರಿತು ಪೂಜ್ಯ ಗುರುಗಳೇ ! ಈಗ ಕೃಷ್ಣಪಕ್ಷದ ರಾತ್ರಿ ಸಮಯವಾಗಿದೆ. ಚಂದ್ರೋದಯವಿಲ್ಲ. ಚಂದ್ರಿಕೆಯಂತೂ ಇಲ್ಲವೇ ಇಲ್ಲ. ಆದರೆ ಆಕಾಶಮಾರ್ಗದಲ್ಲಿ ಏನೋ ಆಶ್ಚರ್ಯಕರವಾದ ಚಂದ್ರನ ಚಂದ್ರಿಕೆಗೂ ಮೀರಿದ ತೇಜಃಪುಂಜರಂಜಿತವಾದುದೇನೋ ತೋರುತ್ತಲಿದೆ. ಇದೇನು ? ಎಂದು ಪ್ರಶ್ನೆ ಮಾಡಿದರು. ಅದಕ್ಕೆ ಶ್ರೀಮದಾಚಾರ್ಯರು ಅದುವರೆವಿಗೂ ತಮ್ಮ ಪಾಠವನ್ನು ಕೇಳಲಿಕ್ಕಾಗಿಯೇ ಶೇಷಲೋಕದಿಂದ ಬಂದು ಸನಕಾದಿಗಳ ಸಮೇತವಾಗಿ ಪಾಠವನ್ನು ಕೇಳಿ ಶೇಷಲೋಕಕ್ಕೆ ಹಿಂತಿರುಗುತ್ತಿದ್ದ ಶೇಷದೇವರ ದೇಹದ ವಿಚಿತ್ರವಾದ ಕಾಂತಿಯನ್ನು, ತೇಜಃಪುಂಜವನ್ನು ಶಿಷ್ಯರಿಗೆ ತೋರಿಸಿದರು. ಇದೊಂದು ರಹಸ್ಯ ಸಂಗತಿ. ಪ್ರಾಚೀನ ಟೀಕಾಕಾರರೆಂದು ಸುಪ್ರಸಿದ್ಧರಾದ ಶ್ರೀ ತ್ರಿವಿಕ್ರಮ ಪಂಡಿತಾಚಾರ್ಯರು ಸೂತ್ರಭಾಷ್ಯಕ್ಕೆ ತತ್ವಪ್ರದೀಪವೆಂಬ ವ್ಯಾಖ್ಯಾನವನ್ನೂ, ಶ್ರೀ ಪದ್ಮನಾಭ ತೀರ್ಥರು ಸತ್ತರ್ಕ ದೀಪಾವಳಿ ಎಂಬ ವ್ಯಾಖ್ಯಾನವನ್ನೂ ಬರೆದಿರುವರು. ಸಹಸ್ರಾರು ಅರ್ಥಗಳಿಂದ ಕೂಡಿದ ಸೂತ್ರಭಾಷ್ಯಕ್ಕೆ ನಾನು ಎಲ್ಲೋ ಒಂದರ್ಥವನ್ನು ಲೇಶಮಾತ್ರ ಹೇಳಲು ಉತ್ಸುಕನಾಗಿದ್ದೇನೆ. ಸದ್ಗುಣಶಾಲಿಗಳು ಪ್ರಸನ್ನರಾಗಲಿ ಎಂದು ಪಂಡಿತಾಚಾರ್ಯರು ನುಡಿದಿದ್ದಾರೆ.

**ತತ್ವಪ್ರದೀಪ :** **"ಅಂದಸ್ಯೇಕೈಕಮಪ್ಯರ್ಥಂ ಲೇಶತೋ ವಕ್ತುಮುತ್ಸಹೇ ।**
**ಸಹಸ್ರಾರ್ಥಸ್ಯ ಭಾಷ್ಯಸ್ಯ ಪ್ರಸನ್ನಾಃ ಸಂತು ಸದ್ಗುಣಾಃ ॥**

ಶ್ರೀ ಪದ್ಮನಾಭ ತೀರ್ಥರು ಸೂತ್ರಭಾಷ್ಯಕ್ಕೆ ಸತ್ತರ್ಕದೀಪಾವಳಿ ಎಂಬ ವ್ಯಾಖ್ಯಾನವನ್ನು ಮಾಡಿರುವುದೇ ಅಲ್ಲದೆ ಅನುವ್ಯಾಖ್ಯಾನಕ್ಕೆ ಸನ್ನ್ಯಾಯರತ್ನಾವಳಿ ಎಂಬ ವ್ಯಾಖ್ಯಾನವನ್ನೂ ರಚಿಸಿರುವರು. ಈ ಎಲ್ಲ ವ್ಯಾಖ್ಯಾನಗಳೂ ಪ್ರಾಚೀನ ಟೀಕಾ ಗ್ರಂಥಗಳೆಂದು ಪ್ರಸಿದ್ಧವಾಗಿದೆ.

ಶ್ರೀಮಜ್ಜಯತೀರ್ಥರು ಬ್ರಹ್ಮಸೂತ್ರಭಾಷ್ಯಕ್ಕೆ ತತ್ವಪ್ರಕಾಶಿಕಾ ಎಂಬ ವ್ಯಾಖ್ಯಾನವನ್ನೂ ಅನುವ್ಯಾಖ್ಯಾನಕ್ಕೆ ಶ್ರೀಮನ್ನ್ಯಾಯಸುಧಾ ಎಂಬ ವ್ಯಾಖ್ಯಾನವನ್ನೂ ರಚಿಸಿದ್ದಾರೆ. ಶ್ರೀಮದಾಚಾರ್ಯಕೃತವಾದ ನ್ಯಾಯವಿವರಣಕ್ಕೂ ಸಹ ಸ್ವಲ್ಪ ಭಾಗಕ್ಕೆ ಮಾತ್ರ ಟೀಕಾ ವ್ಯಾಖ್ಯಾನವು ಉಪಲಬ್ಧವಿದೆ.

ಶ್ರೀ ವ್ಯಾಸರಾಜರಾದರೋ ಹಿಂದಿನ ಎಲ್ಲಾ ಮೂಲಟೀಕಾಗ್ರಂಥಗಳನ್ನೂ ದೃಷ್ಟಿಯಲ್ಲಿಟ್ಟುಕೊಂಡು

**"ಸೂತ್ರೇ ಭಾಷ್ಯೇಽನುಭಾಷ್ಯೇ ಚ ನ್ಯಾಯವಿವೃತೌ ತಥಾ ।**
**ಟೀಕಾಸು ಚ ಯದಸ್ಪಷ್ಟಂ ತಚ್ಚ ಸ್ಪಷ್ಟೀಕರಿಷ್ಯತೇ" ॥**

ಎಂದು ಹೇಳಿದ್ದಾರೆ.

**ಅಭಿಪ್ರಾಯ** :– ಬ್ರಹ್ಮಸೂತ್ರಗಳು, ಸೂತ್ರಭಾಷ್ಯ, ಅನುವ್ಯಾಖ್ಯಾನ, ತತ್ವಪ್ರದೀಪ, ಸನ್ನ್ಯಾಯ ರತ್ನಾವಳಿ, ಶ್ರೀಮಜ್ಜಯಾರ್ಯರ ಟೀಕೆಗಳು ಇವೆಲ್ಲ ಗ್ರಂಥರಾಶಿಯಲ್ಲಿನ ಅಸ್ಪಷ್ಟವಾದ ಭಾಗಕ್ಕೆ ಅರ್ಥಸ್ಪಷ್ಟೀಕರಣವನ್ನು ಮಾಡುತ್ತೇನೆಂದು ಹೇಳಿದ್ದಾರೆ. ಶ್ರೀಮತ್ತಾತ್ಪರ್ಯ ಚಂದ್ರಿಕೆಯಲ್ಲಿ ಅದನ್ನು ಸಾಧಿಸುತ್ತಾರೆ.

ಇಷ್ಟುಮಾತ್ರವಲ್ಲದೇ ಪ್ರಾಚೀನ ನವೀನ ಟೀಕಾಗ್ರಂಥಗಳಲ್ಲಿ ಆಪಾತತಃ ಅಲ್ಲಲ್ಲಿ ತೋರುವ ವಿರೋಧಗಳನ್ನೆಲ್ಲಾ ಪರಿಹರಿಸಿರುತ್ತಾರೆ. ಸಿದ್ಧಾಂತಸಿದ್ಧವಾದ ಅರ್ಥವನ್ನು ನಿರೂಪಿಸಿರುವುದರ ಜೊತೆಗೆ ಇತರ ಭಾಷ್ಯಕಾರರ ಪ್ರಕಾರವಾಗಿ, ಮುಖ್ಯವಾಗಿ ಐಕ್ಯವಾದಿಗಳ ರೀತ್ಯಾ ಬ್ರಹ್ಮಸೂತ್ರವೃಂದದಲ್ಲಿ ಯಾವ ಒಂದು ಸೂತ್ರವೂ ಸಹ ಹೊಂದುವುದಿಲ್ಲ ಎಂಬುದನ್ನು ಪ್ರತಿಜ್ಞೆ ಮಾಡಿ ತೋರಿಸಿರುವುದೊಂದು ಶ್ರೀ ವ್ಯಾಸರಾಜರ ಅಸಾಧಾರಣ ಕಾರ್ಯವಾಗಿದೆ. ತಾತ್ಪರ್ಯಚಂದ್ರಿಕೆಯು ಅತಿ ಪ್ರೌಢವಾಕ್ಯದಿಂದ ಪ್ರಜ್ವಲವಾದ ಮೇರುಕೃತಿಯಾಗಿದೆ. ಐಕ್ಯವಾದವನ್ನು ಆಮೂಲಾಗ್ರವಾಗಿ ಖಂಡತುಂಡಾಗಿ ಖಂಡಿಸಿರುವುದರಿಂದಲೇ ಐಕ್ಯವಾದಿಗಳೆಂಬ ಗಜಗಳಿಗೆ ಸಿಂಹಸ್ವಪ್ನದಂತಿರುವ ಶ್ರೀ ವ್ಯಾಸರಾಜರ ಕೃತಿಯು ಮೇರುಕೃತಿಯಾಗಿದೆ. ಕುಮತಾರಣ್ಯನಾಶಕವಾದ ದಾವಾಗ್ನಿಯೆಂದು ಶ್ರೀ ವಿಜಯೀಂದ್ರರು ಶ್ರೀವ್ಯಾಸರಾಜರನ್ನು ಮುಕ್ತಕಂಠದಿಂದ ಪ್ರಶಂಸಿಸಿರುತ್ತಾರೆ. ಆ ಪ್ರಶಂಸಾಪರವಾದ ನುಡಿಯು ಈ ರೀತಿ ಇದೆ.

**ಯೋ ವ್ಯಾಸಮುನಿದಾವಾಗ್ನಿಃ ಸಚ್ಛಾಸ್ತ್ರಮರುತಾ ಸಹ ।**
**ದದಾಹ ಕುಮತಾರಣ್ಯಂ ಕೃಪಾಳಾಯ ತಮಾಶ್ರಯೇ ॥ (ಇತಿಭೇದವಿದ್ಯಾವಿಲಾಸೇ)**

**ವ್ಯಾಸಸೂತ್ರ ಪದಾರ್ಥೋಽಪನ್ಯಾಸಮಾರ್ಗ್ಯ ಮಾನ್ಯಕಿ ।**
**ವ್ಯಾಸರಾಜಸ್ಯ ಭಜತೇ ದಾಸತಾಂ ಕೋ ನ ಕೋವಿದಃ । (ಇತಿ ಶ್ರೀ ರಾಘವೇಂದ್ರ ವಿಜಯೇ)**

**ತಾತ್ಪರ್ಯ** :– ಮೇಲೆ ಉದಾಹರಿಸಿರುವ ಶ್ರೀರಾಘವೇಂದ್ರ ವಿಜಯಕಾರರು ಶ್ರೀ ವ್ಯಾಸರಾಜರ ಬಗ್ಗೆ ಆಡಿರುವ ನುಡಿಯು ಅಕ್ಷರಶಃ ನಿಜವಾಗಿದೆ. ಶ್ರೀ ವ್ಯಾಸರಾಜರು ಕುವಾದಿಗಳ ಮತದ ಪ್ರಕ್ರಿಯೆಗಳನ್ನೆಲ್ಲಾ ಹಾಸುಹೊಕ್ಕಾಗಿ ವಿಂಗಡಿಸಿ ಶ್ರೀಮಧ್ವರು ಭಾಷ್ಯಾದಿಗಳಲ್ಲಿ ಉದಾಹರಿಸಿರುವ ದೂಷಣಗಳನ್ನೆಲ್ಲಾ ಕ್ರೋಢೀಕರಿಸಿ ಐಕ್ಯವಾದಿಗಳೇ ಮೊದಲಾದವರ ಮತಗಳನ್ನು ಅಚ್ಛೇದ್ಯಾಭೇದ್ಯಗಳಾದ ದೂಷಣಗಳಿಂದ ನಿರಾಕರಿಸಿ ಶ್ರೀಮದ್ಧಸಿದ್ಧಾಂತದ ವಿಜಯಪತಾಕೆಯನ್ನು ಆಚಂದ್ರಾರ್ಕವಾಗಿ ವಿಜೃಂಭಿಸುವಂತೆ ರಚಿಸಿರುವ ಮೇರುಕೃತಿಗಳೇ ವ್ಯಾಸತ್ರಯಗಳು.

## ತಂತ್ರದೀಪಿಕೆಯ ವೈಶಿಷ್ಟ್ಯ.

ಶ್ರೀರಾಘವೇಂದ್ರ ಗುರುಸಾರ್ವಭೌಮರು ನಲವತ್ತೆಂಟು ಗ್ರಂಥರತ್ನಗಳನ್ನು ರಚಿಸಿರುವುದಾಗಿ ತಿಳಿದುಬಂದಿದೆ. ಅವುಗಳು ಯಾವುವೆಂದರೆ –

ವೇದತ್ರಯವಿವೃತಿ, ಮಂತ್ರಾರ್ಥಮಂಜರೀ, ಪುರುಷಸೂಕ್ತಾದಿ ಪಂಚಸೂಕ್ತಗಳ ವ್ಯಾಖ್ಯಾನಗಳು, ತತ್ವಪ್ರಕಾಶಿಕಾ ಭಾವದೀಪ, ಶ್ರೀಮನ್ನ್ಯಾಯಸುಧಾವ್ಯಾಖ್ಯಾನ ಪರಿಮಳ, ತಾತ್ಪರ್ಯಚಂದ್ರಿಕಾ ವ್ಯಾಖ್ಯಾನಪ್ರಕಾಶ, ನ್ಯಾಯಮುಕ್ತಾವಳೀ, ತತ್ವಮಂಜರೀ, ತಂತ್ರದೀಪಿಕಾ, ತರ್ಕತಾಂಡವ ವ್ಯಾಖ್ಯಾನ ನ್ಯಾಯದೀಪ, ಗೀತಾರ್ಥಸಂಗ್ರಹ (ಗೀತಾವಿವೃತಿ) ಪ್ರಮೇಯ ದೀಪಿಕಾ ವ್ಯಾಖ್ಯಾನ, ಗೀತಾತಾತ್ಪರ್ಯಟೀಕಾ ವಿವರಣ, ವಾದಾವಳೀ ವ್ಯಾಖ್ಯಾನ, ಪ್ರಮಾಣ ಪದ್ಧತಿ ವ್ಯಾಖ್ಯಾನ, ಶ್ರೀರಾಮ ಚಾರಿತ್ರ್ಯಮಂಜರೀ, ಶ್ರೀಕೃಷ್ಣ ಚಾರಿತ್ರ್ಯಮಂಜರೀ, ಮಹಾಭಾರತ ತಾತ್ಪರ್ಯನಿರ್ಣಯ ಭಾವಸಂಗ್ರಹ, ಅಣುಮಧ್ವವಿಜಯ ವ್ಯಾಖ್ಯಾಗೂಢಭಾವ ಪ್ರಕಾಶ, (ಇವನ್ನು ಪೂರ್ವಾಶ್ರಮದಲ್ಲೇ ರಚಿಸಿದ್ದಾರೆ.) ಪ್ರಾತಃ ಸಂಕಲ್ಪ ಗದ್ಯ, ಪ್ರಮೇಯ ಸಂಗ್ರಹ, ಪೂರ್ವಮೀಮಾಂಸಾ ಭಾಟ್ಟಸಂಗ್ರಹ, ದಶೋಪನಿಷತ್ ಖಂಡಾರ್ಥಗಳು, ದಶಪ್ರಕರಣ ಟೀಕಾಟಿಪ್ಪಣಿಗಳು ಎಂದು ನಲವತ್ತೆಂಟು ಗ್ರಂಥಗಳೆಂದು ವಿಮರ್ಶಕರ ಪರಿಶೀಲನೆಯಿಂದ ಗೊತ್ತಾಗಿದೆ.

ಪೂರ್ವಮೀಮಾಂಸಾಶಾಸ್ತ್ರಪಾರಂಗತರೆಲ್ಲಾ ತಲೆದೂಗಿ ಶ್ಲಾಘಿಸಿರುವ ಗ್ರಂಥರತ್ನವೇ ಭಾಟ್ಟಸಂಗ್ರಹ. ಭಾಟ್ಟಸಂಗ್ರಹವು ಪೂರ್ವಮೀಮಾಂಸಾಸೂತ್ರಗಳಿಗೆ ಅತ್ಯುಪಯುಕ್ತವಾದ ಅಸಾಧಾರಣವಾದ ವ್ಯಾಖ್ಯಾನವಾಗಿದೆ. ಪೂರ್ವಮೀಮಾಂಸಾ ಶಾಸ್ತ್ರಾಭ್ಯಾಸ ಮಾಡುವವರೆಲ್ಲಾ ಈ ಗ್ರಂಥವನ್ನು ತಮ್ಮ ಪಾಲಿಗೆ ದೊರೆತಿರುವ ಅತ್ಯಮೋಘವಾದ ರತ್ನವೆಂದೇ

ಭಾವಿಸಿದ್ದಾರೆ. ನ್ಯಾಯಾಧ್ವದೀಪಿಕೆಯನ್ನು ರಚಿಸಿರುವ ಶ್ರೀ ರಾಘವೇಂದ್ರ ಗುರುಸಾರ್ವಭೌಮರ ಪರಮಗುರುಗಳಾದ ಶ್ರೀವಿಜಯೀಂದ್ರರು ಹೊರತಾಗಿ ಇಡೀ ಮಾಧ್ವವಿದ್ವದ್ವರೇಣ್ಯವೃಂದದಲ್ಲಿ ಅತ್ಯುಪಯುಕ್ತವಾದ ಪೂರ್ವಮೀಮಾಂಸಾಶಾಸ್ತ್ರ ಗ್ರಂಥವನ್ನು ರಚಿಸಿರುವ ಅಸಾಧಾರಣವಾದ ಕೀರ್ತಿಪ್ರತಿಷ್ಠೆಯು ಶ್ರೀ ರಾಘವೇಂದ್ರಗುರುಸಾರ್ವಭೌಮರಿಗೆ ಸಲ್ಲತಕ್ಕದ್ದಾಗಿದೆ. ಇದು ನಿರ್ವಿವಾದವಿಷಯವಾಗಿದೆ. ಮೇಲೆ ತಿಳಿಸಿದ ಶ್ರೀ ಗುರುರಾಜರ ಕೃತಿಗಳಲ್ಲಿ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಸಂಬಂಧಪಟ್ಟಂತೆ ಶ್ರೀ ಗುರುರಾಜರು ತತ್ತ್ವಪ್ರಕಾಶಿಕಾ ಭಾವದೀಪ, ನ್ಯಾಯಮುಕ್ತಾವಳೀ, ತಂತ್ರದೀಪಿಕಾ, ನ್ಯಾಯಸುಧಾಪರಿಮಳ, ತತ್ತ್ವಮಂಜರೀ, ಚಂದ್ರಿಕಾಪ್ರಕಾಶ ಎಂಬ ಆರು ಗ್ರಂಥಗಳನ್ನು ರಚಿಸಿರುತ್ತಾರೆ. ಇವುಗಳಲ್ಲಿ ತತ್ತ್ವಪ್ರಕಾಶಿಕಾಭಾವ ದೀಪವು ಶ್ರೀಮಜ್ಜಯತೀರ್ಥರ ಸೂತ್ರಭಾಷ್ಯಕ್ಕೆ ವ್ಯಾಖ್ಯಾನವಾಗಿರತಕ್ಕ ತತ್ತ್ವಪ್ರಕಾಶಿಕೆಗೆ ವ್ಯಾಖ್ಯಾನವಾಗಿದೆ. ಪರಿಮಳವಂತೂ ಶ್ರೀಮನ್ನ್ಯಾಯಸುಧೆಗೆ ಅಚ್ಚುಮೆಚ್ಚಿನ ವ್ಯಾಖ್ಯಾನವೆಂಬುದು ಸುಪ್ರಸಿದ್ಧವಾದ ವಿಷಯ. ತತ್ತ್ವಮಂಜರಿಯು ಅಣುಭಾಷ್ಯದ ಅರ್ಥವಿವರಣ ರೂಪವಾದ ಅದ್ಭುತ ಕೃತಿ.

**"ನ್ಯಾಯಮುಕ್ತಾವಲೀಂ ಕುರ್ಮೋ ವಿದುಷಾಂ ಕಂಠಭೂಷಣಮ್" ।**

ಎಂದು ಗ್ರಂಥಕಾರರಾದ ಶ್ರೀಗುರುರಾಜರೇ ಆ ನ್ಯಾಯಮುಕ್ತಾವಳಿ ಗ್ರಂಥದ ಆದಿಭಾಗದಲ್ಲಿ ಹೇಳುವಂತೆ ಬ್ರಹ್ಮಸೂತ್ರಗಳ ಪ್ರತಿಯೊಂದು ಅಧಿಕರಣದಲ್ಲಿಯೂ ಸಂಗತಿ, ವಿಷಯ, ಸಂಶಯ, ಪೂರ್ವಪಕ್ಷ, ಸಿದ್ಧಾಂತ, ಪ್ರಯೋಜನಗಳೆಂಬ ಅಧಿಕರಣದ ಪಂಚಾವಯವಗಳನ್ನು ಸಂಗ್ರಹವಾಗಿ ಉಪನ್ಯಾಸಶೈಲಿಯಲ್ಲಿ ಜಿಜ್ಞಾಸುಗಳ ಸಮಗ್ರವಾಕ್ಯಾರ್ಥದ ಅನುಸಂಧಾನಕ್ಕೆ ಪರಮೋಪಕಾರವಾಗಿರುವಂತೆ ತಿಳಿಸಿ ರಚಿಸಿರುವ ಗ್ರಂಥರತ್ನವೇ ನ್ಯಾಯಮುಕ್ತಾವಳಿ. ಈ ಶೈಲಿಯಲ್ಲಿ ಸೂತ್ರ ಪ್ರಸ್ಥಾನಕ್ಕೆ ಸಂಬಂಧಿಸಿದಂತೆ ಇಂತಹ ಗ್ರಂಥವನ್ನು ಇದುವರೆವಿಗೆ ಯಾರೂ ರಚಿಸಿಲ್ಲವೆಂದರೆ ಅದು ಅತಿಶಯೋಕ್ತಿಯಾಗಲಾರದು.

ತಂತ್ರದೀಪಿಕೆಯೆಂಬುದು ಬ್ರಹ್ಮಸೂತ್ರಗಳ ಪ್ರತಿಪದಕ್ಕೂ ಅರ್ಥದ ವಿವರಣೆಗಳನ್ನೊಳಗೊಂಡ ಅತಿಶ್ರೇಷ್ಠವಾದ ಕೃತಿರತ್ನವಾಗಿದೆ. ಈ ಗ್ರಂಥದ ವಿಚಾರವಾಗಿ ವಿಸ್ತಾರವಾದ ವಿವರಣೆಯನ್ನು ಮುಂದೆ ಕೊಡಲಾಗಿದೆ. ಇದುವರೆವಿಗೂ ಬ್ರಹ್ಮಸೂತ್ರವನ್ನು ಮೊದಲು ಮಾಡಿ ಅದರ ವ್ಯಾಖ್ಯಾನರೂಪಗಳಾಗಿರುವ ಎಲ್ಲ ಗ್ರಂಥಗಳ ವಿಚಾರವಾಗಿ ಹೇಳಿರುವುದೆಲ್ಲವೂ ಮುಂದಿನ ವಿಸ್ತಾರವಾದ ವಿವರಣೆಗೆ ವಿಷಯವಾಗಿರತಕ್ಕ ತಂತ್ರದೀಪಿಕೆಯ ಮಹತ್ವಕ್ಕೆ ಪರಿಪೋಷಕವೆಂಬುದನ್ನು ಒತ್ತಿ ಹೇಳಬೇಕಾಗಿದೆ.

ಮುಂದೆ ಕನ್ನಡಕ್ಕೆ ಅನುವಾದ ಮಾಡಲಿರುವ ಶ್ರೀ ಗುರುರಾಜರ ತಂತ್ರದೀಪಿಕಾ ಗ್ರಂಥವು ಸಾಕ್ಷಾತ್ತಾಗಿ ಬ್ರಹ್ಮಸೂತ್ರಗಳಿಗೇನೇ ವ್ಯಾಖ್ಯಾನವಾಗಿದೆ. ಅದರಲ್ಲಿನ ಅರ್ಥವಿವರಣೆಯು ಶ್ರೀಮದಾನಂದತೀರ್ಥಭಗವತ್ಪಾದರ ಬ್ರಹ್ಮಸೂತ್ರ ಭಾಷ್ಯ ಮತ್ತು ಅನುವ್ಯಾಖ್ಯಾನಕ್ಕೂ, ಪ್ರಾಚೀನ ಮತ್ತು ನವೀನ ಟೀಕೆಗಳಿಗೂ ಶ್ರೀಮನ್ನ್ಯಾಯಸುಧಾ,ತತ್ತ್ವಪ್ರಕಾಶಿಕಾ, ತಾತ್ಪರ್ಯ ಚಂದ್ರಿಕಾ ಗ್ರಂಥೋಕ್ತ ವಿಷಯಗಳಿಗೂ ಸಂಬಂಧಪಟ್ಟಿರುವ ಪ್ರಯುಕ್ತ ಮುನ್ನುಡಿಯಲ್ಲಿಯೇ ಆ ಎಲ್ಲಾ ಹಿಂದಿನ ಗ್ರಂಥಗಳ ಸ್ಥೂಲವಾದ ಪರಿಚಯವನ್ನು ಕೊಡಲಾಗಿದೆ. ತಂತ್ರದೀಪಿಕೆಗೇನೇ ಸಾಕ್ಷಾತ್ತಾಗಿ ಸಂಬಂಧಪಟ್ಟ ವಿಚಾರವನ್ನು ಮುಂದೆ ಅವರ ಪರಿಚಯವೆಂಬ ಶಿರೋನಾಮೆಯಲ್ಲಿ ವಿವರಿಸಲಾಗುತ್ತದೆ. ಮತ್ತು ಶ್ರೀ ಗುರುರಾಜರ ಅಸಾಧಾರಣವಾದ ಅದ್ಭುತವಾದ ಈ ತಂತ್ರದೀಪಿಕಾ ಕೃತಿಯ ಬಗ್ಗೆ ಜ್ಞಾನಿವರೇಣ್ಯರಿಂದ ಉಕ್ತವಾಗಿರುವ ಪ್ರಶಂಸೆಗಳನ್ನು ಸಂಗ್ರಹಿಸಿ ತಿಳಿಸಿ ಮುಂದುವರಿಯುತ್ತೇವೆ.

ಇತಿ,

**ಮಾಗಡಿರಂಗನಾಥಾಚಾರ್ಯ**

॥ ಶ್ರೀ ॥
ಶ್ರೀ ಲಕ್ಷ್ಮೀಹಯಗ್ರೀವಾಯ ನಮಃ
॥ ಶ್ರೀ ರಾಘವೇಂದ್ರಗುರುಸಾರ್ವಭೌಮೋ ವಿಜಯತೇ ॥

# ತಂತ್ರದೀಪಿಕಾ ಗ್ರಂಥದ ಹಿನ್ನಲೆ

## ಮತ್ತು

# ಅದರ ಸಾಮಾನ್ಯ ಪರಿಚಯ

ತಂತ್ರದೀಪಿಕೆಯು ಬ್ರಹ್ಮಸೂತ್ರಗಳಿಗೆ ಪದಶಃ ಅರ್ಥವನ್ನು ನಿರೂಪಿಸಿರುವ ಗ್ರಂಥವಾಗಿದೆ. ಇದರಲ್ಲಿ ಶ್ರೀ ಗುರುರಾಜರು ಹಿಂದೆ ವಿಸ್ತಾರವಾಗಿ ತಿಳಿಸಿರುವ ಶ್ರೀಮನ್ಮಧ್ವಾಚಾರ್ಯರ ಬ್ರಹ್ಮಸೂತ್ರಭಾಷ್ಯ, ಅನುವ್ಯಾಖ್ಯಾನ, ನ್ಯಾಯವಿವರಣ ಮತ್ತು ಇವುಗಳಿಗೆ ಪ್ರಾಚೀನ ಟೀಕೆಗಳಾದ ಶ್ರೀ ಪದ್ಮನಾಭತೀರ್ಥರ ಸನ್ನ್ಯಾಯರತ್ನಾವಳಿ, ಸತ್ತರ್ಕ ದೀಪಾವಳಿ, ಶ್ರೀ ತ್ರಿವಿಕ್ರಮ ಪಂಡಿತಾಚಾರ್ಯರ ತತ್ತ್ವಪ್ರದೀಪ, ಸೂತ್ರಭಾಷ್ಯಕ್ಕೆ ವ್ಯಾಖ್ಯಾನವಾಗಿರುವ ಶ್ರೀಮಜ್ಜಯ ತೀರ್ಥರ ತತ್ತ್ವಪ್ರಕಾಶಿಕಾ, ಅನುವ್ಯಾಖ್ಯಾನವ್ಯಾಖ್ಯಾನವಾದ ಶ್ರೀಮನ್ನ್ಯಾಯಸುಧಾ, ಶ್ರೀಮದ್ವ್ಯಾಸರಾಜ ಗುರುಸಾರ್ವಭೌಮರ ಶ್ರೀಮತ್ತಾತ್ಪರ್ಯಚಂದ್ರಿಕಾ ಮೊದಲಾದ ಪ್ರಾಚೀನಾಚಾರ್ಯರ ಗ್ರಂಥಗಳಲ್ಲಿ ಅಂತಿಮವಾಗಿ ತೀರ್ಮಾನಿಸಿರುವ ಸಿದ್ಧಾಂತಾರ್ಥವನ್ನು ಚಿಕ್ಕ ಚಿಕ್ಕ ವಾಕ್ಯಗಳಲ್ಲಿ ಸಂಗ್ರಹಿಸಿರುತ್ತಾರೆ. ಒಂದೊಂದು ಪದವೂ ಅರ್ಥಗರ್ಭಿತವಾಗಿದೆ. ಪ್ರೌಢವಾಕ್ಯಾರ್ಥಗಳಿಂದ ಕೂಡಿದ ತಾತ್ಪರ್ಯಚಂದ್ರಿಕೆಯಲ್ಲಿ ಒಂದೊಂದು ಘಟ್ಟದಲ್ಲಿ ವಿಶೇಷಾಕಾರವಾಗಿ ಚರ್ಚಿಸಿ, ವಿಮರ್ಶಿಸಿ ನಿಷ್ಕರ್ಷಿಸಿರುವ ಅರ್ಥವನ್ನು ಗ್ರಂಥಕಾರರು ಹಿತಮಿತ ನುಡಿಗಳಲ್ಲಿ ತೋರಿಸಿದ್ದಾರೆ.

ಈ ತಂತ್ರದೀಪಿಕೆಯಲ್ಲಿನ ಸೂತ್ರಾರ್ಥದ ವಾಕ್ಯಗಳನ್ನು ಓದುತ್ತಿರುವ ಜಿಜ್ಞಾಸುಗಳಿಗೆ ಶ್ರೀಮನ್ನ್ಯಾಯಸುಧಾ ಗ್ರಂಥದಲ್ಲಿಯೂ ಶ್ರೀ ತಾತ್ಪರ್ಯಚಂದ್ರಿಕಾಗ್ರಂಥದಲ್ಲಿಯೂ ವಿಸ್ತಾರವಾಗಿ ವಿಮರ್ಶಿಸಿರುವ ವಾಕ್ಯಾರ್ಥದ ಪರಿಸ್ಫೂರ್ತಿಯು ಆ ಗ್ರಂಥಗಳನ್ನು ಕೂಲಂಕಷವಾಗಿ ವ್ಯಾಸಂಗ ಮಾಡಿ ಪರಿಶೀಲಿಸಿದವರಿಗೆ ಉಂಟಾಗುತ್ತದೆ. ಬ್ರಹ್ಮಸೂತ್ರಗಳ ಒಂದೊಂದು ಪದಕ್ಕೂ ಚಿಕ್ಕ ಚಿಕ್ಕ ವಾಕ್ಯಗಳಲ್ಲಿ ಅರ್ಥವನ್ನು ವಿವರಿಸಲಾಗಿದೆ.

ಒಂದೊಂದು ಸೂತ್ರದಲ್ಲಿಯೂ ಗ್ರಂಥಕಾರರು ಸಾಮಾನ್ಯವಾಗಿ ಅನುವೃತ್ತಿ, ಆವೃತ್ತಿ, ಅಧ್ಯಾಹಾರ, ತಂತ್ರ, ಶೇಷ, ಆಕರ್ಷ, ಅನುಕರ್ಷಗಳನ್ನೊಳಗೊಂಡಂತೆ ಅರ್ಥಗಳನ್ನು ನಿರೂಪಿಸಿರುತ್ತಾರೆ. ಕೆಲವು ಸೂತ್ರಗಳಿಗೆ ಪ್ರಾಚೀನಾಚಾರ್ಯರು ತೋರಿಸಿರುವ ಬೇರೆ ಬೇರೆ ಅರ್ಥಗಳನ್ನು ವರ್ಣಕಾಂತರವೆಂದು ವಿವರಿಸಿರುತ್ತಾರೆ. ಅಲ್ಲಲ್ಲಿ ಸನ್ನ್ಯಾಯರತ್ನಾವಳ್ಯಾಂತು. ತತ್ತ್ವಪ್ರದೀಪೇತು, ನ್ಯಾಯಸುಧಾಯಾಂತು, ತತ್ತ್ವಪ್ರಕಾಶಿಕಾಯಾಂತು, ತಾತ್ಪರ್ಯ ಚಂದ್ರಿಕಾಯಾಂತು, ನ್ಯಾಯವಿವೃತೇತು, ಇತ್ಯಾದಿಯಾಗಿ ಪ್ರಾಚೀನ ನವೀನ ಟೀಕಾಗ್ರಂಥಗಳ ಹೆಸರನ್ನೇ ಹೇಳಿ ಅಲ್ಲಲ್ಲಿ ಹೇಳಿರುವ ಅರ್ಥವನ್ನು ಸಂಗ್ರಹಿಸಿರುತ್ತಾರೆ. ಶ್ರುತಿ ವಾಕ್ಯಗಳಿಗೆ ಭಿನ್ನ ಭಿನ್ನ ಪ್ರಸ್ಥಾನಗಳಲ್ಲಿ ವಿವರಿಸಿರುವ ಅಧಿಕಾರಿ ಭೇದೇನ ವಿವಕ್ಷಿತಗಳಾದ ಅರ್ಥಭೇದಗಳನ್ನು ಅನ್ಯೇ, ಅಪರೇ, ಕೇಚಿತ್ತು ಎಂದು ಹೇಳಿ ಒಂದೇಕಡೆ ಕ್ರೋಢೀಕರಿಸಿರುತ್ತಾರೆ. ಸಾಮಾನ್ಯವಾಗಿ ಬ್ರಹ್ಮಸೂತ್ರಗಳಲ್ಲಿನ

ಪದವಿನ್ಯಾಸಕ್ರಮವನ್ನು ವಿಮರ್ಶಿಸಿ, ಓಂ ಬ್ರಹ್ಮಾಥಜಿಜ್ಞಾಸಾತಃ ಇತಿ ವಾಕ್ಯೇ ಅಥಾತ ಇತ್ಯಾದ್ಯುಕ್ತಿಃ ಅಥಾತಃ ಶಬ್ದಯೋಃ ಸ್ವರೂಪತೋ ಅರ್ಥತಶ್ಚಾಧಿಕ್ಯಾದಿತಿ ಎಂದು, ವೇದಯೋನಿತ್ವಾದಿತಿವಾಕ್ಯೇ ಶಾಸ್ತ್ರೇತ್ಯುಕ್ತಿಃ ಋಗ್ಯಜುಸ್ಸಾಮಾಥರ್ವಾಶ್ಚೇತಿ ಸ್ಮೃತ್ಯುಕ್ತಶಾಸ್ತ್ರಗ್ರಹಣಾಯ ಎಂದೂ ಇತ್ಯಾದಿ ಕ್ರಮದಲ್ಲಿ ಬ್ರಹ್ಮಸೂತ್ರಘಟಕಗಳಾದ ಪದಗಳಿಗೆ ಪ್ರಯೋಜನವನ್ನು ತೋರಿಸಿರುವುದು ಜಿಜ್ಞಾಸುಜನಕ್ಕೆ ಚಿತ್ತರಂಜಕವಾಗಿದೆ. ಪ್ರತಿಯೊಂದು ಅಧಿಕರಣದ ಮೊದಲನೆಯ ಸೂತ್ರದ ಅರ್ಥವನ್ನು ನಿರೂಪಿಸುವಾಗ ಗ್ರಂಥಕಾರರು "ಅತ್ರನಯೇ" ಎಂದು ಪ್ರಾರಂಭಿಸಿ ಸಮಗ್ರವಾಗಿ ಆ ಅಧಿಕರಣದಲ್ಲಿ ನಿರ್ಣಯಿಸಿರುವ ಸಿದ್ಧಾಂತ ಪ್ರಮೇಯವನ್ನು ಒಂದೇ ವಾಕ್ಯದಲ್ಲಿ ತಿಳಿಸಿದ್ದಾರೆ. ಇದರಿಂದ ಸಮಗ್ರವಾಗಿ ಆಯಾ ಅಧಿಕರಣದ ಸಿದ್ಧಾಂತಾರ್ಥವು ಸುಲಭವಾಗಿ ಮೊದಲೇ ಗೊತ್ತಾಗುವುದರಿಂದ ಜಿಜ್ಞಾಸುಗಳಿಗೆ ಮಹೋಪಕಾರ ಮಾಡಿದಂತಾಗಿದೆ.

ಕೆಲವು ಸಂದರ್ಭಗಳಲ್ಲಿ ತಮ್ಮ ಗುರುವರೇಣ್ಯರಾದ ಶ್ರೀ ವಿಜಯೀಂದ್ರತೀರ್ಥರು ತೋರಿಸಿರುವ ಸೂತ್ರದಲ್ಲಿನ ಪದದ ಪ್ರಯೋಜನವನ್ನು "ಗುರುಪಾದಾಸ್ತು" ಎಂದು ಭಕ್ತಿಗೌರವಪೂರ್ವಕವಾಗಿ ಗುರುಗಳನ್ನು ಸ್ಮರಿಸಿ

> **"ಬ್ರಹ್ಮಶಿಮಿತ್ಯತಃ ಓಮಿತ್ಯುಕ್ತಮ್ ।**
> **ರಕ್ಷಕಶ್ಚೇತ್ಯರ್ಥಃ ।**
> **ಅವತಿರೂಪತ್ವಾತ್ ।**
> **ರಕ್ಷಕಶ್ಚವಿಷ್ಣುಃ ಪ್ರಸಿದ್ಧ ಇತ್ಯಭ್ಯಾಹುಃ ।**

ಎಂದು ವಿಶೇಷ ನಿರೂಪಣೆಗಳನ್ನೂ ಸಂಗ್ರಹಿಸಿದ್ದಾರೆ.

ಕೆಲವು ಸೂತ್ರಗಳಲ್ಲಿ ಗತಾರ್ಥತಾಶಂಕೆಯನ್ನು ತೋರಿಸಿ 'ಅಗತಾರ್ಥತೆಯನ್ನು ಹಿಂದಿನ ತಾತ್ಪರ್ಯ ಚಂದ್ರಿಕಾದಿ ಗ್ರಂಥಗಳಲ್ಲಿ ಸಮರ್ಥಿಸಿರುವುದನ್ನು ತಂತ್ರದೀಪಿಕಾಕಾರರು ಆಯಾ ಗ್ರಂಥಗಳನ್ನೇ ಉಲ್ಲೇಖಿಸಿ ಸೂಚಿಸಿರುತ್ತಾರೆ. ಉದಾಹರಣೆಗಾಗಿ ಶಾಸ್ತ್ರಯೋನಿತ್ವಾಧಿಕರಣದಿಂದ ಎರಡನೇ ಅಧ್ಯಾಯದ ಮೊದಲನೇ ಪಾದದ ಮೊದಲನೆಯ ಅಧಿಕರಣವಾದ ಸ್ಮೃತ್ಯಧಿಕರಣಕ್ಕೆ ಗತಾರ್ಥತೆಯ ಶಂಕೆಯನ್ನು ವಿವರಿಸಿ ತಾತ್ಪರ್ಯಚಂದ್ರಿಕೆಯಲ್ಲಿ ವಿಸ್ತಾರವಾಗಿ ನಿರಾಕರಿಸಲಾಗಿದೆ. ಇದನ್ನು ತಂತ್ರದೀಪಿಕೆಯಲ್ಲಿ ಉಲ್ಲೇಖಿಸಿರುತ್ತಾರೆ. ಆ ವಾಕ್ಯವು ಈ ರೀತಿ ಇದೆ.

**"ಅಸ್ಯ ಸ್ಮೃತಿನಯಾದಗತಾರ್ಥತಾ" ಚಂದ್ರಿಕಾಯಾಂ ಬೋಧ್ಯಾ ।। ಇತಿ ।।**

ಬ್ರಹ್ಮಸೂತ್ರಗಳ ಅಧಿಕರಣಗಳಲ್ಲಿ ಕೆಲವು ಅಧಿಕರಣಗಳಲ್ಲಿ ಒಂದೊಂದೇ ಸೂತ್ರವಿವೆ. ಕೆಲವು ಅಧಿಕರಣಗಳಲ್ಲಿ ನಾಲ್ಕಾರು ಸೂತ್ರಗಳಿವೆ. ಪ್ರಧಾನ ಸೂತ್ರದ ಅರ್ಥವನ್ನು ನಿರೂಪಿಸಿದ ಮೇಲೆ ಮುಂದಿನ ಸೂತ್ರದ ಪ್ರಾರಂಭಕ್ಕೆ ಕಾರಣವಾದ ಶಂಕೆಯನ್ನು ಆಯಾ ಸೂತ್ರದ ಹಿನ್ನೆಲೆಯಾಗಿ ಹಿಂದಿನ ಸೂತ್ರದ ಅರ್ಥವನ್ನು ವಿವರಿಸಿ, ಕಡೆಯಲ್ಲಿ ಮುಂದಿನ ಸೂತ್ರದ ಪ್ರಾರಂಭಕ್ಕೆ ತಕ್ಕಂತೆ ಕಾರಣವನ್ನು ಹೇಳಿರುವುದು ಅತಿರಂಜಕವಾದ ಅಂಶವಾಗಿದೆ. ಉದಾಹರಣೆ- ಈಕ್ಷತ್ಯಧಿಕರಣದಲ್ಲಿ "ಆರನೇ ಸೂತ್ರವಾದ "ಗತಿಸಾಮಾನ್ಯಾತ್" ಎಂಬ ಸೂತ್ರಕ್ಕೆ ಅವತಾರಿಕಾರೂಪವಾಗಿ ತಂತ್ರದೀಪಿಕಾ ವಾಕ್ಯವು ಈ ರೀತಿ ಇದೆ.

**"ಶಾಖಾಂತರೇಷು ರುದ್ರಾದಿರ್ಜಗದ್ಧೇತುತ್ವೇನೋಚ್ಯತಾಮಿತ್ಯತಃ ಸರ್ವಶಾಸ್ತ್ರಯೋನಿತ್ವಂ ವಿಷ್ಣೋರೇವೇತ್ಯಾಹ "ಲಿಂಗತಿಸಾಮಾನ್ಯಾತ್ ಓಂ" ಇತಿ।।**

ಈ ರೀತಿ ಹಿಂದಿನ ಎಲ್ಲಾ ಮೂಲ ಟೀಕಾಗ್ರಂಥಗಳಲ್ಲಿನ ಪ್ರಮೇಯಗಳನ್ನೆಲ್ಲಾ ಮನಸ್ಸಿನಲ್ಲಿ ಏಕಕಾಲದಲ್ಲಿ ಚಿಂತಿಸಿ, ಕ್ರೋಢೀಕರಿಸಿ, ಸಂಗ್ರಹವಾಗಿ ತಿಳಿಯುವಂತೆ ರಚಿಸಿರುವ ಈ ಗ್ರಂಥವನ್ನು ಎಷ್ಟು ಪ್ರಶಂಸಿಸಿದರೂ ಸಾಲದುದಾಗಿದೆ.

ಸಕಲಸಿದ್ಧಾಂತಗಳ ಮರ್ಮಗಳನ್ನೆಲ್ಲಾ ಶ್ರೀ ಗುರುರಾಜರು ಅರಿತಿರುವುದು ಮಾತ್ರವಲ್ಲದೇ ಆಯಾ ಸಿದ್ಧಾಂತಗಳಲ್ಲಿ ಎಷ್ಟೆಷ್ಟು ಅಕ್ಷರಗಳಿವೆ, ಯಾವ ಯಾವ ಅರ್ಥಗಳಿವೆ ಎಂಬುವನ್ನೂ ಸಹ ತಮ್ಮ ದಿವ್ಯ ಪ್ರತಿಭೆಯಿಂದ ತಿಳಿದಿದ್ದರೆಂದು ಅವರ ಕಾಲದಲ್ಲಿ ಕಂಡು, ಕೇಳಿ, ಅನುಭವಿಸಿದ ವಿದ್ವತ್ಕವಿಕುಲಲಲಾಮರಾದ ಶ್ರೀ ನಾರಾಯಣಾಚಾರ್ಯರು ಶ್ರೀ ರಾಘವೇಂದ್ರ ವಿಜಯ ಮಹಾಕಾವ್ಯದಲ್ಲಿ ಶ್ರೀ ಗುರುರಾಜರನ್ನು ಪ್ರಶಂಸೆ ಮಾಡಿದ್ದಾರೆ. ಆ ಶ್ಲೋಕವು ಈ ಕೆಳಗೆ ಕಂಡಂತಿದೆ.

**ಶ್ಲೋಕ ॥ ಚಂದ್ರಿಕಾಪ್ರವಚನಂ ಸುಮತಾನೀಕ್ಷ್ಯಂಚರನ್ನಪಿ ಸ ಪುಣ್ಯಮಹೀಷು।**
**ವೇತ್ತಿ ವರ್ಣನಿಚಯಂ ಸಮಯಾನಾಂ ಸಂಖ್ಯಯಾ ಸಹ ಧಿಯೈಷ ಸಹಾರ್ಥೈಃ।।**
**(ಶ್ರೀ ರಾಘವೇಂದ್ರವಿಜಯಮಹಾಕಾವ್ಯ)**

**ತಾತ್ಪರ್ಯ** :- ಶ್ರೀ ರಾಘವೇಂದ್ರ ಗುರುವರೇಣ್ಯರು ದಕ್ಷಿಣದೇಶದ ಪುಣ್ಯಕ್ಷೇತ್ರಗಳಲ್ಲಿ ಸಂಚರಿಸುತ್ತಿರುವಾಗಲೇ ಶ್ರೀ ವ್ಯಾಸರಾಜರಿಂದ ವಿರಚಿತವಾಗಿರುವ ತಾತ್ಪರ್ಯ ಚಂದ್ರಿಕೆಗೆ "ತಾತ್ಪರ್ಯಚಂದ್ರಿಕಾ ಪ್ರಕಾಶ" ಎಂಬ ವ್ಯಾಖ್ಯಾನವನ್ನು ರಚಿಸಿದರು. ಮತ್ತು ಆಯಾ ಸಿದ್ಧಾಂತಗಳಲ್ಲಿನ ಸಕಲ ಪ್ರಮೇಯಗಳನ್ನು ಆಮೂಲಾಗ್ರವಾಗಿ ತಮ್ಮ ಪ್ರತಿಭಾ ಸಂಪತ್ತಿನಿಂದ ತಿಳಿದಿದ್ದರು. ಅಷ್ಟು ಮಾತ್ರವೇ ಅಲ್ಲದೇ ಅವುಗಳಲ್ಲಿ ಅಂದರೆ ಬೇರೆ ಬೇರೆ ಸಿದ್ಧಾಂತ ಪ್ರತಿಪಾದಕಗಳಾದ ಗ್ರಂಥಗಳಲ್ಲಿ "ಇಷ್ಟೇ ಅಕ್ಷರಗಳಿವೆ, ಅವುಗಳಿಗೆಲ್ಲಾ ಇಷ್ಟೇ ಅರ್ಥ" ಎಂಬುದನ್ನೂ ಸಹ ತಮ್ಮ ದಿವ್ಯಪ್ರತಿಭೆಯಿಂದ ಮನಗಂಡಿದ್ದರು.

**"ಅಶ್ರುತಪ್ರತಿಭಾ ಯಸ್ಯ ಶ್ರುತಿಸ್ಮೃತ್ಯವಿರೋಧಿನೀ।**
**ವಿಶ್ರುತಾ ನೃಪು ಜಾತಂ ಚ ತಂ ವಿದ್ಯಾದ್ದೇವಸತ್ತಮಮ್"।।**

ಎಂಬ ನಾರಾಯಣಶ್ರುತಿವಚನದಲ್ಲಿ ಉಕ್ತವಾಗಿರುವಂತೆ ಅಲೌಕಿಕವಾದ ಅಶ್ರುತಪ್ರತಿಭಾಸಂಪನ್ನರಾದ ಶ್ರೀ ರಾಘವೇಂದ್ರಗುರುಸಾರ್ವಭೌಮರು ದೇವಸ್ವಭಾವಾ ಎಂದು ಗುರುಸ್ತೋತ್ರದಲ್ಲಿ ಹೇಳಿರುವಂತೆ ದೇವಾಂಶಸಂಭೂತರೆಂಬುದನ್ನು ಈ ಸಂದರ್ಭದಲ್ಲಿ ಶ್ರೀ ರಾಘವೇಂದ್ರವಿಜಯಕಾರರು ಸೂಚಿಸಿರುತ್ತಾರೆ. ಶ್ರೀ ರಾಘವೇಂದ್ರವಿಜಯ ಮಹಾಕಾವ್ಯದಲ್ಲಿ ತಂತ್ರದೀಪಿಕಾಗ್ರಂಥದ ರಚನೆಯ ವಿಚಾರವಾಗಿ ಅಲಂಕಾರಬದ್ಧವಾಗಿ ವರ್ಣಿಸುವ ಶ್ಲೋಕವು ಸಹೃದಯರ ಮನೋರಂಜಕವಾಗಿದೆ.

**ಸೂತ್ರಹಾತ್ರರುಚಿರಂ ಕಲಿತರ್ಧಿಂ ನ್ಯಾಯಪೂರ್ವಕಸುಧಾಜ್ಯಭರೇಣ।**
**ತಂತ್ರದೀಪಮನುಬೋಧಯದರ್ಥಂ ಭಾಷ್ಯವರ್ತಿಕಮಯಂ ತನುತೇ ಸ್ಮ।।**
**(ಶ್ರೀ ರಾಘವೇಂದ್ರವಿಜಯ)**

**ತಾತ್ಪರ್ಯ** :- ಥಳ ಥಳ ಹೊಳೆಯತಕ್ಕ ಉಜ್ವಲವಾದ ದೀಪದ ಹಣತೆಯಲ್ಲಿ ತುಂಬಾ ತುಪ್ಪವನ್ನು ತುಂಬಿಸಿ, ಹತ್ತಿಯ ಬತ್ತಿಯನ್ನು ಆ ತುಪ್ಪದಲ್ಲಿ ಚೆನ್ನಾಗಿ ಅದ್ದಿ ತೋಯಿಸಿ ದೀಪವನ್ನು ಹಚ್ಚಿ ಉರಿಸಿದರೆ ಅದು ಭವ್ಯವಾದ ದೇವರ ಮನೆಗೆಲ್ಲಾ ಬೆಳಕನ್ನು ಚೆಲ್ಲಿ ಪ್ರಕಾಶಮಾನವಾಗಿ ಅಲ್ಲಿರುವ ಎಲ್ಲಾ ಪದಾರ್ಥಗಳನ್ನು ತೋರಿಸುತ್ತದೆ. ಆ ದೇವರ ಮನೆಯಲ್ಲಿರುವ ವಸ್ತುಗಳ ವಿಷಯದಲ್ಲಿರುವ ಅಜ್ಞಾನ, ಸಂದೇಹ, ಭ್ರಾಂತಿಗಳನ್ನು ಪರಿಹರಿಸುತ್ತದೆ. ಅದರಂತೆಯೇ ಶ್ರೀ ರಾಘವೇಂದ್ರಗುರುವರೇಣ್ಯರು ಬ್ರಹ್ಮಸೂತ್ರಗಳೆಂಬ ಉಜ್ವಲವಾದ ದೀಪದ ಪಾತ್ರೆಯನ್ನು ನ್ಯಾಯಸುಧಾದಿ ಗ್ರಂಥಗಳಲ್ಲಿನ ವಿಷಯಮಾಲೆಯೆಂಬ ತುಪ್ಪದಿಂದ ತುಂಬಿಸಿ ಶ್ರೀಮದಾನಂದತೀರ್ಥ ಭಗವತ್ಪಾದರಿಂದ ರಚಿತವಾಗಿರುವ ಬ್ರಹ್ಮಸೂತ್ರ ಭಾಷ್ಯವೆಂಬ ಹತ್ತಿಯ ಬತ್ತಿಯ ತುದಿಯಲ್ಲಿ ತಂತ್ರದೀಪಗ್ರಂಥವೆಂಬ ದೀಪವನ್ನು ಹಚ್ಚಿದ್ದಾರೆ. ಅರ್ಥಪ್ರಕಾಶಕವಾದ ದೀಪದಂತೆ ತಂತ್ರದೀಪಿಕಾಗ್ರಂಥವೂ ಸಂಗ್ರಹವಾಗಿ ಎಲ್ಲಾ ವಿಷಯಗಳನ್ನು ತಿಳಿಸಿ ಕೊಡುತ್ತಿರುವುದರಿಂದ ಜಿಜ್ಞಾಸುಜನರಿಗೆ ಉಜ್ವಲದೀಪದಂತೆ ಬಹಳ ಉಪಕಾರವಾಗಿದೆ. ಎಂದು ಅಭಿಪ್ರಾಯ.

ಮತ್ತು ಈ ತಂತ್ರದೀಪಿಕಾ ಎಂಬ ಗ್ರಂಥವು ಬ್ರಹ್ಮಸೂತ್ರದ ಪದಗಳಿಗೆ ವಾಚ್ಯವಾಗಿ ತಿಳಿದು ಬರುವಂತಹ ಅರ್ಥಗಳನ್ನು ಮಾತ್ರವೇ ತಿಳಿಸುತ್ತಿಲ್ಲ. ಒಂದೊಂದು ಸೂತ್ರಗಳ ಅರ್ಥಿಕಾರ್ಥಗಳನ್ನು ಆಯಾ ಸಂದರ್ಭೋಚಿತಗಳಾದ ತಾತ್ಪರ್ಯಾರ್ಥಗಳನ್ನು ತಿಳಿಸುತ್ತಲಿದೆ. ಮತ್ತು ಶ್ರೀರಾಘವೇಂದ್ರ ಗುರುಸಾರ್ವಭೌಮರ ಸ್ತೋತ್ರರೂಪವಾಗಿರುವ ''ಗುರುಗುಣಸ್ತವನ'' ಗ್ರಂಥವನ್ನು ರಚಿಸಿದ ಶ್ರೀವಾದೀಂದ್ರತೀರ್ಥರು ತಂತ್ರದೀಪಿಕಾಗ್ರಂಥದ ಮಹತ್ವವನ್ನು ಈ ಕೆಳಗೆ ಕಂಡಂತೆ ಶ್ರೀ ಗುರುರಾಜರನ್ನು ಸಂಬೋಧಿಸಿ ವರ್ಣಿಸಿರುತ್ತಾರೆ.

**ಶ್ಲೋ ।। ಭಿನ್ನೈರರ್ಥೈರನೇಕಪ್ರಕರಣಭಣಿತೈರದ್ವಮಧ್ವಾಗಮಾಬ್ಧೌ**
**ಮಗ್ನಾ ಭೂಯೋ ವಿಚಿಂತ್ಯ ಶ್ರುತಿಪರಿಣತಯಾ ಶಕ್ತ್ಯಾ ಸಂಗೃಹೀತೈಃ ।**
**ಸೂತ್ರೇಷ್ವೇಕೈಕಶೋಽಪಿ ವ್ರತಿವರ ಭವತಾ ಯೋಜಿತೈಃ ಪ್ರವಾಹಂ**
**ಬೋಧೋ ಯಾದೃಙ್ ನ ತಾದೃಕ್ ತವ ಪುನರಿತರೈ ರಾಘವೇಂದ್ರ । ಪ್ರಬಂಧೈಃ ।।**
**(ಶ್ರೀಗುರುಗುಣಸ್ತವನ)**

**ತಾತ್ಪರ್ಯ** :- ಎಲೈ ಶ್ರೀ ರಾಘವೇಂದ್ರತೀರ್ಥ ಶ್ರೀಪಾದಂಗಳವರೇ ! ಶ್ರೀಮದಾನಂದತೀರ್ಥಭಗವತ್ಪಾದರು ಸೂತ್ರಪ್ರಸ್ಥಾನಕ್ಕೆ ಸಂಬಂಧಿಸಿದಂತೆ ಬ್ರಹ್ಮಸೂತ್ರಭಾಷ್ಯವನ್ನೂ, ಅನುವ್ಯಾಖ್ಯಾನವನ್ನೂ, ನ್ಯಾಯವಿವರಣವನ್ನೂ,ಸಂಗ್ರಹ ಭಾಷ್ಯವನ್ನೂ ರಚಿಸಿ ಅವುಗಳಲ್ಲಿ ಸಂಗ್ರಹವಾಗಿಯೂ, ವಿಸ್ತಾರವಾಗಿಯೂ ಅಸಾಧಾರಣವಾದ ಸರಣಿಯಲ್ಲಿ ಅತಿಗಹನಗಳಾದ ಬ್ರಹ್ಮಸೂತ್ರಗಳಿಗೆ ಅನೇಕಭಂಗಿಗಳಲ್ಲಿ ಯಥಾರ್ಥಗಳನ್ನು ನಿರೂಪಿಸಿರುತ್ತಾರೆ. ಶ್ರೀ ಮಧ್ವರ ಮೂಲಗ್ರಂಥಗಳಿಗೆ ಪ್ರಾಚೀನಟೀಕಾಕಾರರಾದ ಶ್ರೀ ಪದ್ಮನಾಭತೀರ್ಥರೂ, ಶ್ರೀ ತ್ರಿವಿಕ್ರಮಪಂಡಿತಾಚಾರ್ಯರೂ ಮತ್ತು ಶ್ರೀಮಜ್ಜಯತೀರ್ಥರೂ, ಶ್ರೀ ವ್ಯಾಸರಾಜರೂ, ಸನ್ನ್ಯಾಯರತ್ನಾವಳ್ಯಾದಿಗ್ರಂಥಗಳಲ್ಲಿ ಸೂತ್ರಾರ್ಥಗಳಿಗೆ ಸಂಬಂಧಿಸಿದಂತೆ ನಾನಾ ಬಗೆಯಾದ ಯೋಜನೆಗಳೊಂದಿಗೆ ವಾಕ್ಯಾರ್ಥಗಳನ್ನು ಪ್ರತಿಪಾದಿಸಿದ್ದಾರೆ. ದಿವ್ಯಪ್ರತಿಭಾಸಂಪನ್ನರಾದ ತಾವು ಪ್ರಾಚೀನಾಚಾರ್ಯರ ಆ ಪ್ರಕಾರಗಳನ್ನೆಲ್ಲಾ ಸಂಗ್ರಹಿಸಿ, ಪಾಠಾಂತರಗಳನ್ನೆಲ್ಲಾ ಕ್ರೋಢೀಕರಿಸಿ, ಸರಳವಾದ ಸರಣಿಯಲ್ಲಿ ಅತಿ ಚಾತುರ್ಯದಿಂದ ಈ ತಂತ್ರದೀಪಿಕಾಗ್ರಂಥವನ್ನು ರಚಿಸಿರುತ್ತೀರಿ. ತತ್ತ್ವಜ್ಞಾನಪಿಪಾಸುಗಳಾದ ಪಂಡಿತವೃಂದಕ್ಕೂ, ನಿರಂತರ

ಪ್ರವಚನಶೀಲರಾದ ಜ್ಞಾನಿಗಳ ಸಮುದಾಯಕ್ಕೂ ಅಲೌಕಿಕವಾದ ಉಜ್ವಲ ದೀಪದಂತೆ ಬ್ರಹ್ಮಸೂತ್ರಗಳ ಅರ್ಥದ ಪರಿಚಯವನ್ನುಂಟುಮಾಡುತ್ತಿರುವ ಈ ತಂತ್ರದೀಪಿಕಾ ಗ್ರಂಥದಿಂದ ಆಗುತ್ತಿರುವ ಸಂತೋಷವು ಬೇರೆ ಯಾವುದರಿಂದಲೂ ಅಷ್ಟಾಗಿ ಆಗುತ್ತಿಲ್ಲ. ತಮ್ಮ ತಂತ್ರದೀಪಿಕಾಗ್ರಂಥವು ಅಷ್ಟು ಮಹಿಮೆಯಿಂದ ಕೂಡಿದೆ. ಇಂತಹ ಶ್ರೇಷ್ಠ ಕೃತಿಯನ್ನು ರಚಿಸಿರುವ ತಮ್ಮ ಮಹಿಮೆಯನ್ನು ಎಷ್ಟು ವರ್ಣಿಸಿದರೂ ಸಾಲದು. ಎಂದು ಅಭಿಪ್ರಾಯ.

ಈ ತಂತ್ರದೀಪಿಕಾಗ್ರಂಥ ರಚನೆಯು ಶ್ರೀಗುರುರಾಜರ ಅಸಾಧಾರಣವಾದ "ಟಿಪ್ಪಣ್ಯಾಚಾರ್ಯ ಚಕ್ರವರ್ತಿ" ಗಳೆಂಬ ವಿಶ್ವ ವಿಖ್ಯಾತವಾದ ಕೀರ್ತಿ ಪ್ರತಿಷ್ಠೆಗೆ ತಕ್ಕಂತೆ ಸಮುಜ್ವಲದೃಷ್ಟಾಂತವೇ ಆಗಿದೆ.

ತಂತ್ರದೀಪಿಕಾಗ್ರಂಥದಲ್ಲಿ ಮತ್ತೊಂದು ವಿಶೇಷಾಂಶವನ್ನು ಕಾಣುತ್ತಿದ್ದೇವೆ.

**ಸಂಕ್ಷೇಪವಿಸ್ತರಾಭ್ಯಾಂ ತು ಕಥಯಂತಿ ಮನೀಷಿಣಃ।**
**ಬಹುವಾರಸ್ಮೃತೇಸ್ತಸ್ಯ ಫಲಬಾಹುಲ್ಯಕಾರಣಾತ್ ।। ಇತಿ ।।**

ಎಂದು ಭಾಗವತ ತಾತ್ಪರ್ಯದಲ್ಲಿ ಉದಾಹರಿಸಿರುವ ಪ್ರಮಾಣವಾಕ್ಯದಂತೆ, ಪ್ರಾಚೀನಾಚಾರ್ಯರು ಶಾಸ್ತ್ರಾರ್ಥವನ್ನು ಮೊದಲು ಸಂಕ್ಷೇಪವಾಗಿಯೂ, ಅನಂತರದಲ್ಲಿ ವಿಸ್ತಾರವಾಗಿಯೂ, ಪ್ರತಿಪಾದಿಸುವ ಪರಿಪಾಟಿಯನ್ನು ಅನುಸರಿಸಿ ಗ್ರಂಥಗಳನ್ನು ರಚಿಸಿರುತ್ತಾರೆ. ಈ ರೀತಿಯಾದ ನಿರೂಪಣೆಯಿಂದ ಗಹನವಾದ ಶಾಸ್ತ್ರಾರ್ಥವು ಶ್ರೋತೃವೃಂದದ ಬುದ್ಧಿಗೆ ಮೊದಲು ಅನಾಯಾಸವಾಗಿ, ಸುಲಭವಾಗಿ ಗ್ರಹಿಸಲು ಅವಕಾಶವಾಗುತ್ತದೆ. ಅನಂತರದಲ್ಲಿ ವಿಶೇಷಾಕಾರವಾಗಿ ಪ್ರತಿಪಾದಿಸುವುದರಿಂದ ಮತ್ತೆ ಮತ್ತೆ ತಿಳಿಯಲ್ಪಟ್ಟ ತತ್ವದ ದೃಢವಾದ ಜ್ಞಾನವು ಉಂಟಾಗುತ್ತದೆ. ಅದರಂತೆ ಗ್ರಂಥಕಾರರಾದ ಶ್ರೀ ಗುರುರಾಜರು ಈ ತಂತ್ರದೀಪಿಕಾಗ್ರಂಥದಲ್ಲಿ ಆಯಾ ಅಧ್ಯಾಯಗಳಿಗೆ ಸಂಬಂಧಿಸಿದ ಪಾದಗಳಲ್ಲಿನ ಸೂತ್ರಗಳ ಅರ್ಥವನ್ನು ವಿವರಿಸುವಾಗ ಮೊಟ್ಟಮೊದಲು ಆಯಾ ಅಧಿಕರಣಗಳಲ್ಲಿ ಅಂತಿಮವಾಗಿ ತೀರ್ಮಾನಿಸಿರುವ ಸಿದ್ಧಾಂತಪ್ರಮೇಯವನ್ನು "ಅತ್ರನಯೇ" ಎಂದು ಪ್ರಾರಂಭಿಸಿ ಒಂದೇ ವಾಕ್ಯದಲ್ಲಿ ಸಂಗ್ರಹಿಸಿ ಹೇಳಿರುವುದು ಬಹಳ ಉಪಕಾರವಾಗಿದೆಯೆಂದು ಹಿಂದೆಯೇ ತಿಳಿಸಲಾಗಿದೆ.

ಇಷ್ಟು ಮಾತ್ರವಲ್ಲದೇ ಎರಡನೇ ಅಧ್ಯಾಯದ ಪಾದ ಪೂರ್ತಿಯಾಗಿ ಪ್ರತಿಯೊಂದು ಪಾದದ ಕಡೆಯಲ್ಲಿಯೂ ಸಹ ಗ್ರಂಥಕಾರರು ಆ ಪಾದದಲ್ಲಿ ಬರುವ ಅಧಿಕರಣಗಳ ಹೆಸರನ್ನು ಹೇಳಿ ಅದರಿಂದ ತೀರ್ಮಾನವಾಗಿರುವ ಸಿದ್ಧಾಂತ ಪ್ರಮೇಯವನ್ನು ಕ್ರೋಢೀಕರಿಸಿ, ಸಂಗ್ರಹಿಸಿ ತೋರಿಸಿರುವುದು ಈ ಗ್ರಂಥದ ಮತ್ತೊಂದು ವೈಶಿಷ್ಟ್ಯವೆನಿಸಿದೆ.

ಉದಾಹರಣೆಗಾಗಿ ಮೊದಲನೆಯ ಅಧ್ಯಾಯದ ಮೊದಲನೆಯ ಪಾದದಲ್ಲಿ ಕಡೆಯಲ್ಲಿ ಸಿದ್ಧಾಂತಪ್ರಮೇಯವನ್ನು ಈ ರೀತಿ ಸಂಗ್ರಹಿಸಲಾಗಿದೆ.

"ಅತ್ರಆನಂದಮಯನಯೇ ವಿಷ್ಣೋಃ ಸ್ವಾವಯವೈಕ್ಯಂ, ಅಂತರ್ನಯೇ ಇಂದ್ರಾದಿದೇವಗತೈಶ್ವರ್ಯಾದೇಃ,ಆಕಾಶನಯೇ ಸರ್ವಪದಸ್ವಭಾವಸ್ಯ ಚೇಷ್ಟಾಯತ್ತತ್ವಂ, ಪ್ರಾಣನಯೇ ಸರ್ವಜೀವನಹೇತುತ್ವಂ, ಜ್ಯೋತಿರ್ನಯೇ ಸರ್ವಸೂರ್ಯಾನಾಮವೈಷ್ಣವತ್ವಪ್ರಸಿದ್ಧೇರಜ್ಞಾನಮೂಲತ್ವಂ, ಛಂದೋನಯೇ ಅನಾದಿಸಿತ್ಯಸ್ಯಾಪಿ ಈಶಾಧೀನತ್ವಂ, ಅಂತ್ಯನಯೇ ಸರ್ವ ತತ್ತ್ವ ತತ್ ಲಿಂಗಾನಾಂ ತತ್ತದಂತರ್ಯಾಮ್ಯಸ್ವತ್ವಂ ಸಿದ್ಧಮಿತ್ಯಾದಿ ಬೋಧ್ಯಮ್ ।। ಇತಿ ।।

ಈ ರೀತಿ ಆಯಾ ಅಧಿಕರಣದಲ್ಲಿ ಸಿದ್ಧಾಂತಾರ್ಥವನ್ನು ಸಂಗ್ರಹಿಸಿ ತಿಳಿಸಿರುವುದರಿಂದ ಜಿಜ್ಞಾಸುಗಳಿಗೆ ಸುಲಭವಾಗಿ ಅಧಿಕರಣಗಳ ಸಾರಾಂಶವನ್ನು ಮನನ ಮಾಡಲು ಬಹಳ ಉಪಕಾರಮಾಡಿದಂತಾಗಿದೆ. ಈ ಕ್ರಮದಲ್ಲಿ ಬ್ರಹ್ಮಸೂತ್ರಾರ್ಥಗಳ ಸಂಗ್ರಹದ ನಿರೂಪಣೆಯನ್ನು, ಇಂತಹ ಶೈಲಿಯಲ್ಲಿರುವುದನ್ನು ನಾವು ಬೇರೆ ಯಾವ ಇತರ ಸಂಗ್ರಹಕಾರರ ಗ್ರಂಥದಲ್ಲೂ ಕಂಡಿಲ್ಲ. ಇದೊಂದು ಚಿಕ್ಕ ಚೊಕ್ಕ ಬ್ರಹ್ಮಸೂತ್ರಾರ್ಥಗಳ ಕೋಶವೆಂದು ಕರೆದರೂ ಅದು ಅತಿಶಯೋಕ್ತಿಯಾಗಲಾರದು.

ಈ ಕ್ರಮವನ್ನು ತಂತ್ರದೀಪಿಕೆಯಲ್ಲಿ ಎರಡನೇ ಅಧ್ಯಾಯದ ಮೊದಲನೆಯ ಪಾದದ ಪೂರ್ತಿಯಾಗಿ ಕಾಣಬಹುದಾಗಿದೆ. ಎರಡನೇ ಅಧ್ಯಾಯ ಎರಡನೇ ಪಾದದಿಂದ ಇಡೀ ಆಯಾ ಪಾದಗಳಲ್ಲಿನ ಪ್ರಮೇಯವನ್ನು ಸಂಗ್ರಹವಾಗಿ ಆಯಾ ಪಾದಗಳ ಪ್ರಾರಂಭದಲ್ಲಿಯೇ ಗ್ರಂಥಕಾರರು ಕ್ರೋಢೀಕರಿಸಿರುತ್ತಾರೆ.

**ಉದಾಹರಣೆ- "ಇತರೇಷಾಂ ಚಾನುಪಲಬ್ಧೇಃ"**
**ಇತ್ಯುಕ್ತಹೇತುವಿಸ್ತರರೂಪತ್ವಾತ್ ತದನಂತರಂ**
**ಸಮಯಾವಿರೋಧೋಽತ್ರಪಾದೇಽಭಿಧೀಯತೇ ।**
**ಹೈತುಕಪಾಷಂಡಭೇದೇನ ಸಮಯಾಃ ದ್ವಿವಿಧಾಃ,**
**ಪೂರ್ವೋತ್ತರಾಧಿಕರಣಷಟ್ಕದ್ವಯೇನ ನಿರಸ್ಯಂತೇ ।**
**ವೇದಬಾಹ್ಯಸ್ಯ ಯುಕ್ತ್ಯಾದೇ ಏವ ನಿರಾಸಾದಿತಿ ।**

ಈ ತಂತ್ರದೀಪಿಕೆಯ ಅರ್ಥವನ್ನು ವಿವರಿಸುವಾಗ ಒಂದು ಕ್ರಮವನ್ನು ಅಳವಡಿಸಲಾಗಿದೆ. ಎಂದು ಹಿಂದೆಯೇ ಹೇಳಲಾಗಿತ್ತು. ಆ ಕ್ರಮವು ಈ ರೀತಿ ಇದೆ.

೧. ಮೊದಲು ಆಯಾ ಅಧಿಕರಣದ ಹೆಸರು.

೨. ಆಯಾ ಅಧಿಕರಣದಲ್ಲಿ ಬಂದಿರುವ ಸೂತ್ರಗಳು ಮತ್ತು ಅವುಗಳ ಸಂಖ್ಯೆ.

೩. ಆಯಾ ಅಧಿಕರಣದಲ್ಲಿನ ವಿಷಯ ವಾಕ್ಯಗಳು.

೪. ಪೂರ್ವಸಂಗತಿ.

೫. ಪೂರ್ವಪಕ್ಷನ್ಯಾಯ ಮತ್ತು ಸಿದ್ಧಾಂತ ನ್ಯಾಯಗಳ ಸ್ವರೂಪ.

೬. ಇಷ್ಟನ್ನು ಮೊದಲು ತಿಳಿಸಿ ಅನಂತರದಲ್ಲಿ ತಂತ್ರದೀಪಿಕಾಗ್ರಂಥಾನುವಾದವನ್ನು ಮಾಡಲಾಗುತ್ತದೆ. ಇದರಲ್ಲೂ ಸಹ ಸಮಗ್ರವಾಗಿ ಸಂಸ್ಕೃತಲಿಪಿಯಲ್ಲಿರುವ ಗ್ರಂಥವನ್ನು ಕನ್ನಡ ಲಿಪಿಯಲ್ಲಿ ಸಮಗ್ರವಾಗಿ ತಿಳಿಸಿ, ಆಮೇಲೆ ಪ್ರತಿಪದಕ್ಕೂ ಅರ್ಥವನ್ನು ಬರೆಯುತ್ತೇವೆ.

೭. ಗ್ರಂಥದ ಪ್ರತಿಪದದ ಪ್ರತಿವಾಕ್ಯದ ಅರ್ಥದ ನಿರೂಪಣೆಯು ಮುಗಿದ ತರುವಾಯ ಇದರಲ್ಲಿ ಹಿನ್ನೆಲೆಯಾಗಿ ಶ್ರೀ ಗುರುರಾಜರು ಹಿಂದಿನ ಪ್ರಾಚೀನಾಚಾರ್ಯರು ಯಾವ ಯಾವ ಗ್ರಂಥಗಳಲ್ಲಿನ ವಾಕ್ಯಾರ್ಥಗಳನ್ನು ಸಂಗ್ರಹಿಸಿ ತಿಳಿಸಿದ್ದಾರೆಯೋ ಸಾಧ್ಯವಾದ ಮಟ್ಟಿಗೆ ಆ ಗ್ರಂಥಗಳ ಭಾಗಗಳನ್ನು ಉದಾಹರಿಸಿ "ವಿಶೇಷವಾಕ್ಯಾರ್ಥಸಂಗ್ರಹ" ಎಂಬ ಶಿರೋನಾಮೆಯಲ್ಲಿ ಕಡೆಯಲ್ಲಿ ತೋರಿಸುತ್ತೇವೆ.

ಈ ಕ್ರಮದಲ್ಲಿ ಅರ್ಥಾನುವಾದುವು ಮುಂದುವರಿಯುತ್ತದೆ.

ಗ್ರಂಥಾನುವಾದವು ಪ್ರಾರಂಭವಾಗುವುದಕ್ಕೆ ಮುಂಚೆ ಅದಕ್ಕೆ ಸಂಬಂಧಿಸಿದ ಕೆಲವು ವಿಷಯಗಳಲ್ಲಿ ವಾಚಕರ ಸೌಕರ್ಯಕ್ಕಾಗಿ ಕೆಲವು ಪಾರಿಭಾಷಿಕಪದಗಳಿಗೆ ಜಿಜ್ಞಾ ಸಾಧಿಕರಣದಿಂದ ಪ್ರಾರಂಭಿಸಿ ಅರ್ಥವನ್ನು ವಿವರಿಸುತ್ತೇವೆ. ಅದಕ್ಕೆ ಮುಂದೆ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಸಂಬಂಧಿಸಿದ ಪ್ರಾಚೀನಾಚಾರ್ಯರ ಗ್ರಂಥಗಳ ಸ್ಥೂಲವಾದ ಪರಿಚಯದ ವಿಷಯಗಳನ್ನು ಸಂಗ್ರಹಿಸಿ ತಿಳಿಸುತ್ತೇವೆ. ಬ್ರಹ್ಮಸೂತ್ರಗಳ ಪರಿಚಯವಾದ ತರುವಾಯ ಶ್ರೀಮದಾನಂದತೀರ್ಥರ ಸೂತ್ರಭಾಷ್ಯದ ಮಹಿಮೆಯು ಎಂತಹುದು ಎಂಬುವದನ್ನು ಅದರ ಅಮೋಘವ್ಯಾಖ್ಯಾನವೆನಿಸಿದ ಅದ್ಭುತಕೃತಿಯಾದ ಅನುವ್ಯಾಖ್ಯಾನದ ಸ್ಥೂಲವಾದ ಪರಿಚಯವನ್ನೂ, ವಾಚಕರ ಉಪಕಾರಕ್ಕಾಗಿ ಹಿಂದೆಯೇ ಕೊಡಲಾಗಿದೆ. ಅವುಗಳ ಮಹಿಮೆಯನ್ನು ತಿಳಿಸುವುದರಿಂದ ಜಿಜ್ಞಾಸುಗಳಿಗೆ ಅದರ ಮಹತ್ತ್ವವು ಗೊತ್ತಾಗಿ ಅವುಗಳ ವಿಷಯದಲ್ಲಿ ಆಸಕ್ತಿ, ಭಕ್ತಿ, ಶ್ರದ್ಧೆಗಳು ಹುಟ್ಟಿ ಸಾತ್ವಿಕಚೇತನರಿಗೆ ವೈರಾಗ್ಯಮಾರ್ಗಕ್ಕೆ ಅವಕಾಶವಾಗಿ, ನಿರಂತರದಲ್ಲೂ, ಶ್ರೀಮನ್ಮಧ್ವಾಚಾರ್ಯರು ನಮಗಿತ್ತಿರುವ ಸಂದೇಶದಂತೆ ''ಅತ್ಮಶಕ್ಯೇ ತು ನಿದ್ರಾದೌ ಪುನರೇವ ಸಮಭ್ಯಸೇತ್'' ಎಂಬಂತೆ ಸರ್ವದಾ ಸಚ್ಛಾಸ್ತ್ರಾಭ್ಯಾಸರೂಪವಾದ ಭಗವಂತನ ಉಪಾಸನಾಮಾರ್ಗಕ್ಕೆ ತಕ್ಕ ಅವಕಾಶವಾಗುವುದರಲ್ಲಿ ಯಾವ ಸಂದೇಹವೂ ಇಲ್ಲ.

**ಬ್ರಹ್ಮಸೂತ್ರ ಮತ್ತು ಶಾರೀರಕ ಮೀಮಾಂಸಾಶಬ್ದಗಳ ಅರ್ಥನಿರೂಪಣೆ.**

**ಬ್ರಹ್ಮಸೂತ್ರಗಳು** :- ಬ್ರಹ್ಮ ಅಂದರೆ ವೇದಗಳು ಅವುಗಳ ಅರ್ಥವನ್ನು ನಿರ್ಣಯಿಸುವ ಸೂತ್ರಗಳು ಬ್ರಹ್ಮಸೂತ್ರಗಳು. ಅಥವಾ ಪರಬ್ರಹ್ಮಸ್ವರೂಪನಿರ್ಣಾಯಕಗಳಾಗಿರುವ ಸೂತ್ರಗಳು.

**''ಬ್ರಹ್ಮ ವೇದಃ ತದರ್ಥಃ ಪರಬ್ರಹ್ಮ ವಾ ತಸ್ಯ ಸೂತ್ರಾಣಿ ಬ್ರಹ್ಮಸೂತ್ರಾಣಿ ।**
**ಸಕಲವೇದಾರ್ಥಭೂತಸ್ಯ ಪರಬ್ರಹ್ಮಣೋ ವಿಷ್ಣೋಃ ಸ್ವರೂಪನಿರ್ಣಯಾರ್ಥಾನಿ**
**ಸೂತ್ರಾಣೀತಿಯಾವತ್ (ನ್ಯಾಯಸುಧಾ)**

ಇದಕ್ಕೆ ಶಾರೀರಕಮೀಮಾಂಸಾಸೂತ್ರಗಳೆಂದೂ ಪ್ರಸಿದ್ಧಿಯು ಇದೆ.

**''ಶಾರೀರೌ ತಾವುಭೌ ಜ್ಞೇಯೌ ಜೀವಶ್ಚೇಶ್ವರಸಂಜ್ಞಿತಃ।**
**ಅನಾದಿಬಂಧನಸ್ತ್ವೇಕೋ ನಿತ್ಯಮುಕ್ತಸ್ತಥಾಪರಃ'' ।।**

ಎಂದು ಸಪ್ತಮಾಧ್ಯಾಯದ ಗೀತಾಭಾಷ್ಯದಲ್ಲಿ ಉದಾಹರಿಸಿರುವ ನಾರದೀಯವಚನದಂತೆ ಶಾರೀರಕನೆಂದರೆ ಪರಮಾತ್ಮನು. ಆ ಪರಮಾತ್ಮನ ಸಕಲಗುಣಪೂರ್ಣತ್ವಾದಿಮೀಮಾಂಸೆಯೇ ಶಾರೀರಕಮೀಮಾಂಸಾ ಎಂದು ಸಿದ್ಧಾಂತದಲ್ಲಿ ನಿರೂಪಿಸಿರುವ ಅರ್ಥ. ಆದರೆ ಶಾರೀರಕಮೀಮಾಂಸಾ ಎಂಬ ಪದಕ್ಕೆ ಐಕ್ಯವಾದಿಗಳು ಬೇರೆ ಅರ್ಥವನ್ನು ಬರೆದಿರುತ್ತಾರೆಶರಿರಮೇವಶಾರಿರಕಂ..

**ತತ್ರಭವಃ ಶಾರೀರಕೋ ಜೀವಃ।**
**ತಮಧಿಕೃತ್ಯ ಕೃತೋಽಯಂ ಗ್ರಂಥಃ**

ಎಂದು ವ್ಯಾಖ್ಯಾನ ಮಾಡಿ. (ತತ್ತ್ವಮಸಿ) ತ್ವಂ ಪದದಿಂದ ಹೇಳಲ್ಪಟ್ಟ ಜೀವನಿಗೆ ತತ್ಪದದಿಂದ ಹೇಳಲ್ಪಟ್ಟ ಬ್ರಹ್ಮರೂಪತ್ವವನ್ನು ತಿಳಿಸುವ ಮೀಮಾಂಸಾ ಎಂದು ನಿರೂಪಿಸಿರುತ್ತಾರೆ. ಈ ಅರ್ಥವು ಬ್ರಹ್ಮಸೂತ್ರಶಬ್ದದ ಅರ್ಥಕ್ಕೆ ವಿರುದ್ಧವಾಗಿರುವುದಲ್ಲದೇ ಮುಂದಿನ ಜನ್ಮಾದಿಸೂತ್ರಗಳು ಜೀವಬ್ರಹ್ಮರಿಗೆ ಅತ್ಯಂತಭೇದಪ್ರತಿಪಾದಕಗಳಾಗಿರುವ ಪ್ರಯುಕ್ತ ಸೂತ್ರವೃಂದಕ್ಕೆ ಅಭೇದಾರ್ಥವು ವಿರುದ್ಧವಾಗಿರುವುದರಿಂದಲೂ, ಮುಂದೆ ಅನೇಕಸೂತ್ರಗಳಲ್ಲಿ ಜೀವಬ್ರಹ್ಮರ ಅಭೇದವನ್ನು ನಿರಾಕರಿಸಿರುವುದರಿಂದಲೂ ಇತರರ ಆ ಅರ್ಥವು ಅಪ್ರಾಮಾಣಿಕವಾಗಿದೆ. ರಾಮಾನುಜೀಯರು ಈ ಕೆಳಗೆ ಕಂಡಂತೆ ಶಾರೀರಕ ಪದಕ್ಕೆ ವ್ಯಾಖ್ಯಾನ ಮಾಡಿರುತ್ತಾರೆ.

**"ಇದಂ ಚ ಶಾಸ್ತ್ರಂ ಶಾರೀರಕಮಿತಿವ್ಯಪದಿಶ್ಯತೇ।**
**ಶರೀರಸಂಬಂಧೀ ಶಾರೀರಃ।**
**ಜಗಚ್ಛರೀರಃ ಇತ್ಯರ್ಥಃ ಶಾರೀರಂ ಕಾಯತಿ ಪ್ರತಿಪಾದಯತೀತಿ ಶಾರೀರಕಮ್।**
**ಕೈಗೈಶಬ್ದೇ ಇತಿಧಾತೋಃ "ಆತೋಽನುಪಸರ್ಗೇ ಕಃ" ಇತಿ ಕಪ್ರತ್ಯಯಃ।**
**ಜಗಚ್ಛರೀರಕಬ್ರಹ್ಮಪ್ರತಿಪಾದಕಮಿತ್ಯರ್ಥಃ।**
**ಉಕ್ತಂ ಚ ಶ್ರುತಪ್ರಕಾಶಿಕಾಯಾಂ "ಶಾರೀರಕಂ ಬ್ರಹ್ಮಮೀಮಾಂಸಾ।**
**ಜಗಚ್ಛರೀರಕಃ ಪರಮಾತ್ಮಾ ಶಾರೀರಃ "ತಸ್ಯೈಷ ಏವ ಶಾರೀರ ಆತ್ಮಾ" ಇತಿಶ್ರುತೇಃ।।**
**ತದ್ವಿಷಯಕಂ ಶಾಸ್ತ್ರಂ ಶಾರೀರಕಮಿತ್ಯುಚ್ಯತೇ" ಇತಿ**

ಎಂದು ರಾಮಾನುಜಮತದಲ್ಲಿ ಪರಮಾತ್ಮನ ಪರವಾಗಿಯೇ ಅರ್ಥ ಮಾಡಿರುತ್ತಾರೆ.

**ಬ್ರಹ್ಮಮೀಮಾಂಸಾ ಶಾಸ್ತ್ರದಲ್ಲಿ ಪ್ರತಿಪಾದ್ಯವಾದ ವಿಷಯ.**

**ಬ್ರಹ್ಮಸೂತ್ರಗಳ ರಚನೆಗೆ ಕಾರಣವು ಈ ರೀತಿ ಇದೆ.**

ಪರಸ್ಪರ ವಿರುದ್ಧಗಳಾಗಿರುವಂತೆ ಆಪಾತತಃ ತೋರತಕ್ಕ ವೇದವಾಕ್ಯಗಳಿಂದಾಗುವ ಸಂಶಯಗಳನ್ನೂ ಭ್ರಾಂತಿಯನ್ನೂ ಪರಿಹರಿಸುವ ಸಲುವಾಗಿ ಶ್ರೀ ವೇದವ್ಯಾಸರು ವೇದಾರ್ಥನಿರ್ಣಾಯಕಗಳಾದ ನ್ಯಾಯಗಳಿಂದ ಕೂಡಿರುವ ಬ್ರಹ್ಮಸೂತ್ರಗಳನ್ನು ರಚಿಸಿರುತ್ತಾರೆ.

**"ಯಥಾರ್ಥವಚನಾನಾಂ ಚ ದೋಷಾರ್ಥಾನಾಂ ಚ ಸಂಶಯಮ್।**
**ಅಪನೇತುಂ ಹಿ ಭಗವಾನ್ ಬ್ರಹ್ಮಸೂತ್ರಮಚೀಕ್ಲೃಪತ್।।**
**ತಸ್ಮಾತ್ ಸೂತ್ರಾರ್ಥಮಾಗೃಹ್ಯ ಕರ್ತವ್ಯಃ ಸರ್ವನಿರ್ಣಯಃ।।(ಇತಿ. ಮ. ತಾ. ನಿರ್ಣಯ)**

ಬ್ರಹ್ಮಸೂತ್ರಗಳನ್ನು ರಚಿಸಿರುವ ಶ್ರೀ ವೇದವ್ಯಾಸರೇ ಬ್ರಹ್ಮಸೂತ್ರಗಳಲ್ಲಿ ನಿರ್ಣಯಿಸಿರುವ ಪ್ರಮೇಯವನ್ನು (ಅರ್ಥವನ್ನು) ತಾವೇ ಭವಿಷ್ಯತ್ ಪರ್ವದಲ್ಲಿ ವ್ಯಕ್ತಪಡಿಸಿರುತ್ತಾರೆ. ಶ್ರೀಮದಾಚಾರ್ಯರು ಆ ವಚನಗಳನ್ನು ಉದಾಹರಿಸಿರುವರು. ಆ ವಚನಗಳು ಈ ರೀತಿ ಇವೆ.

"ಸರ್ವದೋಷವಿಹೀನತ್ವಂ ಗುಣೈಃ ಸರ್ವೈಃ ಉದೀರ್ಣತಾ ।
ಅಭೇದಃ ಸರ್ವರೂಪೇಷು ಜೀವಭೇದಃ ಸದೈವ ಹಿ ।
ವಿಷ್ಣೋರುಕ್ತಾನಿ ಸೂತ್ರೇಷು ಸರ್ವವೇದೇಡ್ಯತಾ ತಥಾ ।
ತಾರತಮ್ಯಂ ಚ ಮುಕ್ತಾನಾಂ ವಿಮುಕ್ತಿರ್ವಿದ್ಯಯಾ ತಥಾ ।
ತಸ್ಮಾದೇತದ್ವಿರುದ್ಧಂ ಯನ್ಮೋಹಾರ್ಥಂ ತದುದಾಹೃತಮ್ ।
ತಸ್ಮಾದ್ಯೇ ಯೇ ಗುಣಾ ವಿಷ್ಣೋಃ ಗ್ರಾಹ್ಯಾಸ್ತೇ ಸರ್ವಏವಹಿ ।
ಇತ್ಯಾದ್ಯುಕ್ತಂ ಭಗವತಾ ಭವಿಷ್ಯತ್ ಪರ್ವಣಿಸ್ಫುಟಮ್ ।।

(ಶ್ರೀ. ಮ. ಭಾ. ತಾ. ನಿರ್ಣಯ)

**ತಾತ್ಪರ್ಯ:-** ಬ್ರಹ್ಮಮೀಮಾಂಸಾಶಾಸ್ತ್ರದ ಮೊದಲನೆಯ ಅಧ್ಯಾಯದಲ್ಲಿ ವೈದಿಕಗಳಾದ ಅಗತ್ಯವಾದ ಸಕಲಶಬ್ದಗಳಿಗೂ ಪರಮಾತ್ಮನ ಗುಣಪ್ರತಿಪಾದಕತ್ವವನ್ನು ಸಮರ್ಥಿಸಿರುವುದರಿಂದ ಮತ್ತು ಎರಡನೇ ಅಧ್ಯಾಯದಲ್ಲಿ ಸಕಲವಿರೋಧಗಳನ್ನೂ ಪರಿಹರಿಸಿ ಸಕಲದೋಷವಿಹೀನತ್ವವನ್ನು ಸಮರ್ಥಿಸಿರುವುದರಿಂದ ಮೊದಲನೆಯ ಎರಡನೆಯ ಅಧ್ಯಾಯಗಳಲ್ಲಿ ಪರಬ್ರಹ್ಮಸ್ವರೂಪವು ನಿರ್ಣಯಿಸಲ್ಪಟ್ಟಿದೆ. ಮತ್ತು "ನ ಸ್ಥಾನತೋಽಪಿ ಪರಸ್ಯೋಭಯಲಿಂಗಂ ಸರ್ವತ್ರಹಿ" ಎಂಬ ಸೂತ್ರದಲ್ಲಿ ಪರಮಾತ್ಮನ ಪರಸ್ಪರರೂಪಗಳಿಗೆ ಸ್ಥಾನಭೇದದಿಂದ ವ್ಯತ್ಯಾಸವಿಲ್ಲವೆಂಬುದನ್ನು ನಿಶ್ಚಯಿಸಲಾಗಿದೆ. "ಶಾರೀರಶ್ಚೋಭಯೇಽಪಿಹಿ ಭೇದೇನೈನಮಧೀಯತೆ", ವಿಶೇಷಣ-ಭೇದವ್ಯಪದೇಶಾಭ್ಯಾಂ ಚ ನೇತರೌ" "ಸುಷುಪ್ತ್ಯುತ್ಕ್ರಾಂತ್ಯೋರ್ಭೇದೇನ" " ಪೃಥುಗುಪದೇಶಾತ್ " ಮೊದಲಾದ ಸೂತ್ರಗಳಲ್ಲಿ ಶ್ರೀ ವೇದವ್ಯಾಸರೇನೇ ಅಸ್ವತಂತ್ರನಾದ ಅಲ್ಪನಾದ ಜೀವನಿಗೂ ಸ್ವತಂತ್ರಸ್ವತಂತ್ರನಾದ ಸರ್ವೋತ್ತಮನಾದ ಪರಬ್ರಹ್ಮಶಬ್ದವಾಚ್ಯನಾದ ಶ್ರೀಮನ್ನಾರಾಯಣನಿಗೂ ಪಾರಮಾರ್ಥಿಕವಾದ ಭೇದವನ್ನೂ ನಿರ್ಣಯಿಸಿರುತ್ತಾರೆ. "ಶಾಸ್ತ್ರಯೋನಿತ್ವಾತ್" , "ತತ್ತು ಸಮನ್ವಯಾತ್", "ಈಕ್ಷತೇರ್ನಾಶಬ್ದಮ್" ಇತ್ಯಾದಿ ಸೂತ್ರಗಳಲ್ಲಿ ಪರಬ್ರಹ್ಮನಿಗೆ ವಾಚ್ಯತ್ವವನ್ನು ಪರಮಮುಖ್ಯವೃತ್ತಿಯಿಂದ ಸರ್ವಸಚ್ಛಾಸ್ತ್ರಪ್ರತಿಪಾದ್ಯತ್ವವನ್ನು ಸಮರ್ಥಿಸಿರುವರು. "ಇಯದಾಮನನಾತ್" ಇತುಸೂತ್ರಗಳಲ್ಲಿಯೂ, "ಮನುವ್ರಾತೇ" , "ಸೋಽಧ್ಯಕ್ಷೇತದುಪಗಮಾದಿಭ್ಯ" ಇತ್ಯಾದಿ ಸೂತ್ರಗಳಲ್ಲಿಯೂ, ಅಮುಕ್ತ ಮುಕ್ತರನ್ನು ಸಹ ತಾರತಮ್ಯವುಂಟೆಂಬಂಶವನ್ನು ನಿರ್ಣಯಿಸಿರುವರು..

ಪರಮಾತ್ಮನ ಸಾಕ್ಷಾತ್ಕಾರವೇ ಮೋಕ್ಷಕ್ಕೆ ಸಾಧನವೆಂಬುದನ್ನು "ವಿದ್ಯೈವ ತು ನಿರ್ಧಾರಣಾತ್" ಇತ್ಯಾದಿ ಸೂತ್ರಗಳಲ್ಲಿ ನಿರೂಪಿಸಿದ್ದಾರೆ. ಈ ಪ್ರಮೇಯಕ್ಕೆ ವಿರುದ್ಧಾರ್ಥವಾದುದೆಲ್ಲವೂ ಮೋಹಕ್ಕಾಗಿ ಹೇಳಲಾಗಿದೆಯೆಂದು ಭವಿಷ್ಯತ್ ಪರ್ವದಲ್ಲಿ ಸ್ಪಷ್ಟಪಡಿಸಿದ್ದಾರೆ.

ಇದರಿಂದ ಬ್ರಹ್ಮಸೂತ್ರಕಾರರಾದ ಶ್ರೀವೇದವ್ಯಾಸರಿಗೆ ಶ್ರೀಹರಿಯ ಸರ್ವೋತ್ತಮತ್ವಪ್ರತಿಪಾದನೆಯಲ್ಲಿಯೇ ಪರಮ ತಾತ್ಪರ್ಯವೆಂಬುದು ಅತ್ಯಂತ ಖಚಿತವಾಗಿ ನಿಶ್ಚಿತವಾದ ಅಭಿಪ್ರಾಯವಾಗಿದೆ. ಇದನ್ನೇ ಶ್ರೀಮದಾಚಾರ್ಯರು ಬ್ರಹ್ಮಸೂತ್ರಗಳಿಗೆ ವಿಶೇಷಾರ್ಥಗಳನ್ನು ನಿರೂಪಿಸುವಾಗ ಅನುವ್ಯಾಖ್ಯಾನದಲ್ಲಿ ಶ್ರೀಬಾದರಾಯಣರೂಪಿಯಾದ ಶ್ರೀಹರಿಯು ಬ್ರಹ್ಮಸೂತ್ರಗಳಲ್ಲಿ ಸಿದ್ಧಾಂತವನ್ನು ನಿರ್ಣಯಿಸಿರುತ್ತಾರೆಂದು ಹೇಳಿರುವ ಅನುವ್ಯಾಖ್ಯಾನವಾಕ್ಯಗಳು ಈ ರೀತಿ ಇವೆ.

ಅಶೇಷಗುಣಪೂರ್ಣತ್ವಂ ಸರ್ವದೋಷಸಮುಜ್ಝಿತಿಃ ।
ವಿಷ್ಣೋರನ್ಯಸ್ಯ ತತ್ತಂತ್ರಂ ಇತಿ ಸಮ್ಯಕ್ ವಿನಿರ್ಣಯಃ ।
ಸ್ವತಂತ್ರತ್ವಂ ಸದಾ ತಸ್ಯ ತಸ್ಯ ಭೇದಶ್ಚ ಸರ್ವಶಃ ।
ಅದೋಷತ್ವಸ್ಯ ಸಿದ್ಧ್ಯರ್ಥಂ ಯದಭೇದೇ ತದನ್ವಯಃ ।
ತತ್ತಂತ್ರತ್ವಂ ಚ ಮುಕ್ತಾನಾಂ ಅಪಿ ತದ್ಗುಣಪೂರ್ತಯೇ ।
ಮುಕ್ತಾನಾಮಪಿ ಭೇದಶ್ಚ ನಹಿ ಭಿನ್ನಮಭಿನ್ನತಾಮ್ ।
ಗಚ್ಛೇದ್ವ್ಯಕ್ತಂ ಕ್ವಚಿತ್ತಸ್ಮಾತ್ಸ್ವಭಾವೋಽನುಭವೋಽಪಿ ಚ ।
ಪೂರ್ಣಾಭೇದೇ ದೋಷವತ್ತ್ವಂ ಈಶಸ್ಯೇತ್ಯತಿಭಿನ್ನತಾ ।
ನಾರಾಯಣೇನ ಮುಕ್ತಾನಾಮಪಿಸಮ್ಯಗಿತಿಸ್ಥಿತಿಃ ।
ಭೇದಾಭೇದೇಽಪ್ಯಭೇದೇನ ದೋಷಾಣಾಮಪಿ ಸಂಭವಃ ।
ನಿರ್ದೋಷತ್ವಂ ರಮಾಯಾಶ್ಚ ತದನಂತರತಾ ತಥಾ ।
ಬ್ರಹ್ಮಾ ಸರಸ್ವತೀವೀಂದ್ರಶೇಷರುದ್ರಾಶ್ಚ ತತ್ ಸ್ತ್ರಿಯಃ ।
ಶಕ್ರಕಾಮೌ ತದನ್ಯೇ ಚ ಕ್ರಮಾನ್ಮುಕ್ತಾವಪೀತಿ ಚ ।
ಸಿದ್ಧಾಂತ ಇತಿಜ್ಞೇಯೋ ನಿರ್ಣೀತೋ ಹರಿಣಾ ಸ್ವಯಮ್ ।
ಏತದ್ವಿರೋಧಿಯತ್ಸರ್ವಂ ತಮಸೇಂಧಾಯ ಕೇವಲಮ್ ॥

(ಅನುವ್ಯಾಖ್ಯಾನ)

ಸಕಲಮುಕ್ತಿಯೋಗ್ಯರೂ ತಿಳಿದಿರಬೇಕಾದ ಸಿದ್ಧಾಂತದ ಸ್ವರೂಪನಿರೂಪಣೆ ಮತ್ತು ಅದರ ಹಿನ್ನೆಲೆ -

ಪರಬ್ರಹ್ಮ ವಸ್ತುವಿನ ನಿರ್ಣಯಪರ್ಯಂತವಾಗಿ ಶ್ರವಣಮನನಗಳನ್ನು ಸಾತ್ತ್ವಿಕನಾದ ಮುಕ್ತಿಯೋಗ್ಯಚೇತನನು ಮಾಡಬೇಕೆಂದು ಶಾಸ್ತ್ರವು ನಿರ್ದೇಶಿಸುತ್ತಲಿದೆ. ಪರಬ್ರಹ್ಮನ ದರ್ಶನಕ್ಕಾಗಿಯೇ ಶ್ರವಣಾದಿಗಳನ್ನು ಮಾಡಬೇಕೆಂಬುದು ಸುಪ್ರಸಿದ್ಧವಾದ ವಿಷಯ. ಆ ಶ್ರವಣಾದಿಗಳನ್ನು ಹೇಗೆ ಹೇಗೋ ಮನಬಂದಂತೆ ಆಚರಿಸುವುದರಿಂದ ಬ್ರಹ್ಮನ ಸಾಕ್ಷಾತ್ಕಾರವಾಗುವುದಿಲ್ಲ. ಶಿಷ್ಯನ ಯೋಗ್ಯತೆಯನ್ನು ಅರಿತ ಅಭಿಜ್ಞರಾದ ನಿಯತಗುರುಗಳು ಉಪದೇಶಿಸಿದಂತೆ ಆಚರಿಸಬೇಕು. ಅಂತಹ ಗುರುಗಳೇ ಶ್ರವಣಾದಿಗಳಿಗೆ ತಕ್ಕ ಕಾಲವನ್ನು ಮತ್ತು ಕ್ರಮವನ್ನನೂ ಉಪದೇಶಿಸುತ್ತಾರೆ. ಜಾತಾಪರೋಕ್ಷಿಗಳಾದ ದೇವತೆಗಳೂ ಸಹ ಇಂದಿಗೂ ಶ್ರವಣಾದಿಗಳನ್ನು ಮಾಡುತ್ತಿರುತ್ತಾರೆ. ಆದರೆ ಬ್ರಹ್ಮಸಾಕ್ಷಾತ್ಕಾರವನ್ನು ಪಡೆದನಂತರದಲ್ಲಿನ ಶ್ರವಣ, ಮನನ, ಧ್ಯಾನಗಳು ಮೋಕ್ಷದಲ್ಲಿ ಆನಂದೋತ್ಕರ್ಷಕ್ಕೆ ಕಾರಣವಾಗುತ್ತವೆ. ಬ್ರಹ್ಮಸಾಕ್ಷಾತ್ಕಾರವಿಲ್ಲದವರಿಂದ ಆಚರಿಸಲ್ಪಡತಕ್ಕ ಶ್ರವಣಾದಿಗಳು ಪರಮಾತ್ಮನ ಸಾಕ್ಷಾತ್ಕಾರವನ್ನುಂಟು ಮಾಡುತ್ತವೆ.

ಆದಕಾರಣ ಮೋಕ್ಷದಲ್ಲಿ ವಿಶೇಷಾಕಾರವಾದ ಆನಂದಕ್ಕಾಗಿ ದೇವತೆಗಳೂ ಸಹ ಪದವೀಪ್ರಾಪ್ತಿಯಾದ ನಂತರವೂ ಶ್ರವಣಾದಿಗಳನ್ನು ಮಾಡುತ್ತಾರೆ.

ಶಿಷ್ಯನ ಯೋಗ್ಯತೆಯನ್ನು ಅರಿತ ನಿಯತ ಗುರುಗಳಾದ ಅಂದರೆ ಮುಖ್ಯ ಗುರುವು ಮೊದಲು ಸಿಗದಿದ್ದರೆ ಅಮುಖ್ಯ ಗುರುವಿನಿಂದಲಾದರೂ ಶ್ರವಣಾದಿಗಳನ್ನು ಆಚರಿಸಲೇಬೇಕು. ಶಾಸ್ತ್ರವು ನಿರ್ಣೀತವೆಂದೂ ನಿರ್ಣೇತವ್ಯವೆಂದೂ ಎರಡು ಬಗೆಯಾಗಿದೆ. ಸರ್ವಜ್ಞಾಚಾರ್ಯರಿಂದ ರಚಿಸಲ್ಪಟ್ಟಿರುವ ಸೂತ್ರಭಾಷ್ಯ, ಅನುವ್ಯಾಖ್ಯಾನ, ನ್ಯಾಯವಿವರಣ, ಮಹಾಭಾರತ, ಭಾಗವತಪುರಾಣ ಉಪನಿಷದ್ಭಾಷ್ ಮೊದಲಾದ ಉಪಾಯಗ್ರಂಥಗಳಿಗೆ ಅನುಸಾರವಾಗಿ ವೇದಾರ್ಥನಿರ್ಣಾಯಕವಾದ ನ್ಯಾಯ ನಿಬಂಧನಾತ್ಮಕವಾದ ಬ್ರಹ್ಮಸೂತ್ರರೂಪವಾದ ಬ್ರಹ್ಮಮೀಮಾಂಸಾಶಾಸ್ತ್ರವು ನಿರ್ಣೀತಶಾಸ್ತ್ರವೆಂದು ಕರೆಯಲ್ಪಡುತ್ತದೆ. ವೇದಾದಿಗಳು ನಿರ್ಣೇತವ್ಯದ ಗುಂಪಿಗೆ ಸೇರಿವೆ.

ಪುಣ್ಯೋಪಚಯದಿಂದ ಲಭ್ಯರಾಗತಕ್ಕ ಅತಿಗಹನ ವೇದಾದಿಗಳ ವ್ಯಾಖ್ಯಾನ ಸಮರ್ಥರಾದ ಮುಖ್ಯಗುರುಗಳು ಸಿಗದಿದ್ದಾಗ ಸರ್ವಜ್ಞಾಚಾರ್ಯರ ಸಿದ್ಧಾಂತಾನುಸಾರವಾಗಿ ಬ್ರಹ್ಮಸೂತ್ರಗಳಿಗೆ ಅರ್ಥವನ್ನು ಚೆನ್ನಾಗಿ ತಿಳಿದಿರತಕ್ಕ ಅಮುಖ್ಯಗಳಿಂದಾದರೂ ಶ್ರವಣಾದಿಗಳನ್ನು ಮಾಡಲೇಬೇಕು. ಹಾಗೆ ಮಾಡಿದಾಗ ಕಾಲಕ್ರಮದಲ್ಲಿ ಪರಮಾತ್ಮನ ಅನುಗ್ರಹದಿಂದ ಮುಖ್ಯಗುರುಗಳು ದೊರಕುತ್ತಾರೆ.

ಅಂತೂ ಪರಮಾತ್ಮನ ಮಹಿಮಾದಿಗಳ ಶ್ರವಣಾದಿಗಳಿಲ್ಲದೇ ಒಂದು ಕ್ಷಣಕಾಲವನ್ನೂ ವ್ಯರ್ಥಗೊಳಿಸಬಾರದೆಂಬುದೇ ಮುಖ್ಯವಾದ ಅಭಿಪ್ರಾಯ: ಸಕಲ ಶೃತಿಸ್ಮೃತಿಗಳಿಗೂ ಇದೇ ತಾತ್ಪರ್ಯ. ಮುದ್ಗಲಗೋತ್ರದಲ್ಲಿ ಹುಟ್ಟಿದ ನಾಕನೆಂಬ ಮುನಿಯು ಸ್ವಾಧ್ಯಾಯಪ್ರವಚನವು ಪರಮ ತಪಸ್ಸೆಂದು ಹೇಳಿದ್ದಾನೆ ಎಂದು ಶೃತಿವಾಕ್ಯವಿದೆ. "ಸ್ವಾಧ್ಯಾಯ ಪ್ರವಚನೇ ಏವೇತಿ ನಾಕೋ ಮೌದ್ಗಲ್ಯಃ" (ಇತಿಶೃತಿಃ) ಅಪರಿಹಾರ್ಯವಾದ ಗಾಢ ನಿದ್ರಾಕಾಲ ಹೊರತಾಗಿ ಮಿಕ್ಕ ಸಮಯದಲ್ಲಿ ಅಧಿಕಾರಿಯಾದ ಚೇತನನು ಸುಮ್ಮನೆ ಕಾಲಹರಣ ಮಾಡಬಾರದು.

ಶಿಷ್ಯಯೋಗ್ಯತಾಭಿಜ್ಞರಾದ ಮುಖ್ಯ ಗುರುಗಳಿಂದ ಶ್ರವಣಾದಿಗಳನ್ನು ಮಾಡಬೇಕೆಂಬುದು ಮೊದಲನೆಯ ಪಕ್ಷ. ಪುಣ್ಯೋಪಚಯದಿಂದ ಲಭ್ಯರಾಗುವ ಅವರು ಸಿಗದಿರುವಾಗ ಸರ್ವಜ್ಞಾಚಾರ್ಯರ ಭಾಷ್ಯಾದಿ ಉಪಾಯ ಗ್ರಂಥಗಳ ಪ್ರಕಾರ ಬ್ರಹ್ಮಸೂತ್ರಗಳನ್ನರಿತ ಅಮುಖ್ಯ ಗುರುಗಳಿಂದಾದರೂ ಶ್ರವಣಾದಿಗಳನ್ನು ಆಚರಿಸಬೇಕೆಂಬುದು ಎರಡನೇ ಪಕ್ಷ.

ಅಂತಹ ನಿರ್ಣಯಜ್ಞರಾದ ಅಮುಖ್ಯಗುರುಗಳೂ ಕೂಡ ದೊರಕದೇ ಇದ್ದಾಗ ತನಗಿಂತಲೂ ಚೆನ್ನಾಗಿ ಅಧಿಕವಾಗಿ ಜ್ಞಾನವಂತರಾದವರಿಂದಲಾದರೂ ಶ್ರವಣಾದಿಗಳನ್ನು ಮಾಡಬೇಕು. ಸರ್ವಥಾ ತನಗಿಂತಲೂ ಅಧಮರಿಂದ ಎಂದಿಗೂ ಶ್ರವಣಾದಿಗಳನ್ನು ಮಾಡಲೇಬಾರದು. ಇದು ಮೂರನೇ ಕಲ್ಪ. ತನಗಿಂತಲೂ ಅಧಿಕಜ್ಞಾನಿಯಾದವರು ಸಿಗದಿದ್ದಪಕ್ಷದಲ್ಲಿ ಮಹಾತ್ಮರಾದ ವಿಷ್ಣುಭಕ್ತ್ಯಾದಿ ಗುಣ ಸಂಪನ್ನರಾದವರ ಮೂಲಕವಾಗಿ ಶ್ರವಣಾದಿಗಳನ್ನು ಮಾಡಿ ಅಜ್ಞಾನ ಸಂಶಯ ಭ್ರಾಂತಿಗಳನ್ನು ಪರಿಹರಿಸಿಕೊಳ್ಳಬೇಕು. ಇದು ನಾಲ್ಕನೆಯ ಕಲ್ಪ.

ತನಗಿಂತಲೂ ಜ್ಞಾನದಲ್ಲಾಗಲೀ, ವಿಷ್ಣುಭಕ್ತ್ಯಾದಿಗುಣಗಳಿಂದಾಗಲೀ ಅಧಿಕರಾದವರು ಸಹ ಸಿಗದಿರುವಾಗ ಸತ್ಸಿದ್ಧಾಂತವನ್ನು ತ್ಯಾಗಮಾಡದಂತೆ ತಾನೇ ಸ್ವತಃ ಅಭ್ಯಾಸ ಮಾಡುವುದಲ್ಲದೇ ತನ್ನ ಶಿಷ್ಯರಿಗೂ ಉಪದೇಶ ಮಾಡಬೇಕು. ಇದು ಕಡೆಯ ಕಲ್ಪ. ಪ್ರಾಮಾಣಿಕವಾಗಿ ಅಭಿಮತವಾದ ಅರ್ಥವೇ ಸಿದ್ಧಾಂತವು. ಸತ್ಸಿದ್ಧಾಂತದ ಪರಿತ್ಯಾಗವು ಮಹಾ ಪಾಪಕ್ಕೆ ಕಾರಣವಾಗುತ್ತದೆ.

ಸಿದ್ಧಾಂತವು-ಪರಸಿದ್ಧಾಂತವೆಂದೂ-ಅಪರಸಿದ್ಧಾಂತವೆಂದೂ ಎರಡು ಬಗೆಯಾಗಿದೆ. ಭಗವದ್ವಿಷಯವಾದುದು ಪರಸಿದ್ಧಾಂತವು. ತದಿತರ ಜಗದ್ವಿಷಯಕವಾದುದು ಅಪರಸಿದ್ಧಾಂತವವು. ಪ್ರತ್ಯೇಕವಾಗಿ ವಾಚನಿಕ ಮತ್ತು ಆನುಷಂಗಿಕವೆಂಬುದಾಗಿ ಎರಡೂ ಎರಡು ಬಗೆಯಾಗಿದೆ.

ಪ್ರಧಾನವಾಗಿ ಉಕ್ತವಾಗಿರುವುದು ವಾಚನಿಕವಾದುದು ಪರಸಿದ್ಧಾಂತವು. ಅದಕ್ಕೆ ಉಪಪಾದಕವಾಗಿರುವುದು ಆನುಷಂಗಿಕವಾದ ಪರಸಿದ್ಧಾಂತವು.

ಈ ಪೈಕಿ ವಾಚನಿಕವಾದ ಪ್ರಧಾನವಾದ ಸಿದ್ಧಾಂತವು ಯಾವುದೆಂದರೆ-

“ಶ್ರೀ ವಿಷ್ಣುವು ಅಶೇಷಗುಣಪರಿಪೂರ್ಣನು, ಸಕಲದೋಷವರ್ಜಿತನು ಯಥಾಯೋಗ್ಯವಾಗಿ ಸಕಲ ಜಗಜ್ಜನ್ಮಾದಿಕಾರಣನು ಎಂಬುದಾಗಿ ಸಾಕ್ಷಾತ್ತಾಗಿ ಪರಬ್ರಹ್ಮನ ಸ್ವರೂಪನಿಶ್ಚಯಕ್ಕಾಗಿ ಪ್ರವೃತ್ತವಾಗಿರುವ ಜನ್ಮಾದಿಸೂತ್ರಗಳಲ್ಲಿ ಉಕ್ತವಾಗಿರುವುದು, ವಾಚನಿಕವಾದ ಪರಸಿದ್ಧಾಂತವು. ಅದಕ್ಕೆ ಉಪಪಾದಕವಾಗಿರುವುದು ಆನುಷಂಗಿವಾದ ಪರಸಿದ್ಧಾಂತವು ಯಾವುದೆಂದರೆ-ಶ್ರೀ ವಿಷ್ಣುವಿನ ಸರ್ವತಂತ್ರ ಸ್ವತಂತ್ರತ್ವವು; ಶ್ರೀ ವಿಷ್ಣುವಿಗೆ ಪ್ರಕೃತಿ, ಜೀವರಾಶಿ, ಜಡವರ್ಗ ಇವುಗಳಿಂದ ಅತ್ಯಂತ ಭಿನ್ನತ್ವವು, ಶ್ರೀ ಹರಿಗೆ ಸ್ವಗತಭೇದವರ್ಜಿತತ್ವವು ಇವೆಲ್ಲವೂ ಪ್ರಧಾನ ಪ್ರಮೇಯಗಳಾದ ನಿರ್ದೋಷತ್ವಕ್ಕೂ, ಗುಣಪರಿಪೂರ್ಣತ್ವಕ್ಕೂ ಅದಕ್ಕೆ ಉಪಪಾದಕವಾದ ಜಗಜ್ಜನ್ಮಾದಿ ಕರ್ತೃತ್ವಕ್ಕೂ ಉಪಪಾದಕಗಳಾಗಿವೆಯಾದುದರಿಂದ ಆನುಷಂಗಿಕವಾದ ಪರಸಿದ್ಧಾಂತಗಳಾಗಿವೆ.

ಪರಮಾತ್ಮನಿಗೆ ಗುಣಪರಿಪೂರ್ಣತ್ವವು, ನಿರ್ದೋಷತ್ವವು, ಸಕಲಜಗಜ್ಜನ್ಮಾದಿಕಾರಣತ್ವವು ಸಿದ್ಧಿಸಬೇಕಾದರೆ ಪರಮಾತ್ಮನಿಗೆ ಅಮುಕ್ತವರ್ಗ ಮತ್ತು ಮುಕ್ತವರ್ಗದಿಂದ ಅತ್ಯಂತ ಭೇದವನ್ನು ಒಪ್ಪಲೇಬೇಕು. ಸರ್ವಸ್ವಾತಂತ್ರ್ಯವನ್ನು ಅಂಗೀಕರಿಸಲೇಬೇಕು. ಸಂಸಾರಾವಸ್ಥೆಯಲ್ಲಿ ಜೀವಬ್ರಹ್ಮರಿಗೆ ಭೇದವನ್ನು ಹೇಳಿ ಮುಕ್ತಿಯಲ್ಲಿ ಪರಮಾತ್ಮನಿಗೂ ಜೀವರಿಗೂ ಅಭೇದವನ್ನು ಕೆಲವರು ಹೇಳುವರು. ಅದು ಅತ್ಯಂತ ಅಸಂಗತ. ಮೊದಲು ಭಿನ್ನವಾದದ್ದು ಅನಂತರದಲ್ಲಿ ಅಭಿನ್ನತೆಯನ್ನು ಹೊಂದುವುದು ಎಲ್ಲೂ ಎಂದಿಗೂ ಯಾರಿಂದಲೂ ಕಂಡಿಲ್ಲ. ಕೇಳಿಲ್ಲ. ಅದು ಅತ್ಯಂತ ಅಸಂಭವ. ಅನುಭವ ವಿರುದ್ಧ, ಸಂಸಾರಾವಸ್ಥೆಯಲ್ಲೂ ಜೀವಬ್ರಹ್ಮರಿಗೆ ಅಭೇದವನ್ನು ಹೇಳುವುದಂತೂ ಪರಮಾತ್ಮನಿಗೆ ದೋಷವನ್ನೇ ಹೇಳಿದಂತಾಗುವುದರಿಂದ ಇದು ಪ್ರಮಾಣವಿರುದ್ಧಮಾತ್ರವಲ್ಲದೇ ಸಾಕ್ಷಿ ಪ್ರತ್ಯಕ್ಷ ವಿರುದ್ಧವಾಗಿದೆ. ನಾನು ದುಃಖಿಯಾಗಿದ್ದೇನೆ. ಅಸ್ವತಂತ್ರನಾಗಿದ್ದೇನೆ. ಅಲ್ಪಶಕ್ತಿಯುಳ್ಳವನಾಗಿರುತ್ತೇನೆ. ಅಲ್ಪಜ್ಞನಾಗಿರುತ್ತೇನೆ. ನಾನು ಸರ್ವಜ್ಞನಲ್ಲ. ಅಪೂರ್ಣನಾಗಿರುವೆನು. ಇತ್ಯಾದಿಯಾಗಿ ಸಕಲಜೀವರಿಗೂ ಅಬಾಧಿತವಾದ ಅನುಭವವು ಬರುತ್ತಲಿದೆ. ಇದಕ್ಕೆ ಎಂದೆಂದಿಗೂ ಬಾಧವು ಕಂಡುಬಂದಿಲ್ಲ. ಅಭೇದವಾಕ್ಯವು ಮೇಲೆ ಕಂಡ ಅಬಾಧಿತಗಳಾದ ಪ್ರಬಲವಾದ ಸಾಕ್ಷಿ ಪ್ರತ್ಯಕ್ಷಕ್ಕೆ ವಿರುದ್ಧವಾಗಿರುವ ಪ್ರಯುಕ್ತ ಪರಮಾತ್ಮನಿಗೂ ಅಮುಕ್ತರಾದ ಜೀವರಿಗೂ ಮುಕ್ತರಾದ ಜೀವರಿಗೂ ಅತ್ಯಂತ ಭೇದವನ್ನೇ ಹೇಳಬೇಕು. ಜೀವಬ್ರಹ್ಮರ ಅಭೇದವಾಕ್ಯವು ಹೇಗೆ ಪ್ರಮಾಣವಿರುದ್ಧವೋ ಅದರಂತೆ ಭೇದಾಭೇದ ವಾಕ್ಯವೂ ಸಹ ಅತ್ಯಂತ ಅಸಂಗತವಾಗಿಯೇ ಇದೆ. ಜೀವಬ್ರಹ್ಮರಿಗೆ ಭೇದಾಭೇದವನ್ನು ಹೇಳತಕ್ಕವರ ಪಕ್ಷದಲ್ಲಿ ಭೇದದಿಂದ ಪರಮಾತ್ಮನಿಗೆ ದೋಷವು ಬಾರದಿರುವುದಾದರೂ ಅಭೇದದಿಂದ ದೋಷಕ್ಕೆ ಅವಕಾಶವಾಗುತ್ತದೆ. ಒಂದು ವೇಳೆ ಅಭೇದದಿಂದ

ಸಂಭವಿಸಬಹುದಾದ ದೋಷವನ್ನು ಭೇದಾಭೇದಕೋಟಿ ಪ್ರವಿಷ್ಟವಾದ ಭೇದವು ತಡೆಗಟ್ಟುವುದಾದರೆ ಆಡಿನ ಕುತ್ತಿಗೆಯ ಮೊಲೆಯಂತೆ ನಿಷ್ಪ್ರಯೋಜಕವಾದ ಅಭೇದವನ್ನು ಹೇಳದಿರುವುದೇ ಉತ್ತಮ ಮಾರ್ಗ.

**ಅಹರಸಿದ್ಧಾಂತದ ಸ್ವರೂಪ** :- ಪರಮಾತ್ಮನಂತೆ ಶ್ರೀ ರಮಾದೇವಿಯೂ ಸಹ ದೋಷರಹಿತಳಾಗಿದ್ದಾಳೆ. ಆದರೆ ಪರಮಾತ್ಮನ ಮಾತ್ರ ಅಧೀನತೆಯು ಇದೆ. ಬ್ರಹ್ಮ, ಸರಸ್ವತೀ, ಗರುಡ, ಶೇಷ, ರುದ್ರರು ಅವರ ಪತ್ನಿಯರು, ಇಂದ್ರ ಕಾಮ ಇತ್ಯಾದಿ ದೇವತೆಗಳು ಸಂಸಾರಾವಸ್ಥೆಯಲ್ಲೂ, ಮುಕ್ತಿಯ ದಶೆಯಲ್ಲೂ, ತಾರತಮ್ಯದಿಂದಿರುತ್ತಾರೆ. ಇದೇ ರೀತಿ ಅಚೇತನಾತ್ಮಕವಾದ ಈ ಪ್ರಪಂಚವೂ ಸಹ ಸತ್ಯವೇ ಆಗಿದೆ. ಇವೆಲ್ಲವನ್ನೂ ಒಳಗೊಂಡಂತಿರುವುದೇ ಅವರ ಸಿದ್ಧಾಂತವು.

ಇಂತಹ ಸಿದ್ಧಾಂತದ ಶ್ರವಣಾದಿಗಳನ್ನು ಯಾವಾಗಲೂ ಸಾತ್ವಿಕಜೀವರು ಮಾಡಬೇಕೆಂದೂ ಶ್ರವಣಾದಿಗಳಿಲ್ಲದಂತೆ ಒಂದು ಕ್ಷಣವನ್ನೂ ವ್ಯರ್ಥವಾಗಿ ಕಳೆಯಕೂಡದೆಂದೂ, ಅತ್ಯಶಕ್ಯವಾದ ಅಪರಿಹಾರ್ಯವಾದ ಗಾಢನಿದ್ರಾಕಾಲದ ಹೊರತಾಗಿ ಮಿಕ್ಕ ಸಮಯದಲ್ಲಿ ಮತ್ತೆ ಮತ್ತೆ ಸಚ್ಛಾಸ್ತ್ರಶ್ರವಣಾದಿಗಳನ್ನು ಮಾಡಲೇಬೇಕೆಂದು ಶ್ರೀಮದಾಚಾರ್ಯರು ಆದೇಶವಿತ್ತಿರುವುದಲ್ಲದೇ ಈ ಮೇಲೆ ವಿವರಿಸಿದ ಸಿದ್ಧಾಂತವನ್ನು ಸಾಕ್ಷಾತ್ ಬಾದರಾಯಣ ರೂಪಿಯಾದ ಶ್ರೀಹರಿಯೇ ಬ್ರಹ್ಮಸೂತ್ರಗಳಲ್ಲಿ ನಿರ್ಣಯಿಸಿರುತ್ತಾರೆಂದೂ ಇದಕ್ಕೆ ವಿರುದ್ಧವಾದವುಗಳೆಲ್ಲಾ ಅಂಧ ತಮಸ್ಸಿಗೆ ಕಾರಣವಾಗುವುದೆಂದು ಎಚ್ಚರಿಸಿರುತ್ತಾರೆ.

ಮತ್ತು ಇದಕ್ಕೆ ವಿರುದ್ಧವಾದ ಗ್ರಂಥಗಳ ವಿಷಯದಲ್ಲಿ ಶ್ರೀಮದಾಚಾರ್ಯರ ವಾಣಿಯೂ ಮತ್ತು ಅದಕ್ಕೆ ವ್ಯಾಖ್ಯಾನ ವಾಗಿರುವ ಶ್ರೀಮನ್ನ್ಯಾಯಸುಧೆಯ ವಾಕ್ಯವೂ ಕಾಲಹರಣಕ್ಕಾಗಿ ವ್ಯರ್ಥವಾದ ಭಾಷಾಮಯವಾದ ಕಾದಂಬರಿಗಳನ್ನು ಆದರಿಸುವ ಸಾತ್ವಿಕಚೇತನರಿಗೆ ತಕ್ಕ ಎಚ್ಚರಿಕೆಯನ್ನೂ ಸ್ಫೂರ್ತಿಯನ್ನೂ ಉಂಟುಮಾಡುತ್ತಿದೆ. ಅಸಚ್ಛಾಸ್ತ್ರಗಳನ್ನು ನಂಬಿರುವುದು ಒಂದು ಉಪಪಾತಕವೆಂದು ಪ್ರಾಜ್ಞರ ಅಭಿಪ್ರಾಯ. ನಾಲ್ಕು ವೇದಗಳು, ಮಹಾಭಾರತ, ಮೂಲರಾಮಾಯಣ ಅದಕ್ಕೆ ಅನುಸಾರಿಗಳಾದ ಸ್ಮೃತಿಗಳು, ವೈಷ್ಣವ ಪುರಾಣಗಳು, ಪ್ರಾಚೀನಗಳಾದ ಸಾಂಖ್ಯ ಯೋಗಗಳು ಬ್ರಹ್ಮತರ್ಕ, ಬ್ರಹ್ಮ ಮೀಮಾಂಸಾಶಾಸ್ತ್ರ ಮತ್ತು ದೋಷರಹಿತಗಳೆಂದು ಪ್ರಸಿದ್ಧಗಳಾದ ಪರಮಾತ್ಮ ಪ್ರತ್ಯಕ್ಷ, ರಮಾ ಪ್ರತ್ಯಕ್ಷ ಮತ್ತು ಮುಕ್ತ ಪ್ರತ್ಯಕ್ಷ ಮತ್ತು ಪ್ರತ್ಯಕ್ಷಾಗಮಮೂಲಕವಾದ ಯುಕ್ತಿಗಳು ಮೊದಲಾದವುಗಳೆಲ್ಲಾ ಸಚ್ಛಾಸ್ತ್ರಗಳೆಂದೂ, ಇದಕ್ಕೆ ವಿರುದ್ಧ ವುಗಳೆಲ್ಲವೂ ದುಶ್ಶಾಸ್ತ್ರಗಳೆಂದೂ, ಸಚ್ಛಾಸ್ತ್ರಗಳನ್ನು ನಿರಂತರದಲ್ಲೂ ಅಭ್ಯಾಸ ಮಾಡಬೇಕೆಂದೂ ಹೇಳಿ ಕಡೆಯದಾಗಿ

**''ಸಚ್ಛಾಸ್ತ್ರಮಭ್ಯಸೇತ್ ನಿತ್ಯಂ ದುಶ್ಶಾಸ್ತ್ರಂತು ಪರಿತ್ಯಜೇತ್''। (ಅನುವ್ಯಾಖ್ಯಾನ)**

ಎಂದು ಅನುವ್ಯಾಖ್ಯಾನದಲ್ಲಿ ತಿಳಿಸಿದ್ದಾರೆ. ಈ ಸಂದರ್ಭದಲ್ಲಿ ನ್ಯಾಯಸುಧಾಕಾರರು ''ದುಶ್ಶಾಸ್ತ್ರಂನಾಭ್ಯಸೇತ್'' ಇತಿ ವಕ್ತವ್ಯೇ ''ಪರಿತ್ಯಜೇತ್'' ಇತಿ ವಚನಂ ನ ಕೇವಲಂ ತತ್ರ ಉದಾಸೀನತ್ವಂ, ಕಿಂತು ಹೇಯತಯಾಜ್ಞಾನಮಪಿಭಾವ್ಯಮಿತಿ ಜ್ಞಾಪಯಿತುಂ'' ಎಂದು ವಿವರಿಸಿ ಎಚ್ಚರಿಸಿದ್ದಾರೆ.

ಇನ್ನು ಮುಂದೆ ಬ್ರಹ್ಮಸೂತ್ರಗಳಿಗೆ ಸಂಬಂಧಪಟ್ಟ ಹೆಚ್ಚು ವಿವರವನ್ನು ತೋರಿಸಲಾಗುತ್ತದೆ.

ಬ್ರಹ್ಮಸೂತ್ರಗಳ ಒಟ್ಟು ಸಂಖ್ಯೆ ೫೬೪. ಸಂಖ್ಯೆಯನ್ನು ಶ್ರೀಮಧ್ವಾಚಾರ್ಯರು ಸೂತ್ರಭಾಷ್ಯದಲ್ಲಿನ "ಬ್ರಹ್ಮಶಬ್ದಶ್ಚ ವಿಷ್ಣಾವೇವ" ಎಂಬ ಪದದಿಂದ ಸೂಚಿಸಿರುತ್ತಾರೆ. ವಿಷ್ಣು ಎಂಬ ಪದದಲ್ಲಿ ವಿ. ಷ. ಣ. ಎಂಬ ಮೂರು ಅಕ್ಷರಗಳ ದೃಷ್ಟಿಯಿಂದ ಮೂರು ಸಂಖ್ಯೆಗಳು ವಿವಕ್ಷಿತಗಳಾಗಿವೆ.

ವಿ - ಷ - ಣ

೪ - ೬ - ೫ ಕಟಪಯಾದಿ ಭಂಗಿಯಿಂದ ಅಂಕಾನಾಂ ವಾಮತೋಗತಿಃ ಎಂಬ ಪ್ರಕ್ರಿಯೆಯನ್ನು ಅನುಸರಿಸಿ ಒಟ್ಟು ೫೬೪ ಸೂತ್ರಗಳೆಂದು ನಿರ್ಣೀತವಾಗಿದೆ. ಶಂಕರಭಾಷ್ಯದ ರೀತ್ಯಾ ೫೫೫. ರಾಮಾನುಜ ಭಾಷ್ಯದ ಪ್ರಕಾರ ಸೂತ್ರಗಳ ಸಂಖ್ಯಾ ೫೪೫. ಶ್ರೀಮಧ್ವಭಾಷ್ಯದಲ್ಲಿರುವಂತೆ ಇತರ ಭಾಷ್ಯಕಾರರ ಭಾಷ್ಯಗಳಲ್ಲಿ ಸೂತ್ರಗಳ ಸಂಖ್ಯೆಯನ್ನು ಸೂಚಿಸುವ ಯಾವ ಅಂಶವೂ ಕಂಡುಬಂದಿಲ್ಲ.

ಸೂತ್ರಲಕ್ಷಣ :- ಅಲ್ಪಾಕ್ಷರಮಸಂದಿಗ್ಧಂ ಸಾರವದ್ವಿಶ್ವತೋಮುಖಮ್।
ಅಸ್ತೋಭಮನವದ್ಯಂ ಚ ಸೂತ್ರಂ ಸೂತ್ರವಿದೋವಿದುಃ ॥

೧. ವಿವರಣೆ:- ಅಲ್ಪಾಕ್ಷರತ್ವಂ = ಎಷ್ಟು ಅಕ್ಷರಗಳಿಲ್ಲದವಕ್ಷದಲ್ಲಿ ವಿವಕ್ಷಿತವಾದ ಅರ್ಥವು ಸಿದ್ಧಿಸುವುದಿಲ್ಲವೋ ಅದಕ್ಕೆ ಅಧಿಕವಾದ ಅಕ್ಷರಗಳ ಇಲ್ಲದಿರುವಿಕೆಯು.

೨. ಅಸಂದಿಗ್ಧತ್ವಂ :- ಹೀಗೂ ಆಗಬಹುದು, ಹಾಗೂ ಆಗಬಹುದೆಂದು ಸಂದೇಹಕ್ಕೆ ಅವಕಾಶವಾಗದಿರುವಂತೆ, ಹೀಗೆಯೇ ಸರಿ ಎಂದು ನಿಷ್ಕರ್ಷೆಯಾಗಿ ತಿಳಿಸುವಿಕೆಯು.

೩. ಸಾರವತ್ವಂ = ವಿಶಿಷ್ಟಾರ್ಥತಾ = ಅನನ್ಯ ಲಭ್ಯವಾದ ಉತ್ತಮವಾದ ಅರ್ಥವುಳ್ಳವಿಕೆಯು.

೪. ವಿಶ್ವತೋಮುಖತ್ವಂ = ಬಹುಶಾಖಾ ನಿರ್ಣಾಯಕತ್ವವು. ಸರ್ವಶಾಖಾಗತವಾದ ಪದದ ಅಥವಾ ವಾಕ್ಯದ ಅರ್ಥ ನಿರ್ಣಾಯಕತ್ವವು ಅಥವಾ ಒಂದು ಪ್ರಯೋಜನವನ್ನು ಕುರಿತು ಅಪೇಕ್ಷಿತವಾದ ಎಲ್ಲಾ ಅರ್ಥಗಳನ್ನು ಪ್ರತಿಪಾದಿಸುವಿಕೆಯು.

೫. ಅಸ್ತೋಭತ್ವಂ = ಪ್ರಕೃತವಾದ ಅರ್ಥವನ್ನು ಕೊಡದಿರುವುದು ಮಾತ್ರವಲ್ಲದೇ ಸಾಮವೇದದಲ್ಲಿನ ಸಾಮಗಾನಭಾಗ ಪೂರ್ತಿಯಾಗಲಿಕ್ಕಾಗಿ, ಪ್ರಯೋಗಿಸುವ ಪ್ರಕೃತಕ್ಕೆ ವ್ಯರ್ಥವಾಗಿರುವ ಅಕ್ಷರಗಳಿಲ್ಲದಿರುವುದು.

೬. ಅನವದ್ಯತ್ವಂ = ಅಪಶಬ್ದಗಳಿಲ್ಲದಿರುವುದು.

ಈ ಆರು ಧರ್ಮಗಳ ಪೈಕಿ ಕೆಲವು ಟಿಪ್ಪಣೀಕಾರರು ಅಂದರೆ ತತ್ವಪ್ರದೀಪಕಾರರು ಆರೂ ಲಕ್ಷಣ ಘಟಕಗಳೆಂದು ತಿಳಿಸುತ್ತಾರೆ.

ಮತ್ತೆ ಕೆಲವರು ಅಂದರೆ ಶ್ರೀ ವಾದಿರಾಜರು ಅಲ್ಪಾಕ್ಷರತ್ವೇ ಸತಿ ವಿಶ್ವತೋಮುಖತ್ವವು ಮಾತ್ರವೇ ಲಕ್ಷಣ ಘಟಕಗಳೆಂದೂ, ಬಾಕಿ ನಾಲ್ಕು ವಿಶೇಷಣಗಳು ಸ್ವರೂಪ ಪರಿಚಾಯಕಗಳೆಂದೂ ನಿರ್ಣಯಿಸಿದ್ದಾರೆ. ಮತ್ತೆ ಕೆಲವರು ಅಂದರೆ

ಗುರುರಾಜೇವ್ಯಾಖ್ಯಾಕಾರರು ವಿಶ್ವತೋಮುಖತ್ವಮೇವ ಸೂತ್ರಲಕ್ಷಣವೆಂದು ಹೇಳಿದ್ದಾರೆ. ಈ ರೀತಿ ಸೂತ್ರ ಲಕ್ಷಣಘಟಕ ಪದ ಪ್ರಯೋಜನದ ವಿಷಯದಲ್ಲಿ ಮೂರು ತರಹೆಯ ಅಭಿಪ್ರಾಯವು ಕಂಡುಬಂದಿದೆ.

ಅಧಿಕರಣಸ್ವರೂಪ :- ವಿಷಯೋ ವಿಶಯಶ್ಚೈವ ಪೂರ್ವಪಕ್ಷಸ್ತಥೋತ್ತರಃ ।
ಪ್ರಯೋಜನಂ ಚ ಪಂಚೈ (ತೇ) ತಾನ್ ಪ್ರಾಂಚೋ
(ತಂತ್ರೇ)ಽಧಿಕರಣಂ ವಿದುಃ ॥ ಇತಿ ॥

ಎಂಬಂತೆ ಪ್ರತಿಯೊಂದು ಅಧಿಕರಣದಲ್ಲಿಯೂ ಐದು ಅವಯವಗಳನ್ನೊಳಗೊಂಡಂತೆ ಅಧಿಕರಣ ಸ್ವರೂಪವು ಕಂಡುಬಂದಿದೆ. ಅಧಿಕರಣ ಶರೀರಭೂತಗಳಾದ ವಿಷಯಾದಿ ಪಂಚಕಗಳು-

೧. ವಿಷಯ ೨. ವಿಶಯ = ಸಂದೇಹ ೩. ಪೂರ್ವಪಕ್ಷ ೪.ಸಿದ್ಧಾಂತ ೫. ಪ್ರಯೋಜನ.

ಸಾಮಾನ್ಯವಾಗಿ ಐದು ಸಂಗತಿಗಳು ಅಧಿಕರಣಗಳಲ್ಲಿ ಪರಿಗಣಿತಗಳಾಗಿವೆ. ಅವು ಯಾವೆಂದರೆ-

೧. ಶಾಸ್ತ್ರಾಂತರ್ಭಾವಸಂಗತಿ
೨. ಅಧ್ಯಾಯಾಂತರ್ಭಾವಸಂಗತಿ
೩. ಪಾದಾಂತರ್ಭಾವಸಂಗತಿ
೪. ಅಧಿಕರಣಸಂಗತಿ
೫. ಶ್ರುತಿಸಂಗತಿ

ಈ ಸಂಗತಿಗಳನ್ನು ವ್ಯಾಖ್ಯಾಕಾರರು ಹೀಗೆ ಸಂಗ್ರಹಿಸಿರುತ್ತಾರೆ.

**ಅಧಿಕರಣಾನಾಂ ಹಿ ಸಂಗತಿಸ್ತಾವದ್ದ್ವೇಧಾ ।**
**ಅಂತರ್ಭಾವರೂಪಾ-ಆನಂತರ್ಯರೂಪಾಚೇತಿ ।**
**ತತ್ರಾದ್ಯಾ ಶಾಸ್ತ್ರಾಂತರ್ಭಾವರೂಪಾ-ಅಧ್ಯಾಯಾಂತರ್ಭಾವ - ಪಾದಾಂತರ್ಭಾವಭೇದೇನ ತ್ರೇಧಾ ।**
**ದ್ವಿತೀಯಾಪಿ ಆಕ್ಷೇಪಿಕೀ ಆತಿದೇಶಿಕೀ, ಉಪೋದ್ ಘಾತಿಕೀ ಆಪವಾದಿಕೀ ಪ್ರಸಂಗಶ್ಚೇ ತ್ಯಾದಿರೂಪೇಣಾನೇಕಧಾ ।**
**ಏವಮನೇಕವಿಧಾ ಆನಂತರ್ಯರೂಪಾ ಸಂಗತಿಃ ॥ ಇತಿ ॥**

ಈ ಐದು ಸಂಗತಿಗಳ ಸಂಗ್ರಾಹಕವಾದ ಕಾರಿಕೆಯು ಈ ರೀತಿ ಇದೆ.

**ಶಾಸ್ತ್ರೇಽಧ್ಯಾಯೇ ತಥಾ ಪಾದೇ ಶೃತ್ಯಾಧಿಕರಣೇನ ಚ ।**
**ಸಂಗತಿಃ ಪಂಚಧಾ ಪ್ರೋಕ್ತಾ ಸರ್ವಾಧಿಕರಣೇಷ್ವಪಿ ॥ ಇತಿ ॥**

ಈ ಐದರಲ್ಲಿ ಶಾಸ್ತ್ರಸಂಗತಿಯೂ, ಅಧ್ಯಾಯಸಂಗತಿಯೂ, ಪಾದಸಂಗತಿಯೂ, ಈ ಮೂರೂ ಅಂತರ್ಭಾವ ಸಂಗತಿಯ ಪ್ರಭೇದವಾಗಿದೆ. (ಅನಂತ) ಆನಂತರ್ಯ ಸಂಗತಿಯಾದರೋ, ಅನೇಕ ಬಗೆಯಾಗಿದೆ.

ಆಕ್ಷೇಪಿಕೀ, ಆತಿದೇಶಿಕೀ, ಉಪೋದ್ ಘಾತ, ಅಪವಾದಿಕೀ ಪ್ರಸಂಗ ಎಂದು ನಾನಾ ಬಗೆ ಉಂಟು.

**ಕಾರಿಕಾ:-** **ಆಕ್ಷೇಪಿಕ್ಯಾತಿದೇಶಿಕ್ಯೌ ಉಪೋದ್ ಘಾತಾಪವಾದಿಕೇ ।**
**ಪ್ರಸಂಗಶ್ಚೇತ್ಯಾದಿರೂಪಾ ಸಾಚಾನಂತರ್ಯಲಕ್ಷಣಾ ॥೧೩॥**

**ಆಕ್ಷೇಪಿಕೀ ಸಂಗತಿ:-** ಹಿಂದೆ ಪ್ರಸಕ್ತವಾದ ವಿಷಯದ ಬಗ್ಗೆ ಅಥವಾ ಫಲದ ವಿಚಾರವಾಗಿ ಆಕ್ಷೇಪಿಸಿ ಪೂರ್ವಪಕ್ಷವು ಉಂಟಾದಾಗ ಆಕ್ಷೇಪಿಕೀ ಸಂಗತಿಯು.

**ಉದಾ:-** ಜನ್ಮಾಧಿಕರಣದಲ್ಲಿ ಗುಣಪೂರ್ಣತ್ವ ಪ್ರಕಾರಕ ಜಿಜ್ಞಾಸಾಕ್ಷೇಪದಿಂದ ಪೂರ್ವಪಕ್ಷವು ಉಂಟಾಗಿರುವುದರಿಂದ ಆಕ್ಷೇಪಿಕೀಸಂಗತಿಯು ಕಂಡುಬಂದಿದೆ. ಅದರಂತೆ ಈಕ್ಷತ್ಯಧಿಕರಣದಲ್ಲಿ ಮುಖ್ಯವೃತ್ತಿಯಿಂದ ಸರ್ವಶಾಸ್ತ್ರ ತಾತ್ಪರ್ಯವಿಷಯನು ಬ್ರಹ್ಮನೆಂದು ಹಿಂದಿನ ಸಮನ್ವಯಾಧಿಕರಣದಲ್ಲಿ ಉಕ್ತವಾಗಿರುವುದನ್ನು ಆಕ್ಷೇಪಿಸಿ ಪೂರ್ವಪಕ್ಷವು ಉಂಟಾಗಿರುವುದರಿಂದ ಆಕ್ಷೇಪಿಕೀಸಂಗತಿಯು ಉಕ್ತವಾಗಿದೆ.

**ಆತಿದೇಶಿಕೀ:-** ಆಕಾಶಾಧಿಕರಣದಲ್ಲಿ ಆತಿದೇಶಿಕೀಸಂಗತಿಯು ಕಂಡುಬಂದಿದೆ. ಅಂತಸ್ತ್ವಾಧಿಕರಣದಲ್ಲಿ ನಿರ್ಣಯಿಸಿರುವಂತೆ ಇಂದ್ರಾದಿಶಬ್ದಗಳು ಈಶ್ವರವಾಚಿಗಳಾದಾಗ್ಯೂ ಆಕಾಶಪ್ರವೃತ್ತಿಹೇತುಭೂತವಾದ ವಿವರತ್ವವು ಜಡವಾದ ಅಚೇತನ ಧರ್ಮವಾಗಿರುವ ಪ್ರಯುಕ್ತ ಪರಮಾತ್ಮನ ಪ್ರಸಾದ ಅಧೀನತೆ ಇಲ್ಲದ ಕಾರಣ ಆಕಾಶ ಶಬ್ದವು ಪರಮಾತ್ಮವಾಚಿ ಹೇಗೆ ಎಂಬ ಅಧಿಕಾಶಂಕೆಯನ್ನು ಮಾಡಿ ಪೂರ್ವನ್ಯಾಯವನ್ನು ಅತಿದೇಶ ಮಾಡಿ ಪೂರ್ವಪಕ್ಷವು ಉಂಟಾಗಿರುವ ಪ್ರಯುಕ್ತ ಆತಿದೇಶಿಕೀ ಸಂಗತಿಗೆ ಇದು ಉದಾಹರಣೆ.

**ಉಪೋದ್ಘಾತಸಂಗತಿ:- ಚಿಂತಾಂ ಪ್ರಕೃತಸಿದ್ಧ್ಯರ್ಥಾಂ ಉಪೋದ್ಘಾತಂವಿದು: ಬುಧಾ: ।**
**ಎಂಬಂತೆ ಪ್ರಕೃತಪ್ರಮೇಯಸಿದ್ಧಿಗಾಗಿ ಚಿಂತನೆಯು.**
**ಪ್ರಕೃತೋಪಪಾದಕತ್ವಂ ಉಪೋದ್ಘಾತ: ।**

**ಅಪವಾದಿಕೀಸಂಗತಿ:-** ಅಂತಿಮಪ್ರಾಣಾಧಿಕರಣದಲಿ ಶ್ರುತಿಲಿಂಗಬಾಹುಲ್ಯದಿಂದ ಪೂರ್ವದಲ್ಲಿ ಸಿದ್ಧವಾದ ಸಿದ್ಧಾಂತ ನ್ಯಾಯದಿಂದ ಪೂರ್ವಪಕ್ಷದ ಪ್ರವೃತ್ತಿಯು ಕಂಡುಬಂದಿರುವ ಪ್ರಯುಕ್ತ ಅಪವಾದಿಕೀಸಂಗತಿ ಎಂದು ಪ್ರತಿಪಾದಿಸಲಾಗಿದೆ.

**ಪ್ರಸಂಗಸಂಗತಿ:-** ಸ್ಮೃತಸ್ಯ ಉಪೇಕ್ಷಾನರ್ಹತ್ವಂ ಪ್ರಸಂಗ ಎಂದು ಪ್ರಸಿದ್ಧವಾಗಿದೆ.

**ಅವಸರಸಂಗತಿ:-** ಅನಂತರವಕ್ತೃವ್ಯತ್ವಂ ಅವಸರಸಂಗತಿಯು ಅವಶ್ಯವಕ್ತವ್ಯತ್ವಂ ವಾ ಅವಸರಸಂಗತಿ:

**ಅಧಿಕರಣಸಂಗತಿ:-** ಹಿಂದಿನ ಅಧಿಕರಣದಿಂದ ಮುಂದಿನ ಅಧಿಕರಣಕ್ಕೆ ಇರುವ ಸಂಗತಿಯು ಅಧಿಕರಣಸಂಗತಿ.

**ಶ್ರುತಿಸಂಗತಿ:-** ಹಿಂದಿನ ಅಧಿಕರಣದಲ್ಲಿನ ವಿಷಯವಾಕ್ಯದಿಂದ ಮುಂದಿನ ಅಧಿಕರಣದ ವಿಷಯ ವಾಕ್ಯಕ್ಕೆ ಇರುವ ಸಂಗತಿಯು ಶ್ರುತಿಸಂಗತಿಯು. ನೈಯಾಯಿಕರಾದ ರಾಮರುದ್ರಭಟ್ಟಾಚಾರ್ಯರ ಪ್ರಕಾರ ಸಂಗತಿ ಸಾಮಾನ್ಯ ಲಕ್ಷಣವು

ಅನಂತರಾಭಿಧಾನ ಪ್ರಯೋಜಕ ಜಿಜ್ಞಾಸಾಜನಕ ಜ್ಞಾನವಿಷಯ ಸ್ಮರಣಾನುಕೂಲಸಂಬಂಧೋ ನಿರೂಪಣೀಯ ನಿಷ್ಠಾ ಸಂಗತಿಃ ।

**ಅದರ ಸಮನ್ವಯವು** :- ಪ್ರತ್ಯಕ್ಷನಿರೂಪಣೆಯ ಅನಂತರದಲ್ಲಿ ಅನುಮಾನ ನಿರೂಪಣೆಗೆ ಪ್ರಯೋಜಕವಾದ ಜಿಜ್ಞಾಸೆಯು = ಅನುಮಾನಜ್ಞಾನವು ನನಗೆ ಆಗಲಿ ಎಂಬುದು. ಅಂದರೆ ಅನುಮಾನಜ್ಞಾನೇಚ್ಛೆಯು, ಅಂತಹ ಜಿಜ್ಞಾಸಾಜನಕವಾದ ಜ್ಞಾನವು ಅನುಮಾನಂ ಮದಿಷ್ಟಸಾಧನಂ - ಅನುಮಾನವು ನನ್ನ ಇಷ್ಟಸಾಧನವು ಎಂಬ ಇಷ್ಟಸಾಧನತಾಜ್ಞಾನವು, ಅದಕ್ಕೆ ವಿಷಯವಾದುದು ಅನುಮಾನವು. ಅದರ ಸ್ಮರಣಾನುಕೂಲಸಂಬಂಧವು = ಅಂದರೆ ಅನುಮಾನನಿಷ್ಠವಾದ ಪ್ರತ್ಯಕ್ಷ ಕಾರ್ಯತ್ವರೂಪವಾದ ಸಂಬಂಧವು = ಇತಿ ಕಾರ್ಯತ್ವಸಂಗತಿಯು.

ಅನಂತರಾಭಿಧಾನ ಪ್ರಯೋಜಕ ಜಿಜ್ಞಾಸಾಜನಕಜ್ಞಾನ ಎಂಬ ದಳದಲ್ಲಿ ಸಂಗತಿನಿರೂಪಕಜ್ಞಾನಪ್ರಯೋಜ್ಯತ್ವ ಎಂಬ ವಿಶೇಷಣವನ್ನು ಕೊಡಬೇಕು.

ಅಂದರೆ ಸಂಗತಿನಿರೂಪಕಜ್ಞಾನಪ್ರಯೋಜ್ಯ ಅನಂತರಾಭಿಧಾನಪ್ರಯೋಜಕಜಿಜ್ಞಾಸಾಜನಕ ಜ್ಞಾನವಿಷಯ ಸ್ಮರಣಾನುಕೂಲಸಂಬಂಧತ್ವಂ-ಎಂದು ಸಂಗತಿಯ ಸಾಮಾನ್ಯ ಲಕ್ಷಣವು.

ಮೇಲೆ ಕಂಡಂತೆ ವಿಶೇಷಣವನ್ನು ಕೊಡದೇ ಇದ್ದರೆ ಘಟಾದಿಪದಾರ್ಥನಿರೂಪಣೆಯ ಅನಂತರದಲ್ಲಿ ಸಂಬಂಧ ವಿಶೇಷಜ್ಞಾನಾಧೀನವಾದ ಪ್ರತ್ಯಕ್ಷಜ್ಞಾನದಲ್ಲಿ ತತ್ಕಾರ್ಯತ್ವವಿರುವ ಪ್ರಯುಕ್ತ ಅನುಮಾನಸ್ಮರಣಬಂದಾಗ್ಯೂ ಪ್ರತ್ಯಕ್ಷಕಾರ್ಯತ್ವಕ್ಕೆ ಘಟಾದಿನಿರೂಪಕಸಂಗತಿತ್ವವು ಬರಬೇಕಾದೀತು. ಅನುಮಾನಜ್ಞಾನವು ಘಟಜ್ಞಾನ ಪ್ರಯೋಜ್ಯವಲ್ಲವಪ್ರಯುಕ್ತ ಆ ವಿಶೇಷಣವನ್ನು ಕೊಟ್ಟನಂತರ ಯಾವ ದೋಷವು ಇಲ್ಲ. ಚಕ್ಷುರಾದಿಗಳಿಂದ ವ್ಯಾಪ್ತಿ ಜ್ಞಾನವು ಉಂಟಾಗುವ ಪ್ರಯುಕ್ತ ಅನುಮಾನದಲ್ಲಿ ಪ್ರತ್ಯಕ್ಷಪ್ರಮಾಣ-ಕಾರ್ಯತ್ವರೂಪವಾದ ಉಪಜೀವಕತ್ವವು ಸಂಗತವಾಗುವುದು. ಅವರು ಸಂಗತಿಯನ್ನು ಆರು ಬಗೆಯೆಂದು ಹೇಳುತ್ತಾರೆ.

**"ಸಪ್ರಸಂಗ ಉಪೋದ್ಘಾತೋ ಹೇತುತಾವಸರಸ್ತಥಾ ।**
**ನಿರ್ವಾಹಕೈಕ್ಯಕಾರ್ಯೈಕ್ಯೇ ಷೋಢಾ ಸಂಗತಿರಿಷ್ಯತೇ ॥ ಇತಿ ॥**

ಪ್ರಸಂಗಸಂಗತಿ = ಸ್ಮರಣ ಪ್ರಯೋಜಕ ಸಂಬಂಧಃ ಪ್ರಸಂಗಃ

ಉಪೋದ್ಘಾತಃ = ಪ್ರಕೃತೋಪಪಾದಕತ್ವವು.

ಅವಸರಃ = ಅನಂತರವಕ್ತವ್ಯತ್ವಂ.

ನಿರ್ವಾಹಕೈಕ್ಯಂ = ಏಕಪ್ರಯೋಜಕಪ್ರಯೋಜ್ಯತ್ವಂ.

ಕಾರ್ಯೈಕ್ಯಂ = ಏಕಕಾರ್ಯಾನುಕೂಲತ್ವಂ - ಇತ್ಯಾದಿಯಾಗಿ ನೈಯ್ಯಾಯಿಕ ವಿವರಣೆಯ ಕಂಡುಬಂದಿದೆ.

ವೇದಾಂತಿಗಳ ಪರಿಭಾಷೆಯನ್ನು ಹಿಂದೆಯೇ ತಿಳಿಸಲಾಗಿದೆ.

ಬ್ರಹ್ಮಸೂತ್ರಗಳ ಅಧ್ಯಾಯ ಮತ್ತು ಪಾದಗಳು, ಅವುಗಳಲ್ಲಿ ಪ್ರತಿಪಾದಿಸಿರುವ ಸಮನ್ವಯದ ವಿವರವು ಮುಂದೆ ಕಂಡಂತಿದೆ.

ಬ್ರಹ್ಮಸೂತ್ರಗಳಲ್ಲಿನ ಅಧ್ಯಾಯಗಳ ವಿಭಾಗ :-

೧. ಮೊದಲನೆಯದು - ಸಮನ್ವಯಾಧ್ಯಾಯ.

೨. ಎರಡನೆಯದು-ಅವಿರೋಧಾಧ್ಯಾಯ.

೩. ಮೂರನೆಯದು-ಸಾಧನಾಧ್ಯಾಯ.

೪. ನಾಲ್ಕನೆಯದು-ಫಲಾಧ್ಯಾಯ.

# ಅಧ್ಯಾಯಗಳ ಪಾದ ವಿಭಾಗ ಮತ್ತು ಅದರ ಹೆಸರು

೧. ಸಮನ್ವಯಾಧ್ಯಾಯದಲ್ಲಿ - ೧. ಅನ್ಯತ್ರ ಪ್ರಸಿದ್ಧನಾಮಪಾದ.
೨. ಅನ್ಯತ್ರ ಪ್ರಸಿದ್ಧಲಿಂಗಪಾದ.
೩. ಉಭಯತ್ರ ಪ್ರಸಿದ್ಧನಾಮಲಿಂಗಪಾದ.
೪. ಅನ್ಯತ್ರೈವ ಪ್ರಸಿದ್ಧವಾದ ನಾಮಲಿಂಗಪಾದ .

೨ ಅವಿರೋಧಾಧ್ಯಾಯದಲ್ಲಿ -೧. ಯುಕ್ತಿಗಳ ಅವಿರೋಧಪಾದ.
೨. ಸಮಯಗಳ ಅವಿರೋಧಪಾದ
೩. ಪರಸ್ಪರ ಶ್ರುತಿವಾಕ್ಯಗಳ ಅವಿರೋಧಪಾದ.
೪. ನ್ಯಾಯೋಪೇತಶ್ರುತ್ಯವಿರೋಧಪಾದ.

೩. ಸಾಧನಾಧ್ಯಾಯದಲ್ಲಿ - ೧. ವೈರಾಗ್ಯಪಾದ.
೨. ಭಕ್ತಿಪಾದ.
೩. ಉಪಾಸನಾಪಾದ.
೪. ಜ್ಞಾನ (ಅಪರೋಕ್ಷಜ್ಞಾನ) ಪಾದ.

೪. ಫಲಾಧ್ಯಾಯದಲ್ಲಿ- ೧. ಕರ್ಮಕ್ಷಯಪಾದ.
೨. ದೇವತೆಗಳ ದೇಹಲಯ - ತದಿತರರ ಉತ್ಕ್ರಾಂತಿ ಇದರ ಪಾದ.
೩. ಮಾರ್ಗ ಮತ್ತು ಗಮ್ಯಪಾದ.
೪. ಭೋಗಪಾದ.

ಶ್ರೀ ವಿಜಯೀಂದ್ರತೀರ್ಥರು ತಮ್ಮ ಬ್ರಹ್ಮಸೂತ್ರನ್ಯಾಯಸಂಗ್ರಹದಲ್ಲಿ ವಿವರಿಸುವಂತೆ ಈ ರೀತಿ ಸಂಖ್ಯಾ ಸಂಗ್ರಹಕವಾದ ಕಾರಿಕೆಯನ್ನು ರಚಿಸಿ ಉಪಕರಿಸುತ್ತಾರೆ.

ಶ್ರೀಶಾದ್ಯಾಃ ಬ್ರಹ್ಮಮೀಮಾಂಸಾನ್ಯಾಯಾಃ ಸೂತ್ರಾಣಿ ಭೂಷಾಂ.

ಶ್ರೀ - ರು - ದ್ರಾ।
೨ - ೨ - ೨ = ೨೨೨ ಅಧಿಕರಣಗಳು.

ವಿ. ಸೂ. :- ಪ್ರಾಚೀನಟೀಕೆಯಾದ ತತ್ತ್ವಪ್ರದೀಪದಂತೆ ಮೊದಲನೆಯ ಅಧ್ಯಾಯದ ಮೊದಲನೆಯ ಪಾದದಲ್ಲಿ ಹನ್ನೊಂದು ಅಧಿಕರಣಗಳ ಸಂಖ್ಯಾದೃಷ್ಟಿಯಿಂದ ೨೨೨ ಅಧಿಕರಣಗಳು. ತತ್ತ್ವಪ್ರಕಾಶಿಕಾರೀತ್ಯಾ ೨೨೩ ಅಧಿಕರಣಗಳು.

ಸೂತ್ರಾಣಿ ಭೂಷಾಂ - ಭೂ - ಷ - ಣಾಂ
೪ - ೬ - ೫ = ೫೬೪ ಸೂತ್ರಗಳು.

ಪ್ರತಿ ಅಧ್ಯಾಯಗಳ ಅಧಿಕರಣಗಳ ಸಂಖ್ಯಾ = ಧೀಗಾ, ಮೇಶಾ, ಬುಧಾ, ಮಗಾ,"

ಧೀಗಾ = ಧೀ = ೯ ಗಾ = ೩ ನ= ಪ್ರಾಚೀನಟೀಕಾರೀತ್ಯಾ ೩೯, ತತ್ತ್ವಪ್ರಕಾಶಿಕಾರೀತ್ಯಾ (೪೦) ಮೊದಲನೆಯ ಅಧ್ಯಾಯದಲ್ಲಿನ ಅಧಿಕರಣಗಳು.

ಮೇಶಾ = ಮೇ = ೫
ಶಾ = ೫ = ೫೫ ಅಧಿಕರಣಗಳು ಎರಡನೇ ಅಧ್ಯಾಯದಲ್ಲಿವೆ

.ಬುಧಾ = ಬು = ೩
ಧಾ = ೯ = ೯೩ ಮೂರನೇ ಅಧ್ಯಾಯದ ಅಧಿಕರಣಸಂಖ್ಯಾ.

ಮಗಾ = ಮ = ೫
ಗಾ = ೩ ನ= ೩೫ ನಾಲ್ಕನೇ ಅಧ್ಯಾಯದ ಅಧಿಕರಣಸಂಖ್ಯಾ.

ಒಟ್ಟು ಅಧಿಕರಣಗಳ ಸಂಖ್ಯಾ ೨೨೨ ಅಥವಾ ೨೨೩.

| ಮೊದಲನೆಯ ಅಧ್ಯಾಯದಲ್ಲಿ | ಅಧಿಕರಣಗಳು | ಸೂತ್ರಗಳು |
|---|---|---|
| ಮೊದಲನೇ ಪಾದದಲ್ಲಿ | ೧೧ ಅಥವಾ ೧೨ | ೩೧ |
| ಎರಡನೇ ಪಾದದಲ್ಲಿ | ೭ | ೩೨ |
| ಮೂರನೇ ಪಾದದಲ್ಲಿ | ೧೪ | ೪೩ |
| ನಾಲ್ಕನೇ ಪಾದದಲ್ಲಿ | ೭ | ೨೯ |
| ಒಟ್ಟು ಅಧಿಕರಣಗಳು | ೩೯ (೪೦) | |

ಒಟ್ಟು ಅಧಿಕರಣಗಳು ೩೯ ಅಥವಾ ೪೦ ಸೂತ್ರಗಳು ಒಟ್ಟು -೧೩೫

| ಎರಡನೆಯ ಅಧ್ಯಾಯದಲ್ಲಿ | ಅಧಿಕರಣಗಳು | ಸೂತ್ರಸಂಖ್ಯಾ |
|---|---|---|
| ಮೊದಲನೇ ಪಾದದಲ್ಲಿ | ೧೧ | ೩೮ |
| ಎರಡನೇ ಪಾದದಲ್ಲಿ | ೧೨ | ೪೫ |

೧. ಅನ್ಯತ್ರೈವ ಪ್ರಸಿದ್ಧಾ । (ಪರಬ್ರಹ್ಮನನ್ನು ಬಿಟ್ಟು ಬೇರೆ ಕಡೆ ಮಾತ್ರ ಪ್ರಸಿದ್ಧವಾದವುಗಳು.)
ಉದಾಹರಣೆ : ದುಃಖಿ, ಬದ್ಧ, ಅವರ, ಶೂನ್ಯ ಇತ್ಯಾದಿ ಶಬ್ದಗಳು.

೨. ಉಭಯತ್ರ ಪ್ರಸಿದ್ಧಾಃ : (ಪರಬ್ರಹ್ಮನಲ್ಲೂ, ಬೇರೆ ಕಡೆಯಲ್ಲೂ ಪ್ರಸಿದ್ಧಗಳಾದ ಶಬ್ದಗಳು.
ಉದಾಹರಣೆ : ಅಕ್ಷರ, ಸತ್, ಜ್ಯೋತಿ, ವಜ್ರ ಇತ್ಯಾದಿ ನಾಮಾತ್ಮಕ ಶಬ್ದಗಳು.

೩. ಅನ್ಯತ್ರಪ್ರಸಿದ್ಧಾಃ : ಬೇರೆ ಕಡೆ ಅಂದರೆ, ಇಂದ್ರ, ಚಂದ್ರ, ಆಕಾಶ, ಪ್ರಾಣ ಇತ್ಯಾದಿ ಶಬ್ದಗಳು.
ಉದಾಹರಣೆ : ಪರಮಾತ್ಮನಿಗಿಂತಲೂ ಬೇರೆ ಕಡೆ ಪ್ರಸಿದ್ಧಗಳಾದ ಆನಂದಮಯ ಇತ್ಯಾದಿ ಶಬ್ದಗಳು.

೪. ತತ್ರಪ್ರಸಿದ್ಧಾಃ: ನಾರಾಯಣನಲ್ಲಿ ಪ್ರಸಿದ್ಧಗಳಾದ ಶಬ್ದಗಳು.
ಉದಾಹರಣೆ: ನಾರಾಯಣ, ವಿಷ್ಣು, ಕೃಷ್ಣ, ವೈಕುಂಠ ಇತ್ಯಾದಿ ಶಬ್ದಗಳು.

## ಹೇತುಮುಖಲಕ್ಷಣಗಳ ವಿವರಣೆ

ಉಭಯತ್ರ ಪ್ರಸಿದ್ಧಗಳಾದ ಶಬ್ದಗಳ ಹೇತುಮುಖಲಕ್ಷಣದ ವಿವರಣೆ

"ಶ್ರುತ್ಯಂತರಾದಿಭಿಃ ತುಲ್ಯತಾತ್ತುಭಯಸ್ಮಿನ್ಪ್ರಸಿದ್ಧತಾ" ॥೧೩॥

ಎಂದು ಉಭಯತ್ರಪ್ರಸಿದ್ಧ ಪ್ರಶಬ್ದಗಳ ಹೇತುಮುಖಲಕ್ಷಣವನ್ನು ಹೇಳಲಾಗಿದೆ.
ಅನ್ಯತ್ರಪ್ರಸಿದ್ಧಗಳಾದ ಶಬ್ದಗಳಿಗೆ ಹೇತುಮುಖಲಕ್ಷಣವು ಹೇಗೆಂದರೆ

"ಶ್ರುತ್ಯಾದಿತೋ ಲೋಕತೋವಾಽನ್ಯತರೇಷು ಪ್ರಸಿದ್ಧತಾ" ॥ ೧೩ ॥

ಅನ್ಯತ್ರೈವ ಪ್ರಸಿದ್ಧಗಳಾದ ಶಬ್ದಗಳ ಹೇತುಲಕ್ಷಣದ ನಿರೂಪಣೆ ಹೇಗೆಂದರೆ

"ಬಲವತ್ ಶ್ರುತಿಲಿಂಗಾದ್ಯೈರನ್ಯೇಷ್ವೇವ ಪ್ರಸಿದ್ಧತಾ" ॥ ೧೩ ॥
"ಶ್ರುತ್ಯಂತರಾದಿಭಿಃ ತುಲ್ಯಾ ಹಿ ಉಭಯಸ್ಮಿನ್ ಪ್ರಸಿದ್ಧತಾ" ॥

ಎಂಬುದಾಗಿ ಉಭಯತ್ರಪ್ರಸಿದ್ಧಗಳಾದ ಲಿಂಗಾತ್ಮಕ ಶಬ್ದಗಳಿಗೂ, ನಾಮಾತ್ಮಕ ಶಬ್ದಗಳಿಗೂ, ಹೇತುಮುಖವಾದ ಲಕ್ಷಣವನ್ನು ಕಾರಿಕೆಯಲ್ಲಿ ಉದಾಹರಿಸಿದ್ದಾರೆ. ಇದರ ವಿವರಣೆಯನ್ನು ವಾಕ್ಯದಿಂದ ವಿವರಿಸಿರುತ್ತಾರೆ. ಆ ವಾಕ್ಯವು ತಾತ್ಪರ್ಯ ಚಂದ್ರಿಕೆಯಲ್ಲಿ ಈ ರೀತಿ ಇದೆ. ಉಭಯತ್ರಪ್ರಸಿದ್ಧಗಳಾದ ಶಬ್ದಗಳ ಹೇತುಮುಖ ಲಕ್ಷಣದ ವಿವರಣೆ:

"ಯೇಷಾಂ ಶಬ್ದಾನಾಂ ಲೋಕೇ ಬ್ರಹ್ಮಣೀವ, ಅನ್ಯತ್ರಾಪಿ, ಅಪ್ರಯೋಗಾತ್ ವ್ಯಕ್ತಿವಿಶೇಷ ನಿರ್ಣಯಾಯ,
ಶ್ರುತ್ಯಂತರಾನ್ವೇಷಣೇ, ಶ್ರುತ್ಯಂತರೇ, ಅನ್ಯತ್ರೇವ ಬ್ರಹ್ಮಣ್ಯಪಿ ಪ್ರಯೋಗಾತ್, ಶ್ರುತ್ಯಂತರ ಸಾಧಾರಣ್ಯಂ,

ಪ್ರವೃತ್ತಿನಿಮಿತ್ತಾದಿ ಸಾಧಾರಣ್ಯಂವಾ, ಪೂರ್ವಪಕ್ಷಿಣೋಽಪಿ ಸಂಮತಂ ಎಂದು ಉಭಯತ್ರ ಪ್ರಸಿದ್ಧಹೇತುಮುಖಲಕ್ಷಣವನ್ನು ವಿವರಿಸಲಾಗಿದೆ.

**ತಾತ್ಪರ್ಯ** :- ಉಭಯತ್ರಪ್ರಸಿದ್ಧವಾದ (ದ್ಯುಭ್ವಾದ್ಯಾಯತನತ್ವಲಿಂಗಕ್ಕೆ) "ಸರ್ವಾಧಾರತ್ವಂ ಎಂಬ ಲಿಂಗಾತ್ಮಕ ಶಬ್ದವನ್ನು ದ್ಯುಭ್ವಾದ್ಯಧಿಕರಣದಲ್ಲಿ ಸಮನ್ವಯಗೊಳಿಸಲಾಗಿದೆ. ಈ ದ್ಯುಭ್ವಾದ್ಯಾಧಾರತ್ವವು" ವಿಷ್ಣುವಿನಲ್ಲಿ ಹೇಗೋ ಹಾಗೆಯೇ ಅನ್ಯತ್ರರುದ್ರನಲ್ಲಿಯೂ, ಪ್ರಕೃತ್ಯಾದಿಗಳಲ್ಲಿಯೂ ಶ್ರು ಶ್ರುತಿಲಿಂಗಾದಿಗಳಿಂದ ಪ್ರಸಿದ್ಧಿಯೂ ಇದೆ.

:

**"ಮುಂಡಕೋಪನಿಷತ್ತಿನಲ್ಲಿ" ಯಸ್ಮಿನ್ದ್ಯೌಃ ಪೃಥಿವೀ ಚಾಂತರಿಕ್ಷಮೋತಂ**

**ಮನಃ ಸಹ ಪ್ರಾಣೈಶ್ಚ ಸರ್ವೈಃ ।**

**ತಮೇವೈಕಂ ಜಾನಥ ಆತ್ಮಾನಂ ಅನ್ಯಾವಾಚೋ ವಿಮುಂಚಥ (ಮುಂಡಕೇ ೨-೨-೪)**

ಇದು ಪರವಿದ್ಯಾವಿಷಯನಾದ ಹರಿಯಲ್ಲಿ ಉಕ್ತವಾಗಿದೆ.

**ಅರ್ಥ**:- ದ್ಯುಲೋಕ, ಪೃಥಿವೀ, ಅಂತರಿಕ್ಷ, ಸಕಲ ಇಂದ್ರಿಯಾಭಿಮಾನಿದೇವತೆಗಳು ಮತ್ತು ಮನೋಽಭಿಮಾನಿದೇವತೆ ಇವುಗಳು ಪಟದಲ್ಲಿ ತಂತುಗಳಂತೆ ಯಾರನ್ನು ಆಶ್ರಯಿಸಿಕೊಂಡಿರುತ್ತವೆಯೋ ಅಂತಹ ಸರ್ವಾಧಾರನಾದವನು, ಒಬ್ಬನೇ ಆತ್ಮಶಬ್ದವಾಚ್ಯನಾದ ಪರಮಾತ್ಮನೇ ಆಗಿರುತ್ತಾನೆಂದು ಹೇಳಿ ಈ ಶ್ರುತಿಯಲ್ಲಿ, ಸ್ವಸ್ಯ=ಬ್ರಹ್ಮಣ ಏವಶಬ್ದಃ ಎಂದು ಆತ್ಮಾನಂ ಎಂಬ ಆತ್ಮಶಬ್ದವು ಸರ್ವಾಧಾರನಾದ ವ್ಯಕ್ತಿಯಲ್ಲಿ ಶ್ರುತಿಯಲ್ಲಿ ಕಂಡುಬರುವುದರಿಂದ ಪರಮಾತ್ಮನೇ ಸರ್ವಾಧಾರನೆಂದು ನಿಶ್ಚಯಿಸಲಾಗಿದೆ. ಇಲ್ಲಿ ಸರ್ವಾಧಾರನಾದ ವ್ಯಕ್ತಿಯು ಯಾರೆಂಬುವ ವಿಷಯದಲ್ಲಿ ಶ್ರುತಿಯು "ಅನ್ಯಾವಾಚೋವಿಮುಂಚಥ" ಎಂದು ಹೇಳುತ್ತಲಿದೆ. ಅಂದರೆ ಬೇರೆ ದೇವತೆ ಮೊದಲಾದವುಗಳನ್ನು ಪ್ರಧಾನವಾಗಿ ತಿಳಿಯಬೇಡಿರಿ ಎಂದು ತಿಳಿಸಿ, ಈ ಶ್ರುತಿಯಲ್ಲಿ ತಿಳಿಸಿರುವ ಆತ್ಮನು ಮುಕ್ತವರ್ಗಕ್ಕೂ ಆಶ್ರಯನು ಎಂದು "ಅಮೃತಸ್ಯೈಷಸೇತುಃ" ಎಂದು ನಿರ್ಧರಿಸಿ ತಿಳಿಸುತ್ತಲಿದೆ.

ಈ ಶ್ರುತಿಯಲ್ಲಿ ಪ್ರಾಣೈಶ್ಚಸರ್ವೈಃ = ಎಂಬುದರಿಂದ ಪ್ರಾಣಾಧಾರತ್ವವು ಉಕ್ತವಾಗಿದೆ. ಇಂತಹ ಪ್ರಾಣಾಧಾರತ್ವವು (ಇಂದ್ರಿಯಾಭಿಮಾನಿದೇವತಾಧಾರತ್ವವು) ಮಹಾನಾರಾಯಣೋಪನಿಷತ್ತಿನಲ್ಲಿ "ಪ್ರಾಣಾನಾಂ ಗ್ರಂಥಿರಸಿ ರುದ್ರೋಮಾಽಽವಿಶಾಂತಕಃ (ಮಹಾ. ನಾ. ೩೪) ಪ್ರಾಣೇಶ್ವರಃ ಕೃತ್ತಿವಾಸಾಃ ಪಿನಾಕೀ (ಘೃತಸೂಕ್ತ) ಇವುಗಳಲ್ಲಿ ರುದ್ರನಿಗೂ ಪ್ರಾಣಾಧಾರತ್ವವು ಉಕ್ತವಾಗಿದೆ.

**ಅರ್ಥ**:- ರುದ್ರೋಮಾವಿಶಾಂತಕಃ ಎಂಬಲ್ಲಿ ರುದ್ರ, ಉ, ಮಾ, ಎಂದು ಪದಚ್ಛೇದ, ಉ ಎಂಬುದು ಸಂಬುದ್ಧಿದ್ಯೋತಕವಾದ ನಿಪಾತ. ಮಾ = ಎಂಬುದು ನಿಷೇಧಾರ್ಥಕ ಅವ್ಯಯ. ಅಥವಾ ಅಸ್ಮದಾದೇಶಭೂತವಾದ ಮಾಶಬ್ದ. ಹೇರುದ್ರ = ಎಲೈರುದ್ರನೇ, ತ್ವಂ = ನೀನು, ಪ್ರಾಣಾನಾಂ = ಇಂದ್ರಿಯಗಳಿಗೂ ಅದರ ಅಭಿಮಾನಿಗಳಾದ ದೇವತೆಗಳಿಗೂ, ಗ್ರಂಥಿಃ = ಗ್ರಥ್ಯತೇ ಅಸ್ಮಿನ್ನಿತಿಗ್ರಂಥಿಃ = ಆಶ್ರಯಃ - ಆಶ್ರಯನಾಗಿದ್ದೀಯೇ, ಅಂತಕಃ = ಸಂಹಾರಕನೂ ಆಗಿದ್ದೀಯೇ, ಅಂತಹ ತ್ವಂ = ನೀನು - ಮಾ = ಮಾಂ = ನನ್ನನ್ನು ಆವಿಶ = ಪ್ರವೇಶಿಸಿ, ನನ್ನಲ್ಲಿ ಸನ್ನಿಹಿತನಾಗು ಅಥವಾ ಹೇ ರುದ್ರ = ಎಲೈ ರುದ್ರನೇ ಅಂತಕಃ ತ್ವಂ = ಮಾ = ಮಾಂ = ಮಾ, ಪ್ರವಿಶ. ತೇನ = ಆಹುತಿ ರೂಪವಾಗಿ ಕೊಡಲ್ಪಟ್ಟ, ಅನ್ನೇನ = ಅನ್ನದಿಂದ, ಮಾ = ನನ್ನನ್ನು, ಆಪ್ಯಾಯಸ್ವ = ಸುಖಗೊಳಿಸು.

ಘೃತಸೂಕ್ತದಲ್ಲೂ ಸಹ "ಪ್ರಾಣೇಶ್ವರಃ" ಎಂದು ಸಕಲ ಇತರ ಇಂದ್ರಿಯಾಭಿಮಾನಿದೇವತೆಗಳಿಗೂ ಒಡೆಯನೆಂದು ರುದ್ರನಿಗೆ ಹೇಳಲಾಗಿದೆ. ಆದ್ದರಿಂದ ಶ್ರುತ್ಯಂತರದಲ್ಲಿ ರುದ್ರನಿಗೂ, ಪ್ರಾಣಾದ್ಯಾಧಾರತ್ವವು ಕಂಡು ಬಂದಿರುವುದರಿಂದ ಈ ಸರ್ವಾಧಾರತ್ವಲಿಂಗವು ಉಭಯತ್ರಪ್ರಸಿದ್ಧವಾದ ಲಿಂಗವಾಗಿದೆ.

ಪ್ರವೃತ್ತಿನಿಮಿತ್ತ ಸಾಧಾರಣ್ಯಾಂ ವಾ ಎಂದು ಉಭಯತ್ರ ಪ್ರಸಿದ್ಧತ್ವಕ್ಕೆ ಮತ್ತೊಂದು ಹೇತುವನ್ನು ಹೇಳಲಾಗಿದೆ. ಇದು ಮೂರನೇ ಪಾದದಲ್ಲಿ ಸಮನ್ವಯಗೊಳಿಸಿರುವ ಉಭಯತ್ರಪ್ರಸಿದ್ಧ ಸಕಲ ನಾಮಾತ್ಮಕ ಶಬ್ದಗಳಿಗೂ ಸಂಬಂಧಿಸಿದೆ. ಭೂಮನಾಮ, ಅಕ್ಷರನಾಮ, ಸನ್ನಾಮ, ಈಶಾನನಾಮ, ವಜ್ರನಾಮ, ಆಕಾಶನಾಮ ಪತ್ಯಧಿಕರಣದ ಬ್ರಾಹ್ಮಣನಾಮ, ಹೀಗೆ ಪರಮಾತ್ಮನಲ್ಲೂ ಬೇರೆಕಡೆಗಳಲ್ಲೂ ಶ್ರುತ್ಯಾದಿಗಳಿಂದ ಪ್ರಸಿದ್ಧಗಳಾದ ಉಭಯತ್ರ ಪ್ರಸಿದ್ಧಗಳಾದ ನಾಮಾತ್ಮಕಗಳಾದ ಮತ್ತು ಲಿಂಗಾತ್ಮಕಗಳಾದ ಶಬ್ದಗಳಿಗೆ ಸಮನ್ವಯವು ಕಂಡುಬಂದಿರುವ ಪ್ರಯುಕ್ತ ಇದೇ ಹೇತುಮುಖವಾದ ಲಕ್ಷಣ - ಶ್ರುತ್ಯಂತರ ಸಾಧಾರಣವೂ, ಪ್ರವೃತ್ತಿನಿಮಿತ್ತ ಸಾಧಾರಣವೂ ಸಹ ನಿಮಿತ್ತಗಳಾದ ಪ್ರಯುಕ್ತ ಇದನ್ನು ಹೇತುಮುಖಲಕ್ಷಣವೆಂದು ಕರೆಯಲಾಗಿದೆ.

## ಉಭಯತ್ರಪ್ರಸಿದ್ಧ ಶಬ್ದಗಳ ಸ್ವರೂಪ ಮುಖಲಕ್ಷಣದ ವಿವರಣೆ

"ಅತ ಏವ ಯೇಷಾಂ ವಿಷಯವಾಕ್ಯೇ ಆಪಾತತಃ ಅನ್ಯೋಪಸ್ಥಾಪನಸಾಮರ್ಥ್ಯೇ
ತತ್ತುಲ್ಯತಯಾ ಬ್ರಹ್ಮೋಪಸ್ಥಾಪಕತ್ವಂ"।

ಎಂದು ವಾಕ್ಯದಿಂದ ವಿವರಿಸಿರುತ್ತಾರೆ.

**ತಾತ್ಪರ್ಯ** :- ಬ್ರಹ್ಮ ಮತ್ತು ವಾಯು, ರುದ್ರ ಪ್ರಕೃತಿ ಮೊದಲಾದ ಇತರ ಪದಾರ್ಥಪರವಾದ ಶ್ರುತ್ಯಾದಿಗಳಿರುವುದರಿಂದ ಇತರ ಪದಾರ್ಥಗಳಂತೆ ಆ ಪದಗಳಿಗೆ ಬ್ರಹ್ಮಪ್ರತಿಪಾದಕತ್ವರೂಪವಾದ ಅದರ ಸ್ವರೂಪವಿರುವ ಪ್ರಯುಕ್ತ ಉಭಯತ್ರಪ್ರಸಿದ್ಧಗಳಾಗಿವೆ. ಇದು ಸ್ವರೂಪಮುಖವಾದ ಲಕ್ಷಣ.

ತಾತ್ಪರ್ಯಚಂದ್ರಿಕೆಯಲ್ಲಿ ಉಭಯತ್ರಪ್ರಸಿದ್ಧಗಳಾದ ಶಬ್ದಗಳಿಗೆ ಕಾರಿಕೆಯಲ್ಲಿ ಸ್ವರೂಪ ಮುಖಲಕ್ಷಣವನ್ನು ಹೇಳದೇ ಇದ್ದಾಗ್ಯೂ, ಸಹ ಉಭಯತ್ರಪ್ರಸಿದ್ಧಾಃ ಎಂಬ ಶಬ್ದಪ್ರಯೋಗದಿಂದ ಸೂಚಿತವಾದುದನ್ನೇ ಚಂದ್ರಿಕಾಚಾರ್ಯರು "ಅತಏವ" ಎಂದು ಹಿಂದೆ ಉದಾಹರಿಸಿರುವಂತೆ ಆರಂಭಿಸಿ ವಾಕ್ಯದಲ್ಲಿ ವಿವರಿಸಿರುತ್ತಾರೆ. ಉಭಯತ್ರಪ್ರಸಿದ್ಧ ಶಬ್ದಗಳ ಫಲಮುಖಲಕ್ಷಣವು -

**ಕಾರಿಕಾ:-** **ಯೇಷಾಂ ಪ್ರಸಿದ್ಧಿರನ್ಯತ್ರ ಕೇವಲೈವ ವಿರೋಧಿನೀ।**
**ಸಮನ್ವಯಸ್ತ್ವೋಭಯತ್ರ ಪ್ರಸಿದ್ಧಾಸ್ತೇಽಹಿಕೀರ್ತಿತಾಃ ॥ ಇತಿ ॥**

**"ಅತ ಏವ ಚ ಯೇಷಾಂಬ್ರಹ್ಮಣಿಸಮನ್ವಯಃ, ಅನ್ಯೋಽಶಕ್ತಿಮಾತ್ರೇಣ ಪ್ರತಿಬಂಧ್ಯತೇ**
**ಉಭಯತ್ರಪ್ರಸಿದ್ಧಾಃ" ॥ ಇತಿ ॥**

ಪರಬ್ರಹ್ಮನೇಶಕ್ತಿ ತಾತ್ಪರ್ಯವಿಷಯನು ಎಂಬ ಸಮನ್ವಯಕ್ಕೆ ಅನ್ಯೋಪಸ್ಥಿತಿ ಮಾತ್ರದಿಂದ ಪ್ರತಿಬಂಧವು ಯಾವ ಶಬ್ದಗಳ ವಿಷಯದಲ್ಲಿರುತ್ತದೆಯೋ ಅದು ಉಭಯತ್ರಪ್ರಸಿದ್ಧಗಳಾದ ಶಬ್ದಗಳೆಂದು ಫಲ ಮುಖಲಕ್ಷಣವು.

ಅನ್ಯತ್ರಪ್ರಸಿದ್ಧಗಳಾದ ಶಬ್ದಗಳ ಹೇತುಮುಖಲಕ್ಷಣನಿರೂಪಣೆಯು ಈ ರೀತಿ ಇದೆ.

''ಶ್ರುತ್ಯಾದಿತೋ ಲೋಕತೋವಾಽಽಪಾತತೋಽಪಿ ಪ್ರಸಿದ್ಧತಾ'' (ಕಾರಿಕೆ)

ಅದರ ಅರ್ಥವಿವರಣೆಯ ವಾಕ್ಯ :

''ಯೇಷಾಂತುವಸ್ತ್ವಂತರೇಲೋಕಪ್ರಸಿದ್ಧ್ಯಾದೇಸ್ಸ್ಯಾತ್ ತದ್ವಿರೋಧೇನ
ಕ್ವಾಪಿಬ್ರಹ್ಮಣಿಶ್ರುತ್ಯಾದಿಕಂಪೂರ್ವಪಕ್ಷಿಣೋಽಪಿನಸಂಮತಂ ॥ ಇತಿ ॥

**ಅಭಿಪ್ರಾಯ** :- ಇಂದ್ರ, ಆಕಾಶ, ಪ್ರಾಣ ಮೊದಲಾದ ಅನ್ಯತ್ರಪ್ರಸಿದ್ಧಗಳಾದ ನಾಮಾತ್ಮಕ ಶಬ್ದಗಳೂ ಮೊದಲನೆಯ ಅಧ್ಯಾಯದ ಎರಡನೇ ಪಾದವಾದ ಲಿಂಗಪಾದದ ಮೊದಲನೆಯ ಅಧಿಕರಣದಲ್ಲಿ ಸಮನ್ವಯಗೊಳಿಸಲ್ಪಟ್ಟ ''ಸರ್ವಗತತ್ವಂ'' ಎಂಬ ಲಿಂಗಾತ್ಮಕ ಶಬ್ದ ಇವೇ ಮೊದಲಾದವುಗಳಿಗೆ ಶ್ರುತ್ಯಾದಿಗಳಸಹಚರ್ಯದಿಂದ ವಸ್ತ್ವಂತರದಲ್ಲಿ ಪ್ರಸಿದ್ಧಿಯು ಕಂಡುಬಂದಿರುವುದರಿಂದ ಅದಕ್ಕೆ ವಿರುದ್ಧವಾಗಿ ಪರಬ್ರಹ್ಮನಲ್ಲಿ ಶಕ್ತಿ ತಾತ್ಪರ್ಯಗಳು ಪೂರ್ವಪಕ್ಷಿಗೂ ಸಮ್ಮತವಲ್ಲವೋ ಎಂಬುದು ಅದು ಅನ್ಯತ್ರಪ್ರಸಿದ್ಧವಾದ ಶಬ್ದಗಳ ಹೇತುಮುಖವಾದ ಲಕ್ಷಣದ ವಿವರಣೆಯಾಗಿದೆ. ಅನ್ಯತ್ರ ಎಂಬ ಪದಪ್ರಯೋಗದಿಂದ ಸೂಚಿತವಾದ ಅನ್ಯತ್ರಪ್ರಸಿದ್ಧವಾದ ಶಬ್ದಗಳ ಸ್ವರೂಪಮುಖಲಕ್ಷಣದ ವಿವರಣೆಯು ಹೇಗೆಂದರೆ.

ತಾತ್ಪರ್ಯಚಂದ್ರಿಕಾ: ''ಅತ ಏವ ಯೇಷಾಂ ವಿಷಯವಾಕ್ಯೇ ಆಪಾತತೋ ಅನ್ಯಮಾತ್ರೋಪ
ಸ್ಥಾಪಕತ್ವ'' ॥ ಇತಿ ॥

**ಅಭಿಪ್ರಾಯ** :- ಇಂದ್ರಾದಿಶಬ್ದಗಳಿಗೆ ಪರಬ್ರಹ್ಮನಲ್ಲಿ ವೃತ್ತಿ (ಶಕ್ತಿ) ಯಿಲ್ಲವಾದ ಪ್ರಯುಕ್ತ ಆಪಾತತಃ ಅನ್ಯಮಾತ್ರೋಪಸ್ಥಾಪಕತ್ವವು ಇರುತ್ತದೆ. ಎಂಬುದು ಸ್ವರೂಪಮುಖವಾದ ಲಕ್ಷಣ.

ಅನ್ಯತ್ರಪ್ರಸಿದ್ಧ ಶಬ್ದಗಳ ಫಲಮುಖಲಕ್ಷಣದ ವಿವರಣೆ:

**ಚಂದ್ರಿಕಾ : '' ಅತ ಏವ ಚ ಯೇಷಾಂ ಸಮನ್ವಯಸ್ಯ ಅನ್ಯೋಪಸ್ಥಿತಿ ಬ್ರಹ್ಮಾನುಪಸ್ಥಿತಿಭ್ಯಾಮೇವ ಪ್ರತಿಬಂಧಃತೇಽನ್ಯಪ್ರಸಿದ್ಧಾಃ''**

**ಅಭಿಪ್ರಾಯ** :- ಅನ್ಯಮಾತ್ರೋಪಸ್ಥಾಪಕವಾದುದರಿಂದಲೇನೇ, ಅನ್ಯೋಪಸ್ಥಿತಿಯ ಜೊತೆಗೆ ಬ್ರಹ್ಮನ ಅನುಪಸ್ಥಿತಿ ಯಿಂದಲೂ ಯಾವ ಶಬ್ದಗಳಿಗೆ ಬ್ರಹ್ಮಸಮನ್ವಯಕ್ಕೆ ಪ್ರತಿಬಂಧವಿರುತ್ತದೆಯೋ ಅಂತಹ ಶಬ್ದಗಳು ಅನ್ಯತ್ರಪ್ರಸಿದ್ಧಗಳಾದ ಶಬ್ದಗಳು.

ಅನ್ಯತ್ರೈವಪ್ರಸಿದ್ಧಗಳಾದ ಶಬ್ದಗಳ ಹೇತುಮುಖಲಕ್ಷಣದ ವಿವರಣೆ:

**ಚಂದ್ರಿಕಾ** :- "ಯೇಷಾಂ ಪುನಃ ಪ್ರವೃತ್ತಿನಿಮಿತ್ತೇ ಲೋಕಪ್ರಸಿದ್ಧಿಃ ತತ್ಪರತ್ವೇ ಪ್ರಬಲಶ್ರುತ್ಯಾದಿಕಮಪ್ಯಸ್ತಿ"

ಎಂದು ಅನ್ಯತ್ರೈವಪ್ರಸಿದ್ಧಶಬ್ದಗಳ ಹೇತುಮುಖ ಲಕ್ಷಣದ ವಿವರಣೆ.

"ಯೇಷಾಂಪುನಃ ಪ್ರವೃತ್ತಿನಿಮಿತ್ತೇ ಲೋಕಪ್ರಸಿದ್ಧಿಯೂ, ತತ್ಪರತ್ವದಲ್ಲಿ (ಪ್ರವೃತ್ತಿನಿಮಿತ್ತ ಪ್ರತಿಪಾದನ ವಿಷಯದಲ್ಲಿ) ಪ್ರಬಲಶ್ರುತ್ಯಾದಿಗಳು ಇರುತ್ತವೆಯೋ" ಎಂಬುದಾದ ವಿವರಣೆಯು "ಬಲವಚ್ಛ್ರುತಿಲಿಂಗಾದ್ಯೈಃ ಅನ್ಯೇಷ್ವೇವಪ್ರಸಿದ್ಧಾಸ್ತಾ" ಎಂಬ ಕಾರಿಕೆಯ ಅರ್ಥವಾಗಿದೆ.

**ಅಭಿಪ್ರಾಯ** : - ಪರಬ್ರಹ್ಮನಿಗಿಂತಲೂ, ಬೇರೆಯಾದ ಜಡಪ್ರಕೃತ್ಯಾದಿಗಳಲ್ಲಿ ಮಾತ್ರ ಪ್ರಬಲವಾದ ಶೃತ್ಯಾದಿಗಳಿಂದ ತಿಳಿಯಲ್ಪಡತಕ್ಕ, ಅವ್ಯಕ್ತ, ಜ್ಯೋತಿಷ, ಪ್ರಾಣ, ಪ್ರಕೃತಿ, ಶೂನ್ಯ ಇತ್ಯಾದಿ ಶಬ್ದಗಳೇನುಂಟೋ ಅವು ಅನ್ಯತ್ರೈವಪ್ರಸಿದ್ಧಗಳಾದ ಶಬ್ದಗಳಾಗಿವೆ.

ಅನ್ಯತ್ರೈವಪ್ರಸಿದ್ಧಗಳಾದ ಶಬ್ದಗಳ ಸ್ವರೂಪಮುಖಲಕ್ಷಣದ ವಿವರಣೆ:

**ಚಂದ್ರಿಕಾ**:- "ಅತ ಏವ ಯೇಷಾಂ ವಿಷಯವಾಕ್ಯೇ ಆಪಾತತೋಽತ್ಯಂತಂ ಅನ್ಯಮಾತ್ರೋಪ ಸ್ಥಾಪಕತ್ವಂ" ।। ೨೩ ।।

**ಅಭಿಪ್ರಾಯ**:- ಅನ್ಯಪರತ್ವರಲ್ಲಿ ಅವ್ಯಕ್ತಾದಿತತ್ವಪರತ್ವದ ವಿಷಯದಲ್ಲಿ ಪ್ರಬಲವಾದ ಶೃತ್ಯಾದಿಗಳಿರುವುದರಿಂದಲೇನೇ ಆಪಾತತಃ ಅತ್ಯಂತವಾಗಿ ಅನ್ಯಮಾತ್ರೋಪಸ್ಥಾಪಕತ್ವವು ಕಂಡುಬಂದಿದೆ.

ಅನ್ಯತ್ರೈವ ಪ್ರಸಿದ್ಧವಾದ ಶಬ್ದಗಳ ಫಲಮುಖಲಕ್ಷಣದ ವಿವರಣೆ:

**ಚಂದ್ರಿಕಾ**:- "ಅತ ಏವ ಚ ಯೇಷಾಂ ಸಮನ್ವಯಸ್ಯ, ಅನ್ಯೋಪಸ್ಮೃತಿ, ಬ್ರಹ್ಮಾನುಪಸ್ಮೃತಿಭ್ಯಾಂ ಬ್ರಹ್ಮಪರತ್ವಸ್ಯ, ಅತ್ಯಶಕ್ಯಕಲ್ಪನತ್ವಶಂಕಯಾಚ ಅತಿತರಾಂ ಪ್ರತಿಬಂಧಃ ತೇಽನ್ಯತ್ರೈವ ಪ್ರಸಿದ್ಧಾಃ"

**ಕಾರಿಕಾ**:- ಯೇಷಾಮುಕ್ತಿದ್ವಯಂ (ಬ್ರಹ್ಮಣ್ಯಪ್ರಸಿದ್ಧಿಃ ಎಂಬ ಎರಡು ಅಂಶಗಳ ಜೊತೆಗೆ ಅತ್ಯಶಕ್ಯತ್ವವೂ ಸಹ ಉಂಟೋ)।
ಬ್ರಹ್ಮಪರತ್ವಸ್ಯ ಅತ್ಯಶಕ್ಯತಾ ಇತಿತ್ರಿಸ್ತ್ರೋಽವಿರೋಧಿನ್ಯಃ ತೇಽನ್ಯತ್ರೈವ ಪ್ರಸಿದ್ಧಕಾಃ" ।।

**ಅಭಿಪ್ರಾಯ**:- ಯಾವ ಅವ್ಯಕ್ತ, ಜ್ಯೋತಿಷ, ಪ್ರಾಣ, ಪಂಚಜನ, ಪ್ರಕೃತಿ, ಶೂನ್ಯ, ದುಃಖಿ, ಅಮರ ಇತ್ಯಾದಿ ಶಬ್ದಗಳುಂಟೋ ಅವು ಅನ್ಯತ್ರೈವ ಪ್ರಸಿದ್ಧಗಳಾದ ಶಬ್ದಗಳಾಗಿವೆ. ಇವುಗಳಿಂದ ಬೇರೆ ವಸ್ತುಗಳೇ ತಿಳಿಯಲ್ಪಡತಕ್ಕವುಗಳಾಗಿವೆ. ಬ್ರಹ್ಮನುಪಸ್ಥಾಪಕಗಳಾಗಿವೆ. ಅಷ್ಟು ಮಾತ್ರವಲ್ಲದೆ ಅನ್ಯಮಾತ್ರೋಪಸ್ಥಾಪಕತ್ವ, ಬ್ರಹ್ಮಾನುಪಸ್ಥಾಪಕತ್ವ, ಬ್ರಹ್ಮಪರತ್ವಕ್ಕೆ ಅತ್ಯಶಕ್ಯತ್ವಶಂಕಾ. ಇವಿಷ್ಟೂ ಮೂರು ಪ್ರತಿರೋಧಗಳಿರುತ್ತವೆಯಾದುದರಿಂದ ಇವುಗಳನ್ನು ಅನ್ಯತ್ರೈವ ಪ್ರಸಿದ್ಧಗಳಾದ ಶಬ್ದಗಳೆಂದು ವಿಂಗಡಿಸಿರುತ್ತಾರೆ.

ಈ ರೀತಿ ಉಭಯತ್ರ, ಅನ್ಯತ್ರ, ಅನ್ಯತ್ರೈವ ಪ್ರಸಿದ್ಧಗಳಾದ ಶಬ್ದಗಳಿಗೆ ಹೇತು, ಸ್ವರೂಪ, ಫಲಮುಖ ಲಕ್ಷಣಗಳನ್ನು ತಾತ್ಪರ್ಯಚಂದ್ರಿಕಾಕಾರರು ''ಯಸ್ಮಾನಿಪ್ರವಿಭಕ್ತಾನಿಹೇತುರೂಪಫಲೈಃಪೃಥಕ್'' ಎಂದು ಅಭಿಯುಕ್ತರಿಂದ ಸೂಚಿತವಾಗಿರುವುದನ್ನೇ ಸಂಗ್ರಹಿಸಿ ವಿವರಿಸಿರುತ್ತಾರೆ.

ಇದುವರೆವಿಗೆ ವಿವರಿಸತಕ್ಕ ವಿಷಯಗಳೆಲ್ಲಾ ಸೂತ್ರವ್ಯಾಖ್ಯಾನರೂಪವಾದ ತಂತ್ರದೀಪಿಕಾ ಗ್ರಂಥದ ಅರ್ಥ ವಿವರಣೆಗೆ ಮುಂಚಿತವಾಗಿ ಸಾಮಾನ್ಯವಾದ ಮಾಹಿತಿಯಾಗಿ ಹೇಳಲಾಗಿದೆ. ಇನ್ನು ಮುಂದೆ ತಂತ್ರದೀಪಿಕಾಗ್ರಂಥದ ಮೂಲ ವಾಕ್ಯಗಳ ಅರ್ಥವನ್ನು ವಿವರಿಸಲಾಗುತ್ತದೆ. ಅದಕ್ಕೆ ಮುಂಚಿತವಾಗಿ ಕ್ರಮವಾಗಿ ಅಧಿಕರಣದ ಹೆಸರನ್ನೂ, ಅಧಿಕರಣದಲ್ಲಿರುವ ಸೂತ್ರವನ್ನೂ, ಆಯಾ ಅಧಿಕರಣಕ್ಕೆ ವಿವಕ್ಷಿತವಾದ ವಿಷಯ ವಾಕ್ಯವನ್ನೂ, ಆಯಾ ಅಧಿಕರಣಕ್ಕೆ ಸಂಬಂಧಿಸಿದಂತಿರುವ ಪೂರ್ವಪಕ್ಷ ಮತ್ತು ಸಿದ್ಧಾಂತನ್ಯಾಯಗಳ ಸ್ವರೂಪವನ್ನೂ, ಸರಳವಾದ ಸೂತ್ರಗಳ ಪ್ರತಿಪದಾರ್ಥವನ್ನೂ ವಿವರಿಸಿ ತಂತ್ರದೀಪಿಕಾ ಗ್ರಂಥದ ಪ್ರತಿವಾಕ್ಯದ ಅರ್ಥವನ್ನೂ ತೋರಿಸಿದ ಮೇಲೆ ವಿಶೇಷ ವಾಕ್ಯಾರ್ಥಗಳ ಸಂಗ್ರಹ ರೂಪವಾದ ವಿವರಣೆಯನ್ನು ಕೊಡಲಾಗುತ್ತದೆ.

ಬ್ರಹ್ಮಮೀಮಾಂಸಾಶಾಸ್ತ್ರದ ನಾಲ್ಕು ಅಧ್ಯಾಯಗಳಲ್ಲಿ ಮೊದಲನೆಯ ಅಧ್ಯಾಯದ ಮೊದಲನೆಯ ಪಾದದ ಮೊದಲನೆಯ ಅಧಿಕರಣದ ಹೆಸರು: ''ಜಿಜ್ಞಾಸಾಧಿಕರಣ''

**ಸೂತ್ರವು :-** ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ (೧-೧-೧)

''ತದ್ವಿಜಿಜ್ಞಾಸಸ್ವತದ್ಬ್ರಹ್ಮ'' (ತೈ. ೩-೧) ಎಂಬುದಾಗಿ ತೈತ್ತಿರೀಯ ಶ್ರುತಿಯಲ್ಲಿ ಶ್ರುತವಾದ ''ತದ್ವಿಜಿಜ್ಞಾಸಸ್ವ'' ಎಂಬುದು ವಿಷಯ ವಾಕ್ಯ. ಆ ಜಿಜ್ಞಾಸೆಯು ನ ಕರ್ತವ್ಯಾ ಉತ ಕರ್ತವ್ಯಾ ಇತಿ ಸಂದೇಹಃ = ತೈತ್ತಿರೀಯದಲ್ಲಿಶ್ರುತವಾದ ಜಿಜ್ಞಾಸೆಯನ್ನು ಮಾಡಬಾರದೋ ಅಥವಾ ಮಾಡಬೇಕೋ ಎಂದು ಸಂದೇಹ.

ನಕರ್ತವ್ಯಾ-ಮಾಡಲ್ಪಡತಕ್ಕುದಲ್ಲ ಎಂದು ಪೂರ್ವಪಕ್ಷವು. ಅದರ ವಿವರಣೆ: ವಿಷಯ, ಪ್ರಯೋಜನ, ಸಂಬಂಧ, ಅಧಿಕಾರಿಗಳೆಂಬ ಅನುಬಂಧಚತುಷ್ಟಯಗಳಿಲ್ಲವಾದ ಪ್ರಯುಕ್ತ ಮಾಡಬೇಕಾಗಿಲ್ಲವೆಂದು ಪೂರ್ವಪಕ್ಷಿಯ ಅಭಿಪ್ರಾಯವಾಗಿದೆ. ಅದರ ವಿವರಣೆಯು ಈ ರೀತಿ ಇದೆ.

ಸ ಹಿ ಶಾಸ್ತ್ರಸ್ಯ ವಿಷಯೋ ಭವತಿ ಯೋ ಹ್ಯಜ್ಞಾತಃ ಸಂದಿಗ್ಧೋ ವಿಪರ್ಯಸ್ತೋ ವಾ ಎಂಬಂತೆ ವಿಷಯವು ಅಜ್ಞಾತವಾಗಿರಬೇಕು. ಸಂದಿಗ್ಧವಾಗಿರಬೇಕು. ಅಥವಾ ವಿಪರೀತವಾಗಿ ತಿಳಿಯಲ್ಪಟ್ಟದ್ದಾಗಿರಬೇಕು.

ವಿಷಯವಾದರೋ ಸಾಮಾನ್ಯವಾಗಿ, ೧. ಅನಾತ್ಮ ೨. ಪರಾತ್ಮ ೩. ಪರಮಾತ್ಮ ೪. ಸ್ವಾತ್ಮಾ ಇವುಗಳಲ್ಲಿ ಯಾವುದಾದರೂ ಒಂದನ್ನು ವಿಷಯವಾಗಿ ಹೇಳಬೇಕು. ಆದರೆ ಯಾವುದನ್ನೂ ಜಿಜ್ಞಾಸಾಕ್ಕೆ ವಿಷಯವಾಗಿ ಇವುಗಳಲ್ಲಿ ಹೇಳಲು ಬರುವಂತಿಲ್ಲ. ಹೇಗೆಂದರೆ:

೧. ಮೊದಲನೆಯದಾಗಿ ಅನಾತ್ಮ (ಜಡ) ರೂಪವಾದ ಇಂದ್ರಿಯಗಳಿಗೆ ಗೋಚರಿಸುವ ತೃಣಾದಿಗಳು ಪ್ರತ್ಯಕ್ಷ ಪ್ರಮಾಣದಿಂದಲೇ ಸಿದ್ಧಿತವಾಗಿರುತ್ತವೆ. ಆದಕ್ಕಾಗಿ ಶಾಸ್ತ್ರದಿಂದ ವಿಚಾರ ಮಾಡಬೇಕಾಗಿಲ್ಲ.

೨. ಇಂದ್ರಿಯಗಳಿಗೆ ಗೋಚರಿಸದಿರುವ ಅನಾತ್ಮರೂಪವಾದ ಧರ್ಮ, ಅಧರ್ಮ (ಪುಣ್ಯ, ಪಾಪ) ರೂಪವಾದುದು ಧರ್ಮಶಾಸ್ತ್ರ ಮೊದಲಾದುವುಗಳಿಂದಲೇ ನಿರ್ಣೀತವಾಗಿದೆ. ಆದಕಾರಣ ಈ ಬ್ರಹ್ಮಮೀಮಾಂಸಾ ಶಾಸ್ತ್ರದಿಂದ ಅದರ ಜಿಜ್ಞಾಸೆಯನ್ನು ಮಾಡಬೇಕಾಗಿಲ್ಲ.

೩. ಅನ್ಯರಲ್ಲಿ ಪರಾತ್ಮನಾದರೋ ಚೇಷ್ಟಾದಿ ಲಿಂಗಗಳಿಂದ ಅನುಮಾನದಿಂದಲೇ ತಿಳಿಯಲ್ಪಡತಕ್ಕವನಾಗಿದ್ದಾನೆ. ಆಪರಾತ್ಮನನ್ನು ತಿಳಿಸಲು ಶಾಸ್ತ್ರವು ಬೇಕಾಗಿಲ್ಲ.

೪. ಸ್ವಾತ್ಮನಾದರೋ "ಅಹಂ" "ನಾನು" ಎಂಬುದಾಗಿ ನಿಶ್ಚಿತನಾಗಿಯೇ ಇದ್ದಾನೆ. ತನ್ನ ಆತ್ಮನ ಬಗ್ಗೆ ಸಂದೇಹಕ್ಕೇ ಅವಕಾಶವಿಲ್ಲ.

೫. ಪರಮಾತ್ಮನ (ಈಶ್ವರ) ವಿಷಯವಾಗಿ ಜಿಜ್ಞಾಸೆಯೂ ಕೂಡುವುದಿಲ್ಲ.

ಆ ಈಶ್ವರನಾದರೋ ಸ್ವಾತ್ಮನಿಗಿಂತಲೂ ಬೇರೆ ಇಲ್ಲವೇ ಇಲ್ಲ. ಜೀವನಿಗಿಂತಲೂ ಬೇರೆಯೊಬ್ಬ ಪರಮಾತ್ಮನು (ಈಶ್ವರನು) ಉಂಟೆಂಬ ಬಗ್ಗೆ ಪ್ರಮಾಣವೂ ಸಹ ಇಲ್ಲ. ಇದು ಅದ್ವೈತಿಗಳ ನಿಲುವು. ಒಂದು ವೇಳೆ ಜೀವನಿಗಿಂತಲೂ ಬೇರೊಬ್ಬ ಪರಮಾತ್ಮನು (ಈಶ್ವರನು) ಉಂಟೆಂದು ಹೇಳತಕ್ಕವರು "ಮಾನಾಧೀನಾ ಮೇಯಸಿದ್ಧಿಃ" ಎಂಬ ನ್ಯಾಯದಂತೆ ಈಶ್ವರನ ವಿಷಯದಲ್ಲಿ ಪ್ರಮಾಣವನ್ನು ಉದಾಹರಿಸಿ ಸಾಧಿಸಬೇಕು.

ಆ ಪ್ರಮಾಣಗಳಾದರೋ ೧. ಪ್ರತ್ಯಕ್ಷ ೨. ಅನುಮಾನ ೩. ಆಗಮಗಳೆಂದು ಮೂರು ಬಗೆಗಳಾಗಿವೆ. ಇವುಗಳಲ್ಲಿ ಈಶ್ವರನ ವಿಷಯದಲ್ಲಿ ಪ್ರತ್ಯಕ್ಷ ಪ್ರಮಾಣವನ್ನು ಹೇಳಲು ಸಾಧ್ಯವಿಲ್ಲ. ಲೋಕದಲ್ಲಿ ಪ್ರಾಕೃತರೂಪಾದಿಗಳಿಂದ ಕೂಡಿದ ಘಟಪಟಾದಿಗಳಂತೆ ಪರಮಾತ್ಮನು (ಈಶ್ವರನು) ಪ್ರಾಕೃತವಾದ ಚಕ್ಷುರಿಂದ್ರಿಯಕ್ಕೆ ಗೋಚರಿಸತಕ್ಕವನೇ ಅಲ್ಲ. ಆದುದರಿಂದಲೇ ಈಶ್ವರನನ್ನು ಅಪ್ರಾಕೃತ, ಅತೀಂದ್ರಿಯನೆಂದು ಕರೆಯುತ್ತಾರೆ.

ಎರಡನೆಯದಾಗಿ ಈಶ್ವರನನ್ನು ತಿಳಿಸಲು ಸ್ವತಂತ್ರವಾದ ಅನುಮಾನವೂ ಸಹ ಪ್ರಮಾಣವಾಗಲಾರದು. ಈಶ್ವರನನ್ನು ಸಾಧಿಸುವ ಲಿಂಗವೇ (ಹೇತುವೇ) ಸ್ವತಂತ್ರವಾದುದು ಯಾವುದೂ ಇರುವುದಿಲ್ಲ ಮತ್ತು "ಅನುಮಾ ಕಾಮಚಾರಿಣೀ" ಎಂಬಂತೆ ಕೇವಲಾನುಮಾನದಿಂದ ಯಾವುದನ್ನೂ ನಿರ್ಣಯಿಸಲು ಸಾಧ್ಯವಿಲ್ಲ. ಆಗಮವಾದರೋ ಎಲ್ಲವೂ ಕಾರ್ಯಪರವಾಗಿದೆ. ಕಾರ್ಯವೆಂದರೆ ಕೃತಿಸಾಧ್ಯವಾದುದೂ ಕೃತ್ಯುದ್ದೇಶ್ಯವಾದುದೂ ಆಗಿದೆ. ಈಶ್ವರನಾದರೋ ಸಿದ್ಧಸ್ವರೂಪನು. ನಿಷ್ಪನ್ನಸ್ವರೂಪನಾದ (ಸಿದ್ಧಸ್ವರೂಪನಾದ) ಈಶ್ವರನನ್ನು ವೇದವು ತಿಳಿಸುವುದೇ ಇಲ್ಲ. ವೇದಭಾಗವೆಲ್ಲವೂ ಕಾರ್ಯಪರವೇ ಸರಿ".

ಒಂದು ವೇಳೆ ಬೇರೊಬ್ಬ ಈಶ್ವರನು ಉಂಟೆಂದು ಒಪ್ಪಿಕೊಂಡರೂ ಅವನ ಜಿಜ್ಞಾಸೆಯಿಂದ ಯಾವ ಪ್ರಯೋಜನವೂ ಇಲ್ಲ. ಬ್ರಹ್ಮಜಿಜ್ಞಾಸೆಯಿಂದ ಫಲರೂಪವಾಗಿ ಬ್ರಹ್ಮಜ್ಞಾನವು ಆಗುವುದೆಂಬುದೂ ಸರಿಯಲ್ಲ. "ಕರ್ಮಣಾ ಜ್ಞಾನಮಾಪ್ನೋತಿ" ಎಂಬ ಶ್ರುತಿಯು ಕರ್ಮದಿಂದಲೇ ಜ್ಞಾನವು ಲಭಿಸುವುದೆಂದು ತಿಳಿಸುತ್ತಲಿರುವುದರಿಂದ ಅದಕ್ಕಾಗಿ ಜಿಜ್ಞಾಸೆಯು ಬೇಕಾಗಿಲ್ಲ. ಆ ಬ್ರಹ್ಮಜ್ಞಾನದ ಮೂಲಕವಾಗಿ ಆಗಲಿರುವ ಬ್ರಹ್ಮಪ್ರಸಾದವೇ ಫಲವೆಂಬುದೂ ಸರಿಯಲ್ಲ. ಆ ಹರಿಪ್ರಸಾದವೂ ಸಹ "ತತ್ಕರ್ಮ ಹರಿತೋಷಂ ಯತ್" ಎಂಬ ಪ್ರಮಾಣದಿಂದ ಕರ್ಮದಿಂದಲೇ ಸಾಧ್ಯವೆಂಬುದನ್ನು ತಿಳಿಸುವುದರಿಂದ ಬ್ರಹ್ಮಜ್ಞಾನವು ಅದಕ್ಕಾಗಿ ಬೇಕಾಗಿಯೇ ಇಲ್ಲ. ಆ ಪ್ರಸಾದವೂ ಸಹ ಜ್ಞಾನದಂತೆಯೇ ಸ್ವತಃ ಪುರುಷಾರ್ಥವಲ್ಲ. ಆ ಪ್ರಸಾದದ ಮೂಲಕವಾಗಿ ಆಗತಕ್ಕ ಮೋಕ್ಷವೂ ಸಹ ಅದಕ್ಕೆ ಫಲವಾಗಲಾರದು

ಪರಮಪುರುಷಾರ್ಥವೆನಿಸಿದ ಮೋಕ್ಷವಾದರೋ ಕೇವಲ ಕರ್ಮದಿಂದಲೇ ಲಭ್ಯವೆಂಬುದನ್ನು "ಅಪಾಮ ಸೋಮಂ ಅಮೃತಾ ಅಭೂಮ" ಎಂಬ ಶ್ರುತಿಯು ತಿಳಿಸುತ್ತಲಿದೆ. ಮತ್ತು ಮಿಥ್ಯಾಭೂತವಾದ (ಸುಳ್ಳಾದ) ಬಂಧದ ನಿವೃತ್ತಿಯೆಂಬ ಮೋಕ್ಷಕ್ಕೆ ಪ್ರಸಾದವು ಅನಾವಶ್ಯಕ. ಪಕ್ಷಪರೋಕ್ಷರೂಪವಾದ ಬ್ರಹ್ಮಜ್ಞಾನದಿಂದ ಮಿಥ್ಯಾ ಭೂತವಾದ ಅನಾದ್ಯವಿದ್ಯೆಯೆಂಬ ಅಜ್ಞಾನವು ನಿವೃತ್ತಿಯಾದ ನಂತರ ಕಾರ್ಯವಾದ ಜಗತ್ತು ತಾನಾಗಿಯೇ ಹಾರಿಯಾಗುವುದರಿಂದ ಪ್ರಸಾದವೇ ಬೇಕಾಗಿಲ್ಲ. ಅಪರೋಕ್ಷಜ್ಞಾನ ಮತ್ತು ಪ್ರಸಾದಗಳ ಮೂಲಕವಾಗಿ ಮೋಕ್ಷವೆಂಬ ಫಲವನ್ನು ಒಪ್ಪಿದರೂ ಸಹ

ಅದಕ್ಕೆ ಅಧಿಕಾರಿಯೇ ಹೊಂದುವುದಿಲ್ಲ. ಇರುವುದಿಲ್ಲ. ಮೋಕ್ಷಾಪೇಕ್ಷೆ ಇರುವವರೆಲ್ಲರೂ ಅಧಿಕಾರಿಗಳೆಂದರೆ ವೇದಕ್ಕೆ ಅನಧಿಕಾರಿಗಳಾದ ಸ್ತ್ರೀಯರಿಗೂ ಶೂದ್ರರಿಗೂ ಮೋಕ್ಷದ ಅಪೇಕ್ಷೆಯಿರುವುದರಿಂದ ''ತ್ರಯೀ ನ ಶೃತಿಗೋಚರಾ'' ಎಂಬ ಪ್ರಮಾಣದಂತೆ ವೇದಾರ್ಥನಿರ್ಣಾಯಕವಾದ ನ್ಯಾಯನಿಬಂಧನಾತ್ಮಕವಾದ ಈ ಬ್ರಹ್ಮ ಮೀಮಾಂಸಾ ಶಾಸ್ತ್ರಕ್ಕೆ ಎಲ್ಲರಿಗೂ ಅಧಿಕಾರವೇ ಇರುವುದಿಲ್ಲ.

ಸ್ತ್ರೀಶೂದ್ರಾದಿಗಳನ್ನು ಹೊರತು ಪಡಿಸುವ ಅಧಿಕಾರ ಸ್ವರೂಪವೇ ಕಂಡುಬಂದಿಲ್ಲ. ಎಂದು ಪೂರ್ವಪಕ್ಷದ ಅಭಿಪ್ರಾಯವಾಗಿದೆ. ಹೀಗೆ ಪೂರ್ವಪಕ್ಷವು ಬಂದರೆ ಸಿದ್ಧಾಂತವು ಈ ರೀತಿ ಇದೆ. ಪೂರ್ವಪಕ್ಷಿಯ ಶಂಕೆಯಂತೆ ಪ್ರತಿಪಾದನೆಯಂತೆ ಅನಾತ್ಮ, ಸ್ವಾತ್ಮ, ಪರಾತ್ಮ ಈ ಮೂರು ವಸ್ತುಗಳೂ ವಿಷಯಗಳಲ್ಲವಾದರೂ ಜಿಜ್ಞಾಸ್ಯನಾದವನ ವಿಷಯದಲ್ಲಿ ಶ್ರುತವಾಗಿರುವ ಅವಯವಶಕ್ತಿಯಿಂದ ಅರ್ಥವನ್ನು ತಿಳಿಸುತ್ತಲಿರುವ (ಯೌಗಿಕವಾದ) ''ತದ್ವಿಜಿಜ್ಞಾಸಸ್ವ ತದ್ಬ್ರಹ್ಮೇತಿ'' ಎಂಬಲ್ಲಿನ ಬ್ರಹ್ಮಶಬ್ದದಿಂದಲೂ ''ಅಥಕಸ್ಮಾದುಚ್ಯತೇಬ್ರಹ್ಮೇತಿ ಬೃಹಂತೋಹ್ಯಸ್ಮಿನ್ ಗುಣಾಃ'' ಇತ್ಯಾದಿ ಶ್ರುತಿಗಳಿಂದಲೂ ಪರಮಾತ್ಮನನ್ನು ಬಿಟ್ಟು ಬೇರೆಲ್ಲೂ ಯಾರಲ್ಲೂ ಅಸಂಭಾವಿತಗಳಾದ, ದೇಶಪರಿಪೂರ್ಣತ್ವ, ಕಾಲಪರಿಪೂರ್ಣತ್ವ, ಗುಣಪರಿಪೂರ್ಣತ್ವ ಧರ್ಮಗಳಿಂದ ಸಕಲಜೀವರುಗಳಿಗಿಂತಲೂ ಅತ್ಯಂತಭಿನ್ನನಾದ ವಿಷ್ಣುವೆಂಬ ವಸ್ತುವು ಸಿದ್ಧಿಸುವುದರಿಂದ, ಅಂತಹ ವಿಷ್ಣುವಿಗೆ ಬೇರೆ ಬೇರೆ ವಾದಿಗಳ ಮತಗಳ ಪ್ರಕ್ರಿಯೆಯ ಪ್ರಕಾರ, ಕೆಲವರು, ಸಗುಣನೆಂದೂ, ಮತ್ತೆ ಕೆಲವರು ನಿರ್ಗುಣನೆಂದೂ ಹೇಳುವುದರಿಂದ ಸಂದೇಹಕ್ಕೆ ಅವಕಾಶವಾಗಿರುವ ಪ್ರಯುಕ್ತ ''ಸ ಹಿ ಶಾಸ್ತ್ರಸ್ಯ ವಿಷಯೋ ಭವತಿ ಯೋ ಹ್ಯಜ್ಞಾತಃ ಸಂದಿಗ್ಧೋ ವಿಪರ್ಯಸ್ತೋ ವಾ'' ಎಂಬಂತೆ ಅಂತಹ ಸಂದೇಹಕ್ಕೆ ಗೋಚರನಾದ ವಿಷ್ಣುವೆಂಬ ಬ್ರಹ್ಮನೇ ಜಿಜ್ಞಾಸಾಕ್ಕೆ ವಿಷಯನೂ ಶಾಸ್ತ್ರಕ್ಕೆ ವಿಷಯನೂ ಆಗಿರುತ್ತಾನೆ. ಅಂತಹ ವಿಷ್ಣುವಿನ ಜ್ಞಾನದಿಂದುಂಟಾದ ಪ್ರಸಾದದಿಂದ ಪರಮ ಪುರುಷಾರ್ಥವಾದ ಮೋಕ್ಷವೆಂಬುದೇ ಫಲವಾಗಿರುವ ಪ್ರಯುಕ್ತ ಅದನ್ನು ಅಪೇಕ್ಷಿಸುವ ಅಧಿಕಾರಸಂಪನ್ನನಾದ ಯೋಗ್ಯನಾದವನೇ ಅಧಿಕಾರಿಯಾಗಿರುವುದರಿಂದ ಸಂಬಂಧವೂ ಯಥಾಯೋಗ್ಯವಾಗಿ ಸಂಭವಿಸುವುದ್ದರಿಂದ, ವಿಷಯಪ್ರಯೋಜನಾಧಿಕಾರಿ ಸಂಬಂಧರೂಪವಾದ ಅನುಬಂಧ ಚತುಷ್ಟಯಗಳಿರುವ ಪ್ರಯುಕ್ತ ಬ್ರಹ್ಮಜಿಜ್ಞಾಸೆಯು ಕರ್ತವ್ಯವೇ ಆಗಿದೆಯೆಂಬುದು ಸಿದ್ಧಾಂತ.

''ಶ್ರವಣಂ ಮನನಂ ಚೈವ ನಿದಿಧ್ಯಾಸನಮೇವಚ ।
ಕರ್ತವ್ಯಮೇವ ಪುರುಷೈಃ ಬ್ರಹ್ಮದರ್ಶನಮಿಚ್ಛುಭಿಃ''

ಎಂಬುದೇ ಮೊದಲಾದ ಪ್ರಮಾಣವಚನಗಳಂತೆ ಶ್ರವಣಮನನಧ್ಯಾನಗಳೆಂಬ ಜಿಜ್ಞಾಸೆಯೇ ''ಬ್ರಹ್ಮಾ ಪರೋಕ್ಷ'' ರೂಪವಾದ ಜ್ಞಾನಕ್ಕೆ ಪ್ರಧಾನ ಸಾಧನಗಳು. ಕರ್ಮವಾದರೋ ಅಂತಃಕರಣಾದಿಶುದ್ಧಿದ್ವಾರಾ ಜ್ಞಾನಕ್ಕೆ ಅಂಗವೇ ಹೊರತು ಪ್ರಧಾನವಾದ ಸಾಕ್ಷಾತ್ ಸಾಧನವಲ್ಲ. ಪ್ರಸಾದವೂ ಸಹ ಮೂರು ಬಗೆಯಾಗಿದೆ.

೧. ಕರ್ಮಜನ್ಯ ಪ್ರಸಾದ    ೨. ಜ್ಞಾನಜನ್ಯ ಪ್ರಸಾದ

೩. ಶ್ರವಣಾದಿಜನ್ಯ ಪ್ರಸಾದ

ಈ ಮೂರರಲ್ಲಿ ಜ್ಞಾನಜನ್ಯ ಪ್ರಸಾದವೇ ಪ್ರಧಾನವಾದುದು, ಮುಖ್ಯವಾದುದು. ಮೋಕ್ಷಪ್ರದವಾದುದು. ಇದೇ ಉತ್ತಮ ಪ್ರಸಾದವೆಂದು ಶಾಸ್ತ್ರದಲ್ಲಿ ವ್ಯವಹರಿಸಲ್ಪಟ್ಟಿದೆ. ಕರ್ಮಜನ್ಯ ಪ್ರಸಾದವು ಅಧಮ ಪ್ರಸಾದ. ಇದರ ಫಲವು ನಶ್ವರವಾದ ಸ್ವರ್ಗಪ್ರಾಪ್ತಿಯು. ಶ್ರವಣಾದಿಜನ್ಯ ಪ್ರಸಾದವು ಮಧ್ಯಮ ಪ್ರಸಾದ. ಜನರ್ಲೋಕಾದಿಪ್ರಾಪ್ತಿಯು ಅದರ ಫಲ.

**"ಅಪಾಮಸೋಮಂ ಅಮೃತಾ ಅಭೂಮ"** ಎಂಬ ಶ್ರುತಿಗೆ ಮೂರು ತರಹ ಅರ್ಥವನ್ನು ತಿಳಿಯಬೇಕಾಗಿದೆ. ಅಧಿಕಾರಿಭೇದೇನ ಮೂರು ಅರ್ಥವುಳ್ಳದ್ದಾಗಿದೆ.

೧. ಅಮೃತಾ ಅಭೂಮ ಎಂಬಲ್ಲಿ ಶ್ರುತವಾದ ಅಮೃತತ್ವವು ಕಾಮ್ಯಕರ್ಮಿಯ ವಿಷಯದಲ್ಲಿ ಗೌಣರೂಪವಾದುದು. ಕೆಲವು ಕಾಲದವರೆಗೆ ಅನುಭವಿಸತಕ್ಕದ್ದಾಗಿದೆ. ಆತ್ಮಜ್ಞಾನಿಯಲ್ಲದವನಾಗಿರುವ ಪ್ರಯುಕ್ತ ಅವನಿಂದ ಆಚರಿಸಲ್ಪಟ್ಟ ಕರ್ಮವು ನಶ್ವರವಾದ ಸ್ವರ್ಗಫಲದಾಯಕವಾಗಿದೆ.

"ಅಮೃತೋವಾವ ಸೋಮಪ್ರೋ ಭವತಿ ಯಾವದಿಂದ್ರಃ" ಎಂಬ ಶ್ರುತಿಯೂ ಸಹ ಅದೇ ಅಭಿಪ್ರಾಯವುಳ್ಳದ್ದಾಗಿದೆ.

೨. ಅಕಾಮ್ಯಕರ್ಮಿಯಾದ ಬ್ರಹ್ಮಜಿಜ್ಞಾಸುವಿನಿಂದ ಆಚರಿಸಲ್ಪಡತಕ್ಕ ಕರ್ಮವಾದರೋ ಬ್ರಹ್ಮಜ್ಞಾನ ದ್ವಾರಾ ಮೋಕ್ಷಸಾಧನವೇ ಹೊರತು ಸಾಕ್ಷಾತ್ತಾಗಿ ಅಲ್ಲ.

೩. ಅಪರೋಕ್ಷ ಜ್ಞಾನಿಯ ವಿಷಯದಲ್ಲಿ ಈ ಶ್ರುತಿಯು ಮೋಕ್ಷೈಕದೇಶ ಆತಿಶಯರೂಪವಾದ ಅಮೃತತ್ವವನ್ನೇ ತಿಳಿಸುತ್ತದೆ ಎಂದು ಈ ಶ್ರುತಿಯು ಅಧಿಕಾರಿಭೇದೇನ ಭಿನ್ನಭಿನ್ನವಾದ ಅಭಿಪ್ರಾಯವುಳ್ಳದ್ದಾಗಿದೆ. ಈ ವಿಧವಾದ ಅಧಿಕಾರಿ ಭೇದದಿಂದ ಮೂರು ಬಗೆಯಾದ ಈ ಶ್ರುತಿಯ ಅರ್ಥದ ವಿವರಣೆಯನ್ನು ತಂತ್ರದೀಪಿಕಾಕಾರರು "ಓಂಭಾಕ್ತಂವಾ ಅನಾತ್ಮವಿತ್ವಾತ್ ತಥಾಹಿದರ್ಶಯತಿ ಓಂ", (೩-೧-೭) ಎಂಬ ಸೂತ್ರದ ವ್ಯಾಖ್ಯಾನವಾದ ತಂತ್ರದೀಪಿಕೆಯಲ್ಲಿ ತೋರಿಸಿರುತ್ತಾರೆ.

ಮುಮುಕ್ಷುಗಳೆಲ್ಲರೂ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಅಧಿಕಾರಿಗಳಲ್ಲ. ಆದರೆ ಈ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಇಂತಹವರೇ ಅಧಿಕಾರಿಗಳೆಂಬುದನ್ನು "ಅಧಿಕಾರಶ್ಚೋಕ್ತೋ ಭಾಗವತತಂತ್ರೇ" ಎಂದು ಭಾಷ್ಯಕಾರರು ಉದಾಹರಿಸುವ ಭಾಗವತ ತಂತ್ರವೆಂಬ ಪ್ರಮಾಣ ಗ್ರಂಥದಲ್ಲಿ ಉಕ್ತವಾಗಿರುವಂತೆ ಶ್ರೀಹರಿಭಕ್ತಿಪೂರ್ವಕಅಧ್ಯಯನಾದಿ ಗುಣಸಂಪನ್ನರೇ ಅಧಿಕಾರಿಗಳು. ಆದಕಾರಣ ಅಂತಹ ಶ್ರೀಹರಿಭಕ್ತಿಪೂರ್ವಕ ಅಧ್ಯಯನ, ಶಮದಮಾದಿ ಸಂಪತ್ತು, ವಿಷಯ ವೈರಾಗ್ಯಾದಿ ಪೂರ್ವಕ ವಿಷ್ಣುಪಾದೈಕ ಸಂಶ್ರಯತ್ವ ಇವುಗಳನ್ನು ಯಥಾಯೋಗ್ಯವಾಗಿ ಉಳ್ಳವನೇ ಅಧಿಕಾರಿಯಾಗಿರುವುದರಿಂದ ಅಂತಹ ಅಧಿಕಾರಿ ವ್ಯಕ್ತಿಯಿಂದ ಬ್ರಹ್ಮಜಿಜ್ಞಾಸೆಯು ಮಾಡಲ್ಪಡತಕ್ಕದ್ದೆಂದು ಸಿದ್ಧಾಂತ ನಿಷ್ಕರ್ಷವು.

ಆದ್ದರಿಂದ ಅಂತಹ ಬ್ರಹ್ಮಜಿಜ್ಞಾಸೆಯನ್ನು ವಿಧಿಸುತ್ತಿರುವ ಈ ಬ್ರಹ್ಮಮೀಮಾಂಸಾಶಾಸ್ತ್ರವು ಆರಂಭಣೀಯವೆಂಬುದು ಫಲ. (ಪ್ರಯೋಜನವಾಗಿದೆ.)

**ಪ್ರಥಮಸೂತ್ರದ ಪ್ರತಿಪದಾರ್ಥ ವಿವರಣೆ:** ಅಥ = ಶ್ರೀ ಹರಿಭಕ್ತಿಪೂರ್ವಕ ಅಧ್ಯಯನ, ಶಮ (ಭಗವನ್ನಿಷ್ಠ ಬುದ್ಧಿ) ದಮ (ಇಂದ್ರಿಯ ನಿಗ್ರಹ), ವಿಷಯ ವೈರಾಗ್ಯಪೂರ್ವಕ ವಿಷ್ಣುಪಾದೈಕ ಸಂಶ್ರಯತ್ವರೂಪ ಅಧಿಕಾರ ಸಂಪತ್ತ್ಯನಂತರದಲ್ಲಿ,

ಅತಃ = ಮೋಕ್ಷಾಖ್ಯ ಫಲವಿರುವುದರಿಂದ ಅಥವಾ ಜಿಜ್ಞಾಸಾಜನ್ಯವಾದ ಅಪರೋಕ್ಷಜ್ಞಾನ ಜನ್ಯವಾದ ಪ್ರಸಾದಜನ್ಯವಾದ ಮೋಕ್ಷವೆಂಬ ಫಲಯುಕ್ತವಾಗಿರುವುದರಿಂದ ಅಥವಾ ಮೋಕ್ಷಜನಕವಾದ ಪ್ರಸಾದಕ್ಕೆ ಕಾರಣವಾದ ಅಪರೋಕ್ಷ ಜ್ಞಾನಕ್ಕೆ ಕಾರಣವಾಗಿರುವ ಪ್ರಯುಕ್ತ, ಓಂ = ಗುಣಪೂರ್ಣನಾದ, ಬ್ರಹ್ಮಣಃ = ವಿಷ್ಣುವಿನ, ಜಿಜ್ಞಾಸಾ = ಶ್ರವಣ, ಮನನ, ಧ್ಯಾನರೂಪವಾದ ಜಿಜ್ಞಾಸೆಯು ಅಥವಾ ಮನನರೂಪವಾದ (ವಿಚಾರವು) ಕರ್ತವ್ಯಾ = ಮಾಡತಕ್ಕದ್ದು. ಎಂದು ಸೂತ್ರದ ಅರ್ಥವು.

**ತಂತ್ರದೀಪಿಕಾ ಮುನ್ನುಡಿಯು ಸಮಾಪ್ತವಾಯಿತು.**

# ಅಥ ತಂತ್ರದೀಪಿಕಾ ಪ್ರಾರಭ್ಯತೇ

**ಅರ್ಥ:-** ತಂತ್ರದೀಪಿಯೆಂಬ ಗ್ರಂಥವು ಪ್ರಾರಂಭಿಸಲ್ಪಡುತ್ತದೆ.

ಶ್ರೀಮದ್ಹನುಮದ್ಭೀಮಮಧ್ವಾಂತರ್ಗತ ರಾಮಕೃಷ್ಣ ವೇದವ್ಯಾಸಾತ್ಮಕ-

ಶ್ರೀಲಕ್ಷ್ಮೀಹಯಗ್ರೀವಾಯನಮಃ ॥

॥ ಶ್ರೀ ಗುರುಭ್ಯೋನಮಃ ॥

**॥ ಹರಿಃ ಓಂ ॥ ಪ್ರಣಮ್ಯ ಗುಣಸಂಪೂರ್ಣಂ ದೋಷಾತೀತಂ ರಮಾಪತಿಂ ।**
**ಪೂರ್ಣಬೋಧಂ ಗುರೂನ್ ಅನ್ಯಾನ್ಕುರ್ಮಃ ಸೂತ್ರಾರ್ಥ ಸಂಗ್ರಹಮ್ ॥ ೧ ॥**

**ಗುರುಪಾದ ಕೃತೋಽಪ್ಯಸ್ತಿಸಂಗ್ರಹೋ ಹೃದಯಂಗಮಃ ।**
**ಪ್ರಸ್ಥಾನಭೇದ ಪ್ರೋಕ್ತಾರ್ಥ ಸಂಗ್ರಹೋಽಪ್ಯಯಂ ಮಮ ॥**

**ಪದಚ್ಛೇದ :-** ಪ್ರಣಮ್ಯ, ಗುಣಸಂಪೂರ್ಣಂ, ದೋಷಾತೀತಂ, ರಮಾಪತಿಂ, ಪೂರ್ಣಬೋಧಾನ್, ಗುರೂನ್, ಅನ್ಯಾನ್, ಕುರ್ಮಃ, ಸೂತ್ರಾರ್ಥ ಸಂಗ್ರಹಮ್ ॥

**ಅನ್ವಯ :-** ಗುಣಸಂಪೂರ್ಣಂ, ದೋಷಾತೀತಂ, ರಮಾಪತಿಂ, ಪ್ರಣಮ್ಯ, ಪೂರ್ಣಬೋಧಂ, ಪ್ರಣಮ್ಯ, ಅನ್ಯಾನ್, ಗುರೂನ್, ಪ್ರಣಮ್ಯ, ಸೂತ್ರಾರ್ಥ ಸಂಗ್ರಹಂ, (ವಯಂ) ಕುರ್ಮಃ ॥

**ಅರ್ಥ :-** ಗುಣಸಂಪೂರ್ಣಂ = ಸಕಲಗುಣ ಪರಿಪೂರ್ಣನಾದ, ದೋಷಾತೀತಂ = ದೋಷದೂರನಾದ, (ಸಕಲ ದೋಷರಹಿತನಾದ) ರಮಾಪತಿಂ = ಲಕ್ಷ್ಮೀದೇವಿಯ ಪತಿಯಾದ ಶ್ರೀಮನ್ನಾರಾಯಣನನ್ನು, ಪ್ರಣಮ್ಯ = ಭಕ್ತಿಶ್ರದ್ಧಾದ್ಯತಿಶಯ ಪೂರ್ವಕವಾಗಿ ನಮಸ್ಕರಿಸಿ, ಪೂರ್ಣಬೋಧಂ = ಪೂರ್ಣಪ್ರಜ್ಞಾಚಾರ್ಯರನ್ನು (ಶ್ರೀಮದಾನಂದ ತೀರ್ಥ ಭಗವತ್ಪಾದಾಚಾರ್ಯರನ್ನು), ಪ್ರಣಮ್ಯ = ಭಕ್ತಿಶ್ರದ್ಧಾದ್ಯತಿಶಯ ಪೂರ್ವಕವಾಗಿ ನಮಸ್ಕಾರ ಮಾಡಿ, ಅನ್ಯಾನ್ಗುರೂನ್ = ತಾರತಮ್ಯ ಕ್ರಮದಿಂದ ಶ್ರೀ ಪೂರ್ಣಬೋಧರ ಪರಂಪರೆಗೆ ಸೇರಿದ ಬೇರೆ ಗುರುಗಳನ್ನೂ ಪ್ರಣಮ್ಯ = ಭಕ್ತಿ ಶ್ರದ್ಧಾಪೂರ್ವಕವಾಗಿ ನಮಿಸಿ, ಸೂತ್ರಾರ್ಥ ಸಂಗ್ರಹಂ = ಬ್ರಹ್ಮಸೂತ್ರಗಳ ಅರ್ಥಗಳ ಸಂಗ್ರಹವನ್ನು ಕುರ್ಮಃ = (ನಾವು) ಮಾಡುತ್ತೇವೆ.

**ತಾತ್ಪರ್ಯ :-** ಸರ್ವೋತ್ತಮನಾದ ಶ್ರೀಮನ್ನಾರಾಯಣನು ತತ್ವಜ್ಞಾನ ಕಾರ್ಯಕ್ಕಾಗಿ ಶ್ರೀ ವೇದವ್ಯಾಸ ರೂಪದಿಂದ ಅಭಿವ್ಯಕ್ತನಾಗಿ ಸಕಲ ವೇದಾರ್ಥ ನಿರ್ಣಯಕಗಳಾದ ನ್ಯಾಯಗಳಿಂದ ಕೂಡಿದ ಸೂತ್ರಗಳನ್ನು ಅಂದರೆ ಬ್ರಹ್ಮಸ್ವರೂಪ ನಿರ್ಣಯಕಗಳಾದ ಸೂತ್ರಗಳನ್ನು ರಚಿಸಿದ್ದಾನೆ. ಅವುಗಳಿಗೆ ಪ್ರಧಾನ ವಾಯು ದೇವರು ಪರಮಾತ್ಮನ

ಆಜ್ಞೆಯಂತೆ ಶ್ರೀಮಧ್ವರೂಪದಿಂದ ಅವತರಿಸಿ, ಉತ್ತರ ಬದರಿಗೆ ತೆರಳಿ ಸಾಕ್ಷಾತ್ ಶ್ರೀ ವೇದವ್ಯಾಸರಿಂದಲೇ ವಿಶೇಷಾಕಾರವಾಗಿ ಉಪದೇಶ ವನ್ನು ಪಡೆದು ಶ್ರೀ ವೇದವ್ಯಾಸರಿಗೆ ಅತ್ಯಂತ ಸಮ್ಮತವಾದ ಅರ್ಥದಿಂದ ಕೂಡಿದ ಸೂತ್ರಭಾಷ್ಯವನ್ನೂ ಅನುವ್ಯಾಖ್ಯಾನ ವನ್ನೂ, ನ್ಯಾಯವಿವರಣವನ್ನೂ, ಸಂಗ್ರಹ ಭಾಷ್ಯವನ್ನೂ (ಅಣುಭಾಷ್ಯವನ್ನೂ) ರಚಿಸಿರುತ್ತಾರೆ. ಅದಕ್ಕೆ ಶೇಷಾಂಶಸಂಭೂತ ರಾದ ಶ್ರೀ ಪದ್ಮನಾಭತೀರ್ಥರು ಕ್ರಮವಾಗಿ ಸತ್ತರ್ಕ ದೀಪಾವಳಿ ಮತ್ತು ಸನ್ನ್ಯಾಯ ರತ್ನಾವಳಿ ಎಂಬ ಟೀಕೆಗಳನ್ನು ರಚಿಸಿ ದ್ದಾರೆ. ಶ್ರೀತ್ರಿವಿಕ್ರಮ ಪಂಡಿತಾಚಾರ್ಯರು ಶ್ರೀಮದಾಚಾರ್ಯರ ಬ್ರಹ್ಮಸೂತ್ರ ಭಾಷ್ಯಕ್ಕೆ ತತ್ವಪ್ರದೀಪವೆಂಬ ವ್ಯಾಖ್ಯಾನ ವನ್ನು ನಿರ್ಮಿಸಿರುತ್ತಾರೆ. ಇವೆಲ್ಲಾ ಪ್ರಾಚೀನ ಟೀಕೆಗಳೆಂದು ಪ್ರಸಿದ್ಧವಾಗಿವೆ. ಇಂದ್ರಾಂಶಸಂಭೂತರಾದ ಶ್ರೀಮಜ್ಜಯ ತೀರ್ಥರು ಬ್ರಹ್ಮಸೂತ್ರ ಭಾಷ್ಯಕ್ಕೆ ತತ್ವಪ್ರಕಾಶಿಕೆಯೆಂಬ ವ್ಯಾಖ್ಯಾನವನ್ನೂ ಅನುವ್ಯಾಖ್ಯಾನಕ್ಕೆ ನ್ಯಾಯಸುಧಾ ಎಂಬ ವ್ಯಾಖ್ಯಾನ ವನ್ನೂ, ನ್ಯಾಯವಿವರಣದ ಸ್ವಲ್ಪ ಭಾಗಕ್ಕೆ ವ್ಯಾಖ್ಯಾನವನ್ನು ರಚಿಸಿದ್ದಾರೆ. ಇವಕ್ಕೆಲ್ಲಾ ನವೀನ ಟೀಕೆಗಳೆಂದು ಹೆಸರು.

ಸೂತ್ರ, ಭಾಷ್ಯ ಅನುವ್ಯಾಖ್ಯಾನ ಪ್ರಾಚೀನ ಟೀಕೆಗಳು ನವೀನ ಟೀಕೆಗಳು ಇವೆಲ್ಲವನ್ನೂ ಕೂಲಂಕಷವಾಗಿ ಪರಿಶೀಲಿಸಿ ಬೇರೆ ಬೇರೆ ವಾದಿಗಳ ಅರ್ಥಗಳನ್ನೆಲ್ಲಾ ವಿಮರ್ಶಿಸಿ ಅವುಗಳ ಅಸಾಂಗತ್ಯಗಳನ್ನೆಲ್ಲಾ ಎತ್ತಿ ತೋರಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರ ಭಾಷ್ಯವಾಙ್ಮಯದ ಮಹಿಮಾತಿಶಯವನ್ನು ಸಮರ್ಥಿಸಿ, ಶ್ರೀಮನ್ಮಧ್ವಸಿದ್ಧಾಂತದ ವೈಭವದ ವಿಜಯದ ಪತಾಕೆಯಂತಿರುವ ಮೇರುಕೃತಿಯಾದ ವ್ಯಾಸತ್ರಯವನ್ನು ರಚಿಸಿರುವ ಮಹಾನುಭಾವರೇ ಶ್ರೀವ್ಯಾಸರಾಜರು. ಈ ರೀತಿಯಾದ ಹಿಂದಿನ ಎಲ್ಲಾ ಮೂಲ ಗ್ರಂಥಗಳ, ಟೀಕೆಗಳ, ಟಿಪ್ಪಣಿಗಳ ಅರ್ಥಗಳನ್ನೆಲ್ಲಾ ಮನನ ಮಾಡಿ, ಅತಿ ವಿಸ್ತಾರವಾದ ವಾಕ್ಯಾರ್ಥಗಳಿಂದ ನಿರ್ಣೀತಗಳಾಗಿರುವ ಅರ್ಥ ವಿಶೇಷಗಳ ಸಾರಸಂಗ್ರಹರೂಪವಾಗಿ ರಚಿತವಾಗಿರುವ ಗ್ರಂಥರತ್ನವೇ ಈ ತಂತ್ರದೀಪಿಕೆಯು. ಇಂತಹ ಅಮೋಘವಾದ ಗ್ರಂಥರತ್ನವನ್ನು ರಚಿಸುವಾಗ ಸಂಪ್ರದಾಯ ಕ್ರಮವನ್ನು ಅನುಸರಿಸಿ ಗ್ರಂಥಾದಿಯಲ್ಲಿ ಸರ್ವೋತ್ತಮನಾದ ಶ್ರೀರಮಾರಮಣನನ್ನು ನಮಸ್ಕಾರ ಮಾಡಿ, ಕ್ರಮವಾಗಿ ಶ್ರೀಮಧ್ವರೇ ಮೊದಲಾದ ಗುರುಗಳಿಗೆಲ್ಲಾ ನಮಿಸಿ ಶ್ರೀರಾಘವೇಂದ್ರ ಗುರುಸಾರ್ವಭೌಮರು ಈ ಬ್ರಹ್ಮಸೂತ್ರಾರ್ಥ ಸಂಗ್ರಹ ರೂಪವಾದ ಶ್ರೀ ತಂತ್ರದೀಪಿಕೆಯನ್ನು ರಚಿಸಿದ್ದಾರೆ. ಆದಿಯಲ್ಲಿ ಶಿಷ್ಟಾಚಾರ ಪರಂಪರಾಪ್ರಾಪ್ತವಾದ ಮಂಗಳವನ್ನು ಆಚರಿಸಿ ಸಕಲ ಶಿಷ್ಯರ ಶಿಕ್ಷಾರ್ಥವಾಗಿ ಆ ಮಂಗಳವನ್ನು ''ಪ್ರಣಮ್ಯ'' ಎಂದು ಗ್ರಂಥದಲ್ಲಿ ನಿಬಂಧನೆ ಮಾಡಿರುತ್ತಾರೆ. ವಿಶಿಷ್ಟವಾದ, ಇಷ್ಟವಾದ, ಅಧಿಕೃತವಾದ ದೇವತೆಯಾದ ರಮಾರಮಣನನ್ನು ನಮಸ್ಕರಿಸಿದ ತರುವಾಯ

**''ಯಸ್ಯ ದೇವೇ ಪರಾಭಕ್ತಿಃ ಯಥಾದೇವೇ ತಥಾಗುರೌ ।**
**ತಸ್ಯೈತೇ ಕಥಿತಾಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ ॥ ''**

ಎಂಬ ಶ್ವೇತಾಶ್ವತರ ಶ್ರುತಿವಾಕ್ಯದಲ್ಲಿ ದೇವತಾಗುರು ನಮಸ್ಕಾರಗಳ ಕರ್ತವ್ಯತ್ವವನ್ನು ಶ್ರುತಿಯು ವಿಧಿಸುತ್ತಲಿರುವು ದರಿಂದ ಗುರುಸಾರ್ವಭೌಮರು ಪೂರ್ಣಬೋಧಾನ್ ಗುರೂನನ್ಯಾನೆಂದು ಗುರುಗಳಿಗೂ ಕ್ರಮವಾಗಿ ನಮಸ್ಕರಿಸಿರುತ್ತಾರೆ. ಈ ಶ್ರುತಿಯಲ್ಲಿರುವ

**ಯಥಾ ತಥೇತಿ ತು ದಾರ್ಢ್ಯಮಾತ್ರೇ ದೃಷ್ಟಾಂತ ಇತಿ ಸೂಚಯಿತುಂ ।**

ಎಂಬ ಶ್ರೀವಾದಿರಾಜರ ನುಡಿಯು ಇದೆ.

ಯಥಾ ಶಬ್ದಕ್ಕೆ ಯೋಗ್ಯತಾರೂಪ ಅರ್ಥಾಂತರವನ್ನು ಇಟ್ಟುಕೊಂಡು

> ದೇವೇಷು ದೇವಯೋಗ್ಯಾ ಗುರೌ ಗುರುಯೋಗ್ಯೇತ್ಯರ್ಥಃ ॥
> ಉಕ್ತಂ ಚ ಜ್ಞಾನಪಾದೀಯ ಸುಧಾಯಾಂ ಯಥಾ ದೇವೇ ತಥಾ ಗುರಾವಿತಿ ।
> ಯಥಾದೇವೇದೇವಯೋಗ್ಯಾ ತಥಾ ಗುರೌಗುರುಯೋಗ್ಯೇತ್ಯರ್ಥ ಇತಿ ।
> ವಿಷ್ಣುಭಕ್ತಿರ್ದೇವಭಕ್ತಿಃ ಗುರುಭಕ್ತಿಸ್ತಥೈವ ಚ ।
> ತತ್ತತ್ ಶ್ರೈಷ್ಠ್ಯಾನುಸಾರೇಣೇತಿ ಪ್ರಥಮಾಧ್ಯಾಯ ಬೃಹದ್ಭಾಷ್ಯೋಕ್ತೇಶ್ಚೇತಿ ॥

ಎಂದು ಭಾವದೀಪಕಾರರು ಭಾವದೀಪದಲ್ಲಿ ನುಡಿದಿರುತ್ತಾರೆ.

ಮಂಗಳವಾದದ ವಿಶೇಷಾರ್ಥದ ವಿವರ:-

''ಮಸ್ತುತಸ್ತುಮಗಿ ಸಮರ್ಪಣೆ ಇತ್ಯತಃ ಮಂಗೇರಲಚ್ ಮಂಗಳಂ ಇತಿಶಾಕಟಾಯನ ನಿರ್ವಚನೇನ ''ಕಲ್ಯಾಯಣಂ ಮಂಗಳಂ ಶುಭಂ'' ಇತ್ಯಭಿದಾನೇನ ಚ ಶುಭಮೇವ ಮಂಗಳಂ'' ಎಂದು ಶ್ರೀ ವಿಷ್ಣುತತ್ವನಿರ್ಣಯದ ವ್ಯಾಖ್ಯಾನಕಾರರಾದ ಲಘುಪ್ರಭಾಕಾರರು ಹೇಳಿರುವಂತೆ ಮಂಗಳವೆಂಬುದು ಶುಭರೂಪವಾದುದಾಗಿದೆ. ಅದಕ್ಕೆ ಕಾರಣವಾದ ಸಾಧನದಲ್ಲಿ ''ಆಯುಃಘೃತಂ'' ಎಂಬಲ್ಲಿರುವಂತೆ ಮಂಗಳ ಶಬ್ದವನ್ನು ಪ್ರಯೋಗಿಸುವ ವಾಡಿಕೆಯು ಉಂಟು. ಮಂಗಳಾದೀನಿ, ಮಂಗಳ ಮಧ್ಯಾನಿ, ಮಂಗಳಾಂತಾನಿಶಾಸ್ತ್ರಾಣಿಪ್ರಥಂತೆ, ವೀರಪುರುಷಕಾಣಿಭವಂತಿ, ಆಯುಃಷ್ಮತ್ಪುರುಷಕಾಣಿಚ, ಅಧ್ಯೇತಾರಶ್ಚ ಮಂಗಳಯುಕ್ತಾವೃದ್ಧಿಯುಕ್ತಾಯಥಾಸ್ಯುಃ'' ಎಂಬ ಮಹಾಭಾಷ್ಯಕಾರರ ವಚನದಂತೆ ಎಲ್ಲ ಗ್ರಂಥಗಳ ಪ್ರಾರಂಭದಲ್ಲಿ ಮಂಗಳವನ್ನು ಆಚರಿಸಬೇಕೆಂಬ ಶಿಷ್ಟರ ಆಚಾರದಂತೆ ಈ ತಂತ್ರದೀಪಿಕೆಯಲ್ಲೂ ದೇವತಾಗುರು ನಮಸ್ಕಾರರೂಪವಾದ ಮಂಗಳವನ್ನು ಗ್ರಂಥಕಾರರು ಆಚರಿಸಿರುವರು. ಈ ರೀತಿ ಆಚರಿಸಲ್ಪಟ್ಟ ಮಂಗಳವು ಮುಂದೆ ಈ ಗ್ರಂಥವು ನಿರ್ವಿಘ್ನವಾಗಿ ಪರಿಸಮಾಪ್ತಿಯಾಗಲು ಕಾರಣವಾಗಿರುವ ಪ್ರಯುಕ್ತ ವಿಘ್ನಧ್ವಂಸ ಪೂರ್ವಕವಾದ ಗ್ರಂಥ ಪರಿಸಮಾಪ್ತಿಯು ಮಂಗಳಕ್ಕೆ ಫಲವಾಗಿದೆ. ಇದರಿಂದ ನಿರ್ವಿಘ್ನ ಗ್ರಂಥ ಪರಿಸಮಾಪ್ತಿಂ ಪ್ರತಿ ಮಂಗಳಂ ಕಾರಣಂ'' ಎಂಬುದಾಗಿ ಮಂಗಳ ಪರಿ ಸಮಾಪ್ತಿ ಗಳಿಗೆ ಕಾರ್ಯಕಾರಣಭಾವವು ಸಿದ್ಧವಾಗುವುದು. ಮಂಗಳವು ಕಾರಣ, ವಿಘ್ನಧ್ವಂಸವು ಅವಾಂತರವ್ಯಾಪಾರ, ಗ್ರಂಥ ಪರಿ ಸಮಾಪ್ತಿಯು ಫಲ. ನೈಯ್ಯಾಯಿಕರು ಚರಮ ವರ್ಣ ಧ್ವಂಸವನ್ನು ಸಮಾಪ್ತಿಯೆಂದು ಹೇಳುವರು. ಆದರೆ ಸಿದ್ಧಾಂತ ದಲ್ಲಿ ವರ್ಣಗಳು ನಿತ್ಯಗಳೆಂದು ಶ್ರೀ ವಿಷ್ಣುತತ್ವವಿ ನಿರ್ಣಯದಲ್ಲಿ ಪ್ರತಿಪಾದಿಸಲ್ಪಟ್ಟಿರುವುದರಿಂದ ''ಚರಮ ವರ್ಣೋಚ್ಚಾರ ಣಾದಿರೂಪಸಮಾಪ್ತೇಃ'' ಎಂದು ಶ್ರೀ ಸುಧಾ ವ್ಯಾಖ್ಯಾನಭೂತವಾದ ಕಾಶೀ ಟಿಪ್ಪಣಿಯಲ್ಲಿ ಉಕ್ತವಾಗಿರುವಂತೆ ಉಪಾಂತ್ಯವರ್ಣೋಚ್ಚಾರಣಾದಿಪರ್ಯಂತಪುಷ್ಕಲ ಕಾರಣಸಹಿತಚರಮವರ್ಣೋಚ್ಚಾರಣಾದಿಗಳು ಸಮಾಪ್ತಿರೂಪವಾಗಿದೆ.

> ''ಮಂಗಳಾಚರಣಸ್ಯ ತತ್ಪ್ರಚಯರೂಪವ್ಯಾಖ್ಯಾನಂ ಪ್ರತ್ಯಪಿ ಹೇತುತಯಾ,
> ಪ್ರಚಯಶಬ್ದಸ್ಯ ಪ್ರಸಿದ್ಧಿಮಾತ್ರಪರತ್ವೇಽಪಿ ಶಾಸ್ತ್ರಪ್ರಚಯೋವ್ಯಾಖ್ಯಾನರೂಪ ಏವೇತಿ
> ನಕೋಽಪಿದೋಷ ಇತಿ ಧ್ಯೇಯಮ್ ।
>
> ಶಾಸ್ತ್ರೇಷ್ವನುಷ್ಠಿತಂ ಮಂಗಳಾಚರಣಂ ಶಾಸ್ತ್ರಸಮಾಪ್ತಿಮಿವ ಪ್ರಚಯರೂಪಂ
> ತದ್ವ್ಯಾಖ್ಯಾನಮಪಿ ಸಂಪಾದಯತಿ ।

**ಅನ್ಯಥಾ ಮಂಗಲಾಚರಣರಹಿತಶಾಸ್ತ್ರವ್ಯಾಖ್ಯಾನೇ ಪ್ರವರ್ತಮಾನಸ್ಯ ವಿಘ್ನೋಪಹತತಯಾ ಶಾಸ್ತ್ರಾರ್ಥಾಽಪ್ರತಿಪತ್ತಿವಿಪ್ರತಿಪತ್ತಿಪ್ರಾಪ್ತ್ಯಾ ಶಿಷ್ಟಾಚಾರಪರಿಪಾಲನಹೀನತಯಾ ಅನಾಪ್ತಪ್ರಣೀತತ್ವಶಂಕಯಾ ಚ ವ್ಯಾಖ್ಯಾನಸ್ಯ ಕರ್ತುಮಶಕ್ಯತ್ವಾತ್ ।**

**ಅತಏವಮಾಹುಃ ''ಮಂಗಲಾಚರಣಪುರಸ್ಸರಾಣಿ ಶಾಸ್ತ್ರಾಣಿ ವೀರ್ಯವಂತಿಭವಂತಿ'' ಇತಿ ಶ್ರೀಮನ್ನ್ಯಾಯಸುಧಾವ್ಯಾಖ್ಯಾನವಾದ ಯಾದುಪತ್ಯವಾಕ್ಯಗಳಿವೆ.**

**ಅದರ ಅಭಿಪ್ರಾಯ** :- ನಿರ್ವಿಘ್ನ ಪರಿಸಮಾಪ್ತಿಯನ್ನು ಕುರಿತು ಮಂಗಳವು ಹೇಗೆ ಕಾರಣವೋ ಅದರಂತೆ ನಿರ್ವಿಘ್ನಪ್ರಚಯವನ್ನು ಕುರಿತೂ ಕೂಡ ಮಂಗಳವು ಕಾರಣವೆಂದು ಅಭಿಪ್ರಾಯ. ಮಂಗಳಾನುಷ್ಠಾನದಲ್ಲಿ ಏನು ಪ್ರಮಾಣವೆಂದರೆ ''ಗ್ರಂಥ ಪರಿಸಮಾಪ್ತಿಕಾಮೋ ಮಂಗಳಮಾಚರೇತ'' ಎಂಬ ಶಿಷ್ಟಾಚಾರಾನುಮಿತಶ್ರುತಿಯೇ ಪ್ರಮಾಣವಾಗಿದೆ. ಅಂತಹ ಶ್ರುತ್ಯನುಮಾನಪ್ರಕಾರವನ್ನು ಪರಿಮಳಾಚಾರ್ಯರು ಈ ಕೆಳಗೆ ಕಂಡಂತೆ ತೋರಿಸಿರುತ್ತಾರೆ.

''ಕರ್ಮಾದೌ ಶಿಷ್ಟೈಃ ಕ್ರಿಯಮಾಣಃ ಮಂಗಳಾಚಾರಃ-

ತತ್ಕರ್ಮಪರಿಸಮಾಪ್ತ್ಯಾದಿಹೇತುತ್ವಪ್ರಮಾಪೂರ್ವಕಃ ತತ್ಕಾಮನಯೈವ ಶಿಷ್ಟೈರನುಷ್ಠೀಯಮಾನತ್ವಾತ್ ತೃಪ್ತಿಕಾಮ ನಯಾ ಅನುಷ್ಠೀಯಮಾನಭೋಜನವತ್ ।

ತದ್ಧೇತುತ್ವಪ್ರಮಾಚ ಶ್ರೌತೀಭವಿತುಮರ್ಹತಿ - ಪ್ರತ್ಯಕ್ಷಾನುಮಾನಾಜನ್ಯತ್ವೇಸತಿ ಜನ್ಯಪ್ರಮಾತ್ವಾತ್ -

ಯದೇವಂ ತದೇವಂ ಯಥಾಸ್ಮೃತಂ ಇತ್ಯೇವಂ ರೂಪೇಣಾನುಮಿತಶ್ರುತಿಸಿದ್ಧತ್ವಾದಿತ್ಯರ್ಥಃ ॥

ಇತಿ ಪರಿಮಳವ್ಯಾಖ್ಯಾ ।

ಶ್ರೀಮದಾನಂದತೀರ್ಥಭಗವತ್ಪಾದರಿಗೆ ಸ್ವಯಮಂತರಾಯವಿಧುರೋಽಪಿ, ಅನವರತಾ ಈಶ್ವರಪ್ರಮಾಕಾಯಕರಣ ವೃತ್ತಿರಪಿ, ವಿಲೀನಪ್ರಕೃತಿತಯಾ ಸ್ವಯಮಂತರಾಯವಿಧುರೋಽಪಿ, ಇತ್ಯಾದಿಯಾಗಿ ಟೀಕಾಕಾರರು ವಿಶೇಷಣಗಳನ್ನು ಕೊಟ್ಟಿರುತ್ತಾರೆ. ಪ್ರಾಣಾವತಾರರಾದ, ಋಜುಪುಂಗವರಿಗೆ ಅಖಿಲಾಪ್ತಸಮರಿಗೆ ವಿಘ್ನಗಳೇ ಇಲ್ಲವಿರುವುದರಿಂದ ಸ್ವತಃ ಸಿದ್ಧವಿಘ್ನವಿರಹರಾದುದರಿಂದ ಅವರಿಂದ ಆಚರಿಸಲ್ಪಟ್ಟ ಮಂಗಳಕ್ಕೆ ವಿಘ್ನಧ್ವಂಸಾದಿಗಳು ಪ್ರಯೋಜನವಲ್ಲದ್ದಾದರೂ ಪರಮಾತ್ಮನ ತೃಪ್ತಿಯೇ ಪ್ರಯೋಜನ ಮತ್ತು

**''ಯದಿಹ್ಯಹಂ ನವರ್ತೇಯಂ ಜಾತುಕರ್ಮಣ್ಯತಂದ್ರಿತಃ ।**
**ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ''** ॥

ಎಂದು ಭಗವಂತನ ಮಾತಿನಂತೆ ಭಗವಂತನ ಆಚಾರದಂತೆ ಭಾಗವತಾಚಾರ್ಯರ ಆಚಾರವೂ ಸಹ ಲೋಕಸಂಗ್ರಹಾರ್ಥವಾಗಿಯೇ ಎಂದು ತಿಳಿಯಬೇಕು.

ಈ ಅಭಿಪ್ರಾಯವನ್ನೇ ''ಸಮುಸ್ತಾರಾಧಿಕಾರಾದಿಗ್ರಹಣಾಸೂಚನೇ ಶಿಷ್ಯಶಿಕ್ಷಾರ್ಥಂ'' ಎಂಬ ಟೀಕಾವಾಕ್ಯವೂ ಸ್ಪಷ್ಟಪಡಿಸುತ್ತಲಿದೆ. ''ಶಿಷ್ಯಾನ್ ಶಿಕ್ಷಯಿತುಂ ಪ್ರಕರಣಂ ನಿಬಧ್ನಾತಿ'' ಎಂಬ ಟೀಕಾವಾಕ್ಯಕ್ಕೂ ಈ ಅಭಿಪ್ರಾಯವನ್ನೇ ಟಿಪ್ಪಣೀಕಾರರು ಸಮರ್ಥಿಸುತ್ತಾರೆ. ಯಾವ ಬಗೆಯಾದ ವಿಘ್ನಾದಿಗಳೂ ಇಲ್ಲದಿರುತ್ತ ಮಹಾನುಭಾವರ ಆಚರಣೆಯನ್ನು ಶಿಷ್ಯಶಿಕ್ಷಾರ್ಥವಾಗಿ ಲೋಕಸಂಗ್ರಹಾರ್ಥಕ್ಕಾಗಿ ಪರಿಗಣಿಸಬೇಕು.

**ಶ್ಲೋಕ :-** **ಗುರುಪಾದಕೃತೋಽಪ್ಯಸ್ತಿ ಸಂಗ್ರಹೋ ಹೃದಯಂಗಮಃ ।**
**ಪ್ರಸ್ಥಾನಭೇದಪ್ರೋಕ್ತಾರ್ಥಸಂಗ್ರಹೋಽಥಾಪ್ಯಯಂ ಮಮ ॥ ೨ ॥**

**ಪದವಿಭಾಗ :-** **ಗುರುಪಾದಕೃತಃ, ಅಪಿ, ಅಸ್ತಿ, ಸಂಗ್ರಹಃ, ಹೃದಯಂಗಮಃ, ಪ್ರಸ್ಥಾನಭೇದಪ್ರೋಕ್ತಾರ್ಥ ಸಂಗ್ರಹಃ, ಅಥ, ಅಪಿ, ಅಯಂ ಮಮ ॥**

**ಅನ್ವಯ :-** **ಗುರುಪಾದಕೃತಃ, ಹೃದಯಂಗಮಃ, ಸಂಗ್ರಹೋಽಪ್ಯಸ್ತಿ (ಯದ್ಯಪಿ) ಅಥಾಪಿ, ಮಮ ಅಯಂ, ಪ್ರಸ್ಥಾನಭೇದಪ್ರೋಕ್ತಾರ್ಥಸಂಗ್ರಹಃ.**

**ಅರ್ಥ:-** ಗುರುಪಾದಕೃತಃ = ಪೂಜ್ಯರಾದ ಗುರುವರೇಣ್ಯರಾದ ಶ್ರೀ ವಿಜಯೀಂದ್ರತೀರ್ಥರಿಂದಲೂ, ಶ್ರೀಸುಧೀಂದ್ರ ತೀರ್ಥರಿಂದಲೂ, ರಚಿಸಲ್ಪಟ್ಟಿರುವ, ಹೃದಯಂಗಮಃ = ಮನೋಹರವಾದ, ಸಂಗ್ರಹೋಽಪ್ಯಸ್ತಿ = ಅಥಾಪಿ, ಮಮ = ನನ್ನ ಅಯಂ = ಈ ತಂತ್ರದೀಪಿಕಾ ಗ್ರಂಥದಲ್ಲಿನ ಸಂಗ್ರಹವು ಪ್ರಸ್ಥಾನಭೇದಪ್ರೋಕ್ತಾರ್ಥಸಂಗ್ರಹಃ = ಬ್ರಹ್ಮಸೂತ್ರ ಭಾಷ್ಯ, ಅನುವ್ಯಾಖ್ಯಾನಗಳೆಂಬ ಶ್ರೀಮಧ್ವಾಚಾರ್ಯರ ಪೂರ್ವಪ್ರಸ್ಥಾನಭಾಷ್ಯ, ಉತ್ತರ ಪ್ರಸ್ಥಾನ ಭಾಷ್ಯಗಳೆರಡರಲ್ಲೂ ವಿವರಿಸಲಾಗಿರುವ ಅರ್ಥಗಳ ಸಂಗ್ರಹರೂಪವಾಗಿರುತ್ತದೆ.

ನಮ್ಮ ಗುರುವರೇಣ್ಯರುಗಳಾದ ಶ್ರೀ ವಿಜಯೀಂದ್ರತೀರ್ಥರು ಬ್ರಹ್ಮಮೀಮಾಂಸಾಸೂತ್ರಗಳಿಗೆ "ಬ್ರಹ್ಮಸೂತ್ರನ್ಯಾಯಸಂಗ್ರಹ" ವೆಂಬ ಗ್ರಂಥವನ್ನೂ, ಶ್ರೀ ಸುಧೀಂದ್ರತೀರ್ಥರು "ಬ್ರಹ್ಮಸೂತ್ರಾಧಿಕರಣರತ್ನಮಾಲಾ" ಎಂಬ ಗ್ರಂಥವನ್ನು ಈಗಾಗಲೇ ರಚಿಸಿಯೇ ಇರುತ್ತಾರೆ. ಆದಾಗ್ಯೂ ಸಹ ನಾವು ಬ್ರಹ್ಮಸೂತ್ರಭಾಷ್ಯ, ಅನುವ್ಯಾಖ್ಯಾನ, ನ್ಯಾಯ ವಿವರಣಗಳೆಂಬ ಶ್ರೀಮದಾಚಾರ್ಯರಿಂದ ರಚಿತವಾಗಿರುವ ಪೂರ್ವಪ್ರಸ್ಥಾನ, ಉತ್ತರಪ್ರಸ್ಥಾನಗಳೆಂದು ಕರೆಯಲ್ಪಟ್ಟ ಭಾಷ್ಯಗಳಲ್ಲಿ ವಿವರಿಸಿರುವ ಅರ್ಥಗಳನ್ನು ಸಂಗ್ರಹಿಸಿ "ಈ ತಂತ್ರದೀಪಿಕೆ" ಎಂಬ ಗ್ರಂಥವನ್ನು ರಚಿಸಿರುತ್ತೇವೆ". ಎಂದು ಗ್ರಂಥಕಾರರ ಅಭಿಪ್ರಾಯವಾಗಿದೆ.

ಈ ರೀತಿ ಶ್ರೀರಾಘವೇಂದ್ರ ಗುರುಸಾರ್ವಭೌಮರು ಈ ತಂತ್ರದೀಪಿಕಾ ಗ್ರಂಥದಲ್ಲಿ, ಸಮಗ್ರ ಬ್ರಹ್ಮಮೀಮಾಂಸಾ ಶಾಸ್ತ್ರಕ್ಕೆ ಶ್ರೀಮನ್ಮಧ್ವಾಚಾರ್ಯರು ಶ್ರೀಮನ್ನಾರಾಯಣ ದೇವರ ಅಪ್ಪಣೆಯಂತೆ ಬ್ರಹ್ಮಸೂತ್ರಕಾರರಾದ ಶ್ರೀ ವೇದವ್ಯಾಸ ದೇವರಿಂದಲೇ ಉತ್ತರ ಬದರೀ ಕ್ಷೇತ್ರದಲ್ಲಿ ಸಾಕ್ಷಾತ್ತಾಗಿ ಉಪದೇಶ ಪಡೆದು ಶ್ರೀ ವೇದವ್ಯಾಸದೇವರಿಗೆ ಪರಮ ಸಂಮತ ವಾದ ರೀತಿಯಲ್ಲಿ ಸೂತ್ರಭಾಷ್ಯವನ್ನೂ, ಅನುವ್ಯಾಖ್ಯಾನವನ್ನೂ ರಚಿಸಿ ಯಾವ ಯಾವ ಅರ್ಥಪ್ರಭೇದಗಳನ್ನು ವಿವರಿಸಿರುತ್ತಾರೆಯೋ ಅವುಗಳನ್ನೆಲ್ಲಾ ಅತಿ ಚಿಕ್ಕ ಚಿಕ್ಕ ವಾಕ್ಯಗಳಲ್ಲಿ ಅತಿ ಚಮತ್ಕಾರದಿಂದ ಸಂಗ್ರಹಿಸಿರುವುದು ಅತ್ಯಸಾಧಾರಣವಾದ ಮಹೋನ್ನತವಾದ ಜ್ಞಾನಕಾರ್ಯವಾಗಿದೆ. ತತ್ತ್ವಜಿಜ್ಞಾಸುಗಳಾದ ಸಾತ್ತ್ವಿಕಚೇತನರು ಶ್ರೀ ರಾಘವೇಂದ್ರ ಗುರುಸಾರ್ವಭೌಮರಿಗೆ ಯಾವಜ್ಜೀವಚಿರಋಣಿಗಳಾಗಿರುತ್ತಾರೆಂಬುದನ್ನು ಎಂದೆಂದಿಗೂ ಮರೆಯುವಂತಿಲ್ಲ. ಮರೆಮಾಚುವಂತಿಲ್ಲ.

ಪ್ರತಿಸೂತ್ರದ ತಂತ್ರದೀಪಿಕಾ ವಾಕ್ಯಾರ್ಥವನ್ನು ನಿರೂಪಿಸುವಾಗ ಸೂತ್ರಭಾಷ್ಯದಲ್ಲಿ ನಿರೂಪಿತಗಳಾದ ಅರ್ಥವನ್ನು, ಅನುವ್ಯಾಖ್ಯಾನದಲ್ಲಿ ವಿವರಿಸಲ್ಪಟ್ಟ ಅರ್ಥವನ್ನೂ ವಿಶದಪಡಿಸಿದಮೇಲೆ ಶ್ರೀ ಗುರುಸಾರ್ವಭೌಮರು ಪ್ರಸ್ಥಾನಭೇದ ಪ್ರೋಕ್ತಾರ್ಥವನ್ನು ಯಾವ ಯಾವ ವಾಕ್ಯಗಳಲ್ಲಿ ಸಂಗ್ರಹಿಸಿರುತ್ತಾರೆಂಬುದನ್ನು ತಿಳಿಸುತ್ತೇವೆ.

**ತಂತ್ರದೀಪಿಕ ಮೂಲ - ಬ್ರಹ್ಮರುದ್ರೇಂದ್ರಾದಿಭಿಃ ಜ್ಞಾನಾರ್ಥಂ ಅರ್ಥಿತೋ**
**ನಾರಾಯಣಃ ವ್ಯಾಸತ್ವೇನಾವತೀರ್ಯ ಉತ್ಸನ್ನಾನ್ವೇದಾನ್**
**ಅಭಿವ್ಯಕ್ತಿಪೂರ್ವಕಂ ಅನೇಕಧಾ ವಿಭಜ್ಯ ತದರ್ಥನಿರ್ಣಯಾಯ**
**ಬ್ರಹ್ಮಸೂತ್ರಾಣಿ ವ್ಯಾತೇನೇ ॥ ತತ್ರೇದಂ ಆದಿಮಂ ಸೂತ್ರಮ್ ॥**

**ಅರ್ಥ:-** ಬ್ರಹ್ಮರುದ್ರೇಂದ್ರಾದಿಭಿಃ = ಚತುರ್ಮುಖ ಬ್ರಹ್ಮದೇವರು, ರುದ್ರದೇವರು ಮತ್ತು ಇಂದ್ರನೇ ಮೊದಲಾದ ದೇವತೆಗಳಿಂದ, ಜ್ಞಾನಾರ್ಥಂ = ತತ್ವಜ್ಞಾನಕ್ಕಾಗಿ, ಅರ್ಥಿತಃ = ಪ್ರಾರ್ಥಿಸಲ್ಪಟ್ಟ, ನಾರಾಯಣಃ = ಶ್ರೀಮನ್ನಾರಾಯಣನು, ವ್ಯಾಸತ್ವೇನ = ಶ್ರೀ ವೇದವ್ಯಾಸರೂಪದಿಂದ, ಅವತೀರ್ಯ = ಅವತರಿಸಿ (ಅಭಿವ್ಯಕ್ತನಾಗಿ), ಉತ್ಸನ್ನಾನ್ = ಅಪಪಾಠಾದಿಗಳಿಂದ ತಿರೋಹಿತಗಳಾದ, ವೇದಾನ್ = ವೇದಗಳನ್ನು, ಅಭಿವ್ಯಕ್ತಿಪೂರ್ವಕಂ = ಅನಾದಿ ನಿತ್ಯವಾದ ಅಪೌರುಷೇಯವಾದ ವೇದವನ್ನು ನಿಜವಾದ ಅಪೌರುಷೇಯವಾದ ವೇದವನ್ನು ನಿಜವಾದ ಪಾಠ ಕ್ರಮದಿಂದ ವ್ಯಕ್ತಗೊಳಿಸಿ, ಅನೇಕಧಾವಿಭಜ್ಯ = ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದವೆಂಬ ಪ್ರಭೇದದಿಂದಲೂ, ಋಗ್ವೇದವನ್ನು ೨೧ ಶಾಖೆಗಳನ್ನಾಗಿಯೂ, ಯಜುರ್ವೇದವನ್ನು ನೂರೊಂದು ಶಾಖೆಗಳನ್ನಾಗಿಯೂ, ಸಾಮವೇದವನ್ನು ಸಹಸ್ರ ಶಾಖೆಗಳನ್ನಾಗಿಯೂ, ಅಥರ್ವಣವೇದವನ್ನು ಹನ್ನೆರಡು ಶಾಖೆಗಳನ್ನಾಗಿಯೂ ವಿಂಗಡಿಸಿ ತದರ್ಥ ನಿರ್ಣಯಾಯ = ಆ ಅಪಾರವಾದ ಅನಂತವಾದ ಶಾಖೋಪಶಾಖಾತ್ಮನಾ ವಿಭಕ್ತವಾದ ವೇದದ ಅರ್ಥ ನಿಶ್ಚಯಕ್ಕಾಗಿ, ಬ್ರಹ್ಮಸೂತ್ರಾಣಿ = ವೇದಾರ್ಥ ನಿರ್ಣಾಯಕಗಳಾದ ನ್ಯಾಯಗಳಿಂದ ಕೂಡಿದ ಸೂತ್ರಗಳನ್ನು ಅಂದರೆ ಪರಬ್ರಹ್ಮಸ್ವರೂಪವನ್ನು ನ್ಯಾಯಗಳಿಂದ ನಿಶ್ಚಯಿಸುವ ಐದನೂರು ಅರವತ್ತನಾಲ್ಕು ಸೂತ್ರಗಳನ್ನು, ವ್ಯಾತೇನೆ = ರಚಿಸಿದನು, ತತ್ರ = ಆ ಬ್ರಹ್ಮಸೂತ್ರಗಳಲ್ಲಿ, ಇದಂ = ಇದು, "ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ" ಎಂಬುದು, ಆದಿಮಂ = ಮೊಟ್ಟಮೊದಲನೆಯ, ಸೂತ್ರಂ = ಸೂತ್ರವು.

**ವಿಶೇಷ ವಾಕ್ಯಾರ್ಥ ಸಂಗ್ರಹ:-** ಬ್ರಹ್ಮರುದ್ರೇಂದ್ರಾದಿಭಿಃ ಎಂದು ಶ್ರೀ ಗುರುರಾಜರು ಪ್ರಾರಂಭಿಸಿರುವ ಅವತಾರಿಕಾ ವಾಕ್ಯವು ಶ್ರೀಮದಾಚಾರ್ಯರ ಬ್ರಹ್ಮಸೂತ್ರ ಭಾಷ್ಯದ ಪ್ರಾರಂಭದಲ್ಲಿನ ಅವತಾರಿಕಾಭಾಷ್ಯ ವಾಕ್ಯದ ಅರ್ಥವನ್ನೇ ಸಂಗ್ರಹಿಸಿ ತಿಳಿಸುತ್ತಿದೆ.

> **"ದ್ವಾಪರೇ ಸರ್ವತ್ರಜ್ಞಾನ ಆಕುಲೀಭೂತೇ ತನ್ನಿರ್ಣಯಾಯ ಬ್ರಹ್ಮರುದ್ರೇಂದ್ರಾದಿಭಿಃ**
> **ಅರ್ಥಿತೋ ಭಗವಾನ್ ನಾರಾಯಣೋ ವ್ಯಾಸತ್ವೇನ ಅವತತಾರ. ಅಥೇಷ್ಟಾನಿಷ್ಟಪ್ರಾಪ್ತಿ**
> **ಪರಿಹಾರೇಚ್ಛೂನಾಂ - ತದ್ಯೋಗಮವಿಜಾನತಾಂ ತಜ್ಜ್ಞಾಪನಾರ್ಥಂ ವೇದಮುತ್ಸನ್ನಂ**
> **ವ್ಯಂಜಯನ್ ಚತುರ್ಧಾ ವ್ಯಭಜತ್, ಚತುರ್ವಿಂಶತಿಧಾ, ಏಕಶತಧಾ, ಸಹಸ್ರಧಾ,**
> **ದ್ವಾದಶಧಾಚ ತದರ್ಥನಿರ್ಣಯಾಯ ಬ್ರಹ್ಮಸೂತ್ರಾಣಿ ಚಕಾರ ॥ "**

ಎಂಬುದೇ ಸೂತ್ರಭಾಷ್ಯದ ಅವತಾರಿಕಾ ವಾಕ್ಯವಾಗಿದೆ. ಇದರ ಅಭಿಪ್ರಾಯವನ್ನು ಹಿಂದೆಯೇ ಸಂಗ್ರಹಿಸಿ ತಿಳಿಸಲಾಗಿದೆ. ಬ್ರಹ್ಮಸೂತ್ರಭಾಷ್ಯದಲ್ಲಿನ ಅವತಾರಿಕಾ ವಾಕ್ಯದಲ್ಲಿರುವಂತೆ ತಂತ್ರದೀಪಿಕಾದಲ್ಲಿರುವ ಬ್ರಹ್ಮರುದ್ರೇಂದ್ರಾದಿಭಿಃ ಎಂದು ಅವತಾರಿಕಾ ವಾಕ್ಯವೂ ಸಹ ಬ್ರಹ್ಮಸೂತ್ರಗಳಿಗೆ ಮೂರು ಬಗೆಯಾಗಿ ಪ್ರಾಮಾಣ್ಯವನ್ನು ತೋರಿಸುವ ಅಂಶಗಳಿಂದ ಕೂಡಿದುದಾಗಿರುತ್ತದೆ. ಶ್ರೀ ಗುರುರಾಜರ ತಂತ್ರದೀಪಿಕೆಯ ಅವತಾರಿಕಾ ವಾಕ್ಯದಲ್ಲಿನ ಒಂದೊಂದು ವಿಶೇಷಾಕ್ಷರ ಪ್ರಯೋಜನವನ್ನು ವಿವರಿಸಲಾಗುತ್ತದೆ.

ಜ್ಞಾನಾರ್ಥಂ ಅರ್ಥಿತೋ ನಾರಾಯಣೋ ವ್ಯಾಸತ್ವೇನ ಅವತೀರ್ಯ ಎಂಬ ಭಾಗದಿಂದ ಸರ್ವೋತ್ತಮನಾದ ಶ್ರೀಮನ್ನಾರಾಯಣನೇ ತತ್ವಜ್ಞಾನ ಕಾರ್ಯಕ್ಕಾಗಿ ಪ್ರಾದುರ್ಭಾವವನ್ನು ಹೊಂದಿದ್ದಾನೆಂಬುದರಿಂದ ''ಪರಮಾತ್ಮನು''

ರಾಮಕೃಷ್ಣಾದಿರೂಪೇಣ ಬಲಕಾರ್ಯೋ ಜನಾರ್ದನಃ ।
ದತ್ತವ್ಯಾಸಾದಿರೂಪೇಷು ಜ್ಞಾನಕಾರ್ಯಸ್ತಥಾಪ್ರಭುಃ ॥

ಎಂದು ನಿರ್ಣಯಾಚಾರ್ಯರು ಹೇಳಿರುವಂತೆ ಶ್ರೀ ವೇದವ್ಯಾಸಾವತಾರವು ಸಾಕ್ಷಾತ್ ಪರಮಾತ್ಮನಾದ ಶ್ರೀಮನ್ನಾರಾಯಣನ ಅವತಾರವೇ ಹೊರತು ಸಾಮಾನ್ಯ ಋಷಿಯು ಅಲ್ಲ. ಇದರಿಂದ ತಾಮಸ ಪುರಾಣದಲ್ಲಿ ಹೇಳಿರುವಂತೆ ''ವ್ಯಾಸ ಸ್ತ್ವಕಶ್ಚನಋಷಿ'' ಎಂದು ಹೇಳುವವರ ಮತವನ್ನು ನಿರಾಕರಿಸಿದಂತಾಯಿತು. ಆ ವೇದವ್ಯಾಸಾವತಾರವು ''ಜ್ಞಾನಾರ್ಥಂ ಅರ್ಥಿತಃ'' ಎಂದು ಹೇಳಿರುವುದರಿಂದ ತತ್ವಜ್ಞಾನ ಕಾರ್ಯಕ್ಕಾಗಿಯೇ ಶ್ರೀ ವ್ಯಾಸಾವತಾರವೆಂಬುದೂ ಸಿದ್ಧವಾಯಿತು. ನಾರಾಯಣ ಶಬ್ದದಿಂದಲೇ ಪರಮಾತ್ಮನಿಗೆ ತದವತಾರಭೂತರಾದ ವೇದವ್ಯಾಸರಿಗೆ ವಿವಕ್ಷಿತಾರ್ಥ ತತ್ವಜ್ಞಾನ, ವಿವಕ್ಷಾ, ಕರಣಪಾಟವಗಳು ಇವೆಯೆಂದು ಹೇಳಿದಂತಾಗಿ ಅವರಿಂದ ರಚಿತವಾದ ಬ್ರಹ್ಮಸೂತ್ರ ರೂಪವಾದ ಬ್ರಹ್ಮಮೀಮಾಂಸಾ ಶಾಸ್ತ್ರಕ್ಕೆ ವಕ್ತ್ರಾನುಕೂಲ್ಯವನ್ನು ತೋರಿಸಿದಂತಾಗಿದೆ.ಬ್ರಹ್ಮರುದ್ರೇಂದ್ರಾದಿಗಳಿಂದ ಪ್ರಾರ್ಥಿತನಾಗಿ ''ಬ್ರಹ್ಮಮೀಮಾಂಸಾ ಶಾಸ್ತ್ರವನ್ನು ರಚಿಸಿರುವುದರಿಂದ ''ತತ್ವಜ್ಞಾನಯೋಗ್ಯತಾ, ವಕ್ತೃಪ್ರೀತಿವಿಷಯತಾರೂಪವಾದ ಶ್ರೋತ್ರಾನುಕೂಲ್ಯವು ಈ ಶಾಸ್ತ್ರಕ್ಕೆ ಉಂಟೆಂದು ತೋರಿಸಿದಂತಾಯಿತು. ''ಜ್ಞಾನಾರ್ಥಂ ಅರ್ಥಿತಃ'' ಎಂಬಂಶದಿಂದ ಶ್ರೋತೃಪ್ರಯೋಜನೋದ್ದೇಶರೂಪವಾದ ಪ್ರಸಂಗಾನುಕೂಲ್ಯರೂಪಗಳಾದ ವಕ್ತ್ರಾನುಕೂಲ್ಯ, ಶ್ರೋತ್ರಾನುಕೂಲ್ಯ, ಪ್ರಸಂಗಾನುಕೂಲ್ಯರೂಪವಾದ ತ್ರಿವಿಧಾನುಕೂಲ್ಯಸಂಪನ್ನವಾದ ಈ ಬ್ರಹ್ಮಮೀಮಾಂಸಾ ಶಾಸ್ತ್ರಕ್ಕೆ, ಆಪ್ತೋಕ್ತತ್ವವು ವ್ಯಕ್ತವಾಗಿರುವುದರಿಂದ, ಆಪ್ತೋಕ್ತವಾದ ಪ್ರಯುಕ್ತ ಪ್ರಮಾಣವೆಂದು ಸಾಧಿಸಿದಂತಾಗಿದೆ. ಬ್ರಹ್ಮಾದಿಗಳೇ ಶ್ರೋತೃಗಳಾಗಿರುವ ಪ್ರಯುಕ್ತ ವಿವಕ್ಷಿತಾರ್ಥ ತತ್ವಜ್ಞಾನ, ವಿವಕ್ಷಾ ಕರಣಪಾಟವ, ಅವಿಪ್ರಲಂಭಕತ್ವ ರೂಪವಾದ ಆಪ್ತಶಬ್ದಾರ್ಥಕೋಟಿಪ್ರವಿಷ್ಟವಾದ ಅವಿಪ್ರಲಂಭಕತ್ವವೂ ಸ್ವತಃಪತ ವೇದವ್ಯಾಸರಿಗೆ ಇರುವ ಪ್ರಯುಕ್ತ, ಅಂತಹ ಆಪ್ತಗುಣಭರಿತರಾದ ಶ್ರೀ ವೇದವ್ಯಾಸರು ಆಪ್ತರಾಗಿರುವುದರಿಂದ ಅವರಿಂದ ರಚಿತವಾದ ಈ ಬ್ರಹ್ಮಸೂತ್ರ ರೂಪವಾದ ಶಾಸ್ತ್ರವು ಪ್ರಮಾಣತಮವೆಂದು ಸಾಧಿಸಿರುವ ಶ್ರೀಮನ್ನ್ಯಾಯಸುಧಾ ವಾಕ್ಯಾರ್ಥವನ್ನೇ ಈ ಗ್ರಂಥಕಾರರು ಸಂಗ್ರಹಿಸಿ ಹೇಳಿದ್ದಾರೆ. ''ತದರ್ಥನಿರ್ಣಯಾಯ ಬ್ರಹ್ಮಸೂತ್ರಾಣ್ಯಕೃತೇನೇ'' ಎಂಬ ಅವತಾರಿಕಾವಾಕ್ಯ ಘಟಕವಾದ ಭಾಗದಿಂದ ಈ ಶಾಸ್ತ್ರಕ್ಕೆ ಶ್ರುತಿಸಂವಾದಿತ್ವವನ್ನೂ, ಯುಕ್ತಿಸಂವಾದಿತ್ವವನ್ನೂ ಹೇಳಿದಂತಾಗಿದೆ.

ಬ್ರಹ್ಮ = ವೇದಃ, ತದರ್ಥಃ ಪರಬ್ರಹ್ಮವಾ = ತಸ್ಯ ಸೂತ್ರಾಣಿ = ಬ್ರಹ್ಮಸೂತ್ರಾಣಿ ಎಂಬ ನಿರ್ವಚನದಿಂದ ಸಕಲ ವೇದಾರ್ಥಭೂತನಾದ, ಪರಮಮುಖ್ಯವೃತ್ತಿಯಿಂದ ಸಕಲ ವೇದವೇದ್ಯನಾದ ಪರಬ್ರಹ್ಮನಾದ ಶ್ರೀ ವಿಷ್ಣುವಿನ ಸ್ವರೂಪ ನಿರ್ಣಾಯಕಗಳಾದ ನ್ಯಾಯನಿಬಂಧನಾತ್ಮಕಗಳಾದ ಸೂತ್ರಗಳಾದುದರಿಂದ ಈ ಬ್ರಹ್ಮಮೀಮಾಂಸಾ ಶಾಸ್ತ್ರಕ್ಕೆ

ಶ್ರುತಿಮೂಲತ್ವವೂ, (ಸಂವಾದಿತವೂ), ಯುಕ್ತಿಮೂಲತ್ವವೂ, (ಸಂವಾದಿತ್ವವೂ) ಉಕ್ತವಾಗಿರುವ ಪ್ರಯುಕ್ತ ತ್ರಿವಿಧವಾದ ಪ್ರಾಮಾಣ್ಯವು ಆಪ್ತವಾಕ್ಯತ್ವಾದಿರೂಪವಾದ ಮೂರು ಹೇತುಗಳಿಂದ ಸಿದ್ಧಿಸುತ್ತದೆ.

ಅಂದರೆ ೧. ಬ್ರಹ್ಮಮೀಮಾಂಸಾಶಾಸ್ತ್ರವು - ಪ್ರಮಾಣವು (ಯಥಾರ್ಥಜ್ಞಾನಜನಕವು) ಆಪ್ತವಾಕ್ಯತ್ವಾತ್ - ಮಹಾಭಾರತವತ್.

೨. ಬ್ರಹ್ಮಮೀಮಾಂಸಾಶಾಸ್ತ್ರವು - ಪ್ರಮಾಣವು - ಶ್ರುತಿ (ಸಂವಾದಿತ್ವಾತ್) ಮೂಲತ್ವಾತ್ - ಸಂಪ್ರತಿಪನ್ನವತ್.

೩. ಬ್ರಹ್ಮಮೀಮಾಂಸಾಶಾಸ್ತ್ರವು - ಪ್ರಮಾಣವು- ಯುಕ್ತಿ (ಸಂವಾದಿತ್ವಾತ್) ಮೂಲತ್ವಾತ್ - ಸಂಪ್ರತಿಪನ್ನವತ್.

ಎಂಬುದಾಗಿ ಮಹತ್ತಾದ ತ್ರಿವಿಧಪ್ರಾಮಾಣ್ಯೋಪೇತವಾಗಿರುವ ಅಂದರೆ ಸರ್ವೋತ್ತಮಪ್ರಾಮಾಣ್ಯೋಪೇತವಾದ ಈ ಬ್ರಹ್ಮಮೀಮಾಂಸಾಶಾಸ್ತ್ರರೂಪವಾದ ಬ್ರಹ್ಮಸೂತ್ರಗಳಿಗೆ ಪ್ರಾಧಾನ್ಯೇನ ವ್ಯಾಖ್ಯಾನ ಮಾಡಿರುವುದು ಯುಕ್ತವೇ ಆಗಿದೆ. ಶ್ರುತಿಯುಕ್ತಿ ಸಂವಾದಿತ್ವವೇ ಶ್ರುತಿಯುಕ್ತಿ ಮೂಲತ್ವವೆಂಬುದರಿಂದ ತಿಳಿದುಕೊಳ್ಳಬೇಕು.

ವಿವಕ್ಷಿತಾರ್ಥ ತತ್ತ್ವಜ್ಞಾನ, ಕರಣಪಾಟವ, ವಿವಕ್ಷಾ ಈ ಮೂರು ವಕ್ತ್ರನುಕೂಲ್ಯವು.

ತತ್ತ್ವಜ್ಞಾನಯೋಗ್ಯತಾ, ವಕ್ತೃಪ್ರೀತಿವಿಷಯತಾ ಎಂಬ ಎರಡು ಧರ್ಮಗಳು ಶ್ರೋತ್ರನುಕೂಲ್ಯವು.

ಶ್ರೋತೃಪ್ರಯೋಜನೋದ್ದೇಶವೇ ಪ್ರಸಂಗಾನುಕೂಲ್ಯವು.

ವಿವಕ್ಷಿತಾರ್ಥತತ್ತ್ವಜ್ಞಾನ, ವಿವಕ್ಷಾ, ಕರಣಪಾಟವ, ಅವಿಪ್ರಲಂಭಕತ್ವ ಈ ನಾಲ್ಕು ಧರ್ಮಗಳು ಸೇರಿ ಆಪ್ತಶಬ್ದಾರ್ಥಗಳಾಗಿವೆ.

ನಿರ್ಗಳಿತವಾದ ವಾಕ್ಯಾರ್ಥಗಳ ಸಂಗ್ರಹರೂಪವಾದ ಅನುಮಾನಗಳು ಈ ರೀತಿ ಇವೆ.

ಬಾದರಾಯಣರು :- ವಿವಕ್ಷಿತಾರ್ಥ ತತ್ತ್ವಜ್ಞಾನವುಳ್ಳವರು ಸರ್ವಜ್ಞರಾಗಿರುವುದರಿಂದ

ಅಂದರೆ ಬಾದರಾಯಣ :- ವಿವಕ್ಷಿತಾರ್ಥ ತತ್ತ್ವಜ್ಞಾನವಾನ್ - ಸರ್ವಜ್ಞತ್ವಾತ್ - ವ್ಯತಿರೇಕೇಣ ಚೈತ್ರವತ್

ಬಾದರಾಯಣ :- ಸರ್ವಜ್ಞ:- ಸರ್ವಜ್ಞ ಅಲ್ಪಬ್ರಹ್ಮಾದ್ಯುಪದೇಷ್ಟೃತ್ವಾತ್ - ವ್ಯತಿರೇಕೇಣ ಚೈತ್ರವತ್

ಅಥವಾ ಬಾದರಾಯಣ :- ಸರ್ವಜ್ಞ:- ಅಶೇಷಾರ್ಥ ಪ್ರತಿಪಾದಕಾಗಮಪ್ರಭವತ್ವಾತ್ - ವ್ಯತಿರೇಕೇಣ ಚೈತ್ರವತ್

ಬಾದರಾಯಣ :- ಕರಣಪಾಟವವಾನ್ - ಅಪೌರುಷೇಯವೇದಾದಿಪ್ರಭವತ್ವಾತ್ - ವ್ಯತಿರೇಕೇಣ ಚೈತ್ರವತ್ (ಪಟುಕರಣಃ)

ಬಾದರಾಯಣ :- ವಿವಕ್ಷಾವಾನ್ - ದಯಾವತ್ವಾತ್ - ಎಂಬ ಬಾದರಾಯಣ ಪಕ್ಷಕಗಳಾದ ಅಲ್ಲ ಅನುಮಾನಗಳಿಗೂ ವ್ಯತಿರೇಕದೃಷ್ಟಾಂತಗಳನ್ನೇ ಹೇಳಬೇಕು.

ಬ್ರಹ್ಮಾದಯಃ ಶ್ರೋತಾರ :- ತತ್ವಜ್ಞಾನಯೋಗ್ಯಾಃ - ಜಗದ್ಗುರುತ್ವಾತ್

ಬ್ರಹ್ಮಾದಯಃ ಶ್ರೋತಾರ । - ವಕ್ತೃಪ್ರೇಮಾಸ್ಪದಾಃ - ಅಜಾದಿತ್ವಾತ್

ಪ್ರಸಂಗಃ - ಪ್ರಯೋಜನೋದ್ದೇಶಕಃ - ಮೋಕ್ಷೋದ್ದೇಶಕತ್ವಾತ್

ಏತಚ್ಛಾಸ್ತ್ರಂ - (ಬ್ರಹ್ಮಮೀಮಾಂಸಾ ಶಾಸ್ತ್ರೆ) ಅನುಕೂಲವಕ್ತೃಕಂ - ಶಾಸ್ತ್ರಪ್ರಭವತ್ವಾದಿವಿಶಿಷ್ಟೇನ ಉಕ್ತತ್ವಾತ್ - ಭಾರತಾದಿವತ್.

ವಿಮತಂ (ಬ್ರಹ್ಮಮೀಮಾಂಸಾ ಶಾಸ್ತ್ರಂ) - ಅನುಕೂಲಶ್ರೋತೃಕಂ - ಜಗದುಪದೇಷ್ಟೃಭ್ಯೋ ಅಜಾದಿಭ್ಯಃ ಉಪದಿಷ್ಟತ್ವಾತ್.

ವಿಮತಂ (ಬ್ರಹ್ಮಮೀಮಾಂಸಾ ಶಾಸ್ತ್ರಂ) - ಅನುಕೂಲಪ್ರಸಂಗೋಪೇತಂ - ಶ್ರೋತೃಪ್ರಯೋಜನೋದ್ದೇಶ ಶಬ್ದತ್ವಾತ್ - ಮಹಾಭಾರತವತ್.

ಕಡೆಯದಾಗಿ ಪ್ರಾಮಾಣ್ಯಸಾಧಕಗಳಾದ ಅನುಮಾನಗಳು ಈ ರೀತಿ ಇವೆ.

ಏವಂಚ ಏತಚ್ಛಾಸ್ತ್ರಂ (ಬ್ರಹ್ಮಮೀಮಾಂಸಾಶಾಸ್ತ್ರಂ) -ಅಪ್ರೋಕ್ತಂ -ಅನುಕೂಲವಕ್ತೃದಿಮದ್ವಾತ್ ಮಹಾಭಾರತವತ್.

ಏತಚ್ಛಾಸ್ತ್ರಂ - (ಬ್ರಹ್ಮಮೀಮಾಂಸಾಶಾಸ್ತ್ರಂ) - ಪ್ರಮಾಣಂ - ಆಪ್ತವಾಕ್ಯತ್ವಾತ್ - ಮಹಾಭಾರತವತ್

ಏತಚ್ಛಾಸ್ತ್ರಂ - (ಬ್ರಹ್ಮಮೀಮಾಂಸಾಶಾಸ್ತ್ರಂ) - ಪ್ರಮಾಣಂ - ಶ್ರುತಿಸಂವಾದಿತ್ವಾತ್ - ಮಹಾಭಾರತವತ್

ಏತಚ್ಛಾಸ್ತ್ರಂ - (ಬ್ರಹ್ಮಮೀಮಾಂಸಾಶಾಸ್ತ್ರಂ) - ಪ್ರಮಾಣಂ - ಯುಕ್ತಿಸಂವಾದಿತ್ವಾತ್ - ಮಹಾಭಾರತವತ್

ಉತ್ಸನ್ನಾನ್ವೇದಾನ್ ಅಭಿವ್ಯಕ್ತಿಪೂರ್ವಕಂ = ಎಂಬುದರಿಂದ ಈ ಮುಂದೆ ತಿಳಿಸುವ ವಿಷಯವು ಸ್ಪಷ್ಟ ವಾಗುತ್ತದೆ.

''ನಿತ್ಯಾವೇದಾಃ ಸಮಸ್ತಾಶ್ಚ ಶಾಶ್ವತಾ ವಿಷ್ಣುಬುದ್ಧಿಗಾಃ'' ಎಂಬ ಬ್ರಹ್ಮಾಂಡ ವಚನದಂತೆ ನಿತ್ಯಗಳಾದ ವೇದಗಳಿಗೆ ಉತ್ಪಾದವೆಂದರೆ ಅಪವಾತಾದಿನಾ ತಿರೋಧಾನವೇ ಹೊರತು ವಿನಾಶರೂಪವಾದುದಲ್ಲ. ಇದನ್ನೇ ಭಾಷ್ಯಕಾರರು ಉದಾಹರಿಸುವ ಸ್ಕಾಂದ ವಚನವೂ ತಿಳಿಸುತ್ತಲಿದೆ.

> **''ಉತ್ಸನ್ನಾನ್ಭಗವಾನ್ವೇದಾನ್ ಉಜ್ಜಹಾರ ಹರಿಃ ಸ್ವಯಂ ।। ಇತಿಸ್ಕಾಂದೇ ।।**
> **ಉತ್ಸನ್ನಾನ್ = ಅಪಹಾರಾದಿನಾ ತಿರೋಹಿತಾನಿತ್ಯರ್ಥ:'' ಎಂದು ಟಿಪ್ಪಣೀಕಾರರು ಹೇಳಿದ್ದಾರೆ.**

''ಉಜ್ಜಹಾರ'' = ಉಚ್ಚಾರಣೇನವ್ಯಕ್ತೀಚಕಾರ'' ಎಂದು ಅರ್ಥ.

ಅನೇಕಧಾವಿಭಜ್ಯ ಎಂದು ತಂತ್ರದೀಪಿಕಾ ।। ಹಿಂದೆಯೇ ಋಕ್, ಯಜು, ಸಾಮ, ಅಥರ್ವ ಭೇದೇನ ವಿಭಾಗಿಸಲ್ಪಟ್ಟ

ವೇದವನ್ನು ಋಗ್ವೇದ, ಯಜುರ್ವೇದ, ಸಾಮವೇದ ಅಥರ್ವಣ ವೇದವೆಂಬ ಹೆಸರಿನಿಂದ ವಿಭಾಗಿಸಿ, ಒಂದೊಂದು ಭಾಗದಿಂದಲೂ, ಸಾಮವೇದವನ್ನು ಸಹಸ್ರ ಶಾಖೆಗಳಿಂದಲೂ, ಅಥರ್ವಣ ವೇದವನ್ನು ಹನ್ನೆರಡು ಶಾಖಾಭೇದೇನ ಶ್ರೀ ವೇದವ್ಯಾಸರು ವಿಭಾಗ ಮಾಡಿದರು ಎಂದು ಅಭಿಪ್ರಾಯ. ಶಾಖೋಪಶಾಖಾತ್ಮನಾ ವೇದಗಳು ಅನಂತಗಳಾದಾಗ್ಯೂ ಪರಮಮುಖ್ಯ ವೃತ್ತಿಯಿಂದ "ವೇದೈಶ್ಚಸರ್ವೈರಹಮೇವ ವೇದ್ಯಃ" ಎಂಬ ಗೀತಾಚಾರ್ಯರ ನುಡಿಯಂತೆ, ಎಲ್ಲಾ ವೇದಗಳಿಗೂ ಶ್ರೀ ವಿಷ್ಣುವಿನ ಸರ್ವೋತ್ತಮತ್ವದಲ್ಲಿಯೇ ಮಹಾ ತಾತ್ಪರ್ಯವು ಇರುವುದರಿಂದ ಅರ್ಥೈಕ್ಯದ ಅಭಿಪ್ರಾಯದಿಂದ ಸ್ಕಾಂದ ವಚನದಲ್ಲಿ "ಪುನಸ್ತಸ್ಯಾರ್ಥವಿತ್ತಯೇ" ಎಂಬಲ್ಲಿ "ತಸ್ಯ" ಎಂದು ಏಕವಚನದಿಂದ ವೇದಗಳ ನಿರ್ದೇಶವನ್ನು ಮಾಡಲಾಗಿದೆ. ತಸ್ಯ ಎಂಬುದು ಸಮುದಾಯೈಕವಚನಾಭಿಪ್ರಾಯದಿಂದ ಉಕ್ತವಾಗಿದೆ

.ವೇದದ ವಿಭಾಗದ ವಿಷಯದಲ್ಲಿ

**"ಋಚಃ ಸ ಋಚ ಉದ್ಧೃತ್ಯ ಋಗ್ವೇದಂ ಕೃತವಾನ್ ಪ್ರಭುಃ।**
**ಯಜೂಂಷಿ ನಿಗದಾಚ್ಚೈವ ತಥಾ ಸಾಮಾನಿ ಸಾಮತಃ।।**

ಎಂಬ ಋಗ್ಭಾಷ್ಯ ವಚನವೂ ಸಹ ಪ್ರಮಾಣವಾಗಿದೆ. ಮಹಾವೇದದಿಂದ ಉದ್ಧೃತವಾದ ವೇದಕ್ಕೆ ಉಪವೇದವೆಂದು ಹೆಸರು. ಆದರಿಂದ ಅವಾಂತರ ವೇದವೂ ಆ ಅವಾಂತರ ವೇದಕ್ಕೆ ಇಪ್ಪತ್ತನಾಲ್ಕು ಬಗೆ ಮೊದಲಾದ ಶಾಖೆಯ ವಿಭಾಗವನ್ನು ಶ್ರೀವೇದವ್ಯಾಸರು ಮಾಡಿರುತ್ತಾರೆಂಬ ಅಭಿಪ್ರಾಯ.

ಈ ವಿಷಯದಲ್ಲಿ ಒಂದು ಶಂಕೆಯು ಉಂಟಾಗುತ್ತಲಿದೆ. ಅಥರ್ವಣ ಭಾಷ್ಯದಲ್ಲಿ ಉದಾಹೃತವಾಗಿರುವ ಸ್ಮೃತಿ ವಚನವು ಈ ಕೆಳಗೆ ಕಂಡಂತಿದೆ.

**"ಏಕೋ ವೇದೋ ಕೃತೇ ಹ್ಯಾಸೀತ್ ತ್ರೇತಾಯಾಂ ಸ ತ್ರಿಧಾಽಭವತ್।**
**ಸ ಏವ ಪಂಚಧಾ ಜಾತೋ ದ್ವಾಪರಂಪ್ರಾಪ್ಯವೈ ಯುಗಮ್।।**

**ಉತ್ಪನ್ನಃ ಸ ಕಲಿಂ ಪ್ರಾಪ್ಯ ವೇದಃ ಪ್ರಾಯೇಣ ಸರ್ವಶಃ।।**

ಎಂಬ ಅಥರ್ವಣ ಭಾಷ್ಯದಲ್ಲಿ ಉದಾಹೃತವಾಗಿರುವ ಸ್ಮೃತಿ ವಚನದಲ್ಲಿ "ಸಕಲ ವೇದಗಳಿಗೂ ಕಲಿಯುಗದಲ್ಲೇ ಉತ್ಪಾದವನ್ನು ಹೇಳಲಾಗಿದೆ. ಆದರೆ ಸೂತ್ರ ಭಾಷ್ಯದಲ್ಲಿ ಪ್ರಾರಂಭದ ವಾಕ್ಯದಲ್ಲಿ "ದ್ವಾಪರೇ ಸರ್ವತ್ರ ಜ್ಞಾನ ಆಕುಲೀಭೂತೇ ವೇದಮುತ್ಪನ್ನಂ ಚಾತುರ್ಧಾ ವ್ಯಭಜತ್" ಎಂಬುದಾಗಿ ದ್ವಾಪರ ಯುಗದಲ್ಲೇ ಉತ್ಪಾದವನ್ನು ಹೇಳುವುದರಿಂದ ಅಥರ್ವಣ ಭಾಷ್ಯೋದಾಹೃತವಾದ ಸ್ಮೃತಿ ವಚನಕ್ಕು ಸೂತ್ರಭಾಷ್ಯ ವಾಕ್ಯಕ್ಕೂ ಪರಸ್ಪರ ವಿರೋಧವು ಆಪಾತತಃ ತೋರಿ ಬರುತ್ತಿದೆ. ಕೂಲಂಕಷವಾಗಿ ಪರಿಶೀಲಿಸಲಾಗಿ ಯಾವ ವಿರೋಧಕ್ಕೂ ಇಲ್ಲಿ ಅವಕಾಶವಿಲ್ಲ. ದ್ವಾಪರ ಯುಗದಲ್ಲಿ ಅಪೌರುಷೇಯವಾದ ವೇದವು ನಾಲ್ಕು ಬಗೆಯಾಗಿದ್ದರೂ ಪೌರುಷೇಯಗಳಾದ ಇತಿಹಾಸ ಪುರಾಣಾದಿಗಳಿಂದ

ಸಹಿತವಾಗಿ ಪಂಚವಿಧತ್ವವು ಸಂಭವಿಸುವ ದೃಷ್ಟಿಯಿಂದ ''ಸ ಏವ ಪಂಚಧಾಜಾತೋ ದ್ವಾಪರಂ ಪ್ರಾಪ್ಯ ವೈ ಯುಗಂ'' ಎಂಬ ಸ್ಮೃತಿವಚನವು ಹೊರಟಿದೆ.

ಬಾಹುಲ್ಯದಿಂದ ಎಲ್ಲ ಪ್ರಕಾರಗಳಿಂದಲೂ ವೇದಕ್ಕೆ ಕಲಿಯುಗದಲ್ಲಿ ಉತ್ಸಾದವು (ಅಪಪಾಠಾದಿನಾ - ತಿರೋಧಾನವು) ಕಂಡುಬಂದಾಗ್ಯೂ, ದ್ವಾಪರ ಯುಗದಲ್ಲೂ ಸಹ ಶ್ರೀ ವೇದವ್ಯಾಸರ ಅವತಾರಕ್ಕೆ ಮುಂಚಿತವಾಗಿ ಅಪಪಾಠಾದಿರೂಪವಾದ ಉತ್ಸಾದವು ಸಂಭವಿಸಿರುವುದರಿಂದ ''ದ್ವಾಪರೇ ಇತ್ಯಾದಿ ಭಾಷ್ಯದಲ್ಲಿ ಉತ್ಸನ್ನಾನ್ ವೇದಾನ್'' ಎಂದು ಹೇಳಿರುವುದಕ್ಕೆ ಯಾವ ವಿರೋಧವೂ ಇರುವುದಿಲ್ಲ. ಈ ವಿರೋಧ ಪರಿಹಾರ ಕ್ರಮವನ್ನು ಭಾಷ್ಯದೀಪಿಕಾಚಾರ್ಯರು ತೋರಿಸಿರುತ್ತಾರೆ.

ತಂತ್ರದೀಪಿಕಾ - ''ತತ್ರೇದಂ ಆದಿಮಂ ಸೂತ್ರಂ''

ಆ ವೇದಾರ್ಥ ನಿರ್ಣಾಯಕಗಳಾದ ನ್ಯಾಯನಿಬಂಧನಾತ್ಮಕಗಳಾದ ಬ್ರಹ್ಮಸೂತ್ರಗಳಲ್ಲಿ ಇದು ''ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ'' ಎಂಬುದು ಮೊಟ್ಟಮೊದಲನೆಯ ಸೂತ್ರವು ಎಂದು ಅರ್ಥ.

ತಂತ್ರದೀಪಿಕಾ -

**ಅತ್ರನಯೇ ಚತುರಧ್ಯಾಯಾತ್ಮಕಸ್ಯ ತಚ್ಛಾಸ್ತ್ರಸ್ಯಾರಂಭಣೀಯ -**
**ತ್ವೋಪಯುಕ್ತತಯಾ ಜಿಜ್ಞಾಸಾಕರ್ತವ್ಯತ್ವಂ ಸಮರ್ಥ್ಯತೇ ।।**

**ಅರ್ಥ** :- ಅತ್ರನಯೇ = ಈ ಅಧಿಕರಣದಲ್ಲಿ (ಅಂದರೆ ಮೊಟ್ಟಮೊದಲನೆಯದಾದ ಈ ಜಿಜ್ಞಾಸಾಧಿಕರಣದಲ್ಲಿ, ಚತುರಧ್ಯಾಯಾತ್ಮಕಸ್ಯ = ನಾಲ್ಕು ಅಧ್ಯಾಯ ರೂಪವಾದ (ಮೊದಲನೆಯದಾದ ಸಮನ್ವಯಾಧ್ಯಾಯ, ಎರಡನೆಯದಾದ ಅವಿರೋಧಾಧ್ಯಾಯ, ಮೂರನೆಯದಾದ ಸಾಧನಾಧ್ಯಾಯ, ನಾಲ್ಕನೆಯದಾದ ಫಲಾಧ್ಯಾಯ ಎಂಬ ನಾಲ್ಕು ಅಧ್ಯಾಯಾತ್ಮಕವಾದ) ಏತಚ್ಛಾಸ್ತ್ರಸ್ಯ = ಈ ಬ್ರಹ್ಮಮೀಮಾಂಸಾ ಶಾಸ್ತ್ರಕ್ಕೆ, ಆರಂಭಣೀಯತ್ವೋಪಯುಕ್ತತಯಾ = ಪ್ರಾರಂಭಕ್ಕೆ ಉಪಯುಕ್ತವಾಗಿರುವುದರಿಂದ (ಬ್ರಹ್ಮಮೀಮಾಂಸಾ ಶಾಸ್ತ್ರವನ್ನು ಪ್ರಾರಂಭಿಸಲು ಅತ್ಯಗತ್ಯವಾಗಿ ಬೇಕಾಗಿರುವ ಅಂಶದಿಂದ ಕೂಡಿರುವ ಪ್ರಯುಕ್ತವಾಗಿ) ಜಿಜ್ಞಾಸಾ ಕರ್ತವ್ಯತ್ವಂ = ಪರಬ್ರಹ್ಮನಾದ ಶ್ರೀ ವಿಷ್ಣುವಿನ ಜಿಜ್ಞಾಸೆಯ ಕರ್ತವ್ಯತ್ವವನ್ನು (ಅಂದರೆ ಶ್ರೀ ವಿಷ್ಣುವಿನ ಶ್ರವಣ, ಮನನ, ಧ್ಯಾನಗಳೆಂಬ ಜಿಜ್ಞಾಸೆಯು (ವಿಚಾರವು) ಅವಶ್ಯಕವಾಗಿ ಮಾಡಬೇಕೆಂಬುದು. (ಕರ್ತವ್ಯವೆಂಬುದು) ಸಮರ್ಥ್ಯತೇ = ಸಮರ್ಥಿಸಲ್ಪಡುತ್ತದೆ. ಆದಕಾರಣ ಮೊದಲನೆಯ ಸೂತ್ರದಲ್ಲಿ ಕರ್ತವ್ಯ ಎಂಬ ಪದವನ್ನು ಅಧ್ಯಾಹಾರ ಮಾಡಿ ಅರ್ಥೈಸಬೇಕು.

**ವಿಶೇಷ ವಿಚಾರ** :- ಈ ಮೊದಲನೆಯ ಅಧಿಕರಣದ ಹೆಸರು ಜಿಜ್ಞಾಸಾಧಿಕರಣ, ವಿಷಯವಾಕ್ಯ ಮೊದಲಾದವುಗಳನ್ನು ಹಿಂದೆಯೇ ವಿವರಿಸಲಾಗಿದೆ.

ತಂತ್ರದೀಪಿಕಾ:-

**''ಏತಚ್ಛಾಸ್ತ್ರಸ್ಯ ಆರಂಭಣೀಯತ್ವೋಪಯುಕ್ತತಯಾ ಜಿಜ್ಞಾಸಾಕರ್ತವ್ಯತ್ವಂ ಸಮರ್ಥ್ಯತೇ''**

ಎಂಬ ವಾಕ್ಯದ ಅಭಿಪ್ರಾಯವು ಹೀಗಿದೆ.

ಜಿಜ್ಞಾಸಾ, ವಿಚಾರ, ಮನನ, ಮೀಮಾಂಸಾ, ಯುಕ್ತ್ಯನುಸಂಧಾನ, ಈ ಪದಗಳೆಲ್ಲಾ ಪರ್ಯಾಯ ಪದಗಳಾಗಿವೆ. ಜಿಜ್ಞಾಸಾ ಶಬ್ದವು ವಿಚಾರ ಎಂಬ ಅರ್ಥದಲ್ಲಿ ರೂಢಶಬ್ದವಾಗಿದೆ.

ಯುಕ್ತ್ಯನುಸಂಧಾನವೆಂದರೆ ಯುಕ್ತಿಗಳಿಂದ ಪೂರ್ವಪಕ್ಷ, ಉತ್ತರ ಪಕ್ಷಗಳ (ಸಿದ್ಧಾಂತ ಪಕ್ಷಗಳ) ಬಲಾಬಲ ಚಿಂತನವು. ಅಂತಹ ವಿಚಾರಾತ್ಮಕವಾದ ಜಿಜ್ಞಾಸಾಂಗಭೂತವಾದ ನ್ಯಾಯಗ್ರಥನಾತ್ಮಕವಾದುದು ಬ್ರಹ್ಮಮೀಮಾಂಸಾ ಶಾಸ್ತ್ರವು.

ಬ್ರಹ್ಮವಿಚಾರರೂಪವಾದ ಅಥವಾ ಮನನರೂಪವಾದ ಅಥವಾ ನ್ಯಾಯಾನುಸಂಧಾನರೂಪವಾದ ಬ್ರಹ್ಮ ಜಿಜ್ಞಾಸೆಯು ಕರ್ತವ್ಯವೆಂದು ಸಮರ್ಥಿಸದಿದ್ದರೆ ಅಥವಾ ಅಕರ್ತವ್ಯವಾದರೆ ಅಂತಹ ಬ್ರಹ್ಮಜಿಜ್ಞಾಸಾವಿಧಾಯಕವಾದ ಬ್ರಹ್ಮವಿಚಾರಾಂಗನ್ಯಾಯನಿಬಂಧನಾತ್ಮಕವಾದ ಅಥವಾ ನ್ಯಾಯಗ್ರಥನಾತ್ಮಕವಾದ ಬ್ರಹ್ಮಮೀಮಾಂಸಾಶಾಸ್ತ್ರವು ಅನಾರಂಭಣೀಯವಾಗುತ್ತದೆ. ನ್ಯಾಯಾನುಸಂಧಾನಕ್ಕಾಗಿಯೇ ನ್ಯಾಯಗ್ರಥನಾತ್ಮಕವಾದ ಶಾಸ್ತ್ರವು ಪ್ರವೃತ್ತವಾಗಿದೆ. ಆದ್ದರಿಂದ ಶಾಸ್ತ್ರವು ಅವಶ್ಯಂ ಆರಂಭಣೀಯವಾಗಿದೆ. ನ್ಯಾಯನುಸಂಧಾನವಿಲ್ಲದಿದ್ದರೆ ಪರಮ ಪುರುಷಾರ್ಥಕ್ಕೆ ಕಾರಣವಾದ ಶ್ರುತ್ಯರ್ಥದ ನಿರ್ಣಯವೇ ಆಗುವಂತಿಲ್ಲ. ಆದಕಾರಣ ಸಮನ್ವಯಾಧ್ಯಾಯ ಅವಿರೋಧಾಧ್ಯಾಯ, ಸಾಧನಾಧ್ಯಾಯಫಲಾಧ್ಯಾಯಗಳೆಂಬ ನಾಲ್ಕು ಅಧ್ಯಾಯಾತ್ಮಕವಾದ ಈ ಬ್ರಹ್ಮಮೀಮಾಂಸಾಶಾಸ್ತ್ರವನ್ನು ಆರಂಭ ಮಾಡಲು ಯೋಗ್ಯವೆಂದು ಪ್ರತಿಪಾದಿಸಲು ಬ್ರಹ್ಮವಿಚಾರರೂಪವಾದ ಬ್ರಹ್ಮಜಿಜ್ಞಾಸೆಯು ಅತ್ಯವಶ್ಯ ಕರ್ತವ್ಯವೆಂಬುದನ್ನು ಸಮರ್ಥಿಸಲಾಗುತ್ತದೆ. ಏವಂಚ ಬ್ರಹ್ಮಜಿಜ್ಞಾಸೆಯು ಕರ್ತವ್ಯವಾದುದರಿಂದ ಬ್ರಹ್ಮಮೀಮಾಂಸಾಶಾಸ್ತ್ರವು ಆರಂಭಣೀಯವೆಂಬುದು ಈ ಜಿಜ್ಞಾಸಾಧಿಕರಣದ ಫಲವಾಗಿದೆ.

ಈ ರೀತಿ ಬ್ರಹ್ಮವಿಚಾರಪರವಾದ ಶಾಸ್ತ್ರದ ಆರಂಭಣೀಯತ್ವಕ್ಕೆ ಉಪಯುಕ್ತವಾದ ಬ್ರಹ್ಮಜಿಜ್ಞಾಸೆಯ ಕರ್ತವ್ಯತ್ವವನ್ನು ಈ ಜಿಜ್ಞಾಸಾಧಿಕರಣದಲ್ಲಿ ಸಾಧಿಸಿರುವುದರಿಂದ ಈ ಅಧಿಕರಣಕ್ಕೆ ಶಾಸ್ತ್ರದಿಂದ ಉಪೋದ್ಘಾತಿಕೀ ಎಂಬ ಸಂಗತಿಯು ಸಂಭವಿಸುತ್ತದೆ.

ತಂತ್ರದೀಪಿಕಾ:-

ಅತ್ರಆದ್ಯಂತಯೋರೋಂಕಾರಃ "ಸ್ರವತ್ಯನೋಂಕೃತಂ ಬ್ರಹ್ಮ ಪರಸ್ತಾಚ್ಚ ವಿಶೀರ್ಯತೆ ಇತಿಶ್ರುತಿಸಿದ್ಧಃ।।

ಅರ್ಥಃ- ಅತ್ರ = ಈ ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ ಎಂಬ ಮೊದಲನೆಯ ಬ್ರಹ್ಮಸೂತ್ರದಲ್ಲಿ, ಆದ್ಯಂತಯೋಃ = ಮೊದಲು ಮತ್ತು ಕಡೆಯಲ್ಲಿರತಕ್ಕ, ಓಂಕಾರಃ = ಓಂಕಾರವು, ಸ್ರವತ್ಯನೋಂಕೃತಂ ಬ್ರಹ್ಮ ಪರಸ್ತಾಚ್ಚವಿಶೀರ್ಯತೆ" ಎಂಬ ವೇದವಾಕ್ಯದಿಂದ ಸಿದ್ಧವಾಗಿದೆ.

ನಿಂದಾರೂಪ ಅರ್ಥವಾದ ರೂಪವಾದ ಈ ಶ್ರುತಿಯ ಅರ್ಥ :- ಅನೋಂಕೃತಂ ಬ್ರಹ್ಮ = ಮೊದಲು ಓಂಕಾರ ರಹಿತವಾಗಿ ಉಚ್ಚರಿಸಲ್ಪಡತಕ್ಕ ವೇದವು. (ಮಂತ್ರವು) ಸ್ರವತಿ = ಉಚ್ಚಾರಣೆಯಿಂದ ಲಭಿಸುವ ಪುಣ್ಯಜನಕವಾಗುವುದಿಲ್ಲ. ತೂತು ಮಡಿಕೆಯಂತೆ ಸೋರಿಹೋಗುತ್ತದೆ. ಪುಣ್ಯಜನಕವಾಗುವುದಿಲ್ಲ (ಬರತಕ್ಕ ಪುಣ್ಯವು ಸೋರಿಹೋಗುತ್ತದೆ.) ಪರಸ್ತಾಚ್ಚ ಅನೋಂಕೃತಂ = ಕಡೆಯಲ್ಲಿ ಓಂಕಾರರಹಿತವಾಗಿ ಉಚ್ಚರಿಸಿದರೆ (ಇರತಕ್ಕ ಪುಣ್ಯವೂ ಸಹ ನಾಶವಾಗುತ್ತದೆ.) ಫಲಜನಕವಾಗುವುದಿಲ್ಲ.

ಈ ಅರ್ಥವಾದ ರೂಪವಾದ ವೇದವಾಣಿಯು ಆದಿಯಲ್ಲಿಯೂ ಅಂತ್ಯದಲ್ಲಿಯೂ ಓಂಕಾರದ ಉಚ್ಚಾರಣೆಯ ಆವಶ್ಯಕತೆಯನ್ನು ತಿಳಿಸುತ್ತಲಿದೆ.

ಮಂತ್ರವೇ ಮೊದಲಾದವುಗಳ ಆರಂಭದಲ್ಲಿ ಓಂಕಾರವನ್ನು ಉಚ್ಚರಿಸಲೇಬೇಕು. ಹಾಗೆ ಉಚ್ಚರಿಸದಿದ್ದರೆ ತೂತು ಮಡಿಕೆಯಲ್ಲಿ ನೀರು ಸೋರಿ ಹೋಗುವಂತೆ ಪುಣ್ಯವು ಉಂಟಾಗುವುದಿಲ್ಲ. ಅಂದರೆ ಸುಕೃತಜನಕವಾಗುವುದಿಲ್ಲ. ಕಡೆಯಲ್ಲಿ ಓಂಕಾರವನ್ನು ಉಚ್ಚರಿಸದಿದ್ದರೆ ಫಲಜನಕವಾಗುವುದಿಲ್ಲ. ಆದಕಾರಣ ವೇದದಲ್ಲೂ ವೇದಾರ್ಥ ನಿರ್ಣಾಯಕಗಳಾದ ನ್ಯಾಯನಿಬಂಧನಾತ್ಮಕಗಳಾದ ಬ್ರಹ್ಮಸೂತ್ರಗಳ ಆರಂಭದಲ್ಲಿಯೂ ಕಡೆಯಲ್ಲಿಯೂ ಓಂಕಾರವನ್ನು ಉಚ್ಚರಿಸಿಯೇ ತೀರಬೇಕೆಂದು ಪರಮಾಭಿಪ್ರಾಯ. ಬ್ರಹ್ಮಸೂತ್ರಗಳಲ್ಲಿ ಪ್ರತಿಯೊಂದು ಸೂತ್ರವು ಸಹ ಸಿದ್ಧಾಂತ ಸೂತ್ರವೇ ಆಗಿದೆ. ಪ್ರತ್ಯೇಕವಾಗಿ ಪ್ರತಿಯೊಂದು ಸೂತ್ರವೂ ಅನೇಕ ವೇದವಾಕ್ಯಗಳ ವಿಚಾರಪರವಾಗಿರುವುದರಿಂದ ಅವಾಂತರ ಬ್ರಹ್ಮವಿದ್ಯೆಯೇ ಆಗಿದೆ. ನಿಂದಾರೂಪವಾದ ಶ್ರೌತಾರ್ಥವಾದ ರೂಪವಾಗಿರುವ "ಸ್ರವತೀತ್ಯಾದಿ" ವೇದಸಾಮರ್ಥ್ಯದಿಂದ ಸಕಲ ಬ್ರಹ್ಮವಿದ್ಯೆಗಳಲ್ಲೂ ಆರಂಭದಲ್ಲೂ ಕಡೆಯಲ್ಲೂ ಸಹ ಓಂಕಾರವನ್ನು ಅಧ್ಯಾಹಾರ ಮಾಡಬೇಕೆಂದು ಅಭಿಪ್ರಾಯ.

**ಓಂಕಾರದ ನಿಷ್ಪತ್ತಿಪ್ರಕಾರ.**

ಓಂಕಾರವು ಗತ್ಯಾದ್ಯರ್ಥಕವಾದ ಅವಧಾತುವಿನ ರೂಪವಾಗಿದೆ. ಅವ ಎಂಬ ಧಾತುವು ಅವ ರಕ್ಷಣ, ಗತಿ, ಕಾಂತಿ, ಪ್ರೀತಿ, ತೃಪ್ತಿ, ಅವಗಮ, ಪ್ರವೇಶ, ಶ್ರವಣ, ಸ್ವಾಮಿ ಅರ್ಥಯಾಚನ, ಕ್ರಿಯಾ, ಇಚ್ಛಾ, ದೀಪ್ತಿ, ಅವಾಪ್ತಿ, ಆಲಿಂಗನ, ಹಿಂಸಾ. ದಾನ, ಭಾಗ, ವೃದ್ಧಿಷು ಎಂಬುದಾಗಿ ಭೀಮಸೇನಧಾತು ಪಾಠದಲ್ಲಿ ಅನೇಕಾರ್ಥಗಳಲ್ಲಿ ಪಠಿತವಾಗಿದೆ. ಪಾಣಿನಿಯಧಾತುಪಾಠದಂತೆ ಭೀಮಸೇನಧಾತುಪಾಠವನ್ನೂ ಪ್ರಾಚೀನರು ಉದಾಹರಿಸಿರುತ್ತಾರೆ.

ಗತ್ಯಾದ್ಯರ್ಥಕವಾದ ಅವಧಾತುವಿನ ಮುಂದೆ, ಅವತೇಃ ಟಿಲೋಪಶ್ಚ (ಉಣಾದಿ. ಪ್ರ. ಪಾದ ಸೂ. ೧೩೯) ಎಂಬ ಸೂತ್ರದಿಂದ ಮನ್ಪ್ರತ್ಯಯವೂ, ಪ್ರತ್ಯಯದಟಿಗೆ ಲೋಪವೂ ವಿಹಿತವಾಗಿರುವುದರಿಂದ ಅವಮನ್, ಅವಮ್, ಎಂದಾಯಿತು. ಆಮೇಲೆ ಜ್ವರ, ತ್ವರ, ಸ್ರಿವಿ, ಅವಿ, ಮವಾಂ ಉಪಧಾಯಾಶ್ಚ (೬-೪-೨೧.) ಎಂಬ ಸೂತ್ರದಿಂದ ಅವಧಾತುವಿನ, ವಕಾರಕ್ಕೂ, ಉಪಧಾಭೂತವಾದ ಅಕಾರಕ್ಕೂ, ಊಠ್ ಆದೇಶವು ಬರುತ್ತದೆ. ಊಊಮ್ ಎಂದಾಗಲಾಗಿ, ಸವರ್ಣದೀರ್ಘಸಂಧಿ ಬಂದು ಎರಡೂ ಊಕಾರಗಳ ಜಾಗದಲ್ಲಿ ಊಮ್ ಎಂದಾಗಿ, ಸಾರ್ವಧಾತುಕಾರ್ಧಧಾತುಕಯೋಃ (೭-೩-೮೪) ಎಂಬ ಸೂತ್ರದಿಂದ ಊ ಕಾರಕ್ಕೆ ಗುಣ ಬರಲಾಗಿ, ಓ+ಮ್ ಎಂದಾಗಿ "ಓಮ್" ಎಂದು ರೂಪವು ಸಿದ್ಧಿಸುತ್ತದೆ. ಅವತಿರ್ನಾಮಾಯಂಧಾತುಃ ಗತಿಕರ್ಮಾ ಪ್ರವೇಶಕರ್ಮಾಕ ಎಂದು ಸುಧಾದಲ್ಲಿ ಉಕ್ತವಾಗಿರುವಂತೆ ಅವಧಾತುವು ಗತಿಕ್ರಿಯಾವಾಚಿಯಾಗಿಯೂ ಪ್ರವೇಶನ ಕ್ರಿಯಾವಾಚಿಯೂ ಆಗಿದೆ. ಅವತೇಃಟಿಲೋಪಶ್ಚ (ಉಣಾದಿ. ೧೩೯) ಎಂಬ ಔಣಾದಿಕ ಪಾಠಮನ್ ಪ್ರತ್ಯಯವು ಇಲ್ಲಿ "ಉಣಾದಯೊ ಬಹುಳಂ" ಎಂಬ ಸೂತ್ರದಿಂದ ಕರ್ತರಿ, ಕರ್ಮಣಿ, ಎರಡೂ ಅರ್ಥದಲ್ಲಿ ಬಂದಿದೆ. ಉಣಾದಿಗಳು ಧಾತ್ವಧಿಕಾರದಲ್ಲಿ ವಿಹಿತವಾಗಿರುವ ಪ್ರಯುಕ್ತ ಕೃದತಿಙ್ (೩-೧-೯೩) ಎಂಬ ಸೂತ್ರದಿಂದ ಈಧಾತ್ವಧಿ ಕಾರದಲ್ಲಿ ತಿಙ್ ಭಿನ್ನವಾದ ಪ್ರತ್ಯಯಕ್ಕೆ ಕೃತ್ಸಂಜ್ಞೆಯನ್ನು ಹೇಳಲಾಗಿರುವ ಪ್ರಯುಕ್ತ ಕರ್ತರಿಕೃತ್ (೩-೪-೬೭) ಕೃತ್ಪ್ರತ್ಯಯವು ಕರ್ತರಿಸ್ಯಾದಿತಿ ಎಂದು ಕರ್ತ್ರರ್ಥದಲ್ಲಿ ಮಾತ್ರ ಹೇಳಿದ್ದಾಗ್ಯೂ ಸಹ "ಉಣಾದಯೋ ಬಹುಳಮ್ ಎಂದು ಬಹುಳ ಗ್ರಹಣ ಮಾಡಿ "ಪತೇ ವರ್ತಮಾನೇ ಸಂಜ್ಞಾಯಾಂ ಚ ಬಹುಳಂ ಸ್ಯುಃ. ಬಹುಳ ಪಚನಾತ್ ಲಕ್ಷ್ಯಾನುಸಾರೇಣ ವ್ಯವಸ್ಥಾ" ಎಂದು ವೈಯ್ಯಾಕರಣರು ವ್ಯವಸ್ಥೆ ಮಾಡಿರುವಂತೆ ಕರ್ತರಿ ಹೇಗೋ ಹಾಗೆಯೇ ಕರ್ಮಾರ್ಥದಲ್ಲೂ ಮನ್ ಪ್ರತ್ಯಯವು ಬಂದಿರುತ್ತದೆ.

ಗತಿ, ಪ್ರವೇಶ ಎಂಬ ಅರ್ಥಗಳ ಪಕ್ಷದಲ್ಲೂ, ಕರ್ತೃ, ಕರ್ಮ ಎಂಬ ಯಾವುದೊಂದು ಪ್ರತ್ಯಯಾರ್ಥದ ಪಕ್ಷದಲ್ಲೂ ಸಹ, ಪ್ರತ್ಯಯಕ್ಕೆ ಮ್ ಎಂಬುದಕ್ಕೆ ಕರ್ಮ ಎಂದು ಅರ್ಥವನ್ನಿಟ್ಟುಕೊಂಡಾಗ ಕರ್ತೃವನ್ನು ಅಪೇಕ್ಷಿಸುತ್ತದೆ. ಅಂದರೆ ಪ್ರವೇಶ ಕರ್ಮ ಎಂದು ಹೇಳಿದಾಗ ಯೋಗ್ಯತಯಾ (ಗುಣೈಃ) ಗುಣಗಳಿಂದ ಅಂದರೆ ಗುಣಕರ್ತೃಕ ಪ್ರವೇಶಕರ್ಮ ಗುಣಗಳಿಂದ ಹೊಂದಲ್ಪಟ್ಟವನು ಎಂದಾಗ, ಗುಣಪರಿಪೂರ್ಣ ಎಂದು ಅರ್ಥವು ಸಿದ್ಧವಾಗುತ್ತದೆ.

ಮನ್ಪ್ರತ್ಯಯವು ಕರ್ತ್ರರ್ಥಕದಲ್ಲಿ ವಿವಕ್ಷಿತವಾದರೆ ಗುಣಾನ್ವಿಶತಿ ಅಂದರೆ ಗುಣಗಳನ್ನು ಪ್ರವೇಶ ಮಾಡುತ್ತಾನೆ. ಗುಣಕರ್ಮಕ ಪ್ರವೇಶಕರ್ತೃ ಎಂಬ ಅರ್ಥದ ದೃಷ್ಟಿಯಿಂದ ಗುಣಪರಿಪೂರ್ಣ ಎಂದೇ ಪರ್ಯವಸಿತವಾದ ಅರ್ಥವಾಗುವುದರಿಂದ ಓಂಕಾರಕ್ಕೆ "ಗುಣಪರಿಪೂರ್ಣ" ಎಂದೇ ಅರ್ಥವಾಗುತ್ತದೆ.

ಶ್ರೀಮನ್ನ್ಯಾಯಸುಧೆಯಲ್ಲಿ ಮನ್ಪ್ರತ್ಯಯಕ್ಕೆ ಕರ್ಮ ಎಂಬ ಅರ್ಥವನ್ನಿಟ್ಟುಕೊಂಡಾಗ ಗುಣೈಃ ಎಂದು ಕರ್ತೃ ಎಂಬ ಅರ್ಥದ ಪಕ್ಷದಲ್ಲಿ ಗುಣಾನ್ವಾ ಓತಃಪ್ರೋತಃ ಎಂದು ಹೇಳಿದ್ದಾರೆ.

ಪ್ರತ್ಯಯದ ಕರ್ಮಕರ್ತೃ ಉಭಯಾರ್ಥದಲ್ಲಿಯೂ, ಧಾತುವಿನ ಪ್ರವೇಶ, ಗತಿ, ರೂಪವಾದ ಉಭಯ ಅರ್ಥಗಳ ಪಕ್ಷದಲ್ಲಿಯೂ ಹೆಚ್ಚು ಅರ್ಥದಲ್ಲಿ ವ್ಯತ್ಯಾಸವಿಲ್ಲ. ಎರಡೂ ಪಕ್ಷಗಳಲ್ಲಿಯೂ "ಬೃಹಂತೋಹ್ಯಸ್ಮಿನ್ಗುಣಾಃ" ಇತ್ಯಾದಿ ಶ್ರುತ್ಯಂತರದಲ್ಲಿ ಉಕ್ತವಾಗಿರುವಂತೆ ದೇಶಕಾಲ ಪರಿಪೂರ್ಣತ್ವದಂತೆ ಗುಣಪರಿಪೂರ್ಣತ್ವ (ಗುಣೌತತ್ವವೂ ಸಹ) ವೂ ಸಹ ಹೇಳಿದಂತಾಗುತ್ತದೆ. ಆದಕಾರಣ ಓಂ ಎಂದರೆ ಗುಣಪರಿಪೂರ್ಣ ಎಂದೇ ಅರ್ಥವು ಸಿದ್ಧಿಸುತ್ತದೆ. ಈ ವಿಷಯದಲ್ಲಿ

**"ಓತಂ ಜಗದ್ಯತ್ರ ಸ್ವಯಂ ಚ ಪೂರ್ಣೋ ವೇದೋಕ್ತರೂಪೋಽನುಪಚಾರತಶ್ಚ ।**
**ಸರ್ವೈಃ ಶುಭೈಶ್ಚಾಭಿಹಿತೋ ಪಚಾನ್ಯೈಃ ಓಂ, ತತ್, ಸತ್, ಇತಿ ಏನಂ ಅತೋ ವದಂತಿ"॥**

ಎಂಬ ಗೀತಾಭಾಷ್ಯದ ಹದಿನೇಳನೇ ಅಧ್ಯಾಯದಲ್ಲಿ ಉದಾಹೃತವಾಗಿರುವ ಶ್ರುತಿಯೂ, "ಓಂ ಇತಿ ಬ್ರಹ್ಮ" ಎಂಬ ಶ್ರುತಿಯೂ "ಓನಾಮಾ ಭಗವಾನ್ ವಿಷ್ಣುಃ ಅಧಿಕೋಚ್ಚಗುಣತ್ವತಃ" ಎಂಬ ತೈತ್ತಿರೀಯ ಭಾಷ್ಯೋಕ್ತವಾದ ಸ್ಮೃತಿರೂಪವಾದ ಪ್ರಮಾಣ ವಾಕ್ಯಗಳೂ ಸಾಧಕಗಳಾಗಿವೆ.

"ಓಂ" ಕಾರದ ನಿಷ್ಪತ್ತಿಯು ಹೇಗೆ ಅವಧಾತುವಿನ ಮುಂದೆ ಔಣಾದಿಕವಾದ ಮನ್ಪ್ರತ್ಯಯವು ಬಂದು ಆಗಿದೆಯೋ ಹಾಗೆಯೇ" ಅಥವಾ ಊಯತೇ ರೂಪಮೇತತ್" ಎಂದು ಸುಧಾದಲ್ಲಿ ತಿಳಿಸಿರುವಂತೆ ವೇಞ್ ತಂತುಸಂತಾನೇ ಎಂದು ಪಠಿತವಾದ ವೇಞ್ ಧಾತುವಿನಿಂದಲೂ ನಿಷ್ಪನ್ನವಾಗುತ್ತದೆ. ಉಣಾದಯೋ ಬಹುಳಮ್ (೩-೩-೧) ಎಂಬ ಸೂತ್ರದಲ್ಲಿ ಬಹುಳ ಗ್ರಹಣ ಮಾಡಿರುವುದರಿಂದ ವೇಞ್ ಧಾತುವಿನ ಮುಂದೆ ಕರ್ಮ ಎಂಬ ಅರ್ಥದಲ್ಲಿ ಕ್ಮನ್ ಪ್ರತ್ಯಯವು ಬಂದು ಯಜಾದಿಯಾಗಿರುವುದರಿಂದ ಸಂಪ್ರಸಾರಣ ಬಂದು ಉ+ಕ್ಮನ್ ಎಂದಾಗಿ ಪ್ರತ್ಯಯಕಕಾರಕ್ಕೆ ಲೋಪ ಬಂದು ಪ್ರತ್ಯಯಟಿಲೋಪ ಬಂದು, ಉಣಾದಯೋ ಬಹುಳಮ್" ಎಂದು ಬಹುಳ ಗ್ರಹಣ ಮಾಡಿರುವುದರಿಂದಲೇ ಗುಣವೂ ಬಂದು ಓಂ ಎಂದು ರೂಪವು ನಿಷ್ಪನ್ನವಾಗುತ್ತದೆ. ಇಗ್ಯಣಃ ಸಂಪ್ರಸಾರಣಮ್ (ಪಾ. ಸೂ. ೧-೧-೪೫) ಯಣ್ ಸ್ಥಾನದಲ್ಲಿ ಪ್ರಯುಜ್ಯಮಾನವಾದ ಇಕ್ ಯಾವುದುಂಟೋ ಅದಕ್ಕೆ ಸಂಪ್ರಸಾರಣ ಎಂಬ ಸಂಜ್ಞೆಯು. ಯ,ವ,ರ,ಲ ಎಂಬ ವರ್ಣಗಳಿಗೆ

ಕ್ರಮವಾಗಿ ಇ,ಉ,ಋ,ಲೃ, ಕಾರಗಳು ಬರುತ್ತವೆ. ಪ್ರಕೃತದಲ್ಲಿ ವೇಞ್ ಎಂಬಲ್ಲಿ ವಕಾರಕ್ಕೆ ಉಕಾರವು ಬಂದು ವೇಞ್+ಕ್ವನ್,ಉ+ಕ್ವನ್, ಪ್ರತ್ಯಯಕಕಾರಕ್ಕೆ ಲೋಪ, ಟಿಲೋಪವಾಗಿಯಾಗಿ ಉ+ಮ್ ಎಂದಾಗಿ ಬಹುಳ ಗ್ರಹಣದಿಂದ ಉಕಾರಕ್ಕೆ ಗುಣವಾಗಿ ಓ+ಮ್ = ಎಂದಾಗಿ ''ಓಂ'' ಎಂಬ ರೂಪವು ವೇಞ್ ಧಾತುವಿನಿಂದಲೂ ನಿಷ್ಪನ್ನವಾಯಿತು. ಎಂದು ಅಭಿಪ್ರಾಯ. ತಂತುಸನ್ತಾನ ಎಂಬ ಅರ್ಥದಲ್ಲಿ ವೇಞ್ ಧಾತುವು ಪಠಿತವಾಗಿದ್ದರೂ ಧಾತುಗಳು ಅನೇಕಾರ್ಥಗಳಾಗಿರುವ ಪ್ರಯುಕ್ತ ಪ್ರಕೃತಕ್ಕೆ ಬೇಕಾಗಿರುವ ಅರ್ಥವನ್ನು ಇಟ್ಟುಕೊಳ್ಳುವ ವಿಷಯದಲ್ಲಿ ಯಾವ ಬಾಧಕವೂ ಇರುವುದಿಲ್ಲ.

**ತಂತ್ರದೀಪಿಕಾ :- ಆದ್ಯೋ ದೃಷ್ಟಾದೃಷ್ಟಾರ್ಥಃ।**
**ಅತ ಏವ ಏತತ್ಸೂತ್ರಾವಯವತ್ವಾತ್ ಅನ್ಯತ್ರಅನುಷಂಗೋ ನ ಸ್ಯಾದಿತಿ ಸರ್ವಸೂತ್ರೇಷು,**
**ಅದೃಷ್ಟಮಾತ್ರಾರ್ಥತಯಾ ಆದೌ ಅನುಷಂಗಾಯ ಅಸಂಹಿತತಯಾ ಪಠ್ಯತೇ।।**

**ಅರ್ಥ** :- ಓಂ ಅಥಾತೋಬ್ರಹ್ಮಜಿಜ್ಞಾಸಾ ಓಂ ಎಂಬ ಸೂತ್ರದಲ್ಲಿ ಮೊದಲೂ, ಕಡೆಯಲ್ಲಿಯೂ ಓಂಕಾರಗಳಿವೆ. ಆರಂಭದಲ್ಲಿರುವ ಓಂಕಾರವು. ಅಂದರೆ ಆದ್ಯಃ = ಆರಂಭದಲ್ಲಿನ ಓಂಕಾರವು, ದೃಷ್ಟಾದೃಷ್ಟಾರ್ಥಃ = ದೃಷ್ಟಾರ್ಥವಾಗಿದೆ. ಮತ್ತು ಗ್ರಂಥಾರಂಭದಲ್ಲಿ ಅವಾಂತರ ಬ್ರಹ್ಮವಿದ್ಯೆಯೆನಿಸಿದ ಸೂತ್ರದ ಆರಂಭದಲ್ಲಿ ಮಂಗಳ ಪ್ರಯೋಜನಕವಾಗಿ ಓಂಕಾರದ ಉಚ್ಚಾರಣೆಯು ಶ್ರೌತಾರ್ಥವಾದ ಸಿದ್ಧವಾಗಿರುವುದರಿಂದ ಪುಣ್ಯಜನಕವಾಗಿರುವ ಪ್ರಯುಕ್ತ ಅದೃಷ್ಟಾರ್ಥವಾಗಿಯೂ ಇರುತ್ತದೆ. ಅಂದರೆ ಮೊದಲನೆಯ ಬ್ರಹ್ಮಸೂತ್ರದಲ್ಲಿ ಪ್ರಾರಂಭದಲ್ಲಿ ಒಂದೇ ಓಂಕಾರವೆಂಬ ಅಭಿಪ್ರಾಯದಿಂದ ಅದಕ್ಕೆ ದೃಷ್ಟಾರ್ಥಕತ್ವವೂ, ಅದೃಷ್ಟ ಪ್ರಯೋಜನಕತ್ವವೂ ಉಂಟೆಂಬ ಅಭಿಪ್ರಾಯ. ಗುಣಪರಿಪೂರ್ಣತ್ವಾರ್ಥಕವಾಗಿರುವುದರಿಂದ ಓಂ = ಗುಣಪರಿಪೂರ್ಣ ಎಂಬ ಓಂಕಾರದ ಅರ್ಥಕ್ಕೆ ಸೂತ್ರಘಟಕವಾದ ಬ್ರಹ್ಮಶಬ್ದಾರ್ಥವಾದ ವಿಷ್ಣು ಎಂಬ ಅರ್ಥದಲ್ಲಿ ಅನ್ವಯವನ್ನು ಹೇಳುವುದರಿಂದ ''ಅನ್ವಯ ಪ್ರತಿಯೋಗ್ಯರ್ಥ ಸಮರ್ಪಕತ್ವರೂಪವಾದ ಅವಯವತ್ವವು ಓಂಕಾರಕ್ಕೆ ಇರುವ ಪ್ರಯುಕ್ತ ಪ್ರಥಮಸೂತ್ರದ ಅವಯವತ್ವವೂ ಸಹ ಉಂಟೆಂಬ ಅಭಿಪ್ರಾಯದಿಂದ, ಅತ ಏವ ಏತತ್ಸೂತ್ರಾವಯವತ್ವಾತ್ ಎಂಬ ವಾಕ್ಯವು ಹೊರಟಿದೆ. ಅತಏವ = ಓಂಕಾರವು ಗುಣಪರಿಪೂರ್ಣ ಎಂಬ ಅರ್ಥವುಳ್ಳದ್ದಾಗಿ ಬ್ರಹ್ಮಶಬ್ದಾರ್ಥವಾದ ವಿಷ್ಣು ಎಂಬ ವಿಶೇಷ್ಯದಲ್ಲಿ ಗುಣ ಪರಿಪೂರ್ಣಃ ವಿಷ್ಣುಃ ಎಂದು ವಿಶೇಷಣತಯಾ ಅನ್ವಯವನ್ನು ಉಳ್ಳ ಕಾರಣದಿಂದ, ಏತತ್ಸೂತ್ರಾವಯವತ್ವಾತ್ = ಪ್ರಥಮ ಸೂತ್ರದ ಅವಯವವಾಗಿರುವುದರಿಂದ ಎಂದು ಅರ್ಥ. ಈ ರೀತಿ ಮೊದಲನೆಯ ಸೂತ್ರದಲ್ಲಿ ಅವಯವವಾಗಿರುವ ಓಂಕಾರವು ಮುಂದಿನ ಓಂಜನ್ಮಾದ್ಯಸ್ಯಯತಃ ಓಂ ಇತ್ಯಾದಿ ಸೂತ್ರಗಳಲ್ಲಿ ಅನುವೃತ್ತಿಯನ್ನು ಅವಯವತ್ವೇನ ಸಂಬಂಧವನ್ನು ಪಡೆಯುವುದಿಲ್ಲವಾದುದರಿಂದ, ಸರ್ವಸೂತ್ರೇಷು ಮುಂದಿನ ಓಂಜನ್ಮಾದ್ಯಸ್ಯಯತಃ ಓಂ ಇತ್ಯಾದಿ ೫೬೪ ಸೂತ್ರಗಳಲ್ಲಿ ಅದೃಷ್ಟಮಾತ್ರಾರ್ಥತಯಾ ಆದೌ ಅನುಷಂಗಾಯ =ಅದೃಷ್ಟರೂಪವಾದ ಪ್ರಯೋಜನಕ್ಕೋಸ್ಕರವಾಗಿ. ವ್ಯಾಕರಣ ಶಾಸ್ತ್ರದಲ್ಲಿ ಅಧಿಕಾರ ಸೂತ್ರದಂತೆ ಸಂಬಂಧವು ಅಂದರೆ ಅನುವೃತ್ತಿಯು ಉಂಟೆಂಬುದನ್ನು ಸೂಚಿಸುವುದಕ್ಕಾಗಿ ಆದೌ ಮಿಕ್ಕ ಸೂತ್ರಗಳ ಪ್ರಾರಂಭದಲ್ಲಿ ಅನುಷಂಗಾಯ = ಅದೃಷ್ಟ

ಪ್ರಯೋಜನಕ್ಕಾಗಿ ಮಾತ್ರ ಸಂಬಂಧವನ್ನು ಸೂಚಿಸುವುದಕ್ಕಾಗಿ ಅಸಂಹಿತತಯಾ = ಈ ಸೂತ್ರದಲ್ಲಿರತಕ್ಕ ಅಥ ಶಬ್ದದಂತೆ ಅತಃ ಎಂಬ ಶಬ್ದದಂತೆ ಇರದೆ, ಅಥ ಎಂಬ ಶಬ್ದಕ್ಕೆ ಸೇರಿಸಿ ಸಂಬಂಧ ಪಡದಂತೆ ಪಠ್ಯತೆ = ಪಠಿಸಲಾಗಿದೆ. ಪ್ರತ್ಯೇಕವಾಗಿ ಉಚ್ಚರಿಸಲ್ಪಡುತ್ತದೆ. ಮೊದಲು ಪ್ರತ್ಯೇಕವಾಗಿ ಉಚ್ಚರಿಸಲ್ಪಡತಕ್ಕದ್ದೆಂದು ತಾತ್ಪರ್ಯ, ಅಂದರೆ ಸೂತ್ರಪ್ರವಿಷ್ಟವಾದ ಅಥ ಎಂಬ ಶಬ್ದಕ್ಕೆ ಮುಂಚಿತವಾಗಿ ಪ್ರತ್ಯೇಕವಾಗಿ ಓಂ ಎಂದು ಉಚ್ಚರಿಸಿ - ಅಥಾತೋ ಬ್ರಹ್ಮಜಿಜ್ಞಾಸಾ ಓಂ ಎಂದು ಸೂತ್ರವನ್ನು ಉಚ್ಚರಿಸಬೇಕು ಎಂದು ಅಭಿಪ್ರಾಯ. ವರ್ಣಗಳ ಅತಿಶಯಿತವಾದ ಸನ್ನಿಧಿಯು ಇಲ್ಲವೆಂದು ಅಭಿಪ್ರಾಯ. ಅತಿಶಯಿತ ಸನ್ನಿಧಿ ಎಂದರೆ ಅತಿಸಾಮೀಪ್ಯವು. ಇಂತಹ ಅತಿಸಾಮೀಪ್ಯವು ಅಥ ಶಬ್ದದೊಡನೆ ಓಂ ಪದಕ್ಕೆ ಇಲ್ಲವೆಂದು ಪರಮಾಭಿಪ್ರಾಯವಾಗಿದೆ. ಒಂದು ವೇಳೆ ಅಥ ಶಬ್ದದಂತೆ, ಅತಃ ಶಬ್ದದಂತೆ ಅತಿಶಯಿತ ಸನ್ನಿಧಿಯುಳ್ಳದ್ದನ್ನಾಗಿ ಉಚ್ಚರಿಸಿದರೆ ಅಂದರೆ ಅಥ ಶಬ್ದದಂತೆ, ಅತಃ ಶಬ್ದದಂತೆ ಸೂತ್ರದಲ್ಲಿ ಪ್ರವೇಶವನ್ನು ಒಪ್ಪಿದರೆ ಓಮಥಾತೋ ಬ್ರಹ್ಮಜಿಜ್ಞಾಸಾ ಓಂ ಎಂದು ಉಚ್ಚರಿಸಿದರೆ ಈ ಓಂಕಾರವು ಮೊದಲನೆಯ ಸೂತ್ರದ ಅವಯವವೇ ಆಗಿದೆ. ಮೊದಲನೆಯ ಸೂತ್ರಕ್ಕೆ ಮಾತ್ರ ಸಂಬಂಧವುಳ್ಳದುವೇ ತೋರತು ಮುಂದಿನ ಸೂತ್ರಗಳಲ್ಲಿ ಅದೃಷ್ಟ ಪ್ರಯೋಜನಕ್ಕಾಗಿಯೂ ಸಹ ಇದು ಸಂಬಂಧಪಡುವುದಿಲ್ಲವೆಂದು ಅಭಿಪ್ರಾಯವು ಬಂದೀತು. ಆದರೆ ಹಾಗೆ ತಿಳಿಯಲ್ಪಡದೇ ಇರಲಿ ಎಂಬ ದೃಷ್ಟಿಯಿಂದ ಸೂತ್ರಕಾರರು ಅಂತರಂಗ ಜ್ಞಾಪಕ ದೃಷ್ಟಿಯಿಂದ ಪೃಥಕ್ಕರಿಸಿರುತ್ತಾರೆ. ಪೃಥಕ್ಕರಣವೇ ಇಲ್ಲಿ ಅಂತರಂಗ ಜ್ಞಾಪಕ. ವಾಕ್ಯಾಂತರ್ಗತವಾಗಿ ಪೃಥಕ್ಕರಿಸುವಿಕೆಯೇ ಪ್ರತ್ಯೇಕವಾಗಿ ಉಚ್ಚರಿಸುವಿಕೆಯೇ ಅಂತರಂಗ. ವ್ಯಾಖ್ಯಾನ ಮಾಡತಕ್ಕ ಪುರುಷನ ವ್ಯಾಖ್ಯಾನವು ಬಹಿರಂಗ. ಉತ್ತರ ಸೂತ್ರಗಳಲ್ಲಿ (ಮುಂದಿನ ಸೂತ್ರಗಳಲ್ಲಿ) ಅಧಿಕೃತತ್ವವನ್ನು ಸೂಚಿಸುವುದಕ್ಕಾಗಿ ಪ್ರತ್ಯೇಕವಾಗಿ ಓಂಕಾರವು ಉಚ್ಚರಿತವಾಗಿದೆ ಎಂದು ನಿಗೂಢವಾದ ಅಭಿಪ್ರಾಯ.

ಓಂಕಾರವನ್ನು ಪ್ರತ್ಯೇಕವಾಗಿ ಅಂದರೆ ಪೃಥಕ್ಕಾಗಿ ಉಚ್ಚರಿಸಿರುವುದರಿಂದಲೇ ಇದು ಸರ್ವತ್ರ ಅಧಿಕಾರ ಪ್ರಾಪ್ತವಾಗಿದೆಯೆಂಬ ಜ್ಞಾನವು ಬರುವುದರಿಂದ ಉಚ್ಚಾರಣೆಗೆ ಅಂತರಂಗತ್ವವು ವಿವಕ್ಷಿತವಾಗಿದೆ. ಉಚ್ಚಾರಣಾನಂತರ ಭಾವಿಯಾದ ವ್ಯಾಖ್ಯಾನವಾದರೋ ಬಹಿರಂಗ ಜ್ಞಾಪಕವು. ಅಂತರಂಗ ಜ್ಞಾಪಕ, ಬಹಿರಂಗ ಜ್ಞಾಪಕಗಳಲ್ಲಿ ಅಂತರಂಗ ಜ್ಞಾಪಕಕ್ಕೆ ಪ್ರಾಧಾನ್ಯವಿರುವುದರಿಂದ ಸೂತ್ರಕಾರರು ಅಂತರಂಗ ಜ್ಞಾಪಕವಾದ ಪೃಥಗುಚ್ಚಾರಣೆಯನ್ನು ಅನುಸರಿಸಿರುತ್ತಾರೆ. ಈ ಅಭಿಪ್ರಾಯದಿಂದಲೇ ಅನುವ್ಯಾಖ್ಯಾನಕಾರರು ಸರ್ವತ್ರಾನುಗತತ್ವೇನ ಪೃಥಗೋಂಕ್ರಿಯತೇಽಖಿಲೈಃ ಎಂದು ಹೇಳಿದ್ದಾರೆ. ಮೊದಲನೆಯ ಸೂತ್ರಕ್ಕೆ ಜ್ಞಾಪಕತ್ವೇನ ಸಮಸ್ತಶಾಸ್ತ್ರಕ್ಕೆ ಕಾರಕತ್ವೇನ ಓಮಥ ಶಬ್ದಗಳು ಉಪಯೋಗಿಯಾಗಿವೆ, ಎಂಬ ಅಭಿಪ್ರಾಯವು "ಜ್ಞಾಪಕತಯಾ ಆದಿಸೂತ್ರಸ್ಯ, ಕಾರಕತಯಾ ಸಮಸ್ತಶಾಸ್ತ್ರಸ್ಯ ಚೋಪಯೋಗಿತ್ವೇನ" ಎಂಬ ಸುಧಾ ವಾಕ್ಯದಲ್ಲಿ ಸ್ಪಷ್ಟವಾಗಿದೆ.

**ತಂತ್ರದೀಪಿಕಾ** :- ಅಂತ್ಯ ಅದೃಷ್ಟಮಾತ್ರಾರ್ಥ ನ ಸೂತ್ರಾವಯವಃ = ಸೂತ್ರದ ಕಡೆಯಲ್ಲಿರುವ ಓಂಕಾರವು ಕೇವಲ ಅದೃಷ್ಟ (ಪುಣ್ಯ ಅಥವಾ ಸುಕೃತ) ರೂಪವಾದ ಪ್ರಯೋಜನವುಳ್ಳದುದಾಗಿದೆ. ಕಡೆಯಲ್ಲಿ ಉಚ್ಚರಿಸಲ್ಪಡತಕ್ಕ ಓಂಕಾರಕ್ಕೆ ಸೂತ್ರಾವಯವತ್ವವು ಇರುವುದಿಲ್ಲ. ಅಂದರೆ ಸೂತ್ರದಲ್ಲಿನ ಯಾವ ಪದದ ಅರ್ಥದಿಂದಲೂ ಅನ್ವಯವನ್ನು ಹೊಂದಿರುವ ಅರ್ಥವನ್ನು ತಿಳಿಸುತ್ತಿಲ್ಲವೆಂದು ಅಭಿಪ್ರಾಯ.

**ತಂತ್ರದೀಪಿಕಾ** :- ಅನ್ವಯ ಪ್ರತಿಯೋಗ್ಯ ಸಮರ್ಪಕ ಇತಿಯಾವತ್ = ಅನ್ವಯ ಪ್ರತಿಯೋಗ್ಯರ್ಥ ಸಮರ್ಪಕತ್ವವೇ ಅವಯತ್ವವು. ಸೂತ್ರಘಟಕವಾದ ಪದದ ಅರ್ಥದಿಂದ ಅನ್ವಯವನ್ನು (ಸಂಬಂಧವನ್ನು) ಹೊಂದಿರುವ ಅರ್ಥವನ್ನು ತಿಳಿಸುವುದು ಸೂತ್ರಾವಯವವೆನಿಸುತ್ತದೆ. ಅಂತಹ ಅವಯವತ್ವವು ಪ್ರಥಮ ಸೂತ್ರದಲ್ಲಿ ಅಥ, ಅತಃ, ಬ್ರಹ್ಮಜಿಜ್ಞಾಸಾ ಪದಗಳಿಗೆ ಕಂಡುಬಂದಿದೆ. ಪ್ರಾಥಮಿಕವಾದ ಓಂಕಾರಕ್ಕು ಇದೆ. ಇಂತಹ ಅವಯವತ್ವವು ಕಡೆಯ ಓಂಕಾರಕ್ಕೆ ಇಲ್ಲವೆಂದು ಅಭಿಪ್ರಾಯ. ಕಡೆಯಲ್ಲಿ ಉಚ್ಚರಿಸುವ ಓಂಕಾರಕ್ಕೆ ಕೇವಲ ಮಂಗಳ ಪ್ರಯೋಜಕತ್ವವೇ ಹೊರತು ಯಾವ ಅರ್ಥವನ್ನೂ ಅದಕ್ಕೆ ಹೇಳಿಲ್ಲ.

**ವಿಶೇಷ ವಿಚಾರ** :- ಶ್ರೀಮನ್ನ್ಯಾಯಸುಧಾ ವ್ಯಾಖ್ಯಾನವಾದ ಶ್ರೀ ವಾದಿರಾಜರಿಂದ ವಿರಚಿತವಾದ ಗುರ್ವರ್ಥದೀಪಿಕಾ ವ್ಯಾಖ್ಯಾನದಲ್ಲಿ ಬ್ರಹ್ಮಸೂತ್ರಗಳೆಲ್ಲಾ ನ್ಯಾಯನಿಬಂಧಾತ್ಮಕಗಳೆಂದೂ ಪರಾರ್ಥಾನುಮಾನರೂಪಗಳೆಂದೂ ಪರಾರ್ಥಾನುಮಾನವು ಪ್ರತಿಜ್ಞಾದಿರೂಪವಾದುದೆಂದೂ ಆದ್ದರಿಂದಲೇ ಪ್ರತಿಸೂತ್ರದಲ್ಲೂ ಮೊದಲನೆಯ ಓಂಕಾರವು ಪ್ರತಿಜ್ಞಾರೂಪವೆಂದೂ ಕಡೆಯ ಓಂಕಾರವು ನಿಗಮನರೂಪವೆಂದೂ ಆದಿ ಮತ್ತು ಅಂತ್ಯಗಳಲ್ಲಿರತಕ್ಕ ಎರಡೂ ಓಂಕಾರಗಳೂ ಪ್ರತಿಸೂತ್ರಗಳಲ್ಲೂ ಅವಯವಗಳೇ ಆಗಿವೆಯೆಂದು ಹೇಳಿದ್ದಾರೆ. ಆಗುರ್ವರ್ಥದೀಪಿಕಾ ವಾಕ್ಯಗಳು ಈ ರೀತಿ ಇವೆ.

> **"ಸರ್ವಾಸ್ವಪಿ ಬ್ರಹ್ಮವಿದ್ಯಾಸು ಆದ್ಯಂತಯೋರೋಂಕಾರಪ್ರಯೋಗಃ ಕರ್ತವ್ಯ ಇತ್ಯತ್ರ ಸ್ವಸಂಗೃಹೀತ ಶ್ರುತಿಪ್ರಕರಣಸ್ಥಬಹುತರಗುಣೈಃ ಬ್ರಹ್ಮಣಃ ಪೂರ್ಣತ್ವಸಾಧನೇ ಪ್ರತ್ಯೇಕಂ ಯುಕ್ತಿರೂಪಾಣಿಹಿ ಸೂತ್ರಾಣಿ।**
> **ಸಾಧನ ಫಲಾಧ್ಯಾಯಯೋರಪಿ. ವೈರಾಗ್ಯಾದ್ಯಲೌಕಿಕಸಾಧನ - ಜ್ಞೇಯತ್ವ - ಮುಕ್ತಪ್ರಾಪ್ಯತ್ವ - ಮುಕ್ತನಿಯಾಮಕತ್ವಾದಿಗುಣಪೂರ್ತೇಃ ಪ್ರತಿಪಾದ್ಯತ್ವೇನ ತದ್ಗತಸೂತ್ರಾಣ್ಯಪಿ ಗುಣಪೂರ್ಣತ್ವೇ ಯುಕ್ತಿರೂಪಾಣಿ।**
> **ಯುಕ್ತೌ ಚ ಪ್ರತಿಜ್ಞಾನಿಗಮನಯೋರಾವಶ್ಯಕತ್ವೇನ, ಆದ್ಯಃ ಓಂಕಾರಃ ಗುಣಪೂರ್ಣ ಪ್ರತಿಜ್ಞಾರೂಪಃ।**
> **ಅಂತಿಮಸ್ತು ತಸ್ಮಾದ್ಗುಣಪೂರ್ಣಃ ಇತಿ ನಿಗಮನರೂಪಃ।**
> **ಅತಃ ಸೂತ್ರಾವಯವತಾಪ್ಯನಯೋರವಶ್ಯಂ ಅಂಗೀಕಾರ್ಯ ಮಿತಿ ಭಾವಃ (ಇತಿ ನ್ಯಾಯಸುಧಾ ವ್ಯಾಖ್ಯಾನಗುರ್ವರ್ಥದೀಪಿಕಾ)**

**ತಂತ್ರದೀಪಿಕಾ** :- ಓಂಕಾರಾಥಶಬ್ದೌ ಮಂಗಳಫಲೌ ಕ್ರಮಾತ್ ಗುಣಪೂರ್ತ್ಯಾನಂತರ್ಯಾರ್ಥಕೌ।

**ಅರ್ಥ** :- ಓಂಕಾರ ಮತ್ತು ಅಥಶಬ್ದಗಳು, ಮಂಗಳಫಲೌ = ಮಂಗಳರೂಪವಾದ ಪ್ರಯೋಜನ (ಫಲ) ವುಳ್ಳವುಗಳಾಗಿವೆ. ಸ್ವಯಂ ಮಂಗಳ ರೂಪವೇ ಆಗಿವೆ. ಮಂಗಳ ಪ್ರಯೋಜನಕೌ ಎಂದು ನ್ಯಾಯಸುಧಾ. ಕ್ರಮಾತ್ = ಕ್ರಮವಾಗಿ, ಅಂದರೆ ಮೊದಲನೆಯದಾದ ಓಂಕಾರವೂ, ಎರಡನೆಯದಾದ ಅಥ ಶಬ್ದವೂ, ಗುಣಪೂರ್ತ್ಯಾನಂತರ್ಯಾರ್ಥಕೌ = ಗುಣಪೂರ್ಣತ್ವಂ, ಆನಂತರ್ಯ ಎಂಬ ಅರ್ಥವನ್ನು ಉಳ್ಳವುಗಳಾಗಿವೆ. ಮೊದಲನೆಯದಾದ ಓಂಕಾರಕ್ಕೆ ಗುಣಪೂರ್ಣತ್ವ ಎಂದೂ ಎರಡನೆಯದಾದ ಅಥ ಶಬ್ದಕ್ಕೆ ಆನಂತರ್ಯ ಎಂದೂ ಅರ್ಥವೆಂದು ಅಭಿಪ್ರಾಯ.

ಓಂಕಾರವು ಅವಧಾತುವಿನ ಮುಂದೆ ಔಣಾದಿಕವಾದ ಮನ್ ಎಂಬ ಪ್ರತ್ಯಯವು ಬಂದು, ಊಠ್ ಎಂಬ ಆದೇಶವು ಬಂದು, ಸವರ್ಣದೀರ್ಘಸಂಧಿ ಬಂದು, ಪ್ರತ್ಯಯಕ್ಕೆ ಟಿಲೋಪವೂ ಬಂದು ನಿಷ್ಪನ್ನವಾಗಿರುವುದರಿಂದ ಹಿಂದೆಯೇ ತಿಳಿಸಿರುವಂತೆ ಗುಣ ಪರಿಪೂರ್ಣತ್ವವು ಓಂ ಶಬ್ದದ ಅರ್ಥವಾಗಿದೆ.

ಅಥ ಎಂಬ ಶಬ್ದವಾದರೋ ಕೋಶರೀತ್ಯಾ "ಮಂಗಳ, ಅನಂತರ, ಆರಂಭ, ಪ್ರಶ್ನೆ, ಕಾರ್ತ್ಸ್ನ್ಯೇಷ್ವಥೋ ಅಥ" ಎಂಬ ಅಮರಕೋಶದಂತೆ ಅಥೊ, ಅಥ ಎಂಬ ಎರಡು ಶಬ್ದಗಳೂ ಕೂಡ ಮಂಗಳ ಪ್ರಯೋಜನವಾಗಿವೆ.

**ಮಂಗಳಕ್ಕೆ ಉದಾ :-** ಅಥಾತೋ ಬ್ರಹ್ಮಜಿಜ್ಞಾಸಾ,

**ಅನಂತರ ಎಂಬುದಕ್ಕೆ ಉದಾ:-** ಸ್ನಾನಂಕುರು ಅಥ ಭುಂಜೀಥಾ, ಸ್ನಾನ ಮಾಡು ಅನಂತರದಲ್ಲಿ ಊಟಮಾಡು ಎಂಬಲ್ಲಿ ಅನಂತರ ಎಂಬ ಅರ್ಥ ಉಳ್ಳದ್ದಾಗಿದೆ.

**ಆರಂಭ ಎಂಬ ಅರ್ಥದಲ್ಲಿ ಉದಾ:-** ಅಥ ಶಬ್ದಾನುಶಾಸನಂ ಲಿಖ್ಯತೆ,

**ಪ್ರಶ್ನ ಎಂಬ ಅರ್ಥದಲ್ಲಿ ಉದಾ :-** ಅಥ ವಕ್ತುಂ ಸಮರ್ಥೋऽಸಿ ?

**ಕಾರ್ತ್ಸ್ನ್ಯ ಎಂಬ ಅರ್ಥದಲ್ಲಿ ಉದಾ :-** ಅಥಧಾತೂನ್ಬ್ರೂಮಃ.

ಈ ರೀತಿಯಾಗಿ ಅಥ ಶಬ್ದಕ್ಕೆ ಅನೇಕ ವಿಧಗಳಾದ ಅರ್ಥಗಳುಂಟೆಂಬ ವಿಷಯದಲ್ಲಿ ಬೇರೇ ಕೋಶಗಳಲ್ಲೂ ಉಲ್ಲೇಖವು ಇರುತ್ತದೆ. ಹೈಮ ಎಂಬ ಕೋಶದಲ್ಲೂ ಕಂಡುಬಂದಿದೆ.

**ಮಂಗಳೇ ಸಂಶಯಾರಂಭಾಧಿಕಾರಾನಂತರೇಷು ಚ।**
**ಅಪ್ಯಾದೇಶೇ ಪ್ರತಿಜ್ಞಾಯಾಂ ಪ್ರಶ್ನಸಾಕಲ್ಯಯೋರಪಿ ।। ಇತಿಹೈಮಃ।।**

**ಸಂದೇಹಕ್ಕೆ ಉದಾ :-** ಶಬ್ದಃ ನಿತ್ಯಃ ಅಥ ಅನಿತ್ಯಃ,

**ಸಮುಚ್ಚಯಕ್ಕೆ ಉದಾ :-** ಭೀಮಃ ಅಥ ಅರ್ಜುನಃ ಮೇದಿನೀ ಎಂಬ ಕೋಶವೂ ಸಹ ಇದಕ್ಕೆ ಸಂವಾದ ರೂಪವಾಗಿದೆ.

**ಅಥಾತಃ ಸಂಶಯೇಮಃ ಸ್ಯಾತಾಂ ಅಧಿಕಾರೇ ಚ ಮಂಗಳೇ।**
**ವಿಕಲ್ಪಾನಂತರ ಪ್ರಶ್ನಕಾರ್ತ್ಸ್ನ್ಯಾರಂಭ ಸಮುಚ್ಚಯೇ ।। ಇತಿಮೇದಿನೀ।।**

ಪ್ರಕೃತದಲ್ಲಿ ಅಥಾತೋ ಬ್ರಹ್ಮಜಿಜ್ಞಾಸಾ ಎಂಬ ಬ್ರಹ್ಮಸೂತ್ರದಲ್ಲಿರುವ ಅಥ ಎಂಬ ಶಬ್ದಕ್ಕೆ ಬೇರೆ ಯಾವ ಅರ್ಥಗಳೂ ತೋರದೇ ಇರುವುದರಿಂದ ಅನಂತರ ಎಂಬ ಅರ್ಥವನ್ನೇ ಇಟ್ಟುಕೊಂಡು ವಾಕ್ಯಾರ್ಥವನ್ನು ನಿರೂಪಿಸಲಾಗಿದೆ. ಇದರ ಅನ್ವಯ ಯೋಗ್ಯತೆಯು ಅಧಿಕಾರಾತ್ ಎಂಬುದಕ್ಕೆ ಇರುವುದರಿಂದ "ಅಧಿಕಾರಾದನಂತರಂ" ಎಂದೇ ಅರ್ಥವನ್ನು ಸ್ವೀಕರಿಸಿರುತ್ತಾರೆ.

**ಮೂಲಂ (ತಂತ್ರದೀಪಿಕಾ):- ಓಮಿತ್ಯೇತತ್ ಯೋಗ್ಯತಯಾ ಜಿಜ್ಞಾಸಾ ಗುಣಭೂತ ಬ್ರಹ್ಮವಿಶೇಷಣಮ್ ।।**

**ಅರ್ಥ** :- ಓಂ ಎಂಬ (ಅವ್ಯಯ) ಪದಕ್ಕೆ ಗುಣಪೂರ್ಣ ಎಂದು ಅರ್ಥವನ್ನು ಹಿಂದೆಯೇ ಹೇಳಿದೆ. ಇಂತಹ ಗುಣಪೂರ್ಣತ್ವದ ಅನ್ವಯ ಯೋಗ್ಯತೆಯು ಬ್ರಹ್ಮಜಿಜ್ಞಾಸಾ ಎಂಬಲ್ಲಿ ಜಿಜ್ಞಾಸಾಕ್ಕೆ ವಿಶೇಷಣವಾದ ಬ್ರಹ್ಮಶಬ್ದ ವಾಚ್ಯನಾದ ವಿಷ್ಣುವಿಗೇ ಇರುವುದರಿಂದ, ಆ ಬ್ರಹ್ಮಶಬ್ದಕ್ಕೆ ಇದು ವಿಶೇಷಣವಾಗಿದೆ. ಅಂದರೆ "ಓಂ ಬ್ರಹ್ಮಜಿಜ್ಞಾಸಾ" ಎಂಬುದಾಗಿ ಅನ್ವಯವನ್ನು ಹೇಳಬೇಕು ಎಂದು ಅಭಿಪ್ರಾಯ. ಅಂದರೆ ಗುಣಪೂರ್ಣ ವಿಷ್ಣುಜಿಜ್ಞಾಸಾ ಎಂದು ಸಿದ್ಧವಾಗುತ್ತದೆ. ಓಮಿತ್ಯೇತತ್ = ಓಂ ಎಂಬ ಅವ್ಯಯವು, ಜಿಜ್ಞಾಸಾಗುಣಭೂತಬ್ರಹ್ಮವಿಶೇಷಣಂ = ಬ್ರಹ್ಮಜಿಜ್ಞಾಸಾ ಎಂಬಲ್ಲಿ ಜಿಜ್ಞಾಸಾದಲ್ಲಿ ವಿಶೇಷಣವಾಗಿರುವ ಬ್ರಹ್ಮ ಎಂಬಲ್ಲಿ ವಿಶೇಷಣವಾಗಿದೆ.

ಮೂಲ (ತಂತ್ರದೀಪಿಕಾ) :- ಅಥೇತಿಯೋಗ್ಯತಯಾ ಅಧಿಕಾರಾದಿತ್ಯನ್ವೇತಿ ।।

**ಅರ್ಥ** :- ಅಥ ಶಬ್ದದ ಅರ್ಥವನ್ನು ಕೋಶದಲ್ಲಿ ಉಕ್ತವಾಗಿರುವಂತೆ ಆನಂತರ್ಯ ಎಂಬುದಾಗಿ ಹಿಂದೆಯೇ ಹೇಳಲಾಗಿದೆ. ಆನಂತರ್ಯ ಪ್ರತಿಯೋಗಿತ್ವ ಸಾಮರ್ಥ್ಯ ಉಳ್ಳ, ಅಂದರೆ ಆನಂತರ್ಯ ಪ್ರತಿಯೋಗಿತ್ವವನ್ನು ಹೊಂದಲು ಅರ್ಹವಾದುದು ಬ್ರಹ್ಮಜಿಜ್ಞಾಸಾವನ್ನು ಮಾಡಲು ಯೋಗ್ಯತೆಯುಳ್ಳವನಿಗೆ ಇರಬೇಕಾದ ಅಧಿಕಾರವೇ ಹೊರತು ಬೇರೆ ಅಲ್ಲ ಎಂಬ ದೃಷ್ಟಿಯಿಂದ ಅಥೇತಿ ಯೋಗ್ಯತಯಾ ಅಧಿಕಾರಾದಿತ್ಯನ್ವೇತಿ ಎಂದು ಗ್ರಂಥಕಾರರು ಹೇಳಿದ್ದಾರೆ.

ಅಥೇತಿ = ಅಥ ಎಂಬ ಶಬ್ದವು, ಯೋಗ್ಯತಯಾ = ಆನಂತರ್ಯ ಪ್ರತಿಯೋಗಿತ್ವರೂಪವಾದ ಸಾಮರ್ಥ್ಯದಿಂದ, ಅಧಿಕಾರಾದಿತ್ಯನ್ವೇತಿ = ಅಧಿಕಾರಾತ್ ಎಂಬುದರಿಂದ ಅನ್ವಯವನ್ನು ಹೊಂದುತ್ತದೆ ಎಂದು ಅರ್ಥ.

ಈ ಅಥ ಶಬ್ದದ ಮಂಗಳ ಪ್ರಯೋಜನಕತ್ವವನ್ನೂ, ಆನಂತರ್ಯಾರ್ಥಕತ್ವವನ್ನೂ ಈ ಗ್ರಂಥಕಾರರು ತೋರಿಸಿರುವುದು ಸೂತ್ರಭಾಷ್ಯದಲ್ಲಿನ

**"ಅಥಶಬ್ದೋಽಮಂಗಳಾರ್ಥೋಽ ಅಧಿಕಾರಾನಂತರ್ಯಾರ್ಥಶ್ಚ"**

ಎಂಬ ವಾಕ್ಯದ ಅಭಿಪ್ರಾಯದ ಸಂಗ್ರಹವೇ ಆಗಿದೆ. ಅಲ್ಲಿರುವ ಮಂಗಳಾರ್ಥ ಎಂಬುದಕ್ಕೆ ಮಂಗಳ ಪ್ರಯೋಜನಕಃ ಎಂದು ಅರ್ಥ. ಆನಂತರ್ಯಾರ್ಥಶ್ಚ = ಆನಂತರ್ಯಾಭಿಧಾಯಕಶ್ಚ ಎಂದು ಅರ್ಥ. ಓಂ ಎಂಬುದಕ್ಕೂ ಅಥ ಎಂಬ ಶಬ್ದಕ್ಕೂ ಮಂಗಳ ಫಲಕತ್ವ (ಪ್ರಯೋಜನತ್ವ) ವಿಷಯದಲ್ಲಿ ಮನುಸ್ಮೃತಿ ವಚನವು ಪ್ರಮಾಣವಾಗಿದೆ.

**ಓಂಕಾರಶ್ಚಾಥಶಬ್ದಶ್ಚದ್ವಾವೇತೌಬ್ರಹ್ಮಣಃಪುರಾ ।**
**ಕಂಠಂ ಭಿತ್ವಾ ವಿನಿರ್ಯಾತೌತಸ್ಮಾನ್ಮಾಂಗಳಿಕಾವುಭೌ ।। ಇತಿ ಮನುಸ್ಮೃತಿಃ ।।**

ಅಥ ಶಬ್ದಸ್ಯ "ಅಧಿಕಾರಾನಂತರಂ" ಎಂದು ಅರ್ಥ ಹೇಳಿದ ತರುವಾಯ ಬ್ರಹ್ಮಜಿಜ್ಞಾಸಾಕ್ಕೆ ಪ್ರಯೋಜಕವಾದ ಅಧಿಕಾರವು ಎಂತಹುದು ಎಂಬುದಕ್ಕೆ ಉತ್ತರವಾಗಿ ಭಾಷ್ಯಕಾರರು "ಅಧಿಕಾರಶ್ಚೋಕ್ತೋ ಭಾಗವತತಂತ್ರೇ" ಎಂದು ಪ್ರಾರಂಭಿಸಿ, ಭಾಗವತತಂತ್ರ ಎಂಬ ಪ್ರಾಮಾಣಿಕ ಗ್ರಂಥದಲ್ಲಿ ಉಕ್ತವಾಗಿರುವ, ಜಾತಿಕೃತವಾದ ಅಧಿಕಾರವನ್ನೂ, ಗುಣಕೃತವಾದ ಅಧಿಕಾರವನ್ನೂ ಉದಾಹರಿಸಿರುತ್ತಾರೆ. ಈ ಅಧಿಕಾರಿಗಳ ಲಕ್ಷಣಗಳಿಗೆ ಪರಸ್ಪರ ಸಾಂಕರ್ಯವು ಬಾರದಂತೆ ತತ್ವಪ್ರಕಾಶಿಕಾಕಾರರು "ಉತ್ತರೋತ್ತರಪ್ರಾಚುರ್ಯೇಣ ಅಸಾಂಕರ್ಯಾತ್" ಎಂದು ಸೂತ್ರಪ್ರಾಯವಾದ ವಾಕ್ಯವನ್ನು ಹೇಳಿರುತ್ತಾರೆ. ಇದರ ಅರ್ಥವಿವರಣೆಯನ್ನು ತಾತ್ಪರ್ಯಚಂದ್ರಿಕಾಕಾರರಾದ ಶ್ರೀ ವ್ಯಾಸರಾಜರು ತಾತ್ಪರ್ಯಚಂದ್ರಿಕೆಯಲ್ಲಿ ವಿಶೇಷಾಕಾರವಾಗಿ ತೋರಿಸಿರುತ್ತಾರೆ. ಅದರ ವಿಸ್ತಾರವಾದ ಸ್ವರೂಪವನ್ನು ಹಿಂದೆಯೇ ಹೇಳಿದೇವೆ.

**ಮೂಲ(ತಂತ್ರದೀಪಿಕಾ) :-ಅತ ಇತಿ "ಯಸ್ಯಪ್ರಸಾದಾತ್" ಇತ್ಯಾದಿ ನಿರ್ಣೇಯಶ್ರುತ್ಯಾದಿಸ್ಥಂಫಲಾದಿ ಪರಾಮೃಶ್ಯತೇ ।।**

**ಅರ್ಥ** :- ಅತ ಇತಿ = ಮೊದಲನೆಯ ಬ್ರಹ್ಮಸೂತ್ರದಲ್ಲಿರತಕ್ಕ ಅತಃ = ಎಂಬ ಪದವು, ಯಸ್ಯಪ್ರಸಾದಾತ್ ಇತ್ಯಾದಿನಿರ್ಣೇಯಶ್ರುತ್ಯಾದಿಸ್ಥಂ

**ಯಸ್ಯಪ್ರಸಾದಾತ್ ಪರಮಾರ್ತಿರೂಪಾತ್ ಅಸ್ಮಾತ್ ಸಂಸಾರಾತ್ ಮುಚ್ಯತೇ ನಾಪರೇಣ ।**
**ನಾರಾಯಣೋಽಸೌ ಪರಮೋ ವಿಚಿಂತ್ಯೋ ಮುಮುಕ್ಷುಭಿಃ ಕರ್ಮಪಾಶಾತ್ ಅಮುಷ್ಮಾತ್**
**(ಇತಿನಾರಾಯಣಶ್ರುತಿಃ)**

ಎಂಬ ನಿರ್ಣಯಿಸಲ್ಪಡಬೇಕಾದ (ನಿರ್ಣೇಯವಾದ) ಶ್ರುತ್ಯಾದಿಗಳಲ್ಲಿ ಹೇಳಿರುವ ಮೋಕ್ಷರೂಪವಾದ ಪ್ರಧಾನವಾದ ಫಲಾದಿಗಳನ್ನು ಪರಾಮರ್ಶ ಮಾಡುತ್ತಲಿದೆ. ಸೂತ್ರದಲ್ಲಿರುವ ಅತಃ ಎಂಬ ಪದವು "ಏತಸ್ಮಾತ್" ಎಂಬ ಪಂಚಮ್ಯಂತವಾದ ಸರ್ವನಾಮಪದದ ರೂಪವೇ ಆಗಿದೆ. ಏತಸ್ಮಾತ್ ಎಂಬಲ್ಲಿ ಏತಚ್ಛಬ್ದವು ಪ್ರಕೃತಿಯಾಗಿದೆ. ಙಸ್ ಎಂಬ ಪಂಚಮೀ ವಿಭಕ್ತಿಯು ಅದರ ಮುಂದಿದೆ. ಪ್ರಕೃತಿಭೂತವಾದ ಏತದ್ ಎಂಬ ಸರ್ವನಾಮಕ್ಕೆ "ಏತದೋ ಅಶ್ ಅಥವಾ ಏತದೋ ಅನ್ ಎಂಬ ಸೂತ್ರದಿಂದ ಅಶ್ ಅಥವಾ ಅನ್ ಎಂಬ ಆದೇಶವು ಬಂದಿದೆ. ಏತದೋ ಅಶ್ (ಪಾ. ಸೂ. ೫-೩-೫) ಕಾಶಿಕಾ ಪಾಠ. ಏತದೋ ಅನ್ (ಪಾ. ಸೂ. ೫-೩-೫) ಸಿ. ಕೌಮುದೀ ಪಾಠ. ಪಂಚಮೀ ವಿಭಕ್ತಿಯ ಙಸ್ ಪ್ರತ್ಯಯಕ್ಕೆ ತಸಿಲ್ ಆದೇಶವು ಬಂದು ಅತಃ ಎಂಬ ರೂಪವು ಸಿದ್ಧವಾಗಿದೆ. ಸರ್ವನಾಮಕ್ಕೆ ಪೂರ್ವಪರಾಮರ್ಶಕತ್ವವು ಉಂಟು. ಸರ್ವನಾಮಸ್ಥಾನದಲ್ಲಿರುವ ಅ ಎಂಬ ಪ್ರಕೃತಿಗೆ ಪೂರ್ವ ಪರಾಮರ್ಶಕತ್ವವಿರುವ ಪ್ರಯುಕ್ತ ಅದು ಮೋಕ್ಷಜನಕ ಪ್ರಸಾದಜನಕ ಜ್ಞಾನವನ್ನು ಪರಾಮರ್ಶಿಸುತ್ತದೆ. ತಸಿಲ್ ಪ್ರತ್ಯಯದ ಅರ್ಥವು ಜನಕತ್ವವು. ಒಟ್ಟಿನಲ್ಲಿ ಅತಃ ಎಂಬುದಕ್ಕೆ ಮೋಕ್ಷಜನಕಪ್ರಸಾದಜನಕಜ್ಞಾನಹೇತುತ್ವಾತ್ ಎಂದು ನಿರ್ಗಳಿತಾರ್ಥವು. ಅಂತಹ ಜ್ಞಾನಹೇತುತ್ವವು ಬ್ರಹ್ಮಜಿಜ್ಞಾಸಾಕ್ಕೆ ಇರುವುದರಿಂದಲೇ, ಕರ್ತವ್ಯಾ ಎಂಬ ಪದವನ್ನು ಅಧ್ಯಾಹಾರ ಮಾಡಿ ಸೂತ್ರಾರ್ಥವನ್ನು ನಿರ್ಣಯಿಸಿರುತ್ತಾರೆ. ಈ ರೀತಿಯಾದ ಸೂತ್ರಾರ್ಥ ಯೋಜನೆಯು ಸೂತ್ರಭಾಷ್ಯದ ವಾಕ್ಯಗಳಿಂದಲೇ ಸಿದ್ಧವಾಗಿದೆ. ಸೂತ್ರಭಾಷ್ಯಕಾರರಾದ ಶ್ರೀಮದಾಚಾರ್ಯರು ಅಥಶಬ್ದಾರ್ಥವಿವರಗಳನ್ನೆಲ್ಲಾ ನಿರೂಪಿಸಿದ ತರುವಾಯ "ಅತೋ ಬ್ರಹ್ಮಜಿಜ್ಞಾಸಾ ಕರ್ತವ್ಯಾ" ಎಂದು ನಿಗಮನ ಮಾಡುವುದಕ್ಕೆ ಮುಂಚಿತವಾಗಿ ಕೆಲವು ವಾಕ್ಯಗಳನ್ನು ಅಧ್ಯಾಹಾರ ಮಾಡಿ ಭಾಷ್ಯವನ್ನು ರಚಿಸಿದ್ದಾರೆ.

**"ಯತೋ ನಾರಾಯಣಪ್ರಸಾದಮೃತೇ ನ ಮೋಕ್ಷಃ, ಸಚ ಜ್ಞಾನಂ ವಿನಾ**
**ಅತ್ಯರ್ಥಪ್ರಸಾದಃ ಅತೋ ಬ್ರಹ್ಮಜಿಜ್ಞಾಸಾ ಕರ್ತವ್ಯಾ" ಇತಿ । (ಇತಿಸೂತ್ರಭಾಷ್ಯಂ)**

ಈ ಭಾಷ್ಯದಲ್ಲಿ ಅತಃ ಎಂಬ ಶಬ್ದಕ್ಕೆ ಮುಂಚಿತವಾಗಿ "ಯತೋ ನಾರಾಯಣಪ್ರಸಾದಮೃತೇ" ಇತ್ಯಾದಿ ವಾಕ್ಯಗಳಿರುವ ಪ್ರಯುಕ್ತ ಅದರಲ್ಲಿ ಪ್ರಸಕ್ತವಾದ "ಮೋಕ್ಷಜನಕ ಪ್ರಸಾದಜನಕ ಜ್ಞಾನವನ್ನು" ಅಕಾರವು ಪರಾಮರ್ಶಿಸುವುದರಿಂದ ಅದರ ಮುಂದಿನ ತಸಿಲ್ ಪ್ರತ್ಯಯಕ್ಕೆ ಹೇತುತ್ವವೆಂಬ ಅರ್ಥವಿರುವ ಪ್ರಯುಕ್ತ ಅತಃ ಎಂಬುದಕ್ಕೆ ಮೋಕ್ಷಜನಕ ಪ್ರಸಾದಜನಕ ಜ್ಞಾನಹೇತುತ್ವಾತ್ ಎಂದು ಅರ್ಥ ಮಾಡಿರುವುದು ಯುಕ್ತವೇ ಆಗಿದೆ. ಈ

ಅಭಿಪ್ರಾಯದಿಂದಲೇ ತಂತ್ರದೀಪಿಕಾರರು ಅತ ಇತಿ ಎಂದು ಪ್ರಾರಂಭಿಸಿ "ನಿರ್ಣೇಯಶ್ರುತ್ಯಾದಿಸ್ಥಂ ಫಲಾದಿ ಪರಾಮೃಶ್ಯತೇ" ಎಂದು ಹೇಳಿ ಭಾಷ್ಯಾರ್ಥವನ್ನು ಸಂಗ್ರಹಿಸಿರುತ್ತಾರೆ.

> **ಈ ರೀತಿ ಭಾಷ್ಯಕಾರರು ಸೂತ್ರದ ಪದಗಳ ಅರ್ಥವನ್ನು ವಿವರಿಸುವಾಗ ಮಧ್ಯದಲ್ಲಿ**
> **ಕೆಲವು ವಾಕ್ಯಗಳನ್ನು ಅಧ್ಯಾಹಾರ ಮಾಡಿ ಸೂತ್ರಾರ್ಥವನ್ನು ನಿರೂಪಿಸಿರುವುದಕ್ಕೆ**
> **"ಯತ್ರಾನವಸರೋಽನ್ಯತ್ರ ಪದಂ ತತ್ರಪ್ರತಿಕ್ಷಿತಂ।**
> **ವಾಕ್ಯಂ ವೇತಿ ಸತಾಂ ನೀತಿಃ ಸಾವಕಾಶೇ ನ ತದ್ಭವೇತ್॥ (ಇತಿಬೃಹತ್ಸಂಹಿತಾಯಾಂ)**

ಎಂಬ ಪ್ರಮಾಣ ಗ್ರಂಥವನ್ನೇ ಉದಾಹರಿಸಿ ಸಮರ್ಥಿಸಿರುವರು. ಬೃಹತ್ಸಂಹಿತಾಯಾಂ ಎಂದು ಪ್ರಸಿದ್ಧವಾದ ಪಾಠವೂ ಕಂಡು ಬಂದಿದೆ. ಬ್ರಹ್ಮಜಿಜ್ಞಾಸಾ ಕರ್ತವ್ಯಾ ಎಂಬಲ್ಲಿ "ಕರ್ತವ್ಯಾ" ಎಂಬ ಪದಕ್ಕೆ ಮಾತ್ರ ಅಧ್ಯಾಹಾರವಿದೆ. ಈ ಸಂದರ್ಭದಲ್ಲಾದರೋ ಯತೋ ನಾರಾಯಣಪ್ರಸಾದಮೃತೇ ನ ಮೋಕ್ಷಃ, ನಚ ಜ್ಞಾನಂ ವಿನಾ ಅತ್ಯರ್ಥಪ್ರಸಾದಃ ಎಂಬ ವಾಕ್ಯಗಳ ಅಧ್ಯಾಹಾರವೇ ಇದೆ. ಇಂತಹ ವಾಕ್ಯಾಧ್ಯಾಹಾರವಿಷಯದಲ್ಲಿ "ವಾಕ್ಯಂ ವೇತಿ ಸತಾಂ ನೀತಿಃ" ಎಂಬ ಬ್ರಹ್ಮಸಂಹಿತಾ ವಚನವೇ ಪ್ರಮಾಣ. ಅದರಲ್ಲಿರುವ ಅನ್ಯತ್ರ = ಎಂಬ ಪದಕ್ಕೆ = ಅನ್ಯಸ್ಯ ಪದಸ್ಯ ವಾಕ್ಯಸ್ಯವೇ ತ್ಯರ್ಥಃ = ಎಂಬ ತತ್ವಪ್ರದೀಪವ್ಯಾಖ್ಯಾನ. ಭಾಷ್ಯವಾಕ್ಯದಲ್ಲಿ, ಮೋಕ್ಷ, ಪ್ರಸಾದ, ಜ್ಞಾನ, ಜಿಜ್ಞಾಸಾಗಳಲ್ಲಿ ಮುಂದಿನ ಮುಂದಿನ ಸಾಧನವು ಇಲ್ಲವಾದರೆ ಹಿಂದು ಹಿಂದಿನ ಫಲಕ್ಕೆ ಘಟನೆಯೇ ಇಲ್ಲವೆಂಬುದನ್ನು ಭಾಷ್ಯಕಾರರು ತೋರಿಸಿರುತ್ತಾರೆ. ಅಂದರೆ ಜಿಜ್ಞಾಸಾ ಇಲ್ಲವಾದರೆ ಅಪರೋಕ್ಷವು ಉಂಟಾಗುವುದಿಲ್ಲ. ಬ್ರಹ್ಮಾಪರೋಕ್ಷ ಜ್ಞಾನವೇ ಇಲ್ಲವಾದರೆ ಅತ್ಯರ್ಥಪ್ರಸಾದವು ಇರುವುದಿಲ್ಲ. ಪ್ರಸಾದವೇ ಇಲ್ಲವಾದರೆ ಪ್ರಧಾನಫಲವಾದ ಮೋಕ್ಷವೂ ಇಲ್ಲ ಎಂದು ಅಭಿಪ್ರಾಯ. ಇದರಿಂದ ಮೋಕ್ಷಕ್ಕೆ ಕಾರಣ. ಪರಮಾತ್ಮನ ಅತ್ಯರ್ಥಪ್ರಸಾದ. ಅದಕ್ಕೆ ಕಾರಣಬಿಂಬಾಪರೋಕ್ಷ ಜ್ಞಾನ. ಅದಕ್ಕೆ ಹೇತುವಾದುದು ಜಿಜ್ಞಾಸಾ ಎಂಬ ಫಲಿತವಾದ ಅರ್ಥವಾಗಿದೆ.

ಮೂ॥ (ತಂತ್ರದೀಪಿಕಾ) :- ಬ್ರಹ್ಮಶಬ್ದಃ ಗುಣಪೂರ್ತ್ಯರ್ಥಃಸ್ಸನ್ಚಿದಚಿದ್ವಿಲಕ್ಷಣವಿಷ್ಣು ವಾಚೀ।
"ಇತ್ಯುಕ್ತೇಃ" ಸ ವಿಷ್ಣುರಾಹಹಿ, ತಂಬ್ರಹ್ಮೇತ್ಯಾಚಕ್ಷತೇ ಇತಿ॥

**ಅರ್ಥ** :- ಬ್ರಹ್ಮಜಿಜ್ಞಾಸಾ ಎಂಬಲ್ಲಿರತಕ್ಕ ಬ್ರಹ್ಮಶಬ್ದವು, ಗುಣಪೂರ್ತ್ಯರ್ಥಃ ಸನ್ = ಗುಣಪೂರ್ಣ ಎಂಬ ಅರ್ಥವನ್ನುಳ್ಳದುದಾಗಿ, ಚಿದಚಿದ್ವಿಲಕ್ಷಣವಿಷ್ಣುವಾಚೀ = ಚಿತ್ = ಚೇತನ, ಅಚಿತ್ = ಅಚೇತನ ಇವೆಲ್ಲಕ್ಕಿಂತಲೂ, ವಿಲಕ್ಷಣ = ವಿಭಿನ್ನನಾದ, ವಿಷ್ಣುವಾಚೀ = ವಿಷ್ಣುವನ್ನು ಹೇಳುತ್ತಲಿದೆ. ಸ ವಿಷ್ಣುರಾಹ ಹಿ, ತಂ ಬ್ರಹ್ಮೇತ್ಯಾಚಕ್ಷತೇ ಇತ್ಯುಕ್ತೇಃ = ಇವೆರಡೂ ದೈವೀಮಾಂಸಾ ಶಾಸ್ತ್ರದ ಕಡೆಯಲ್ಲಿರುವ ಎರಡು ಸೂತ್ರಗಳು. ಇದರಲ್ಲಿ ಬ್ರಹ್ಮಶಬ್ದದ ಅರ್ಥವು ವಿಷ್ಣುವು ಎಂಬ ಸಮರ್ಥಿತವಾಗಿದೆ.

**ವಿಶೇಷ ವಿಷಯ** :- ಈಗ ಪ್ರಯೋಗತಕ್ಕ ಸೂತ್ರಭಾಷ್ಯಕ್ಕೆ ವ್ಯಾಖ್ಯಾನವಾದ ತತ್ವಪ್ರದೀಪದಲ್ಲಿ ಪ್ರಾಚೀನ ಟೀಕೆ ಎಂಬ ಪ್ರಸಿದ್ಧವಾಗಿರುವುದರಲ್ಲಿ ಈ ದೈವೀಮೀಮಾಂಸಾಸೂತ್ರದ ಸ್ವರೂಪವು ಸ್ವಲ್ಪ ವ್ಯತ್ಯಾಸವಾಗಿ ಉಲ್ಲೇಖಿಸಲ್ಪಟ್ಟಿದೆ. "ಯಚ್ಚದೇವತಾಮೀಮಾಂಸಾಂತೇ "ವಿಷ್ಣುರೇವಹಿ ತಸ್ಮಾತ್ತೇಃ, ತಂಬ್ರಹ್ಮೇತ್ಯಾಚಕ್ಷತೇ ತಂಬ್ರಹ್ಮೇತ್ಯಾಚಕ್ಷತೇ" ಇತಿ ಸರ್ವದೇವೋತ್ತಮತ್ವೇನ ಪ್ರತಿಜ್ಞಾತೋ ಬ್ರಹ್ಮತ್ವೇನಚೋಕ್ತಃ ಸ ಏವ ಉತ್ತರ ಮೀಮಾಂಸಾಯಾಂ ವಿಚಾರ್ಯತ್ವೇನೋಚ್ಯತೇ" (ತತ್ವಪ್ರದೀಪ) ಎಂದು ವ್ಯಾಖ್ಯಾನ ಮಾಡುವಾಗ "ವಿಷ್ಣುರೇವ ಹಿತಸ್ಮಾತ್ತೇಃ" ಎಂದು

ಮೊದಲನೆಯ ಸೂತ್ರದ ಸ್ವರೂಪವನ್ನು ನಿರ್ದೇಶ ಮಾಡಿದ್ದಾರೆ. ಆದರೆ ನ್ಯಾಯಸುಧಾದಲ್ಲಿ ಟೀಕಾಕಾರರು, ಅನುವ್ಯಾಖ್ಯಾನದಲ್ಲಿ ಉಕ್ತವಾಗಿರುವಂತೆ

**"ಕಿಂತು ದೈವೀಮೀಮಾಂಸಾಶಾಸ್ತ್ರಸ್ಯಾಂತೇ "ಸವಿಷ್ಣುರಾಹಹಿ, ತಂಬ್ರಹ್ಮೇತ್ಯಾಚಕ್ಷತೇ"**
**ಇತಿಸೂತ್ರದ್ವಯೇನ ವಿಷ್ಣುಃ ಬ್ರಹ್ಮೇತ್ಯುದಿತಮ್ ।। (ಇತಿ ನ್ಯಾಯಸುಧಾ)**

ಎಂದು "ಸವಿಷ್ಣುರಾಹಹಿ" ಎಂದು ಸೂತ್ರಸ್ವರೂಪವನ್ನು ತೋರಿಸಿರುವುದರಿಂದ ತಂತ್ರದೀಪಿಕಾಕಾರರು ಅದರಂತೆ "ಸವಿಷ್ಣುರಾಹಹಿ" ಎಂದು ಹೇಳಿರುವರು.

ಓಂ ಅಥಾತೋ ದೈವೀಮೀಮಾಂಸಾ ಎಂಬುದು ದೈವೀಮೀಮಾಂಸಾ ಶಾಸ್ತ್ರದ ಆದಿಸೂತ್ರವು. ಅಂತಿಮವಾದ ಸೂತ್ರಗಳು ಎರಡು ಇವೆ. "ಸ ವಿಷ್ಣುರಾಹಹಿ (ವಿಷ್ಣುರೇವಹಿತಚ್ಛ್ರುತೇಃ) ತಂಬ್ರಹ್ಮೇತ್ಯಾಚಕ್ಷತೇ ತಂಬ್ರಹ್ಮೇತ್ಯ ಚಕ್ಷತೇ" ಎಂದಿವೆ. ಈ ಬಗೆಯಾದ ಮೊದಲನೆಯ ಸೂತ್ರವನ್ನೂ ಕಟ್ಟಕಡೆಯ ಎರಡು ಸೂತ್ರಗಳನ್ನೂ ಸ್ವಯಂ ಶ್ರೀ ವೇದವ್ಯಾಸರೇ ರಚಿಸಿ, ಮಧ್ಯದ ಸೂತ್ರಗಳನ್ನು ರಚಿಸುವಂತೆ ತಮ್ಮ ಶಿಷ್ಯಕೋಟಿಗೆ ಸೇರಿದ ಶೇಷ, ಶೈಲ ಎಂಬ ಮುನಿಗಳಿಗೆ ಅಪ್ಪಣೆ ಮಾಡಿದುದರಿಂದ ಆ, ಶೇಷ, ಶೈಲರು ಮಧ್ಯದ ಸೂತ್ರಗಳನ್ನು ರಚಿಸಿರುತ್ತಾರೆಂಬ ವಿಷಯವು ಅನುವ್ಯಾಖ್ಯಾನದಲ್ಲಿ ಉಕ್ತವಾಗಿದೆ.

**ಸ್ವಯಂ ಭಗವತಾ ವಿಷ್ಣುಃ ಬ್ರಹ್ಮೇತ್ಯೇತಸ್ಮುರೋದಿತಮ್ ।**
**ಸ ವಿಷ್ಣುರಾಹಹೀತ್ಯಂತೇ ದೇವಶಾಸ್ತ್ರಸ್ಯ ತೇನ ಹಿ ।।**

**ಆದ್ಯಂತಂ ದೇವಶಾಸ್ತ್ರಸ್ಯ ಸ್ವಯಂ ಭಗವತಾ ಕೃತಮ್ ।**
**ಮಧ್ಯಂ ತದಾಜ್ಞ ಯಾ ಶೇಷಶೈಲಾಭ್ಯಾಂ ಕೃತಮಂಜಸಾ ।।**

**ಅತಸ್ತತ್ಸೈವ ವಿಷ್ಣುತ್ವಸಿದ್ಧೇಃ ಬ್ರಹ್ಮೇತ್ಯಸೂಚಯತ್ ।। (ಇತಿ, ಅನುವ್ಯಾಖ್ಯಾನಮ್)**

**ಅಭಿಪ್ರಾಯ** :- ಬ್ರಹ್ಮ ಶಬ್ದಕ್ಕೆ ಜಾತಿ, ಜೀವ, ಕಮಲಾಸನ, ಶಬ್ದರಾಶಿ ಎಂಬುದಾಗಿ ಅನೇಕಾರ್ಥಗಳುಂಟು. ವೃದ್ಧರು ಬೇರೆ ಬೇರೆ ಸಂದರ್ಭಗಳಲ್ಲಿ ಆ ಶಬ್ದವನ್ನು ಬೇರೆ ಕಡೆ ಪ್ರಯೋಗಿಸಿದ್ದಾರೆ. ಅದರಂತೆ ಪರಮಾತ್ಮನಲ್ಲೂ ವೃದ್ಧರು ಪ್ರಯೋಗಿಸಿರುವರು. ಅಂದಮೇಲೆ ಅನೇಕಾರ್ಥಕವಾದ ಆ ಶಬ್ದಕ್ಕೆ ಇಲ್ಲಿ ವಿಷ್ಣು ಎಂಬ ಅರ್ಥವನ್ನೇ ಇಟ್ಟುಕೊಳ್ಳಬೇಕೆಂದು ಹೇಗೆ ಸಿದ್ಧಿಸುತ್ತದೆ ಎಂಬ ಶಂಕೆಯು ಬರಲು ಅವಕಾಶವುಂಟು. ಆದರೆ ಹೇಗೆ ಗೋಶಬ್ದಕ್ಕೆ "ಗೌರ್ನಾಟಿ ಋಷಭೇ ಚಂದ್ರೇ ವಾಕ್, ಭೂ, ಧೇನು" ಇತ್ಯಾದಿಯಾಗಿ ನಾನಾರ್ಥಗಳಿದ್ದಾಗ್ಯೂ, ಪ್ರಕರಣವಶಾತ್ "ಗಾಮಾನಯ, ಗಾಂ ದೋಗ್ಧಿ" ಇತ್ಯಾದಿ ಸ್ಥಳದಲ್ಲಿ ಹಸು ಎಂಬ ಅರ್ಥ ವಿಶೇಷಪರವಾಗಿ ನಿಶ್ಚಯಿಸುತ್ತಾರೋ ಅದರಂತೆ ಬ್ರಹ್ಮ ಎಂಬ ಶಬ್ದವು ಅನೇಕಾರ್ಥವುಳ್ಳದಾದರೂ, ಬ್ರಹ್ಮಸೂತ್ರಕಾರರು, ದೈವೀಮಾಂಸಾ ಶಾಸ್ತ್ರದ ಅಂತಿಮವಾದ ಎರಡೂ ಸೂತ್ರಗಳನ್ನು ರಚಿಸಿದವರೂ ಶ್ರೀ ಬಾದರಾಯಣರೇ ಆಗಿರುವುದರಿಂದ ಆ ಸೂತ್ರಕಾರರು ಇಲ್ಲಿ ಬ್ರಹ್ಮಜಿಜ್ಞಾಸಾ ಎಂಬಲ್ಲಿ ಬ್ರಹ್ಮಪ್ರಕರಣವಾದುದರಿಂದ ವಿಷ್ಣುವಿಷಯವಾಗಿಯೇ ಬ್ರಹ್ಮಶಬ್ದವನ್ನು ಪ್ರಯೋಗಿಸಿದ್ದಾರೆ ಎಂದು ನಿಶ್ಚಯಿಸಲಾಗಿದೆ. **ಅದಕಾರಣ** ಜಿಜ್ಞಾಸಾಧಿಕರಣದ ಜಿಜ್ಞಾಸಾಸೂತ್ರದಲ್ಲಿ ವಿಹಿತವಾದ "ಬ್ರಹ್ಮಜಿಜ್ಞಾಸಾ" ಎಂದರೆ "ವಿಷ್ಣುಜಿಜ್ಞಾಸಾ" ಎಂದೇ ಸಿದ್ಧಾಂತಸಿದ್ಧವಾದ ಅರ್ಥವಾಗಿದೆ. ಈ ರೀತಿ ನಿರ್ಣೀತವಾದ ಅರ್ಥದ ಅಭಿಪ್ರಾಯದಿಂದ

**"ಬ್ರಹ್ಮಶಬ್ದಃ ಗುಣಪೂರ್ತ್ಯರ್ಥಕಃಸನ್ ಚಿದಚಿದ್ವಿಲಕ್ಷಣವಿಷ್ಣುವಾಚೀ।**
**ಸವಿಷ್ಣುರಾಹಹಿ ತಂಬ್ರಹ್ಮೇತ್ಯಾಚಕ್ಷತೇ" ।। ಇತ್ಯುಕ್ತೇಃ**

ಎಂದು ತಂತ್ರದೀಪಿಕಾ ವಾಕ್ಯವು ಹೊರಟಿದೆ.

ಬ್ರಹ್ಮಶಬ್ದದ ನಿಷ್ಪತ್ತಿ ಪ್ರಕಾರವು ಈ ರೀತಿ ಇದೆ.

"ಬೃಹಬೃಹಿವೃದ್ಧೌ" ಎಂದು ಭೀಮಸೇನಧಾತುಪಾಠದಲ್ಲಿ ಬೃಹ, ಬೃಹಿ ಎಂದು ಧಾತುವು ಪಠಿತವಾಗಿದೆ. ಉಣಾದಿಕ ಸೂತ್ರದಲ್ಲಿ ನಾಲ್ಕನೇ ಪಾದದಲ್ಲಿ "ಬೃಂಹೇರಮ್ನಲೋಪಶ್ಚ" (ಉಣಾದಿ ೪ನೇ ಪಾದದ ಸೂತ್ರ ೫೪೫) ಎಂಬ ಸೂತ್ರದಿಂದ ಹಿಂದಿನ ಸೂತ್ರವಾದ ಮನಿನ್ಸರ್ವಧಾತುಭ್ಯಃ (ಸರ್ವಧಾತುಭ್ಯೋಮನಿನ್ - ಉಣಾದಿ ೪ನೇ ಅಧ್ಯಾಯ ಸೂತ್ರ ೫೪೪) ಎಂಬ ಸೂತ್ರದಿಂದ ಅನುವೃತ್ತವಾದ ಮನಿನ್ಪ್ರತ್ಯಯವು ಪರವಾಗಲಾಗಿ ಬೃಹ್ ಮನಿನ್ ನಲೋಪವು ಬಂದು, ಅಮಾಗಮ, ಯಣಾದೇಶ ಕಾರ್ಯಗಳಾದಾಗ "ಬ್ರಹ್ಮ" ಎಂದು ರೂಪವು ಸಿದ್ಧವಾಗುತ್ತದೆ. ನ್ಯಾಯಸುಧಾದಲ್ಲೂ ಬ್ರಹ್ಮಶಬ್ದದ ನಿಷ್ಪತ್ತಿ ಪ್ರಕಾರವನ್ನು "ಓಂ" ಬ್ರಹ್ಮದೃಷ್ಟಿರುತ್ಕರ್ಷಾತ್" (ಬ್ರಹ್ಮಸೂ. ಅ. ೪. ಪಾ. ೧. ಸೂ. ೪) ಎಂಬ ಸೂತ್ರವ್ಯಾಖ್ಯಾನ ಮಾಡುವಾಗ ಟೀಕಾಕಾರರು ಈ ರೀತಿ ತೋರಿಸಿರುತ್ತಾರೆ.

"ವೃದ್ಧ್ಯರ್ಥಾದ್ ಬೃಹತೇ ಅನ್ಯೇಭ್ಯೋಽಪಿದೃಶ್ಯಂತೆ (ಪಾ. ಸೂ. ೩-೩-೧೩೦)
ಇತಿಮನಿನ್ಪ್ರತ್ಯಯಃ।

ದೃಶಿಗ್ರಹಣ ಸಾಮರ್ಥ್ಯಾತ್ ಧಾತೋರಮಾಗಮಶ್ಚ।

ವೃದ್ಧಿಃ = ಪೂರ್ಣತ್ವಂ ಇತಿ ಏಕ ಪದಾರ್ಥಃ।।

ಬ್ರಹ್ಮತಾಬ್ರಹ್ಮಶಬ್ದಪ್ರವೃತ್ತಿನಿಮಿತ್ತಂ।

ಪೂರ್ಣತ್ವಮೇವಚೋತ್ಕರ್ಷಃ।।। (ಇತಿ ನ್ಯಾಯಸುಧಾ)

ಎಂಬುದಾಗಿ ಭೀಮಸೇನಧಾತುಗಳಲ್ಲಿ ಶಬ್ದಕರಣಗಳಲ್ಲಿ ಪಠಿತವಾದ ಬೃಹಧಾತುವಿಗೂ ಕೂಡ ಮನಿನ್ ಪ್ರತ್ಯಯ ಅಮಾಗಮಗಳು ಬಂದು "ಬ್ರಹ್ಮರೂಪದ" ಸಿದ್ಧಿಪ್ರಕಾರವನ್ನು ಸುಧಾ ಗ್ರಂಥದಲ್ಲಿ ತೋರಿಸಿರುವರು. "ವೃದ್ಧಿಃಪೂರ್ಣತ್ವಂ ಇತಿ ಏಕ ಪದಾರ್ಥಃ" ಎಂಬ ಸುಧಾವಚನದಂತೆ, ಬ್ರಹ್ಮಶಬ್ದಾರ್ಥವು ಪೂರ್ಣತ್ವವೆಂದಮೇಲೆ ಆ ವೃದ್ಧಿಯು, ಸಂಕೋಚೇ ಮಾನಾಭಾವಾತ್, ಸಕಲ ಬಗೆಗಳಾದ ವೃದ್ಧಿಗಳನ್ನೂ (ಪೂರ್ಣತ್ವವನ್ನೂ) ಪರಮಾತ್ಮನಿಗೆ ಹೇಳಬೇಕು. ವೃದ್ಧಿಯು (ಪೂರ್ಣತ್ವವು) ಮೂರು ಬಗೆಯಾಗಿದೆ, ದೇಶದಿಂದ ವೃದ್ಧಿ (ದೇಶಪೂರ್ಣತ್ವ) ಕಾಲದಿಂದ ವೃದ್ಧಿ (ಕಾಲಪೂರ್ಣತ್ವ) ಗುಣದಿಂದ ವೃದ್ಧಿ (ಗುಣಪೂರ್ಣತ್ವ) ಇದನ್ನೇ ಶಾಸ್ತ್ರಕಾರರು ದೇಶಾಪರಿಚ್ಛಿನ್ನತ್ವಂ, ಕಾಲಾಪರಿಚ್ಛಿನ್ನತ್ವಂ, ಗುಣಾಪರಿಚ್ಛಿನ್ನತ್ವಂ" ಎಂದು ವ್ಯವಹರಿಸಿದ್ದಾರೆ. ಇಂತಹ ಮೂರು ಬಗೆಯಾದ ಪೂರ್ಣತ್ವವು, ನಿರವಧಿಕವಾಗಿ ಶ್ರುತ್ಯಾದಿಗಳಿಂದ

**"ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ ಪೂರ್ಣಂ ಉದಚ್ಯತೇ।**

**ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೆ**

ಎಂಬ ಶ್ರುತಿಯಿಂದ ಪರಮಾತ್ಮನಿಗೆ ಹೇಳುತ್ತಿರುವ ಪ್ರಯುಕ್ತ ಜಿಜ್ಞಾಸಾಸೂತ್ರದಲ್ಲಿನ ಬ್ರಹ್ಮಶಬ್ದವೂ ಸಹ ಈ ತ್ರಿವಿಧಪೂರ್ಣತ್ವಸಂಪನ್ನನಾದ ವಿಷ್ಣುವನ್ನೇ ತಿಳಿಸುತ್ತಲಿದೆಯೆಂಬುದೇ ಶ್ರೀವೇದವ್ಯಾಸರಿಗೆ ಅತ್ಯಂತಸಮ್ಮತವಾದ ಅಭಿಪ್ರಾಯ. ಇದನ್ನೇ ಆ ಬಾದರಾಯಣರು ದೈವೀಮೀಮಾಂಸಾ ಕಡೆಯ ಸೂತ್ರಗಳಲ್ಲಿ ನಿಷ್ಕರ್ಷೆ ಮಾಡಿಬಿಟ್ಟಿರುತ್ತಾರೆಂದು

ಪರಮಾಭಿಪ್ರಾಯ. ಈ ಬಗೆಯಾದ ತ್ರಿವಿಧಗಳಾದ ಸ್ವತಂತ್ರವಾದ ಪೂರ್ಣತ್ವಗಳು ಪರಮಾತ್ಮನನ್ನು ಹೊರತಾಗಿ ಬೇರೆ ಯಾವ ಚೇತನಕ್ಕಾಗಲಿ, ಅಚೇತನಕ್ಕಾಗಲಿ ಇರುವುದಿಲ್ಲವಾದ್ದರಿಂದ

"ಬ್ರಹ್ಮಶಬ್ದಃ ಗುಣಪೂರ್ತ್ಯರ್ಥಃ ಚಿದಚಿದ್ವಿಲಕ್ಷಣವಿಷ್ಣುವಾಚೀ"

ಎಂದು ಶ್ರೀ ಗುರುರಾಜರು ಸಂಗ್ರಹಿಸಿ ತಿಳಿಸಿರುತ್ತಾರೆ.

**ಮೂಲ** :- ಬ್ರಹ್ಮಣೋ + ಜಿಜ್ಞಾಸಾ ಇತಿ ಕರ್ಮಣಿ ಷಷ್ಠೀತತ್ಪುರುಷಸಮಾಸಃ ।

**ಅರ್ಥ** :- "ಬ್ರಹ್ಮಜಿಜ್ಞಾಸಾ" ಎಂದು ಸೂತ್ರದಲ್ಲಿದೆ. ಈ ಪದವು ಸಮಸ್ತಪದ. ಇದಕ್ಕೆ ವಿಗ್ರಹ ವಾಕ್ಯವು ಬ್ರಹ್ಮಣೋ ಜಿಜ್ಞಾಸಾ = ಬ್ರಹ್ಮಜಿಜ್ಞಾಸಾ ಎಂದು ಹೇಳಲಾಗಿದೆ. ಕರ್ಮಾರ್ಥಕವಾದ ಷಷ್ಠೀ ವಿಭಕ್ತ್ಯಂತವಾದ ಬ್ರಹ್ಮಣಃ ಎಂಬ ಪದದಿಂದ ಜಿಜ್ಞಾಸಾಪದವು ಸಮಾಸವನ್ನು ಹೊಂದಿದೆ. ಬ್ರಹ್ಮಣಃ ಎಂಬಲ್ಲಿ ಇರತಕ್ಕ ಷಷ್ಠೀ ವಿಭಕ್ತಿ" ಯು ಕರ್ಮಾರ್ಥದಲ್ಲಿರುವುದರಿಂದ ಬ್ರಹ್ಮಕರ್ಮಕ ಜಿಜ್ಞಾಸಾ ಎಂದು ಅದರ ಅರ್ಥವನ್ನು ಹೇಳಬೇಕೆಂದು ಅಭಿಪ್ರಾಯ.

ಯೂಪಾಯ + ದಾರು, ಯೂಪದಾರು ಎಂಬಲ್ಲಿರುವಂತೆ ಇಲ್ಲಿಯೂ ಸಹ ಬ್ರಹ್ಮಣೇ + ಜಿಜ್ಞಾಸಾ ಎಂದು ಚತುರ್ಥೀವಿಭಕ್ತ್ಯಂತ ಪದದಿಂದ ಸಮಾಸವನ್ನು ಏತಕ್ಕೆ ಹೇಳಬಾರದೆಂದು ಆಕ್ಷೇಪಿಸಬಹುದು. ಅದಕ್ಕೆ ಸಮಾಧಾನವು ಹೀಗಿದೆ. ಚತುರ್ಥೀ ವಿಭಕ್ತ್ಯಂತ ಪದದಿಂದ ಸಮಾಸವನ್ನು ವಿಧಿಸುವ "ಚತುರ್ಥೀತದರ್ಥಾರ್ಥಬಲಿಹಿತಸುಖರಕ್ಷಿತೈಃ (ಪಾ. ಸೂ. ೨-೧-೬) ಎಂಬ ಪಾಣಿನಿಸೂತ್ರವು ತಾದರ್ಥ್ಯೇ ಚತುರ್ಥೀ ಸಮಾಸವನ್ನು ವಿಧಿಸುತ್ತಲಿದೆ. ತದರ್ಥೇನ ಸಮಾಸವು ಎಂಬುದು ಏನಂದರೋ ಅದು ಪ್ರಕೃತಿವಿಕೃತಿಭಾವದಲ್ಲಿ ಬರುತ್ತದೆ. ತದರ್ಥೇನ ಪ್ರಕೃತಿವಿಕೃತಿಭಾವ ಏವ ಇಷ್ಟಃ" ಎಂದು ವೈಯಾಕರಣಮತ. ಇದು ಯೂಪಾಯ + ದಾರು = ಯೂಪದಾರು ಎಂಬಲ್ಲಿ ಕಂಡುಬಂದಿದೆ. ಯೂಪಾಯ ಎಂಬ ಚತುರ್ಥೀ ವಿಭಕ್ತ್ಯಂತವಾದ ಯೂಪ ಶಬ್ದ ವಾಚ್ಯವಾದ ಯೂಪಸ್ತಂಭಕ್ಕೋಸ್ಕರವಾಗಿ ದಾರು ಎಂದು ಅದರ ಅರ್ಥ. ಇಲ್ಲಿ ದಾರುವೇ ಪ್ರಕೃತಿ. ಯೂಪವಾದರೋ ದಾರುವಿನ ವಿಕೃತಿ. ತಕ್ಷಕನಿಂದ (ಬಡಗಿಯಿಂದ) ಅಷ್ಟಾಶ್ರೀಕೃತವಾದ ವೃಕ್ಷವೇ (ದಾರುವೇ) ಯೂಪಪದಾರ್ಥವಾಗಿದೆ. ಪ್ರಕೃತಿವಿಕೃತಿಭಾವವು (ಉಪಾದಾನೋಪಾದೇಯಭಾವವು) ಇಲ್ಲಿರುವುದರಿಂದ ಚತುರ್ಥೀವಿಭಕ್ತ್ಯಂತವಾದ ಯೂಪಾಯ ಎಂಬ ಪದಕ್ಕೂ ದಾರುಪದಕ್ಕೂ ಸಮಾಸವು ಬಂದಿದೆ.

ಬ್ರಹ್ಮಜಿಜ್ಞಾಸಾ ಎಂಬಲ್ಲಿ ಆ ರೀತಿಯಾದ ಪ್ರಕೃತಿವಿಕೃತಿಭಾವವಿಲ್ಲವಾದ್ದರಿಂದ ಅದರಂತೆ ಇಲ್ಲಿ ಚತುರ್ಥೀ ಸಮಾಸಕ್ಕೆ ಅವಕಾಶವಿಲ್ಲ ಎಂದು ಸಮಾಧಾನವು. ಆದಾಗ್ಯೂ ಷಷ್ಠೀಶೇಷೇ (ಪಾ. ಸೂ. ೨-೩-೫೦) ಎಂಬ ಸೂತ್ರದಿಂದ ಬ್ರಹ್ಮಣಃ ಎಂಬಲ್ಲಿ ಷಷ್ಠೀವಿಭಕ್ತಿಯನ್ನು ಹೇಳದೆ ಕರ್ಮಣಿ ಎಂದು ಹೇಳಿ ಷಷ್ಠೀ ಸಮಾಸವನ್ನಾದರೂ ಏತಕ್ಕೆ ಹೇಳಬೇಕೆಂಬ ಆಕ್ಷೇಪವು ಮತ್ತೊಂದು ಬರುತ್ತದೆ. ಅದಕ್ಕೆ ಸಮಾಧಾನವನ್ನು ಈ ರೀತಿ ತಿಳಿಯಬೇಕು.

**ಷಷ್ಠೀಶೇಷೇ** (ಪಾ. ಸೂ. ೨-೩-೫೦) ಎಂಬ ಸೂತ್ರಕ್ಕೆ ಕಾರಕಪ್ರಾತಿಪದಿಕಾರ್ಥಕ್ಕೆ ವ್ಯತಿರಿಕ್ತವಾದ ಸ್ವಸ್ವಾಮಿಭಾವಾದಿಸಂಬಂಧವು ಏನುಂಟೋ ಅದೇ ಶೇಷಪದಾರ್ಥವು. ಅಂತಹ ಅರ್ಥದಲ್ಲಿ ಷಷ್ಠೀ ವಿಭಕ್ತಿಯು ಬರುತ್ತದೆಯೆಂದು ಸೂತ್ರಾರ್ಥವು. ಅದಕ್ಕೆ ಉದಾ:- ರಾಜ್ಞಃ ಪುರುಷಃ.

ಎಲ್ಲಿ ಕರ್ತೃತ್ವ, ಕರ್ಮತ್ವಾದಿಗಳಿಗೂ ಕೂಡ ಸಂಬಂಧತ್ವೇನ ಸಾಮಾನ್ಯಾತ್ಮನಾ ವಿವಕ್ಷಾ ಉಂಟೋ ಅಲ್ಲೂ ಸಂಬಂಧ ಸಾಮಾನ್ಯೇ ಷಷ್ಠೀವಿಭಕ್ತಿಯು ಬರುತ್ತದೆ.

ಆದರೆ ಬ್ರಹ್ಮಣಃ ಎಂಬಲ್ಲಿ ಷಷ್ಠೀಶೇಷೇ ಎಂಬ ಸೂತ್ರದಿಂದ ಕರ್ಮತ್ವವನ್ನು ಸಂಬಂಧತ್ವೇನ ವಿವಕ್ಷಾ ಮಾಡಿ ಷಷ್ಠೀವಿಭಕ್ತಿಯು ಬಂದಿಲ್ಲ. ವಿಶಿಷ್ಟಕರ್ಮಣಿಷಷ್ಠೀ ಪರಿಗ್ರಹ ಮಾಡಬೇಕೆಂಬ ಅಭಿಪ್ರಾಯದಿಂದ ಭಾಷ್ಯಕಾರರು ಅನುವ್ಯಾಖ್ಯಾನದಲ್ಲಿ

"ಸ ಏವ ಸರ್ವವೇದಾರ್ಥೋ ಜಿಜ್ಞಾಸ್ಯೋಽಯಂ ವಿಧೀಯತೇ"

ಎಂದು "ಜಿಜ್ಞಾಸ್ಯ" ಎಂಬ ಪದವನ್ನು ಬಳಸಿದ್ದಾರೆ.

ಈ ಜಿಜ್ಞಾಸ್ಯ ಎಂಬ ಪದಕ್ಕೆ ಸನ್ಪ್ರತ್ಯಯಾಂತವಾದ ಜಿಜ್ಞಾಸ ಎಂಬ ಪದದ ಮುಂದೆ ಅಚೋಯತ್ (ಪಾ. ಸೂ. ೩-೧-೯೭) ಸೂತ್ರದಿಂದ ಯತ್ಪ್ರತ್ಯಯವು ಒಂದು, ಅತೋಲೋಪಃ (ಪಾ. ಸೂ. ೬-೪-೪೮) ಎಂಬ ಸೂತ್ರದಿಂದ ಸಕಾರದ ಮೇಲಿನ ಅಕಾರಕ್ಕೆ ಲೋಪವೂ ಬಂದು ಜಿಜ್ಞಾಸ್ ಯ = ಜಿಜ್ಞಾಸ್ಯ ಎಂದು ರೂಪವು ಸಿದ್ಧವಾಗಿದೆ. ಈ ಯತ್ಪ್ರತ್ಯಯವಾದರೋ ಕೃತ್ಯಾಃ ಪ್ರಾಕ್ ಣ್ವುಲಃ (ಪಾ. ಸೂ. ೩-೪-೭೦) ಎಂಬ ಸೂತ್ರದಿಂದ ಭಾವಾರ್ಥದಲ್ಲೂ ಕರ್ಮಾರ್ಥದಲ್ಲೂ ವಿಹಿತವಾಗಿದೆ. ಏವಂಚ ಜಿಜ್ಞಾಸ್ಯ ಎಂದರೆ ಜಿಜ್ಞಾಸಾ ಕರ್ಮ ಎಂದೇ ಅರ್ಥವಾಗುವುದು. ಜ್ಞಾನವು ಸವಿಷಯಕವಾದುದು. ಸವಿಷಯಕವಾದಜ್ಞಾನವಿಲ್ಲದೇ ಜಿಜ್ಞಾಸಾ ಎಂಬುದಿಲ್ಲ. ಇಂತಹ ಜಿಜ್ಞಾಸೆಯು ಕರ್ಮವನ್ನೇ ಅಪೇಕ್ಷಿಸುತ್ತಿದೆ. ಕೇವಲ ಸಂಬಂಧವನ್ನಲ್ಲ. ಕರ್ಮದಿಂದ ಹೊರತಾಗಿ ಜಿಜ್ಞಾಸಾ ತಿಳಿಯುವಂತಿಲ್ಲ. ಆದಕಾರಣ ಕರ್ಮಕ್ಕೆ ಪ್ರಾಧಾನ್ಯವಿರುವ ಪ್ರಯುಕ್ತ ಬ್ರಹ್ಮಜಿಜ್ಞಾಸಾ ಎಂಬಲ್ಲಿ ಕರ್ಮಣಿ ಷಷ್ಠೀ ಸಮಾಸವೇ ವಿಹಿತ ಎಂದು ಅಭಿಪ್ರಾಯ.

ಬ್ರಹ್ಮಕರ್ಮಕಜಿಜ್ಞಾಸಾ ಎಂದು ಸಿದ್ಧಾಂತಸಿದ್ಧವಾದ ಅರ್ಥ. ಇದರಿಂದ ಬ್ರಹ್ಮಲಕ್ಷಣಜಿಜ್ಞಾಸಾ ಬ್ರಹ್ಮ ಪ್ರಮಾಣಜಿಜ್ಞಾಸಾ, ಬ್ರಹ್ಮಜ್ಞಾನಸಾಧನಜಿಜ್ಞಾಸಾ, ಬ್ರಹ್ಮಜ್ಞಾನಸಾಧನಫಲಜಿಜ್ಞಾಸಾ ಇವೆಲ್ಲವೂ ಅರ್ಥಾತ್ ಆಕ್ಷಿಪ್ತಗಳೇ ಆಗಿರುತ್ತವೆ. ಪ್ರಧಾನಭೂತನಾದ ಬ್ರಹ್ಮನನ್ನು ಜಿಜ್ಞಾಸಾಕರ್ಮವಾಗಿ ಅಂಗೀಕರಿಸಿರುವುದರಿಂದ, ಮಿಕ್ಕ ಲಕ್ಷಣ ಪ್ರಮಾಣಾದಿಗಳ ಜಿಜ್ಞಾಸೆಗಳಿಲ್ಲವಾದರೆ ಬ್ರಹ್ಮಜಿಜ್ಞಾಸೆಯೇ ಸಂಪೂರ್ತಿಗೊಳ್ಳದಿರುವ ಪ್ರಯುಕ್ತ, ಸಾಧನಾದಿಗಳ ಜಿಜ್ಞಾಸೆಗಳು ಅರ್ಥಾತ್ ಪ್ರಾಪ್ತಗಳಾಗಿವೆ. ಎಂಬ ಅಭಿಪ್ರಾಯದಿಂದ ಪ್ರಧಾನವಾಗಿ ಬ್ರಹ್ಮಜಿಜ್ಞಾಸೆಯನ್ನೇ ಸೂತ್ರವು ವಿಧಿಸುತ್ತಲಿದೆ. ನ್ಯಾಯಸುಧೆಯ "ನ ಹಿ ಲಕ್ಷಣಾದಿಜಿಜ್ಞಾಸಾಮಂತರೇಣ ಬ್ರಹ್ಮಜಿಜ್ಞಾಸಾಸ್ತಿ" ಎಂಬ ವಾಕ್ಯದಿಂದ ಮೇಲಿನಂತೆ ಅಭಿಪ್ರಾಯವು ಸ್ಪಷ್ಟವಾಗುತ್ತದೆ.

ಬ್ರಹ್ಮಣಃ ಜಿಜ್ಞಾಸಾ ಎಂಬಲ್ಲಿ ಕರ್ಮಣಿಷಷ್ಠೀವಿಭಕ್ತಿಯನ್ನು ಪರಿಗ್ರಹಿಸಿರುವುದರಿಂದ ಮತ್ತೊಂದು ಪ್ರಯೋಜನವೂ ಉಂಟು. ಈ ಕರ್ಮಣಿಷಷ್ಠೀಪ್ರಯೋಗದಿಂದ ಜಿಜ್ಞಾಸಾಕ್ಕೆ ನಿರ್ವಿಷಯತ್ವಶಂಕೆಯು ಸಹ ಪರಿಹರಿಸಲ್ಪಟ್ಟಂತಾಯಿತು.

ಸೌತ್ರವಾದ ಬ್ರಹ್ಮಪದವು ಜಿಜ್ಞಾಸಾಕರ್ಮವನ್ನೇ ತಿಳಿಸುತ್ತಲಿದೆ ಎಂಬುದೇ ಯುಕ್ತವಾದುದು. ಈ ಜಿಜ್ಞಾಸಾಧಿಕರಣಕ್ಕೆ ತೈತ್ತಿರೀಯದ "ತದ್ವಿಜಿಜ್ಞಾಸಸ್ವ, ತದ್ಬ್ರಹ್ಮೇತಿ" ಎಂಬ ವಾಕ್ಯದಲ್ಲಿನ "ತದ್ವಿಜಿಜ್ಞಾಸಸ್ವ" ಎಂಬ ವಾಕ್ಯವೇ ವಿಷಯ ವಾಕ್ಯವಾಗಿದೆ. ಈ ವಾಕ್ಯದಲ್ಲಿರುವ ತತ್ ಎಂಬ ಪದವು ಸರ್ವನಾಮಪದವು ಕರ್ಮಾರ್ಥಕವಾದ

ದ್ವಿತೀಯಾವಿಭಕ್ತ್ಯಂತವಾಗಿದೆ. ಕರ್ಮಣಿಷಷ್ಠೀಸಮಾಸವನ್ನು ಹೇಳಿರುವುದರಿಂದ ವಿಷಯ ವಾಕ್ಯದ ಆನುಗುಣ್ಯವು ಸೂತ್ರಕ್ಕೆ ಬಂದಂತಾಗಿ ಶ್ರುತ್ಯನುಸಾರಿತ್ವವನ್ನೂ ಸೂತ್ರಕ್ಕೆ ಹೇಳಿದಂತಾಯಿತು.

ಮತ್ತು ಬ್ರಹ್ಮನು ಪ್ರಧಾನ. ಅವನ ಲಕ್ಷಣ, ಪ್ರಮಾಣ, ಜ್ಞಾನ, ಜ್ಞಾನಸಾಧನ, ಫಲ ಮುಂತಾದುವು ಅವನ ಪರಿವಾರಗಳಿದ್ದಂತೆ. ಲೋಕದಲ್ಲಿ ರಾಜನು ಪ್ರಧಾನ. ಅವನ ಭೃತ್ಯವರ್ಗ ಮೊದಲಾದುವುಗಳೆಲ್ಲವೂ ಅವನ ಪರಿವಾರ. ವೈಭವರೂಪವಾದ ಅವನ ಪರಿವಾರಗಳ ಗಮನವು ಇಲ್ಲದಿದ್ದರೆ ರಾಜನ ಗಮನವೂ ಅಸಂಭಾವಿತ. ಛತ್ರವಿಲ್ಲ, ಚಾಮರವಿಲ್ಲ, ಪಾದರಕ್ಷೆಗಳಂತೂ ಇಲ್ಲವೇ ಇಲ್ಲ, ಇಂತಹ ಭಿಕ್ಷುಕನು ಹೋಗುವಾಗ "ರಾಜಾ ಗಚ್ಛತಿ" ಎಂದು ಯಾರೂ ಪ್ರಯೋಗಿಸುವುದಿಲ್ಲ. ಹೇಗೆ ರಾಜನ ಗಮನದಿಂದಲೇ ಅವನ ಪರಿವಾರದ ಗಮನವೂ ಅರ್ಥಾತ್ ಸಿದ್ಧಿಸುತ್ತದೆಯೋ ಅದರಂತೆ, ಲಕ್ಷಣ ಪ್ರಮಾಣಾದಿಗಳ ಜಿಜ್ಞಾಸಾ ಇಲ್ಲದಂತೆ ಬ್ರಹ್ಮಜಿಜ್ಞಾಸೆಯು ಪೂರ್ತಿಯಾಗಲಾರದು. ಆದಕಾರಣ ಪ್ರಧಾನವಾದ ಬ್ರಹ್ಮಜಿಜ್ಞಾಸೆಯಿಂದಲೇ ಮಿಕ್ಕೆಲ್ಲಾ ಲಕ್ಷಣಾದಿಗಳ ಜಿಜ್ಞಾಸೆಯು ಅರ್ಥಾತ್ ಲಭ್ಯವೆಂಬ ದೃಷ್ಟಿಯಿಂದ ಸೂತ್ರಕಾರರು ಪ್ರಧಾನವಾಗಿ ಬ್ರಹ್ಮಜಿಜ್ಞಾಸೆಯನ್ನೇ ಸೂತ್ರದಲ್ಲಿ ವಿಧಿಸಿರುತ್ತಾರೆಂದು ಪರಮಾಭಿಪ್ರಾಯ.

ಬ್ರಹ್ಮಣಃ + ಜಿಜ್ಞಾಸಾ = ಬ್ರಹ್ಮಜಿಜ್ಞಾಸಾ ಎಂಬ ಕರ್ಮಣಿಷಷ್ಠೀ ಸಮಾಸದ ವಿಷಯದಲ್ಲಿ ಆಕ್ಷೇಪ ಮತ್ತು ಸಮಾಧಾನ.

ಬ್ರಹ್ಮಣಃ ಜಿಜ್ಞಾಸಾ ಎಂಬಲ್ಲಿ ಕರ್ಮಣಿ ಷಷ್ಠೀ ವಿವಕ್ಷಿತವಾಗಿದೆಯೇ ಹೊರತು ಸಂಬಂಧತ್ವೇನ ಸಂಬಂಧ ಸಾಮಾನ್ಯೇ ಷಷ್ಠೀ ಶೇಷೇ ಎಂಬ ಸೂತ್ರದಿಂದ ಷಷ್ಠೀವಿಭಕ್ತಿಯ ವಿವಕ್ಷಾ ಇಲ್ಲವೆಂದು ಹೇಳಲಾಗಿದೆ. ಇದರಿಂದ ಮತ್ತೊಂದು ಆಕ್ಷೇಪವು ಕಂಡುಬಂದಿದೆ. ಏನೆಂದರೆ ವ್ಯಾಕರಣಶಾಸ್ತ್ರದಲ್ಲಿ ಕರ್ಮಣಿ ಚ (ವ್ಯಾ. ಸೂ. ೨-೨-೧೪) ಎಂಬ ಸೂತ್ರವು "ಕರ್ಮಣಿ ಯಾ ಷಷ್ಠೀ ಸಾ ನ ಸಮಸ್ಯತೇ" ಎಂದು ಕರ್ಮಣಿಷಷ್ಠೀವಿಭಕ್ತ್ಯಂತ ಪದಕ್ಕೆ ಸಮಾಸವನ್ನು ನಿಷೇಧಿಸುತ್ತಲಿದೆ. ಹೀಗಿರುವಲ್ಲಿ ಬ್ರಹ್ಮಣಃ ಎಂಬಲ್ಲಿ ಕರ್ಮಣಿ ಷಷ್ಠೀ ವಿಭಕ್ತಿಯೆಂದು ಸಿದ್ಧಾಂತ ಮಾಡಿರುವಾಗ ಇಲ್ಲಿ ಸಮಾಸವನ್ನು ಹೇಗೆ ಹೇಳಿದ್ದೀರಿ ಎಂಬುದೇ ಆಕ್ಷೇಪ. ಅದಕ್ಕೆ ಸಮಾಧಾನವು ಈ ರೀತಿ ಇದೆ.

ಕರ್ಮಣಿ ಚ (ಪಾ. ಸೂ. ೨-೨-೧೪) ಎಂಬ ಸೂತ್ರದಲ್ಲಿ ನಿಷಿದ್ಧವಾದ ಕರ್ಮಣಿ ಷಷ್ಠೀ ಸಮಾಸವು "ಉಭಯಪ್ರಾಪ್ತೌ ಕರ್ಮಣಿ (ಪಾ. ಸೂ. ೨-೩-೬೬) ಉಭಯೋಃ ಪ್ರಾಪ್ತೌ ಯಸ್ಮಿನ್ ಕೃತಿ ತತ್ರ ಕರ್ಮಣ್ಯೇವ ಷಷ್ಠೀ ಸ್ಯಾತ್" ಎಂಬ ಸೂತ್ರಪ್ರಕ್ರಿಯೆಯಂತೆ, ಒಂದೇ ಕೃತಿಯಲ್ಲಿ (ವಿಷಯದಲ್ಲಿ) ಕರ್ತೃಕರ್ಮಗಳೆರಡಕ್ಕೂ ಷಷ್ಠೀ ವಿಭಕ್ತಿಯ ಪ್ರಾಪ್ತಿಯು (ಪ್ರಸಕ್ತಿಯು) ಎಲ್ಲಿರುತ್ತದೆಯೋ ಅಲ್ಲಿ ಕರ್ಮದಲ್ಲಿ ಮಾತ್ರ ಷಷ್ಠೀವಿಭಕ್ತಿಯೇ ಹೊರತು ಕರ್ತರಿ ಷಷ್ಠೀವಿಭಕ್ತಿಯು ಬರುವುದಿಲ್ಲ. ಎಂದು ಸೂತ್ರಾರ್ಥವು. ಉದಾ:- ಆಶ್ಚರ್ಯೋ ಗವಾಂ ದೋಹೋ ಅಗೋಪೇನ. ಅಗೋಪಕರ್ತೃಕವಾದ ಗೋಕರ್ಮಕವಾದ ದೋಹವು (ಹಾಲು ಕರೆಯುವಿಕೆಯು) ಏನುಂಟೋ ಅದು ಆಶ್ಚರ್ಯ ಅದ್ಭುತ ವಿಚಾರ. ಇಂತಹ ಸ್ಥಳದಲ್ಲಿ ಮಾತ್ರ ಅಂದರೆ ಉಭಯಪ್ರಾಪ್ತೌ ಕರ್ಮಣಿ ಎಂಬ ಸೂತ್ರದಿಂದ ಪ್ರಾಪ್ತವಾದ ಕರ್ಮಷಷ್ಠ್ಯಂತವಾದ ಪದಕ್ಕೆ ಮಾತ್ರ "ಕರ್ಮಣಿ ಚ" ಎಂಬ ಸೂತ್ರದಿಂದ ಸಮಾಸವನ್ನು ನಿಷೇಧಿಸಲಾಗಿದೆ. ಪ್ರಕೃತದಲ್ಲಾದರೋ ಬ್ರಹ್ಮಜಿಜ್ಞಾಸಾ ಎಂಬಲ್ಲಿ ಬ್ರಹ್ಮಣಃ ಎಂಬ ಪದದ ಮುಂದೆ ಬಂದಿರತಕ್ಕ ಕರ್ಮಾರ್ಥಕವಾದ ಷಷ್ಠೀ ವಿಭಕ್ತಿಯು ಉಭಯಪ್ರಾಪ್ತೌ ಕರ್ಮಣಿ ಎಂಬ ಸೂತ್ರದಿಂದ ಬಂದಿಲ್ಲ. ಇಲ್ಲಿ ಕರ್ಮಕ್ಕೆ ಪ್ರಾಪ್ತಿ ಇದ್ದಾಗ್ಯೂ ಕರ್ತೃವಿಗೆ ಪ್ರಾಪ್ತಿ ಇರುವುದಿಲ್ಲ. ಆದಕಾರಣ ಇಲ್ಲಿನ

ಷಷ್ಠೀ ವಿಭಕ್ತಿಯು ಕರ್ತೃಕರ್ಮಣೋಃ ಕೃತಿ (ಪಾ. ಸೂ. ೨-೩-೬೫) ಎಂಬ ಸೂತ್ರದಿಂದ ಕೃದ್ಯೋಗೇ ಕರ್ತರಿ ಕರ್ಮಣಿ ಚ ಷಷ್ಠೀಸ್ಯಾತ್ ಎಂಬ ವೃತ್ತ್ಯನುಸಾರವಾಗಿ ಇಲ್ಲಿ ಷಷ್ಠೀ ವಿಭಕ್ತಿಯು ಬಂದಿದೆ.

**ಉದಾ** :- ಕೃಷ್ಣಸ್ಯಕೃತಿಃ ಎಂಬಂತೆ ಇಲ್ಲೂ ಸಹ ಷಷ್ಠೀ ವಿಭಕ್ತಿಯು ಬಂದಿದೆ. ಅಪ್ರತ್ಯಯಾತ್ (ಪಾ. ಸೂ. ೩-೩-೧೦೨) ಎಂಬ ಸೂತ್ರದಿಂದ ಸನ್ಪ್ರತ್ಯಯಾಂತವಾದ ಜಿಜ್ಞಾಸ ಶಬ್ದಕ್ಕೆ ಅಪ್ರತ್ಯಯವು ಬಂದಿದೆ.

**ಉದಾ** :- ಚಿಕೀರ್ಷ + ಅ ಎಂಬ ಪ್ರತ್ಯಯವು ಕೃತ್ಪ್ರತ್ಯಯವಾಗಿದೆ. ಕೃತ್ಪ್ರತ್ಯಯಾಂತವಾದ ಜಿಜ್ಞಾಸಾ ಪದವು ಮುಂದೆ ಇರುವ ಪ್ರಯುಕ್ತ ಕರ್ತೃಕರ್ಮಣೋಃ ಕೃತಿ (ಪಾ. ಸೂ. ೨-೩-೬೫) ಸೂತ್ರದಿಂದಲೇ ಬ್ರಹ್ಮಣಃ ಎಂಬಲ್ಲಿ ಷಷ್ಠೀವಿಭಕ್ತಿಯು ಬಂದಿರುವ ಪ್ರಯುಕ್ತ ಯಾವ ಬಾಧಕವೂ ಇಲ್ಲವೆಂದು ಅಭಿಪ್ರಾಯ.

ಮತ್ತೊಂದು ಆಕ್ಷೇಪಕ್ಕೆ ಸಮಾಧಾನವು ಈ ರೀತಿ ಇದೆ.

ಕರ್ಮಣಿ ಚ ಎಂಬ ಸೂತ್ರದಿಂದ ಬ್ರಹ್ಮಜಿಜ್ಞಾಸಾ ಎಂಬಲ್ಲಿ ಸಮಾಸಕ್ಕೆ ನಿಷೇಧವಿಲ್ಲವಾದರೂ "ಪ್ರತಿಪದ ವಿಧಾನಾ ಷಷ್ಠೀ ನ ಸಮಸ್ಯತೇ" ಎಂಬ ವಾರ್ತಿಕದಿಂದ ಇಲ್ಲಿ ಸಮಾಸಕ್ಕೆ ನಿಷೇಧವು ಕಂಡುಬಂದಿರುವಾಗ ಹೇಗೆ ಸಮಾಸವನ್ನು ಹೇಳುತ್ತೀರಿ ಎಂಬ ಆಕ್ಷೇಪಕ್ಕೆ ಅವಕಾಶವಿದೆ.

"ಪ್ರತಿಪದವಿಧಾನಾ ಷಷ್ಠೀ ನ ಸಮಸ್ಯತೇ" ಎಂಬ ವಾರ್ತಿಕನಿಯಮಕ್ಕೆ ಅರ್ಥವು ಹೀಗಿದೆ. ಪದಂ ಪದಂ ಪ್ರತಿವಿಹಿತಾ ಪ್ರತಿಪದವಿಧಾನಾ, ಯತ್ಕಿಂಚಿತ್ಪದ -

ನಿಮಿತ್ತೇನ ವಿಧಾನವತೀ ಯಾ ಷಷ್ಠೀ ತದಂತಂ ಯತ್ಪದಂ ತೇನ ನಿಮಿತ್ತಭೂತಪದೇನ ನ ಸಮಸ್ಯತೇ।

**ಉದಾ** :- ಸರ್ಪಿಷೋ ಜ್ಞಾನ ಇತಿ. "ಇಯಂ ಚ ಷಷ್ಠೀ ಕರ್ತೃಕರ್ಮಣೋಃ ಕೃತೀತ್ಯನೇನ ವಿಹಿತೇತಿ ಪ್ರತಿಪದವಿಧಾನೈವ" ಹೀಗೆ ಕೃತ್ಪ್ರತ್ಯಯಯೋಗನಿಮಿತ್ತದಿಂದ "ಕರ್ತೃಕರ್ಮಣೋಃ ಕೃತಿ" ಎಂಬ ಸೂತ್ರದಿಂದ ಬಂದಿರುವ ಷಷ್ಠೀವಿಭಕ್ತಿಯೂ ಸಹ ಪ್ರತಿಪದವಿಧಾನಾಷಷ್ಠಿ ಆಗಿರುವ ಪ್ರಯುಕ್ತ ವಾರ್ತಿಕಕಾರರು ಇಂತಹ ಕಡೆ ಸಮಾಸನಿಷೇಧ ಮಾಡಿರುವಾಗ ಬ್ರಹ್ಮಣಃ + ಜಿಜ್ಞಾಸಾ = ಬ್ರಹ್ಮಜಿಜ್ಞಾಸಾ ಎಂದು ಸಮಾಸವನ್ನು ಹೇಗೆ ಹೇಳುತ್ತೀರೆಂಬುದೇ ಆಕ್ಷೇಪಕಾರರ ಅಭಿಪ್ರಾಯ.

ಸಮಾಧಾನವು ಈ ರೀತಿ ಇದೆ.

"ಪ್ರತಿಪದವಿಧಾನಾ = ಷಷ್ಠೀನ ಸಮಸ್ಯತೇ" ಎಂಬ ವಾರ್ತಿಕಾರರ ನಿಷೇಧಕ್ಕೆ "ಕೃದ್ಯೋಗಲಕ್ಷಣಾ ಚ ಷಷ್ಠೀ ಸಮಸ್ಯತೇ" ಎಂಬ ಮತ್ತೊಂದು ವಾರ್ತಿಕದಿಂದಲೇ ಪ್ರತಿಪ್ರಸವವಿರುವ ಪ್ರಯುಕ್ತ ಜಿಜ್ಞಾಸಾ ಎಂಬಲ್ಲಿ ಸಮಾಸವು ವಿಹಿತವಾಗಿದೆ.

ಪ್ರತಿಪ್ರಸವವೆಂದರೆ - "ನಿಷೇಧಕ್ಕೆ ನಿಷೇಧ, ಅಥವಾ ಸಾಮಾನ್ಯತೋ ನಿಷಿದ್ಧಸ್ಯ ವಿಷಯವಿಶೇಷೇ ಅಭ್ಯನುಜ್ಞಾನಂ" ಪ್ರತಿಪ್ರಸವಃ = ಅಪವಾದಕ್ಕೆ ಅಪವಾದ.

ಈ ಎಲ್ಲಾ ಬಗೆಗಳಾದ ಆಕ್ಷೇಪಗಳೂ ಸಮಾಧಾನಗಳೂ ಶ್ರೀಮನ್ನ್ಯಾಯಸುಧಾದಲ್ಲೂ ತಾತ್ಪರ್ಯಚಂದ್ರಿಕಾದಲ್ಲೂ ಇವೆ. ಅವುಗಳನ್ನೆಲ್ಲಾ ಸಂಗ್ರಹಿಸಿ ತಂತ್ರದೀಪಿಕಾಕಾರರು "ಬ್ರಹ್ಮಣೋ ಜಿಜ್ಞಾಸಾ ಇತಿ ಕರ್ಮಣಿ ಷಷ್ಠ್ಯಾ ಸಮಾಸಃ" ಎಂದು ಸೂತ್ರಪ್ರಾಯವಾದ ವಾಕ್ಯವನ್ನು ಬಳಸಿರುತ್ತಾರೆ.

ಜಿಜ್ಞಾಸಾಪದವು ಕೃತ್ಪ್ರತ್ಯಯಾಂತವಾದ ಪದವಾಗಿದೆ.

ಜ್ಞಾ ಅವಬೋಧನೆ ಎಂಬ ಧಾತುವಿನ ಮುಂದೆ "ಧಾತೋಃ ಕರ್ಮಣಃಸಮಾನಕರ್ತೃಕಾತ್ ಇಚ್ಛಾಯಾಂ ವಾ" (ಪಾ. ಸೂ. ೩-೧-೭) ಎಂಬ ಸೂತ್ರದಿಂದ ಇಚ್ಛಾ ಎಂಬ ಅರ್ಥದಲ್ಲಿ ಸನ್ಪ್ರತ್ಯಯ ಬಂದು ಜ್ಞಾ + ಸನ್ ಎಂದಾಯಿತು. ಸನ್ಯಙೋಃ (ಪಾ. ಸೂ. ೬-೧-೯) ಸೂತ್ರದಿಂದ ದ್ವಿರ್ವಚನ ಬಂದು ಜ್ಞಾ ಜ್ಞಾ ಸನ್ ಎಂದಾಯಿತು. ಹಲಾದಿಃ ಶೇಷಃ, ಹ್ರಸ್ವಃ (ಪಾ. ಸೂ. ೭-೪-೬೦) ಎಂಬ ಸೂತ್ರದಿಂದ ಪೂರ್ವದ ಮೊದಲನೆಯ ಜ್ಞಾ ಎಂಬುದಕ್ಕೆ ಹ್ರಸ್ವವು ಬಂದು ಜ ಜ್ಞಾ ಸನ್ ಎಂದಾಯಿತು. ಸನ್ಯತಃ (ಪಾ. ಸೂ. ೭-೪-೭೯) ಎಂಬ ಸೂತ್ರದಿಂದ ಮೊದಲನೆಯ ಜಕಾರೋತ್ತರ ಅಕಾರಕ್ಕೆ ಇತ್ವವು ಬರಲಾಗಿ ಜಿ ಜ್ಞಾ ಸ ಎಂದಾಗಲಾಗಿ, ಅಪ್ರತ್ಯಯಾತ್ (ಪಾ. ಸೂ. ೭-೪-೭೯) ಎಂಬ ಸೂತ್ರದಿಂದ ಪ್ರತ್ಯಯಾಂತವಾದ ಧಾತುವಿಗೆ ಅಪ್ರತ್ಯಯವು ಬಂದು ಜಿಜ್ಞಾಸ ಅ ಎಂದಾದನಂತರ ಅಜಾದ್ಯತಃ ಟಾಪ್ (ಪಾ. ಸೂ. ೪-೧-೪) ಸೂತ್ರದಿಂದ ಸ್ತ್ರೀಲಿಂಗದಲ್ಲಿ ಟಾಪ್ ಪ್ರತ್ಯಯವು ಬಂದಾಗ ಜಿಜ್ಞಾಸ + ಅ + ಆ ಎಂದಾಗಿ ಸವರ್ಣದೀರ್ಘ ಸಂಧಿಯು ಬಂದು "ಜಿಜ್ಞಾಸಾ" ಎಂಬ ರೂಪವು ಸಿದ್ಧವಾಗಿದೆ. ಈ ಜಿಜ್ಞಾಸಾ ಎಂಬ ಟಾಬಂತವಾದ ಸ್ತ್ರೀಲಿಂಗ ಶಬ್ದವು ನಿಷ್ಪತ್ತಿಯಾಗಲು ಪ್ರಧಾನವಾಗಿ ಏಳುಸೂತ್ರಗಳ ಅಪೇಕ್ಷೆಯು ಉಂಟು.

**ತಂತ್ರದೀಪಿಕಾ ಮೂಲಃ:-** ತತ್ರ ಅಥ - ಅಧ್ಯಯನ ಶಮದಮಾದಿರೂಪಾಧಿಕಾರಸಂಪತ್ತ್ಯನಂತರಂ, ಅತಃ = ಅಕಾರವಾಚ್ಯಾತ್ಪ್ರಸನ್ನಾತ್ತಸ್ಮಾತ್, ಜ್ಞಾನೋತ್ಥಪ್ರಸಾದಜಮೋಕ್ಷಾಖ್ಯಫಲಸತ್ತ್ವಾತ್, ಬಂಧಸ್ಯಸತ್ಯತ್ವಾತ್, ಆಗಮಸ್ಯ ಪ್ರಾಮಾಣ್ಯಾತ್, ಸಿದ್ಧಾರ್ಥಪ್ರಮಾಪಕತ್ವಾದ್ವಾ ಓಂ ಬ್ರಹ್ಮಣಃ = ಗುಣಪರಿಪೂರ್ಣಸ್ಯ ವಿಷ್ಣೋಃ ಜಿಜ್ಞಾಸಾ ಕರ್ತವ್ಯೇತಿಶೇಷಃ ||

**ಅರ್ಥ:-** ತತ್ರ = ಮೊದಲನೆಯ ಸೂತ್ರವಾದ ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ ಎಂಬ ಸೂತ್ರದಲ್ಲಿರತಕ್ಕ ಓಂ ಪದಕ್ಕೂ, ಅಥ ಎಂಬ ಪದಕ್ಕೂ, ಬ್ರಹ್ಮಪದಕ್ಕೂ ಅರ್ಥವನ್ನು ಹೇಳಿದ ಮೇಲೆ, ಬ್ರಹ್ಮಜಿಜ್ಞಾಸಾ ಎಂಬಲ್ಲಿ ಸಮಾಸದ ಸ್ವರೂಪವನ್ನೂ ತಿಳಿಸಿದ ನಂತರದಲ್ಲಿ, ಅಥ ಎಂಬ ಪ್ರಾರಂಭಿಸಿ ಮೊದಲನೆಯ ಸೂತ್ರದ ವಿಶಿಷ್ಟಾರ್ಥವನ್ನು ಸಂಗ್ರಹಿಸಿ ಹೇಳುತ್ತಾರೆ.

ಅಥ = ಅಧ್ಯಯನ ಶಮದಮಾದಿ ರೂಪಾಧಿಕಾರಸಂಪತ್ತ್ಯನಂತರಂ = ಅಧ್ಯಯನಶಮ, ದಮಾದಿರೂಪವಾದ ಅಧಿಕಾರವನ್ನು ಪಡೆದಮೇಲೆ, ಅತಃ = ಅಕಾರವಾಚ್ಯಾತ್ಪ್ರಸನ್ನಾತ್ ಬ್ರಹ್ಮಣಃ = ಅಕಾರವಾಚ್ಯನಾದ ಪ್ರಸನ್ನನಾದ ಬ್ರಹ್ಮನಿಂದ, "ಅ ಇತಿಬ್ರಹ್ಮೇತಿಶ್ರುತೇಃ" ಎಂದು ಅಕಾರವು ಪರಬ್ರಹ್ಮವಾಚಕವಾಗಿರುವ ಪ್ರಯುಕ್ತ ಅಕಾರವಾಚ್ಯನಾದ ಪ್ರಸನ್ನನಾದ ಪರಬ್ರಹ್ಮನ ದೆಸೆಯಿಂದ, ಎಂದರ್ಥ.

ಜ್ಞಾನೋತ್ಥಪ್ರಸಾದಜಮೋಕ್ಷಾಖ್ಯಫಲಸತ್ತ್ವಾತ್ = ಬಿಂಬಾಪರೋಕ್ಷಜ್ಞಾನದಿಂದ ಉಂಟಾಗುವ ಪರಮಾತ್ಮನ ಅತ್ಯರ್ಥಪ್ರಸಾದದಿಂದ ಲಭಿಸುವ ಮೋಕ್ಷವೆಂಬ ಫಲವು ದೊರಕುವುದರಿಂದ, ಬಂಧಸ್ಯ ಸತ್ಯತ್ವಾತ್ = ಸಂಸಾರವೆಂಬ ಬಂಧವು ಸತ್ಯವಾಗಿರುವುದರಿಂದ, ಆಗಮಸ್ಯಪ್ರಾಮಾಣ್ಯಾತ್ = ಆಗಮವು ಪ್ರಮಾಣವಾದುದರಿಂದ, ಸಿದ್ಧಾರ್ಥಪ್ರಮಾಪಕತ್ವಾದ್ವಾ = ವೇದಾದಿ ಆಗಮಗಳಿಗೆ ಸಿದ್ಧವಾದ ಪದಾರ್ಥ ಯಥಾರ್ಥ ಜ್ಞಾನವನ್ನು ಉಂಟು ಮಾಡುವ ಸ್ವಭಾವವಿರುವುದರಿಂದ.

ಓಂ = ಬ್ರಹ್ಮಣಃ = ಓಂ = ಗುಣಪರಿಪೂರ್ಣಸ್ಯ = ಗುಣಪರಿಪೂರ್ಣನಾದ, ಬ್ರಹ್ಮಣಃ = ವಿಷ್ಣೋಃ = ಬ್ರಹ್ಮಶಬ್ದವಾಚ್ಯನಾದ, ವಿಷ್ಣುವಿನ, ಜಿಜ್ಞಾಸಾ = ಜಿಜ್ಞಾಸೆಯು, ಕರ್ತವ್ಯಾ ಇತಿಶೇಷಃ = ಮಾಡಲ್ಪಡತಕ್ಕದ್ದು. ಇತಿಶೇಷಃ = ಈ ಸೂತ್ರದಲ್ಲಿ ಕರ್ತವ್ಯಾ ಎಂಬ ಪದವನ್ನು ಅಧ್ಯಾಹಾರ ಮಾಡಿ ಸೇರಿಸಿಕೊಂಡಿರುವುದಾಗಿದೆ.

ಅಥ ಶಬ್ದಾರ್ಥದಲ್ಲಿ ಸೇರಿರತಕ್ಕ ಅಧ್ಯಯನವು ಹರಿಭಕ್ತಿಪೂರ್ವಕವಾದ ಅಧ್ಯಯನವೆಂಬಲ್ಲಿ ವಿವರಣೆ :-

**ತಾತ್ಪರ್ಯ** :- ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಪ್ರತಿಪಾದ್ಯನಾದ ಪರಬ್ರಹ್ಮನ ಶ್ರವಣಾದಿರೂಪವಾದ ಜಿಜ್ಞಾಸೆಯನ್ನು ಮಾಡತಕ್ಕವರಿಗೆ ಇರಬೇಕಾದ ಅಧಿಕಾರ ಸಂಪತ್ತು ಯಾವುದೆಂಬುದನ್ನು ಭಾಗವತತಂತ್ರವೆಂಬ ಪ್ರಮಾಣ ಗ್ರಂಥವು ತಿಳಿಸುತ್ತಲಿದೆ. ಅದನ್ನು ಶ್ರೀಮದಾಚಾರ್ಯರು ಸೂತ್ರಭಾಷ್ಯದಲ್ಲಿ "ಅಧಿಕಾರಶ್ಚೋಕ್ತೋ ಭಾಗವತತಂತ್ರೇ" ಎಂದು ಪ್ರಾರಂಭಿಸಿ ಉದಾಹರಿಸಿದ್ದಾರೆ. ವ್ಯೋಮಸಂಹಿತಾವಚನವನ್ನೂ ಉದಾಹರಿಸಿರುವರು. ಅದು ಜಾತಿಕೃತವಾದ ಅಧಿಕಾರಿಗಳ ವಿಭಾಗವನ್ನೂ ಗುಣಕೃತವಾದ ಅಧಿಕಾರಿಗಳ ವಿಭಾಗವನ್ನೂ ತಿಳಿಸುತ್ತಲಿದೆ. ಆ ವಚನಗಳು ಈ ರೀತಿ ಇವೆ.

**"ಅಧಿಕಾರಶ್ಚೋಕ್ತೋ ಭಾಗವತತಂತ್ರೇ-**
**ಮಂದಮಧ್ಯೋತ್ತಮತ್ವೇನ ತ್ರಿವಿಧಾ ಹ್ಯಧಿಕಾರಿಣಃ।**
**ತತ್ರಮಂದಾಮನುಷ್ಯೇಷು ಯ ಉತ್ತಮಗಣಾಮತಾಃ।**
**ಮಧ್ಯಮಾ ಋಷಿಗಂಧರ್ವಾದೇವಾಸ್ತತ್ರೋತ್ತಮಾಮತಾಃ ॥ ಎಂದು ಹೇಳಲಾಗಿದೆ.**

**ಅರ್ಥ** :- ಮಂದಾಧಿಕಾರಿಗಳು, ಮಧ್ಯಮಾಧಿಕಾರಿಗಳು, ಉತ್ತಮಾಧಿಕಾರಿಗಳೆಂದು ಅಧಿಕಾರಿಗಳಲ್ಲಿ ಮೂರು ಪ್ರಭೇದವಿದೆ. ಅವರಲ್ಲಿ ಮನುಷ್ಯೋತ್ತಮರು ಮಂದಾಧಿಕಾರಿಗಳು ಋಷಿಗಳು ಗಂಧರ್ವರು, ಮಧ್ಯಮಾಧಿಕಾರಿಗಳು, ದೇವತೆಗಳು ಉತ್ತಮಾಧಿಕಾರಿಗಳೆಂದು ವಿಭಾಗವಿದೆ.

ಇದು ಮನುಷ್ಯೋತ್ತಮತ್ವ, ಋಷಿತ್ವ, ಗಂಧರ್ವತ್ವ, ದೇವತ್ವರೂಪಗಳಾದ ಜಾತಿಕೃತವಾದ ಅಧಿಕಾರಿ ಪ್ರಭೇದಗಳು. ಹೀಗೆ ಹೇಳಿದರೆ ಮನುಷ್ಯೋತ್ತಮತ್ವವು ವೇದಾನಧಿಕಾರಿಗಳಾದ ಶೂದ್ರರಲ್ಲೂ ಕಂಡುಬರುವ ಪ್ರಯುಕ್ತ ಅವರಿಗೆ ವೇದಾಂತ ಶಾಸ್ತ್ರಾಧಿಕಾರವಿಲ್ಲವಾದ್ದರಿಂದ ಅಲಕ್ಷ್ಯದಲ್ಲಿ ಅಧಿಕಾರಿ ಲಕ್ಷಣವು ಬಂದಂತಾಗಿ ಅತಿವ್ಯಾಪ್ತಿ ದೋಷ ದೂಷಿತವಾಯಿತು. ಎಂಬ, ಆಕ್ಷೇಪದ ಪರಿಹಾರಕ್ಕಾಗಿ "ಇತಿಜಾತಿಕೃತೋ ಭೇದಃ" ಎಂದು ಹೇಳಿದ ಮೇಲೆ, ಹಿಂದಿನ ಲಕ್ಷಣದಲ್ಲಿ ಅಸ್ವಾರಸ್ಯದಿಂದ, ಮುಂದೆ ಈ ಪ್ರಮಾಣವಾಕ್ಯವು "ತಥಾನ್ಯೋಗುಣಪೂರ್ವಕಃ" ಎಂದು ದೋಷರಹಿತವಾದ ಅಧಿಕಾರಿ ಲಕ್ಷಣವನ್ನು ನಿರೂಪಿಸುತ್ತಲಿದೆ.

**"ಇತಿ ಜಾತಿಕೃತೋ ಭೇದಃ ತಥಾನ್ಯೋ ಗುಣಪೂರ್ವಕಃ।**
**ಭಕ್ತಿಮಾನ್ ಪರಮೇ ವಿಷ್ಣೌಯಸ್ತ್ವಧ್ಯಯನವಾನ್ನರಃ ॥**
**ಅಧಮಃ ಶಮಾದಿಸಂಯುಕ್ತೋ ಮಧ್ಯಮಃ ಸ ಉದಾಹೃತಃ।**
**ಆ ಬ್ರಹ್ಮಸ್ತಂಬಪರ್ಯಂತಂ ಅಸಾರಂ ಚಾಪ್ಯನಿತ್ಯಕಮ್ ॥**
**ವಿಜ್ಞಾಯ ಜಾತವೈರಾಗ್ಯೋ ವಿಷ್ಣುಪಾದೈಕಸಂಶ್ರಯಃ।**
**ಸ ಉತ್ತಮೋಽಧಿಕಾರೀ ಸ್ಯಾತ್ಸನ್ನ್ಯಸ್ತಾಖಿಲಕರ್ಮವಾನ್ ॥ ಇತಿ ॥**

**ಅಧ್ಯಯನಮಾತ್ರವತಃ ॥**

**ನಾವಿಶೇಷಾದಿತಿಚೋತ್ತರಂ ॥**

**ಇತಿ ಸೂತ್ರಭಾಷ್ಯಂ ॥**

**ವಿಶೇಷ ವಾಕ್ಯಾರ್ಥ ಸಂಗ್ರಹ** :- ಹರಿಭಕ್ತಿ ಪೂರ್ವಕವಾದ ಅಧ್ಯಯನ, ಶಮದಮಾದಿಸಂಪತ್ತಿ, ವಿಷ್ಣುಪಾದೈಕ ಸಂಶ್ರಯತ್ವಗಳೆಂಬ ಅಧಿಕಾರಿಯ ಗುಣಗಳು ಎಲ್ಲ ಮೋಕ್ಷಾಧಿಕಾರಿಗಳಿಗೂ ಇರಬೇಕಾದ ಗುಣಗಳೇ ಆಗಿವೆ. ಮೂರು ಬಗೆಯಾದ ಅಧಿಕಾರಿಗಳಿಗೂ ಈ ಎಲ್ಲಾ ಧರ್ಮಗಳೂ ಇರುವಾಗ ಅಧಮಾಧಿಕಾರಿ, ಮಧ್ಯಮಾಧಿಕಾರಿ, ಉತ್ತಮಾಧಿಕಾರಿ ಎಂಬ ವಿವೇಚನೆಯು ಹೇಗೆ ಅಂದರೆ ವಿಭಾಗವು ಕೂಡುವುದಿಲ್ಲವೆಂಬ ಶಂಕೆಗೆ ಉತ್ತರವಾಗಿ ಟೀಕಾಕಾರರು "ಉತ್ತರೋತ್ತಪ್ರಾಚುರ್ಯೇಣಾಸಾಂಕರ್ಯಾತ್" (ಟೀಕಾ) ಎಂದು ಪರಸ್ಪರಸಾಂಕರ್ಯವು ಲಕ್ಷಣಗಳಿಗೆ ಬಾರದಂತೆ ಸೂತ್ರ ಪ್ರಾಯವಾಗಿ ಹೇಳಿರುತ್ತಾರೆ.

ತಾತ್ಪರ್ಯ ಚಂದ್ರಿಕಾಕಾರರು ಇದರ ವಿಶೇಷಾರ್ಥವನ್ನು ಈ ರೀತಿ ನಿರೂಪಿಸಿರುವರು.

**ತಾತ್ಪರ್ಯಚಂದ್ರಿಕಾ - ತತ್ಪ್ರಾಯಮರ್ಥಃ :- ಸಮಾನಾಧಿಕರಣಾನಾಂ ವೇದಾಧ್ಯಯನಶಮದಮಾದಿ ವಿಷ್ಣುಪಾದೈಕಸಂಶ್ರಯತ್ವಾದೀನಾಂ ಮಧ್ಯೆ**

೧. ಅಧಮಾಧಿಕಾರಿ ಲಕ್ಷಣವು :-

**ಯಸ್ಯ ಶಮಾದಿವಿಷ್ಣುಪಾದೈಕಸಂಶ್ರಯತ್ವಾದಿಕೇ ಅಪ್ರಚುರೇ ಅಧ್ಯಯನಂತು ಪ್ರಚುರಂಸೋಽಧಮಃ॥**

ಎಂದು ಹೇಳಲಾಗಿದೆ.

ಇದರಿಂದ ಪ್ರಚುರಾಧ್ಯಯನವತ್ತ್ವೇಸತಿ ಅಪ್ರಚುರಶಮದಮಾದಿವಿಷ್ಣು ಪಾದೈಕಸಂಶ್ರಯತ್ವಾದಿಮತ್ತ್ವಂ - "ಅಧಮಾಧಿಕಾರಿಣೋ ಲಕ್ಷಣಂ" ಎಂದು ಪರ್ಯವಸಿತವಾದ ಅಧಮಾಧಿಕಾರಿಯ ಲಕ್ಷಣವು.

೨. ಮಧ್ಯಮಾಧಿಕಾರಿ ಲಕ್ಷಣ ಸ್ವರೂಪವು:-

**ಯಸ್ಯ ವಿಷ್ಣುಪಾದೈಕ ಸಂಶ್ರಯತ್ವಾದಿಕಮೇವ ಅಪ್ರಚುರಂ, ಅಧ್ಯಯನಶಮಾದಿಕೇ ತು ಪ್ರಚುರೇ ಸ ಮಧ್ಯಮಃ॥**

ಅಂದರೆ ಪ್ರಚುರಾಧ್ಯಯನಶಮದಮಾದಿಮತ್ತ್ವೇಸತಿ ಅಪ್ರಚುರವಿಷ್ಣುಪಾದೈಕಸಂಶ್ರಯತ್ವಾದಿಮತ್ತ್ವಂ ಮಧ್ಯಮಾಧಿಕಾರಿಣೋ ಲಕ್ಷಣಂ" ಎಂದು ಮಧ್ಯಮಾಧಿಕಾರಿಯ ಲಕ್ಷಣವನ್ನು ಹೇಳಲಾಗಿದೆ.

೩. ಉತ್ತಮಾಧಿಕಾರಿಯ ಲಕ್ಷಣವು:-

**ಯಸ್ಯತು ವಿಷ್ಣುಪಾದ್ಯೈಕ ಸಂಶ್ರಯತ್ವಾದಿಕಂ ಪ್ರಚುರಂ ಅಧ್ಯಯನಶಮಾದಿಕೇ ತ್ವ ಪ್ರಚುರೇ ಸ ಉತ್ತಮ ಇತಿ ॥**

ಈ ಲಕ್ಷಣ ಸ್ವರೂಪವು ಹೇಗೆಂದರೆ

**ಅಪ್ರಚುರಾಧ್ಯಯನಶಮದಮಾದಿಮತ್ತ್ವೇಸತಿಪ್ರಚುರವಿಷ್ಣುಪಾದ್ಯೈಕಸಂಶ್ರಯತ್ವಾದಿಮತ್ತ್ವಂ ಉತ್ತಮಾಧಿಕಾರಿಣೋ ಲಕ್ಷಣಂ**

ಎಂದು ಪರಸ್ಪರ ಅಸಂಕೀರ್ಣವಾದ ಮೂರು ಬಗೆಯಾದ ಅಧಮಾಧಿಕಾರಿ, ಮಧ್ಯಮಾಧಿಕಾರಿ, ಉತ್ತಮಾಧಿಕಾರಿಗಳ ಲಕ್ಷಣವನ್ನು ತಾತ್ಪರ್ಯಚಂದ್ರಿಕಾಕಾರರು ತೋರಿಸಿರುವರು.

ಈ ಸಂದರ್ಭದಲ್ಲಿ ''ಉತ್ತರೋಕ್ತಪ್ರಾಚುರ್ಯೇಣಾಸಾಂಕರ್ಯಾತ್'' ಎಂಬ ವಾಕ್ಯಕ್ಕೆ ವ್ಯಾಖ್ಯಾನ ಮಾಡುವಾಗ ಭಾವಬೋಧಕಾರರು ಈ ಕೆಳಗೆ ಕಂಡಂತೆ ಅಧಮಮಧ್ಯಮೋತ್ತಮಾಧಿಕಾರಿಗಳ ಅಸಂಕೀರ್ಣಲಕ್ಷಣಗಳನ್ನು ವಿವರಿಸಿರುತ್ತಾರೆ.

ಭಾವಬೋಧದ ವಾಕ್ಯಗಳು:-

**ನನು ಸರ್ವಂ ಸರ್ವತ್ರ ಚೇತ್ ಪರಸ್ಪರಾವ್ಯಾವೃತ್ತತ್ವಾತ್ ನ ವಿಶೇಷಲಕ್ಷಣಾನೀತ್ಯಾಶಂಕ್ಯ ನಿರಸ್ಯತಿ ॥**

**ನ ಚೈವಂಸಾಂಕರ್ಯಂ ॥**

**ಉತ್ತರೋಕ್ತಪ್ರಾಚುರ್ಯೇಣಾಸಾಂಕರ್ಯಾತ್ ॥ ಇತಿತತ್ವ ಪ್ರಕಾಶಿಕಾ ॥**

**ಉತ್ತರೋಕ್ತಮಿತಿ ॥**

**ಪೂರ್ವಸ್ಮಿನ್ನಿತಿಶೇಷಃ।**

**ತಥಾಚೋತ್ತರಸ್ಮಿನ್ಮಧ್ಯಮೇ, ಉತ್ತಮೇ ಚೋಕ್ತಾನಾಂ ಅಧ್ಯಯನವತ್ತ್ವಾದೀನಾಂ ತ್ರಯಾಣಾಂ ಗುಣಾನಾಂ ಪೂರ್ವಸ್ಮಿನ್ ಅಧಮೇ ವಾ ಅಪ್ರಾಚುರ್ಯಾದಿತ್ಯರ್ಥಃ।**

**ತತಶ್ಚ ಪ್ರಚುರತಮಾಧ್ಯಯನಾದಿಗುಣತ್ರಯತ್ವಂ - ಉತ್ತಮತ್ವಂ, ಪ್ರಚುರತರಗುಣತ್ರಯವತ್ವಂ ಮಧ್ಯಮತ್ವಂ ಪ್ರಚುರತರತ್ವಾದಿರಹಿತಾಧ್ಯಯನಾದಿಮತ್ವಂ - ಅಧಮತ್ವಂ ಇತ್ಯುತ್ತಮಾದೀನಾಂ ತ್ರಯಾಣಾಂ ಲಕ್ಷಣಾನ್ಯನೇನೋಕ್ತಾನಿ ॥**

**ಪ್ರಚುರತ್ವ, ಪ್ರಚುರತರತ್ವ, ಪ್ರಚುರತಮತ್ವಾನಾಂ ಮಧುರತ್ವಾದಿವತ್ ಸ್ಪಷ್ಟತ್ವಾದಿವಚ್ಚ ಜಾತಿರೂಪತ್ವಾತ್ ನ ಕಶ್ಚಿತ್ ಕ್ಷುದ್ರೋಪದ್ರವಃ ॥**

**ಯದ್ವಾ ಸಂಗೃಹೀತಾನುಕ್ತಪ್ಯಾಶ್ಚ ಗುಣಾಃ ಉತ್ತರೋಕ್ತಾಃ।**

**ತೇಷಾಂ ತತ್ರ ಭಕ್ತಿಮಾನಿತ್ಯಾದಿ ಯಥಾಸ್ಥಿತ ಮೂಲೋಕ್ತಗುಣಾಪೇಕ್ಷಯಾ ಅಪ್ರಾಚುರ್ಯೇಣೇತಿ ಯೋಜನಾ।**

**ಯಥಾಸ್ಥಿತಮೂಲೋಕ್ತಗುಣಾನಾಂ ಚ ಪ್ರಾಚುರ್ಯಂ ಅರ್ಥತೋ ಲಭ್ಯಂ।**

**ತತಶ್ಚ (೧) ಅಧಮಾಧಿಕಾರಿಲಕ್ಷಣಂ -**

**ಯತ್ರ ಅಧ್ಯಯನವತ್ತ್ವಂ ಪ್ರಚುರಂ ಗುಣದ್ವಯಂ ಅಪ್ರಚುರಂ ಸೋಽಧಮಃ।**

**(೨) ಮಧ್ಯಮಾಧಿಕಾರಿಲಕ್ಷಣಂ ಯಥಾ -**

**ಯತ್ರಶಮಾದಿಸಂಪತ್ತಿಃ ಪ್ರಚುರಾ, ಅಧ್ಯಯನವತ್ತ್ವಂ ವೈರಾಗ್ಯಾದಿ ಚಾಪ್ರಚುರಂ ಸ ಮಧ್ಯಮಃ**

**(೩) ಉತ್ತಮಾಧಿಕಾರಿಲಕ್ಷಣಂ ಯಥಾಃ -**

**ಯತ್ರವಿಷ್ಣುಪಾದೈಕಸಂಶ್ರಯತ್ವಂ ಪ್ರಚುರಂ ಅಧ್ಯಯನವತ್ತ್ವಂ ಶಮಾದಿ**

ಸಂಪತ್ತಿಶ್ಚ ಅಪ್ರಚುರಾ ಸ ಉತ್ತಮ ಇತ್ಯರ್ಥ।

ಅಧಮಾದಿಷು -

**ಅಧ್ಯಯನವತ್ತ್ವಾದೀನಾಂ ಸಮಾನಾಧಿಕರಣಗುಣದ್ವಯಾಪೇಕ್ಷಯಾ ಪ್ರಾಚುರ್ಯೇಽಭಕ್ತಿ ಮಾನಿತ್ವಾದೌ ತತ್ರ ತತ್ರ ತಸ್ಯಗುಣಸ್ಯ ವಿಶಿಷ್ಯ ವಚನಂ ಅತ್ಯನೀತಿಮಧ್ಯಮಾಧಿಕಾರಿತ್ವಂ ಸೂಚಿತಮಿತಿ, ವಿಷ್ಣ್ವಾಸಮಿತಿ ಉತ್ತಮಾಧಿಕಾರಿತ್ವಂ ಸೂಚಿತಂ ಇತಿ ಟೀಕಾವಚನಂ ಜ್ಞಾಪಕಮಿತಿಧ್ಯೇಯಮ್ ॥ (ಇತಿ ಭಾವಬೋಧ ॥)**

ಇಷ್ಟು ಹೇಳಿ ಭಾವಬೋಧಕಾರರು ತಾತ್ಪರ್ಯಚಂದ್ರಿಕಾಯಾಂತು ಎಂದು ಪ್ರಾರಂಭಿಸಿ 'ಯತ್ರಾ' ಎಂದು ತಾವು ವಿವರಿಸಿರುವ ಅರ್ಥಕ್ಕೆ ಸ್ವಲ್ಪ ಸಂವಾದರೂಪವಾಗಿ ತಾತ್ಪರ್ಯ ಚಂದ್ರಿಕಾ ವಾಕ್ಯಗಳನ್ನೇ ಉದಾಹರಿಸಿರುತ್ತಾರೆ.

ತಾತ್ಪರ್ಯ ಚಂದ್ರಿಕಾಕಾರರು ಸಮಾನಾಧಿಕರಣವಾದ ಗುಣತ್ರಯಗಳ ಮಧ್ಯದಲ್ಲಿ ಒಂದಕ್ಕಾಗಲಿ, ಎರಡಕ್ಕಾಗಲಿ ಪ್ರಾಚುರ್ಯವನ್ನು ವಿವಕ್ಷಾ ಮಾಡಿ ಉತ್ತಮಮಧ್ಯಮಾಧಮಾಧಿಕಾರಿಗಳ ಪ್ರಭೇದವನ್ನು ಪರಿಗಣಿಸಿರುತ್ತಾರೆ. ಭಾವ ಬೋಧಕಾರರು ಮೊದಲು ವಿವರಿಸಿರುವ ಪ್ರಕಾರದಲ್ಲಿ ಸಮ್ಮಿಳಿತಗಳಾದ ಗುಣತ್ರಯಗಳಲ್ಲೇ ಪ್ರಾಚುರ್ಯದಲ್ಲೇ ತರತಮ ಭಾವವನ್ನು ಆಶ್ರಯಿಸಿ ಅಧಿಕಾರಿಭೇದವನ್ನು ಹೇಳಿದ್ದಾರೆ.

ತಂತ್ರದೀಪಿಕೆಯಲ್ಲಿ ತಂತ್ರದೀಪಿಕಾಕಾರರು 'ತತ್ರ ಅಥ' ಎಂದು ಪ್ರಾರಂಭಿಸಿ ಅಥ ಶಬ್ದಾರ್ಥವನ್ನು ಅಧ್ಯಯನ ಶಮದಮಾದಿರೂಪಾಧಿಕಾರಸಂಪತ್ತ್ಯನಂತರಂ ಎಂಬಲ್ಲಿ ಹೇಳಿರುವ ಅಧ್ಯಯನವು ''ಭಕ್ತಿಮಾನ್ ಪರಮೇ ವಿಷ್ಣೌ'' ಎಂಬ ಭಾಗವತತಂತ್ರದ ವಾಕ್ಯದಂತೆ ''ಹರಿಭಕ್ತಿಪೂರ್ವಕವಾದ ಅಧ್ಯಯನವನ್ನೇ ಇಟ್ಟುಕೊಳ್ಳಬೇಕು. ಕೇವಲ ಹರಿಭಕ್ತಿ ರಹಿತವಾದ ಅಧ್ಯಯನವಲ್ಲ. ಹರಿಭಕ್ತಿಯಿಲ್ಲದವನು ಅಧ್ಯಯನ ಮಾಡಿದವನಾದರೂ ಅವನಿಗೆ ಬ್ರಹ್ಮಮೀಮಾಂಸಾ ಶಾಸ್ತ್ರಾಧಿಕಾರವೇ ಇರುವುದಿಲ್ಲ. ಇದಕ್ಕೆ ಟೀಕಾವಾಕ್ಯವೇ ಗಮಕವಾಗಿದೆ. ಜಾತಿಕೃತವಾದ ಅಧಿಕಾರಿಲಕ್ಷಣವನ್ನು ಹೇಳಿದ ತರುವಾಯ ತತ್ತ್ವಪ್ರಕಾಶಿಕಾಕಾರರು ಆ ಲಕ್ಷಣಕ್ಕೆ ಅತಿವ್ಯಾಪ್ತಿಯನ್ನು ಶಂಕಿಸಿ ಪ್ರಕಾರಾಂತರೇಣಾಧಿಕಾರಿಸ್ವರೂಪ ಮಾಹ ''ತಥೇತಿ'' ಎಂದು ಹೇಳಿದ್ದಾರೆ.

ಆ ವಾಕ್ಯಗಳು ಈ ರೀತಿ ಇವೆ.

''ಅನೇನ ಮೋಕ್ಷಯೋಗ್ಯತ್ವಂ ಸಾಮಾನ್ಯಲಕ್ಷಣಮಭಿಪ್ರೇತಂ।
ಅಸ್ಯ ಚ ಸಮ್ಯಗ್ಜ್ಞಾನಾದೌ ವ್ಯಾಪ್ತೇಃ ಪ್ರಾಯಿಕತ್ವಾದಯುಕ್ತಾ, ಪ್ರಕಾರಾಂತರೇಣಾಧಿಕಾರಿ
ಸ್ವರೂಪಮಾಹ ॥ ತಥೇತಿ ॥ ಇತಿತತ್ತ್ವಪ್ರಕಾಶಿಕಾ ॥

ಈ ಟೀಕಾವಾಕ್ಯದಲ್ಲಿನ ಸಚ್ಛೂದ್ರಾದೌ ಎಂಬಲ್ಲಿರುವ ಆದಿ ಎಂಬ ಪದಕ್ಕೆ ಅತಿಗಹನವಾದ ಪ್ರಯೋಜನವನ್ನು ಭಾವದೀಪಕಾರರು ತೋರಿಸಿರುವರು.

ಶ್ರೀ ರಾಘವೇಂದ್ರ ಗುರುಸಾರ್ವಭೌಮರೇ ತತ್ತ್ವಪ್ರಕಾಶಿಕಾಕ್ಕೆ ಭಾವದೀಪವೆಂಬ ಅಮೋಘವಾದ ವ್ಯಾಖ್ಯಾನವನ್ನು ರಚಿಸಿರುತ್ತಾರೆ. ಅವರ ವಾಕ್ಯಗಳು ಈ ರೀತಿ ಇವೆ.

"ನನು ಮುಕ್ತಿಯೋಗ್ಯತ್ವಮೇವ ಅಧಿಕಾರಿ ಲಕ್ಷಣಮಸ್ತು।
ಶುಗಸ್ಯೇತಿವಕ್ಷ್ಯಮಾಣಾಪಶೂದ್ರಾಧಿಕರಣನ್ಯಾಯೇನಾಧಿಕಾರಸ್ಯ ತ್ರೈವರ್ಣಿಕಮಾತ್ರ
ಪರ್ಯವಸಾನೋಪಪತ್ತೇಃ।
ವ್ಯರ್ಥಸ್ತ್ವಾಯಮಥಶಬ್ದಃ।
ದೇವಾನ್ಯವಿಷಯಾರ್ಥಕಬೃಹತ್ಪದೇನೈವಮುಮುಕ್ಷುಮಾತ್ರಾಧಿಕಾರಿಣಃ ತದಪಶೂದ್ರತ್ವಸ್ಯ
ಅಪಶೂದ್ರನಯನ್ಯಾಯೇನೈವ ಲಾಭಸಂಭವಾತ್।
ತತ್ಸಿದ್ಧಸ್ಯೈವ, ಅಪಶೂದ್ರಾಧಿಕಾರಸ್ಯಾತ್ರಸೂಚನಮಿತ್ಯ ಪಿನಾತೀವತುಷ್ಟಿಕರಂ।
ತಥಾನ್ಯೋ ಗುಣಪೂರ್ವಕ ಇತಿಭಾಷ್ಯಂ ಚ ವ್ಯರ್ಥಂ।
ಅರುಚ್ಯೇತ್ಯಾದಿಟೀಕಾ ಚ ಅಯುಕ್ತಾ" ಇತಿಕಸ್ಯಚಿಚ್ಚೋದ್ಯಮಯುಕ್ತಂ।
ತ್ವದುಕ್ತದಿಶಾ, ಅತ್ರತ್ರೈವರ್ಣಿಕಾಧಿಕಾರಲಾಭೇಽಪಿ ತ್ರೈವರ್ಣಿಕೇಷ್ವಪಿ ಕೇಷಾಂ
ಚಿದನಧಿಕಾರಿಣಾಂ ಭಾವೇನ ತತ್ಪರಿವರ್ಜನಸ್ಯ ಅಪಶೂದ್ರನಯೇನ, ಅಪ್ರಾಪ್ತೇಃ।
"ಅಧ್ಯಯನಮಾತ್ರವತಃ" ಇತ್ಯಧಿಕರಣೇ ತಾದೃಶಾಧಿಕಾರವಿಶೇಷಸ್ಯ ಪ್ರಾಪ್ತತ್ವೇಽಪಿ
ತಸ್ಯೈವೇಹ, ತಥಾನ್ಯೋ ಗುಣಪೂರ್ವಕ ಇತ್ಯಾದಿಭಾಷ್ಯೇಣ ವಿವಿಚ್ಯಕೀರ್ತನಾತ್।
ಶ್ರೋತೃಪ್ರವೃತ್ತಿಸೌಕರ್ಯಾಯ ವಕ್ಷ್ಯಮಾಣಸ್ಯೈವ, ಆದೌ, ಅಥಪದೇನ,
ನಿರ್ದೇಶೋಪಪತ್ತೇಶ್ಚೇತಿ, ಅಥಶಬ್ದೋಽರ್ಥವಾನೇವ।
ಭಾಷ್ಯಂ ಚಾರ್ಥವತ್।
ತದೇತದಾಹ ಸಚ್ಛೂದ್ರಾದೌ, ಇತ್ಯಾದಿಪದೇನ।
ಅನ್ಯಥಾಸಚ್ಛೂದ್ರ ಇತ್ಯೇವಾವಕ್ಷ್ಯತ್।
ತಥಾ ಚ ತ್ರೈವರ್ಣಿಕಮಾತ್ರಾಧಿಕಾರಿಕತ್ವೇಽಪಿ ಅವೈಷ್ಣವಸ್ಯ ವೇದೇಽಪಿ
ಹ್ಯಧಿಕಾರೋನವಿದ್ಯತೇ।
ಗುರುಭಕ್ತಿವಿಹೀನಸ್ಯಶಮಾದಿರಹಿತಸ್ಯ ಚೇತ್ಯಾದಿಪ್ರಮಾಣವಿರೋಧಾತ್
ಮುಕ್ತಿಯೋಗ್ಯತ್ರೈವರ್ಣಿಕಮಾತ್ರಮಪಿ ನ ವೇದಜಿಜ್ಞಾಸಾಧಿಕಾರಿ।
ಕಿಂತುರಾಜಸೂಯಾದೌರಾಜತ್ವಾದಿಮಾನಿವತಥಾನ್ಯ ಇತ್ಯಾದಿ
ವಚನಸಿದ್ಧಶಾಂತ್ಯಾದಿಮಾನಪೀತಿ ವಕ್ತುಂ ಪ್ರಕಾರಾಂತರೇಣಾಧಿಕಾರಿಸ್ವರೂಪಮಾಹೇತಿ
ಟೀಕಾರ್ಥೋ ಬೋಧ್ಯಃ (ಇತಿಭಾವದೀಪಃ) ।। ಅಧ್ಯಯನಲಬ್ಧಾಪೀತಿ ।।

**ಅಧ್ಯಯನಲಬ್ಧಾಪಿ ವಿಷ್ಣುಭಕ್ತಿಃ ಅನ್ಯಾಯ್ಯಾಧ್ಯಯನ ನಿವೃತ್ತ್ಯರ್ಥಂ ಪೃಥಗುಕ್ತಾ ।
ತಥಾ ಚ ಹರಿಭಕ್ತಿಪೂರ್ವಕಾಧ್ಯಯನವತ್ತ್ವಂ ಸಾಮಾನ್ಯತೋ ಬ್ರಹ್ಮವಿದ್ಯಾಧಿಕಾರ
ಇತ್ಯುಕ್ತಂಭವತಿ ।। ಇತಿ ತತ್ತ್ವ ಪ್ರಕಾಶಿಕಾ ।।**

**ಅವೈಷ್ಣವಸ್ಯವೇದೇಽಪ್ಯಧಿಕಾರೋ ನ ವಿದ್ಯತೇ ।
ಗುರುಭಕ್ತಿವಿಹೀನಸ್ಯಶಮಾದಿರಹಿತಸ್ಯ ಚ ।।**

**ನ ಚ ವರ್ಣಾವರಸ್ಯಾಪೀತ್ಯಧ್ಯಯನಮಾತ್ರವತ ಇತ್ಯತ್ರಭಾಷ್ಯೋಕ್ತದಿಶೇತಿಭಾವಃ ।
ಭಕ್ತಿರಿತ್ಯುಕ್ತಲಕ್ಷಣಾಂ ।। ಇತಿ ಭಾವದೀಪೇ ।।**

ಈ ಸಂದರ್ಭದಲ್ಲಿ ಮೇಲೆ ಉದಾಹರಿಸಿರುವ ಭಾವದೀಪದ ಅಭಿಪ್ರಾಯದ ವಿವರಣೆ ಹೀಗಿದೆ:-

ಅಥಶಬ್ದಾರ್ಥದ ನಿರೂಪಣೆಯ ವಿಷಯದಲ್ಲಿ ''ಕಶ್ಚಿಚ್ಚೋದ್ಯಮಯುಕ್ತಂ'' ಎಂದು ಆಕ್ಷೇಪ ಮಾಡಿರುವವನ ಅಭಿಪ್ರಾಯವನ್ನು ಅನುವಾದ ಮಾಡಿ, ನಿರಾಕರಿಸಿ, ಅಥಶಬ್ದಕ್ಕೆ ಸಾರ್ಥಕ್ಯವನ್ನೂ ಭಾಷ್ಯವಾಕ್ಯಕ್ಕೆ ಸಾಮಂಜಸ್ಯವನ್ನೂ, ''ಅರುಚ್ಯಾಽ'' ಎಂಬ ಟೀಕಾವಾಕ್ಯಕ್ಕೆ ಸಾಂಗತ್ಯವನ್ನೂ ಬಹು ಚಮತ್ಕಾರವಾಗಿ ನಿರೂಪಿಸಿರುತ್ತಾರೆ.

ಚೋದ್ಯಕಾರನ ಅಭಿಪ್ರಾಯವು ಹೀಗಿದೆ. ಸೂತ್ರದಲ್ಲಿರುವ ಅಥ ಎಂಬ ಶಬ್ದಕ್ಕೆ ಪ್ರಯೋಜನವಿಲ್ಲ. ಅದು ವ್ಯರ್ಥ. ಸೂತ್ರದಲ್ಲಿ ವಿಷಯವಾಚಕವಾದ ಬ್ರಹ್ಮಪದವು ಇದೆ. ಅದರಿಂದಲೇ ಮೋಕ್ಷಾಪೇಕ್ಷಿಯಾದವನು ಎಂಬ ಅರ್ಥವು ಸಿದ್ಧಿಸುತ್ತದೆ. ಮೋಕ್ಷದಾತನು ಬ್ರಹ್ಮನಾದುದರಿಂದ ಅಂತಹ ಬ್ರಹ್ಮನ ಜಿಜ್ಞಾಸೆಗೆ ಪ್ರವೃತ್ತಿಯುಳ್ಳವನು ಮುಮುಕ್ಷುವೇ ಆಗಿರುತ್ತಾನೆ. ಮುಮುಕ್ಷುಗಳಾದವರು ಶೂದ್ರರೂ ಇರುವುದರಿಂದ ಅನಧಿಕಾರಿಗಳಾದ ಅವರನ್ನು ದೂರ ಮಾಡುವ ಅರ್ಥವನ್ನು ಕೊಡಲಿಕ್ಕಾಗಿ ಅಥ ಶಬ್ದಕ್ಕೆ ಅಧ್ಯಯನಾದಿಸಂಪತ್ತ್ಯನಂತರದಲ್ಲಿ ಎಂಬ ಅರ್ಥವಿವಕ್ಷೆಯಿಂದ ಅದಕ್ಕೆ ಪ್ರಯೋಜನವುಂಟೆಂಬ ಸಮಾಧಾನವೂ ಸರಿಯಲ್ಲ. ಮುಂದೆ ಮೊದಲನೆಯ ಅಧ್ಯಾಯದ ಮೂರನೇ ಪಾದದ ಒಂಭತ್ತನೇ ಅಧಿಕರಣವಾದ ಅಪಶೂದ್ರಾಧಿಕರಣದಲ್ಲಿ ವೇದಾನಧಿಕಾರಿಗಳಾದ ಶೂದ್ರಾದಿಗಳಿಗೆ ಶಾಸ್ತ್ರಾಧಿಕಾರವು ಇಲ್ಲವೆಂದು ನಿರ್ಣಯಿಸಲ್ಪಟ್ಟಿದೆ. ಆ ಅಧಿಕರಣದಿಂದ ಶೂದ್ರವ್ಯಾವೃತ್ತಿಯು ಆಗುತ್ತಿರುವಾಗ ಜಾತಿಕೃತಲಕ್ಷಣವನ್ನು ಅಧಿಕಾರಿಗೆ ಹೇಳಿ, ಶೂದ್ರರಲ್ಲಿ ಅತಿವ್ಯಾಪ್ತಿ ಹೇಳಿ, ಗುಣಕೃತಾಧಿಕಾರಸ್ವರೂಪವನ್ನು ಹೇಳತಕ್ಕ ಅಗತ್ಯವೇ ಇಲ್ಲವಾದ್ದರಿಂದ ಅಥಶಬ್ದವಿಲ್ಲದೇನೇ ಅಪಶೂದ್ರಾಧಿಕರಣನ್ಯಾಯದಿಂದ ಶೂದ್ರವ್ಯಾವೃತ್ತವಾದ ಮುಮುಕ್ಷುತ್ವ ರೂಪವಾದ ಅಧಿಕಾರದ ಲಾಭವಾಗುತ್ತಿರುವಾಗ ಅಥಶಬ್ದವೂ ವ್ಯರ್ಥ, ಅದರ ಭಾಷ್ಯವೂ ವ್ಯರ್ಥ, ಅದರ ಟೀಕಾ ವಾಕ್ಯವಂತೂ ಅಯುಕ್ತವೇ ಆಗಿದೆ. ಎಂದು ಯಾವನೋ ಒಬ್ಬ ಪೂರ್ವಪಕ್ಷಿಯ ಆಕ್ಷೇಪವಾಗಿದೆ. ಮುಂದೆ ಹೇಳಿರುವುದನ್ನೇ ಇಲ್ಲಿ ಸಂಗ್ರಹವಾಗಿ ಅಥ ಶಬ್ದದಿಂದ ಸೂಚಿಸಿದ್ದಾರೆಂಬ ಸಮಾಧಾನವೂ ತೃಪ್ತಿಕರವಾಗಿಲ್ಲ ಎಂಬುದು ಪೂರ್ವಪಕ್ಷಿಯ ಚೋದ್ಯವಾಗಿದೆ.

ಇದನ್ನೇ ಭಾವದೀಪಕಾರರು ''ಕಶ್ಚಿಚ್ಚೋದ್ಯಂ'' ಎಂದು ಅನುವಾದ ಮಾಡಿ, ಅಯುಕ್ತಂ ಎಂದು ಖಂಡಿಸಿದ್ದಾರೆ.

**ನಿರಾಕರಿಸಿರುವ ವಾಕ್ಯಗಳ ಅಭಿಪ್ರಾಯ :-**

ಪೂರ್ವಪಕ್ಷಿಯು ಆಕ್ಷೇಪಿಸಿರುವಂತೆ ಅಪಶೂದ್ರನ್ಯಾಯದಿಂದ. ಶೂದ್ರನ ವ್ಯಾವೃತ್ತಿಯೇನೋ ಆಗುತ್ತದೆ. ಆದರೆ ವೇದಾಧಿಕಾರಿಗಳೆಂದೆನಿಸಿರುವ ತ್ರೈವರ್ಣಿಕರಲ್ಲೂ ಕೂಡ, ಕೆಲವರಿಗೆ ಅಧಿಕಾರವಿರುವುದಿಲ್ಲ. ಹರಿಭಕ್ತಿರಹಿತರಾದ ತ್ರೈವರ್ಣಿಕರಿಗೂ ಕೂಡ ಬ್ರಹ್ಮಮೀಮಾಂಸಾಶಾಸ್ತ್ರಾಧಿಕಾರವಿಲ್ಲ. ಹರಿಭಕ್ತಿಯು ಅಧಿಕಾರಕೋಟಿಪ್ರವಿಷ್ಟವಾದ ಗುಣಗಳಲ್ಲಿ ಪ್ರಪ್ರಥಮವಾದ ಅತಿಮುಖ್ಯವಾದ ಗುಣವಾಗಿದೆ. ಅಂತಹ ಗುಣರಹಿತರಾದ ತ್ರೈವರ್ಣಿಕರಿಗೂ, ಅವೈಷ್ಣವರಿಗೂ, ಗುರುಭಕ್ತಿ ಹರಿಭಕ್ತಿರಹಿತರಾದ ಶಮದಮಾದಿರಹಿತರಾದ, ಹೆಸರಿಗೆ ಜನನದಿಂದ ನಾನೂ ಒಬ್ಬ ವೈಷ್ಣವನೆಂದು ಹೇಳಿಕೊಳ್ಳುವ ವರ್ಗವನ್ನು ದೂರ ಮಾಡುವುದಕ್ಕಾಗಿ ಅಥಾನ್ತೋ ಗುಣಪೂರ್ವಕಃ ಎಂದು ಗುಣಕೃತಾಧಿಕಾರವನ್ನು ಹೇಳಿರುವುದು ಸಾರ್ಥಕವಾಗಿದೆ. ಇಂತಹ ಹರಿಭಕ್ತಿರಹಿತರಾದವರ ವ್ಯಾವೃತ್ತಿಯು ಅಪಶೂದ್ರನ್ಯಾಯದಿಂದ ಆಗುವಂತಿಲ್ಲ. ಆದಕಾರಣ ಅಥ ಶಬ್ದವೂ ಸಾರ್ಥಕವಾಗಿದೆ. ಭಾಷ್ಯವೂ ವ್ಯರ್ಥವಲ್ಲ. ಟೀಕೆಯೂ ಯುಕ್ತವೇ ಆಗಿದೆ. ಗಜಗರ್ಭದಲ್ಲಿ ಅಡಗಿರುವ ರತ್ನವನ್ನು ಈಚೆಗೆ ತಂದಂತೆ ಟೀಕಾಕಾರರು ಅಥಾದಿ ಶಬ್ದಗಳ ಸಾರ್ಥಕ್ಯವನ್ನು ತೋರಿಸಲಿಕ್ಕಾಗಿ ಗುಣಕೃತಾಧಿಕಾರದ ಕೃತ್ಯದ ರಹಸ್ಯವನ್ನು ವ್ಯಕ್ತಪಡಿಸುವುದಕ್ಕಾಗಿ "ಸಚ್ಛೂದ್ರಾದ್" ಎಂಬಲ್ಲಿ ಆದಿಪದವನ್ನು ಸೂಜಿಗಲ್ಲಿನಂತೆ ಸೂಚಕವಾಗಿ ಬಳಸಿದ್ದಾರೆ. ಈ ಅಭಿಪ್ರಾಯವಿಲ್ಲದಿದ್ದರೆ ಸಚ್ಛೂದ್ರ ಎಂದೇ ಹೇಳುತ್ತಿದ್ದರು. ತ್ರೈವರ್ಣಿಕರಿಗೆಲ್ಲಾ ಅಧಿಕಾರವಿರುವುದಾದರೂ,

> **"ಅವೈಷ್ಣವಸ್ಯ ವೇದೇ ಪಿ ಹ್ಯಧಿಕಾರೋ ನ ವಿದ್ಯತೇ।**
> **ಗುರುಭಕ್ತಿವಿಹೀನಸ್ಯ ಶಮಾದಿರಹಿತಸ್ಯ ಚ ।।**

ಇತ್ಯಾದಿಪ್ರಮಾಣ ವಾಕ್ಯಗಳಿಂದ ಹರಿಗುರುಭಕ್ತಿರಹಿತರಾದವರಿಗೂ ಅಧಿಕಾರವಿಲ್ಲವೆಂಬ ಅಂಶವು ಗುಣಕೃತಾಧಿ ಕಾರ ಕಥನದಿಂದಲೇ ತಿಳಿಯಲ್ಪಡುವ ಪ್ರಯುಕ್ತ ಗುಣಕೃತಾಧಿಕಾರಕಥನಪರವಾದ ಭಾಗಕ್ಕೆಲ್ಲಾ ಸಾರ್ಥಕ್ಯವು ಉಂಟಾಗಿದೆ.

ಆದಕಾರಣ ಪೂರ್ವಪಕ್ಷಿಯ ಚೋದ್ಯಕ್ಕೆ (ಆಕ್ಷೇಪಕ್ಕೆ) ಅವಕಾಶವೇ ಇಲ್ಲ. ಅವನ ಆಕ್ಷೇಪವು ಅಯುಕ್ತ ಎಂದು ನಿರ್ಣೀತವಾದ ಅಭಿಪ್ರಾಯ. ಈ ಅಭಿಪ್ರಾಯವನ್ನು ಭಾವದೀಪಕಾರರು ಬಹುರಂಜಕವಾಗಿ ವಿವರಿಸಿರುತ್ತಾರೆ. ಆದ್ದರಿಂದ ಅಥ ಶಬ್ದಕ್ಕೆ ಅರ್ಥವನ್ನು ವಿವರಿಸುವಾಗ ತಂತ್ರದೀಪಿಕೆಯ ವಾಕ್ಯದಲ್ಲಿರುವ ಅಧ್ಯಯನಶಮದಮಾದಿ ಎಂಬಲ್ಲಿ ಹರಿಭಕ್ತಿಪೂರ್ವಕ ಅಧ್ಯಯನ ಎಂದೇ ಇಟ್ಟುಕೊಳ್ಳಬೇಕು. ಎಂಬಲ್ಲಿ ವಿವಾದವೇ ಇಲ್ಲ. ತಂತ್ರದೀಪಿಕಾರರಿಗೆ ಈ ಅರ್ಥವೇ ಅತ್ಯಂತ ಸಮ್ಮತವಾದುದೆಂದು ಅಭಿಪ್ರಾಯ.. ಇದನ್ನೆ ಭಾವದೀಪದಲ್ಲಿ ಈ ಅಂಶವನ್ನು ಸಮರ್ಥಿಸಿರುತ್ತಾರೆ.

ಈ ಪ್ರಸಂಗದಿಂದ ಮತ್ತೊಂದು ವಿಶೇಷಸಂಗತಿಯನ್ನು ಗಮನಿಸಬೇಕಾಗಿದೆ. "ರಾಕ್ಷಸಾಃ ಕಲಿಮಾಶ್ರಿತ್ಯ ಜಾಯಂತೇ ಬ್ರಹ್ಮಯೋನಿಷು" ಎಂದು ಪ್ರಸಿದ್ಧಿಯು ಇರುವಂತೆ ಹರಿಭಕ್ತಿರಹಿತರಾದ ಅಸುರರೂ ಸಹ ಬುದ್ಧಾವತಾರಕ್ಕೆ ಮುಂಚೆ ಬ್ರಾಹ್ಮಣರಾಗಿ ಹುಟ್ಟಿದಂತೆ ವೈಷ್ಣವಶಾಸ್ತ್ರಗಳನ್ನೋದಿದಾಗ್ಯೂ ಅವರಿಗೆ ಮುಕ್ತಿಯೋಗ್ಯಚೇತನರಿಗಿರುವಂತೆ ಹರಿಗುರುಭಕ್ತಿಗಳಿಲ್ಲದೇ ಅದಕ್ಕೆ ವಿಪರೀತವಾಗಿ ಹರಿಗುರುದ್ವೇಷವೇ ನಿಗೂಢವಾಗಿರುವ ಪ್ರಯುಕ್ತ ಅಂತಹವರಿಗೂ ಸಹ ಬ್ರಹ್ಮಮೀಮಾಂಸಾಶಾಸ್ತ್ರಾಧ್ಯಯನಾಧಿಕಾರವು ಇಲ್ಲವೆಂಬ ಅಭಿಪ್ರಾಯದಿಂದಲೂ ತತ್ತ್ವಪ್ರಕಾಶಿಕಾಕಾರರು ಸಚ್ಛೂದ್ರಾದ್ ಎಂಬಲ್ಲಿ ಆದಿಪದವನ್ನು ಪ್ರಯೋಗಿಸಿರುತ್ತಾರೆ.

ಈ ವಿಷಯವು ಭಾಗವತದ ಹನ್ನೊಂದನೇ ಸ್ಕಂಧದ ಏಳನೇ ಅಧ್ಯಾಯದ ಹತ್ತೊಂಭತ್ತನೇ ಶ್ಲೋಕಕ್ಕೆ ವ್ಯಾಖ್ಯಾನ ಮಾಡುವಾಗ ಪ್ರಾಚೀನ ಟೀಕಾಕಾರರಿಂದ ಸ್ಪಷ್ಟವಾಗಿ ಉಲ್ಲಿಖಿತವಾಗಿದೆ.

**ಆ ವಾಕ್ಯವು ಈ ರೀತಿ ಇದೆ :-**

**"ಯದ್ಯಪಿ, ಅಸುರಾಃ ಕ್ವಚಿತ್ ವೈಷ್ಣವ ಸಿದ್ಧಾಂತಜ್ಞಾನೋಪೇತಾಃ।**
**ತಥಾಪಿ ಶ್ರೀ ಹರಿಭಕ್ತ್ಯಾದಿರಾಹಿತ್ಯಾತ್ ವಿಷ್ಣೌ ವೈಷ್ಣವಸಿದ್ಧಾಂತೇ ಚ ವಿದ್ವೇಷಾತ್**
**ತೇಷಾಮನುದ್ಧಾರ ಇತಿಭಾವಃ ಇತಿ "ಭಾಗವತ ತಾತ್ಪರ್ಯ**
**ಮುದ್ರಿತ ಗ್ರಂಥಪುಟ ೭೪೫.**

ಸಚ್ಛೂದ್ರರಿಗೆ ಮುಂದಿನ ಜನ್ಮದ ಬ್ರಾಹ್ಮಣಾದಿದೇಹದಲ್ಲಿ ಅಧಿಕಾರವಿರುವುದಾದರೂ ಈಗಿನ ದೇಹದಲ್ಲಿ ವೇದಾಧಿಕಾರವು ಇರುವುದಿಲ್ಲ. ದೇಹಾಂತರದಲ್ಲಿನ ಅಧಿಕಾರವು ಈಗಿನ ಪ್ರವೃತ್ತಿಗೆ ಕಾರಣವಾಗಲಾರದು.

ಅಥ ಶಬ್ದಾರ್ಥದಲ್ಲಿ ತೋರಿಸಿರುವ ಪದಗಳ ಅರ್ಥ ವಿವರಣೆ:-

**ಶಮಃ** = "ಶಮೋ ಮನ್ನಿಷ್ಠತಾ ಬುದ್ಧೇಃ" ಎಂಬ ಹನ್ನೊಂದನೇ ಸ್ಕಂಧದ ಭಾಗವತವಚನದಂತೆ ಬುದ್ಧಿಯ "ಭಗವನ್ನಿಷ್ಠತಾ" ಎಂಬುದು "ಶಮ" ಎಂದು ಕರೆಯಲ್ಪಡುತ್ತದೆ. ಈ ಅರ್ಥದ ವಿವಕ್ಷೆಯಿಂದ "ಶಾಂತೋದಾಂತಃ" ಎಂಬಲ್ಲಿರುವ ಶಾಂತಪದಾರ್ಥವನ್ನು "ಶಾಂತಃ = ಭಗವನ್ನಿಷ್ಠಬುದ್ಧಿಃ" ಎಂದು ವಿವರಿಸಿರುತ್ತಾರೆ. ತತ್ವಪ್ರದೀಪಕಾರರು ವೈಷ್ಣವ ಸಿದ್ಧಾಂತಾದಚಲನಂ ಶಮಃ ಎಂದು ಪರ್ಯಾಯಸಿತವಾದ ಅರ್ಥವನ್ನು ಹೇಳಿರುವರು.

**ದಮಃ** = ಇಂದ್ರಿಯನಿಗ್ರಹವು. ದಾಂತಃ = ಜಿತೇಂದ್ರಿಯನು. ನಿಗೃಹೀತೇಂದ್ರಿಯ ಇತಿಯಾವತ್. ಇಂದ್ರಿಯನಿಗ್ರಹ ಉಳ್ಳವನು ಎಂದರ್ಥ.

**ಉಪರತಃ** = ವಿಷಯಾಲಂಬುದ್ಧಿಮಾನ್ ಅಥವಾ ಉಪ = ಸಮೀಪೇ, ಸ್ವಹೃದಯಸ್ಥೇ ವಿಷ್ಣೌ ಸಂತೋಷವಾನಿತಿವಾ, ತನ್ನ ಹೃದಯದಲ್ಲಿರುವ ಅಂತರ್ಯಾಮಿಯಾದ ಪರಮಾತ್ಮನಲ್ಲೇ ರತನಾಗಿ ಸಂತೋಷಪಡುವವನು ಎಂದರ್ಥ.

**ತಿತಿಕ್ಷುಃ** = ಶೀತೋಷ್ಣಾದಿದ್ವಂದ್ವಸಹಿಷ್ಣುಃ, ಸಮಾಹಿತಃ = ಯಥಾವಸ್ತುಜ್ಞಾನಾದಿಮಾನ್, ವಸ್ತುವಿನ ಯಥಾರ್ಥ ಜ್ಞಾನವುಳ್ಳವನು ಅಥವಾ "ಯಥಾವಸ್ತು ತಥಾಜ್ಞಾನಂ ತತ್ಸಾಮ್ಯಾತ್ಸಮಮೀರಿತಂ" ಎಂಬ ವಚನದಂತೆ ಸಮಂ = ಯಥಾರ್ಥಂ, ಆಹಿತಂ = ಆಧಾನಂ ಮನೋವೃತ್ತಿರೂಪಂ ಜ್ಞಾನಂ, ಇಚ್ಛಾ ಚ ಯಸ್ಯ ಸಃ ಸಮಾಹಿತಃ। ತಥಾ ಚ ಹಿಂದೆ ತಿಳಿಸಿದಂತೆ ಯಥಾವಸ್ತುಜ್ಞಾನಾದಿಮಾನ್ ಎಂದೇ ಅರ್ಥ.

**ಸ್ತ್ರೀಯರ ಮೋಕ್ಷವಿಚಾರ** :- ವೇದಾಧ್ಯಯನವುಳ್ಳವರಿಗೆ ಮಾತ್ರ ಬ್ರಹ್ಮವಿದ್ಯಾದಲ್ಲಿ ಅಧಿಕಾರವಿರುವುದಾದರೆ, ವೇದಾದ ಅಧ್ಯಯನದಲ್ಲಿ ಅಧಿಕಾರವಿಲ್ಲದಿರುವ ಸ್ತ್ರೀಯರಿಗೆ ಬ್ರಹ್ಮಜ್ಞಾನವಿಲ್ಲವಾದುದರಿಂದ ಮೋಕ್ಷವೇ ಇಲ್ಲದಂತಾಗುವುದಲ್ಲಾ ಎಂಬ ಶಂಕೆಗೆ ಉತ್ತರವಾಗಿ ಭಾಷ್ಯಕಾರರು ವ್ಯೋಮಸಂಹಿತಾವಚನವನ್ನು ಭಾಷ್ಯದಲ್ಲಿ "ವ್ಯೋಮಸಂಹಿತಾಯಾಂ ಚ" ಎಂದು ಪ್ರಾರಂಭಿಸಿ ಉದಾಹರಿಸಿರುತ್ತಾರೆ.

''ಅಂತ್ಯಜಾ ಅಪಿ ಯೇ ಭಕ್ತಾಃ ನಾಮಜ್ಞಾನಾಧಿಕಾರಿಣಃ।
ಸ್ತ್ರೀಶೂದ್ರಬ್ರಹ್ಮಬಂಧೂನಾಂ ತಂತ್ರಜ್ಞಾನೇಽಧಿಕಾರಿತಾ।।
ಏಕದೇಶೇ ಪರೋಕ್ತೇ ತು ನತು ಗ್ರಂಥಪುರಸ್ಸರೇ।। ಇತಿ।।

ಅಂತ್ಯಜರು ಅಂದರೆ = ವರ್ಣಬಾಹ್ಯರು, ಭಕ್ತಾಃ = ಎಂಬುದರಿಂದ ಮುಕ್ತಿಗೆ ಯೋಗ್ಯರಾದುದರಿಂದ ಅಧಿಕಾರವನ್ನು ಹೇಳಿದಂತಾಯಿತು. ವರ್ಣಬಾಹ್ಯರಿಗೂ, ವೇದಾಧಿಕಾರವಿಲ್ಲದಿರುವ ಸ್ತ್ರೀಯರಿಗೂ ತಂತ್ರಜ್ಞಾನದಲ್ಲಿ ಅಂದರೆ ಪಂಚರಾತ್ರಾದಿಗಳಲ್ಲಿ ಮಾತ್ರ ಅಧಿಕಾರವು. ವೇದಾಧ್ಯಯನದಲ್ಲಿ ಅಧಿಕಾರವಿಲ್ಲವಾದ್ದರಿಂದ ವೇದಜನ್ಯವಾದ ಬ್ರಹ್ಮಜ್ಞಾನವು ಅಂತಹವರಿಗೆ ಇಲ್ಲವಾದಾಗ್ಯೂ ಪಂಚರಾತ್ರಾದಿತಂತ್ರಜ್ಞಾನಾಧಿಕಾರವಿರುವ ಪ್ರಯುಕ್ತ ಮೋಕ್ಷವಾಗುವುದು ಎಂದು ಅಭಿಪ್ರಾಯ. ಈ ಸಂದರ್ಭದ ತತ್ವಪ್ರಕಾಶಿಕಾವಾಕ್ಯವು ಈ ರೀತಿ ಇದೆ.

''ನನ್ವಧ್ಯಯನವತಾಮೇವ ಬ್ರಹ್ಮವಿದ್ಯಾಧಿಕಾರಿತ್ವೇ ತ್ರಿವರ್ಣೇತರೇಷಾಂ
ಅಧ್ಯಯನವಿಧುರಾಣಾಂ
ಜ್ಞಾನಾಭಾವೇನ ಮೋಕ್ಷಾಭಾವಃ ಸ್ಯಾತ್'' ಇತ್ಯಾಶಂಕಾಂ ಪ್ರಮಾಣೇನ ಪರಿಹರತಿ-
ವ್ಯೋಮಸಂಹಿತಾಯಾಮಿತಿ।
ಅಧ್ಯಯನಾಭಾವೇನ ವೈದಿಕಜ್ಞಾನಾನಧಿಕಾರಿತ್ವೇಽಪಿ ತ್ರಿವರ್ಣೇತರೇಷಾಂ
ನಾಮಾದಿಜ್ಞಾನಾಧಿ
ಕಾರಿತ್ವಾತ್ ಮೋಕ್ಷೋಪಪತ್ತಿರಿತಿಭಾವಃ। ಇತಿ ತತ್ವಪ್ರಕಾಶಿಕಾ''

**ಭಾವದೀಪವ್ಯಾಖ್ಯಾ** :- ತತ್ರ, ಅಥಪದೇನೋಕ್ತಾನಾಂ ಮುಕ್ತಿಯೋಗ್ಯಾನಾಂ ಮಧ್ಯೇ, ತ್ರೈವರ್ಣಿಕಾನಾಂ
ಪ್ರಾಗುಕ್ತಗುಣಯುಕ್ತಾನಾಂ ಸರ್ವತ್ರಾಧಿಕಾರಃ।
ತದನ್ಯೇಷಾಂ ತು ಭಕ್ತಾನಾಂ ವೇದಾನುಸಾರಿಗ್ರಂಥಾರ್ಥಜಿಜ್ಞಾಸಾಯಾಮೇವ।
ತತ್ರಾಪಿ ಕೇಷಾಂಚಿತ್ ನಾಮಮಾತ್ರಾದೌ ಇತ್ಯಾದಿರೂಪಃ ಅಧಿಕಾರವಿಶೇಷಃ
ವ್ಯೋಮಸಂಹಿತಾಯಾಂ।। ಇತಿ।।

ಭಾವಬೋಧದ ವಾಕ್ಯಗಳು ಈ ರೀತಿ ಇವೆ.

''ವೇದಾಧ್ಯಾಯನ ಹೀನಾ ಯೇ ಸ್ತ್ರೀಶೂದ್ರಾಂತ್ಯಜಪೂರ್ವಕಾಃ।
ತೇಷಾಂ ಮುಕ್ತಿಃ ಕಥಂ ಬ್ರಹ್ಮನ್ ತ್ರೈವರ್ಣಿಕಾಸ್ಯೋ ಹರಿಃ ಕಥಮ್''।। ಇತಿ
ಪ್ರಮಾಣಾನುಸಾರೇಣ ವ್ಯೋಮಸಂಹಿತಾಯಾಮಿತ್ಯಾದಿ ಭಾಷ್ಯಮವತಾರಯತಿ।।
ನನ್ವಧ್ಯಯನೇತಿ।।

**ಶರ್ಕರಾವ್ಯಾಖ್ಯಾ** :- ಸ್ತ್ರೀಶೂದ್ರಬ್ರಹ್ಮಬಂಧೂನಾಂ ತಂತ್ರಜ್ಞಾನೇಽಧಿಕಾರಿತಾ ಎಂಬ ವಾಕ್ಯಕ್ಕೆ ವ್ಯಾಖ್ಯಾ ಮಾಡುವಾಗ

“ಭಾಷ್ಯೇ, ಬ್ರಾಹ್ಮಣಾನ್ ಬಂಧೂನ್ ವ್ಯಪದಿಶತಿ।
ಸ್ವಯಂ ತು ನ ಬ್ರಾಹ್ಮಣಃ ಯಃ ಸ ಬ್ರಹ್ಮಬಂಧುಃ।
ತಂತ್ರೇಽಪಿ ನ ಶ್ರುತ್ಯರ್ಥವಿಚಾರಭಾಗೇ ಅಧಿಕಾರ ಇತ್ಯುಕ್ತಮ್।

ಏಕದೇಶ ಇತಿ।
ಅತ್ರಾಪಿ ನ ಸ್ವಾತಂತ್ರ್ಯೇಣೇತ್ಯುಕ್ತಂ।
ಪರೋಕ್ತ ಇತಿ। ಪರಂ ಪ್ರತ್ಯುಕ್ತ ಇತ್ಯರ್ಥಃ। ತತ್ರಾಪಿ ವಿಶೇಷೋಽಸ್ತೀತ್ಯುಕ್ತಂ।
ನತು ಗ್ರಂಥಪುರಸ್ಸರ ಇತಿ।।
ಅಸ್ಯ ವಾಕ್ಯಸ್ಯ ಅಯಮರ್ಥ ಇತಿ ಗ್ರಂಥಾರ್ಥಪೂರ್ವಕ ಇತ್ಯರ್ಥಃ।

ಭಾಷ್ಯದೀಪಿಕಾವ್ಯಾಖ್ಯಾ: -

ಅನೇನ ಸ್ತ್ರೀಶೂದ್ರಾದಿಮಾತ್ರಂ ಪುರಸ್ಕೃತ್ಯ ಪುರಾಣಾದಿಗ್ರಂಥಶ್ರವಣಮಪಿ
ನ ಕಾರ್ಯಮಿತ್ಯುಕ್ತಂ ಭವತಿ।।
“ಸ್ತ್ರೀಶೂದ್ರಬ್ರಹ್ಮಬಂಧೂನಾಂ ಇತಿ।
ತಂತ್ರಂ = ಪಂಚರಾತ್ರಾದಿ, ತಜ್ಜ್ಞಾನೇ ತದುಕ್ತಾರ್ಥಜ್ಞಾನೇ ತಂತ್ರೋತ್ಪನ್ನ
ಬ್ರಹ್ಮವಿದ್ಯಾಯಾಮಿತಿಯಾವತ್।
ತಥಾ ತೇಷಾಂ ತಜ್ಜ್ಞಾನದ್ವಾರಾಪಿ ಮೋಕ್ಷೋಪಪತ್ತಿರಿತಿಭಾವಃ।

ವೇದಾನಧಿಕಾರಿಗಳಾದ ಸ್ತ್ರೀ ಶೂದ್ರಾದಿಗಳ ಮೋಕ್ಷದ ವಿಷಯದಲ್ಲಿ ಗೀತಾಭಾಷ್ಯವು ಈ ರೀತಿ ಇದೆ.

ಗೀತಾಭಾಷ್ಯ ವಾಕ್ಯಗಳು:-

ನಷ್ಟಧರ್ಮಜ್ಞಾನಲೋಕಕೃಪಾಲುಭಿಃ ಬ್ರಹ್ಮರುದ್ರೇಂದ್ರಾದಿಭಿರರ್ಥಿತೋ ಜ್ಞಾನ
ಪ್ರದರ್ಶನಾಯ ಭಗವಾನ್ ವ್ಯಾಸೋಽವತತಾರ।
ತತಶ್ಚೇಷ್ಟಾನಿಷ್ಟಪ್ರಾಪ್ತಿಪರಿಹಾರಸಾಧನಾದರ್ಶನಾತ್ ವೇದಾರ್ಥಾಜ್ಞಾನಾಚ್ಚ
ಸಂಸಾರೇ ಕ್ಲಿಶ್ಯಮಾನಾನಾಂ ವೇದಾನಧಿಕಾರಿಣಾಂ ಸ್ತ್ರೀಶೂದ್ರಾದೀನಾಂ ಚ
ಧರ್ಮಜ್ಞಾನದ್ವಾರಾ
ಮೋಕ್ಷೋ ಭವೇದಿತಿ ಕೃಪಾಲುಃ ಸರ್ವವೇದಾರ್ಥೋಪಬೃಂಹಿತಾಂ ತದನು
ಕ್ತಕೇವಲೇಶ್ವರ ಜ್ಞಾನದೃಷ್ಟಾರ್ಥಯುಕ್ತಾಂ ಚ ಸರ್ವಪ್ರಾಣಿನಾಮವಗಾಹ್ಯಾ
ನವಗಾಹ್ಯರೂಪಾಂ ಕೇವಲ ಭಗವತ್ಸ್ವರೂಪಪರಾಂ ಪರೋಕ್ಷಾರ್ಥಾಂ ಮಹಾಭಾರತ
ಸಂಹಿತಾಮಚೀಕ್ಲೃಪತ್।। ಇತಿ।।

ನಾರಾಯಣಾಷ್ಟಾಕ್ಷರಕಲ್ಪೇ ಚ -

ಲೋಕೇಶಾ ಬ್ರಹ್ಮರುದ್ರಾದ್ಯಾಃ ಸಂಸಾರೇ ಕ್ಲೇಶಿನಂ ಜನಮ್।
ವೇದಾರ್ಥಾಽಜ್ಞಮಧಿಕಾರವರ್ಜಿತಂ ಚ ಸ್ತ್ರಿಯಾದಿಕಮ್।।

ಅವೇಕ್ಷ್ಯ ಪ್ರಾರ್ಥಯಾಮಾಸುರ್ದೇವೇಶಂ ಪುರುಷೋತ್ತಮಮ್ ।
ತತಃ ಪ್ರಸನ್ನೋ ಭಗವಾನ್ ವ್ಯಾಸೋ ಭೂತ್ವಾ ಚ ತೇನ ಚ ।।
ವೇದಾದಪಿ ಪರಂಚಕ್ರೇ ಪಂಚಮಂ ವೇದಮುತ್ತಮಮ್ ।।
ಭಾರತಂ ಪಂಚರಾತ್ರಂ ಚ ಮೂಲರಾಮಾಯಣಂ ತಥಾ ।
ಪುರಾಣಂ ಭಾಗವತಂ ಚೇತಿ ಸಂಭಿನ್ನಃ ಶಾಸ್ತ್ರಪುಂಗವಃ ।। ಇತಿ
ನಾರಾಯಣಾಷ್ಟಾಕ್ಷರಕಲ್ಪೇ ।।

**ಗೀತಾಭಾಷ್ಯ ಟೀಕಾಪ್ರಮೇಯದೀಪಿಕಾ :-**

ಅನೇನ ವೇದಾಧಿಕಾರಿಣಾಂ ತ್ರೈವರ್ಣಿಕಾನಾಂ ಪುಂಸಾಂ ವೇದಾರ್ಥಜ್ಞಾನೋಪಾಯೋಭಾರತಮಿತಿ ಸೂಚಯತಿ । ವೇದಾನಧಿಕಾರಿಣಾಂ ವೇದತುಲ್ಯತ್ವಾಚ್ಛತನ್ನಿರ್ಮಾಣಂ ಯುಕ್ತಮಿತ್ಯಾಶಯವಾನಾಹ । ವೇದೇತಿ ।।

''ಗೀತಾಭಾಷ್ಯದಲ್ಲಿ'' ವೇದಾನಧಿಕಾರಿಣಾಂ ಸ್ತ್ರೀಶೂದ್ರಾದೀನಾಂ ಚ ಧರ್ಮಜ್ಞಾನದ್ವಾರಾ ಮೋಕ್ಷೋ ಭವೇದಿತಿ ಕೃಪಾಲುಃ'' ಎಂಬುದಾಗಿ ಹೇಳಿರುವುದರಿಂದಲೂ, ಪ್ರಮೇಯದೀಪಿಕೆಯಲ್ಲಿ ವೇದಾನಧಿಕಾರಿಣಾಂ ವೇದತುಲ್ಯ ತ್ವಾಚ್ಛ ತನ್ನಿರ್ಮಾಣಂ ಯುಕ್ತಂ'' ಎಂದು ವಿವರಿಸಿರುವುದರಿಂದಲೂ, ವ್ಯೋಮಸಂಹಿತಾವಚನದಲ್ಲಿ ''ಸ್ತ್ರೀಶೂದ್ರಬ್ರಹ್ಮಬಂಧೂನಾಂ ತಂತ್ರಜ್ಞಾನೇऽಧಿಕಾರಿತಾ'' ಎಂಬಲ್ಲಿ ತಂತ್ರಂ = ಪಂಚರಾತ್ರಾದಿ ಎಂದು ಉಕ್ತವಾಗಿರುವುದರಿಂದಲೂ, ತತ್ವಪ್ರಕಾಶಿಕಾ ಟೀಕಾದಲ್ಲಿ ''ಅಧ್ಯಯನಾಭಾವೇನ ವೈದಿಕಜ್ಞಾನಾನಧಿಕಾರಿತ್ವೇऽಪಿ ತ್ರಿವರ್ಣೇತರೇಷಾಂನಾಮಾದಿಜ್ಞಾನಾಧಿ ಕಾರಿತ್ವಾನ್ಮೋಕ್ಷೋಪಪತ್ತಿರಿತಿ ಭಾವಃ'' ಎಂದು ಸಮರ್ಥಿಸಿರುವುದರಿಂದಲೂ, ವೇದಾನಧಿಕಾರಿಗಳಾದ ಸ್ತ್ರೀಶೂದ್ರಾದಿಗಳಿಗೆ ವೇದಾರ್ಥ ಜ್ಞಾನಮೂಲಕವಾಗಿ ಮೋಕ್ಷವು ಇಲ್ಲದಿದ್ದರೂ ನಾಮಾದಿ ಜ್ಞಾನಾಧಿಕಾರವು ಇರುವುದರಿಂದ ಮೋಕ್ಷವಾಗುವುದರಲ್ಲಿ ಯಾವ ಸಂದೇಹಕ್ಕೂ ಅವಕಾಶವಿಲ್ಲ. ದೇವಸ್ತ್ರೀಯರ ವಿಚಾರವೇ ಬೇರೆ. ಅವರಿಗೆ ವೇದಾಧಿಕಾರವಿರುವ ವಿಷಯದಲ್ಲಿ ಪ್ರಮಾಣಗಳಿವೆ. ಮುಕ್ತಿಯೋಗ್ಯರಾದ ಸಾಮಾನ್ಯಮಾನವಸ್ತ್ರೀಯರ ವಿಚಾರವಾಗಿಯೂ ಶೂದ್ರರ ವಿಚಾರವಾಗಿಯೂ ಹಿಂದೆ ತಿಳಿಸಿದಂತೆ ಪ್ರಮಾಣಗಳ ಮೂಲಕ ವಿವೇಚಿಸಿ ನಿರ್ಧರಿಸಬೇಕು.

**ತಂತ್ರದೀಪಿಕಾ :- ಬ್ರಹ್ಮಜ್ಞಾನಾಯ ಸರ್ವವೇದವಿಷಯಕಶ್ರವಣಮನನ, ನಿದಿಧ್ಯಾಸನರೂಪಾ, ಮನನ ಮಾತ್ರರೂಪಾ ವಾ ''ತದ್ವಿಜಿಜ್ಞಾಸಸ್ವ'' ಇತ್ಯಾದಿ ''ಶ್ರುತ್ಯುಕ್ತಾ ಕರ್ತವ್ಯಾ'' ಇತ್ಯರ್ಥಃ.**

**ಅರ್ಥ:-** ಬ್ರಹ್ಮಜ್ಞಾನಾಯ = ಬಿಂಬಸಾಕ್ಷಾತ್ಕಾರರೂಪವಾದ ಪರಬ್ರಹ್ಮನ ಜ್ಞಾನಕ್ಕಾಗಿ, ಸರ್ವವೇದ ವಿಷಯಕ = **ಸಕಲ** ವೇದಗಳ ವಿಷಯಕವಾದ, ಶ್ರವಣ, ಮನನ, ನಿದಿಧ್ಯಾಸನರೂಪಾ = ಶ್ರವಣ, ಮನನ ಮತ್ತು ನಿದಿಧ್ಯಾಸನ (ಧ್ಯಾನ) ರೂಪವಾದ ಅಥವಾ ಮನನ ಮಾತ್ರರೂಪಾ ವಾ = ಕೇವಲ ಯುಕ್ತ್ಯನುಸಂಧಾನರೂಪವಾದ ಮನನಾತ್ಮಕವಾದ ''ತದ್ವಿಜಿಜ್ಞಾಸಸ್ವ'' ಎಂಬ ತೈತ್ತಿರೀಯ ಮೊದಲಾದ ಶ್ರುತಿಯಲ್ಲಿ ಹೇಳಿರತಕ್ಕ, ಜಿಜ್ಞಾಸಾ = ಜಿಜ್ಞಾಸೆಯು, ಕರ್ತವ್ಯಾ = ಮಾಡಲ್ಪಡತಕ್ಕದ್ದು ಎಂದು ಅರ್ಥ. ಈ ವಾಕ್ಯದಿಂದ ತಂತ್ರದೀಪಿಕಾಕಾರರು ಪೂರ್ವ ಪ್ರಸ್ಥಾನದ ಮತ್ತು ಉತ್ತರ ಪ್ರಸ್ಥಾನದ ಎರಡು ಅರ್ಥಗಳನ್ನು ಸಂಗ್ರಹಿಸಿ ತಿಳಿಸಿದಂತಾಗಿದೆ.

**ವಿಶೇಷವಿಷಯವಿಚಾರ :-** ಈ ಸಂದರ್ಭದಲ್ಲಿ ತತ್ವಪ್ರಕಾಶಿಕಾ ವಾಕ್ಯಕ್ಕೂ, ಸುಧಾವಾಕ್ಯಕ್ಕೂ ಪರಸ್ಪರ ವಿರೋಧವು ಆಪಾತತಃ ಕಂಡು ಬಂದಿದೆ.

ತತ್ವಪ್ರಕಾಶಿಕಾದಲ್ಲಿ

> ''ದರ್ಶನಾರ್ಥಂ ಶ್ರವಣಾದಿರೂಪಾಜಿಜ್ಞಾಸಾ ಕಾರ್ಯಾ, ಇತ್ಯರ್ಥಃ। ನ ಚ ಶ್ರವಣಾದೇ
> ರಸನ್ನಾಚ್ಯತಾ।
> ಜಿಜ್ಞಾಸಿತಂ ಸುಸಂಪನ್ನಂ, ಇತಿ ವಿಚಾರೇಟಪಿ ತತ್ಪ್ರಯೋಗಾತ್, ಭವತೀತ್ಯಾದಿಕಥನಸ್ಯವೈಯರ್ಥ್ಯಾತ್।
> ಸೂತ್ರಂ ಶ್ರುತ್ಯನುಸಾರೀತಿ।। '' ಎಂದಿದೆ.

ಅಂದರೆ ಶ್ರವಣ, ಮನನ, ನಿದಿಧ್ಯಾಸನ ಈ ಮೂರರಲ್ಲೂ ಜಿಜ್ಞಾಸಾಶಬ್ದವನ್ನು ''ಶ್ರವಣಾದಿರೂಪ ಜಿಜ್ಞಾಸಾ ಕಾರ್ಯಾ'' ಎಂದು ತತ್ವಪ್ರಕಾಶಿಕಾ ಟೀಕಾದಲ್ಲಿ ಪ್ರಯೋಗಿಸಿರುತ್ತಾರೆ.

ನ್ಯಾಯಸುಧಾದಲ್ಲಾದರೋ ''ನನ್ವಿದಂ, ಯುಕ್ತ್ಯನುಸಂಧಾನಾತ್ಮಕ, ವಿಚಾರ, ಮೀಮಾಂಸಾ, ಮನನಾ ಪರನಾಮಕ ಜಿಜ್ಞಾಸಾಂಗಭೂತನ್ಯಾಯನಿಬಂಧನಂ'' ಎಂಬಲ್ಲಿ ಮನನವನ್ನು ಮಾತ್ರ ಜಿಜ್ಞಾಸಾ ಎಂದು ಹೇಳಿದ್ದಾರೆ.

'ಜಿಜ್ಞಾಸಾನಾಮ ಯುಕ್ತ್ಯನುಸಂಧಾನಾತ್ಮಕಂ, ವಿಚಾರಾಪರಪರ್ಯಾಯಂ ಮನನಮ್' ಎಂದು ಹೇಳಿರುವರು.

**ಅಂದರೆ ಪೂರ್ವಗ್ರಂಥಸ್ಥಟೀಕಾಕ್ಕೂ, ಉತ್ತರಗ್ರಂಥಸ್ಥಟೀಕಾ ವಾಕ್ಯಕ್ಕೂ ಪರಸ್ಪರ ವಿರೋಧವು ಇದ್ದಂತೆ ಆಪಾತತಃ ತೋರುತ್ತಿದೆ.**

**ಈ ವಿರೋಧವನ್ನು ತಾತ್ಪರ್ಯ ಚಂದ್ರಿಕಾಕಾರರು ನಾಲ್ಕು ವಿಧವಾದ ಸಮಾಧಾನಗಳಿಂದ ಪರಿಹರಿಸಿರುತ್ತಾರೆ. ಆ ವಿಶೇಷವಿಚಾರವನ್ನು ಸಂಗ್ರಹಿಸಿ ತಿಳಿಸುತ್ತೇವೆ.**

(೧) ಮೊದಲನೆಯ ಸಮಾಧಾನ ತತ್ವಪ್ರಕಾಶಿಕಾವಾಕ್ಯವು ''ದರ್ಶನಾರ್ಥಂ ಶ್ರವಣಾದಿರೂಪಾ ಜಿಜ್ಞಾಸಾ ಕಾರ್ಯೇತ್ಯರ್ಥಃ।'' ಎಂದಿದೆ. ಆ ವಾಕ್ಯದಲ್ಲಿರುವ ''ಶ್ರವಣಾದಿರೂಪಾ'' ಎಂಬುದು ಸಮಸ್ತಪದವಾಗಿದೆ. ಇಲ್ಲಿ ಬಹುವ್ರೀಹಿ ಸಮಾಸವು ವಿವಕ್ಷಿತವಾಗಿದೆ. ಬಹುವ್ರೀಹಿಸಮಾಸವು ಎರಡು ಬಗೆ ಉಂಟು. (೧) ತದ್ಗುಣ ಸಂವಿಜ್ಞಾನಬಹುವ್ರೀಹಿ (೨) ಅತದ್ಗುಣಸಂವಿಜ್ಞಾನಬಹುವ್ರೀಹಿ ಎಂಬ ಪ್ರಭೇದದಲ್ಲಿ ತದ್ಗುಣಸಂವಿಜ್ಞಾನ ಬಹುವ್ರೀಹಿಗೆ ಉದಾಹರಣೆ - ಸರ್ವಾದೀನಿ ಸರ್ವನಾಮಾನಿ ಎಂಬಲ್ಲಿ ''ಸರ್ವಾದೀನಿ'' ಎಂಬುದು ಸಮಸ್ತಪದ. ಇಲ್ಲಿ ಬಹುವ್ರೀಹಿಸಮಾಸ. ಇದು ತದ್ಗುಣಸಂವಿಜ್ಞಾನಬಹುವ್ರೀಹಿ. ಸರ್ವ। ಆದಿಃ = ಪ್ರಥಮಾವಯವಃ ಯೇಷಾಂ ತಾನಿ ಸರ್ವಾದೀನಿ ಎಂದು ವಿಗ್ರಹ. ಇಲ್ಲಿ ಉಪಸರ್ಜನೀಭೂತವಾದ (ವಿಶೇಷಣೀಭೂತವಾದ) ಸರ್ವ ಪದಕ್ಕೂ ಅನ್ಯಪದಾರ್ಥ ಪ್ರಧಾನವಾದ ಬಹುವ್ರೀಹಿಸಮಾಸದಲ್ಲಿ ಅನ್ಯಪದಾರ್ಥದಲ್ಲಿ ಸಂವಿಜ್ಞಾನವು ಇರುವುದರಿಂದ ಸರ್ವಪದ ಸಹಿತವಾದ ಪದಗಳಿಗೆ ಸರ್ವನಾಮಸಂಜ್ಞೆಯು ವಿಧಿಸಲ್ಪಟ್ಟಿದೆ. ಆದ್ದರಿಂದಲೇ ಸರ್ವಾದೀನಿ ಶಬ್ದಸ್ವರೂಪಾಣಿ ಸರ್ವನಾಮಸಂಜ್ಞಾನಿ ಸ್ಯುಃ ಎಂದು ವ್ಯಾಕರಣ ಶಾಸ್ತ್ರಕಾರರು ಇಲ್ಲಿ ತದ್ಗುಣಸಂವಿಜ್ಞಾನಬಹುವ್ರೀಹಿಸಮಾಸವನ್ನು ಹೇಳಿರುವರು. ಇನ್ನೂ ಲಂಬಕರ್ಣಮಾನಯ ಇತ್ಯಾದಿ ಉದಾಹರಣೆಗಳಿವೆ.

ಅತದ್ಗುಣಸಂವಿಜ್ಞಾನ ಬಹುವ್ರೀಹಿಯೆಂದರೆ ತಸ್ಯ ಗುಣಸ್ಯ ಉಪಸರ್ಜನೀಭೂತಸ್ಯ ಅನ್ಯಪದಾರ್ಥೇ ಸಂವಿಜ್ಞಾನಂ ಯಸ್ಮಿನ್ ಬಹುವ್ರೀಹೌ ನಾಸ್ತಿ ಸಃ ಅತದ್ಗುಣಸಂವಿಜ್ಞಾನಬಹುವ್ರೀಹಿಃ ಎಂದು ವಿವರಿಸಿರುವರು. ಈ ಬಹುವ್ರೀಹಿಯಲ್ಲಿ ಉಪಸರ್ಜನೀಭೂತವಾದುದಕ್ಕೆ ಅಂದರೆ ಅನ್ಯಪದಾರ್ಥದಲ್ಲಿ ವಿಶೇಷಣೀಭೂತವಾದುದಕ್ಕೆ ಆ ವಿಶೇಷ್ಯವಾದುದರ-ಜನ

ಸಂವಿಜ್ಞಾನವು ಇರುವುದಿಲ್ಲವೆಂದರ್ಥ. ಉದಾ:- ಚಿತ್ರಗುಮಾನಯ ಎಂಬಲ್ಲಿ ಆನಯನ ಕರ್ಮತ್ವವು ಚಿತ್ರಗೋಸ್ವಾಮಿ ಎಂಬ ಅನ್ಯಪದಾರ್ಥಕ್ಕೆ ಇದೆಯೇ ಹೊರತು ಚಿತ್ರಾಃ + ಗಾವಃ ಯಸ್ಯಸಃ ಎಂಬಲ್ಲಿ ಉಪಸರ್ಜನೀಭೂತವಾದ ಚಿತ್ರಗೋವುಗಳಿಗಿಲ್ಲ. ಇಲ್ಲಿ ಅತದ್ಗುಣಸಂವಿಜ್ಞಾನಬಹುವ್ರೀಹಿಸಮಾಸವು.

ಪ್ರಕೃತದಲ್ಲಿ "ಶ್ರವಣಾದಿರೂಪಾ ಜಿಜ್ಞಾಸಾ ಕಾರ್ಯಾ" ಎಂಬ ಟೀಕಾ ವಾಕ್ಯದಲ್ಲಿರುವ "ಶ್ರವಣಾದಿರೂಪಾ" ಎಂಬಲ್ಲಿ ಅತದ್ಗುಣಸಂವಿಜ್ಞಾನಬಹುವ್ರೀಹಿಸ್ಸಮಾಸವು ಸ್ವೀಕೃತವಾಗಿದೆ. ಆದಕಾರಣ ಇಲ್ಲಿ ವಿಶೇಷಣವಾದ ಶ್ರವಣವನ್ನು ಬಿಟ್ಟು ಅನ್ಯಪದಾರ್ಥವಾದ ವಿಚಾರವೇನೇ (ಮನನವೇನೇ) ಜಿಜ್ಞಾಸಾಪದಾರ್ಥವೆಂದು ಹೇಳಿರುವ ಪ್ರಯುಕ್ತ ತತ್ತ್ವಪ್ರಕಾಶಿಕಾವಾಕ್ಯಕ್ಕೂ ಈ ದೃಷ್ಟಿಯಿಂದ ಮನನವೇ ಜಿಜ್ಞಾಸಾಪದಾರ್ಥವೆಂಬಲ್ಲಿ ತಾತ್ಪರ್ಯವಿರುವುದರಿಂದ ಎರಡೂ ಟೀಕಾ ವಾಕ್ಯಗಳಿಗೆ ಯಾವ ವಿರೋಧವು ಇರುವುದಿಲ್ಲವೆಂಬುದು ಮೊದಲನೆಯ ಸಮಾಧಾನ.

ಈ ಪ್ರಥಮ ಪಕ್ಷದಲ್ಲಿ ಮನನಕ್ಕೆ ಶ್ರವಣಪೂರ್ವತ್ವವನ್ನು ಸೂಚಿಸಲು, (ಪ್ರಕಾಶಪಡಿಸಲು) ಶ್ರವಣಾದಿ ರೂಪಾ ಎಂದು ಟೀಕಾಕಾರರು ನಿರ್ದೇಶ ಮಾಡಿದ್ದಾರೆ. ಆದ್ದರಿಂದಲೇ ಮುಂದಿನ ಟೀಕಾವಾಕ್ಯದಲ್ಲಿ "ವಿಚಾರೇಽಪೀ ತತ್ಪ್ರಯೋಗಾತ್" ಎಂದು ಹೇಳಲಾಗಿದೆ.

**ಅಥವಾ :-** "ಶ್ರವಣಾದಿರೂಪಾ ಜಿಜ್ಞಾಸಾ ಕಾರ್ಯಾ" ಎಂಬ ವಾಕ್ಯಕ್ಕೆ, ಹೇಗೆ ಮುಮುಕ್ಷುವಿನಿಂದ ಶ್ರವಣವೂ ಧ್ಯಾನವೂ ವಿಹಿತವಾಗಿರುವ ಪ್ರಯುಕ್ತ ಅವಶ್ಯಕಾರ್ಯವಾಗಿಯೋ (ಮಾಡಲ್ಪಡಬೇಕಾಗಿದೆಯೋ) ಅದರಂತೆ ಮನನವನ್ನು ಅವನು ಅವಶ್ಯ ಮಾಡಬೇಕೆಂದು ದೃಷ್ಟಾಂತರೂಪವಾಗಿ ಶ್ರವಣಾದಿಗಳನ್ನು ಟೀಕಾವಾಕ್ಯದಲ್ಲಿ ತೋರಿಸಲಾಗಿದೆ ಎಂದು ಅಭಿಪ್ರಾಯ. ಈ ಎರಡನೇ ಪಕ್ಷದಲ್ಲಿ "ಜಿಜ್ಞಾಸಾ" ಶಬ್ದಕ್ಕೆ ಸುಧಾದಲ್ಲಿ ತಿಳಿಸಿರುವಂತೆ ಯುಕ್ತ್ಯನು ಸಂಧಾನಾತ್ಮಕವಾದ ಮನನಮಾತ್ರವೇ ಅರ್ಥವಾಗಿದೆ. ಇದು ಎರಡನೇ ಸಮಾಧಾನ. ಆದ್ದರಿಂದ ವಿರೋಧವಿಲ್ಲ. ಆದರೆ ಶಾಸ್ತ್ರಾರಂಭಪ್ರಯೋಜಕವುದುದು ಮನನವೇ ಹೊರತು ಶ್ರವಣವಾಗಲಿ ಧ್ಯಾನವಾಗಲಿ ಅಲ್ಲವೆಂದು ನಿಗೂಢಾಭಿಪ್ರಾಯ.

**ಮೂರನೇ ಸಮಾಧಾನವು ಹೀಗಿದೆ :-** ನಿದಿಧ್ಯಾಸನಕ್ಕೆ (ಧ್ಯಾನಕ್ಕೆ) ಅಂಗವಾದುದು ಮನನವು. ಧ್ಯಾನಕ್ಕೆ (ನಿದಿಧ್ಯಾಸನಕ್ಕೆ) ಕರ್ತವ್ಯತ್ವವು ಇಲ್ಲವಾದರೆ ತದಂಗವಾದ ಮನನಕ್ಕೂ ಕರ್ತವ್ಯತ್ವವು ಇಲ್ಲದೇ ಹೋದೀತು. ಆದಕಾರಣ ಶಾಸ್ತ್ರಾರಂಭಣೀಯತ್ವದಲ್ಲಿ ನಿದಿಧ್ಯಾಸನ ಕರ್ತವ್ಯತ್ವವು ಪರಂಪರಯಾಹೇತುವಾಗಿದೆ.

ಅದೇ ರೀತಿ ಪ್ರತಿವಾಕ್ಯಾರ್ಥದ ವಿಷಯದಲ್ಲೂ "ಈ ವಾಕ್ಯಾರ್ಥವು ಯುಕ್ತವೋ-ಅಲ್ಲವೋ, ಇದಲ್ಲದೆ ಬೇರೇ ವಾಕ್ಯಾರ್ಥವು ಯುಕ್ತವೋ" ಇತ್ಯಾದಿರೂಪವಾದ ಸಂದೇಹಗಳ ನಿವಾರಣೆಗಾಗಿ ವಿಚಾರಪರವಾದ ಶಾಸ್ತ್ರದಿಂದ ತೋರಿ ಸಲ್ಪಟ್ಟ ನ್ಯಾಯಗಳ ಪ್ರಸಕ್ತಿಗೆ ಅಂಗಭೂತವಾದ ಸಂದೇಹಕ್ಕೆ ಕಾರಣವಾದುದು ಯತ್ನಸಾಧ್ಯವಾದ ಪ್ರತಿ ವಾಕ್ಯಕ್ಕೂ "ಇದು ಇದಕ್ಕೆ ಅರ್ಥವಾಗಿದೆ" ಎಂಬ ಶ್ರವಣಜನ್ಯ ಜ್ಞಾನವೇ ಇಲ್ಲವಾದರೆ ಶಾಸ್ತ್ರದ ಆರಂಭವೇ ಇಲ್ಲದಂತಾಗುವುದರಿಂದ ಶಾಸ್ತ್ರಾರಂಭಣೀಯತ್ವದಲ್ಲಿ ಶ್ರವಣ ಕರ್ತವ್ಯತಾನೂ, ಧ್ಯಾನಕರ್ತವ್ಯತಾನೂ, ಮನನ ಕರ್ತವ್ಯತಾನೂ ಅಂತೂ ಶ್ರವಣಮನನ ಧ್ಯಾನರೂಪ ತ್ರಿತಯ್ಯ ಕರ್ತವ್ಯತಾಗಳೂ ಕಾರಣಗಳೇ ಆಗಿವೆಯೆಂಬ ಅಭಿಪ್ರಾಯದಿಂದಲೂ "ಶ್ರವಣಾದಿ ರೂಪಾ ಜಿಜ್ಞಾಸಾ ಕಾರ್ಯಾ" ಎಂಬ ಟೀಕಾವಾಕ್ಯವು ಪ್ರವೃತ್ತವಾಗಿದೆ. ಈ ಪಕ್ಷದಲ್ಲಿ ಮನನ ಕರ್ತವ್ಯತಾದ್ವಾರಾ ಶ್ರವಣಧ್ಯಾನಕರ್ತವ್ಯತ್ವಗಳೂ

ಕೂಡ ಪರಂಪರಯಾ ಶಾಸ್ತ್ರಾರಂಭಣೀಯತ್ವಕ್ಕೆ ಪ್ರಯೋಜಕಗಳೆಂದು ಅಭಿಪ್ರಾಯ. ಈ ಪಕ್ಷದಲ್ಲಿ ಶ್ರವಣಾದಿತ್ರಿತಯ ಕರ್ತವ್ಯತ್ವದ ಅಭಿಪ್ರಾಯವನ್ನು ಸ್ವೀಕರಿಸಿದರೆ "ಸರ್ವಶಾಖಾಧಿಕರಣ ಸೂತ್ರದ ಟೀಕಾದಲ್ಲಿ" "ಓಂ ಸರ್ವವೇದಾಂತ ಪ್ರತ್ಯಯಂ ಚೋದನಾದ್ಯವಿಶೇಷಾತ್ ಓಂ" ಎಂಬ ಸೂತ್ರ ಭಾಷ್ಯದ ವ್ಯಾಖ್ಯಾನವಾದ ತತ್ವಪ್ರಕಾಶಿಕಾ ವ್ಯಾಖ್ಯಾನದಲ್ಲಿ

> **ಉಪಾಸನಾದ್ವಿವಿಧಾ।.ಸಮಸ್ತ ಶಾಸ್ತ್ರಾಭ್ಯಾಸರೂಪಾ, ಯಾಮಾಹುಃ ಶ್ರವಣಮನನೇ ।ಇತಿ**
> **೨. ಧ್ಯಾನರೂಪಾ ಪರಾಚೇತಿ**
>
> **ತತ್ರಾದ್ಯಾಯಾಃ ಧ್ಯಾನಾಂಗತ್ವಾತ್ ನೈವ ಪೃಥಗಾಧಿಕರಣೇ ವಿಧೀಯತೇ।**
> **ಸಮಸ್ತಸಚ್ಛಾಸ್ತ್ರಶ್ರವಣಮನನಾಭ್ಯಾಂ ದೂರೋತ್ಸಾರಿತಾಜ್ಞಾನಸಂಶಯ**
> **ವಿಪರ್ಯಯಸ್ಯೈವ ಧ್ಯಾನಾಧಿಕಾರಿತ್ವಾದಿತಿಭಾವಃ।**
> **ಅತ ಏವಾತ್ರಾಸ್ತಿ ಶಾಸ್ತ್ರಾದಿಸಂಗತಿಃ।**
> **ಆದ್ಯಸೂತ್ರೇ ಶ್ರವಣಮನನೇ ಕರ್ತವ್ಯೇ ಇತ್ಯುಕ್ತಮ್ ॥**
>
> **ತಯೋಶ್ಚ ಸರ್ವಶಾಖಾಽವಿಷಯತ್ವೇಽಸ್ಯ ಶಾಸ್ತ್ರಸ್ಯ ಸರ್ವೋಪಾದೇಯತಾಭಾವ**
> **ಪ್ರಸಂಗಾತ್ ಸರ್ವಶಾಖಾವಿಷಯತ್ವಂ ಸಮರ್ಥನೀಯಮ್ ॥ ಇತಿ ॥**

ಈ ತತ್ವಪ್ರಕಾಶಿಕಾ ಭಾಗದಲ್ಲಿ "ಆದ್ಯಸೂತ್ರೆ ಶ್ರವಣಮನನೇ ಕರ್ತವ್ಯೇ ಇತ್ಯುಕ್ತಂ" ಎಂಬುದಾಗಿ ಹೇಳಿ ಮೊದಲನೆಯ ಸೂತ್ರದಲ್ಲಿ ಜಿಜ್ಞಾಸಾಪದದಿಂದ ಮನನದ ಜೊತೆಯಲ್ಲಿ ಶ್ರವಣವನ್ನೂ ಸೇರಿಸಿ ಹೇಳಿರುವುದೂ ಸಹ ನ್ಯಾಯಸುಧಾವಾಕ್ಯಕ್ಕೆ ವಿರುದ್ಧವಾದಂತಿದೆ. ಮತ್ತು ತ್ರಿತಯ ಕರ್ತವ್ಯತ್ವವಿಧಾಯಕವಾದ ಅರ್ಥವನ್ನು ಕೊಡುವ "ಶ್ರವಣಾದಿರೂಪಾ ಜಿಜ್ಞಾಸಾ ಕರ್ತವ್ಯಾ" ಎಂಬ ಜಿಜ್ಞಾಸಾಧಿಕರಣಟೀಕಾವಾಕ್ಯಕ್ಕೂ ವಿರುದ್ಧವಾದಂತಿದೆ. ಎಂಬ ಶಂಕೆಯು ಬರಬಹುದು. ಆದರೆ ಅಂತಹ ವಿರೋಧಕ್ಕೂ ಅವಕಾಶವಿಲ್ಲ.

ಆ ಮೂರನೇ ಅಧ್ಯಾಯದ ಮೂರನೇ ಪಾದದಲ್ಲಿ ಸರ್ವವೇದಾಂತಾಧಿಕರಣವು ಮೊದಲನೆಯ ಅಧಿಕರಣವಾಗಿದೆ. ಅದಾದ ತರುವಾಯ ಉಪಸಂಹಾರಾಧಿಕರಣವು ಎರಡನೇ ಅಧಿಕರಣ. ಅದರಲ್ಲಿ "ಅತ್ರ ಸಾರ್ವತ್ರಿಕಗುಣೋಪಸಂಹಾರೇಣ ಧ್ಯಾನಂ ಸಾಧ್ಯತೆ" ಎಂದು ನಿದಿಧ್ಯಾಸನವು ಪರಿಶೀಲಿಸಲ್ಪಡುತ್ತಿರುವುದರಿಂದ, ಅಂತಹ ಧ್ಯಾನಕ್ಕೆ ಕಾರಣವಾದ ಮನನ ಮತ್ತು ಶ್ರವಣಗಳೆರಡರ ವಿಚಾರವು ಮಾತ್ರ ಪ್ರಸಕ್ತವಾಗಿರುವುದರಿಂದ ಸರ್ವವೇದಾಂತಾಧಿಕರಣದಲ್ಲಿ ಧ್ಯಾನೋಪಯೋಗಿಯಾದುದರ ವಿಷಯಕ್ಕೆ ಸಂಬಂಧವಿರುವ ಪ್ರಯುಕ್ತ "ಆದ್ಯಸೂತ್ರೇ ಶ್ರವಣಮನನೇ ಕರ್ತವ್ಯೇ ಇತ್ಯುಕ್ತೇ" ಎಂಬ ಮಾತು ಏಕದೇಶಾನುವಾದರೂಪವಾದುದೇ ಹೊರತು ಜಿಜ್ಞಾಸಾ ಸೂತ್ರದಲ್ಲಿ ಶ್ರವಣಮನನಗಳೆರಡು ಮಾತ್ರ ಕರ್ತವ್ಯಗಳೆಂಬ ಅಭಿಪ್ರಾಯದಿಂದ ಆ ವಾಕ್ಯವು ಹೊರಟಿಲ್ಲ. ಆದ್ದರಿಂದಲೇ ಅದೇ ಅಧಿಕರಣದಲ್ಲಿ ಧ್ಯಾನಾರ್ಥಿನಾ ಶ್ರವಣಮನನಾಭ್ಯಾಂ ಸರ್ವವೇದಾನ್ನಿರ್ಣೇಯ ಜಾತತ್ವಮಿತಿ ಎಂಬ ಟೀಕಾವಾಕ್ಯವೂ, "ಉಪಾಸನಾ ಅಸ್ಮಿನ್ನಾದೇ ಉಚ್ಯತೆ" ಎಂಬ ಭಾಷ್ಯವಾಕ್ಯಕ್ಕೆ ವ್ಯಾಖ್ಯಾನರೂಪವಾಗಿ ಆ ಅಧಿಕರಣದ ಆರಂಭದಲ್ಲೇ ಉಕ್ತವಾಗಿರುವ "ಉಪಾಸನಾ ನಾಮ ಬ್ರಹ್ಮಜಿಜ್ಞಾಸಾ" ಎಂಬ ಟೀಕಾವಾಕ್ಯವೂ ತ್ರಿವಿಧೋಪಾಸನಾಗಳಿಗೆ ಅಂದರೆ ಶ್ರವಣ, ಮನನ, ಧ್ಯಾನಗಳಿಗೆ ಮೂರಕ್ಕೂ

ಜಿಜ್ಞಾಸಾತ್ವವನ್ನು ಹೇಳುತ್ತಲಿರುವುದರಿಂದ ಹಿಂದಿನ ಟೀಕಾವಾಕ್ಯವು ಅಂದರೆ ''ಆದ್ಯಸೂತ್ರೆ ಶ್ರವಣಮನನೇ ಕರ್ತವ್ಯೇ'' ಎಂಬ ಟೀಕಾವಾಕ್ಯವು ಏಕದೇಶಾನುವಾದರೂಪವಾದುದೆಂದೇ ಹೇಳಬೇಕು. ಆದ್ದರಿಂದ ವಿರೋಧವಿಲ್ಲ. ಜಿಜ್ಞಾಸಾಶಬ್ದವು ಜ್ಞಾನೇಚ್ಛಾ ಎಂಬ ಅರ್ಥವನ್ನು ಕೊಡುವುದಾದರೂ ಇಲ್ಲಿ ವಿಚಾರದಲ್ಲಿ ಲಕ್ಷಣಾವೃತ್ತಿಯಿಂದ ವಿಚಾರಲಕ್ಷಕ ಎಂಬ ಪಕ್ಷದಲ್ಲಿ ದೋಷಕ್ಕೆ ಅವಕಾಶವಿಲ್ಲ. ''ಜಿಜ್ಞಾಸಿತಂ ಸುಸಂಪನ್ನಂ'' ಎಂಬ ಭಾಗವತದಲ್ಲಿ ಉಕ್ತವಾಗಿರುವಂತೆ ಮನನರೂಪವಿಚಾರ ಎಂಬರ್ಥದಲ್ಲಿ ರೂಢ ಎಂಬ ಪಕ್ಷದಲ್ಲಿ ಜಿಜ್ಞಾಸಾಶಬ್ದವು ಛತ್ರಿಣೋ ಯಾಂತಿ ಎಂಬಲ್ಲಿರುವ ಛತ್ರಿಪದದಂತೆ ಲಕ್ಷಣಾವೃತ್ತಿಯಿಂದ ಶ್ರವಣಪ್ರತಿಪಾದಕ ಎಂಬ ಹೇಳಲೂ ಅವಕಾಶವಿದೆ. ಆದಕಾರಣ ಈ ಮೂರನೇ ಸಮಾಧಾನದಿಂದಲೂ ಪರಸ್ಪರಟೀಕಾವಾಕ್ಯಗಳನ್ನು ತೊಂದಿಸಬಹುದು ಎಂಬ ಮಾತು ತೋರಿಕೆಗೆ ಸರಿ ಎಂದು ಕಂಡುಬಂದರೂ ಕೂಲಂಕಷವಾಗಿ ಈ ಮೂರನೇ ಪಕ್ಷವನ್ನ ಪರಿಶೀಲಿಸಿದರೆ ಜಿಜ್ಞಾಸಾಶಬ್ದವು ತ್ರಿತಯ ಪದವೆಂದು ತತ್ವ ಪ್ರಕಾಶಿಕಾ ಅಭಿಪ್ರಾಯವೆಂದು ಹೇಳಲೇ ಬೇಕಾಗಿದೆ.

ಅಂತೂ ಉತ್ತರಪ್ರಸ್ಥಾನದಲ್ಲಿ ಮನನಮಾತ್ರವೇ ಜಿಜ್ಞಾಸಾರೂಪವೆಂದು ಹೇಳಿರುವುದಕ್ಕೆ ವಿರುದ್ಧವೇ ಆಗಿರುವ ಪ್ರಯುಕ್ತ ಪರಸ್ಪರ ವಿರೋಧವು ಪರಿಹಾರವಾಗಿಲ್ಲ ಎಂಬ ಶಂಕೆಗೆ ಉತ್ತರರೂಪವಾಗಿ ನಾಲ್ಕನೇ ಸಮಾಧಾನವು ಚಂದ್ರಿಕಾ ದಲ್ಲಿ ಅಂತಿಮವಾಗಿ ಉಕ್ತವಾಗಿದೆ. ಪ್ರಸ್ಥಾನದ್ವಯಗಳ ವಿರೋಧವನ್ನು ಚಂದ್ರಿಕಾಕಾರರು ನ್ಯಾಯಸುಧಾಭಿಪ್ರಾಯವನ್ನು ವಿವರಿಸಿ ಈ ಕೆಳಗೆ ಕಂಡಂತೆ ಪರಿಹರಿಸಿರುತ್ತಾರೆ.

ತತ್ವಪ್ರಕಾಶಿಕಾಟೀಕಾದಲ್ಲಿ ಬಳಸಿರುವ ಜಿಜ್ಞಾಸಾ ಎಂಬ ಶಬ್ದದಿಂದಲೂ, ವಿಚಾರ ಎಂಬ ಶಬ್ದದಿಂದಲೂ ಶ್ರವಣ ಮನನ ಧ್ಯಾನ ಮೂರಕ್ಕು ಅನುಗತವಾದ ಉಪಾಸನಾನೇ ವಿವಕ್ಷಿತವಾಗಿದೆ. ಸುಧಾದಲ್ಲಿ ಹೇಳಿರುವಂತೆ ಮನನವು ಮಾತ್ರವಲ್ಲ.

ಶ್ರವಣಮನನ ಧ್ಯಾನಗಳೆಂಬ ಮೂರಕ್ಕೂ ಅನುಗತವಾದ ''ಉಪಾಸನಾ'' ಎಂಬುದು ಚಿತ್ತದ ಪ್ರಾವಣ್ಯ ರೂಪ ವಾದುದು. ಅಂದರೆ ಮನಸ್ಸಿನ ''ಭಗವದೇಕನಿಷ್ಠತಾ'' ರೂಪವಾದ ಉಪಾಸನೆಯು. ಇಂತಹ ಭಗವದೇಕ ನಿಷ್ಠತಾ ರೂಪವಾದ ಚಿತ್ತಪ್ರಾವಣ್ಯವೆನಿಸುವ ಉಪಾಸನೆಗೆ ಧ್ಯಾನವು ಸಾಕ್ಷಾತ್ತಾಗಿ ಕಾರಣವಾಗುತ್ತದೆ. ಶ್ರವಣ ಮನನಗಳು ಪ್ರಮಾಣ ಗಳ ಮೂಲಕವಾಗಿ ಕಾರಣವಾಗುತ್ತವೆ.'' ಎಂಬ ಅಭಿಪ್ರಾಯದಿಂದ ತತ್ವಪ್ರಕಾಶಿಕಾಟೀಕಾವಾಕ್ಯವು ಹೊರಟಿದೆ.

ನ್ಯಾಯಸುಧಾದಲ್ಲಾದರೋ ಶ್ರವಣಧ್ಯಾನಗಳು ಶಾಸ್ತ್ರಾರಂಭಕ್ಕೆ ಸಾಕ್ಷಾತ್ತಾಗಿ ಕಾರಣಗಳಲ್ಲ. ಆ ಎರಡೂ ಇಲ್ಲದಿದ್ದರೆ ಶಾಸ್ತ್ರವು ಅನಾರಂಭಣೀಯವಾಗುತ್ತದೆ ಎಂಬುದಿಲ್ಲ. ನ್ಯಾಯಾನುಸುಧಾನಾತ್ಮಕವಾದುದು ಮನನವು. ಶಾಸ್ತ್ರವಾದರೋ ನ್ಯಾಯನಿಬಂಧನಾತ್ಮಕವಾಗಿದೆ. ನ್ಯಾಯಾನುಸಂಧಾನರೂಪವಾದ ಮನನಕ್ಕೆ ಕರ್ತವ್ಯತ್ವವು. ಇಲ್ಲವಾದರೆ ನ್ಯಾಯನಿಬಂಧನಾ ತ್ಮಕವಾದ ಶಾಸ್ತ್ರವು ಅನಾರಂಭಣೀಯ ಎಂದಾಗುತ್ತದೆ. ಆದಕಾರಣ ಶಾಸ್ತ್ರಾರಂಭಣೀಯತ್ವಕ್ಕೆ ಅತ್ಯವಶ್ಯವಾಗಿ ಮನನ ಕರ್ತವ್ಯತ್ವವೇ ಪ್ರಯೋಜಕವೆಂಬ ದೃಷ್ಟಿಯಿಂದ ಸುಧಾದಲ್ಲಿ ಮನನವೇ ಜಿಜ್ಞಾಸಾತ್ವೇನ ಉಕ್ತವಾಗಿದೆ.

ಈ ಜಿಜ್ಞಾಸಾಸೂತ್ರವೂ ಸಹ ಮನನವಿಧಿಮೂಲವೇ ಆಗಿದೆ. ವಿವರಣಕಾರನ ಮತದಂತೆ ಈ ಸೂತ್ರವು ಶ್ರವಣ ವಿಧಿ ಮೂಲವಲ್ಲ." ಎಂಬ ಅಭಿಪ್ರಾಯದಿಂದ ನ್ಯಾಯಸುಧೆಯಲ್ಲಿ ಮನನರೂಪತ್ವವನ್ನೂ ಜಿಜ್ಞಾಸಾಕ್ಕೆ ಹೇಳಲಾಗಿರುವ ಪ್ರಯುಕ್ತ ಎರಡು ಟೀಕಾವಾಕ್ಯಗಳೂ ಬೇರೆ ಬೇರೆ ಅಭಿಪ್ರಾಯವುಳ್ಳವುಗಳಾದ ಕಾರಣ ಈ ವಿರೋಧ ಪರಿಹಾರವು ಹೊಂದಿಕೆಯಾಗುತ್ತರೆ. ಆದುದರಿಂದ ಪರಸ್ಪರ ಟೀಕಾ ವಾಕ್ಯಗಳಿಗೆ ವಿರೋಧವಿಲ್ಲ. ಎಂದು ಬಹುರಮಣೀಯವಾಗಿ ಸಮಂಜಸವಾಗಿ ತಾತ್ಪರ್ಯಚಂದ್ರಿಕಾಕಾರರು ವಿರೋಧವನ್ನು ಪರಿಹರಿಸಿದ್ದಾರೆ. ಅತಿಗಹನಗಳಾದ ಟೀಕಾವಾಕ್ಯಗಳ ತಾತ್ಪರ್ಯವನ್ನು ವಿವರಿಸುವುದಲ್ಲಿ ಶ್ರೀ ವ್ಯಾಸರಾಜರೇ ಮೊದಲಾದವರು ಸಮರ್ಥರು. ನಾವಾದರೋ ಆ ಚಂದ್ರಿಕಾವಾಕ್ಯಗಳ ಅಭಿಪ್ರಾಯದ ಲೇಶವನ್ನು ಮಾತ್ರ ಹೇಳುತ್ತೇವೆಂದು ತತ್ತ್ವಪ್ರಕಾಶಿಕಾಭಾವ ದೀಪದಲ್ಲಿ ಜಿಜ್ಞಾಸಾಧಿಕರಣದ ಅಂತಿಮಭಾಗದಲ್ಲಿ ಶ್ರೀ ರಾಘವೇಂದ್ರ ಗುರುಸಾರ್ವಭೌಮರು ಈ ಕೆಳಗೆ ಕಂಡಂತೆ ಅತಿ ಗಂಭೀರವಾಗಿ ತಾತ್ಪರ್ಯಚಂದ್ರಿಕಾವೈಶಿಷ್ಟ್ಯವನ್ನು ಮುಕ್ತಕಂಠದಿಂದ ಮಾಡಿದ್ದಾರೆ. ಆ ವಾಕ್ಯವು ಈ ರೀತಿ ಇದೆ.

"ಟೀಕಾತಾತ್ಪರ್ಯವಿವೃತೌ ವ್ಯಾಸತೀರ್ಥಾದಯಃ ಕ್ಷಮಾಃ ।
ವಯಂತು ತತ್ಕೃತವ್ಯಾಖ್ಯಾಲೇಶಭಾವಂ ವದಾಮಹೇ ।। ತತ್ತ್ವಪ್ರಕಾಶಿಕಾ ಭಾವದೀಪ ।।

ತಾತ್ಪರ್ಯ ಚಂದ್ರಿಕಾದಲ್ಲಿ ನಾಲ್ಕನೇ ಸಮಾಧಾನದಲ್ಲಿ ಉಕ್ತವಾಗಿರುವ ವಿರೋಧ ಪರಿಹಾರದ ಕ್ರಮವನ್ನು ಅನುಸರಿಸಿ ಶ್ರೀ ಗುರುರಾಜರು ಈ ತಂತ್ರದೀಪಿಕೆಯಲ್ಲಿ ಪೂರ್ವಪ್ರಸ್ಥಾನವಾದ ತತ್ತ್ವಪ್ರಕಾಶಿಕಾವಾಕ್ಯಕ್ಕೆ ಅಭಿಪ್ರೇತವಾದ ಅರ್ಥವನ್ನು "ಬ್ರಹ್ಮಜ್ಞಾನಾಯ ಸರ್ವವೇದವಿಷಯಕಶ್ರವಣಮನನ ನಿದಿಧ್ಯಾಸನರೂಪಾ" ಎಂದು ಹೇಳಿದ ತರುವಾಯ, ಉತ್ತರಪ್ರಸ್ಥಾನಕ್ಕೆ ಸೇರಿದ ನ್ಯಾಯಸುಧಾವಾಕ್ಯಾರ್ಥಾಭಿಪ್ರೇತವಾದ ಪಕ್ಷವನ್ನು "ಮನನಮಾತ್ರರೂಪಾ ವಾ" ಎಂದು ಹೇಳಿ "ತದ್ವಿಜಿಜ್ಞಾಸಸ್ವ ಇತ್ಯಾದಿ ಶ್ರುತ್ಯುಕ್ತಾ ಕರ್ತವ್ಯಾ ಇತ್ಯರ್ಥಃ" ಎಂದು ವಾಕ್ಯವನ್ನು ಮುಗಿಸಿರುತ್ತಾರೆ.

ಇದರಿಂದ "ಮೊದಲೇ ಗ್ರಂಥಕಾರರು ಪ್ರತಿಜ್ಞೆ ಮಾಡಿರುವಂತೆ "ಪ್ರಸ್ಥಾನಭೇದಪ್ರೋಕ್ತಾರ್ಥಸಂಗ್ರಹೋಽತ್ರಾಪ್ಯಯಂ ಮಮ" ಎಂಬ ನುಡಿಗೆ ತಕ್ಕಂತೆ ಈ ತಂತ್ರದೀಪಿಕಾಗ್ರಂಥಕ್ಕೆ "ಪ್ರಸ್ಥಾನಭೇದಪ್ರೋಕ್ತಾರ್ಥಸಂಗ್ರಹ ರೂಪತ್ವ" ವು ಅನ್ವರ್ಥಕವಾಗಿದೆ.

**ಜಿಜ್ಞಾಸಾಶಬ್ದವು ರೂಢವೋ, ಲಾಕ್ಷಣಿಕವೋ ಎಂಬ ವಿಷಯದಲ್ಲಿ ಸಿದ್ಧಾಂತಾರ್ಥ ನಿರೂಪಣೆ.**

ವಿವರಣಕಾರಮತರೀತ್ಯಾ ಜಿಜ್ಞಾಸಾಶಬ್ದವು ವಿಚಾರರೂಪವಾದ ಅರ್ಥದಲ್ಲಿ ಲಾಕ್ಷಣಿಕವು. ಅಂದರೆ ಜಿಜ್ಞಾಸಾ ಶಬ್ದಕ್ಕೆ ವಿಚಾರಾರ್ಥದಲ್ಲಿ ರೂಢಿ ಶಕ್ತಿಯು ಇಲ್ಲವೆಂದು ವಿವರಣಕಾರರು ಹೇಳುತ್ತಾರೆ.

**ಅದರ ಖಂಡನೆ** :- ಜಿಜ್ಞಾಸಾಶಬ್ದವು ವಿಚಾರ ರೂಪವಾದ ಅರ್ಥದಲ್ಲಿ ರೂಢಿಶಕ್ತಿಯನ್ನು ಒಪ್ಪಬೇಕೆಂಬ ವಿಷಯದಲ್ಲಿ ಯುಕ್ತಿಗಳು ಈ ರೀತಿ ಇವೆ. ಅವೆಲ್ಲವನ್ನೂ ಚಂದ್ರಿಕಾಚಾರ್ಯರು ಕಾರಿಕಾದಲ್ಲಿ ಸಂಗ್ರಹಿಸಿದ್ದಾರೆ.

**ಜಿಜ್ಞಾಸಾಶಬ್ದತೋಽಜಿಜ್ಞಾಸುಜ್ಞಾತೃತ್ವವಚನಾತ್ ।**
**ವಿಚಾರಂ ಲೌಕಿಕಾಃ ತೇನ ತತ್ರಾಯಂ ರೂಢ ಇಷ್ಯತೇ ।।**

**ಅಶ್ವಥಾಮುಂಟಕಾದೀನಾಂ ಗೃಹಾದೌ ಸ್ಯಾನ್ನರೂಢತಾ ।**
**ಗಂಗಾಶಬ್ದಾತ್ತುತೀರಾದಿ ತದ್ಧೀಪೂರ್ವಾಂ ಪ್ರಕಾಶತೇ ।।**

**ಅಭಿಪ್ರಾಯ** :- ಜಿಜ್ಞಾಸಾಶಬ್ದವು ಸಮುದಾಯ ಶಕ್ತಿ (ಅಖಂಡ ಶಕ್ತಿ) ರೂಪವಾದ ರೂಢಿಶಕ್ತಿಯಿಂದ ವಿಚಾರವೆಂಬ ಅರ್ಥವನ್ನು ತಿಳಿಸುತ್ತಲಿದೆ. ಇದಕ್ಕೆ ಕಾರಣಗಳು.

(೧) ಲೋಕದಲ್ಲಿ ಲೌಕಿಕರಿಗೆ "ಇಚ್ಛಾ" ಎಂಬ ಅರ್ಥದ ತಿಳುವಳಿಕೆ (ಪ್ರತೀತಿಯು) ಇಲ್ಲದಿದ್ದಾಗ್ಯೂ ಸಹ ಜಿಜ್ಞಾಸಾ ಶಬ್ದದಿಂದ ನೇರವಾಗಿ ಯಾವ ವ್ಯವಧಾನವೂ ಇಲ್ಲದಂತೆ ವಿಚಾರ ಎಂಬ ಅರ್ಥವನ್ನು ತಿಳಿಯುತ್ತಾರೆ. ಅವ್ಯವಧಾನದಿಂದ ವಿಚಾರವೆಂಬ ಅರ್ಥಜ್ಞಾನವು ಲೌಕಿಕರಿಗೆ ಆಗುತ್ತಿರುವುದರಿಂದ ಜಿಜ್ಞಾಸಾಶಬ್ದಕ್ಕೆ ವಿಚಾರಾರ್ಥದಲ್ಲಿ ರೂಢಿಶಕ್ತಿಯನ್ನು ಒಪ್ಪಬೇಕು.

(೨) ಮತ್ತು "ಜಿಜ್ಞಾಸಾ" ಎಂಬ ಶಬ್ದದ ನಿಷ್ಪತ್ತಿಯು ಇಚ್ಛಾ ಎಂಬ ಅರ್ಥದಲ್ಲಿ ಸನ್ಪ್ರತ್ಯಯವು ಬಂದೇ ಆಗುತ್ತಿದೆಯೆಂಬ ನಿರ್ಬಂಧವೂ ಇರುವುದಿಲ್ಲ.

ಜಿಜ್ಞಾಸಾಶಬ್ದದಲ್ಲಿನ ಸನ್ಪ್ರತ್ಯಯವು "ಧಾತೋಃ ಸಮಾನಕರ್ತೃಕಾದಿಚ್ಛಾಯಾಂ ವಾ" ಎಂಬ ಪಾಣಿನಿ ಸೂತ್ರದಿಂದ ಬಂದಿಲ್ಲ. ಸ್ವಾರ್ಥದಲ್ಲೂ ಸನ್ ಪ್ರತ್ಯಯವು ಕಂಡುಬಂದಿದೆ.

ಮಾನ ವಿಚಾರಣೇ ಎಂಬ ಧಾತುವಿನ ಮುಂದೆ "ಮಾನ್ಬಧದಾನ್ಶಾನ್ಭ್ಯೋ ದೀರ್ಘಶ್ಚಾಭ್ಯಾಸಸ್ಯ" (ಪಾ. ಸೂ. ೩-೧-೬) ಎಂಬ ಸೂತ್ರದಿಂದ ಸ್ವಾರ್ಥದಲ್ಲಿ ಸನ್ಪ್ರತ್ಯಯವು ಬಂದು, ಇಚ್ಛಾ ಎಂಬ ಅರ್ಥದ ಪ್ರತೀತಿಯು ಇಲ್ಲದಿದ್ದರೂ ವಿಚಾರ ಎಂಬ ಅರ್ಥದ ಪ್ರತೀತಿಯು "ಮೀಮಾಂಸಾ ಶಬ್ದದಿಂದ" ಆಗುತ್ತಿದೆ. "ಮಾನೇರ್ಜಿಜ್ಞಾಸಾ ಯಾಮ್" (ವಾರ್ತಿಕ. ೧೬೯೨) ಆದ್ದರಿಂದಲೇ ವೃತ್ತಿಯಲ್ಲಿ "ಮಾನೇರ್ಜಿಜ್ಞಾಸಾಯಾಂಸನ್" ಎಂದು ಹೇಳಲಾಗಿದೆ.

ಅಂದರೆ ಮೀಮಾಂಸಾ ಶಬ್ದದಿಂದ "ಇಚ್ಛಾ" ಎಂಬ ಅರ್ಥದ ಪ್ರತೀತಿಯು ಇಲ್ಲದಿದ್ದರೂ "ವಿಚಾರ" ಎಂಬ ಅರ್ಥದ ಪ್ರತೀತಿಯು ಉಂಟಾಗುವುದರಿಂದ ಮೀಮಾಂಸಾ ಶಬ್ದಕ್ಕೆ ವಿಚಾರ ಎಂಬರ್ಥದಲ್ಲಿ ರೂಢಿಯಿರುವಂತೆ ಜಿಜ್ಞಾಸಾ ಶಬ್ದಕ್ಕೂ ರೂಢಿಯು ಇರುತ್ತದೆ ಎಂದು ಅಭಿಪ್ರಾಯ. ಸ್ವಾರ್ಥದಲ್ಲಿ ಸನ್ ಪಕ್ಷದ ರೀತ್ಯಾ ರೂಢಿಶಕ್ತಿಯನ್ನು ಒಪ್ಪಲು ಇದೂ ಒಂದು ಕಾರಣ.

(೩) ನಿಯಮೇನ ಪ್ರಾಜ್ಞರು ವಿಚಾರ ಎಂಬ ಅರ್ಥದಲ್ಲಿ ಜಿಜ್ಞಾಸಾ ಶಬ್ದವನ್ನು ಪ್ರಯೋಗಿಸುತ್ತಿದ್ದಾರೆ. ಇದೂ ಸಹ ಶಕ್ತಿಗೆ ಕಲ್ಪಕ. ಅನನ್ಯಥಾಸಿದ್ಧಪ್ರಾಮಾಣಿಕಪ್ರಯೋಗಾನ್ಯಥಾನುಪಪತ್ತ್ಯಾ ರೂಢಿಶಕ್ತಿಯನ್ನು ಹೇಳಲೇಬೇಕು.

(೪) ಲಕ್ಷಣಾವೃತ್ತಿಯಿಂದಲೇ ವಿಚಾರ ಪ್ರತೀತಿಯನ್ನು ಒಪ್ಪುವುದಾದರೆ "ಧರ್ಮಬುಭುತ್ಸಾ" ಎಂಬಲ್ಲಿರುವಂತೆ "ಬ್ರಹ್ಮಬುಭುತ್ಸಾ" ಎಂದು ಹೇಳಿದಾಗ್ಯೂ ಜ್ಞಾನೇಚ್ಛಾಂತರ್ಗತವಾದ ವಿಚಾರ ಎಂಬರ್ಥದಲ್ಲಿ ಲಕ್ಷಣಾವೃತ್ತಿಯನ್ನು ಹೇಳಲಿಕ್ಕೆ ಅವಕಾಶವಿರುವಾಗ ನಿಯಮೇನ "ಜಿಜ್ಞಾಸಾ" ಎಂಬ ಪದವನ್ನೇ "ವಿಚಾರ" ಎಂಬರ್ಥದಲ್ಲಿ ಪ್ರಯೋಗಿಸುತ್ತಿದ್ದಾರೆ. ಆದ್ದರಿಂದ ಜಿಜ್ಞಾಸಾ ಶಬ್ದವು ವಿಚಾರ ಎಂಬರ್ಥದಲ್ಲಿ ರೂಢ ಎಂದೇ ಹೇಳಬೇಕು. ಅವಿಲಂಬದಿಂದ ವಿಚಾರ ಪ್ರತೀತಿಯು ಪರರಿಗೂ ಸಮ್ಮತವೇ ಆಗಿದೆ. ವಿಚಾರ ಪ್ರತೀತಿಯು ಇಚ್ಛಾಪ್ರತೀತಿಪೂರ್ವಕವೇ ಆಗಬೇಕೆಂಬ ನಿರ್ಬಂಧವನ್ನು ಇತರರೂ ಒಪ್ಪಿಲ್ಲ.

"ವಿಚಾರಸಾಧ್ಯಜ್ಞಾನೇಚ್ಛಾಜಿಜ್ಞಾಸಾಶಬ್ದಾತ್ ಪ್ರತೀಯತೆ, ನೋಪದೇಶಮಾತ್ರಸಾಧ್ಯಜ್ಞಾನವಿಷಯಾ" ಎಂದು ಪರಕೀಯರು ಹೇಳಿರುವರು.

ಆದ್ದರಿಂದ "ತದ್ವಿಜಿಜ್ಞಾಸಸ್ವ" ಎಂಬ ವಿಧಾಯಕವಾದ ವೇದದಲ್ಲೂ, ಈ ಸೂತ್ರದಲ್ಲೂ "ವಿಧೌ ನ ಲಕ್ಷಣಾ" ನ ವಿಧೌ ಪರಃ ಶಬ್ದಾರ್ಥಃ" ಎಂಬಂತೆ ಲಕ್ಷಣಾವೃತ್ತಿಯನ್ನು ಹೇಳದೇ ರೂಢಿಯಿಂದಲೇ ವಿಚಾರ ಎಂಬ ಅರ್ಥವನ್ನು ಹೇಳಬೇಕು.

ಹೀಗೆ ಒಪ್ಪದೇ ಇದ್ದರೆ ಜಿಜ್ಞಾಸಾಶಬ್ದದಲ್ಲಿ ಇಚ್ಛಾರೂಪವಾದ ಅರ್ಥಪ್ರತೀತಿಪೂರ್ವಕವಾಗಿಯೇ ವಿಚಾರ ರೂಪವಾದ ಅರ್ಥದ ಪ್ರತೀತಿಯನ್ನು ಆಗ್ರಹದಿಂದ (ಸಾಧಿಸುವುದಾದರೆ) ಹೇಳುವುದಾದರೆ ಮಂಟಪ ಎಂಬ ಶಬ್ದಕ್ಕೆ ಗೃಹ ಎಂಬ ಅರ್ಥದಲ್ಲಿ ರೂಢಿ ಶಕ್ತಿಯು ಇಲ್ಲದೆ, ಆ ಶಬ್ದವು ಮಂಡಪಾನಕರ್ತೃ ಎಂಬ ಅರ್ಥದಲ್ಲಿ ಮುಖ್ಯವಾಗಿ ಅದನಿಂದ ಅಧಿಷ್ಠಿತವಾಗಿರುವ ಪ್ರಯುಕ್ತ ಗೃಹವಿಶೇಷದಲ್ಲಿ ಲಾಕ್ಷಣಿಕವಾಗಬೇಕಾದೀತು.

ಹಾಗೆಯೇ ಪ್ರವೀಣ ಎಂಬ ಶಬ್ದವು ನಿಪುಣ ಎಂಬರ್ಥದಲ್ಲಿ ರೂಢವಾಗಿದೆ. ಅದಿಲ್ಲದೆ ಪ್ರಕೃತವೀಣಾವಾದದ ಗತವಾದ ಪ್ರೌಢತ್ವರೂಪವಾದ ಗುಣದ ಸಂಬಂಧದಿಂದ "ನಿಪುಣ" ಎಂಬ ಅರ್ಥದಲ್ಲಿ ಗೌಣವಾಗಬೇಕಾದೀತು.

ಇದೇ ರೀತಿ ಕುಶಲ ಎಂಬ ಶಬ್ದವು ನಿಪುಣ ಎಂಬರ್ಥದಲ್ಲಿ ರೂಢವಾಗದೇ ಹೋಗಬೇಕಾಗುತ್ತದೆ. ಲಾಕ್ಷಣಿಕ ವಾಗಬೇಕಾದೀತು.

ಅಂದರೆ ಲೋಕದಲ್ಲಿ ಮಂಟಪ ಶಬ್ದಕ್ಕೆ ಗೃಹವಿಶೇಷ ಎಂಬರ್ಥದಲ್ಲಿ ರೂಢ ಇದೆ.

ಪ್ರವೀಣ ಶಬ್ದಕ್ಕೂ, ಕುಶಲ ಎಂಬ ಶಬ್ದಕ್ಕೂ ನಿಪುಣ ಎಂಬರ್ಥದಲ್ಲಿ ರೂಢಿಶಕ್ತಿ ಇದೆ.

ವಾಜಿ ಶಬ್ದವು ಅಶ್ವಜಾತಿಯಲ್ಲಿ ರೂಢವಾಗಿದೆ. ಇದೆಲ್ಲಕ್ಕೂ ಬಾಧಕ ಬಂದೀತು ಎಂದು ಅಭಿಪ್ರಾಯ.

ಆದ್ದರಿಂದ ಜಿಜ್ಞಾಸಾಶಬ್ದವು ವಿಚಾರ ಎಂಬ ಅರ್ಥದಲ್ಲಿ ರೂಢವೇ ಆಗಿದೆ ಎಂದುದು ಸಿದ್ಧಾಂತದ ಅಭಿಪ್ರಾಯ.

ಆದರೆ ಸುಧಾದಲ್ಲಾದರೋ "ಜ್ಞಾನೇಚ್ಛಾಂತರ್ಣೀತೋ ವಿಚಾರೋ ಜಿಜ್ಞಾಸಾಶಬ್ದೇನ ಲಕ್ಷ್ಯತೆ" ಎಂದು ಹೇಳಲಾಗಿದೆ. ಇದು ಸ್ವಮತವಲ್ಲ. ಪರಮತಾನುವಾದ.

ಅದೇ ಸುಧಾದಲ್ಲಿ ಈ ಪರಮತವನ್ನು ಅನುವಾದ ಮಾಡಿ "ಯದಿ ಚ ಜಿಜ್ಞಾಸಾಶಬ್ದೋ ಮೀಮಾಂಸಾ, ಶಬ್ದವತ್ ವಿಚಾರ ಏವ ಉಪಸಂಖ್ಯಾಯತೇ" ಎಂದು ನ್ಯಾಯಸುಧಾಕಾರರು ಸ್ವಮತವನ್ನು ಹೇಳಿದ್ದಾರೆ.

ಅಥವಾ ರೂಢ ಎಂಬ ಪಕ್ಷದಲ್ಲೂ, ಲಾಕ್ಷಣಿಕ ಎಂಬ ಪಕ್ಷದಲ್ಲೂ ಅಂದರೆ ಪಕ್ಷದ್ವಯದಲ್ಲೂ ವಿಚಾರ ಎಂಬ ಅರ್ಥದ ಪ್ರತೀತಿಯು ಆಗುವುದರಿಂದ, ಆ ಪ್ರತೀತಿಗೆ ಯಾವ ಚ್ಯುತಿಯೂ ಇಲ್ಲವಾದ ಪ್ರಯುಕ್ತ "ಅಸ್ವಾಭ್ಯಶ್ಚೇಽಪಿ ಲಕ್ಷಣಯಾ ವಿಚಾರೇಽಪಿ ತತ್ಪ್ರಯೋಗಾತ್, ಮುಖ್ಯಾರ್ಥಸ್ಯಚೇಚ್ಛಾಯಾ ಅವಿಧೇಯತ್ವಾತ್" ಎಂಬ ಸುಧಾವಾಕ್ಯವನ್ನು ಹೊಂದಿಸಿ ಪಕ್ಷದ್ವಯಕ್ಕೂ ಉಪಪತ್ತಿಯನ್ನು ಹೇಳಬಹುದಾಗಿದೆ.

ಎಂದು ತಾತ್ಪರ್ಯ ಚಂದ್ರಿಕಾಕಾರರು ಸ್ವಮತವನ್ನೂ, ಪರಮತವನ್ನೂ ವಿವರಿಸಿ, ಪಕ್ಷದ್ವಯಕಲ್ಪಕ್ಕೂ ಒಂದು ಬಗೆಯಾದ ಉಪಪತ್ತಿಯನ್ನೂ ನ್ಯಾಯಸುಧಾಕಾರರ ಅಭಿಪ್ರಾಯವನ್ನೂ ಬಹು ವಿಮರ್ಶಪೂರ್ವಕವಾಗಿ ನಿರ್ಧರಿಸಿದ್ದಾರೆ.

**ತಂತ್ರದೀಪಿಕಾ ಮೂಲ: ಓಂಬ್ರಹ್ಮಶಬ್ದಯೋಃ ಯೌಗಿಕತ್ವೇಽಪಿ ಏಕಸ್ಯ ರೂಢತ್ವಮಾಶ್ರಿತ್ಯ ವಿಶೇಷ್ಯವಾಚಿತ್ವೇನ "ಅತ್ಯೇತಿತೂಪಗಚ್ಛಂತಿ" ಇತ್ಯತ್ರೇವ ಅನ್ವಯೋ ವಾಚ್ಯಃ।**

**ಅರ್ಥ** :- ಓಂ ಎಂಬ ಶಬ್ದವೂ, ಬ್ರಹ್ಮ ಎಂಬ ಶಬ್ದವೂ, ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ ಎಂಬ ಮೊದಲನೆಯ ಸೂತ್ರದಲ್ಲಿ ಕಂಡು ಬಂದಿದೆ. ಈ ಎರಡು ಶಬ್ದಗಳ ಪೈಕಿ ಓಂ ಎಂಬ ಶಬ್ದದ ನಿಷ್ಪತ್ತಿಯ ಪ್ರಕಾರವನ್ನು ಹಿಂದೆಯೇ ಹೇಳಲಾಗಿದೆ. ಓಂ ಎಂಬ ಪದವು ಗತಿ ಮತ್ತು ಪ್ರವೇಶ ಮೊದಲಾದ ಅರ್ಥಗಳನ್ನುಳ್ಳ, ಅವ ಎಂಬ ಧಾತುವಿನ ಮುಂದೆ "ಅವತೇಷ್ಟಿಲೋಪಶ್ಚ" ಎಂಬ ಸೂತ್ರದಿಂದ ಔಣಾದಿಕವಾದ ಮನ್ ಪ್ರತ್ಯಯವು ಬಂದು "ಜ್ವರತ್ವರ"ಇತ್ಯಾದಿ ಸೂತ್ರದಿಂದ ಅವ ಎಂಬಲ್ಲಿರುವ ವಕಾರಕ್ಕೂ ಉಪಧಾಭೂತವಾದ ಅಕಾರಕ್ಕೂ ಊಠಾ ಬಂದು ಸವರ್ಣದೀರ್ಘಸಂಧಿ ಬಂದು ಪ್ರತ್ಯಯಕ್ಕೆ ಟಿಲೋಪ ಬಂದು ಓಂ ಎಂದಾಗಿದೆಯೆಂದು ಹಿಂದೆಯೇ ತಿಳಿಸಿರುತ್ತೇವೆ. ಔಣಾದಿಕವಾದ ಮನ್ಪ್ರತ್ಯಯವು "ಉಣಾದಯೋ ಬಹುಳಮ್" ಎಂಬುದರಿಂದ ಕರ್ತ್ರರ್ಥದಲ್ಲೂ, ಕರ್ಮಾರ್ಥದಲ್ಲೂ ಬಂದಿರುವ ಪ್ರಯುಕ್ತ "ಅಥ ಕಸ್ಮಾದುಚ್ಯತೇ ಬ್ರಹ್ಮೇತಿ, ಬೃಹಂತೋಽಸ್ಮಿನ್ಗುಣಾ" ಎಂಬ ಶ್ರುತಿಬಲದಿಂದ, ಯೋಗ್ಯತಯಾ "ಗುಣೈಃ ಗುಣಾನ್ವಾ ಓತತಾಂ ವಕ್ತಿ" ಎಂದು ಸುಧಾದಲ್ಲಿ ಹೇಳಿರುವಂತೆ ಗುಣಪರಿಪೂರ್ಣತ್ವವೇ ಓಂಕಾರದ ಅರ್ಥವಾಗಿದೆ. ಅಂತೂ ಓಂ ಎಂಬ ಪದವು ಅವಯವ ಶಕ್ತಿಯಿಂದ ಅರ್ಥ ವಿಶೇಷ ಪ್ರತಿಪತ್ತಿಜನಕವಾಗಿರುವ ಪ್ರಯುಕ್ತ ಯೌಗಿಕವೇ ಆಗಿದೆ.

ಬ್ರಹ್ಮಶಬ್ದವೂ ಸಹ ಬೃಹ ಬೃಹಿ ವೃದ್ಧೌ ಎಂಬ ಧಾತುವಿನ ಮುಂದೆ ಭೀಮಸೇನಧಾತುಪಾಠದ ಪ್ರಕಾರ ವೃದ್ಧಿ ಎಂಬ ಅರ್ಥವುಳ್ಳದ್ದಾದುದರಿಂದ, ಔಣಾದಿಕವಾದ ಮನಿನ್ಪ್ರತ್ಯಯವು ಬಂದು, ಅಮಾಗಮ, ಯಣಾದೇಶ ಕಾರ್ಯಗಳು ಆಗಿ "ಬ್ರಹ್ಮ" ಎಂದು ನಿಷ್ಪನ್ನವಾಗಿದೆ. ವೃದ್ಧಿಯೆಂದರೆ ಪೂರ್ಣತ್ವ ಎಂದೇ ಅರ್ಥ. "ನಿರವಧಿಕವಾದ ಪೂರ್ಣತ್ವವುಳ್ಳವನು" ಎಂಬುದಾಗಿ ಬ್ರಹ್ಮಶಬ್ದದ ಅರ್ಥವಾಗಿದೆ. ಅಂತೂ ಓಂ ಎಂಬ ಶಬ್ದವೂ ಬ್ರಹ್ಮ ಎಂಬ ಶಬ್ದವೂ ಸಹ ಯೌಗಿಕವೇ ಆಗಿದೆ. ಯೌಗಿಕಗಳಾದ ಎರಡೂ ಶಬ್ದಗಳಿಗೆ ಗುಣಪರಿಪೂರ್ಣ + ಗುಣಪರಿಪೂರ್ಣ ಎಂದೇ ಅರ್ಥ ಹೇಳಿದಂತಾಗುವುದರಿಂದ "ಘಟೋ ಘಟಃ" ಎಂಬಂತೆ ಶಾಬ್ದಬೋಧವೇ ಬರದಂತಾಗುವುದು. ಅನನ್ವಿತವಾಗುವುದು ಎಂದು ಅಭಿಪ್ರಾಯ. ಸಮಾನವಾದ ಪ್ರಕಾರತಾವಚ್ಛೇದಕ ವಿಶೇಷ್ಯತಾವಚ್ಛೇದಕ ಧರ್ಮಗಳಿದ್ದಲ್ಲಿ ಶಾಬ್ದಬೋಧಬಾಧಕನಿಯಮವಿರುವ ಪ್ರಯುಕ್ತ ಅನ್ವಯಬೋಧವು ಬರುವುದಿಲ್ಲ. ಆದಕಾರಣ ಇಲ್ಲಿ ಹಿಂದೆಯೇ ತಿಳಿಸಿದಂತೆ ದೈವೀಮಾಂಸಾಶಾಸ್ತ್ರದ ಅಂತಿಮವಾದ ಎರಡು ಸೂತ್ರಗಳಲ್ಲಿ ಬ್ರಹ್ಮಶಬ್ದವು "ವಿಷ್ಣು" ಎಂಬ ಅರ್ಥದಲ್ಲಿ ರೂಢವಾಗಿದೆಯೆಂದು ಶ್ರೀ ಬಾದರಾಯಣರೇ ನಿರ್ಣಯಿಸಿರುವ ಪ್ರಯುಕ್ತ ಬ್ರಹ್ಮಶಬ್ದಕ್ಕೆ ವಿಷ್ಣು ಎಂಬ ಅರ್ಥದಲ್ಲಿ ವಿಶೇಷ್ಯತಯಾ ಅನ್ವಯವನ್ನು ಹೇಳಿ "ಗುಣಪರಿಪೂರ್ಣಃ ವಿಷ್ಣುಃ" ಎಂದು ಅರ್ಥ ಮಾಡಿರುವುದಾಗಿದೆ. ಇದರಿಂದ ಬ್ರಹ್ಮಶಬ್ದವು ವಿಶೇಷ್ಯವಾಚಕವಾಗಿದೆ. ಓಂ ಪದವು ವಿಶೇಷಣವಾಚಕ ಎಂದು ಅಭಿಪ್ರಾಯ. ಪ್ರತಿಪದಗಳಿಗೆ ಈ ಕೆಳಗೆ ಕಂಡಂತೆ ಅರ್ಥವನ್ನು ವಿವರಿಸಲಾಗಿದೆ.

**ಅರ್ಥ**:- ಓಂ ಬ್ರಹ್ಮ ಶಬ್ದಯೋಃ = ಓಂ ಎಂಬ ಶಬ್ದಕ್ಕೂ ಬ್ರಹ್ಮ ಎಂಬ ಶಬ್ದಕ್ಕೂ, ಒಟ್ಟು ಈ ಎರಡು ಶಬ್ದಗಳಿಗೂ, ಯೌಗಿಕತ್ವೇಽಪಿ = ಅವಯವಶಕ್ತಿಯಿಂದ ಅರ್ಥಪ್ರತಿಪತ್ತಿಜನಕತ್ವವು ಇರುವುದಾದರೂ, ಏಕಸ್ಯ = ಒಂದಾದ ಬ್ರಹ್ಮಪದಕ್ಕೆ, ರೂಢತ್ವವನ್ನು ಆಶ್ರಯಿಸಿ, ಅಂದರೆ ಬ್ರಹ್ಮ ಎಂಬ ಪದಕ್ಕೆ ಸಮುದಾಯ ಶಕ್ತಿಯನ್ನು (ಅಖಂಡ ಶಕ್ತಿಯನ್ನು) ಹೇಳಿ, ಅದು ವಿಶೇಷ್ಯವಾಚಕವಾಗಿರುವ ಪ್ರಯುಕ್ತ ಓಂ "ಆತ್ಮೇತಿತೂಪಗಚ್ಛಂತಿಗ್ರಾಹಯಂತಿ ಚ" ಓಂ (ಬ್ರಹ್ಮಸೂತ್ರ ಅಧ್ಯಾಯ ೪ ತ್ರ. ಪಾದ ೧. ಸೂ. ೩) ಎಂಬ ಸೂತ್ರದಲ್ಲಿರುವ ಆತ್ಮಶಬ್ದದಂತೆ ಅನ್ವಯವನ್ನು ತಿಳಿಯಬೇಕು ಎಂದು ಹೇಳಿದ್ದಾರೆ.

. ನಾಲ್ಕನೇ ಅಧ್ಯಾಯದ ಮೊದಲನೆಯ ಪಾದದ ಎರಡನೇ ಅಧಿಕರಣದ ಸೂತ್ರವಾದ "ಆತ್ಮೇತಿ" ಇತ್ಯಾದಿ ಸೂತ್ರದಲ್ಲಿ ಆತ್ಮತ್ವೋಪಾಸನವು ನಿತ್ಯವೂ ಮಾಡಲ್ಪಡತಕ್ಕದ್ದು ಎಂದು ವಿಧಿಸಲಾಗಿದೆ. ಸೂತ್ರದಲ್ಲೇನೋ ಒಂದೇ ಆತ್ಮಶಬ್ದವು ಇದೆ. ಅದನ್ನು ಆತ್ಮಾ ಆತ್ಮಾ ಎಂದು ಆವೃತ್ತಿಮಾಡಿಕೊಳ್ಳಬೇಕು. ಮೊದಲನೆಯ ಆತ್ಮಶಬ್ದವು ರೂಢಿಯಿಂದ (ಸಮುದಾಯ ಶಕ್ತಿಯಿಂದ ಅಥವಾ ತರ್ಕತಾಂಡವದಲ್ಲಿ ಹೇಳಿರುವಂತೆ ಅಖಂಡ ಶಕ್ತಿಯಿಂದ) ವಿಷ್ಣುವಾಚಕವಾಗಿದೆ. ಅಂದರೆ ಭೃತ್ಯರನ್ನು ಸ್ವೀಕರಿಸುವವನು ಎಂದರ್ಥ. ಆದರಿಂದ "ಆತ್ಮಾ = ವಿಷ್ಣುವು, ಆತ್ಮಾ = ನನಗೆ ಸ್ವಾಮಿಯು" ಎಂದು ಪರಮಾತ್ಮನನ್ನು ಸಜ್ಜನರು ನಿತ್ಯವೂ ತಿಳಿಯುತ್ತಾರೆ, ಹಾಗೆಯೇ ಉಪಾಸನ ಮಾಡುತ್ತಾರೆ. ಮೇಲಾಗಿ ಶಿಷ್ಯರಿಗೂ ಉಪದೇಶ ಮಾಡುತ್ತಾರೆ" ಎಂದು ಸೂತ್ರದ ಅರ್ಥ.

**ತಂತ್ರದೀಪಿಕಾ:- ಬ್ರಹ್ಮಶಬ್ದಾತ್ ವಿಷಯಸಿದ್ಧಾವಪಿ ಓಮಿತ್ಯುಕ್ತಿ: ನ ಕೇವಲಂ ಬ್ರಹ್ಮಶಬ್ದಾತ್ ವಿಷಯ ಸಿದ್ಧಿ: "ಓಮಿತ್ಯೇತದಕ್ಷರಂ ಉದ್ಗೀಥಂ ಉಪಾಸೀತ" ಇತ್ಯಾದೌ ಗುಣಪೂರ್ಣಾರ್ಥೋಽಓಂಕಾರಾದಪಿ ಇತಿ ಯುಕ್ತ್ಯಂತರ ಸೂಚನಾಯ ಚ॥**

**ಅರ್ಥ** :-ಬ್ರಹ್ಮಶಬ್ದಾತ್ ವಿಷಯಸಿದ್ಧಾವಪಿ = ಪ್ರಥಮ ಸೂತ್ರದಲ್ಲಿರುವ "ಬ್ರಹ್ಮ" ಎಂಬ ಶಬ್ದದಿಂದಲೇ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ "ವಿಷ್ಣು" ಎಂಬ ವಿಷಯವು ಸಿದ್ಧಿಸುವುದು. ಇಂತಹ ವಿಷ್ಣು ಎಂಬ ವಿಷಯ ಸಿದ್ಧಿಗಾಗಿ ಬ್ರಹ್ಮ ಎಂಬ ಪದದ ಹೊರತಾಗಿ ಬೇರೇ ಪದವು ಸೂತ್ರದಲ್ಲಿ ಬೇಕಾಗಿಲ್ಲ. ಅಂದರೆ ಬ್ರಹ್ಮಪದದಿಂದಲೇ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ವಿಷಯವು ಸಿದ್ಧಿಸುವುದಾದರೂ, ಓಮಿತ್ಯುಕ್ತಿ: = ಓಂ ಅಥಾತೋ ಬ್ರಹ್ಮಜಿಜ್ಞಾಸಾ ಎಂಬ ಸೂತ್ರದಲ್ಲಿ ಬ್ರಹ್ಮಪದಕ್ಕಿಂತಲೂ ಪ್ರತ್ಯೇಕವಾಗಿ "ಓಂ" ಎಂದು ಓಂಕಾರದ ಉಕ್ತಿಯು = ಕಥನವು "ಓಮಿತ್ಯೇತದಕ್ಷರಂ ಉದ್ಗೀಥಂ ಉಪಾಸೀತ" ಇತ್ಯಾದೌ ಗುಣಪೂರ್ಣಾರ್ಥೋಽಓಂಕಾರಾದಪೀತಿಯುಕ್ತ್ಯಂತರಸೂಚನಾಯ । ಅರ್ಥ = ಬ್ರಹ್ಮಸೂತ್ರಕಾರರಾದ ಶ್ರೀಬಾದರಾಯಣರು ಮೊದಲನೆಯ ಸೂತ್ರದಲ್ಲಿ ಸಕಲ ಜೀವರಿಗಿಂತಲೂ ಬೇರೆಯವನಾದ ಅಂದರೆ ಜೀವವ್ಯತಿರಿಕ್ತನಾದ ಪರಬ್ರಹ್ಮನು ಶಾಸ್ತ್ರಕ್ಕೆ ವಿಷಯನು ಎಂಬುದನ್ನು ತೋರಿಸುವುದಕ್ಕಾಗಿ ಸೂತ್ರದಲ್ಲಿ ಓಂ ಎಂಬ ಶಬ್ದವನ್ನೂ, ಬ್ರಹ್ಮ ಎಂಬ ಶಬ್ದವನ್ನೂ ಪ್ರಯೋಗಿಸಿರುತ್ತಾರೆ. ಅಂದರೆ ವೇದದಲ್ಲಿ "ಜಿಜ್ಞಾಸ್ಯವಾದ ವಸ್ತುವಿನ ವಿಷಯದಲ್ಲಿ ಕೆಲವು ಕಡೆ ಓಂಕಾರವೂ, ಮತ್ತೆ ಕೆಲವು ಶ್ರುತಿವಾಕ್ಯಗಳಲ್ಲಿ ಬ್ರಹ್ಮ ಎಂಬ ಪದವೂ, "ನಾರಾಯಣಂ ಮಹಾಜ್ಞೇಯಂ" ಎಂಬಲ್ಲಿ ನಾರಾಯಣ ಎಂಬ ಶಬ್ದವೂ, "ಆತ್ಮಾನಮೇವ ಲೋಕಮುಪಾಸೀತ" ಎಂಬಲ್ಲಿ ಆತ್ಮ ಶಬ್ದವೂ ಪ್ರಯುಕ್ತವಾಗಿರುವುದನ್ನು ಮನಗಾಣಬೇಕಾಗಿದೆ. ಈ ಓಂಕಾರಕ್ಕೆ, ಬ್ರಹ್ಮಪದಕ್ಕೆ, ನಾರಾಯಣಪದಕ್ಕೆ, ಆತ್ಮ ಎಂಬ ಪದಕ್ಕೂ ಗುಣ ಪರಿಪೂರ್ಣ ಎಂದೇ ಅರ್ಥ

ವಾಗಿದೆ. ಇದರಿಂದ ಶಾಸ್ತ್ರಜಿಜ್ಞಾಸ್ಯನಾದವನು ಗುಣ ಪರಿಪೂರ್ಣನಾದವನೆಂದು ಹೇಳಿರುವುದರಿಂದ ಅಂತಹ ಜಿಜ್ಞಾಸ್ಯವಾದ ವಸ್ತುವು ಸಕಲಜೀವಜಡಾತ್ಮಕವಾದ ಪ್ರಪಂಚಕ್ಕಿಂತಲೂ, ಅತ್ಯಂತವಿಲಕ್ಷಣವೆಂದೇ ತಿಳಿಯಲ್ಪಡುತ್ತದೆ. ಅಂದರೆ ಜಿಜ್ಞಾಸ್ಯ ವಾದ ವಿಷಯಸಿದ್ಧಿಯು ಕೇವಲ ಬ್ರಹ್ಮಶಬ್ದದಿಂದ ಮಾತ್ರವಲ್ಲ. ಛಾಂದೋಗ್ಯದಲ್ಲಿನ "ಓಮಿತ್ಯೇತದಕ್ಷರಂ ಉದ್ಗೀಥಂ ಉಪಾಸೀತ" ಎಂಬಲ್ಲಿ ಉಕ್ತವಾಗಿರುವ ಓಂಕಾರದಿಂದಲೂ ಗುಣಪರಿಪೂರ್ಣವಾದ ಜಿಜ್ಞಾಸ್ಯವಸ್ತುವು ಸಿದ್ಧಿಸುತ್ತದೆ ಎಂಬ ಬೇರೊಂದು ಯುಕ್ತಿಯನ್ನು ಸೂಚಿಸುವುದಕ್ಕಾಗಿ ಸೂತ್ರದ ಆದಿಯಲ್ಲಿ ಸೂತ್ರಕಾರರು "ಓಂ" ಎಂಬ ಪದವನ್ನು ಪ್ರಯೋಗಿ ಸಿರುತ್ತಾರೆ ಎಂದು ಅಭಿಪ್ರಾಯ.

ಅಥವಾ ಸೂತ್ರದಲ್ಲಿ ಹೇಳಿರುವ ಓಂಕಾರ ಮತ್ತು ಬ್ರಹ್ಮಶಬ್ದಗಳು ಉಪಲಕ್ಷಣ ಮಾತ್ರ. ಜಿಜ್ಞಾಸ್ಯ ವಸ್ತುವಿನಲ್ಲಿ ಬೇರೆ ಬೇರೆ ಶ್ರುತಿವಾಕ್ಯಗಳಲ್ಲಿ ಕೆಲವು ಕಡೆ "ನಾರಾಯಣಂ ಮಹಾಜ್ಞೇಯಂ" ಎಂಬಲ್ಲಿ ನಾರಾಯಣ ಶಬ್ದವು, ಉಕ್ತವಾಗಿದೆ. ಗುಣಪರಿಪೂರ್ಣಾರ್ಥಕವಾದ ನಾರಾಯಣ ಶಬ್ದದಿಂದಲೂ ಜೀವಜಡಾದಿಸರ್ವವಿಲಕ್ಷಣನಾದ ಪರಮಾತ್ಮನೇ ಜಿಜ್ಞಾಸ್ಯ ನೆಂದು ಸಿದ್ಧಿಸುತ್ತದೆ.

ಹೀಗೆಯೇ ಆತ್ಮಶಬ್ದವೂ, ಅನಂತಶಬ್ದವೂ, ಈಶ್ವರ ಎಂಬ ಶಬ್ದವೂ ಇವೇ ಮೊದಲಾದ ಶಬ್ದಗಳು ಗುಣಪೂರ್ಣ ವಾಚಕಗಳಾಗಿವೆ. ಈ ಶಬ್ದಗಳೂ ಜೀವಾದಿ ವಿಲಕ್ಷಣನಾದ ಪರಮಾತ್ಮನನ್ನು ಜಿಜ್ಞಾಸ್ಯನನ್ನಾಗಿ ತಿಳಿಸುತ್ತಲಿವೆ ಎಂದು ಅಭಿಪ್ರಾಯ. ಇಂತಹ ಯುಕ್ತ್ಯಂತರವನ್ನು ಸೂಚಿಸುವುದಕ್ಕಾಗಿ ಸೂತ್ರಕಾರರು ಗುಣಪರಿಪೂರ್ಣಾರ್ಥಕವಾದ ಓಂ ಪದವನ್ನೇ ಪ್ರಯೋಗಿಸಿರುವರು.

**ತಂತ್ರದೀಪಿಕಾ :- ಬ್ರಹ್ಮಣಿ ಕಿಂ ಮಾನಂ ಇತ್ಯತ: ವೇದರೂಪಪ್ರಮಾಣಸೂಚನಾಯಚ.**

**ಅರ್ಥ** :- ಬ್ರಹ್ಮಣಿ = ಜಿಜ್ಞಾಸ್ಯನಾದ ಬ್ರಹ್ಮನಲ್ಲಿ, (ಬ್ರಹ್ಮನ ವಿಷಯದಲ್ಲಿ) ಕಿಂ ಮಾನಂ = ಏನು ಪ್ರಮಾಣವು, ಇತ್ಯತಃ = ಹೀಗೆಂಬ ಪ್ರಶ್ನೆಯು ಬರಲಾಗಿ, ಅದಕ್ಕೆ ಉತ್ತರರೂಪವಾಗಿ "ಓಂ" ಎಂದು ಹೇಳಿದುದರಿಂದ, ವೇದರೂಪಪ್ರಮಾಣ ಸೂಚನಾಯ ಚ = ಸಕಲ ವೇದಗಳೇ ಪ್ರಮಾಣಗಳೆಂಬುದನ್ನು ಸೂಚಿಸುವುದಕ್ಕಾಗಿಯೂ ಕೂಡ (ಓಂ ಎಂಬುದಾಗಿ ಹೇಳಿದ್ದಾರೆ.)

ಓಂ ಎಂದು ಹೇಳಿದ ಮಾತ್ರದಿಂದಲೇ ಬ್ರಹ್ಮನ ವಿಷಯದಲ್ಲಿ ವೇದಗಳು ಪ್ರಮಾಣವಾಗಿವೆ ಎಂಬ ಅರ್ಥವು ಹೇಗೆ ತಿಳಿಯಲ್ಪಡುತ್ತದೆ ಎಂಬ ಶಂಕಾ ಪರಿಹಾರಕ್ಕಾಗಿ ತಂತ್ರದೀಪಿಕೆಯ ಮುಂದಿನ ವಾಕ್ಯವು ಹೊರಟಿದೆ.

**ತಂತ್ರದೀಪಿಕಾ :- ಓಂಕಾರವಾಚ್ಯಸ್ಯ ಬ್ರಹ್ಮಣ: ಇತ್ಯುಕ್ತ್ಯಾ ವ್ಯಾಹೃತಿ, ಗಾಯತ್ರೀ, ಪುರುಷ ಸೂಕ್ತದ್ವಾರಾ ಸರ್ವವೇದಾನಾಂ ತದ್ವ್ಯಾಖ್ಯಾನತ್ವಾತ್ ವೇದಾ ಏವ ತತ್ರಮಾನಮಿತಿಸಿದ್ಧೇರಿತಿಭಾವ: ।**

**ಅರ್ಥ** :- ಓಂಕಾರವಾಚ್ಯಸ್ಯ = ಓಂಕಾರದಿಂದ ವಾಚ್ಯನಾದ (ತಿಳಿಯಲ್ಪಡತಕ್ಕವನಾದ) ಬ್ರಹ್ಮಣಃ = ಬ್ರಹ್ಮನ, ಇತ್ಯುಕ್ತ್ಯಾ = ಎಂಬ ಉಕ್ತಿಯಿಂದ, ಕಥನದಿಂದ, "ಓಂಕಾರವಾಚ್ಯನಾದವನು ಬ್ರಹ್ಮನು ಎಂದು" ಹೇಳಿದುದರಿಂದ, ವ್ಯಾಹೃತಿ = ವ್ಯಾಹೃತಿತ್ರಯ = ಮೂರು ವ್ಯಾಹೃತಿಗಳು = ಓಂ ಭೂಃ, ಓಂ ಭುವಃ, ಓಂ ಸುವಃ (ಓಂ ಸ್ವಃ) ಎಂಬ ಮೂರು ವ್ಯಾಹೃತಿ ಮಂತ್ರಗಳೂ,

**ಗಾಯತ್ರೀ = ಗಾಯತ್ರೀ ಮಂತ್ರವೂ, ಓಂ ಭೂರ್ಭುವಃ ಸ್ವಃ।**
**ಓಂ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ।**
**ಧಿಯೋ ಯೋ ನಃ ಪ್ರಚೋದಯಾತ್।**

ಎಂಬ ಗಾಯತ್ರೀ ಮಂತ್ರವೂ, ಪುರುಷ ಸೂಕ್ತದ್ವಾರಾ = ಪುರುಷ ಸೂಕ್ತ ಇವುಗಳ ಮೂಲಕವಾಗಿ, ಸರ್ವ ವೇದಾನಾಂ = ಸಕಲ ವೇದಗಳಿಗೂ, ತದ್ವ್ಯಾಖ್ಯಾನತ್ವಾತ್ = ಆ ಓಂಕಾರದ ವ್ಯಾಖ್ಯಾನವಾಗಿರುವಿಕೆಯಿಂದ, ವೇದಾ ಏವ = ಸಕಲ ವೇದಗಳೇನೇ, ತತ್ರ = ತದ್ವಿಜಿಜ್ಞಾಸಸ್ವ = ಎಂಬ ತೈತ್ತಿರೀಯಶ್ರುತಿಯಲ್ಲಿ ವಿಹಿತವಾದ ಜಿಜ್ಞಾಸ್ಯನಾದ ಬ್ರಹ್ಮನ ವಿಷಯದಲ್ಲಿ ಮಾನಮಿತಿ = ಪ್ರಮಾಣವೆಂದು, ಸಿದ್ಧ್ಯೇರಿತಿಭಾವಃ = ಸಿದ್ಧವಾಗುವುದು ಎಂದು ಅಭಿಪ್ರಾಯವು.

(ಸೂಚನೆ :- ಓಂಕಾರದ ವಿಶೇಷವ್ಯಾಖ್ಯಾ ಪ್ರಕಾರವನ್ನೂ, ವಿಶೇಷ ವ್ಯಾಕ್ಯಾರ್ಥವನ್ನೂ ಜಿಜ್ಞಾಸಾಧಿಕರಣಕ್ಕೆ ಸಂಬಂಧಪಟ್ಟ ತಂತ್ರದೀಪಿಕಾ ಗ್ರಂಥದ ಅರ್ಥವನ್ನು ನಿರೂಪಿಸಿದ ಮೇಲೆ ಕಡೆಯಲ್ಲಿ ಸಂಗ್ರಹಿಸಿ ಬರೆದಿರುತ್ತೇವೆ.)

ಓಂಕಾರವೇ ಸರ್ವವೈದಿಕವಾಙ್ಮಯಕ್ಕೂ ಮೂಲಭೂತವಾದುದು. ಅದರ ವ್ಯಾಖ್ಯಾನವೇ ವ್ಯಾಹೃತಿಯು. ಅದಕ್ಕೆ ವ್ಯಾಖ್ಯಾನವಾದುದೇ ಗಾಯತ್ರೀ ಮಂತ್ರ, ಅದರ ವ್ಯಾಖ್ಯಾನವೇ ಪುರುಷಸೂಕ್ತ, ಆ ಪುರುಷಸೂಕ್ತಕ್ಕೆ ವ್ಯಾಖ್ಯಾನರೂಪವಾಗಿಯೇ ಸಕಲ ವೇದಗಳೂ ಇರುತ್ತವೆ. ಜಿಜ್ಞಾಸ್ಯನಾದ ಬ್ರಹ್ಮನ ವಿಷಯದಲ್ಲಿ ಏನು ಪ್ರಮಾಣವೆಂಬ ಪ್ರಶ್ನೆಗೆ "ಓಂ" ಎಂದು ಉತ್ತರವನ್ನು ಹೇಳಿದುದರಿಂದ ಆ ಬ್ರಹ್ಮನ ವಿಷಯದಲ್ಲಿ ಸಕಲ ವೇದಗಳೂ ಪ್ರಮಾಣಗಳೆಂದು ಉತ್ತರವನ್ನು ಹೇಳಿದಂತಾಯಿತು ಎಂದು ಪರಮಾಭಿಪ್ರಾಯ.

ಈ ಸಂದರ್ಭದಲ್ಲಿ ಶ್ರೀಮದನುವ್ಯಾಖ್ಯಾನದ ವ್ಯಾಖ್ಯಾನವಾದ ಶ್ರೀಮನ್ನ್ಯಾಯಸುಧೆಗೆ ವ್ಯಾಖ್ಯಾನವಾದ ಪರಿಮಳ ವ್ಯಾಖ್ಯಾನದಲ್ಲಿ ಮೂಲಕಾರರಿಗೂ ಟೀಕಾಕಾರರಿಗೂ ಪರಮಸಂಮತವಾಗಿರುವ ಅನುಮಾನಗಳನ್ನು ಶ್ರೀ ರಾಘವೇಂದ್ರಗುರುಸಾರ್ವಭೌಮರು ಉದಾಹರಿಸಿರುವುದನ್ನು ಮುಂದೆ ತೋರಿಸಿರುತ್ತೇವೆ.

**(೧) ಭಗವಾನ್ - ಸರ್ವವೇದಾರ್ಥಃ - ತದ್ವ್ಯಾಖ್ಯೇಯ ಪುರುಷಸೂಕ್ತಪ್ರತಿಪಾದ್ಯತ್ವಾತ್ ಸಾಮಾನ್ಯ ವ್ಯಾಪ್ತ್ಯಾ ಸಂಮತವತ್.**

**(೨) ಭಗವಾನ್ - ಪುರುಷಸೂಕ್ತಾರ್ಥಃ - ತದ್ವ್ಯಾಖ್ಯೇಯಗಾಯತ್ರ್ಯರ್ಥತ್ವಾತ್.**

**(೩) ಭಗವಾನ್ - ಗಾಯತ್ರ್ಯರ್ಥಃ - ತದ್ವ್ಯಾಖ್ಯೇಯವ್ಯಾಹೃತ್ಯರ್ಥತ್ವಾತ್.**

**(೪) ಭಗವಾನ್ - ವ್ಯಾಹೃತ್ಯರ್ಥಃ - ತದ್ವ್ಯಾಖ್ಯೇಯಪ್ರಣವಾರ್ಥತ್ವಾತ್.**

**ನಚಾಸಿದ್ಧಿಃ, ಸರ್ವತ್ರ ವ್ಯಾಖ್ಯಾನವ್ಯಾಖ್ಯೇಯಭಾವಸ್ಯಾಗಮಸಿದ್ಧತ್ವಾತ್।**
**ಓಂಕಾರವ್ಯಾಖ್ಯಾದೌ "ತಸ್ಯೋಪವ್ಯಾಖ್ಯಾನಮ್" ತದ್ವತ್ "ಇತ್ಯಾದಿಶ್ರುತೇಃ" ॥ ೧೨ ॥**

ಓಂಕಾರವು ಬ್ರಹ್ಮಜಿಜ್ಞಾಸಾ ಎಂಬಲ್ಲಿ ಜಿಜ್ಞಾಸಾಕ್ಕೆ ವಿಶೇಷಣವಾಗಿರತಕ್ಕ ಬ್ರಹ್ಮಶಬ್ದಕ್ಕೆ ವಿಶೇಷಣವಾಗಿದೆಯೆಂದು ಹಿಂದೆಯೇ ವಿವರಿಸಲಾಗಿದೆ. ಕರ್ಮಷಷ್ಠ್ಯಂತವಾದ ಬ್ರಹ್ಮಣಃ ಎಂಬುದಕ್ಕೆ ಓಂ ಎಂಬುದು ಹೇಗೆ ವಿಶೇಷಣವೆಂದು

ಶಂಕಿಸಬಹುದು. ಓಂ ಎಂಬುದು ಅವ್ಯಯವಾಗಿದೆ. ಎಲ್ಲಾ ವಿಭಕ್ತಿಗಳಲ್ಲಿಯೂ ಏಕಾಕಾರವಾಗಿರತಕ್ಕ ಅವ್ಯಯವಾದ ಓಂಕಾರಕ್ಕೆ ಷಷ್ಠ್ಯಂತವಾದ ಬ್ರಹ್ಮಣಃ ಎಂಬಲ್ಲಿ ವಿಶೇಷಣವಾಗಿರುವಲ್ಲಿ ಯಾವ ಆಕ್ಷೇಪಕ್ಕೂ ಅವಕಾಶವಿಲ್ಲ.

"ಕೃನ್ಮೇಜನ್ತಃ" (ಪಾ. ಸೂ. ೧-೧-೩೯) ಈ ಪಾಣಿನಿಯ ಸೂತ್ರವು ಅವ್ಯಯಪ್ರಕರಣದಲ್ಲಿ ಬಂದಿದೆ. ಈ ಸೂತ್ರವಲ್ಲಿ, ಕೃತ್, ಮೇಜನ್ತಃ ಎಂದು ಪದಚ್ಛೇದ

ಮ್ ಚ + ಏಚ್ಚ = ಮೇಚೌ, ತೌ ಅಂತೇ ಯಸ್ಯೇತಿ ಬಹುವ್ರೀಹಿಃ।
ಕೃದ್ಯೋಮಾಂತ ಏಜನ್ತಶ್ಚ ತದಂತಮವ್ಯಯಂ ಸ್ಯಾತ್॥

ಎಂಬ ವೃತ್ತಿ ವಚನದಂತೆ, ಓಂ ಎಂಬುದು ಡಿಕಾದಿಕವಾದ ಮನ್ಪ್ರತ್ಯಯಾಂತವಾಗಿ ನಿಷ್ಪನ್ನವಾಗಿ ಮಾಂತವಾಗಿರುವ ಪ್ರಯುಕ್ತ ಇದೂ ಸಹ ಅವ್ಯಯವೆನಿಸಿದೆ. ಷಷ್ಠೀವಿಭಕ್ತಿಯಲ್ಲೂ ಸಹ ಓಂ ಎಂದೇ ರೂಪವಿರುವ ಪ್ರಯುಕ್ತ ಇದು ಬ್ರಹ್ಮಣಃ ಎಂಬಲ್ಲಿ ವಿಶೇಷಣವಾಗಲು ಯಾವ ಬಾಧಕವೂ ಇಲ್ಲವೆಂದು ಅಭಿಪ್ರಾಯ. ಆ "ಕೃನ್ಮೇ ಜನ್ತಃ" ಎಂಬ ಸೂತ್ರಕ್ಕೆ "ಸ್ಮಾರಂಸ್ಮಾರಮ್" ಇತ್ಯಾದಿಗಳು ಉದಾಹರಣೆಗಳಿರುತ್ತವೆ.

**ತಂತ್ರದೀಪಿಕಾ :- ತೇನಬ್ರಹ್ಮಣಃ (ಅಪ್ರಮಿತತ್ವೇನ) ಅಪ್ರಮಿತತ್ವೇ. ಅನುಗ್ರಾಹ್ಯಪ್ರಮಾಣಾಭಾವಾತ್ ಜಿಜ್ಞಾಸಾ ನ ಕರ್ತವ್ಯಾ ಇತಿ ನ ಶಂಕ್ಯಮ್॥**

**ಅರ್ಥ** :- ಹಿಂದೆ ಹೇಳಿದ ರೀತಿಯಲ್ಲಿ ಬ್ರಹ್ಮನ ವಿಷಯದಲ್ಲಿ ಸಕಲ ವೇದಗಳೂ ಪ್ರಮಾಣಗಳಾಗಿರುವುದರಿಂದ, ಅನುಗ್ರಾಹ್ಯವಾದ ಪ್ರಮಾಣವು ಇದೀ ವೇದವೇ ಆಗಿರುವ ಪ್ರಯುಕ್ತ "ಅನುಗ್ರಾಹ್ಯವಾದ ಬ್ರಹ್ಮಪ್ರತಿಪಾದಕವಾದ ಪ್ರಮಾಣವೇ ಇಲ್ಲ. ಆದಕಾರಣ ಬ್ರಹ್ಮ ಎಂಬ ವಸ್ತುವು ಅಪ್ರಾಮಾಣಿಕ" ಈ ಕಾರಣದಿಂದ ಅಂತಹ ಬ್ರಹ್ಮನ ಜಿಜ್ಞಾಸೆಯು ಮಾಡಲ್ಪಡತಕ್ಕವಲ್ಲ. ಎಂಬುದಾಗಿ ಶಂಕಿಸಬಾರದು ಎಂದು ಅಭಿಪ್ರಾಯ.

ಪದಶಃ ಅರ್ಥ:- ತೇನ = ವೇದವೇ ಬ್ರಹ್ಮನ ವಿಷಯದಲ್ಲಿ ಪ್ರಮಾಣವಾಗಿರುವುದರಿಂದ, "ಬ್ರಹ್ಮಣಃ = ಪರ ಬ್ರಹ್ಮನಿಗೆ, (ಅಪ್ರಮಿತತ್ವೇ = ಪ್ರಮಾಣಜನ್ಯಯಥಾರ್ಥಜ್ಞಾನವಿಷಯತ್ವವು ಇಲ್ಲವಾದರೆ.) ಅಪ್ರಮಿತತ್ವೇನ = ಪ್ರಮಾಣ ಜನ್ಯಯಥಾರ್ಥಜ್ಞಾನ ವಿಷಯತ್ವವು ಇಲ್ಲದಾದುದರಿಂದ, ಅನುಗ್ರಾಹ್ಯಪ್ರಮಾಣಾಭಾವಾತ್ = ನ್ಯಾಯಸಂಬಂಧನಾ ತ್ಮಕವಾದ ನಿರ್ಣಯಕವಾದ ಬ್ರಹ್ಮಸೂತ್ರಗಳಿಂದ ನಿರ್ಣೇಯವಾದ, (ಬ್ರಹ್ಮನೇ ಅಪ್ರಾಮಾಣಿಕವಸ್ತುವಾದುದರಿಂದ) ಅವನ, ಜಿಜ್ಞಾಸಾ = ಜಿಜ್ಞಾಸೆಯು = ಶ್ರವಣ, ಮನನ, ಧ್ಯಾನಗಳು, ನ ಕರ್ತವ್ಯಾ = ಮಾಡತಕ್ಕದ್ದಲ್ಲ. ಇತಿ" = ಹೀಗೆಂದು, ನ ಶಂಕ್ಯಮ್ - ಶಂಕಿಸಬಾರದು. ಈ ರೀತಿ ಪೂರ್ವಪಕ್ಷಿಯು ಶಂಕಿಸಲು = ಆಕ್ಷೇಪಿಸಲು ಅವಕಾಶವಿಲ್ಲ ಎಂದು ಅಭಿಪ್ರಾಯ.

ಮುಂದಿನ ವಾಕ್ಯದಲ್ಲಿ ಶ್ರೀ ವಿಜಯೀಂದ್ರ ಗುರುವರೇಣ್ಯರ ಓಂಕಾರದ ವಿವರಣೆಯನ್ನು ಸಂಗ್ರಹಿಸಿ ತಿಳಿಸುತ್ತಾರೆ.

**ತಂತ್ರದೀಪಿಕಾ :- "ಗುರುಪಾದಾಸ್ತು ಬ್ರಹ್ಮಕಂ ಇತ್ಯತಃ ಓಂ ಇತ್ಯುಕ್ತಮ್।**
**ರಕ್ಷಕಸ್ಯ ಇತ್ಯರ್ಥಃ।**

**ಅವತಿರೂಪತ್ವಾತ್ ।**
**ರಕ್ಷಕಶ್ಚವಿಷ್ಣುಃ ಪ್ರಸಿದ್ಧ ಇತ್ಯಾಹುಃ" ।**

**ಅರ್ಥ** :- ಗುರುಪಾದಾಸ್ತು = "ಪೂಜ್ಯರಾದ ಗುರುಪಾದರಾದರೋ = ("ಉತ್ತಮಾನಾಂ ಸ್ವರೂಪಂತು ಪಾದ ಶಬ್ದೇನ ಭಣ್ಯತೇ") ಎಂಬ ವಚನದಂತೆ, ಪೂಜ್ಯರಾದ ಶ್ರೀ ವಿಜಯೀಂದ್ರಸ್ವಾಮಿಗಳಾದರೋ ಎಂದರ್ಥ = ಶ್ರೀ ರಾಘವೇಂದ್ರಸ್ವಾಮಿಗಳಿಗೆ ಸಾಕ್ಷಾತ್ ಗುರುಗಳು ಶ್ರೀ ಸುಧೀಂದ್ರತೀರ್ಥಶ್ರೀಪಾದಂಗಳವರು. ಅವರ ಗುರುಗಳು "ಶ್ರೀ ವಿಜಯೀಂದ್ರತೀರ್ಥರು." ಆದಕಾರಣ ಶ್ರೀ ವಿಜಯೀಂದ್ರತೀರ್ಥರು ಶ್ರೀ ರಾಘವೇಂದ್ರಗುರುವರೇಣ್ಯರಿಗೆ ಪರಮ ಗುರುಗಳಾದುದರಿಂದ "ಗುರುಪಾದಾಸ್ತು" ಎಂದು ಭಕ್ತಿಭಾವದಿಂದ ಹೇಳಿದ್ದಾರೆ. "ವಿಜಯೀಂದ್ರಕರಾಬ್ಜೋತ್ಥ ಸುಧೀಂದ್ರ ವರಪುತ್ರಕಃ" ಎಂದು ಶ್ರೀಮದಪ್ಪಣಾಚಾರ್ಯರು ಶ್ರೀ ಗುರುರಾಜರ ಸ್ತೋತ್ರದಲ್ಲೂ ಶ್ರೀರಾಯರನ್ನು ಪ್ರಶಂಸಿಸಿರುತ್ತಾರೆ.

ಬ್ರಹ್ಮಕಿಂ = ಬ್ರಹ್ಮನು ಯಾರು ? ಅಂದರೆ ಜಿಜ್ಞಾಸ್ಯನಾದ ಬ್ರಹ್ಮನು ಯಾರು ? ಎಂಬ ಪ್ರಶ್ನೆಗೆ ಉತ್ತರ ರೂಪವಾಗಿ ಸೂತ್ರದಲ್ಲೇ "ಓಂ" ಎಂಬ ಉತ್ತರವೂ ಕಂಡುಬಂದಿದೆ.

"ಓಂ" = ಎಂಬ ಪದಕ್ಕೆ "ರಕ್ಷಕಸ್ಯೇತ್ಯರ್ಥಃ । = "ರಕ್ಷಕನಾದ " ಎಂದು ಅರ್ಥ.

ಅದು ಹೇಗೆಂದರೆ, "ಓಂ" ಎಂಬ ಪದವು ಹಿಂದೆಯೇ ವಿವರಿಸಿರುವಂತೆ "ಅವ ಎಂಬ ಧಾತುವು ರಕ್ಷಣ, ಗತಿ, ಕಾಂತಿ, ಪ್ರೀತಿ, ತೃಪ್ತಿ, ಅವಗಮ, ಪ್ರವೇಶ, ಶ್ರವಣ, ಸ್ವಾಮ್ಯರ್ಥ, ಯಾಚನ, ಕ್ರಿಯೇಚ್ಛಾ, ದೀಪ್ತಿ, ಅವಾಪ್ತಿ, ಆಲಿಂಗನ, ಹಿಂಸಾ, ದಾನ, ಭಾಗ, ವೃದ್ಧಿಷು ಎಂದು ಹದಿನೆಂಟು ಅರ್ಥಗಳಲ್ಲಿ ಭೀಮಸೇನಧಾತುಪಾಠದಲ್ಲಿ ಪಠಿತವಾಗಿದೆ.

ಇಷ್ಟು ಅರ್ಥಗಳ ಪೈಕಿ ಅವ್ ಎಂಬ ಧಾತುವಿಗೆ "ರಕ್ಷಣ" ಎಂಬ ಅರ್ಥವೂ ಇರುವುದರಿಂದ ಸೂತ್ರದ ಆದಿಯಲ್ಲಿ ಬಳಸಿರತಕ್ಕ "ಓಂ" ಎಂಬ ಪದಕ್ಕೆ "ರಕ್ಷಕನು" ಎಂದು ಅರ್ಥವಾಗಿದೆ.

ಅವತಿರೂಪತ್ವಾತ್ = ಅವ್ ಎಂಬ ರಕ್ಷಣಾರ್ಥಕವಾದ ಧಾತುವಿನ ರೂಪವಾಗಿರುವುದರಿಂದ, ರಕ್ಷಕಶ್ಚವಿಷ್ಣುಃ ಪ್ರಸಿದ್ಧ ಇತ್ಯಾಹುಃ = "ಯೇನಜಾತಾನಿಜೀವಂತಿ" ಇತ್ಯಾದಿ ವೇದವಚನಗಳಿಂದ ವಿಷ್ಣುವು ರಕ್ಷಕನೆಂಬುದು ಸುಪ್ರಸಿದ್ಧವಾಗಿದೆಯೆಂದು ಹೇಳುವರು.

ಅತಃ ಎಂಬ ತಸಿಲ್ಪ್ರತ್ಯಯಾಂತವಾದ ಶಬ್ದದ ಸಾಧುತ್ವದ ನಿರೂಪಣೆಯು ಮುಂದಿನ ತಂತ್ರದೀಪಿಕಾ ವಾಕ್ಯದಲ್ಲಿ ಕಂಡುಬಂದಿದೆ.

**ತಂತ್ರದೀಪಿಕಾ :- ವಿಭಾಷಾಗುಣ ಇತಿ ಗುಣಶಬ್ದಸ್ಯ ಪರತಂತ್ರಮಾತ್ರಾರ್ಥಕತ್ವೋಕ್ತೇಃ ಅತಃ ಇತಿ ಸಾಧು.**

**ಅರ್ಥ**:- ವಿಭಾಷಾಗುಣೇಽಸ್ತ್ರಿಯಾಮ್ (ಪಾಣಿನಿಸೂ ೨-೩-೨೫) ಈ ಪಾಣಿನಿಯಸೂತ್ರಕ್ಕೆ ವೃತ್ತಿಯು ಈ ರೀತಿ ಇದೆ.

ಗುಣೇ ಹೇತೌ ಅಸ್ತ್ರೀಲಿಂಗೇ ಪಂಚಮೀ ವಾ ಸ್ಯಾತ್ ।

ಉದಾ :-
ಜಾಡ್ಯಾತ್, ಜಾಡ್ಯೇನ ವಾ ಬದ್ಧಃ।
"ಗುಣೇ" ಕಿಮ್ ಧನೇನ ಕುಲಮ್।
ಅಸ್ತ್ರಿಯಾಮ್ಕಿಮ್ - ಬುದ್ಧ್ಯಾಯುಕ್ತಃ।।

ಸ್ತ್ರೀಲಿಂಗದಲ್ಲಿ ಇಲ್ಲದ ಗುಣವಾಗಿರುವ ಹೇತುವಾಚಕಪದಕ್ಕೆ ಪಂಚಮೀವಿಭಕ್ತಿಯು ವಿಕಲ್ಪವಾಗಿ ಬರುವುದೆಂದು ಸೂತ್ರದ ಅರ್ಥವಾಗಿದೆ.

"ವಿಭಾಷಾ" ಇತಿಯೋಗವಿಭಾಗಾತ್ ಅಗುಣೇ ಸ್ತ್ರಿಯಾಂ ಚ ಕ್ವಚಿತ್।

ಉದಾ :-
ಧೂಮಾತ್ ಅಗ್ನಿಮಾನ್।
ನಾಸ್ತಿ ಘಟೋ ಅನುಪಲಬ್ಧೇಃ।।
ಧೂಮಾತ್ ಅಗ್ನಿಮಾನಿತ್ಯತ್ರ ಧೂಮಸ್ಯ ಅಗುಣತ್ವೇಽಪಿ ಅಗ್ನಿಹೇತುತ್ವಾತ್ ತತಃ
ಪಂಚಮೀತಿ ಭಾವಃ।।

ಎಂದು ವ್ಯಾಕರಣ ಶಾಸ್ತ್ರದ ನಿಯಮವಿದೆ. ಈ ಸೂತ್ರದಲ್ಲಿ ಗುಣೇ ಹೇತೌ ಎಂಬಲ್ಲಿರತಕ್ಕ ಗುಣ ಎಂಬ ಪದಕ್ಕೆ ನೈಯ್ಯಾಯಿಕರು ಹೇಳಿರತಕ್ಕ ರೂಪ, ರಸ, ಗಂಧಾದಿ, ಇಪ್ಪತ್ತುನಾಲ್ಕು ಗುಣಗಳೆಂದು ಹೇಳಿದರೆ ಬ್ರಹ್ಮಾದಿಗಳು ಅಂತಹ ಗುಣಗಳಲ್ಲಿ ಸೇರಿಲ್ಲವಾದುದರಿಂದ, ಆ ಸೂತ್ರದಿಂದ ಯಥಾಶ್ರುತವಾಗಿ ಅತಃ ಎಂದು ಪಂಚಮೀವಿಭಕ್ತಿಯು ಬರಲಾರದು. ಅಂದರೆ ಹಿಂದೆ ಹೇಳಿರತಕ್ಕ ಅತಃ ಎಂಬ ಅರ್ಥಗಳಲ್ಲಿ ಅಕಾರವಾಚ್ಯಾತ್ ಬ್ರಹ್ಮಣಃ ಎಂಬಿವೇ ಅರ್ಥದಲ್ಲಿ ಅತಃ ಎಂಬ ಪದ ಪ್ರಯೋಗವು ಅಸಾಧುವಾಗುತ್ತದೆ. ಮತ್ತು "ಅಗುಣೇಽಪಿ ಹೇತೌ ಕ್ವಚಿತ್ ಪಂಚಮೀಮಿಚ್ಛಂತಿ ಕೇಚಿತ್" ಎಂಬ ಪ್ರಾಚೀನ ಅಭಿಪ್ರಾಯದಂತೆ ಅಗುಣವಾದ ಹೇತುವಿನಲ್ಲೂ ಕೆಲವು ಕಡೆ ಪಂಚಮೀವಿಭಕ್ತಿಯನ್ನು ಕೆಲವರು ಅಪೇಕ್ಷಿಸಿದ್ದಾರೆ.

ಪ್ರಕೃತದಲ್ಲಾದರೋ ತಾರ್ಕಿಕಾಭಿಮತವಾದ ಗುಣವಲ್ಲದಿದ್ದರೂ, "ಪರತಂತ್ರ ಅಥವಾ ಅಪ್ರಧಾನ" ಎಂಬ ಅರ್ಥವನ್ನು ಗುಣಪದಕ್ಕೆ ಅರ್ಥವಾಗಿಟ್ಟುಕೊಂಡಿರುವುದರಿಂದ ಅತಃ ಎಂಬಲ್ಲಿರುವ "ಅ ಇತಿಬ್ರಹ್ಮೇತಿಶ್ರುತೇಃ" ಎಂಬ ಶ್ರುತಿಯಿಂದ ಬ್ರಹ್ಮವಾಚಕವಾದ "ಅಕಾರವು" ಅಥಾತೋ ಬ್ರಹ್ಮಜಿಜ್ಞಾಸಾ" ಎಂಬ ಸೂತ್ರದಲ್ಲಿ ಅಪ್ರಧಾನವಾಗಿರುವುದರಿಂದ "ಅ" ಎಂಬುದಕ್ಕೆ ಪಂಚಮೀವಿಭಕ್ತಿಯಾದ ಙಸಿಪ್ರತ್ಯಯವು ಬಂದು ತಸಿಲ್ ಆದೇಶವು ಪ್ರತ್ಯಯಕ್ಕೆ ಬಂದು ಅತಃ ಎಂದಾಗಿದೆ ಎಂದು ಅಭಿಪ್ರಾಯ.

**ಪ್ರತಿಪದಾರ್ಥ** :- ವಿಭಾಷಾ ಗುಣ ಇತಿಗುಣಶಬ್ದಸ್ಯ "ವಿಭಾಷಾಗುಣೇಽಸ್ತ್ರಿಯಾಂ" ಎಂಬ ಪಾಣಿನಿ ಸೂತ್ರದಲ್ಲಿ (೨-೩-೨೫) ಇರತಕ್ಕ ಗುಣ ಎಂಬ ಶಬ್ದಕ್ಕೆ, ಪರತಂತ್ರಮಾತ್ರಾರ್ಥತ್ವೋಕ್ತೇಃ ಅತಃ ಇತಿಸಾಧು = ಪರತಂತ್ರ, ಪರಾಧೀನ ಅಥವಾ ಅಪ್ರಧಾನ ಎಂಬ ಅರ್ಥವನ್ನು ಮಾತ್ರ ಹೇಳುವುದರಿಂದ "ಅಕಾರವಾಚ್ಯಾತ್ ಪ್ರಸನ್ನಾತ್ (ಬ್ರಹ್ಮಣಃ)" ಎಂಬಲ್ಲಿ ಅತಃ ಎಂದು ಹೇಳಿರುವುದು ಸಾಧುವಾಗಿದೆ.

ಒಟ್ಟಿನಲ್ಲಿ ವಿಭಾಷಾ ಗುಣೇಽಸ್ತ್ರಿಯಾಮ್ ಎಂಬ ಸೂತ್ರದಲ್ಲಿ ಗುಣಪದಕ್ಕೆ ತಾರ್ಕಿಕರು ಒಪ್ಪುವ ಗುಣಗಳೆಂದು ಅರ್ಥವಲ್ಲ. ಪರತಂತ್ರ ಅಥವಾ ಅಪ್ರಧಾನ ಎಂದು ಅರ್ಥ. ಈ ಅರ್ಥದ ವಿವಕ್ಷಾದಿಂದ ಅತಃ ಎಂಬ ಪ್ರಯೋಗವು ಸಾಧುವಾಗಿದೆ. ಎಂದು ಪರಮಾಭಿಪ್ರಾಯ.

"ಬ್ರಹ್ಮಜಿಜ್ಞಾಸಾ" ಎಂಬ ಸಮಾಸದ ಸಾಧುತ್ವವಿಚಾರ.

**ತಂತ್ರದೀಪಿಕಾ:- "ಕೃದ್ಯೋಗಲಕ್ಷಣಾ ಚ ಷಷ್ಠೀ ಸಮಸ್ಯತೇ" ಇತ್ಯುಕ್ತೇಃ ಬ್ರಹ್ಮಜಿಜ್ಞಾಸೇತಿ ಸಾಧು।**

**ಅರ್ಥ** :- ಕೃದ್ಯೋಗಲಕ್ಷಣಾ ಚ ಷಷ್ಠೀ ಸಮಸ್ಯತೇ ಎಂಬುದು ಕೆಲವು ವ್ಯಾಕರಣ ಗ್ರಂಥಗಳಲ್ಲಿ "ಕೃದ್ಯೋಗಾ ಚ ಷಷ್ಠೀ ಸಮಸ್ಯತೇ ಇತಿ ವಾಚ್ಯಮ್" ಎಂದು ಪಠಿತವಾಗಿದೆ. ಇದೊಂದು ೧೩೧೭ನೇ ವಾರ್ತಿಕವಾಗಿದೆ. ಅರ್ಥದಲ್ಲೇನೂ ವ್ಯತ್ಯಾಸ ವಿಲ್ಲ.

"ಯಾಜಕಾದಿಭಿಶ್ಚ (ಪಾಣಿನಿಸೂ ೨-೨-೯) ಈ ಸೂತ್ರದಲ್ಲಿ ಮೇಲೆ ಕಂಡ ವಾರ್ತಿಕವು ಪಠಿತವಾಗಿದೆ.

ಕೃತಾ + ಯೋಗೋ ಯಸ್ಯಾ ಸಾ = ಕೃದ್ಯೋಗಾ ಎಂದು ವಿಗ್ರಹ.

ಕರ್ತೃಕರ್ಮಣೋಃ ಕೃತಿ (ಪಾ. ಸೂ. ೨-೩-೬೫) ಕೃದ್ಯೋಗೇ ಕರ್ತರಿ ಕರ್ಮಣಿ ಚ ಷಷ್ಠೀ ಸ್ಯಾತ್।

**ಉದಾ** :- ಕೃಷ್ಣಸ್ಯ ಕೃತಿ।।
ಜಗತಃ ಕರ್ತಾ ಕೃಷ್ಣಃ।।

ಕೃತ್ಪ್ರತ್ಯಯವು ಪ್ರಯುಜ್ಯಮಾನವಾಗಿದ್ದಾಗ ಅಂದರೆ ಕೃದ್ಯೋಗವಿದ್ದಾಗ, ಕೃದಂತವಾದ ಪದವು ಮುಂದಿರುವಾಗ ಹಿಂದಿನ ಪದದ ಮುಂದೆ ಷಷ್ಠೀವಿಭಕ್ತಿಯು ಕರ್ತರಿ ಅಥವಾ ಕರ್ಮಣಿ ಬರುತ್ತದೆ. ಉದಾಹರಣೆಯಲ್ಲಿ ಕೃಷ್ಣಸ್ಯ ಕೃತಿಃ ಎಂಬಲ್ಲಿ ಕೃತಿಃ ಎಂಬಲ್ಲಿ ಕೃಧಾತುವಿನ ಮುಂದೆ ಭಾವೇ ಸ್ತ್ರಿಯಾಂ = ಸ್ತ್ರೀಲಿಂಗದಲ್ಲಿ ಕ್ತಿನ್ ಪ್ರತ್ಯಯವು ಬಂದು ಕೃತಿಃ ಎಂದಾಗಿದೆ. ಕ್ತಿನ್ ಪ್ರತ್ಯವು ಕೃತ್ಪ್ರತ್ಯಯವಾಗಿದೆ. ಕೃತಿಃ ಎಂಬ ಪದವು ಕೃದಂತಪದವಾಯಿತು. ಇದರ ಯೋಗವಿರಲಾಗಿ ಕೃಷ್ಣಸ್ಯ ಎಂಬಲ್ಲಿನ ಷಷ್ಠಿಯು ಕರ್ತ್ರರ್ಥದಲ್ಲಿ ಬಂದಿದೆ. ಅಂದರೆ "ಕೃಷ್ಣಕರ್ತೃಕಾಸ್ಯಕೃತಿಃ" ಎಂದು ಅದರ ಅರ್ಥ.

ಜಗತಃ ಕರ್ತಾ ಕೃಷ್ಣಃ ಎಂಬಲ್ಲಿ ಜಗತ್ಶಬ್ದದ ಮುಂದೆ ಬಂದಿರತಕ್ಕ ಷಷ್ಠೀವಿಭಕ್ತಿಯು ಕರ್ಮಾರ್ಥದಲ್ಲಿ ಬಂದಿದೆ. ಜಗತ್ಕರ್ಮಕಸೃಷ್ಟ್ಯನುಕೂಲವ್ಯಾಪಾರವಾನ್ ಎಂದು ಅದರ ಅರ್ಥ.

ಪ್ರಕೃತದಲ್ಲಿಯಾದರೋ ಜಿಜ್ಞಾಸಾ ಎಂಬ ಪದದ ನಿಷ್ಪತ್ತಿಯನ್ನು ಹಿಂದೆಯೇ ತೋರಿಸಲಾಗಿದೆ. ಅದು "ಅ ಪ್ರತ್ಯಯಾತ್" ಎಂಬ ಪಾಣಿನಿ ಸೂತ್ರದಿಂದ ವಿಹಿತವಾದ ಕೃತ್ ಆದ 'ಅ' ಎಂಬ ಪ್ರತ್ಯಯಾಂತವಾದ ಕೃದಂತಪದವಾಗಿದೆ. ಇಂತಹ ಕೃದಂತವಾದ ಪದಯೋಗವಿರುವುದರಿಂದಲೇ ಕರ್ತೃಕರ್ಮಣೋಃ ಕೃತಿ (ಪಾಣಿ. ನಿ. ಸೂ. ೨-೩-೬೫) ಸೂತ್ರದಿಂದ ಬ್ರಹ್ಮಣಃ ಎಂಬಲ್ಲಿ ಷಷ್ಠೀ ಬಂದಿರುವುದರಿಂದ ಇಂತಹ ಈ ಷಷ್ಠಿಯು ಕೃದ್ಯೋಗದ ಷಷ್ಠೀ ಆಯಿತು. ಆದಕಾರಣ ವಾರ್ತಿಕಕಾರರು "ಕೃದ್ಯೋಗಾ ಚ ಷಷ್ಠೀ ಸಮಸ್ಯತೇ" ಎಂದು ಷಷ್ಠೀಸಮಾಸವನ್ನು ವಿಧಿಸಿದ್ದಾರೆ. ವಾರ್ತಿಕಕಾರರ ನಿಯಮದಂತೆ ಬ್ರಹ್ಮಣಃ + ಜಿಜ್ಞಾಸಾ = ಬ್ರಹ್ಮಜಿಜ್ಞಾಸಾ ಎಂಬ ಸಮಾಸವು ಸಾಧುವೇ ಆಗಿದೆ ಎಂಬ ಅಭಿಪ್ರಾಯದಿಂದ ಶ್ರೀಗುರುರಾಜರು" ಕೃದ್ಯೋಗಲಕ್ಷಣಾ ಚ ಷಷ್ಠೀ ಸಮಸ್ಯತೆ ಇತ್ಯುಕ್ತೇಃ ಬ್ರಹ್ಮಜಿಜ್ಞಾಸಾ ಇತಿ ಸಾಧು। ಎಂದು ಹೇಳಿರುವರು.

"ಸಾಧು" ಎಂದು ಸಮರ್ಥಿಸಿರುವುದರ ಹಿನ್ನಲೆಯಾಗಿರುವ ಆಪಾತತಃ ತೋರಿಬರುವ ಬಾಧಕಾಂಶವನ್ನು ಸ್ವಲ್ಪ ತಿಳಿಯಬೇಕಾಗಿದೆ.

ಅದೇನೆಂದರೆ ನಿರ್ಧಾರಣೇ (ಪಾಣಿ. ಸಿ. ಸೂ. ೨-೨-೧೦) ಎಂಬ ಸೂತ್ರದಲ್ಲಿ "ಪ್ರತಿಪದವಿಧಾನಾ ಷಷ್ಠೀ ನ ಸಮಸ್ಯತೇ ಇತಿ ವಾಚ್ಯಮ್ (ವಾರ್ತಿಕ ೧೩.೨೦) ಎಂಬ ವಾರ್ತಿಕವು ಉದಾಹೃತವಾಗಿದೆ.

ಅದರ ಅರ್ಥ:-ಪದಂ ಪದಂ ಪ್ರತೀತಿವೀಪ್ಸಾಯಾಮವ್ಯಯೀಭಾವಃ।

ಪ್ರತಿಪದಂ +ವಿಧಾನಂ ಯಸ್ಯಾಃ ಸಾ = ಪ್ರತಿಪದವಿಧಾನಾ "ಷಷ್ಠೀಶೇಷೇ" ಇತಿ ಶೇಷಲಕ್ಷಣಾಂ ಷಷ್ಠೀ ವರ್ಜಯಿತ್ವಾ ಸರ್ವಾ ಷಷ್ಠೀ ಪ್ರತಿಪದವಿಧಾನೇತಿ ಭಾಷ್ಯಮ್" ಅಂದರೆ ಪ್ರಕೃತದಲ್ಲಿ ಬ್ರಹ್ಮಣಃ ಜಿಜ್ಞಾಸಾ ಎಂಬಲ್ಲಿ ಕರ್ತೃಕರ್ಮಣೋಃ ಕೃತಿ ಎಂಬ ಸೂತ್ರದಿಂದ ಷಷ್ಠೀವಿಭಕ್ತಿಯು ಕೃದಂತಪದಯೋಗನಿಮಿತ್ತವಾಗಿ ಬಂದಿರುವ ಪ್ರಯುಕ್ತ ಇದೂ ಸಹ ಪ್ರತಿಪದವಿಧಾನಾ ಷಷ್ಠೀ ಆಗಿರುವುದರಿಂದ ಬ್ರಹ್ಮಣಃ+ಜಿಜ್ಞಾಸಾ = ಬ್ರಹ್ಮಜಿಜ್ಞಾಸಾ ಎಂಬುದಾಗಿ ಸಮಾಸವು ನಿಷಿದ್ಧವಾಗಿರುವಾಗ ಹೇಗೆ ಸಮಾಸವನ್ನು ಹೇಳುತ್ತೀರೆಂಬ ಆಕ್ಷೇಪಕ್ಕೆ ಉತ್ತರವಾಗಿ ಈ ಸಮಾಸದ ಸಾಧುತ್ವಾರ್ಥವಾಗಿ ಹೇಗೆ ಸಮಾಸವನ್ನು ಹೇಳುತ್ತೀರೆಂಬ ಆಕ್ಷೇಪಕ್ಕೆ ಉತ್ತರವಾಗಿ ಈ ಸಮಾಸದ ಸಾಧುತ್ವಾರ್ಥವಾಗಿ ಶ್ರೀಗುರುರಾಜರು "ಕೃದ್ಯೋಗಲಕ್ಷಣಾ ಚ ಷಷ್ಠೀ ಸಮಸ್ಯತೆ" ಎಂಬ ವಾರ್ತಿಕವನ್ನು ಉದಾಹರಿಸಿ ಸಮಾಸದ ಸಾಧುತ್ವವನ್ನು ಸಮರ್ಥಿಸಿದ್ದಾರೆಂದು ಅಭಿಪ್ರಾಯ.

ಅಂದರೆ "ಪ್ರತಿಪದವಿಧಾನಾ" ಇತ್ಯಾದಿ ನಿಷೇಧಕ್ಕೆ ನಿಷೇಧರೂಪವಾಗಿ ಅಪವಾದಕ್ಕೆ ಅಪವಾದರೂಪವಾಗಿ, ಪ್ರತಿಪ್ರಸವವಾಗಿ "ಕೃದ್ಯೋಗಾ ಚ ಷಷ್ಠೀ" ಎಂದು ಹೇಳಿ ಸಮಾಸದ ಸಾಧುತ್ವವನ್ನು ತೋರಿಸಿರುವುದು ಅತಿ ಗಂಭೀರವಾದ ಅರ್ಥಗರ್ಭಿತವಾದ ವಾಕ್ಯವೆಂಬುದನ್ನು ಗಮನಿಸಬೇಕು.

**ತಂತ್ರದೀಪಿಕಾ :- ಕರ್ತುಃ ಅನುಪಾದಾನಾತ್ ನ ಉಭಯಪ್ರಾಪ್ತೌ ಕರ್ಮಣೀತಿ (ಪಾ. ಸೂ. ೨-೩-೬೬) ಷಷ್ಠೀ.**

**ಅರ್ಥ :-** ಕರ್ತುಃ = ಕರ್ತುವಿಗೆ (ಕರ್ತುವಿನ), ಅನುಪಾದಾನಾತ್ = ಉಪಾದಾನವಿಲ್ಲದಿರುವುದರಿಂದ (ಸ್ವೀಕಾರವು ಇಲ್ಲದಿರುವ ಪ್ರಯುಕ್ತ) ಉಭಯಪ್ರಾಪ್ತೌ ಕರ್ಮಣಿ (ಪಾ. ಸೂ. ೨-೩-೬೬) ಉಭಯಪ್ರಾಪ್ತೌ ಕರ್ಮಣಿ ಎಂಬ ಪಾಣಿನಿಯ ಸೂತ್ರದಲ್ಲಿ ಹೇಳಿರುವಂತೆ, ಷಷ್ಠೀ = ಷಷ್ಠೀ ವಿಭಕ್ತಿಯು ನ = ಇಲ್ಲ.

ಪಾಣಿನಿಯ ಸೂತ್ರದ ಅರ್ಥವು ಹೀಗಿದೆ.

ಉಭಯೋಃ ಪ್ರಾಪ್ತಿಃ ಯಸ್ಮಿನ್ಕೃತಿ ತತ್ರ ಕರ್ಮಣ್ಯೇವ ಷಷ್ಠೀಸ್ಯಾತ್॥

**ಉದಾ :-** ಆಶ್ಚರ್ಯೋ ಗವಾಂ ದೋಹೋ ಅಗೋಪೇನ॥

**ಅರ್ಥವಿವರಣೆ :-** ಯಸ್ಮಿನ್ಕೃತಿ ಉಭಯೋಃ = ಕರ್ತೃಕರ್ಮಣೋಃ ಷಷ್ಠೀ ಪ್ರಸಕ್ತೌ, ಕರ್ಮಣ್ಯೇವ ಷಷ್ಠೀಸ್ಯಾತ್ ನ ತು ಕರ್ತರೀತಿ ಯಾವತ್॥

**ಉದಾ :-** ಅಗೋಪಕರ್ತೃಕಃ ಗೋಕರ್ಮಕಃ ದೋಹಃ ಸಃ ಅದ್ಭುತ ಇತ್ಯರ್ಥಃ॥ ಇತಿ॥

**ತಾತ್ಪರ್ಯ :-** ಒಂದೇ ಕೃತಿಯಲ್ಲಿ ಅಥವಾ ವಿಷಯದಲ್ಲಿ, ಎಲ್ಲಿ ಕರ್ತೃವಿಗೂ ಕರ್ಮಕ್ಕೂ ಎರಡಕ್ಕೂ ಷಷ್ಠೀ ವಿಭಕ್ತಿಯ ಪ್ರಸಕ್ತಿಯು ಅಥವಾ ಪ್ರಾಪ್ತಿಯು ಇರುತ್ತದೆಯೋ, ಅಂತಹ ಕಡೆ ಕರ್ಮದಲ್ಲಿ ಮಾತ್ರ ಷಷ್ಠೀ ವಿಭಕ್ತಿಯು ಬರುತ್ತದೆಯೇ ಹೊರತು ಕರ್ತೃವಾಚಕ ಪದದ ಮುಂದೆ ಷಷ್ಠೀ ವಿಭಕ್ತಿಯು ಬರುವುದಿಲ್ಲ.

**ತಂತ್ರದೀಪಿಕಾ ಅಭಿಪ್ರಾಯ** :- ಬ್ರಹ್ಮಣೋ ಜಿಜ್ಞಾಸಾ = ಬ್ರಹ್ಮಜಿಜ್ಞಾಸಾ ಎಂಬಲ್ಲಿ ಬ್ರಹ್ಮಣಃ ಎಂಬ ಕಡೆ ಬಂದಿರತಕ್ಕ ಷಷ್ಠೀ ವಿಭಕ್ತಿಯು ಕರ್ತೃಕರ್ಮಣೋಃ ಕೃತಿ (ಪಾ. ಸೂ. ೨ - ೩- ೬೫) ಎಂಬ ಸೂತ್ರದಿಂದ ಬಂದಿವೆಯೇ ಹೊರತು, ಉಭಯಪ್ರಾಪ್ತೌಕರ್ಮಣಿ (ಪಾ. ಸೂ. ೨ - ೩- ೬೬) ಎಂಬ ಸೂತ್ರದಿಂದ ಬಂದಿಲ್ಲ. ಬ್ರಹ್ಮಜಿಜ್ಞಾಸಾ ಎಂಬಲ್ಲಿ ಬ್ರಹ್ಮರೂಪವಾದ ಕರ್ಮಕ್ಕೆ ಪ್ರಸಕ್ತಿ ಇದ್ದಾಗ್ಯೂ ಕರ್ತೃವಿಗೆ ಇಲ್ಲಿ ಷಷ್ಠೀ ಪ್ರಸಕ್ತಿಯೇ ಇಲ್ಲವಾದ ಪ್ರಯುಕ್ತ, ಉಭಯಪ್ರಾಪ್ತಿ ಇಲ್ಲವಾದ್ದರಿಂದ ಉಭಯಪ್ರಾಪ್ತೌ ಕರ್ಮಣಿ ಎಂಬ ಸೂತ್ರದಿಂದ ಕರ್ಮವಾಚಕವಾದ ಬ್ರಹ್ಮಪದದ ಮುಂದೆ ಷಷ್ಠೀ ವಿಭಕ್ತಿಯು ಆ ಸೂತ್ರದಿಂದ ಬಂದಿಲ್ಲವೆಂದು ಅಭಿಪ್ರಾಯ. ಇಲ್ಲಿ ಬ್ರಹ್ಮ ಎಂಬ ಕರ್ಮಕ್ಕೆ ಉಪಾದಾನವಿದ್ದಾಗ್ಯೂ ಕರ್ತೃವಿಗೆ ಉಪಾದಾನವಿಲ್ಲವಾದ ಪ್ರಯುಕ್ತ ಉಭಯಪ್ರಾಪ್ತಿಯು ಇಲ್ಲವೆಂದು ತಾತ್ಪರ್ಯ.

ಬ್ರಹ್ಮಜಿಜ್ಞಾಸಾ ಎಂಬಲ್ಲಿಯೂ ಕೂಡ, ಅಥಾತೋ ಬ್ರಹ್ಮಜಿಜ್ಞಾಸಾ ಎಂಬ ಸೂತ್ರಾರ್ಥವನ್ನು ನಿರ್ವಚನ ಮಾಡುವಾಗ, ಅಥಶಬ್ದದ, ಅಥಶಬ್ದೋ "ಮಂಗಳಾರ್ಥೋ, ಅಧಿಕಾರಾನಂತರ್ಯಾರ್ಥಶ್ಚ" ಎಂಬ ಭಾಷ್ಯವಾಕ್ಯದ ಪ್ರಕಾರ ಅಧಿಕಾರಿ ಲಾಭವಿರುವ ಪ್ರಯುಕ್ತ, ಕಥಂಚಿತ್ ಅಧಿಕಾರಿರೂಪನಾದ ಕರ್ತೃವಿಗೆ ಪ್ರಾಪ್ತಿಯು ಇದೆಯಲ್ಲಾ ಎಂಬ ಶಂಕೆಯು ಉಂಟಾಗುತ್ತದೆ. ಆದರೆ ಇಲ್ಲಿ "ಸ್ತ್ರೀ ಪ್ರತ್ಯಯಯೋಃ ಅಕಾಕಾರಯೋಃ ಪ್ರಯೋಗೇ (ನಾಯಂ ನಿಯಮ) ನೇತಿವಕ್ತವ್ಯಮ್" (ವಾರ್ತಿಕ ೧೫೧೩) "ಸ್ತ್ರಿಯಾಂಕ್ತಿನ್" ಇತ್ಯಧಿಕಾರವಿಹಿತಯೋಃ ಅಕಾಕಾರ ಪ್ರತ್ಯಯಯೋಃ ಕೃತೋಃ ಪ್ರಯೋಗೇ ಕರ್ಮಣ್ಯೇವೇತಿ ಉಕ್ತನಿಯಮೋನಾಸ್ತೀತ್ಯರ್ಥಃ "ಕರ್ತರ್ಯಪಿಷಷ್ಠೀಭವತೀತಿ ಫಲಿತಮ್" ಉದಾ :- ಭೇದಿಕಾ, ಬುಭುತ್ಸಾವಾ ರುದ್ರಸ್ಯಜಗತಃ" ಎಂಬ ವಾರ್ತಿಕದಂತೆ ಬ್ರಹ್ಮಜಿಜ್ಞಾಸಾ ಎಂಬಲ್ಲಿರುವ ಜಿಜ್ಞಾಸಾ ಶಬ್ದವು "ಅಪ್ರತ್ಯಯಾತ್ (ಪಾ. ಸೂ.) ಎಂಬ ಸೂತ್ರದಿಂದ ವಿಹಿತವಾದ ಅಕಾರ ಪ್ರತ್ಯಯಾಂತವಾಗಿರುವುದರಿಂದ ಇಲ್ಲಿ ಕರ್ತೃಕರ್ಮಣೋಃಕೃತಿ ಎಂಬ ಸೂತ್ರದಿಂದ ಮಾತ್ರ ಷಷ್ಠೀ ಬಂದಿದೆಯೇ ಹೊರತು ಉಭಯ ಪ್ರಾಪ್ತೌ ಕರ್ಮಣಿ ಎಂಬ ಸೂತ್ರದಿಂದ ಬ್ರಹ್ಮಣಃ ಎಂಬಲ್ಲಿ ಕರ್ಮಾರ್ಥಕವಾದ ಷಷ್ಠೀ ವಿಭಕ್ತಿಯು ಬಂದಿಲ್ಲ. ಎಂದು ಪರಮಾಭಿಪ್ರಾಯ.

**ತಂತ್ರದೀಪಿಕಾ** :- ತೇನಕರ್ಮಣಿ ಚ ಇತಿ (ಪಾಣಿನಿ. ಸೂ. ೨-೨-೧೪) ನ ನಿಷೇಧಃ"

**ಅರ್ಥ** :- ತೇನ = ಉಭಯಪ್ರಾಪ್ತೌ ಕರ್ಮಣಿ ಎಂಬ ಸೂತ್ರದಿಂದ ಬ್ರಹ್ಮಣಃ ಜಿಜ್ಞಾಸಾ ಎಂಬಲ್ಲಿ ಬ್ರಹ್ಮಪದದ ಮುಂದೆ ಷಷ್ಠೀ ವಿಭಕ್ತಿಯು ಬಂದಿಲ್ಲಾವಾದ ಕಾರಣದಿಂದ, ಕರ್ಮಣಿ ಚ ಎಂಬ ಸೂತ್ರದಿಂದ ನ ನಿಷೇಧಃ = ಷಷ್ಠ್ಯಂತವಾದ ಬ್ರಹ್ಮಣಃ ಎಂಬ ಪದಕ್ಕೆ ಮುಂದಿನ ಪದವಾದ ಜಿಜ್ಞಾಸಾಪದದಿಂದ ಸಮಾಸ ನಿಷೇಧವು ಇರುವುದಿಲ್ಲ.

**ತಾತ್ಪರ್ಯ** :- ಕರ್ಮಣಿ ಚ (ಪಾ. ಸೂ. ೨-೨-೧೪) ಉಭಯಪ್ರಾಪ್ತೌ ಕರ್ಮಣಿ (ಸೂ. ೨-೩-೬೬) ಇತಿ ಯಾ ಷಷ್ಠೀ ಸಾನ ಸಮಸ್ಯತೇ।

**ಉದಾ** :- ಆಶ್ಚರ್ಯೋ ಗವಾಂ ದೋಹೋ ಅಗೋಪೇನ.

**ಅಭಿಪ್ರಾಯ** :- ಉಭಯಪ್ರಾಪ್ತೌ ಕರ್ಮಣಿ ಎಂಬ ಸೂತ್ರದಿಂದ ಯಾವ ಕರ್ಮವಾಚಕವಾದ ಪದದ ಮುಂದೆ ಷಷ್ಠೀವಿಭಕ್ತಿಯು ಬಂದಿರುವುದೋ ಅಂತಹ ಕರ್ಮವಾಚಕವಾದ ಪದವು ಮುಂದಿನ ಪದದೊಡನೆ ಸಮಾಸವನ್ನು ಹೊಂದುವುದಿಲ್ಲ. ಉದಾಹರಣೆಯಾದ ಆಶ್ಚರ್ಯೋ ಗವಾಂ ದೋಹೋ ಅಗೋಪೇನ ಎಂಬಲ್ಲಿ ಕರ್ತೃವಾಚಕವಾದ ಪದ ಗೋಪದ ಇಲ್ಲಿ ಕರ್ತೃ ಮತ್ತು ಕರ್ಮ ಎರಡು ವಾಚಕಗಳಾದ ಪದಗಳಿರುವ ಪ್ರಯುಕ್ತ ಆ ಎರಡೂ ಪದಗಳ ಮುಂದೆ ಕರ್ತೃ ಕರ್ಮಣೋಃ ಕೃತಿ ಎಂಬ ಸೂತ್ರದಿಂದ ಎರಡೂ ಕಡೆ ಷಷ್ಠೀ ಪ್ರಸಕ್ತಿ ಇರುವುದರಿಂದ ಉಭಯಪ್ರಾಪ್ತೌಕರ್ಮಣಿ ಎಂಬ ಸೂತ್ರವು ಕರ್ಮ ಮಾತ್ರದಲ್ಲಿ ಷಷ್ಠೀ ವಿಭಕ್ತಿಯನ್ನು ವಿಧಿಸುತ್ತಲಿದೆ.

ಅಂತಹ ಕಡೆ ಮಾತ್ರ ಕರ್ಮಣಿ ಚ ಎಂಬುದರಿಂದ ಷಷ್ಠೀ ಸಮಾಸಕ್ಕೆ ನಿಷೇಧವು ಇರುತ್ತದೆ. ಗವಾಂ ದೋಹಃಎಂದು ಹೇಳಬೇಕೇ ಹೊರತು ಗೋದೋಹ ಎಂದು ಸಮಾಸವನ್ನು ಹೇಳಕೂಡದೆಂದು ಅಭಿಪ್ರಾಯ.

ಬ್ರಹ್ಮಜಿಜ್ಞಾಸಾ ಎಂಬಲ್ಲಿ ಬ್ರಹ್ಮಣಃ + ಜಿಜ್ಞಾಸಾ = ಬ್ರಹ್ಮಜಿಜ್ಞಾಸಾ ಎಂದು ಷಷ್ಠೀಸಮಾಸಕ್ಕೆ ಯಾವ ಬಾಧಕವೂ ಇರುವುದಿಲ್ಲವೆಂದು ಅಭಿಪ್ರಾಯ.

''ಯದ್ಯಪಿ ಆಶ್ಚರ್ಯೋ ಗವಾಂ ದೋಹೋ ಅಗೋಪೇನ'' ಎಂಬ ಉದಾಹರಣೆಯ ಸ್ಥಳದಲ್ಲೂ, ಸಹ ಕರ್ತೃ ಕರ್ಮಣೋಃ ಕೃತಿ ಎಂಬ ಸೂತ್ರದಿಂದಲೇ ಷಷ್ಠೀ ವಿಭಕ್ತಿಯ ಪ್ರಾಪ್ತಿಗೆ ಅವಕಾಶವಿದೆ. ಉಭಯಪ್ರಾಪ್ತೌ ಕರ್ಮಣಿ ಎಂಬ ಸೂತ್ರದಿಂದ ಕರ್ಮಣಿ ಷಷ್ಠೀ ಬಂದಿಲ್ಲವೆಂದೇ ಹೇಳಬಹುದು.

ಆದರೆ ಉಭಯಪ್ರಾಪ್ತೌ ಕರ್ಮಣಿ ಎಂಬ ಸೂತ್ರವು ಕರ್ಮದಲ್ಲಿ ಮಾತ್ರ ಷಷ್ಠೀ ಬರುತ್ತದೆ. ಕರ್ತರಿಬರುವುದಿಲ್ಲ ಎಂದು ನಿಯಮ ಪರವಾಗಿದೆ. ಸೂತ್ರಗಳಾದರೋ ಕೆಲವು ನಿಯಮಪರವಾಗಿಯೂ ಇವೆ. ಮತ್ತೆ ಕೆಲವು ನಿಷೇಧ ರೂಪವಾಗಿಯೂ ಇವೆ. ಈ ರೀತಿ ಎರಡು ವಿಧವಾಗಿ ಸೂತ್ರಗಳಿಗೆ ಪ್ರವೃತ್ತಿಯು ಇರುವ ಪ್ರಯುಕ್ತ ಯಾವ ದೋಷವೂ ಇಲ್ಲವೆಂದು ಅಭಿಪ್ರಾಯ.

ಅಂತೂ ಒಟ್ಟಿನಲ್ಲಿ ಕರ್ಮಣಿ ಚ ಎಂಬ ಸೂತ್ರದಿಂದ ನಿಷೇಧಿಸಲ್ಪಟ್ಟ ಸಮಾಸವು ಉಭಯಪ್ರಾಪ್ತೌ ಕರ್ಮಣಿ ಎಂಬ ಸೂತ್ರದಿಂದ ವಿಹಿತವಾದ ಷಷ್ಠೀವಿಭಕ್ತಿಗೆ ಸಂಬಂಧಪಟ್ಟದ್ದೇ ಹೊರತು ಕರ್ತೃಕರ್ಮಣೋಃ ಕೃತಿ ಎಂಬ ಸೂತ್ರದಿಂದ ವಿಹಿತವಾದ ಷಷ್ಠೀಗೆ ಸಂಬಂಧಿಸಿದ್ದಲ್ಲವೆಂದು ಪರಮಾಭಿಪ್ರಾಯ.

**ತಂತ್ರದೀಪಿಕಾ** :- ಪೂರ್ವೇಣ ಅಧ್ಯಾಯದ್ವಯೇನ, ಬ್ರಹ್ಮಶಬ್ದಾರ್ಥಸ್ಯ, ಉತ್ತರೇಣ ಚ, ಸಾಧನಫಲಯೋಃ ಉಪಪಾದನಾತ್, ಬ್ರಹ್ಮಣಃ - ಅಥ - ಜಿಜ್ಞಾಸಾ, ಅತಃ ಇತಿವಾಚ್ಯೇ ಅಥಾತ ಇತ್ಯಾದಿ ಅಥಾತಃ ಶಬ್ದಯೋಃ ಸ್ವರೂಪತಃ, ಅರ್ಥತಶ್ಚ ಆಧಿಕ್ಯಾದಿತಿ ಸೂಚನಾಯ ।।

**ಅರ್ಥ**:- ಪೂರ್ವೇಣ = ಮೊದಲನೆಯ. ಅಧ್ಯಾಯದ್ವಯೇನ = ಎರಡು ಅಧ್ಯಾಯಗಳಿಂದ (ಮೊದಲನೆಯದಾದ ಸಮನ್ವಯಾಧ್ಯಾಯದಿಂದ, ಎರಡನೆಯದಾದ ಅವಿರೋಧಾಧ್ಯಾಯದಿಂದ), ಬ್ರಹ್ಮಶಬ್ದಾರ್ಥಸ್ಯ = ಬ್ರಹ್ಮಶಬ್ದದ ಅರ್ಥವಾದ ಗುಣಪರಿಪೂರ್ಣತ್ವರೂಪವಾದ ಅರ್ಥದ ಮತ್ತು ಸರ್ವೋತ್ತಮತ್ವರೂಪವಾದ ಅರ್ಥದ ಉತ್ತರೇಣ ಚ = ಮುಂದಿನ ಎರಡು ಅಧ್ಯಾಯಗಳಾದ, ಸಾಧನಾಧ್ಯಾಯದಿಂದ ಮತ್ತು ಫಲಾಧ್ಯಾಯದಿಂದ ಸಾಧನಫಲಯೋಃ = ಸಾಧನಾಗಳ ಮತ್ತು ಫಲಗಳ, ಉಪಪಾದನಾತ್ = ಉಪಪಾದನೆಯು ಅಂದರೆ ಪ್ರತಿಪಾದನೆಯು ಇರುವುದರಿಂದ, (ಪ್ರತಿಪಾದ್ಯವಾದ ಪ್ರಮೇಯದ ಕ್ರಮಕ್ಕೆ ತಕ್ಕಂತೆ) ಬ್ರಹ್ಮಣಃ - ಅಥ - ಜಿಜ್ಞಾಸಾ - ಅತಃ ಇತಿವಾಚ್ಯೇ = ಸೂತ್ರದಲ್ಲಿನ ಪದಗಳ ಕ್ರಮವನ್ನು ''ಬ್ರಹ್ಮಣೋಽಥ ಜಿಜ್ಞಾಸಾತಃ'' ಎಂದು ಹೇಳಬೇಕಾಗಿರುವಲ್ಲಿ, ''ಅಥಾತೋ ಬ್ರಹ್ಮಜಿಜ್ಞಾಸಾ'' ಎಂದು ಸೂತ್ರಕಾರರು ಅಥಾತಃ ಎಂಬ ಶಬ್ದಗಳಿಗೆ ಪ್ರಾಧಾನ್ಯವನ್ನು ತೋರಿಸಿ ಸೂತ್ರವನ್ನು ರಚಿಸಿರುವುದಕ್ಕೆ ಕಾರಣವೇನೆಂದರೆ,

**ಅಥಾತಃ ಶಬ್ದಯೋಃ** = ಅಥ ಎಂಬ ಶಬ್ದಕ್ಕು, ಅತಃ ಎಂಬ ಶಬ್ದಕ್ಕೂ ಒಟ್ಟಿನಲ್ಲಿ ಅಥಾತಃ ಎಂಬ ಎರಡು ಶಬ್ದಗಳಿಗೂ, ಓಂಕಾರವೊಂದನ್ನು ಬಿಟ್ಟು, ಮಿಕ್ಕ ಇತರ ಎಲ್ಲಾ ಶಬ್ದಗಳಿಗಿಂತಲೂ, ಸ್ವರೂಪತಃ = ಶಬ್ದದ

ಸ್ವರೂಪದಿಂದಲೂ, ಅರ್ಥತಶ್ಚ = ಅರ್ಥದ ದೆಶೆಯಿಂದಲೂ, ಆಧಿಕ್ಯಾದಿತಿ = ಉತ್ತಮಮತ್ತವು (ಆಧಿಕ್ಯವು) ಇರುವ ಕಾರಣದಿಂದ, ಇದನ್ನು ಸೂಚಿಸುವುದಕ್ಕಾಗಿಯೇ ಅಥಾತ ಇತ್ಯಾದಿ = ಅಥಾತೋ ಬ್ರಹ್ಮಜಿಜ್ಞಾಸಾ ಎಂದು ಅಥಾತಃ ಶಬ್ದಗಳ ಪೂರ್ವಕವಾಗಿ ಬ್ರಹ್ಮಸೂತ್ರವನ್ನು ಸೂತ್ರಕಾರರು ರಚಿಸಿರುತ್ತಾರೆ. (ಅಥಾತಃ ಶಬ್ದಯೋಃ = ಅಥ ಶಬ್ದಕ್ಕೂ, ಅತಃ ಎಂಬ ಶಬ್ದಕ್ಕೂ (ಈ ಎರಡೂ ಶಬ್ದಗಳಿಗೆ) ಪ್ರಾಧಾನ್ಯವನ್ನು (ತೋರಿಸಲಿಕ್ಕಾಗಿ) ಸೂಚಿಸುವುದಕ್ಕಾಗಿ ಈ ರೀತಿ ಸೂತ್ರವನ್ನು ರಚಿಸಿದ್ದಾರೆಂದು ಅಭಿಪ್ರಾಯ.

**ತಾತ್ಪರ್ಯ** :- ಬ್ರಹ್ಮಮೀಮಾಂಸಾ ಶಾಸ್ತ್ರದ ಮೊದಲನೆಯ ಸೂತ್ರದಲ್ಲಿರುವ ಪದಗಳ ಕ್ರಮದ ವಿಷಯದಲ್ಲಿ ಔಚಿತ್ಯವನ್ನು ಶಂಕಿಸಿ ತಂತ್ರದೀಪಿಕಾಕಾರರು ಸಮಾಧಾನವನ್ನು ಹೇಳಿದ್ದಾರೆ.

ಬ್ರಹ್ಮಮೀಮಾಂಸಾ ಶಾಸ್ತ್ರವು ನಾಲ್ಕು ಅಧ್ಯಾಯಗಳನ್ನು ಉಳ್ಳದ್ದಾಗಿದೆ. ಅದರಲ್ಲಿ ಸಮನ್ವಯಾಧ್ಯಾಯವು ಮೊದಲನೆಯದು. ಅವಿರೋಧಾಧ್ಯಾಯವು ಎರಡನೆಯದು. ಈ ಎರಡೂ ಅಧ್ಯಾಯಗಳಲ್ಲಿ ಬ್ರಹ್ಮಶಬ್ದದ ಅರ್ಥವಾದ ಗುಣಪರಿಪೂರ್ಣತ್ವವೂ, ನಿರ್ದೋಷತ್ವವೂ ಪ್ರತಿಪಾದಿಸಲ್ಪಟ್ಟವೆ. "ಪ್ರಬೃಂಹತೋಽಶೇಷದೋಷೈಃ ಸಂಪೂರ್ತಿತಃ" ಎಂಬಂತೆ ಗುಣಪೂರ್ಣತ್ವವು ಹೇಗೆ ಬ್ರಹ್ಮಶಬ್ದದ ಅರ್ಥವೋ ಹಾಗೆಯೇ ನಿರ್ದೋಷತ್ವವೂ ಬ್ರಹ್ಮಶಬ್ದದ ಅರ್ಥವೇ ಆಗಿದೆ. ಅಂತೂ ಮೊದಲನೆಯ ಎರಡು ಅಧ್ಯಾಯಗಳು ಬ್ರಹ್ಮಶಬ್ದದ ಅರ್ಥ ಪ್ರತಿಪಾದಕಗಳಾಗಿವೆ.

ಮೂರನೇ ಅಧ್ಯಾಯವು ಸಾಧನಾಧ್ಯಾಯವು ಇದೂ ಸಹ ೪ ಪಾದಗಳನ್ನುಳ್ಳದುದಾಗಿದೆ. ಇದರ ನಾಲ್ಕು ಪಾದಗಳಲ್ಲೂ ಕ್ರಮವಾಗಿ ವೈರಾಗ್ಯ, ಭಕ್ತಿ, ಉಪಾಸನಾ, ಅಪರೋಕ್ಷಜ್ಞಾನಗಳೆಂಬ ಸಾಧನಗಳು ಪ್ರತಿಪಾದಿತವಾಗಿವೆ. ಇವೆಲ್ಲವೂ ಅಥ ಶಬ್ದದ ಅರ್ಥವನ್ನೊಳಗೊಂಡಂತಾಗಿವೆ. ಜಿಜ್ಞಾಸಾಶಬ್ದದಿಂದ ಹೇಳಲ್ಪಟ್ಟಿರುವ ಶ್ರವಣಾದಿ ಸಾಧನಗಳು ಈ ಅಧ್ಯಾಯದ ಮೂರನೇ ಪಾದದಲ್ಲಿ ಉಕ್ತವಾಗಿದೆ. ಕಡೆಯದಾಗಿ ಫಲಾಧ್ಯಾಯದಲ್ಲಿ ಕರ್ಮಕ್ಷಯ, ಉತ್ಕ್ರಾಂತಿ, ಮಾರ್ಗ, ಭೋಗಗಳೆಂಬ ಫಲಗಳು ನಾಲ್ಕನೇ ಅಧ್ಯಾಯದಲ್ಲಿ ಪ್ರತಿಪಾದಿತವಾಗಿವೆ. ಇವೆಲ್ಲಾ ಪ್ರಯೋಜನ ಪ್ರತಿಪಾದಕವಾದ ಅತಃ ಎಂಬ ಶಬ್ದದ ಅರ್ಥದ ನಿರೂಪಣೆಯನ್ನೊಳಗೊಂಡಂತಿರುವುದಾಗಿದೆ.

ಅಂದರೆ ಕ್ರಮವಾಗಿ ನಾಲ್ಕು ಅಧ್ಯಾಯಗಳಲ್ಲಿ ಬ್ರಹ್ಮಶಬ್ದಾರ್ಥವನ್ನೂ, ಅಥ, ಜಿಜ್ಞಾಸಾ ಶಬ್ದಾರ್ಥಗಳನ್ನೂ, ಅತಃ ಪದಾರ್ಥವನ್ನೂ ಪ್ರತಿಪಾದಿಸಿರುವುದರಿಂದ ಪ್ರತಿಪಾದ್ಯವಾದ ಪ್ರಮೇಯಕ್ಕೆ ತಕ್ಕಂತೆ ಮೊದಲನೆಯ ಸೂತ್ರದ ಆನುಪೂರ್ವಿಯು "ಬ್ರಹ್ಮಾಥಜಿಜ್ಞಾಸಾತಃ" ಎಂದಿರಬೇಕಲ್ಲವೇ ಎಂದು ಆಕ್ಷೇಪಿಸುವವರ ಅಭಿಪ್ರಾಯವಾಗಿದೆ.

ಇದಕ್ಕೆ ಸಮಾಧಾನವು ಹೀಗಿದೆ:-

ವಸ್ತುಸ್ಥಿತಿಯು ಹೀಗಿದ್ದಾಗ್ಯೂ, ಸೂತ್ರಕಾರರು ಅಥಾತಃ ಶಬ್ದಗಳನ್ನು ಸೂತ್ರದಲ್ಲಿ ಮೊದಲು ಹೇಳಿರುವುದಕ್ಕೆ ಅಸಾಧಾರಣವಾದ ಕಾರಣವು ಉಂಟು. ಅದೇನೆಂದರೆ ಭಾಷ್ಯಕಾರರೇ ಸೂತ್ರಭಾಷ್ಯದಲ್ಲಿ ಅಥಾತಃ ಶಬ್ದಗಳಿಗಿರುವ ಸ್ವರೂಪತಃ ಅರ್ಥತಃ ಪ್ರಾಧಾನ್ಯವನ್ನು ಗಾರುಡ ಪುರಾಣದ ಪ್ರಮಾಣ ವಾಕ್ಯವನ್ನು ಉದಾಹರಿಸಿ ಸಮರ್ಥಿಸಿದ್ದಾರೆ.

ಆ ಗಾರುಡ ವಚನಗಳು ಯಾವುವೆಂದರೆ:-

ಚತುರ್ಮುಖ ಬ್ರಹ್ಮ ಮತ್ತು ನಾರದರ ಸಂವಾದ ರೂಪವಾಗಿರುವ ಗಾರುಡ ವಚನಗಳನ್ನು ಉದಾಹರಿಸಿ ಅವುಗಳ ಅರ್ಥವನ್ನು ನಿರೂಪಿಸಿದ್ದೇವೆ.

ಸೂತ್ರಭಾಷ್ಯ - ಉಕ್ತಂಚಗಾರುಡೇ:-

**"ಅಥಾತಃ ಶಬ್ದ ಪೂರ್ವಾಣಿ ಸೂತ್ರಾಣಿ ನಿಖಿಲಾನ್ಯಪಿ ।**
**ಪ್ರಾರಭಂತೆ ನಿಯತ್ಯೈವ ತತ್ಕಿಮತ್ರನಿಯಾಮಕಮ್ ॥**

**ಕಶ್ಚಾರ್ಥಶ್ಚ ತಯೋರ್ವಿದ್ವನ್ ಕಥಮುತ್ತಮತಾ ತಯೋಃ ।**
**ಏತದಾಖ್ಯಾಹಿ ಮೇ ಬ್ರಹ್ಮನ್ ಯಥಾ ಜ್ಞಾಸ್ಯಾಮಿ ತತ್ವತಃ ॥**

**ಏವಮುಕ್ತೋ ನಾರದೇನ ಬ್ರಹ್ಮಾ ಪ್ರೋವಾಚ ಸತ್ತಮಃ ।**
**ಆನಂತರ್ಯೇಽಧಿಕಾರಸ್ಯ ಮಂಗಳಾರ್ಥೇ ತಥೈವ ಚ ॥**

**ಅಥಶಬ್ದಸ್ತ್ವತಃಶಬ್ದೋ ಹೇತ್ವರ್ಥೇ ಸಮುದೀರಿತಃ ।**
**ಪರಸ್ಯ ಬ್ರಹ್ಮಣೋ ವಿಷ್ಣೋಃ ಪ್ರಸಾದಾದಿತಿವಾ ಭವೇತ್ ॥**

**ಸಹಿ ಸರ್ವಮನೋವೃತ್ತಿಪ್ರೇರಕಃ ಸಮುದಾಹೃತಃ ।**
**ಸಿಸೃಕ್ಷೋಃ ಪರಮಾದ್ವಿಷ್ಣೋಃ ಪ್ರಥಮಂ ದ್ವೌ ವಿನಿಸ್ಸೃತೌ ॥**

**ಓಂಕಾರಶ್ಚಾಥಶಬ್ದಶ್ಚ ತಸ್ಮಾತ್ ಪ್ರಾಥಮಿಕೌ ಕ್ರಮಾತ್ ।**
**ತದ್ಧೇತುತ್ವಂ ವದಂಶ್ಚಾಪಿ ತೃತೀಯೋಽತ ಉದಾಹೃತಃ ॥**

**ಅಕಾರಸ್ಸರ್ವವಾಗಾತ್ಮಾ ಪರಬ್ರಹ್ಮಾಭಿಧಾಯಕಃ ।**
**ತಥೌ ಪ್ರಾಣಾತ್ಮಕೌ ಪ್ರೋಕ್ತೌ ವ್ಯಾಪ್ತಿಸ್ಥಿತಿವಿಧಾಯಕೌ ॥**

**ಅತಶ್ಚ ಪೂರ್ವಮುಚ್ಚಾರ್ಯಾಃ ಸರ್ವ ಏತೇ ಸತಾಂ ಮತಾಃ ।**
**ಅಥಾತಃಶಬ್ದಯೋರೇವಂ ವೀರ್ಯಮಾಜ್ಞಾಯ ತತ್ವತಃ ॥**

**ಸೂತ್ರೇಷು ತು ಮಹಾಪ್ರಾಜ್ಞಾಃ ಪಾರೇವಾದೌ ಪ್ರಯುಂಜತೇ" ॥ ಇತಿ ॥**

**ಅರ್ಥ** :- ಹೇ ವಿದ್ವನ್ ಬ್ರಹ್ಮನ್ = ವಿಜ್ಞ ಜ್ಞಾನಿಯಾದ ಬ್ರಹ್ಮನೇ, (ಚತುರ್ಮುಖನೇ) ನಿಖಿಲಾನ್ಯಪಿ ಸೂತ್ರಾಣಿ = ವ್ಯಾಸ, ಜೈಮಿನಿ ಮೊದಲಾದವರಿಂದ ರಚಿತಗಳಾಗಿರುವ ಎಲ್ಲಾ ಮೊಟ್ಟಮೊದಲನೆಯ ಸೂತ್ರಗಳನ್ನೂ, ನಿಯತ್ಯೈವ = ನಿಯಮೇನ, ಕಲ್ಪಾಂತರದಲ್ಲೂ ಕೂಡ, ಅಥಾತಃ ಶಬ್ದಪೂರ್ವಾಣ್ಯೇವ = ಅಥಾತೋ ಬ್ರಹ್ಮಜಿಜ್ಞಾಸಾ ಎಂದೂ, ಅಥಾತೋ ಧರ್ಮಜಿಜ್ಞಾಸಾ ಅಥಾತೋ ದೈವೀಮೀಮಾಂಸಾ ಎಂದೂ, ಅಥಾತಃ ಶಬ್ದ ಪೂರ್ವಕವಾಗಿಯೇ, ಪ್ರಾರಭಂತೆ = (ಸೂತ್ರಕಾರರು) ಪ್ರಾರಂಭ ಮಾಡುತ್ತಾರೆ.

ಅತ್ರ = ಈ ರೀತಿ ಮೊದಲು ಅಥಾತಃ ಶಬ್ದ ಪೂರ್ವಕವಾಗಿ ಪ್ರಯೋಗಿಸಿರುವ ವಿಷಯದಲ್ಲಿ, ಕಿಂ ನಿಯಾಮಕಮ್ = ಏನು ನಿಯಾಮಕವು, (ಪ್ರಥಮ ಪ್ರಯೋಗದಲ್ಲಿ ಯಾವುದೋ ಒಂದು ನಿಯಾಮಕವಿರಲೇಬೇಕು. ಅಂತಹ ನಿಯಾಮಕವು ಯಾವುದು ?) ಮೊದಲು ಆ ಎರಡು ಶಬ್ದಗಳನ್ನು ಪ್ರಯೋಗಿಸಲು ನಿಯಾಮಕವಾದುದು ಎರಡು ಬಗೆಯಾಗಿದೆ.

ಅವಶ್ಯವಕ್ತವ್ಯವಾದ ಅರ್ಥ ವಿರುಕೆಯು ಮತ್ತು ಆಧಿಕ್ಯವು. ಆ ಆಧಿಕ್ಯವೂ ಸಹ ಸ್ವರೂಪದಿಂದ ಆಧಿಕ್ಯವು, ಅರ್ಥದಿಂದ ಆಧಿಕ್ಯವೆಂದು ಎರಡು ಬಗೆಯಾಗಿದೆ.

ಈ ಪೈಕಿ ಮೊದಲನೆಯದಾದ ಅವಶ್ಯವಕ್ತವ್ಯಾರ್ಥತ್ವದ ವಿಷಯವಾಗಿ ನಾರದರು ಪ್ರಶ್ನೆ ಮಾಡುತ್ತಾರೆ.

ಹೇ ವಿದ್ವನ್ = ಎಲೈ ಜ್ಞಾನಿಯಾದ ಚತುರ್ಮುಖನೇ ! ತಯೋಃ = ಆ ಅಥ ಶಬ್ದಕ್ಕೂ, ಅತಃ ಎಂಬ ಶಬ್ದಕ್ಕೂ, ಕಃ ಅರ್ಥಃ = ಪ್ರಾಥಮ್ಯಕ್ಕೆ, ನಿಯಾಮಕವಾದ ಅವಶ್ಯವಕ್ತವ್ಯವಾದ ಯಾವ ಅರ್ಥವು ಉಂಟೋ, ಅಂತಹ ಅವಶ್ಯವಕ್ತವ್ಯವಾದ ಅರ್ಥವು ಯಾವುದು ? ಎಂದು ಪ್ರಶ್ನೆ ಮಾಡಿದ್ದಾರೆ. ಎರಡನೆಯದಾಗಿ ಶಬ್ದಾಂತರಕ್ಕೆ ಸ್ವರೂಪದಿಂದ ಉತ್ತಮತ್ವವು ಎಲ್ಲೂ ಕಂಡುಬಂದಿಲ್ಲವಾದ ಕಾರಣದಿಂದ, ಕಥಮುತ್ತಮತಾ ತಯೋಃ, ಎಂದು ಆ ಸ್ವರೂಪೋತ್ತಮತ್ವ ವಿಷಯದಲ್ಲಿ ನಾರದರು ಆಕ್ಷೇಪಿಸಿದ್ದಾರೆ.

ಮೂರರನೆಯದಾಗಿ ಅರ್ಥತಃ ಆಧಿಕ್ಯದ ವಿಷಯವಾಗಿ ಮತ್ತೆ ಪ್ರಶ್ನೆ ಮಾಡಿದ್ದಾರೆ. ಕಥಮುತ್ತಮತಾ ತಯೋಃ = ಆ ಅಥ ಮತ್ತು ಅತಃ ಎಂಬ ಶಬ್ದಗಳಿಗೆ ಅರ್ಥದಿಂದ ಆಧಿಕ್ಯವು ಹೇಗೆ ?

ಈ ನಾರದ ವಾಕ್ಯದಲ್ಲಿ ಮೂರು ಅಂಶಗಳಿವೆ:

ಮೊದಲನೆಯದಾಗಿ ಪ್ರಥಮ ಪ್ರಯೋಗದ ವಿಷಯದಲ್ಲಿ ನಿಯಾಮಕವಾದ ಅವಶ್ಯವಕ್ತವ್ಯಾರ್ಥದ ಬಗ್ಗೆ ಕಸ್ಯಾರ್ಥಃ ಎಂದು ಒಂದು ಪ್ರಶ್ನೆ.

ಎರಡನೆಯದಾಗಿ ಪ್ರಾಧಾನ್ಯ = ಆಧಿಕ್ಯ ಪ್ರಯೋಜಕವಾದ ಸ್ವರೂಪೋತ್ತಮತ್ವ ವಿಚಾರವಾಗಿ ಆಕ್ಷೇಪ.

ಮೂರನೆಯದಾಗಿ ಅರ್ಥತಃ ಆಧಿಕ್ಯದ ವಿಚಾರವಾಗಿ ಕಥಮುತ್ತಮತಾತಯೋಃ ಎಂದು ಮತ್ತೆ ಪ್ರಶ್ನೆ.

ಅಂತೂ ಕಥಮುತ್ತಮತಾ ತಯೋಃ ಎಂಬ ನಾರದವಾಕ್ಯಕ್ಕೆ ಆಕ್ಷೇಪ ಪರವಾಗಿಯೂ, ಪ್ರಶ್ನೆಪರವಾಗಿಯೂ ಅರ್ಥ ಮಾಡಬೇಕೆಂದು ತತ್ವಪ್ರಕಾಶಿಕಾಕಾರರು ವಿವೇಚನ ಮಾಡಿ ತತ್ರಾದಿವಾಕ್ಯೆ ಪ್ರಥಮ ಎಂದೂ, ದ್ವಿತೀಯವಾಕ್ಯೆಪತಿ ಎಂದೂ ತೃತೀಯೇಕಥಮಿತ್ಯಸ್ಯ ಎಂದೂ ಅರ್ಥ ವಿವರಣೆಯನ್ನು ತೋರಿಸಿರುತ್ತಾರೆ. ಭಾಷ್ಯದಲ್ಲಿ ಕಥಮುತ್ತಮತಾ ತಯೋಃ ಎಂಬಲ್ಲಿರುವ ಕಥಂ ಎಂಬ ಶಬ್ದಕ್ಕೆ, ಆಕ್ಷೇಪಾರ್ಥತ್ವವೂ ಪ್ರಶ್ನಾರ್ಥತ್ವವೂ ಉಂಟೆಂಬ ಅಭಿಪ್ರಾಯವು ತತ್ವಪ್ರಕಾಶಿಕಾ ವಿವರಣೆಯಿಂದ ತಿಳಿದು ಬರುತ್ತದೆ.

ಈ ರೀತಿಯಾಗಿ ಮೊದಲನೆಯದಾಗಿ ಅವಶ್ಯವಕ್ತವ್ಯಾರ್ಥವು ಮತ್ತು ಮೂರನೆಯದಾಗಿ ವಿವಕ್ಷಿತವಾಗಿರುವ ಅರ್ಥತಃ ಆಧಿಕ್ಯವು ಲೋಕದಲ್ಲಿ ಬೇರೆ ಶಬ್ದಗಳಲ್ಲಿ ಕೆಲವು ಕಡೆ ಕಂಡು ಬಂದಿದೆ. ಮತ್ತೆ ಕೆಲವು ಕಡೆ ಕಂಡುಬಂದಿಲ್ಲವಾದ್ದರಿಂದ ಪ್ರಥಮ ಮತ್ತು ತೃತೀಯ ಪಕ್ಷಗಳಲ್ಲಿ ನಾರದರು ಪ್ರಶ್ನೆ ಮಾಡಿರುತ್ತಾರೆ.

ಎರಡನೇ ಪಕ್ಷವಾದ ಸ್ವರೂಪಾಧಿಕ್ಯವನ್ನು ಪರಿಶೀಲಿಸಿದಾಗ, ಲೋಕದಲ್ಲಿ ಬೇರೆ ಎಲ್ಲೂ ಸ್ವರೂಪಾಧಿಕ್ಯವು ಕಂಡು ಬಂದೇ ಇರುವ ಪ್ರಯುಕ್ತ ಕಥಮುತ್ತಮತಾ ತಯೋಃ ಎಂದು ಕಥಂ ಎಂಬ ಶಬ್ದಕ್ಕೆ ಆಕ್ಷೇಪಾರ್ಥತ್ವವನ್ನು ಇಟ್ಟುಕೊಂಡು ಆಕ್ಷೇಪಿಸಿರುವರು.

ಈ ರೀತಿಯಾದ ನಾರದರ ಪ್ರಶ್ನೆಗೆ ಮತ್ತು ಆಕ್ಷೇಪಕ್ಕೆ ಚತುರ್ಮುಖ ಬ್ರಹ್ಮನು ಉತ್ತರವನ್ನಿತ್ತಿದ್ದಾನೆ.

**ಅರ್ಥ** :- ಹೇ ಬ್ರಹ್ಮನ್ = ಎಲೈ ಬ್ರಹ್ಮನೇ, ಏತತ್ = ನನ್ನ ಎರಡು ಪ್ರಶ್ನೆಗಳಿಗೂ ಒಂದು ಆಕ್ಷೇಪಕ್ಕೂ ವಿಷಯವಾದ ನಿಯಾಮಕವನ್ನು, ಅಹಂ = ನಾನು, ತತ್ವತಃ = ಯಥಾರ್ಥವಾಗಿ, ಯಥಾ ಜ್ಞಾಸ್ಯಾಮಿ = ಹೇಗೆ ತಿಳಿಯುತ್ತೇನೆಯೋ (ತಥಾ = ಹಾಗೆ) ಮೇ = ನನಗೆ, ಆಖ್ಯಾಹಿ = ಹೇಳು, ಏವಂ = ಈ ರೀತಿಯಾಗಿ, ನಾರದೇನ ಉಕ್ತಃ = ನಾರದರಿಂದ ಪ್ರಶ್ನೆ ಮಾಡಲ್ಪಟ್ಟ ಮತ್ತು ಆಕ್ಷೇಪಿಸಲ್ಪಟ್ಟವರಾದ, ಸತ್ತಮಃ = ಜೀವೋತ್ತಮರಾದ, ಬ್ರಹ್ಮಾ = ಚತುರ್ಮುಖ ಬ್ರಹ್ಮನು, ಪ್ರೋವಾಚ = ಪ್ರತ್ಯುತ್ತರವನ್ನು ಹೇಳಿದನು.

ಅಥ ಶಬ್ದಕ್ಕೂ, ಅತಃ ಎಂಬ ಶಬ್ದಕ್ಕೂ ಅವಶ್ಯವಕ್ತವ್ಯಾರ್ಥತ್ವವನ್ನು ತೋರಿಸುತ್ತಾರೆ.

**ಅಥಶಬ್ದಃ** = ಸೂತ್ರದ ಪ್ರಾರಂಭದಲ್ಲಿರುವ ಅಥ ಶಬ್ದವು, ಅಧಿಕಾರಸ್ಯ ಆನಂತರ್ಯೇ = ಅಧಿಕಾರ ನಿರೂಪಿತವಾದ ಆನಂತರ್ಯರೂಪವಾದ ಅರ್ಥದಲ್ಲಿ, ಅಧಿಕಾರಾನಂತರಂ, ಎಂಬ ಅರ್ಥವನ್ನು ಹೇಳತಕ್ಕದ್ದಾಗಿದೆಯೆಂಬ ಅಭಿಪ್ರಾಯದಿಂದಲೇ, (ಸೂತ್ರಕಾರರಿಂದ) ಸಮುದಾಹೃತಃ = ಪ್ರಯುಕ್ತವಾಗಿದೆ. (ಮಂಗಳವಾಚಕವಾಗಿ ಉಕ್ತವಾಗಿಲ್ಲವೆಂದು ಅಭಿಪ್ರಾಯ.)

ಅವಶ್ಯ ವಕ್ತವ್ಯ ಪ್ರಯೋಜನಕವಾಗಿರುವುದರಿಂದಲೂ ಸಹ ಮೊದಲು ಅಥ ಎಂಬ ಶಬ್ದವು ಪ್ರಯೋಗಿಸಲ್ಪಟ್ಟಿದೆ ಎಂಬ ಅಭಿಪ್ರಾಯದಿಂದ ಮಂಗಳಾರ್ಥೇ ತಥೈವ ಚ ಎಂದು ಬ್ರಹ್ಮನು ಉತ್ತರವನ್ನಿತ್ತಿದ್ದಾನೆ.

ಮಂಗಳಾರ್ಥೇ ಎಂಬಲ್ಲಿರುವ ಅರ್ಥ ಶಬ್ದವು ಪ್ರಯೋಜನವಾಚಿಯಾಗಿದೆ. ಮಂಗಳರೂಪವಾದ ಪ್ರಯೋಜನಕ್ಕಾಗಿಯೂ ಕೂಡ ಸೂತ್ರಕಾರರು ಅಥ ಶಬ್ದವನ್ನು ಮೊದಲು ಪ್ರಯೋಗಿಸಿರುವರು ಎಂದು ಅಭಿಪ್ರಾಯ.

ಹೀಗೆ ಅಥ ಎಂಬ ಶಬ್ದಕ್ಕೆ ಅವಶ್ಯವಕ್ತವ್ಯವಾದ ಅರ್ಥವುಳ್ಳತನ ಎಂಬ ಪ್ರಥಮ ಪ್ರಯೋಗಕ್ಕೆ ನಿಯಾಮಕವಾದುದನ್ನು ತೋರಿಸಿದ ತರುವಾಯ ಅಂತಹ ನಿಯಾಮಕವನ್ನು ಅತಃ ಎಂಬ ಶಬ್ದಕ್ಕೂ ತೋರಿಸುವ ಅಭಿಪ್ರಾಯದಿಂದ ''ಅತಃ ಶಬ್ದೋ ಹೇತ್ವರ್ಥೇ ಸಮುದೀರಿತಃ'' ಎಂದು ಉತ್ತರವನ್ನು ಇತ್ತಿದ್ದಾನೆ. ಹೇತುಃ, ಲಿಂಗಂ, ಕಾರಣಂ, ಸ ಚಾಸೌ ಅರ್ಥಶ್ಚ ಅಭಿಧೇಯಶ್ಚ ತಸ್ಮಿನ್ ತದ್ವಿಷಯೇ ತದ್ವಾಚಕತಯಾ ಸೂತ್ರಕೃದ್ಭಿಃ ಸಮುದೀರಿತ ಇತ್ಯರ್ಥಃ ಎಂಬ ಅರ್ಥವಿವರಣೆಯ ಪ್ರಕಾರ ಕಾರಣವಾಚಕವಾಗಿ ಅತಃ ಎಂಬ ಶಬ್ದವು ಉಕ್ತವಾಗಿದೆ. ಜಿಜ್ಞಾಸಾಕ್ಕೆ ನಿಷ್ಫಲತ್ವ ಶಂಕಾಪರಿಹಾರವಾಗಿಯೂ, ಪ್ರಯೋಜನವಿಶೇಷಪ್ರತಿಪಾದಕ ಎಂಬ ಅಭಿಪ್ರಾಯದಿಂದಲೂ, ಬ್ರಹ್ಮ ಜಿಜ್ಞಾಸೆಯು, ಪರಂಪರಯಾ ಮೋಕ್ಷಕ್ಕೆ ಹೇತುವಾಗಿರುವುದರಿಂದ ಕರ್ತವ್ಯವೆಂಬ ಸೂತ್ರದ ಅರ್ಥವು ವಿವಕ್ಷಿತವಾಗಿರುವ ಪ್ರಯುಕ್ತ ಕಾರಣವಾಚಕವಾಗಿ ಅತಃ ಶಬ್ದೋ ಹೇತ್ವರ್ಥೇ ಸಮುದೀರಿತಃ ಎಂದು ಉತ್ತರವನ್ನು ಹೇಳಲಾಗಿದೆ.

ಸೂತ್ರದಲ್ಲಿರುವ ಅತಃ ಎಂಬ ಶಬ್ದಕ್ಕೆ ಅವಶ್ಯವಕ್ತವ್ಯವಾದ ಮತ್ತೊಂದು ಅರ್ಥವನ್ನು ಚತುರ್ಮುಖಬ್ರಹ್ಮನು ''ಪರಸ್ಯ ಬ್ರಹ್ಮಣೋ ವಿಷ್ಣೋಃ ಪ್ರಸಾದಾದಿತಿ ವಾ ಭವೇತ್'' ಎಂದು ಹೇಳಿ ಉತ್ತರವಿತ್ತಿದ್ದಾನೆ.

ಈ ಪಕ್ಷದಲ್ಲಿ ಅತಃ ಎಂಬಲ್ಲಿ ''ಅ'' ಎಂಬುದು ಪ್ರಕೃತಿ. ಅದರ ಮುಂದೆ ಪಂಚಮೀವಿಭಕ್ತಿಯ ಜಾಗದಲ್ಲಿ ತಸಿಲ್ ಪ್ರತ್ಯಯವು ಬಂದು ಅತಃ ಎಂದು ತಸಿಲಂತಪದವಾಗಿದೆ. ''ಅಃ ಇತಿಬ್ರಹ್ಮ'' ಎಂಬ ಶ್ರುತಿಯಲ್ಲಿ ಉಕ್ತವಾಗಿರುವಂತೆ ''ಅ'' ಎಂಬ ಪ್ರಕೃತಿಗೆ ವಿಷ್ಣು ಎಂದು ಅರ್ಥ. ಪ್ರಸಾದಾತ್ ಎಂಬುದು ಲಬ್ಧಾರ್ಥಕಥನವು. ಪ್ರತ್ಯಯಕ್ಕೆ ಕಾರಣತ್ವವೆಂದು ಅರ್ಥ.

ಮೊದಲಿನ ಪಕ್ಷದಲ್ಲಿ ಅತಃ ಶಬ್ದದ ಪ್ರಕೃತ್ಯರ್ಥವಾದ ಫಲಕ್ಕೆ ಜಿಜ್ಞಾಸಾಕರ್ತವ್ಯತ್ವದಲ್ಲಿ ಲಿಂಗತ್ವವು ಹೇಳಿರುವುದರಿಂದ ಬ್ರಹ್ಮಜಿಜ್ಞಾಸಾಕ್ಕೆ ಪರಂಪರಯಾ ಮೋಕ್ಷಕಾರಣತ್ವವೂ, ಮೋಕ್ಷಕ್ಕೆ ಜನಕವಾದ ಅತ್ಯರ್ಥಪ್ರಸಾದ ಕಾರಣತ್ವವೂ, ಸಾಕ್ಷಾತ್ತಾಗಿ ಮೋಕ್ಷಜನಕಾತ್ಯರ್ಥಪ್ರಸಾದಜನಕಾಪರೋಕ್ಷಜ್ಞಾನಜನಕತ್ವವೂ ವಿವಕ್ಷಿತವಾಗಿರುವುದರಿಂದ.ಈ ಅತಃ ಶಬ್ದವು ಜಿಜ್ಞಾಸಾಕ್ಕೆ ನಿಷ್ಫಲತ್ವಶಂಕಾಪರಿಹಾರವಾಗಿ ಸೂತ್ರಕಾರರಿಂದ ಉಕ್ತವಾಗಿದೆ ಎಂದು ಅಭಿಪ್ರಾಯ.

ಅತಃ ಶಬ್ದವು ''ಏತಸ್ಮಾತ್'' ಎಂಬ ಸರ್ವನಾಮ ಪ್ರಕೃತಿಕವಾಗಿಯೂ ಇದೆ. ''ಅ ಇತಿಬ್ರಹ್ಮೇತಿಶ್ರುತೇಃ'' ಎಂಬ ಶ್ರುತಿಯಲ್ಲಿ ಉಕ್ತವಾಗಿರುವ ಅಸರ್ವನಾಮವಾದ ಬ್ರಹ್ಮವಾಚಕವಾದ ಅಶಬ್ದಪ್ರಕೃತಿಕವೂ ಆಗಿದೆ.

ಪರಸ್ಯ ಬ್ರಹ್ಮಣೋ ವಿಷ್ಣೋಃ ಪ್ರಸಾದಾದಿತಿವಾಭವೇತ್ ಎಂಬ ಉತ್ತರವು ಅಸರ್ವನಾಮಪ್ರಕೃತಿಕವಾದ ಅತಃ ಎಂಬ ಶಬ್ದದ ಅರ್ಥದ ನಿರ್ವಚನವೆಂದು ಅಭಿಪ್ರಾಯ.

ಬ್ರಹ್ಮಜಿಜ್ಞಾಸೆಗೆ ಭಗವತ್ಪ್ರಸಾದವು ಏತಕ್ಕೆ ಬೇಕು. ಅದರಿಂದೇನು ಪ್ರಯೋಜನವೆಂಬ ಶಂಕೆಗೆ ಉತ್ತರವಾಗಿ ''ಸಹಿ ಸರ್ವಮನೋವೃತ್ತಿಪ್ರೇರಕಃ ಸಮುದಾಹೃತಃ'' ಎಂಬ ವಾಕ್ಯವು ಹೊರಟಿದೆ.

**ಅರ್ಥ** :- ಹಿ = ಯಾವ ಕಾರಣದಿಂದ, ಸಃ = ಆ ವಿಷ್ಣುಪ್ರಸಾದವು (ಪ್ರಸನ್ನನಾದ ವಿಷ್ಣುವು), ಸರ್ವ ಮನೋವೃತ್ತಿಪ್ರೇರಕಃ = ಎಲ್ಲಾ ಅಧಿಕಾರಿಗಳ, ಮನೋವೃತ್ತಿಪ್ರೇರಕಃ = ಪೂರ್ಣನಾದ ವಿಷ್ಣುವಿನಲ್ಲಿ ಮನಸ್ಸಿನ ಪ್ರಾವಣ್ಯಕ್ಕೆ ಕಾರಣನೆಂದು (ಪ್ರಮಾಣಗಳಿಂದ) ಸಮುದಾಹೃತಃ = ಉದಾಹರಿಸಲ್ಪಟ್ಟಿರುತ್ತಾನೆ.

ಸಹಿ = ಆ ವಿಷ್ಣುಪ್ರಸಾದವೇ ಅಥವಾ ಪ್ರಸನ್ನನಾದ ವಿಷ್ಣುವೇ ಸರ್ವಾಧಿಕಾರಿಗಳ ಮನೋವೃತ್ತಿಗೆ ಪ್ರೇರಕನಾಗಿದ್ದಾನೆ. ''ಧಿಯೋ ಯೋ ನಃ ಪ್ರಚೋದಯಾತ್'' ಎಂಬ ಗಾಯತ್ರೀಮಂತ್ರವೂ ಸಹ ಸಕಲ ಚೇತನರ ಬುದ್ಧಿಗೆ ಪ್ರೇರಕನು ಪರಮಾತ್ಮನಂದೇ ತಿಳಿಸುತ್ತಲಿದೆ.

**ಅಜ್ಞಾನಾಂ ಜ್ಞಾನದೋ ವಿಷ್ಣುಃ ಜ್ಞಾನಿನಾಂ ಮೋಕ್ಷದಶ್ಚ ಸಃ ।**
**ಆನಂದದಶ್ಚ ಮುಕ್ತಾನಾಂ ಸ ಏವೈಕೋ ಜನಾರ್ದನಃ ॥**

ಇತ್ಯಾದಿಪ್ರಮಾಣಗಳು, ಮನೋವೃತ್ತಿಸಾಧ್ಯಮೋಕ್ಷಾದಿಗಳನ್ನು ಕರುಣಿಸುವವನು ಪರಮಾತ್ಮನೆಂದು ಹೇಳುತ್ತಲಿವೆ.

ಜಿಜ್ಞಾಸೆಯೂ ಸಹ ಮನೋವೃತ್ತಿವಿಶೇಷವೇ ಆಗಿದೆ. ಪರಮಾತ್ಮನ ಪ್ರಸಾದವಿಲ್ಲದಿದ್ದರೆ ಯಾವ ಮನೋ ವ್ಯಾಪಾರವೂ ಆಗುವಂತಿಲ್ಲ. ಆದ್ದರಿಂದ ಅವಶ್ಯವಕ್ತವ್ಯವಾದ ಅರ್ಥಾಂತರವನ್ನು ತೋರಿಸಲಿಕ್ಕಾಗಿ ಚತುರ್ಮುಖನನು ''ಪರಸ್ಯ ಬ್ರಹ್ಮಣೋ ವಿಷ್ಣೋಃ ಪ್ರಸಾದಾದಿತಿ ವಾ ಭವೇತ್'' ಎಂದು ಹೇಳಿರುತ್ತಾನೆ.

ಸ್ವರೂಪೋತ್ತಮತ್ವಸಾಧಕವಾದ ಪ್ರಮಾಣವಾಕ್ಯಗಳ ಅರ್ಥ ವಿವರಣೆ.

ಮಂಗಳಾಚರಣೆಯ ಸಲುವಾಗಿ ಅಥ ಎಂಬ ಪದವನ್ನು ಹೇಳಬೇಕಾಗಿಲ್ಲ. ''ಮಂಗಳಂ ತತಃ'' ಇತ್ಯಾದಿ ಬೇರೆ ಯಾವುದಾದರೂ ಶಬ್ದದಿಂದ ಮಂಗಳವನ್ನು ಮಾಡಬಹುದಾಗಿತ್ತು. ''ಅಥ'' ಎಂದೇ ಏತಕ್ಕೆ ಹೇಳಬೇಕೆಂಬ ಶಂಕೆಗೆ ಉತ್ತರವಾಗಿ ಬ್ರಹ್ಮನ ಉತ್ತರವು ಈ ಕೆಳಗೆ ಕಂಡಂತಿದೆ

''ಸಿಸೃಕ್ಷೋಃಪರಮಾದ್ವಿಷ್ಣೋಃ ಪ್ರಥಮಂ ದ್ವೌ ವಿನಿಸ್ಸೃತೌ'' ಇತ್ಯಾದಿ

**ಅರ್ಥ:-** ಸಿಸೃಕ್ಷೋಃ ಇತ್ಯಾದಿ ವಾಕ್ಯದಿಂದ ಅಥ, ಅತಃ ಶಬ್ದಗಳಿಗೆ ಸ್ವರೂಪೋತ್ತಮತ್ವವನ್ನು ಬ್ರಹ್ಮನು ಸಮರ್ಥಿಸಿರುತ್ತಾನೆ.

''ಕಥಮುತ್ತಮತಾ ತಯೋಃ'' ಎಂಬ ಆಕ್ಷೇಪಕ್ಕೆ ಉತ್ತರವಾಗಿ ಸಿಸೃಕ್ಷೋಃ ಎಂಬ ವಾಕ್ಯವು ಪ್ರವೃತ್ತವಾಗಿದೆ.

**ಅರ್ಥ:-** (ಯಸ್ಮಾತ್ = ಯಾವ ಕಾರಣದ ದೆಶೆಯಿಂದ) ಸಿಸೃಕ್ಷೋಃ = ಸೃಷ್ಟಿ ಮಾಡುವ ಅಪೇಕ್ಷೆಯಿಂದ ಕೂಡಿದ, ಪರಮಾತ್ = ಸರ್ವೋತ್ತಮನಾದ, ವಿಷ್ಣೋಃ = ವಿಷ್ಣುವಿನ ದೆಶೆಯಿಂದ, (ಶ್ರೀ ವಿಷ್ಣುವಿನ ಮುಖದಿಂದ) ಪ್ರಥಮಂ = ಮಿಕ್ಕ ಎಲ್ಲಾ ಶಬ್ದಗಳಿಗಿಂತಲೂ, ಮಿಕ್ಕ ಎಲ್ಲಾ ಶಬ್ದಗಳ ಅಭಿವ್ಯಕ್ತಿಗೆ ಮುಂಚಿತವಾಗಿ, ಓಂಕಾರಶ್ಚಾಥ ಶಬ್ದಶ್ಚ = ಮೊದಲು ಓಂಕಾರ ಆಮೇಲೆ ಅಥ ಶಬ್ದ ಹೀಗೆ, ದ್ವೌ = ಎರಡು ಶಬ್ದಗಳು, (ಪ್ರಪ್ರಥಮವಾಗಿ ಓಂಕಾರ ಆಮೇಲೆ ಅಥ ಎಂಬ ಶಬ್ದ ಇವೆರಡು), ಕಂಠಂ ಭಿತ್ವಾ = ಕಂಠವನ್ನು ಭೇದಿಸಿ, ವಿನಿಸ್ಸೃತೌ = ಹೊರ ಹೊರಟವೆಯೋ (ಪರಮಾತ್ಮನಿಂದ ಮೊಟ್ಟಮೊದಲು ಓಂ ಅಥ ಎಂದು ಉಚ್ಚರಿಸಲ್ಪಟ್ಟವೆಯೋ), ತಸ್ಮಾತ್ = ಆ ಕಾರಣದಿಂದ, ಪ್ರಪ್ರಥಮವಾಗಿ ಉಚ್ಚರಿಸಲ್ಪಟ್ಟ ಕಾರಣದಿಂದ, ಸ್ವರೂಪೋತ್ತಮವಾಗಿರುವುದರಿಂದ, ಕ್ರಮಾತ್ = ಕ್ರಮವಾಗಿ, ಪ್ರಾಥಮಿಕೌ = ಪ್ರಥಮ ಪ್ರಯೋಜ್ಯವಾಗಿವೆ.

ಯಾವುದು ತನ್ನ ಗುಂಪಿಗೆ (ಜಾತಿಗೆ) ಸೇರಿದುವರಲ್ಲಿ ಮೊದಲು ಶ್ರೀಹರಿಯಿಂದ ಹುಟ್ಟಿರುವುದೋ (ಹೊರ ಹೊರಟಿರುವುದೋ) ಅದು ಆ ಗುಂಪಿನಲ್ಲಿ ಉತ್ತಮವಾದುದು ಎಂಬ ನ್ಯಾಯವನ್ನು ಇಲ್ಲಿ ಇಟ್ಟುಕೊಳ್ಳಬೇಕು.

ಅಂದರೆ ಮೊದಲು ಓಂಕಾರ ಆಮೇಲೆ ಅಥ ಶಬ್ದ ಎಂಬ ಕ್ರಮವು ಇಲ್ಲಿ ವಿವಕ್ಷಿತವಾಗಿದೆ. ಓಂಕಾರಾಥಶಬ್ದೌ ಸ್ವರೂಪೋತ್ತಮೌ - ಪ್ರಥಮಂ ಹರೇಃ ಸಿಸೃತತ್ವಾತ್ ಎಂಬ ಅನುಮಾನವು ಇಲ್ಲಿ ಹೇಳಲಾಗಿದೆ.

ಇದುವರೆವಿಗೆ ಅಥ ಎಂಬ ಶಬ್ದಕ್ಕೆ ಓಂಕಾರದೊಡನೆ ಸ್ವರೂಪಾಧಿಕ್ಯವನ್ನು ಹೇಳಿದ್ದಾಗಿದೆ.

ಇನ್ನು ಮುಂದೆ ಅತಃ ಶಬ್ದದ ಸ್ಥಾನದ ಬಗ್ಗೆ ಉತ್ತರ ವಾಕ್ಯವು ಈ ರೀತಿ ಇದೆ.

**''ತದ್ಧೇತುತ್ವಂ ವದಂಸ್ತ್ವಾಪಿ ತೃತೀಯೋಽತ ಉದಾಹೃತಃ'' । ಇತಿ**

**ಅರ್ಥ :-** ತದ್ಧೇತುತ್ವಂ = ತಸ್ಯ = ಆ ವಿಷ್ಣುವಿನ ಜಿಜ್ಞಾಸಾದಿಗಳಲ್ಲಿ, ಹೇತುತ್ವವನ್ನು ಅಥವಾ ಆ ಜಿಜ್ಞಾಸಾದಿಗಳಿಗೆ ಮೋಕ್ಷಹೇತುತ್ವವನ್ನು, ವದನ್ = ಹೇಳತಕ್ಕುದಾದ, ತೃತೀಯಃ = ಮೂರನೆಯದಾದ, ಅತಃ = ಅತಃ ಎಂಬ ಶಬ್ದವು, ಉದಾಹೃತಃ = ಉದಾಹರಿಸಲ್ಪಟ್ಟಿದೆ.

ಇಲ್ಲಿ ಅತಃ ಎಂಬುದಕ್ಕೆ ಅತಃ ಎಂಬ ಶಬ್ದಪರತ್ವವನ್ನು, ಹೇತುಪರತ್ವವನ್ನು, ಆಸ್ಯದಾವೃತ್ತಿಯನ್ನು, "ತೃತೀಯಃ", "ಉದಾಹೃತಃ" ಎಂಬ ಎರಡೂ ಶಬ್ದಗಳಿಗೆ ಆವೃತ್ತಿಯನ್ನು "ಪ್ರಾಥಮಿಕ" ಎಂಬುದಕ್ಕೆ ವಚನ ವ್ಯತ್ಯಾಸದಿಂದ ಸಂಬಂಧವನ್ನು ಇಟ್ಟುಕೊಳ್ಳಬೇಕೆಂಬ ಅಭಿಪ್ರಾಯದಿಂದ ಟೀಕಾಕಾರರು ಅತಶ್ಚ ತೃತೀಯತಯಾ ಪ್ರಾಥಮಿಕಃ ಉದಾಹೃತಃ ಎಂಬ ಯೋಜನಾ ಕ್ರಮವನ್ನು ತೋರಿಸಿರುತ್ತಾರೆ.

ಯಾವ ಕಾರಣದಿಂದ ಮೂರನೆಯದಾಗಿ ಅತಃ ಎಂಬುದು ವಿಷ್ಣುವಿನಿಂದ ಉದಾಹೃತವಾಗಿದೆಯೋ ಆದ್ದರಿಂದ ಅತಃ ಎಂಬುದು ಉತ್ತಮ ಅಂದರೆ ಸ್ವರೂಪತಃ ಅಧಿಕ ಎಂದು ಅಭಿಪ್ರಾಯ.

ನಿರ್ಗಳಿತವಾದ ಅಭಿಪ್ರಾಯವು ಈ ರೀತಿ ಇದೆ.

ಓಂಕಾರವೂ ಮತ್ತು ಅಥಶಬ್ದವೂ ವಿಷ್ಣುವಿನಿಂದ ಕ್ರಮವಾಗಿ ಮೊದಲು ಉಚ್ಚರಿಸಲ್ಪಟ್ಟ ಕಾರಣದಿಂದ ಸ್ವರೂಪದಿಂದಲೇ ಇತರ ಶಬ್ದಗಳಿಗಿಂತಲೂ ಅಧಿಕಗಳಾಗಿವೆ. ಅಷ್ಟು ಮಾತ್ರವಲ್ಲದೆ ಮೂರನೆಯದಾಗಿ "ಪ್ರಸನ್ನನಾದ ಆಚಾರವಾಚ್ಯನಾದ ವಿಷ್ಣುವಿಗೆ ಜಿಜ್ಞಾಸಾದಿಗಳಲ್ಲಿ ಕಾರಣತ್ವವನ್ನು (ಹೇತುತ್ವವನ್ನು) ತಸಿಲ್ ಪ್ರತ್ಯಯದಿಂದ ಹೇಳುತ್ತಿರುವುದರಿಂದ ಸ್ವಾಭಾವಿಕವಾಗಿಯೇ ಆ ವಿಷ್ಣುವಿನ ಜಿಜ್ಞಾಸಾದಿಗಳಿಗೆ ಮೋಕ್ಷಹೇತುತ್ವರೂಪವಾದ ಲಿಂಗವನ್ನು ಹೇಳತಕ್ಕದಾದುದರಿಂದ "ಅತಃ" ಎಂಬ ಸರ್ವನಾಮ ಮತ್ತು ಅಸರ್ವನಾಮಪ್ರಕೃತಿಕವಾದ, ಅತಃ ಎಂಬ ಶಬ್ದವೂ ಸಹ, ಯಾವ ಕಾರಣದಿಂದ ವಿಷ್ಣುವಿನಿಂದ ಮೂರನೆಯದಾಗಿ ಉಚ್ಚರಿಸಲ್ಪಟ್ಟಿರುವುದೋ, ಆದುದರಿಂದ ಅತಃ ಎಂಬ ಶಬ್ದವೂ ಸಹ ಸ್ವರೂಪದಿಂದಲೇ ಉತ್ತಮವಾಗಿದೆ. ಈ ದೃಷ್ಟಿಯಿಂದಲೇ ಅತಃ ಎಂಬ ಶಬ್ದವು ಮೂರನೆಯದಾಗಿ ಪ್ರಾಥಮಿಕವಾಗಿ ಉದಾಹರಿಸಲ್ಪಟ್ಟಿದೆ.

ಇಲ್ಲಿ ಈ ರೀತಿಯಾಗಿ ಅನುಮಾನ ಪ್ರಯೋಗವನ್ನು ಇಟ್ಟುಕೊಳ್ಳಬೇಕು.

ಓಂಕಾರ, ಅಥ ಶಬ್ದ, ಅತಃ ಎಂಬ ಮೂರು ಶಬ್ದಗಳು-

ಸ್ವರೂಪದಿಂದ ಉತ್ತಮವಾಗಿವೆ-ಸೃಷ್ಟಿ ಕಾಲದಲ್ಲಿ ಶ್ರೀಹರಿಯಿಂದ ಸಜಾತೀಯವಾದ ಇತರ ಶಬ್ದಗಳಿಗಿಂತಲೂ ಮುಂಚಿತವಾಗಿ ಉಚ್ಚರಿಸಲ್ಪಟ್ಟಿರುವುದರಿಂದ ಎಂಬುದಾಗಿ ಅನುಮಾನವನ್ನು ಹೇಳಬಹುದಾಗಿದೆ.

ಯಾವುದು ಸೃಷ್ಟಿ ಕಾಲದಲ್ಲಿ ಹರಿಯ ದೆಸೆಯಿಂದ ಯಾವ ಜಾತಿಯಲ್ಲಿ ಮೊದಲು ನಿಸ್ಸೃತವಾಗಿರುವುದೋ ಅದು ಆ ಜಾತಿಯಲ್ಲಿ ಉತ್ತಮವಾದುದು.

ಉದಾ :- ದೇವಜಾತಿಯಲ್ಲಿ- ದೇವತೆಗಳ ಗುಂಪಿನಲ್ಲಿ - ಪ್ರಪ್ರಥಮವಾಗಿ ವಿಷ್ಣುವಿನಿಂದ ಹುಟ್ಟಿದವನು ಚತುರ್ಮುಖನಾದುದರಿಂದ ಆ ದೇವತೆಗಳಲ್ಲಿ ಚತುರ್ಮುಖನು ಉತ್ತಮನು ಎಂದು ದೃಷ್ಟಾಂತವಾಗಿದೆ.

ಓಂಕಾರವು ಇತರ ಎಲ್ಲಾ ಶಬ್ದಗಳಿಗಿಂತಲೂ ಹರಿಯಿಂದ ಪ್ರಥಮವಾಗಿ ನಿಸ್ಸೃತವಾಗಿರುವುದರಿಂದ ಮಿಕ್ಕ ಎಲ್ಲಾ ಶಬ್ದಗಳಿಗಿಂತಲೂ ಉತ್ತಮವು.

ಅಥ ಎಂಬ ಶಬ್ದವು ಓಂಕಾರವೊಂದನ್ನು ಬಿಟ್ಟು ಮಿಕ್ಕ ಎಲ್ಲಾ ಶಬ್ದಗಳಿಗಿಂತಲೂ ಪ್ರಥಮವಾಗಿ ನಿಸ್ಸೃತವಾಗಿರುವುದರಿಂದ ಎರಡನೆಯದಾಗಿ ಉತ್ತಮವು.

ಅತಃ ಎಂಬ ಶಬ್ದವು ಓಂಕಾರ ಮತ್ತು ಅಥ ಎಂಬ ಎರಡು ಶಬ್ದಗಳನ್ನು ಬಿಟ್ಟು ಮಿಕ್ಕ ಎಲ್ಲಾ ಶಬ್ದಗಳಿಗಿಂತಲೂ ಪ್ರಥಮವಾಗಿ ಉಚ್ಚರಿತವಾಗಿರುವುದರಿಂದ ಮೂರನೆಯದಾಗಿ ಉತ್ತಮವು.

ಅವಶ್ಯವಕ್ತವ್ಯಾರ್ಥವುಳ್ಳತನದಿಂದಲೂ, ಸ್ವರೂಪಾಧಿಕ್ಯದಿಂದಲೂ, ಹೇಗೆ ಅಥಾತಃಶಬ್ದಗಳಿಗೆ ಪ್ರಥಮ ಪ್ರಯೋಗವುಂಟೋ ಅದರಂತೆ ಅವಯವಾರ್ಥದಿಂದಲೂ ಆಧಿಕ್ಯವಿರುವುದರಿಂದ ಆ ಎರಡು ಶಬ್ದಗಳು ಪ್ರಥಮ ಪ್ರಯೋಗಕ್ಕೆ ವಿಷಯವಾಗಿವೆ.

ಮೂರನೇ ಪ್ರಶ್ನೆಗೆ ಉತ್ತರವಾಗಿ ಅರ್ಥತಃ ಆಧಿಕ್ಯವನ್ನು ತೋರಿಸುವ ಚತುರ್ಮುಖ ಬ್ರಹ್ಮನ ಉತ್ತರ ವಾಕ್ಯವು ಈ ರೀತಿ ಇದೆ.

"ಅಕಾರಃ ಸರ್ವವಾಗಾತ್ಮಾ ಪರಬ್ರಹ್ಮಾಭಿಧಾಯಕಃ" ಇತ್ಯಾದಿ.

**ಅರ್ಥ:-** ಅಥ ಮತ್ತು ಅತಃ ಎಂಬ ಎರಡು ಶಬ್ದಗಳಲ್ಲಿ ಮೊದಲನೆಯ ಅಕ್ಷರವಾಗಿರುವ ಅಕಾರವು (ಯಾವ ಕಾರಣದಿಂದ) ಸರ್ವವಾಗಾತ್ಮಾ = "ತಸ್ಮಾತ್ ಸರ್ವಗುಣಾನ್ ವಿಷ್ಣೋಃ ಅಕಾರೋ ವಕ್ತಿ ಯತ್ಪ್ರಭೋಃ" ಎಂಬ ಐತರೇಯ ಭಾಷ್ಯದಲ್ಲಿ ಉಕ್ತವಾಗಿರುವಂತೆ ಸರ್ವವಾಗರ್ಥಭೂತವಾದ ಗುಣಪೂರ್ಣತ್ವಾಭಿಧಾಯಕವಾಗಿದೆ. ಸರ್ವವಾಗಾತ್ಮಾ ಎಂಬುದಕ್ಕೆ, ಸರ್ವವಾಗರ್ಥಃ ಸರ್ವಾಸಾಂ ವಾಚಾಂ ಅರ್ಥಃ - ಗುಣಪೂರ್ಣತ್ವರೂಪಃ ಅರ್ಥಃ - ಆತ್ಮಾ = ಸ್ವರೂಪಂ ಯಸ್ಯ ಸಃ = ಸರ್ವವಾಗಾತ್ಮಾ ಎಂಬ ನಿರ್ವಚನದಂತೆ ಸರ್ವವಾಕ್ಯಗಳಿಗೂ ಅರ್ಥವಾಗಿರುವ ಗುಣಪೂರ್ವತ್ವಕ್ಕೆ ವಾಚಕವಾಗಿದೆ ಎಂದು ಅಭಿಪ್ರಾಯ.

ಸರ್ವವಾಗರ್ಥಭೂತವಾದ ಗುಣಪೂರ್ಣತ್ವವಾಚಕವಾಗಿರುವುದರಿಂದಲೇ, ಪರಬ್ರಹ್ಮಾಭಿಧಾಯಕಃ = ಗುಣಪೂರ್ಣತ್ವಕ್ಕೆ [illegible]ಯಾದ ಪರಬ್ರಹ್ಮನನ್ನು ಹೇಳತಕ್ಕುದಾಗಿದೆ. ಗುಣವಾಚಕವಾದ ಅಕಾರವು ಗುಣಿಭೂತನಾದ ಬ್ರಹ್ಮನಿಗೆ ವಾಚಕವೆಂಬುದು ಗುಣಗುಣಿಗಳಿಗೆ ಅಭೇದವನ್ನು ಇಟ್ಟುಕೊಂಡಿರುವುದರಿಂದ ಸಂಗತವಾಗಿದೆ.

ತಥೌ = ಅಥ, ಅತಃ ಎಂಬ ಎರಡೂ ಶಬ್ದಗಳ ಮೊದಲನೆಯ ಅಕ್ಷರದ ವಿಚಾರವನ್ನ ತಿಳಿಸಿದ ತರುವಾಯ - ಆ ಎರಡು ಶಬ್ದಗಳಲ್ಲಿ ಎರಡನೇ ಅಕ್ಷರಗಳಾದ ತಥೌ = ತ ಮತ್ತು ಥ ಎಂಬ ಅಕ್ಷರಗಳು ಅಂದರೆ ತಕಾರಥಕಾರಗಳು - ಪ್ರಾಣಾತ್ಮಕೌ = ಪ್ರಾಣೌ = ವಿಷ್ಣುವಾಯೂ, ಆತ್ಮಾನೌ = ಸ್ವರೂಪೇ ಯಯೋಃ ತೌ = ಪ್ರಾಣಾತ್ಮಕೌ = ವಿಷ್ಣುವಾಚಕೌ, ವಾಯುದೇವತಾಕೌ ಎಂಬ ನಿರ್ವಚನದ ಪ್ರಕಾರ ವಾಚ್ಯನಾದ ವಿಷ್ಣುವಿಗೂ ವಾಚಕಗಳಾದ ತಥ ಎಂಬುದಕ್ಕೂ ಐಕ್ಯದ ವ್ಯಪದೇಶವು "ಅಯಂ ವೈ ಲೋಕಃ ಪ್ರಥಮಾ ಮಹಾನಾಮ್ನೀ" ಎಂಬಲ್ಲಿರುವಂತೆ ವಾಚ್ಯವಾಚಕಗಳಿಗೆ ಸಾಮಾನಾಧಿಕರಣ್ಯದಿಂದ ಐಕ್ಯವ್ಯಪದೇಶವೆಂದು ತಿಳಿಯಬೇಕು.

"ಮಹತಃ ಚತುರ್ಮುಖಾತ್" ಎಂಬಲ್ಲಿ ಅಭಿಮಾನಿಗೂ ಅಭಿಮನ್ಯಮಾನಕ್ಕೂ ಐಕ್ಯವ್ಯಪದೇಶವಿರುವಂತೆ "ಪ್ರಾಣಾತ್ಮಕೌ" ಎಂಬಲ್ಲಿಯೂ ಐಕ್ಯವ್ಯಪದೇಶವೆಂದು ಅಭಿಪ್ರಾಯ.

ತಥೌ ಪ್ರಾಣಾತ್ಮಕೌ ಪ್ರೋಕ್ತೌ ಎಂಬಲ್ಲಿ ನ್ಯಾಯವಾಗಿ "ಥತೌ" ಎಂದಿರಬೇಕಾಗಿತ್ತು, ಅಥ, ಅತಃ ಎಂಬ ಶಬ್ದಗಳ ಕ್ರಮದಲ್ಲಿ ಥಕಾರವು ಮೊದಲು ಅನಂತರದಲ್ಲಿ ತಕಾರವು ಕಂಡು ಬಂದಿದೆ. ಆದರೆ "ಪಾಠಕ್ರಮಾತ್ ಅರ್ಥ ಕ್ರಮೋ ಬಲೀಯಾನ್" ಎಂಬ ನ್ಯಾಯವನ್ನನುಸರಿಸಿ "ತಥೌ" ಎಂದು ಪ್ರಯೋಗಿಸಲಾಗಿದೆ.

ಇಲ್ಲಿ ಅಕಾರಾರ್ಥವು ಗುಣವ್ಯಾಪ್ತಿಯು, ದೇಶಕಾಲವ್ಯಾಪ್ತಿಯು ತಕಾರದ ಅರ್ಥವಾಗಿದೆ. ಥಕಾರಕ್ಕಾದರೋ ಅವಿಕಾರೇಣ ಸ್ಥಿತಿಯು, ಎಂಬ ಅರ್ಥಗಳಲ್ಲಿ ಅವಿಕಾರೇಣಸ್ಥಿತಿ ಎಂಬ ಅರ್ಥಕ್ಕಿಂತಲು ವ್ಯಾಪ್ತಿರೂಪವಾದ ಅರ್ಥಕ್ಕೆ ಪ್ರಾಬಲ್ಯವಿವಕ್ಷಾದಿಂದ ತಥೌ ಎಂಬ ಪ್ರಯೋಗವು ಯುಕ್ತವಾಗಿದೆ.

ತಕಾರವು ತನು ವಿಸ್ತಾರೆ ಎಂಬ ಧಾತುನಿಷ್ಪನ್ನವಾಗಿದೆ. ಥಕಾರವು ಷ್ಠಾಗತಿ ನಿವೃತ್ತೌ ಎಂಬ ಧಾತು ನಿಷ್ಪನ್ನವಾಗಿದೆ. ಎಂದು ಅಭಿಪ್ರಾಯ.

ತತ್ವಪ್ರದೀಪದಲ್ಲಿ "ತಥೌ ಪ್ರಾಣಾತ್ಮಕಂ ಪ್ರಾಪ್ತೌ" ಎಂದು ಪಾಠಭೇದವಿದೆ. ಆ ಪಕ್ಷದಲ್ಲಿ ಪ್ರಾಣಾತ್ಮಕಂ = ಪ್ರಾಣಪ್ರಣೇತಾರಂ = ವಿಷ್ಣುಂ, ವಾಚಕತ್ವೇನ ಪ್ರಾಪ್ತೌ ಎಂಬ ವ್ಯಾಖ್ಯಾನಾನುಸಾರವಾಗಿ ಆ ಎರಡೂ ವರ್ಣಗಳಿಗೆ ಪರಮಾತ್ಮಕವಾಚಕತ್ವವನ್ನು ಅರಿಯಬೇಕು.

ವ್ಯಾಪ್ತಿಸ್ಥಿತಿವಿಧಾಯಕೌ = ತಕಾರವು ದೇಶಕಾಲವ್ಯಾಪ್ತಿ ಪ್ರತಿಪಾದಕ, ಥಕಾರವು = ಅವಿಕಾರೇಣ ಅವಸ್ಥಿತಿ ಅಭಿಧಾಯಕವಾಗಿದೆ ಎಂದು ಅಭಿಪ್ರಾಯ.

ಅತಶ್ಚಪೂರ್ವಮುಚ್ಚಾರ್ಯಾಃ = ಅತಶ್ಚ = ಭಗವದ್ವಾಚಕವಾದ ಅಕಾರದಿಂದ ಘಟಿತವಾಗಿರುವುದರಿಂದಲೂ, ಪರಮಾತ್ಮನ ದೇಶಕಾಲಗಳ ವಾಚಕವಾಗಿರುವ ತಕಾರಘಟಿತವಾಗಿರುವುದರಿಂದಲೂ, ಪರಬ್ರಹ್ಮನ ಅವಿಕಾರೇಣ ಸ್ಥಿತಿವಿಧಾಯಕವಾದ ಥಕಾರದಿಂದ ಘಟಿತವಾಗಿರುವುದರಿಂದಲೂ, ಏತೇ = ಪ್ರಸಕ್ತಗಳಾದ ಓಂಕಾರ ಅಥ ಅತಃ ಎಂಬ ಶಬ್ದಗಳು, ಸರ್ವೇ = ಎಲ್ಲಾ ಮೂರು ಶಬ್ದಗಳೂ ಸ್ವರೂಪೋತ್ತಮಗಳಾಗಿರುವುದರಿಂದಲೇ, ಪೂರ್ವಂ ಉಚ್ಚಾರ್ಯಾಃ ಸತಾಂ ಮತಾಃ = ಮೀಮಾಂಸಾಸೂತ್ರಗಳ ಪ್ರಾರಂಭದ ಸೂತ್ರಗಳಲ್ಲಿ ಪ್ರಥಮತಃ ಪ್ರಯೋಜ್ಯಗಳಾಗಿ ಸಜ್ಜನರಿಗೆ ಸಮ್ಮತಗಳಾಗಿವೆ.

ಅಥಾತಃ ಶಬ್ದಯೋಃ = ಈ ಮೇಲೆ ಕಂಡಂತೆ ಅಥ ಶಬ್ದವು ಮತ್ತು ಅತಃ ಎಂಬ ಶಬ್ದದ, ಅಂದರೆ ಈ ಎರಡು ಶಬ್ದಗಳ, ವೀರ್ಯಂ = ಸ್ವರೂಪಾಧಿಕ್ಯ ಮೊದಲಾದ ಮಾಹಾತ್ಮ್ಯಯನ್ನು, ಏವಂ = ಹಿಂದೆ ತಿಳಿಸಿದ ಪ್ರಕಾರವಾಗಿ, ತತ್ವತಃ ಅಜ್ಞಾನ = ಯಥಾರ್ಥವಾಗಿ ಪ್ರಾಮಾಣಿಕವಾಗಿ ಚೆನ್ನಾಗಿ ತಿಳಿದು.

ಸೂತ್ರೇಷು = ವಿಚಾರಶಾಸ್ತ್ರಾದಿಗಳಲ್ಲಿ, ವಿಚಾರವಿಧಾಯಕಸೂತ್ರಗಳಲ್ಲಿ = ಅಥಾತೋ ಬ್ರಹ್ಮಜಿಜ್ಞಾಸಾ, ಅಥಾತೋ ಧರ್ಮಜಿಜ್ಞಾಸಾ, ಅಥಾತೋ ದೈವೀಮೀಮಾಂಸಾ, ಅಥಾತೋ ದರ್ಶಪೂರ್ಣಮಾಸೌ ಇತ್ಯಾದಿ ಮೀಮಾಂಸಾ ಶಾಸ್ತ್ರಗಳ ಮೊದಲನೆಯ ಸೂತ್ರಗಳಲ್ಲಿ, ಆದೌ = ಏವ ಆರಂಭದಲ್ಲಿಯೇನೇ, ಮಹಾಪ್ರಾಜ್ಞಾಃ = ಪ್ರಾಜ್ಞಶಿರೋಮಣಿಗಳಾದ ಶ್ರೀ ವೇದವ್ಯಾಸರೇ ಮೊದಲಾದವರು. ಪ್ರಯುಂಜತೇ = ಉಚ್ಚರಿಸುತ್ತಾರೆ. ತಾವೇವ = ಅಥಾತಃ ಶಬ್ದಗಳನ್ನೇನೇ, ಆದೌ = (ಏವ) ಮೊದಲೇನೇ, ಪ್ರಯುಂಜತೇ = ಪ್ರಯೋಗಿಸುತ್ತಾರೆ.

ನಾರದರ ಮತ್ತು ಚತುರ್ಮುಖ ಬ್ರಹ್ಮನ ಸಂವಾದದಲ್ಲಿ ಉಪಕ್ರಮದಲ್ಲಿ "ಅಥಾತಃ ಶಬ್ದ ಪೂರ್ವಾಣಿ" ಎಂದು ಅಥಾತಃ ಶಬ್ದಗಳ ವಿಷಯದಲ್ಲಿ ಮಾತ್ರ ಪ್ರಶ್ನೆಯು ಕಂಡುಬಂದಿದೆ. ಉಪಸಂಹಾರದಲ್ಲಿ "ಅಥಾತಃ ಶಬ್ದಯೋರೇವಂ, ತಾವೇವಾದೌ ಪ್ರಯುಂಜತೆ" ಎಂಬುದಾಗಿ ಹಿಂದಿನ ಪ್ರಶ್ನೆಗೆ ಅನುಗುಣವಾಗಿ ಅಥಾತಃ ಎಂಬ ಉಪಸಂಹಾರದಲ್ಲಾಗಲಿ, ಓಂಕಾರದ ಪ್ರಸಕ್ತಿಯೇ ಇರುವುದಿಲ್ಲ. ಮತ್ತು ಭಾಷ್ಯದಲ್ಲಿ ಉದಾಹೃತವಾದ ಗಾರುಡ ವಚನದಲ್ಲಿ ನಾರದರ ಪ್ರಶ್ನೆಯಲ್ಲಿ "ಅಥಾತಃ ಶಬ್ದಪೂರ್ವಾಣಿ ಸೂತ್ರಾಣಿ ನಿಖಿಲಾನ್ಯಪಿ" ಎಂಬುದಾಗಿ ಅಥಾತಃ ಆ ಎರಡು ಶಬ್ದಗಳ ವಿಚಾರವಾಗಿ ಮಾತ್ರ ಪ್ರಶ್ನ ಮತ್ತು ಪರಿಹಾರಗಳು ಪ್ರವೃತ್ತವಾಗಿವೆ. "ಸೂತ್ರೇಷು ತು ಮಹಾಪ್ರಾಜ್ಞಾಃ ತಾವೇವಾದೌ ಪ್ರಯುಂಜತೇ" ಎಂದು ಏವಕಾರಪೂರ್ವಕವಾಗಿ ಅವಧಾರಣೆಯಿಂದ ಓಂಕಾರವೊಂದನ್ನು ಬಿಟ್ಟು ಮಿಕ್ಕ ಅಥ ಮತ್ತು ಅತಃ ಎರಡಕ್ಕೆ ಮಾತ್ರ ಪ್ರಾಥಮ್ಯ ವಿಷಯವಾಗಿ ಉಪಸಂಹಾರವೂ ಉಕ್ತವಾಗಿದೆ. ಹೀಗಿರುವಲ್ಲಿ ಅನುವ್ಯಾಖ್ಯಾನದಲ್ಲಿ ಮಾತ್ರ ಓಂಕಾರಕ್ಕೆ ಆದಿತ್ವವನ್ನು ಪ್ರಾಥಮ್ಯವನ್ನು ಸಮರ್ಥಿಸಿ ವ್ಯಾಖ್ಯಾನ ಮಾಡಿರುವುದು ಹೇಗೆ ಸಂಗತವಾದೀತು ಎಂದು ಕೆಲವರು ಆಕ್ಷೇಪಿಸುವರು. ಮತ್ತು ಸೂತ್ರಭಾಷ್ಯದಲ್ಲಿ ಓಂಕಾರವನ್ನು ಬಿಟ್ಟು "ಅಥಶಬ್ದೋ ಮಂಗಳಾರ್ಥಃ ಅಧಿಕಾರಾನಂತರ್ಯಾರ್ಥಶ್ಚ" ಎಂದು ಭಾಷ್ಯಕಾರರು ಅಥಾದಿ ಪದಗಳನ್ನು ಮಾತ್ರ ವ್ಯಾಖ್ಯಾನ ಮಾಡಿರಲು ಕಾರಣವೇನು ? ಓಂಕಾರದ ವ್ಯಾಖ್ಯಾನವನ್ನೂ ಏತಕ್ಕೆ ಸೂತ್ರಭಾಷ್ಯದಲ್ಲಿ ಮಾಡಿಲ್ಲ ? ಅನುವ್ಯಾಖ್ಯಾನದಲ್ಲಿ ಮಾತ್ರ "ಓ ತತ್ತ್ವವಾಚೀ ಹ್ಯೋಂಕಾರೋ ವಕ್ತ್ಯಸೌ ಸದ್ಗುಣೋತತಾಮ್?" ಇತ್ಯಾದಿಯಾಗಿ ಓಂಕಾರವನ್ನು ವ್ಯಾಖ್ಯಾನಿಸಲು ನಿಮಿತ್ತವೇನು ? ಇತ್ಯಾದಿಯಾದ ಶಂಕೆಗಳಿಗೆ ತಾತ್ಪರ್ಯ ಚಂದ್ರಿಕಾ ವ್ಯಾಖ್ಯಾನವಾದ ಪ್ರಕಾಶವ್ಯಾಖ್ಯಾನದಲ್ಲಿ ತಂತ್ರದೀಪಿಕಾ ವ್ಯಾಖ್ಯಾಕಾರರಾದ ಶ್ರೀ ರಾಘವೇಂದ್ರಸ್ವಾಮಿಗಳವರೇ ಮೂರು ಬಗೆಗಳಾದ ಸಮಾಧಾನಗಳನ್ನು ಹೇಳಿರುವುದು ಈ ಕೆಳಗೆ ಕಂಡಂತಿದೆ. ಜಿಜ್ಞಾಸುಗಳಿಗೆ ರಂಜಕಗಳಾಗಿವೆ.

**ಮೊದಲನೆಯ ಸಮಾಧಾನ** :- ಬ್ರಹ್ಮಸೂತ್ರಗಳಿಗೆ ಶ್ರೀಮದಾಚಾರ್ಯರು ಸೂತ್ರಭಾಷ್ಯವನ್ನೂ, ಅನುವ್ಯಾಖ್ಯಾನವನ್ನೂ ರಚಿಸಿರುವರು. ಇವುಗಳಲ್ಲಿ ಸೂತ್ರಭಾಷ್ಯವು ಪೂರ್ವಪ್ರಸ್ಥಾನವೆಂದೂ ಅನುವ್ಯಾಖ್ಯಾನವು ಉತ್ತರ ಪ್ರಸ್ಥಾನವೆಂ ಗ ಪ್ರಸಿದ್ಧವಾಗಿದೆ.

ಸೂತ್ರಭಾಷ್ಯದಲ್ಲಿ ಓಂಕಾರಕ್ಕೆ ವ್ಯಾಖ್ಯಾನ ಮಾಡದೇ ಇದ್ದಾಗ್ಯೂ ಉತ್ತರ ಪ್ರಸ್ಥಾನವಾದ ಅನುವ್ಯಾಖ್ಯಾನದಲ್ಲಿ ವ್ಯಾಖ್ಯಾನ ಮಾಡಿರುವುದರಿಂದ ಸೂತ್ರಭಾಷ್ಯದಲ್ಲಿ ಅದನ್ನು ಬಿಟ್ಟಿರುತ್ತಾರೆ. ಆದ್ದರಿಂದಲೇ ಸೂತ್ರಭಾಷ್ಯದಲ್ಲಿ ಹೇಳದೇ ಇರುವುದಾದ ಅನೇಕ ಪಾಠಾಂತರಗಳು, ಸೂತ್ರದ ಬೇರೆ ಬೇರೆ ಅರ್ಥಗಳ ನಿರೂಪಣೆಗಳೂ ಅನುವ್ಯಾಖ್ಯಾನದಲ್ಲಿ ಕಂಡುಬಂದಿವೆ ಎಂಬುದು ಮೊದಲನೆಯ ಸಮಾಧಾನ.

**ಅಥವಾ**:- ಓಂಕಾರದ ಅರ್ಥವು ಛಾಂದೋಗ್ಯೋಪನಿಷತ್ತಿನ ಭಾಷ್ಯವಚನಗಳಲ್ಲಿ ವ್ಯಾಖ್ಯಾನ ಮಾಡಲ್ಪಟ್ಟಿರುವುದರಿಂದ ಇಲ್ಲಿ ಬಿಟ್ಟಿರುತ್ತಾರೆ ಎಂಬುದು ಎರಡನೇ ಸಮಾಧಾನ.

**ಅಥವಾ** :- ಪೂರ್ವಪಕ್ಷಿಯು ಬ್ರಹ್ಮಜಿಜ್ಞಾಸೆಗೆ ವಿಷಯ ಪ್ರಯೋಜನ ಅಧಿಕಾರಿಗಳಾವುವೂ ಇಲ್ಲವಾದುದರಿಂದ "ನ ಕರ್ತವ್ಯಾ' ಮಾಡಬೇಕಾಗಿಲ್ಲ ಎಂದು ಶಂಕಿಸಿದ್ದಾನೆ. ಆ ಶಂಕೆಗಳಿಗೆ ಅಧಿಕಾರಿಯೂ ಇದ್ದಾನೆ. ವಿಷಯವೂ ಇದೆ. ಪ್ರಯೋಜನವೂ ಉಂಟು. ಅಂತೂ ಅನುಬಂಧಚತುಷ್ಟಯ ಸಂಪನ್ನವಾಗಿರುವುದಿಂದ ಬ್ರಹ್ಮಜಿಜ್ಞಾಸೆಯು ಕರ್ತವ್ಯಾ ಎಂದು ಸಮರ್ಥಿಸಿರುವುದರಿಂದ ಪೂರ್ವಪಕ್ಷಪ್ರಾಪಕವಾದ ಅಧಿಕಾರ್ಯಾದ್ಯಭಾವರೂಪವಾದ ಶಂಕಾಪರಿಹಾರವು ಅಥ ಪದದಿಂದ

ಅತಃ ಎಂಬ ಪದದಿಂದ ಆಗುತ್ತಿರುವ ಪ್ರಯುಕ್ತ ಆ ಎರಡಕ್ಕೆ ಇಲ್ಲಿ ವ್ಯಾಖ್ಯಾನವು ಪ್ರಸಕ್ತವಾಗಿರುವುದರಿಂದ ಸೂತ್ರಭಾಷ್ಯದಲ್ಲಿ ಭಾಷ್ಯಕಾರರು ಅಥಾದಿ ಪದಗಳಿಗೆ ವ್ಯಾಖ್ಯಾನಮಾಡಿರುವರು. ಎಷ್ಟು ಪ್ರಕೃತಕ್ಕೆ ಉಪಯುಕ್ತವಾಗಿದೆಯೋ ಅಷ್ಟಕ್ಕೆ ಮಾತ್ರ ವ್ಯಾಖ್ಯಾನವು ಆಗತ್ಯವೆಂಬ ದೃಷ್ಟಿಯಿಂದ ಅಥ, ಅತಃ ಎಂಬ ಪದಗಳಿಗೆ ವ್ಯಾಖ್ಯಾನ ಮಾಡಿರುತ್ತಾರೆ ಎಂಬುದು ಮೂರನೆಯ ಸಮಾಧಾನ.

ಅನುವ್ಯಾಖ್ಯಾನದಲ್ಲಾದರೋ ಓಂಕಾರವು ಹೇಗೆ ಅದೃಷ್ಟಪ್ರಯೋಜನ ವುಳ್ಳದೋ ಅದರಂತೇ ಅದೃಷ್ಟಾರ್ಥಕವಾದ ಓಂಕಾರವೇ ದೃಷ್ಟಾರ್ಥಕವೂ ಆಗಿದೆ ಎಂಬ ಅಭಿಪ್ರಾಯದಿಂದ ಓತತ್ವವಾಚೀ ಇತ್ಯಾದಿಯಾಗಿ ಓಂಕಾರಕ್ಕೆ ವ್ಯಾಖ್ಯಾನ ಮಾಡಿರುತ್ತಾರೆ ಎಂದು ಅಭಿಪ್ರಾಯ.

ಕೆಲವರು ಅಥಾದಿ ಪದಗಳಿಗಿಂತ ಓಂಕಾರವು ವಿಲಕ್ಷಣವೆಂಬ ಅಭಿಪ್ರಾಯದಿಂದ ಸೂತ್ರಭಾಷ್ಯದಲ್ಲಿ ಅದಕ್ಕೆ ವ್ಯಾಖ್ಯಾನ ಮಾಡಿಲ್ಲವೆಂದು ಅಭಿಪ್ರಾಯ ಪಡುತ್ತಾರೆ.

ಈ ವಿಧವಾದ ಬ್ರಹ್ಮನಾರದಸಂವಾದರೂಪವಾದ ಸೂತ್ರಭಾಷ್ಯದಲ್ಲಿ ಉದಾಹೃತವಾದ ಗಾರುಡ ಪ್ರಮಾಣವಾಕ್ಯಗಳ ಅಭಿಪ್ರಾಯಗಳ ಸಾರಸಂಗ್ರಹರೂಪವಾಗಿ ಪ್ರಸ್ಥಾನಭೇದಪ್ರೋಕ್ತಾರ್ಥಸಂಗ್ರಹರೂಪವಾಗಿ ಶ್ರೀ ತಂತ್ರದೀಪಿಕಾರರು ತಂತ್ರದೀಪಿಕೆಯ ಜಿಜ್ಞಾಸಾಧಿಕರಣದ ವ್ಯಾಖ್ಯಾರ್ಥಗಳ ಸಂಗ್ರಹದಲ್ಲಿ "ಅಥಾತಃ ಶಬ್ದಯೋಃ ಸ್ವರೂಪತಃ ಅರ್ಥತಶ್ಚ ಆಧಿಕ್ಯಾದಿತಿ ಸೂಚನಾಯ" ಎಂದು ಮಾರ್ಮಿಕವಾಗಿ ಮುತ್ತಿನಂತಹ ನುಡಿಯನ್ನು ನುಡಿದಿದ್ದಾರೆ.

**ತಂತ್ರದೀಪಿಕಾ** :– ಅತ್ರ, ಅಥಾತೋ ಬ್ರಹ್ಮಪದಾನಿ ಕ್ರಮಾತ್ ನಿರಧಿಕಾರಿತ್ವ ನಿಷ್ಫಲತ್ವ ನಿರ್ವಿಷಯತ್ವ - ಶಂಕಾವ್ಯುದಾಸಕಾನಿ

**ಅರ್ಥ** :- ಅತ್ರ ಬ್ರಹ್ಮಮೀಮಾಂಸಾ ಶಾಸ್ತ್ರದಲ್ಲಿ ಮೊದಲನೆಯ ಅಧ್ಯಾಯದ ಮೊದಲನೆಯ ಪಾದದಲ್ಲಿರತಕ್ಕ ಮೊಟ್ಟಮೊದಲನೆಯದಾದ ಓಂ ಅಥಾತೋಬ್ರಹ್ಮಜಿಜ್ಞಾಸಾ ಓಂ ಎಂಬ ಸೂತ್ರದಲ್ಲಿ ಅಥ ಅತಃ ಬ್ರಹ್ಮ ಎಂಬ ಪದಗಳು, ಕ್ರಮಾತ್ = ಕ್ರಮವಾಗಿ ನಿರಧಿಕಾರಿತ್ವ ಮತ್ತು ನಿಷ್ಫಲತ್ವ ಮತ್ತು ನಿರ್ವಿಷಯತ್ವ. ಇವುಗಳ ಶಂಕಾವ್ಯುದಾಸಕಾನಿ = ಶಂಕೆಯನ್ನು ಪರಿಹರಿಸತಕ್ಕವುಗಳಾಗಿವೆ.

ಅಥ ಶಬ್ದಕ್ಕೆ ಹರಿಭಕ್ತಿಪೂರ್ವಕ ಅಧ್ಯಯನ, ಶಮದಮಾದಿ ಸಂಪತ್ತಿ, ವಿಷ್ಣುಪಾದೈಕ ಸಂಶ್ರಯತ್ವರೂಪ ಗುಣಕೃತವಾದ ಅಧಿಕಾರ ಸಂಪತ್ತ್ಯನಂತರಂ ಎಂದು ಅರ್ಥ ಹೇಳಿರುವುದರಿಂದ ಭಾಗವತ ತಂತ್ರೋಕ್ತವಾದ ಅಧಿಕಾರ ಉಳ್ಳವನೇ ಅಧಿಕಾರಿಯಾಗಿರುವುದರಿಂದ ಬ್ರಹ್ಮಜಿಜ್ಞಾಸೆಗೆ ಅಧಿಕಾರಿಯೇ ಇಲ್ಲವೆಂಬ ನಿರಧಿಕಾರಿತ್ವ ಶಂಕೆಯು ಪರಿಹೃತವಾಯಿತು. ಬ್ರಹ್ಮಜಿಜ್ಞಾಸೆಗೆ ಫಲವೇ ಇಲ್ಲವೆಂಬ ಶಂಕೆಯು ಅತಃ = ಎಂಬುವದಕ್ಕೆ ಮೋಕ್ಷಜನಕ ಅತ್ಯರ್ಥ ಪ್ರಸಾದಜನಕ ಅಪರೋಕ್ಷಜ್ಞಾನಸಾಧನವಾಗಿರುವುದರಿಂದ ಎಂದು ಅರ್ಥ ಹೇಳಿರುವುದರಿಂದ ಮೋಕ್ಷಾದಿಗಳೇ ಫಲಗಳಾಗಿರುವ ಪ್ರಯುಕ್ತ ನಿಷ್ಫಲತ್ವ ಶಂಕೆಯು ನಿರಾಕೃತವಾಗಿದೆ.

ಬ್ರಹ್ಮಜಿಜ್ಞಾಸಾ ಎಂಬಲ್ಲಿ ಬ್ರಹ್ಮಪದವನ್ನು ವಿಷಯವಾಚಕವಾಗಿ ಪ್ರಯೋಗಿಸಿರುವುದರಿಂದ ಅನಂತಗುಣ ಪರಿಪೂರ್ಣನಾದ ಚಿದಚಿದ್ವಿಲಕ್ಷಣನಾದ ಪರಬ್ರಹ್ಮನೇ (ಶ್ರೀಮನ್ನಾರಾಯಣನೇ ಜಿಜ್ಞಾಸೆಗೆ) ವಿಷಯನೆಂದು ಹೇಳಿರುವುದರಿಂದ ನಿರ್ವಿಷಯತ್ವಶಂಕೆಯು ಪರಿಹೃತವಾಯಿತು ಎಂದು ಅಭಿಪ್ರಾಯ.

## ಇಲ್ಲಿಗೆ ತಂತ್ರದೀಪಿಕಾ ಗ್ರಂಥದಲ್ಲಿ ಜಿಜ್ಞಾಸಾಧಿಕರಣವು ಸಮಾಪ್ತವಾಯಿತು.

## ವಿಶೇಷ ವಾಕ್ಯಾರ್ಥಗಳ ವಿವರಣೆ.

ತಂತ್ರದೀಪಿಕಾಗ್ರಂಥಕಾರರಾದ ಶ್ರೀರಾಘವೇಂದ್ರ ಗುರುಸಾರ್ವಭೌಮರು ಈ ಗ್ರಂಥದ ಪ್ರಾರಂಭದಲ್ಲಿಯೇ "ಪ್ರಸ್ಥಾನಭೇದಪ್ರೋಕ್ತಾರ್ಥಸಂಗ್ರಹೋಭಾಷ್ಯಯಂ ಮಮ" ಎಂದು ಈ ಗ್ರಂಥದ ರಚನೆಗೆ ಕಾರಣವನ್ನೂ, ಸಾರ್ಥಕ್ಯವನ್ನೂ ವಿಶದಪಡಿಸಿರುತ್ತಾರೆ.

**ಅಭಿಪ್ರಾಯ :-** ಈ ತಂತ್ರದೀಪಿಕಾಗ್ರಂಥವು ಬ್ರಹ್ಮಸೂತ್ರಗಳಿಗೆ ಅತಿಸಂಕ್ಷೇಪರೂಪವಾದ ವ್ಯಾಖ್ಯಾನವಾಗಿದೆ. ಇದರಲ್ಲಿ ಸಂಗ್ರಹಿಸಿ, ನಿರೂಪಿಸಿರುವ ಅರ್ಥಗಳೆಲ್ಲವೂ ಬ್ರಹ್ಮಸೂತ್ರಗಳಿಗೆ ಪೂರ್ವಪ್ರಸ್ಥಾನ ಭಾಷ್ಯವೆನಿಸಿದ ಶ್ರೀಮದಾಚಾರ್ಯರ ಬ್ರಹ್ಮಸೂತ್ರಭಾಷ್ಯಗಳಲ್ಲೂ ಉತ್ತರಪ್ರಸ್ಥಾನವಾದ ಅನುವ್ಯಾಖ್ಯಾನದಲ್ಲೂ ಪ್ರತಿಪಾದಿತಗಳಾಗಿವೆ. ಆ ಎಲ್ಲಾ ಅರ್ಥಗಳ ನ್ನೊಳಗೊಂಡಂತೆ ಶ್ರೀ ಗುರುರಾಜರ ಪರಮಗುರುವಾದರಾದ ಪೂಜ್ಯರಾದ ಶ್ರೀ ವಿಜಯೀಂದ್ರ ತೀರ್ಥಶ್ರೀಪಾದಂಗಳವರು "ಬ್ರಹ್ಮಸೂತ್ರ ನ್ಯಾಯಸಂಗ್ರಹ" ಎಂಬ ಹೆಸರಿನಿಂದಲೂ ಮತ್ತು ಸಾಕ್ಷಾತ್ ಗುರುಗಳಾದ ಪೂಜ್ಯರಾದ ಶ್ರೀ ಸುಧೀಂದ್ರ ತೀರ್ಥಶ್ರೀ ಪಾದಂಗಳವರು "ಶ್ರೀ ಬ್ರಹ್ಮಸೂತ್ರಾಧಿಕರಣ ರತ್ನಮಾಲಾ" ಎಂಬ ಹೆಸರಿನಿಂದಲೂ ಅತಿಗಂಭೀರಗಳಾದ ಗ್ರಂಥರತ್ನಗಳನ್ನು ರಚಿಸಿರುತ್ತಾರೆ. ಅವೆಲ್ಲವೂ ಇರುವಾಗ ಹೊಸದಾಗಿ ನೀವು ಈ ತಂತ್ರದೀಪಿಕೆಯನ್ನು ಏಕೆ ರಚಿಸುತ್ತೀರಿ? ಪೂರ್ವಾಚಾರ್ಯರ ಗ್ರಂಥಗಳಿಂದಲೇ ಗತಾರ್ಥವಾಯಿತಲ್ಲಾ ಎಂಬ ಶಂಕೆಗೆ ಉತ್ತರವಾಗಿ ತಂತ್ರದೀಪಿಕಾಕಾರರು ಗ್ರಂಥಾರಂಭದಲ್ಲಿಯೇ ಈ ಕೃತಿಯ ರಚನೆಯಲ್ಲಿ ಅಡಗಿರತಕ್ಕ ಪ್ರಮೇಯಗಳ ಸಂಗ್ರಹದ ಹಿನ್ನೆಲೆಯನ್ನು ಸೂಚಿಸಿರುವುದಲ್ಲದೆ ಈ ಗ್ರಂಥಕ್ಕೆ ವಿಶೇಷಾಕಾರವಾದ ಪ್ರಯೋಜನವನ್ನು ಸ್ಪಷ್ಟಪಡಿಸಿರುತ್ತಾರೆ.

ಅದರ ಸೂಚಕವಾದ ನುಡಿಯೇ

**"ಗುರುಪಾದಕೃತೋಽಪ್ಯಸ್ತಿ ಸಂಗ್ರಹೋ ಹೃದಯಂಗಮಃ**
**ಪ್ರಸ್ಥಾನ ಭೇದಪ್ರೋಕ್ತಾರ್ಥಸಂಗ್ರಹೋಽಭಾಷ್ಯಯಂ ಮಮ"**

ಎಂಬುದಾಗಿದೆ. ಇನ್ನು ಹಿಂದೆಯೇ ಪ್ರಾಸ್ತಾವಿಕವಾಗಿ ತಿಳಿಸಿದೇವೆ.

ಈ ತಂತ್ರದೀಪಿಕೆಯಲ್ಲಿ ಉಕ್ತವಾಗಿರುವ ಅರ್ಥಗಳೆಲ್ಲವೂ ಶ್ರೀಮದಾಚಾರ್ಯರ ಗ್ರಂಥಗಳಲ್ಲಿ ಅತಿ ವಿಸ್ತಾರವಾಗಿ ವಿಶೇಷಾಕಾರವಾದ ವಾಕ್ಯಾರ್ಥಪುಂಜದಿಂದ ವಿವರಿಸಲ್ಪಟ್ಟಿರುವುದಾದರೂ, ಆ ಹಿಂದಿನ ಗ್ರಂಥಗಳಲ್ಲಿ ಅಂತಿಮವಾಗಿ ಸಿದ್ಧಾಂತಗೊಳಿಸಿದ ಪ್ರಮೇಯಗಳನ್ನು, ಅರ್ಥಗಳನ್ನು ತತ್ವಜ್ಞಾನಾಪೇಕ್ಷಿಗಳಾದ ಸಾತ್ವಿಕ ಜನತೆಯ ಉಪಕಾರಕ್ಕಾಗಿ ನಾವು ಚಿಕ್ಕ ಚಿಕ್ಕ ವಾಕ್ಯಗಳಲ್ಲಿ ಸಂಗ್ರಹಿಸಿರುತ್ತೇವೆ ಎಂದು ಗ್ರಂಥಕಾರರ ಅಭಿಪ್ರಾಯವಾಗಿದೆ.

ಈ ತಂತ್ರದೀಪಿಕಾ ಗ್ರಂಥದಲ್ಲಿನ ಪ್ರತಿಯೊಂದು ಸೂತ್ರದ ಮತ್ತು ಅಧಿಕರಣದ ವಾಕ್ಯವನ್ನು ಓದುತ್ತಿರುವಾಗಲೇ ಅಭಿಜ್ಞರಿಗೆ ಮೇಲೆ ಮೇಲಿನ ಗ್ರಂಥಗಳ ವಿಶಿಷ್ಟಾರ್ಥಗಳೆಲ್ಲವೂ ಮನೋಮಂಡಲದಲ್ಲಿ ತಾಂಡವವಾಡುತ್ತಿರುವಂತೆ ಭಾಸವಾಗುತ್ತದೆ. ಇದರಲ್ಲಿನ ಪದಗಳೂ ವಾಕ್ಯಗಳೂ ಸೂಚಿಗಳಿನಂತೆ ಪ್ರೌಢವಾಕ್ಯಾರ್ಥಗಳನ್ನೆಲ್ಲಾ ಸ್ಮರಣೆಗೆ ತಂದುಕೊಡುತ್ತವೆ. ಇಂತಹ ಅಸಾಧಾರಣವಾದ ಪ್ರಯೋಜನವು ಇರುವುದರಿಂದ ಇದು ಜಿಜ್ಞಾಸುವರ್ಗಕ್ಕೆ ಅತ್ಯುಪಯುಕ್ತವಾದ ಗ್ರಂಥರತ್ನವೇ ಆಗಿದೆ ಎಂದು ಪರಮಾಭಿಪ್ರಾಯ.

ಇನ್ನು ಮುಂದೆ ಪ್ರಸ್ಥಾನ ಭೇದದಿಂದ ಉಕ್ತವಾಗಿರುವ ಅರ್ಥಗಳನ್ನು ತೋರಿಸಿ, ಈ ತಂತ್ರದೀಪಿಕೆಯ ಯಾವ ಯಾವ ವಾಕ್ಯದಿಂದ ಹಿಂದಿನ ಯಾವ ಅರ್ಥವು ಸಂಗ್ರಹಿಸಲ್ಪಟ್ಟಿದೆ ಎಂಬುದನ್ನು ವಿವರಿಸುತ್ತೇವೆ.

ಬ್ರಹ್ಮಸೂತ್ರಗಳ ಭಾಷ್ಯವನ್ನು ಶ್ರೀಮದಾಚಾರ್ಯರು ರಚಿಸುವಾಗ ಸೂತ್ರಗಳ ಅರ್ಥವನ್ನು ನಿರೂಪಿಸುವುದಕ್ಕೆ ಮುಂಚೆ ಬ್ರಹ್ಮಸೂತ್ರಗಳ ರಚನೆಯ ಹಿನ್ನೆಲೆಯನ್ನು ವಿವರಿಸುವ ಸಂದರ್ಭದಲ್ಲಿ, ಆ ಸೂತ್ರಗಳ ವ್ಯಾಖ್ಯಾನಕ್ಕೆ ಪ್ರಯೋಜಕವಾದ ಪ್ರಾಮಾಣ್ಯಕ್ಕೆ ಉಪಯುಕ್ತವಾದ ಅಂಶವನ್ನೊಳಗೊಂಡಂತೆ ಅವತಾರಿಕಾವಾಕ್ಯವನ್ನು ಈ ಕೆಳಗೆ ಕಂಡಂತೆ ರಚಿಸಿರುತ್ತಾರೆ.

ಆ ವಾಕ್ಯವು ಈ ರೀತಿ ಇದೆ.

**ಸೂತ್ರಭಾಷ್ಯ :ದ್ವಾಪರೇ ಸರ್ವತ್ರಜ್ಞಾನೇ ಆಕುಲೀಭೂತೇ ತನ್ನಿರ್ಣಯಾಯ ಬ್ರಹ್ಮರುದ್ರೇಂದ್ರಾದಿಭಿಃ**
**ಅರ್ಥಿತೋ ಭಗವಾನ್ ನಾರಾಯಣೋ ವ್ಯಾಸತ್ವೇನ ಅವತತಾರ**
**ಅಥೇಜ್ಞಾನಿಷ್ಟ ಪ್ರಾಪ್ತಿಪರಿಹಾರೇಚ್ಛೂನಾಂ ತದ್ಯೋಗಮವಿಜಾನತಾಂ ತಜ್**
**ಜ್ಞಾಪನಾರ್ಥಂ ವೇದಮುತ್ಪನ್ನಂ ವ್ಯಂಜಯನ್ ಚತುರ್ಧಾವ್ಯ ಭಜತ್**
**ಚತುರ್ವಿಂಶತಿಧಾ, ಏಕಶತಧಾ, ಸಹಸ್ರಧಾ, ದ್ವಾದಶಧಾ ಚ**
**ತದರ್ಥನಿರ್ಣಯಾಯ ಬ್ರಹ್ಮಸೂತ್ರಾಣಿ ಚಕಾರ ಇತಿ**

**ಅರ್ಥ** :- ದ್ವಾಪರೇ = ವೈವಸ್ವತ ಮನ್ವಂತರದ ಇಪ್ಪತ್ತೆಂಟನೆಯ ದ್ವಾಪರಯುಗದಲ್ಲಿ, ಸರ್ವತ್ರ = ತತ್ವಜ್ಞಾನಕ್ಕೆ ಯೋಗ್ಯರಾದ ಭೂಲೋಕನಿವಾಸಿಗಳಾದ ಎಲ್ಲಾ ಜ್ಞಾನಿಗಳಲ್ಲೂ ಎಲ್ಲಾ ಜ್ಞಾನಿಗಳಲ್ಲೂ, ಜ್ಞಾನೇ = ತತ್ವಜ್ಞಾನವು, (ಶ್ರೀ ವಿಷ್ಣು ಸರ್ವೋತ್ತಮತ್ವಜ್ಞಾನವು) ಆಕುಲೀಭೂತೇ = ಶ್ರೀ ವಿಷ್ಣುವಿನ ಗುಣೋತ್ಕರ್ಷಾದಿಜ್ಞಾನವೇ ತತ್ವಜ್ಞಾನವೋ ಅಥವಾ ಜೀವಬ್ರಹ್ಮರ ಐಕ್ಯಜ್ಞಾನವೇ ತತ್ವಜ್ಞಾನವೋ ಎಂಬುದಾಗಿ ಕೆಲವರಿಗೆ ಸಂದೇಹವೂ, ಮತ್ತೆ ಕೆಲವರಿಗೆ ಐಕ್ಯಜ್ಞಾನವೇ ತತ್ವಜ್ಞಾನವು, ಶ್ರೀ ವಿಷ್ಣುವಿನ ಗುಣೋತ್ಕರ್ಷ ಜ್ಞಾನವು ತತ್ವಜ್ಞಾನಕ್ಕಿಂತಲೂ ಬೇರೆಯಾದದ್ದು ಎಂಬುದಾಗಿ ವಿಪರೀತವಾದ ತಿಳುವಳಿಕೆ ವಿಷಯವಾಗಿರಲಾಗಿ ಅಥವಾ ಪರಬ್ರಹ್ಮನಾದ ಶ್ರೀ ವಿಷ್ಣುವಿನ ಸಾರ್ವೋತ್ತಮ್ಯ ಜ್ಞಾನವೇ ಸಮ್ಯಕ್ ಜ್ಞಾನವೋ ಅಥವಾ

ನಿರ್ಗುಣತ್ವಜ್ಞಾನವೇ ಸಮ್ಯಗ್ ಜ್ಞಾನವೋ ಎಂಬ ಸಂದೇಹಕ್ಕೆ ವಿಷಯವಾಗಿರಲಾಗಿ, ಮತ್ತೆ ಕೆಲವರಿಗೆ ನಿರ್ಗುಣತ್ವ ಜ್ಞಾನವೇನೇ ಸಮ್ಯಕ್ ಜ್ಞಾನವು ಎಂಬ ಭ್ರಾಂತಿಯು ಉಂಟಾಗಿರಲಾಗಿ ಮತ್ತು ಆ ವಿಷಯವಾದ ಸದ್ಗುಣಗಳೇ ತತ್ವಗಳೋ ಅಥವಾ ನಿರ್ಗುಣತ್ವವೇ ತತ್ವವೋ ಎಂಬ ಸಂದೇಹವೂ, ನಿರ್ಗುಣತ್ವವೇ ತತ್ವವು ಎಂಬ ವಿಪರೀತ ಜ್ಞಾನರೂಪವಾದ ಭ್ರಾಂತಿಯು ಉಂಟಾಗಿರಲಾಗಿ, ತನ್ನಿರ್ಣಯಾಯ ತಸ್ಮಿನ್ = ಪರಬ್ರಹ್ಮನ ಸಗುಣತ್ವಜ್ಞಾನದಲ್ಲಿ ತತ್ವಜ್ಞಾನತ್ವದ ನಿಶ್ಚಯಕ್ಕಾಗಿ, ಪರಬ್ರಹ್ಮನ ಸಗುಣತ್ವವೇ ತತ್ವವು, ಅದಕ್ಕಿಂತಲೂ ಬೇರೆಯಾದ ನಿರ್ಗುಣತ್ವಾದಿಗಳು ತತ್ವಗಳಲ್ಲ ಎಂದು ಅದರ ವಿಷಯದಲ್ಲಿ ಸಮೀಚೀನತ್ವದ ನಿಶ್ಚಯಕ್ಕಾಗಿಯೂ, ಭೂಲೋಕ ನಿವಾಸಿಗಳಾದ ಸಜ್ಜನರಲ್ಲಿ ಕೃಪಾಳುಗಳಾದ ಬ್ರಹ್ಮರುದ್ರೇಂದ್ರಾದಿಭಿಃ =ಅರ್ಥಿತಃ =ಇಂದ್ರಾದಿ ದೇವತೆಗಳಿಂದ ಪ್ರಾರ್ಥಿಸಲ್ಪಟ್ಟ ರುದ್ರ ಮತ್ತು ಚತುರ್ಮುಖ ಬ್ರಹ್ಮದೇವರು, ಹೀಗೆ ಉತ್ತಮಾಧಿಕಾರಿಗಳಾದ ಬ್ರಹ್ಮರುದ್ರೇಂದ್ರಾದಿ ದೇವತೆಗಳಿಂದ ಬಹಳ ಭಕ್ತಿಯಿಂದ ''ಇತರ ಯಾರಿಂದಲೂ ಸಾಧ್ಯವಾಗದಿರತಕ್ಕ ತತ್ವಜ್ಞಾನ ನಿಶ್ಚಯಕ್ಕಾಗಿ ಪ್ರಾರ್ಥಿಸಲ್ಪಟ್ಟ, ಭಗವಾನ್ = ಸಮಗ್ರವಾದ ಐಶ್ವರ್ಯಾದಿ ಗುಣಸಂಪನ್ನನಾದ (ನಿರತಿಶಯ ಜ್ಞಾನಾದಿ ಗುಣಸಂಪನ್ನನಾದ) ನಾರಾಯಣಃ = ನಾರಾಯಣನು, ವ್ಯಾಸತ್ವೇನ, ಅವತತಾರ = ವೇದವ್ಯಾಸರೂಪದಿಂದ ಅಭಿವ್ಯಕ್ತನಾದನು.

ಅಥ = ತತ್ವಜ್ಞಾನ ನಿಶ್ಚಯಕ್ಕಾಗಿಯೇ ಅವತರಿಸಿರುವುದರಿಂದ ಅವತಾರ ಅನಂತರದಲ್ಲಿಯೇ, ಇಷ್ಟ ಅನಿಷ್ಟ ಪ್ರಾಪ್ತಿ, ಪರಿಹಾರೇಚ್ಛೂನಾಂ = ಇಷ್ಟವಾದುದರ ಪ್ರಾಪ್ತಿಯನ್ನೂ, ಅನಿಷ್ಟದ ಪರಿಹಾರವನ್ನೂ, ಅಪೇಕ್ಷಿಸುವವರಾದ, ತದ್ಯೋಗಂ = ಆ ಇಷ್ಟಪ್ರಾಪ್ತಿಯ ಉಪಾಯವನ್ನೂ, ಅನಿಷ್ಟ ಪರಿಹಾರದ ಉಪಾಯವನ್ನೂ, ಅವಿಜಾನತಾಂ = ತಿಳಿಯದಿರುವ ಸಜ್ಜನರಿಗೆ (ಮುಕ್ತಿಯೋಗ್ಯರಾದ ಸಾತ್ವಿಕ ವರ್ಗಕ್ಕೆ) ತಜ್ಞಾಪನಾರ್ಥಂ = ಇಷ್ಟಪ್ರಾಪ್ತಿಯ ಉಪಾಯವನ್ನು ತಿಳಿಸುವುದಕ್ಕಾಗಿ, ಉತ್ಸನ್ನಂ = ಅಪಪಾಠಾದಿಗಳಿಂದ ತಿರೋಹಿತವಾದ, ವೇದಂ = ಅವಾಂತರ ವೇದ ವಿಭಾಗಕ್ಕಿಂತಲೂ ಮುಂಚಿತವಾಗಿಯೇ ಮೂಲವೇದದಿಂದ ವಿಭಾಗಿಸಲ್ಪಟ್ಟದ್ದಾಗಿರುವ ಉಪವೇದವನ್ನು, ಅಂದರೆ ಮೂಲವೇದದಿಂದ ಮೊದಲೇ ಉದ್ಧೃತವಾಗಿರುವ ಋಕ್, ನಿಗದ, ಸಾಮ, ಅಥರ್ವ ಎಂಬ ಹೆಸರಿನಿಂದ ಕೂಡಿದ ಉಪವೇದವನ್ನು, ವ್ಯಂಜಯನ್, ಚತುರ್ಧಾ ವ್ಯಭಜತ್ = ಅಧ್ಯಾಪನದಿಂದ ಅಭಿವ್ಯಕ್ತಿಗೊಳಿಸಿ, ಆ ಒಂದೊಂದು ಭಾಗದಿಂದ ಉಪವೇದದ ಒಂದೊಂದು ಭಾಗದಿಂದ, ಋಗ್ವೇದ, ಯಜುರ್ವೇದ, ಸಾಮವೇದ ಅಥರ್ವಣ ವೇದ ಎಂದು ನಾಲ್ಕು ಹೆಸರಿನಿಂದ ಅವಾಂತರ ವೇದವೆಂದೂ ಕರೆಯಲ್ಪಡತಕ್ಕ ವೇದಗಳನ್ನು ವಿಂಗಡಿಸಿ ವಿಭಾಗ ಮಾಡಿದನು. (ಋಚಃ ಉದ್ಧೃತ್ಯ, ಅಭಿವ್ಯಜ್ಯ, ಋಗ್ವೇದಂ, ನಿಗದಾತ್ ಯಜುರ್ವೇದಂ, ಸಾಮ್ನಃ ಸಾಮವೇದಂ ಅಥರ್ವಣಾತ್ ಅಥರ್ವಣವೇದಂ ಕೃತವಾನಿತ್ಯರ್ಥಃ) ಋಕ್ಕುಗಳಿಂದ ಋಗ್ವೇದವನ್ನೂ, ನಿಗದ ಭಾಗದಿಂದ ಯಜುರ್ವೇದವನ್ನೂ, ಸಾಮಭಾಗದಿಂದ ಸಾಮವೇದವನ್ನು, ಅಥರ್ವ ವಿಭಾಗದಿಂದ ಅಥರ್ವಣ ವೇದವನ್ನೂ ವಿಭಾಗಿಸಿದನು ಎಂದು ಅಭಿಪ್ರಾಯ. ಈ ಸಂಗತಿಯನ್ನು ತಿಳಿಸುವ ಪ್ರಮಾಣ ವಾಕ್ಯವು ಈ ಕೆಳಗೆ ಕಂಡಂತಿದೆ.

ವಿಶೇಷ ವಿಚಾರ :-

**ಋಗ್ಭಾಷ್ಯದ ಪ್ರಮಾಣ ವಾಕ್ಯವು ಈ ರೀತಿ ಇದೆ.**<br>
**ಋಚಃ ಸ ಋಚ ಉದ್ಧೃತ್ಯ ಋಗ್ವೇದಂ ಕೃತವಾನ್ ಪ್ರಭುಃ**<br>
**ಯಜೂಂಷಿ ನಿಗದಾಚ್ಚೈವ ತಥಾ ಸಾಮಾನಿ ಸಾಮತಃ ।ಇತಿ।।**

ಅಥರ್ವಣ ಭಾಷ್ಯದಲ್ಲಿ ಉದಾಹೃತವಾಗಿರುವ ಸ್ಮೃತಿ ವಚನವು ಈ ರೀತಿ ಇದೆ.

ಏಕೋ ವೇದಃ ಕೃತೇ ಹ್ಯಾಸೀತ್ ತ್ರೇತಾಯಾಂ ಸ ತ್ರಿಧಾಭವತ್
ಸ ಏವ ಪಂಚಧಾ ಜಾತೋ ದ್ವಾಪರಂ ಪ್ರಾಪ್ಯ ವೈ ಯುಗಮ್
ಉತ್ಪನ್ನಃ ಸ ಕಲಿಂ ಪ್ರಾಪ್ಯ ವೇದಃ ಪ್ರಾಯೇಣ ಕೃತ್ಸ್ನಶಃ ॥

**ಅಭಿಪ್ರಾಯ** :- ಕೃತಯುಗದಲ್ಲಿ ವೇದೈಕತ್ವವೂ, ತ್ರೇತಾಯುಗದಲ್ಲಿ ತ್ರೈವಿಧ್ಯವೂ, ದ್ವಾಪರದಲ್ಲಿ ಅಪೌರುಷೇಯವಾದ ವೇದವು ನಾಲ್ಕು ಬಗೆಯಾಗಿರುವುದಾದರೂ, ಪೌರುಷೇಯವಾದ ಇತಿಹಾಸ ಪುರಾಣಾದಿಗಳ ಸಹಿತವಾಗಿ ಪಂಚವಿಧವಾಗಿಯೂ, ಕಲಿಯುಗದಲ್ಲಿ ಬಾಹುಳ್ಯದಿಂದ ಸರ್ವಪ್ರಕಾರದಿಂದಲೂ, ಉತ್ಪಾದವು ಉಕ್ತವಾಗಿರುವುದಾದರೂ, ವ್ಯಾಸಾವತಾರಕ್ಕೆ ಮುಂಚೆ ದ್ವಾಪರ ಯುಗದಲ್ಲೂ ಅಪಪಾಠಾದಿರೂಪವಾದ ಉತ್ಪಾದವು ಗೌತಮರ ಶಾಪದಿಂದ ಸಂಭವಿಸಿರುವುದರಿಂದ ಭಾಷ್ಯದಲ್ಲಿ "ದ್ವಾಪರೇ ವೇದಮುತ್ಪನ್ನಂ" ಎಂದು ಭಾಷ್ಯಕಾರರು ಹೇಳಿರುವುದಕ್ಕೆ ಯಾವ ವಿರೋಧವೂ ಇರುವುದಿಲ್ಲ.

ಅವ್ಯಕ್ತವಾದ ಋಕ್, ಯಜು, ಸಾಮ, ಅಥರ್ವ ರೂಪವಾದ ಮೂಲ ವೇದವು ಗುಣತ್ರಯಾತ್ಮಕವಾದ ಮೂಲ ಪ್ರಕೃತಿಯಂತೆ ಮಹಾ ಪ್ರಳಯದಲ್ಲೂ ಇದ್ದೇ ಇತ್ತು, ಆದುದರಿಂದಲೇ ಅದು ನಿತ್ಯವೆಂದು ಪ್ರಮಾಣಗಳು ಹೇಳುತ್ತಿವೆ.

"ವಾಚಾ ವಿರೂಪ ನಿತ್ಯಯಾ" ಇತ್ಯಾದಿ ಪ್ರಮಾಣಗಳು ಇದಕ್ಕೆ ಆಧಾರವಾಗಿವೆ. ಈ ವಿಷಯದಲ್ಲಿ ಸೂತ್ರಾರ್ಥ ಮಣಿಮಂಜರೀಕಾರರ ವಾಕ್ಯಾರ್ಥ ಸಂಗ್ರಹವು ಈ ಕೆಳಗೆ ಕಂಡಂತಿದೆ.

ಮೂಲ ಪ್ರಕೃತಿಯಿಂದ ಗುಣತ್ರಯಕ್ಕೆ ಅಂದರೆ ಸತ್ವಗುಣ, ರಜೋಗುಣ, ತಮೋಗುಣಗಳಿಗೆ ಪೃಥಕ್ಕರಣ ರೂಪವಾದ ಸೃಷ್ಟಿಯಂತೆ ಮೂಲವೇದದಿಂದ ಋಕ್, ಯಜು, ಸಾಮ, ಅಥರ್ವ ರೂಪವಾದ ನಾಲ್ಕು ಉಪವೇದಗಳನ್ನು ಶ್ರೀಮನ್ನಾರಾಯಣನೇ ಹಯಗ್ರೀವಾದಿ ರೂಪದಿಂದ ಅಭಿವ್ಯಕ್ತಿಗೊಳಿಸಿದನು. ಆಮೇಲೆ ಕಾಲಾಂತರದಲ್ಲಿ ಮೂಲವೇದದಿಂದ ಉದ್ಧೃತವಾದ ಉಪವೇದಗಳಿಂದ ಋಗ್ವೇದಾದಿ ನಾಲ್ಕು ವಿಭಾಗವನ್ನು ಶ್ರೀ ವ್ಯಾಸರೂಪದಿಂದ ಮಾಡಿ, ಅನಂತರದಲ್ಲಿ ಶಾಖಾಭೇದವನ್ನು ಮಾಡಿದನು.

ವೇದವೆಂದರೆ ನಿಯತವಾದ ಕ್ರಮವಿಶೇಷ ವಿಶಿಷ್ಟಗಳಾದ ವರ್ಣಗಳು ಹೊರತು ಕೇವಲ ವರ್ಣ ಮಾತ್ರವಲ್ಲ. ಕೇವಲ ವರ್ಣಗಳು ಪುರಾಣಗಳಲ್ಲೂ ಇವೆ. ವರ್ಣಗಳಾದರೋ ನಿತ್ಯಗಳಾಗಿವೆ. ಅವುಗಳಿಗೆ ಉತ್ಪತ್ತಿಯೂ ಇಲ್ಲ ನಾಶವೂ ಇಲ್ಲ. ವ್ಯಾಪಕಗಳಾಗಿವೆ. ಸ್ವತಃ ವರ್ಣಗಳು ಕ್ರಮರಹಿತಗಳಾಗಿವೆ. ಹೀಗಿರುವಲ್ಲಿ ವೇದದ ನಿತ್ಯತ್ವವು ಹೇಗೆಂಬ ಶಂಕೆಯನ್ನು ಈ ಕೆಳಗೆ ಕಂಡಂತೆ ಪ್ರಾಚೀನಾಚಾರ್ಯರು ಪರಿಹರಿಸಿರುತ್ತಾರೆ.

ಕ್ರಮವು ಮೂರು ಬಗೆಯಾಗಿದೆ.

೧. ಕಾಲಿಕವಾದ ಕ್ರಮ

೨. ದೈಶಿಕವಾದ ಕ್ರಮ

೩. ಬೌದ್ಧವಾದ ಕ್ರಮವೆಂದು ಮೂರು ವಿಧವಾಗಿದೆ.

ಇವುಗಳಲ್ಲಿ

೧. ಪೂರ್ವೋತ್ತರ ಕಾಲಗಳಲ್ಲಿ ಉತ್ಪತ್ತಿಮತ್ತ್ವರೂಪವಾದ ಕ್ರಮವು – ಕಾಲಿಕ ಕ್ರಮವೆಂದು ಕರೆಯಲ್ಪಡುತ್ತದೆ.

೨. ಪೂರ್ವೋತ್ತರ ದೇಶಗಳಲ್ಲಿ ಉತ್ಪತ್ತಿಮತ್ತ್ವರೂಪವಾದ ಕ್ರಮವನ್ನು ದೈಶಿಕ ಕ್ರಮವೆನ್ನುತ್ತಾರೆ.

೩. ಪೂರ್ವೋತ್ತರ ಕಾಲಗಳಲ್ಲಿ ಬುದ್ಧಿಯಿಂದ ವಿಷಯೀಕೃತತ್ವರೂಪವಾದ ಕ್ರಮವನ್ನು ಬೌದ್ಧಕ್ರಮವೆನ್ನುವರು.

**ಉದಾ** :- ಹಿಂದಿನ ವರ್ಣ ಮುಂದಿನ ವರ್ಣ ಇತ್ಯಾದಿ ರೂಪವಾದುದು.

ವೇದದಲ್ಲಾದರೋ ಈಶ್ವರ ಬುದ್ಧಿಯಿಂದ ಏಕಪ್ರಕಾರವಾಗಿ ನಿಯತವಾಗಿ ವಿಷಯೀಕೃತತ್ವರೂಪವಾದ ಕ್ರಮವು ಸದಾ ಅಂದರೆ ಯಾವಾಗಲೂ ಇರುವುದರಿಂದ ವೇದಕ್ಕೆ ನಿತ್ಯತ್ವವು ಯುಕ್ತವಾಗಿದೆ.

ಪುರಾಣಾದಿಗಳಲ್ಲಿನ ಕ್ರಮವೂ ಸುಸ ಸದಾ ಈಶಬುದ್ಧಿವಿಷಯದಾಗಿರುವುದರಿಂದ ಅವುಗಳಿಗೂ ನಿತ್ಯತ್ವವು ಬರಲಿ ಎಂದ ಶಂಕೆಗೆ ಕಾರಣವಿಲ್ಲ.

ಆ ಪುರಾಣಾದಿಗಳಲ್ಲಿನ ವರ್ಣಕ್ರಮವು ಸಾದಿಯಾಗಿರುವುದರಿಂದ ಕೃತಕವಾಗಿರುವುದರಿಂದ ಪುರಾಣಾದಿಗಳ ಭಾವಿ (ಮುಂದಿನ) ಕ್ರಮವು "ಅಯಮೇವಂ ಉಚ್ಚಾರಯಿಷ್ಯತಿ" ಮುಂದೆ ಹೀಗೆ ಇವನು ಉಚ್ಚರಿಸುವನೆಂದು ಪರಮಾತ್ಮನ ಬುದ್ಧಿಯು ವಿಷಯೀಕರಿಸುವುದರಿಂದ ಅದರ ಕ್ರಮದಲ್ಲಿ ಒಂದೇ ರೀತಿ ಇಲ್ಲವೆ ವರ್ಣ ಪದಗಳ ವ್ಯತ್ಯಾಸವು ಮುಂದೆ ಸಂಭಾವಿತವಾಗಿರುವುದರಿಂದ ಪುರಾಣಾದಿಗಳಿಗೆ ಅರ್ಥತಃ ನಿತ್ಯತ್ವವು ಇರುವುದಾದರೂ ಶಬ್ದತಃ ಕ್ರಮದಿಂದ ವೇದದಂತೆ ನಿತ್ಯತ್ವವು ಇರುವುದಿಲ್ಲವೆಂದು ಅಭಿಪ್ರಾಯ.

ವೇದಕ್ಕೆ ನಿತ್ಯತ್ವವು ಇರುವುದಾದರೆ ಅದರಲ್ಲಿ ಪುರುಷಾಭಿಪ್ರಾಯಕ್ಕೆ ಪ್ರವೇಶವಿರುವುದು ಹೇಗೆಂಬ ಶಂಕೆಯು ಉಂಟಾಗುತ್ತದೆ. ಅದಕ್ಕೆ ಸಮಾಧಾನವು ಈ ರೀತಿ ಇದೆ.

ಲಕ್ಷ್ಮೀನಾರಾಯಣರಿಗೆ ನಿತ್ಯತ್ವವು ಇರುವುದರಿಂದ ಅವರಿಬ್ಬರ ದಾಂಪತ್ಯವು ಹೇಗೆ ಅನಾದಿ ಸಿದ್ಧವಾಗಿದೆಯೋ, ಈಶ ಜೀವರಿಗೆ ನಿತ್ಯತ್ವವು ಇರುವುದಾದರೂ ಅವರಲ್ಲಿ ಪರಮಾತ್ಮನಿಗೆ ನಿಯಾಮಕತ್ವವು ಜೀವರಿಗೆ ನಿಯಮ್ಯತ್ವವು ಹೇಗೆ ಅನಾದಿ ಸಿದ್ಧವಾಗಿದೆಯೋ ಹಾಗೆಯೇ ಈಶನೂ ವೇದಗಳು ನಿತ್ಯಗಳಾದಾಗ್ಯೂ ವೇದಕ್ಕೆ ಈಶಾಭಿಪ್ರಾಯ ಪೂರ್ವಕತ್ವವು ಅನಾದಿಸಿದ್ಧವೇ ಸರಿ.

ವೇದದಂತೆ ಎಲ್ಲಾ ಬಗೆಗಳಾದ ಲೌಕಿಕ ವೈದಿಕ ಸಂಸ್ಕೃತಪದಗಳಿಗೆ ನಿತ್ಯತ್ವವು "ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ" ಇತ್ಯಾದಿ ಶ್ರುತಿಸಿದ್ಧವೇ ಆಗಿದೆ.

ಮಹಾಪ್ರಳಯದಲ್ಲಿ ಜನ್ಯಗಳಾದ ಪದಾರ್ಥಗಳಾವುವೂ ಇರುವುದಿಲ್ಲ. ವೇದದಲ್ಲಿನ ಸಂಸ್ಕೃತ ಶಬ್ದಗಳಿಗೆಲ್ಲಾ ನಿತ್ಯತ್ವವನ್ನು ಒಪ್ಪಿರುವುದರಿಂದ ಪದಾರ್ಥಗಳೇ ಇಲ್ಲದಿರುವಾಗ ಆ ಪದಗಳಿಗೆ ವಾಚ್ಯಗಳಾದ ಅರ್ಥಗಳಿಲ್ಲದಂತಾಯಿತು.

ಪದಗಳಿಗೆ ಅರ್ಥವತ್ತ್ವವೆಂದರೆ ಅರ್ಥದಿಂದ (ವಾಚ್ಯವಾಚಕಭಾವರೂಪವಾದ) ಸಂಬಂಧವನ್ನು ಹೇಳಬೇಕು. ವಾಚ್ಯವಾದ ಅರ್ಥವೇ ಇಲ್ಲವಾದ ಮೇಲೆ ಅದರ ಸಂಬಂಧವು ಕೂಡುವುದಿಲ್ಲ. ಅರ್ಥವಿಲ್ಲದಿರುವ ವಂಚಕ ವಾಕ್ಯದಂತೆ ವೇದವಾಣಿಯು ಆಯಿತಲ್ಲಾ ಎಂಬ ಶಂಕೆಯು ಆಪಾತತಃ ಉಂಟಾಗುತ್ತದೆ. ಇದಕ್ಕೆ ಸಮಾಧಾನವು ಈ ರೀತಿ ಇದೆ.

ಮಹಾ ಪ್ರಳಯದಲ್ಲಿ ವಾಚ್ಯಗಳಾದ ಬೇರೆ ಅರ್ಥಗಳು ಇಲ್ಲವಾದರೂ ಇಡೀ ವೇದವು ಕೇವಲ ಭಗವನ್ಮಾತ್ರವಾಚಿಯಾಗಿದೆ. ಈ ವಿಚಾರವನ್ನು "ಸಮಾನನಾಮರೂಪತ್ವಾಚ್ಚ" ಎಂಬ ಸೂತ್ರಭಾಷ್ಯದ ಟೀಕಾದಲ್ಲಿ ತಿಳಿಯಬಹುದಾಗಿದೆ.

ಸೃಷ್ಟ್ಯನಂತರದಲ್ಲಿ ಶಬ್ದಗಳಿಗೆ ಹಿಂದಿನಂತೆ ಆಯಾ ಅರ್ಥದಲ್ಲಿ ಭಗವಂತನೇ ಸಂಬಂಧವನ್ನು ಕಲ್ಪಿಸುತ್ತಾನೆ. ಆದುದರಿಂದಲೇ ವೈದಿಕಶಬ್ದಗಳಿಗೆ ಸದಾ ಭಗವದ್ವಾಚಿತ್ವವಿರುವುದರಿಂದ ಪರಮಮುಖ್ಯ ವೃತ್ತಿಯನ್ನು ಅಂಗೀಕರಿಸಲಾಗಿದೆ. ಪ್ರಳಯಾತಿರಿಕ್ತವಾದ ಕಾಲದಲ್ಲಿ ಮಾತ್ರ ಜಗದ್ವಾಚಿಯಾದುದರಿಂದ ಜಗತ್ತಿನ ವಿಷಯದಲ್ಲಿ ಆಯಾ ಪದಗಳಿಗೆ ಮುಖ್ಯವೃತ್ತಿಯನ್ನು ಹೇಳಲಾಗಿದೆ. ಅಸ್ಮದಾದಿಗಳ ಮೂಲಕವಾಗಿ ತಮ್ಮ ತಮ್ಮ ಸಂಕೇತಕ್ಕೆ ಅನುಗುಣವಾಗಿ ಅನ್ಯಬೋಧಕತ್ವವನ್ನು ಕಲ್ಪಿಸುವ ಮೂಲಕವಾಗಿ ಗೌಣೀವೃತ್ತಿಯು ಎಂಬ ವ್ಯವಸ್ಥೆಯು ಸಂಗತವಾಗಿದೆ.

ವರ್ಣಗಳೂ ನಿತ್ಯಗಳಾಗಿವೆ. ಈಶ್ವರ ಬುದ್ಧಿಯೂ ನಿತ್ಯವಾಗಿದೆ. ಸರ್ವದಾ ಸರ್ವವರ್ಣಗಳೂ ಈಶ್ವರ ಬುದ್ಧಿಗೆ "ಖಲೇಕಪೋತ ನ್ಯಾಯದಿಂದ" ವಿಷಯಗಳಾಗುವುದರಿಂದ ಪರಮಾತ್ಮನಿಗೆ ಕ್ರಮ ವಿಶೇಷ ವಿಶಿಷ್ಟವಾದ ವರ್ಣಾತ್ಮಕವಾದ ವೇದಜ್ಞಾನವು ಹೇಗೆ? ಎಂಬ ಶಂಕೆಯು ಉಂಟಾಗುತ್ತದೆ. ಇದಕ್ಕೆ ಸಮಾಧಾನವನ್ನು ಈ ರೀತಿ ತಿಳಿಯಬಹುದಾಗಿದೆ.

" ಯಃ ಸರ್ವಜ್ಞಃ ಸರ್ವವಿತ್" ಇತ್ಯಾದಿ ವೇದವಾಣಿಯು ಈಶ್ವರನಿಗೆ ಸರ್ವಪದಾರ್ಥಗಳ ಸಾಮಾನ್ಯ ಜ್ಞಾನವೂ ವಿಶೇಷ ಜ್ಞಾನವೂ ಉಂಟೆಂದು ತಿಳಿಸುತ್ತಲಿದೆ. ಈಶ್ವರನ ಸಾಮಾನ್ಯ ಜ್ಞಾನದಲ್ಲಿ ವರ್ಣಗಳೆಲ್ಲವೂ ತತ್ತದ್ರೂಪದಿಂದ ತೋರುತ್ತದೆ.

ವಿಶೇಷ ಜ್ಞಾನದಲ್ಲಿ ಕ್ರಮವಿಶಿಷ್ಟವಾದ ವೇದವು ಭಾಸವಾಗುತ್ತದೆಯೆಂದು ಹೇಳಿದರೆ ಯಾವ ದೋಷವೂ ಬರಲಾರದು. ಯದ್ಯಪಿ ಈಶ್ವರ ಜ್ಞಾನವೂ ಒಂದೇ ಆದಾಗ್ಯೂ ವಿಶೇಷ ಶಕ್ತ್ಯಾ ಎಲ್ಲವನ್ನೂ ಕೂಡಿಸಬಹುದು.

ಮುಖ್ಯವಾಗಿ ಈ ಅಂಶವನ್ನು ಗಮನಿಸಬೇಕು. ಲೌಕಿಕ ವಾಕ್ಯದಲ್ಲಿ ಪದಗಳಿಗೆ ಮಾತ್ರ ನಿತ್ಯತ್ವವು, ವೇದದಲ್ಲಾದರೋ ಆನುಪೂರ್ವೀ ವಿಶೇಷ ವಿಶಿಷ್ಟಗಳಾದ ವಾಕ್ಯಗಳಿಗೂ ನಿತ್ಯತ್ವವು ಇರುತ್ತದೆಯೆಂಬ ವಿಶೇಷವನ್ನು ಪ್ರಮಾಣಗಳು ತಿಳಿಸುತ್ತಲಿವೆ.

ಕೆಲವರು ನಿಯತಕ್ರಮಪ್ರಕಾರವೇ ವೇದದ ನಿತ್ಯತ್ವವು. ಅಂತಹ ಪ್ರಕಾರದ ಕರ್ತೃವು ಅಪ್ರಸಿದ್ಧವಾದುದರಿಂದಲೇ ವೇದಕ್ಕೆ ಅಪೌರುಷೇಯತ್ವವು ಸುಪ್ರಸಿದ್ಧವಾಗಿದೆಯೆಂದು ಹೇಳುವರು. ಇದೆಲ್ಲವೂ ಸೂತ್ರಾರ್ಥಮಣಿಮಂಜರೀಕಾರರ ಅಭಿಪ್ರಾಯವಾಗಿದೆ.

ಹಿಂದೆ ತಿಳಿಸಿದ "ದ್ವಾವೇ ಸರ್ವತ್ರಜ್ಞಾನ ಅಕುಲೀಭೂತೇ" ಎಂಬ ಸೂತ್ರಭಾಷ್ಯದ ಅವತಾರಿಕಾ ವಾಕ್ಯದ ಅರ್ಥ ಸಂಗ್ರಹಾರ್ಥ ರೂಪವಾಗಿ ತಂತ್ರದೀಪಿಕಾ ಕಾರರು ತಂತ್ರದೀಪಿಕೆಯಲ್ಲಿ ಜಿಜ್ಞಾಸಾಧಿಕರಣದ ಪ್ರಾರಂಭದಲ್ಲಿ ಈ ಕೆಳಗೆ ಕಂಡಂತೆ ಸಂಗ್ರಹಿಸಿ ನಿರೂಪಿಸಿರುತ್ತಾರೆ. ಆ ತಂತ್ರದೀಪಿಕಾ ವಾಕ್ಯವು ಈ ರೀತಿ ಇದೆ.

೧. ಬ್ರಹ್ಮರುದ್ರೇಂದ್ರಾದಿಭಿಃ ಜ್ಞಾನಾರ್ಥಂ ಅರ್ಥಿತೋ ನಾರಾಯಣಃ ವ್ಯಾಸತ್ವೇನಾವತೀರ್ಯ ಉತ್ಪನ್ನಾನ್ ವೇದಾನ್ ಅಭಿವ್ಯಕ್ತಿ ಪೂರ್ವಕಂ ಅನೇಕಧಾ ವಿಭಜ್ಯ ತದರ್ಥನಿರ್ಣಯಾಯ ಬ್ರಹ್ಮಸೂತ್ರಾಣಿ ವ್ಯಾತೇನೇ ಇತಿ

ಪ್ರಥಮಸೂತ್ರವಾದ ಜಿಜ್ಞಾಸಾ ಸೂತ್ರದಲ್ಲಿನ ಓಂಕಾರದ ವಿಚಾರವಾಗಿ ಪ್ರಾಚೀನ ಟೀಕಾಕಾರರಾದ ಶ್ರೀಪದ್ಮನಾಭತೀರ್ಥರ ಅಭಿಪ್ರಾಯವನ್ನು ತಾತ್ಪರ್ಯ ಚಂದ್ರಿಕಾಕಾರರು ಪರಿಶೀಲಿಸಿ ಸಮರ್ಥಿಸಿ, ಶ್ರೀಮನ್ನ್ಯಾಯಸುಧೆಗೂ ಪ್ರಾಚೀನ ಟೀಕೆಗೂ ಆಪಾತತಃ ತೋರತಕ್ಕ ವಿರೋಧವನ್ನು ಪರಿಹರಿಸಿ ಯದ್ವಾ ಸನ್ನ್ಯಾಯರತ್ನಾವಲ್ಯುಕ್ತಂ ಪೃಥಕ್ತ್ವಂ ಊಹ್ಯಮಾನತ್ವಂ, ನತು ವಾಕ್ಯೈಕವಾಕ್ಯತ್ವಂ ಇತ್ಯವಿರೋಧ ಇತಿದ್ರಷ್ಟವ್ಯಮ್'' ಎಂದು ಕಲ್ಪಾಂತರವನ್ನು ತೋರಿಸಿ ವಿರೋಧವನ್ನು ನಿವಾರಣೆ ಮಾಡಿರುವರು. ಈ ಯದ್ವಾ ಎಂಬ ಕಲ್ಪಕ್ಕೆ ಶ್ರೀಸ್ವಾಮಿಗಳು ತಾತ್ಪರ್ಯ ಚಂದ್ರಿಕಾ ಪ್ರಕಾಶದಲ್ಲಿ ನನು ಶ್ರುತಿಪ್ರಾಪಿತಸ್ಯೈವ ಓಂಕಾರಸ್ಯ ಸ್ಮೃತಿವಿಷಯತ್ವಸಂಭವಾತ್ ನ ಓಂಕಾರದ್ವಯಂ ಕಲ್ಪ್ಯಮಿತಿ ಭಾವೇನ, ಏಕವಿಷಯತ್ವೇಽಪ್ಯವಿರೋಧಮಾಹ ಯದ್ವೇತಿ ಎಂದು ಯಾವ ಅಭಿಪ್ರಾಯವನ್ನೂ ವ್ಯಕ್ತಪಡಿಸಿರುತ್ತಾರೆಯೋ ಅದೇ ಅಭಿಪ್ರಾಯದಿಂದ ಈ ತಂತ್ರದೀಪಿಕಾ ಗ್ರಂಥದಲ್ಲೂ ಸಹ ಪ್ರಾರಂಭದಲ್ಲಿ ಶ್ರೀಮನ್ನ್ಯಾಯ ಸುಧೆಯಲ್ಲಿ ತೀರ್ಮಾನಿಸಿರುವ ಅಸಂಹಿತತಯಾ ನಿರ್ದೇಶವೆಂಬ ಪಕ್ಷವನ್ನೇ ಅವಲಂಬಿಸಿ ''ತತ್ರ ಇದಂ ಆದಿಮಂ ಸೂತ್ರಂ'' ಎಂದು ಹೇಳಿ ''ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ'' ಎಂದು ಮೊದಲನೆಯ ಸೂತ್ರವನ್ನು ನಿರ್ದೇಶಿಸಿರುತ್ತಾರೆ.

ಇದರಿಂದ ತಾತ್ಪರ್ಯ ಚಂದ್ರಿಕಾಕಾರರ ಅಭಿಪ್ರಾಯವನ್ನೂ, ಶ್ರೀಮನ್ನ್ಯಾಯಸುಧಾ ಅಭಿಪ್ರಾಯವನ್ನೂ ಸಂಗ್ರಹಿಸಿದಂತಾಗಿದೆ.

ಜಿಜ್ಞಾಸಾಸೂತ್ರದ ಪ್ರಾರಂಭದಲ್ಲಿ ಅಸಂಹಿತತಯಾ ನಿರ್ದಿಷ್ಟವಾದ ಒಂದೇ ಓಂಕಾರ ಅಥವಾ ಮಾಂಗಳಿಕವಾದ ಒಂದು ಓಂಕಾರ, ಅವಯವಭೂತವಾದ ಒಂದು ಓಂಕಾರ ಎಂಬ ಎರಡೂ ಕಲ್ಪಗಳನ್ನೂ ಸಂಗ್ರಹಿಸಿ ಭಾಷ್ಯದೀಪಿಕಾಕಾರರು ವಿವರಣೆಯನ್ನು ತೋರಿಸಿರುತ್ತಾರೆ.

ಆ ವಾಕ್ಯಗಳು ಹೀಗಿವೆ.

**''ಅತ್ರಸೂತ್ರೇ ಆದ್ಯಂತಯೋರೋಂಕಾರಃ ಉಚ್ಚಾರಣೀಯಃ**
**ತತ್ರ ಆದ್ಯಃ ಏಕಏವದೃಷ್ಟಾದೃಷ್ಟೋ ಭಯಾರ್ಥಃ**
**ಅತ ಏವ ಸೂತ್ರಾವಯವಃ**
**ಸರ್ವಸೂತ್ರೇಷು ಅನುವೃತ್ತ್ಯರ್ಥಂ ಅಸಂಹಿತತಯಾ ಉಚ್ಚಾರ್ಯತೇ**
**ಅಥವಾ ಆದೌ ಓಂಕಾರದ್ವಯಮ್**
**ಅದೃಷ್ಟಾರ್ಥೋ ದೃಷ್ಟಾರ್ಥಶ್ಚೇತಿ**
**ಅಂತೇತುಪಕ್ಷದ್ವಯೇಽಪಿ ಅದೃಷ್ಟಾರ್ಥಃ ಏವ ಓಂಕಾರಃ ಇತಿ**

ಅಂದರೆ ಸೂತ್ರನಿರ್ದೇಶದ ವಿಷಯದಲ್ಲಿ ಪಕ್ಷದ್ವಯದ (ಎರಡು ಪಕ್ಷಗಳ) ಪ್ರಕಾರ ಸೂತ್ರವನ್ನು (ಜಿಜ್ಞಾಸಾ ಸೂತ್ರವನ್ನು ಈ ಕೆಳಗೆ ಕಂಡಂತೆ) ಉಚ್ಚರಿಸಬೇಕೆಂದು ಅಭಿಪ್ರಾಯ.

ಅಸಂಹಿತತಯಾ ನಿರ್ದೇಶ ಮಾಡಬೇಕೆಂಬ ಶ್ರೀಮನ್ನ್ಯಾಯಸುಧಾಕಾರರ ವಾಕ್ಯದಂತೆ

**ಓಂ - ಅಥಾತೋ ಬ್ರಹ್ಮಜಿಜ್ಞಾಸಾ ಓಂ**

ಎಂದು ಸೂತ್ರದ ನಿರ್ದೇಶವು. ಸನ್ನ್ಯಾಯರತ್ನಾವಳೀಕಾರರ ಅಭಿಪ್ರಾಯದಂತೆ

**ಓಂ ಓಂ ಅಥಾತೋ ಬ್ರಹ್ಮಜಿಜ್ಞಾಸಾಂ ಓಂ**

ಎಂದು ಮೊದಲು ಎರಡು ಓಂಕಾರಯುಕ್ತವಾದ ಸೂತ್ರದ ಪಾಠವು.

ಆಪಾತತಃ ಸನ್ನ್ಯಾಯ ರತ್ನಾವಳಿಯ ವ್ಯಾಖ್ಯಾನಕ್ಕೂ ನ್ಯಾಯಸುಧೆಗೂ ತೋರತಕ್ಕ ವಿರೋಧವು ಈ ರೀತಿ ಇದೆ.

ಸನ್ನ್ಯಾಯರತ್ನಾವಳೀ ವ್ಯಾಖ್ಯಾನದಲ್ಲಿ ಶ್ರೀಪದ್ಮನಾಭ ತೀರ್ಥರು

> **"ಓಂಕಾರಸ್ಯ ಸ್ವತನ್ತ್ರೋಽಂಕಿತಂ ಬ್ರಹ್ಮೇತಿ ವಚನಾತ್**
> **ಪ್ರತ್ಯಧಿಕರಣಮಾವರ್ತಮಾನತ್ವಾತ್ ಪೃಥಗುಚ್ಚಾರಿತೋ ವೇದಿತವ್ಯೋ**
> **ನಾತ್ರಾಥಶಬ್ದವತ್ ಸೂತ್ರೇಣನಿಬದ್ಧಃ"**

ಎಂದು ಹೇಳಿದ್ದಾರೆ. ಈ ವಾಕ್ಯದಿಂದ ಪ್ರಥಮಸೂತ್ರವಾದ ಜಿಜ್ಞಾಸಾ ಸೂತ್ರದಲ್ಲಿ ಅಥ ಶಬ್ದದಂತೆ ಓಂಕಾರವು ಸೂತ್ರಾವಯವವಾಗಿಲ್ಲವೆಂದು ತೋರುತ್ತದೆ. ಸೂತ್ರಕ್ಕಿಂತಲೂ ಓಂಕಾರವು ಪ್ರತ್ಯೇಕವಾಗಿಯೇ ಇರುವುದಾಗಿ ಅಭಿಪ್ರಾಯವಾಗುತ್ತದೆ.

ಹೀಗೆ ಹೇಳಿದರೆ ಅನುವ್ಯಾಖ್ಯಾನದಲ್ಲಿ "ತತ್ರತಾವದಥ ಮೂಲತ್ವಂ" ಇತ್ಯಾದಿ ಗ್ರಂಥದಿಂದಲೂ, "ಓ ತತ್ಪ್ರವಾಚಕತ್ವೋಂಕಾರೋ ವ್ಯಕ್ತೌ ತದ್ಗುಣೋಕ್ತಿತಾ" ಎಂಬ ಗ್ರಂಥಭಾಗದಿಂದಲೂ ಗುಣಪೂರ್ಣತ್ವಾದಿರೂಪವಾದ ಅರ್ಥವನ್ನು ಹೇಳಿರುವುದು, ಸರ್ವವೇದಗಳಿಂದಲೂ ವ್ಯಾಖ್ಯಾನ ಮಾಡಲ್ಪಟ್ಟ ಓಂಕಾರದ ಅರ್ಥವನ್ನು ಹೇಳತಕ್ಕ ಶ್ರೀನಾರಾಯಣಪದದಿಂದ ವಾಚ್ಯನಾದವನಿಗೆ ಸರ್ವವೇದಾರ್ಥತ್ವವಿರುವುದರಿಂದ ಬ್ರಹ್ಮಮೀಮಾಂಸಾಶಾಸ್ತ್ರ ವಿಷಯತ್ವವು ಉಂಟೆಂಬುದನ್ನು ತೋರಿಸುವುದಕ್ಕಾಗಿಯೇ ಹೊರತು ಸೂತ್ರಾರ್ಥವನ್ನು ನಿರ್ವಚನ ಮಾಡುವುದಕ್ಕಲ್ಲವೆಂದು ಹೇಳಬೇಕು. ಒಂದು ವೇಳೆ "ಓ ತತ್ಪ್ರವಾಚಕತ್ವೋಂಕಾರೋ" ಎಂಬ ಪ್ರತಿಪಾದನೆಯಿಂದ ಓಂಕಾರವು ಪ್ರಥಮ ಸೂತ್ರದ ಅವಯವವೆಂದು ಹೇಳುವುದಾದರೆ, "ಸ ಏವ ಭರ್ಗಶಬ್ದಾರ್ಥೋ ನಾರಾಯಣ ಪದೋದಿತಃ" ಇತ್ಯಾದಿಯಾಗಿ ಅನುವ್ಯಾಖ್ಯಾನದಲ್ಲಿ ಭರ್ಗ ಮೊದಲಾದ ಪದಗಳಿಗೂ ಅರ್ಥವನ್ನು ಹೇಳಿರುವುದರಿಂದ ಭರ್ಗಾದಿ ಪದಗಳೂ ಸಹ ಪ್ರಥಮ ಸೂತ್ರದ ಅವಯವಗಳೆಂದು ಹೇಳಬೇಕಾದೀತು. ಆದರೆ ಹಾಗಿಲ್ಲ. ಆದಕಾರಣ ಓಂಕಾರವು ಪ್ರಥಮಸೂತ್ರಕ್ಕೆ ಅವಯವವಾಗಿ ಸಂಬಂಧವುಳ್ಳದ್ದಲ್ಲವೆಂದು ಸನ್ನ್ಯಾಯರತ್ನಾವಳೀಕಾರರ ಅಭಿಪ್ರಾಯವೆಂದು ಆಪಾತತಃ ತೋರುತ್ತದೆ. ನ್ಯಾಯಸುಧೆಯಲ್ಲಾದರೋ ಅವಯವವೆಂದೇ ತೀರ್ಮಾನಿಸಿರುವುದರಿಂದ

> "ಏವಮನುಮಾನೇ ನಿರಸ್ತೇ ಸಂಪ್ರದಾಯೇನ ಆದೌ ಉಚ್ಚಾರಣೇನ ಓಂಕಾರಸ್ಯ ಪ್ರಥಮಸೂತ್ರಾವಯವಾವಯವ
> ತ್ವಸಿದ್ಧ್ಯೈ ಉಕ್ತಂ ಉಪಪನ್ನಮ್" ಇತಿ

(ನ್ಯಾಯಸುಧಾ ಜಿಜ್ಞಾಸಾಧಿಕರಣ) ಅಂತೂ ಶ್ರೀ ಪದ್ಮನಾಭತೀರ್ಥರ ಟೀಕಾವಾಕ್ಯಕ್ಕೂ, (ಪ್ರಾಚೀನ ಟೀಕೆಗೂ) ನ್ಯಾಯಸುಧೆಗೂ ಪರಸ್ಪರ ವಿರೋಧವೆಂದು ಆಪಾತತಃ ತೋರಿ ಬರುತ್ತಿದೆ.

ಇದನ್ನು ತಾತ್ಪರ್ಯಚಂದ್ರಿಕಾಕಾರರು ಪರಿಹರಿಸಿರುತ್ತಾರೆ.

ಆ ವಾಕ್ಯಗಳು ಈ ರೀತಿ ಇವೆ.

> **''ಯದ್ವಾ, ಮಾಸ್ತು ''ಪ್ರವತ್ಯನೋಂಕೃತಂ'' ಇತ್ಯನೇನ ಸಾಧಾರಣೋಂಕಾರಸ್ಯ ಆದ್ಯ ಸೂತ್ರಾವಯವತಾ''।**
> **ತಥಾಪಿ ಓಂಕಾರಶ್ಚಾಥಶಬ್ದಶ್ಚ ತಸ್ಮಾತ್ ಪ್ರಾಥಮಿಕೌ ಕ್ರಮಾತ್।**
> **ತದ್ಧೇತುತ್ವಂ ವದಂಶ್ಚಾಪಿ ತೃತೀಯೋಽತ ಉದಾಹೃತಃ।**
> **ಅತಶ್ಚಪೂರ್ವಂ ಉಚ್ಚಾರ್ಯಾಃ ಸರ್ವಏತೇಸತಾಂಮತಾಃ'' ಇತಿಭಾಷ್ಯೋದಾಹೃತಸ್ಮೃತ್ಯಾ ಅಥಾತಃ ಶಬ್ದ ತುಲ್ಯತಯಾ, ಆದ್ಯಸೂತ್ರಾವಯವತ್ವೋಕ್ತಿಃ ಯುಕ್ತಾ।**
> **ಏವಂ ಚ ಸನ್ನ್ಯಾಯ ರತ್ನಾವಳೀ**
> **ಪ್ರವತೀತ್ಯಾದಿಶ್ರುತಿಪ್ರಾಪಿತಸಾಧಾರಣೋಂಕಾರವಿಷಯಾ।**
> **ಸುಧಾತು ''ಓಂಕಾರಶ್ಚೇತ್ಯಾದಿ''**
> **ಸ್ಮೃತಿಪ್ರಾಪಿತಾಸಾಧಾರಣೋಂಕಾರವಿಷಯೇತಿದ್ರಷ್ಟವ್ಯಮ್''।**

**ಅಭಿಪ್ರಾಯ** :- ಸನ್ನ್ಯಾಯರತ್ನಾವಳಿಗೂ ನ್ಯಾಯಸುಧೆಗೂ ಆಪಾತತಃ ವಿರೋಧವು ತೋರಿ ಬರುವುದಾದರೂ ವಿಚಾರ ಮಾಡಲಾಗಿ ಯಾವ ವಿರೋಧವೂ ಇರುವುದಿಲ್ಲ. ಸನ್ನ್ಯಾಯರತ್ನಾವಳಿಯಲ್ಲಿ ''ಓಂಕಾರಸ್ತು ಪೃಥಗುಚ್ಚಾರಿತೋ ವೇದಿತವ್ಯಃ'' ಎಂದು ಸೂತ್ರಕ್ಕೆ ಅಥ ಶಬ್ದದಂತೆ ಅವಯವವಾಗಿಲ್ಲವೆಂದು ಹೇಳಿರುವುದು ಮಾಂಗಳಿಕವಾಗಿ ''ಪ್ರವತ್ಯ ನೋಂಕೃತಂ ಬ್ರಹ್ಮ'' ಎಂಬ ನಿಂದಾರ್ಥವಾದರೂಪವಾದ ಶ್ರುತಿಪ್ರಾಪಿತವಾದ ಓಂಕಾರಕ್ಕೆ ಸಂಬಂಧಪಟ್ಟದ್ದು.

ನ್ಯಾಯಸುಧೆಯಲ್ಲಾದರೋ ಅವಯವವೆಂದು ಹೇಳಿರುವುದು.

''ಓಂಕಾರಶ್ಚಾಥಶಬ್ದಶ್ಚ ದ್ವಾವೇತೌ ಬ್ರಹ್ಮಣಾಪುರಾ'' ಎಂಬ ಗಾರುಡಸ್ಮೃತ್ಯುಕ್ತವಾದ ಅಸಾಧಾರಣವಾದ ಓಂಕಾರದ ವಿಷಯವಾಗಿದೆ. ಅಂದರೆ ಭಿನ್ನಭಿನ್ನವಿಷಯವಾಗಿರುವುದರಿಂದ ಪ್ರಾಚೀನಟೀಕಾವಾಕ್ಯಕ್ಕೂ ನ್ಯಾಯಸುಧಾ ವಾಕ್ಯಕ್ಕೂ ವಿರೋಧವಿಲ್ಲವೆಂದು ತಾತ್ಪರ್ಯಚಂದ್ರಿಕಾಕಾರರು ವಿರೋಧಪರಿಹಾರವನ್ನು ತೋರಿಸಿರುತ್ತಾರೆ.

ಅಥವಾ ಎಂದು ತಾತ್ಪರ್ಯಚಂದ್ರಿಕಾಕಾರರಾದ ಶ್ರೀ ವ್ಯಾಸರಾಜರು ಸನ್ನ್ಯಾಯ ರತ್ನಾವಳಿಯ ವಾಕ್ಯದಲ್ಲಿ ಬಳಸಿರುವ ''ಪೃಥಗುಚ್ಚಾರಿತೋ ವೇದಿತವ್ಯಃ'' ಎಂಬ ವಾಕ್ಯವಲ್ಲಿರುವ ''ಪೃಥಕ್'' ಎಂಬುದರಿಂದ ಹೇಳಿರುವ ಪೃಥಕ್ತ್ವಕ್ಕೆ ಅರ್ಥವಿಶೇಷವನ್ನು ನಿರೂಪಿಸಿ ವಿರೋಧ ಶಂಕೆಯನ್ನು ಪರಿಹರಿಸಿರುತ್ತಾರೆ.

ಆ ವಾಕ್ಯವು ಈ ರೀತಿ ಇದೆ.

> **''ಯದ್ವಾ ಸನ್ನ್ಯಾಯರತ್ನಾವಳ್ಯುಕ್ತಂಪೃಥಕ್ತ್ವಂ ಊಹ್ಯಮಾನತ್ವಂ ನ ತುವಾಕ್ಯೇಽನನ್ವಯ ಇತ್ಯವಿರೋಧ ಇತ್ಯಾದಿ ದ್ರಷ್ಟವ್ಯಮ್।। ಇತಿ।।**

ಸಿದ್ಧಾರ್ಥವಾದರೂಪವಾದ ಶ್ರುತಿಪ್ರಾಪ್ತವಾದ ಓಂಕಾರಕ್ಕೇನೇ ಗಾರುಡ ಸ್ಮೃತಿವಿಷಯತ್ವವೂ ಸಂಭವಿಸುವುದರಿಂದ ಮೊದಲು ಎರಡು ಓಂಕಾರಗಳನ್ನು ಕಲ್ಪಿಸಬೇಕಾಗಿಲ್ಲ. ಒಂದೇ ಓಂಕಾರವಿರುವುದಾದರೂ ಪರಸ್ಪರ ಟೀಕೆಗಳಿಗೆ ವಿರೋಧವಿಲ್ಲವೆಂಬ ಅಭಿಪ್ರಾಯದಿಂದ "ಯದ್ವಾ" ಎಂಬ ತಾತ್ಪರ್ಯಚಂದ್ರಿಕಾವಾಕ್ಯವು ಪ್ರಾರಂಭವಾಗಿದೆ ಎಂದು ತಾತ್ಪರ್ಯಚಂದ್ರಿಕಾವ್ಯಾಖ್ಯಾಕಾರರಾದ ಶ್ರೀ ರಾಘವೇಂದ್ರ ಗುರುಸಾರ್ವಭೌಮರು ಪ್ರಕಾಶ ವ್ಯಾಖ್ಯಾನದಲ್ಲಿ ಅವತಾರಿಕೆಯನ್ನು ಕೊಟ್ಟಿರುತ್ತಾರೆ.

ತಾತ್ಪರ್ಯಚಂದ್ರಿಕಾವ್ಯಾಖ್ಯಾನವಾದ ಗುರುರಾಜೀಯವೆಂಬ ಮತ್ತೊಂದು ವ್ಯಾಖ್ಯಾನದಲ್ಲಿ ಓಂಕಾರದ್ವಯ ಕಲ್ಪನೇ ಗೌರವಂ ಚೇತ್ಸರುಚೇರಾಹ "ಯದ್ವೇತಿ" ಎಂದು ಎರಡು ಓಂಕಾರಗಳ ವಿಷಯದಲ್ಲಿ ಅರುಚಿಯನ್ನು ತೋರಿಸಿರುತ್ತಾರೆ.

ಮೊದಲು ಎರಡು ಓಂಕಾರಗಳೆಂಬ ಪಕ್ಷದಲ್ಲಿ ಹೇಗೆ ಓಂ ಓಂ ನಮೋ ನಾರಾಯಣಾಯ ಓಂ ಎಂಬ ನಾರಾಯಣಾಷ್ಟಾಕ್ಷರ ಮಂತ್ರದಲ್ಲಿ ಒಂದು ಓಂಕಾರವು ಮಂತ್ರಾವಯವವಾಗಿಯೂ, ಆರಂಭದಲ್ಲಿರತಕ್ಕ ಮಾಂಗಳಿಕವಾದ ಓಂಕಾರವೂ ಕಡೆಯಲ್ಲಿರತಕ್ಕ ಓಂಕಾರವೂ ಹೀಗೆ ಮೊದಲನೆಯ ಕಡೆಯ ಈ ಎರಡೂ ಓಂಕಾರಗಳೂ ಕೇವಲ ಅದೃಷ್ಟಾರ್ಥಗಳಾಗಿ ಮಾಂಗಳಿಕಗಳಾಗಿವೆಯೋ ಅದರಂತೆ ಪ್ರಥಮಸೂತ್ರದಲ್ಲಿ ಒಂದು ಓಂಕಾರವು ಸೂತ್ರಾವಯವವಾಗಿಯೂ ಮತ್ತೆರಡು ಅದೃಷ್ಟಾರ್ಥಗಳೆಂಬ ಅಭಿಪ್ರಾಯದಿಂದ ಒಟ್ಟು ಮೂರು ಓಂಕಾರಗಳೆಂಬ ಅಭಿಪ್ರಾಯ. ಮೊದಲನೆಯದು ಅದೃಷ್ಟಾರ್ಥಕವಾದುದರಿಂದ ಸೂತ್ರದ ಅವಯವವಲ್ಲ. ಎರಡನೆಯದು ಓತ್ವರೂಪವಾದ ಅರ್ಥವನ್ನು ಹೇಳುವುದರಿಂದ ಸೂತ್ರಘಟಕವಾದ ಬ್ರಹ್ಮಶಬ್ದಾರ್ಥವಾದ ವಿಷ್ಣುವಿನಲ್ಲಿ ಅನ್ವಯವನ್ನು ಹೊಂದುವ ಗುಣಪೂರ್ಣತ್ವರೂಪವಾದ ಅರ್ಥವನ್ನು ಪ್ರತಿಪಾದಿಸುತ್ತಿರುವ ಪ್ರಯುಕ್ತ ಸೂತ್ರಾವಯವವಾಗಿದೆ ಎಂದು ಅಭಿಪ್ರಾಯ. ಅಂತಿಮಕಲ್ಪದಲ್ಲಿ 'ಪೃಥ ಗುಚ್ಚಾರಿತೋ ವೇದಿತವ್ಯಃ' ಎಂಬುದಕ್ಕೆ ಸರ್ವಸೂತ್ರಗಳಲ್ಲಿ ಊಹನೀಯವಾಗಿದೆ. ಈ ಸೂತ್ರಕ್ಕೆ ಮಾತ್ರ ಸಂಬಂಧಪಟ್ಟದ್ದು ಎಂದು ಅರ್ಥವಲ್ಲ. ಈ ಮೊದಲನೆಯ ಸೂತ್ರದಲ್ಲಿ ಅನ್ವಯಪ್ರತಿಯೋಗಿಯಾದ ಅರ್ಥಸ

ಮರ್ಪಕವೂ ಅಲ್ಲ ಎಂದು ಅರ್ಥವಲ್ಲ. ಏವಂಚ ಅನುವ್ಯಾಖ್ಯಾನದಲ್ಲಿ ಓಂಕಾರಕ್ಕೆ ಓತ್ವರೂಪವಾದ (ಗುಣಪೂರ್ಣತ್ವರೂಪವಾದ) ಅರ್ಥವನ್ನು ಹೇಳಿರುದೂ ಸಂಗತವಾಗಿಯೇ ಇದೆ ಎಂದು ಅಭಿಪ್ರಾಯ.

ಶ್ರೀಮನ್ನ್ಯಾಯಸುಧಾಗ್ರಂಥವು ಸನ್ನ್ಯಾಯ ರತ್ನಾವಳೀ ಎಂಬ ಪ್ರಾಚೀನಟೀಕೆಯ ವ್ಯಾಖ್ಯಾನರೂಪವೇ ಆಗಿರುವುದರಿಂದ ವಿರೋಧವಿಲ್ಲವೆಂಬ ಅಭಿಪ್ರಾಯವನ್ನು ಚಂದ್ರಿಕಾವ್ಯಾಖ್ಯಾಕಾರರು ತೋರಿಸಿರುತ್ತಾರೆ.

"ತಥಾ ಚ ಸುಧಾಯಾಃ ಸನ್ನ್ಯಾಯ ರತ್ನಾವಳೀವ್ಯಾಖ್ಯಾನರೂಪತ್ವಾತ್ ನ ವಿರೋಧ ಇತಿಭಾವಃ" ।।೯೩।।

ಎಂದು ಗುರುರಾಜೀಯ ವ್ಯಾಖ್ಯಾನದ ವಾಕ್ಯವಾಗಿದೆ. ಈ ಸಂದರ್ಭದಲ್ಲಿ ನ್ಯಾಯಸುಧಾಗ್ರಂಥಕ್ಕೆ ವ್ಯಾಖ್ಯಾನವಾಗಿರುವ ಕಾಶೀ ಆಚಾರ್ಯರ ಟಿಪ್ಪಣೀವಾಕ್ಯವೂ ಇದೇ ಅಭಿಪ್ರಾಯವನ್ನು ಸಮರ್ಥಿಸುತ್ತಲಿದೆ. ಕಾಶೀ ಆಚಾರ್ಯರ ಟಿಪ್ಪಣಿಯ ವಾಕ್ಯವೂ ಗಮನಾರ್ಹವಾಗಿದೆ.

**"ಓಂಕಾರಾರ್ಥಸ್ಯ ಪ್ರಥಮಸೂತ್ರವಾಕ್ಯಾರ್ಥಾನ್ವಯಿತ್ವೇ ತದಂತರ್ಭಾವೇನ ಬ್ರಹ್ಮವಿದ್ಯಾತ್ವ ಪರ್ಯಾಪ್ತೇಃ। ಓಂಕಾರಾತ್ಮಕವರ್ಣಸ್ಯ ಓಂಕಾರೋಚ್ಚಾರಣ ಪ್ರಸಂಗ ಇತಿ ಬೋಧ್ಯಾಪತ್ತಿಃ।**

ಅತ ಏವ ಸನ್ನ್ಯಾಯ ರತ್ನಾವಲ್ಯಾಂ ಓಂಕಾರಸ್ಯ ಪೃಥಗ್ವ್ಯುಕ್ತೇಃ।
ಸುಧಾಯಾಂ ಅವಯವತ್ವೋಕ್ತೇಶ್ಚ।
ಭಿನ್ನವಿಷಯತ್ವೇನಾಪಿ ಅವಿರೋಧಃ ಚಂದ್ರಿಕಾಯಾಂ ಉಕ್ತಃ।
ನ ಚೈವಮಾದ್ಯಸ್ಯ ಅನವಯವಭೂತೋಂಕಾರಸ್ಯ ಸರ್ವತ್ರ ಅನುಗತ್ಯರ್ಥಂ
ಅಸಂಹಿತತಯಾ ನಿರ್ದೇಶೇಽಪಿ ದ್ವಿತೀಯಸ್ಯಾವಯವಭೂತೋಂಕಾರಸ್ಯ
ಅಥಾದಿಶಬ್ದವತ್ ಸಂಹಿತತಯೈವ ನಿರ್ದೇಶೋ ಯುಕ್ತ ಇತಿವಾಚ್ಯಮ್।
ಸೂತ್ರಕಾರೇಣ, ಅನ್ವಯಸಮರ್ಪಕತ್ವೇನ, ಅನುಗತ್ಯರ್ಥತ್ವೇನ ಚ ಏಕಸ್ಯೈವೋಂಕಾರಸ್ಯ
ಪ್ರಯುಕ್ತತ್ವಾತ್।
ಅತ ಏವಸರ್ವಾಸ್ವಪಿ ಬ್ರಹ್ಮವಿದ್ಯಾಸು ಆದ್ಯಂತಯೋಃ ಓಂಕಾರಸ್ಯೋಹಃ ಇತ್ಯಪಿಸಾಧು
ಸಂಗಚ್ಛತೆ।
ಆದಿಸೂತ್ರಾದೌ ಏಕಸ್ಯ ಸಾಕ್ಷಾದುಚ್ಚರಿತತ್ವೇಽಪಿ ಅನ್ಯಸ್ಯ ಅಧ್ಯಾಹಾರ್ಯತ್ವಾತ್।
ಅತ ಏವ ಸೂತ್ರಕಾರಾನುಚ್ಚರಿತತ್ವಜ್ಞಾಪನಾರ್ಥಂ ಆದ್ಯಂತಯೋಃ ಓಂಕಾರಂ ಅಸಂಹಿತ
ತಯೈವ ಉಚ್ಚಾರಯಂತೀತಿಧ್ಯೇಯಮ್''।।ಇತಿ।।

ಈ ಮೇಲೆ ಕಂಡ ಕಾಶೀ ಟಿಪ್ಪಣೀ ವಾಕ್ಯಗಳ ಅಭಿಪ್ರಾಯವನ್ನು ಹಿಂದೆಯೇ ವಿವರಿಸಲಾಗಿದೆ.

ಶ್ರೀಮಜ್ಜಯತೀರ್ಥರಿಂದ ರಚಿತವಾಗಿರುವ ಶ್ರೀಮನ್ನ್ಯಾಯಸುಧಾ ಗ್ರಂಥಕ್ಕೆ ಒಟ್ಟು ಇಪ್ಪತ್ತೆರಡು ವ್ಯಾಖ್ಯಾನಗಳು ಪ್ರಸಿದ್ಧವಾಗಿವೆ. ಅದರಂತೆ ತತ್ತ್ವಪ್ರಕಾಶಿಕಾ ಗ್ರಂಥಕ್ಕೆ ಪ್ರಸಿದ್ಧಗಳಾದ ಇಪ್ಪತ್ತನಾಲ್ಕು ವ್ಯಾಖ್ಯಾನಗಳಲ್ಲಿ ಕೆಲವು ಅಚ್ಚಾಗಿವೆ. ಮತ್ತೆ ಕೆಲವು ಹಸ್ತಲಿಖಿತ ಪ್ರತಿಗಳಾಗಿವೆ. ಅಚ್ಚಾಗಿರುವ ವ್ಯಾಖ್ಯಾನಗಳ ಪೈಕಿ ''ಅಭಿನವ ಚಂದ್ರಿಕಾ'' ಎಂಬ ಹೆಸರಿನಿಂದ ಶ್ರೀ ಸತ್ಯನಾಥ ಯತಿಗಳು ಒಂದು ವ್ಯಾಖ್ಯಾನವನ್ನು ರಚಿಸಿದ್ದಾರೆ. ಜಿಜ್ಞಾಸಾಧಿಕರಣದ ಸೂತ್ರದ ವಿಷಯದಲ್ಲಿ ಅವರ ಅಭಿಪ್ರಾಯವು ಪ್ರತ್ಯೇಕವಾಗಿಯೇ ಇದೆ. ಬ್ರಹ್ಮಮೀಮಾಂಸಾ ಶಾಸ್ತ್ರದ ಮೊದಲನೆಯ ಸೂತ್ರವು. ''ಅಥಾತೋ ಬ್ರಹ್ಮಜಿಜ್ಞಾಸಾ'' ಎಂದು ಒಂದು ಸೂತ್ರವು. ಮತ್ತೊಂದು ''ಓಂ ಅಥಾತೋ ಜಿಜ್ಞಾಸಾ'' ಎಂದು ಎರಡನೇ ಸೂತ್ರವು. ಹೀಗೆ ಪಾಠಾಂತರವೆಂಬ ಅಭಿಪ್ರಾಯದಿಂದ ಎರಡು ಸೂತ್ರಗಳೆಂದು ಎರಡು ಪಕ್ಷಗಳನ್ನೂ ತೋರಿಸಿ, ತಮ್ಮ ಅಭಿಪ್ರಾಯಕ್ಕೆ ಪೋಷಕವಾಗಿ ಸೂತ್ರಭಾಷ್ಯ ವಾಕ್ಯಗಳನ್ನೂ, ಟೀಕಾವಾಕ್ಯಗಳನ್ನೂ, ಅನುವ್ಯಾಖ್ಯಾನಗಳನ್ನೂ, ನ್ಯಾಯಸುಧಾ ವಾಕ್ಯಗಳನ್ನೂ ಉದಾಹರಿಸಿ ಸಮರ್ಥಿಸಿರುತ್ತಾರೆ.

ಬ್ರಹ್ಮಶಬ್ದದಿಂದ ಕೂಡಿರುವ ಪಾಠದಲ್ಲಿ ಓಂಕಾರವಿಲ್ಲ. ಓಂಕಾರಸಹಿತವಾದ ಪಾಠದಲ್ಲಿ ಬ್ರಹ್ಮಶಬ್ದಕ್ಕೆ ಪ್ರವೇಶವಿಲ್ಲ. ಎಂದು ಅಭಿಪ್ರಾಯ.

ಒಂದೇ ಅಧಿಕರಣದ ಒಂದು ಸೂತ್ರದಲ್ಲೇ ಪಾಠಭೇದಕ್ಕೆ ಉದಾಹರಣೆಯಾಗಿ ಬ್ರಹ್ಮಸೂತ್ರದಲ್ಲಿ ಎರಡನೇ ಅಧ್ಯಾಯದಲ್ಲಿನ ಎರಡನೇ ಪಾದದ ನಾಲ್ಕನೇ ಅಧಿಕರಣದ ಓಂ ಪುರುಷಾಶ್ಮವದಿತಿ ಚೇತ್ತಥಾಪಿ ಓಂ ಎಂಬ ಸೂತ್ರವನ್ನು ಉದಾಹರಿಸಿರುತ್ತಾರೆ. ಈ ಸೂತ್ರದಲ್ಲಿ ತಥಾಪಿ, ತಥಾಪಿ ಎಂದು ಪಾಠದ ವ್ಯಾಖ್ಯಾನವಿದೆ. ಎಂದು ಅವರ ಅಭಿಪ್ರಾಯ.

ಈ ಸೂತ್ರಕ್ಕೆ ಸೂತ್ರಭಾಷ್ಯದಲ್ಲಿ "ತತ್ರಾಪಿತಥಾತ್ವೇ ದೃಷ್ಟಾಂತಾಭಾವಾತ್" ಎಂದು ತತ್ರಾಪಿ ಎಂಬ ಪಾಠವನ್ನು ತೋರಿಸಿದ್ದಾರೆ.

ಅನುವ್ಯಾಖ್ಯಾನದಲ್ಲಿ "ತಥಾಪಿ ಅಬುದ್ಧಿಪೂರ್ವತ್ವಾತ್ ಉಕ್ತದೋಷಃ ಸಮೋ ಭವೇತ್" ಎಂದು ವ್ಯಾಖ್ಯಾನ ಮಾಡಿರುವುದರಿಂದ ಒಂದೇ ಸೂತ್ರದಲ್ಲೂ ಪಾಠಭೇದವು ಇರುವುದಕ್ಕೆ ಇದೊಂದು ನಿದರ್ಶನವೆಂದು ಸಮರ್ಥಿಸಿರುವರು. ಭಾಷ್ಯದೀಪಿಕಾಚಾರ್ಯರು ಭಾಷ್ಯದೀಪಿಕೆಯಲ್ಲಿ ಈ ಸೂತ್ರಪಾಠವನ್ನು ತಥಾಪಿ ಎಂದೇ ತೋರಿಸಿ, "ತತ್ರಾಪೀತಿ ಸೂತ್ರಪಾಠೇಽಪಿ ಅಯಮೇವಾರ್ಥೋ ಬೋಧ್ಯಃ" ಎಂದು ಹೇಳಿ ಸೂತ್ರಭಾಷ್ಯಕ್ಕೆ ಮೂಲಭೂತವಾದ ಸೂತ್ರದ ಪಾಠವನ್ನು ತಥಾಪಿ ಎಂದೇ ಉಲ್ಲೇಖಿಸಿರುವರು. ಅಭಿನವಚಂದ್ರಿಕಾಕಾರರಂತೆ ಸೂತ್ರಭಾಷ್ಯದ ಮೂಲಭೂತವಾದ ಸೂತ್ರದ ಪಾಠವನ್ನು "ತತ್ರಾಪಿ" ಎಂದು ನಿರ್ದೇಶ ಮಾಡಿಲ್ಲ.

ತತ್ವಪ್ರಕಾಶಿಕಾ ವ್ಯಾಖ್ಯಾಕಾರರಾದ ಭಾವಬೋಧಕಾರರೂ ಸಹ

> **"ಸೂತ್ರೇಽಥಶಬ್ದಸ್ಯಾವೃತ್ತಿಃ" ಅನ್ವಯಾನಾಂ ಅನೇಕಾರ್ಥತ್ವಾತ್ ಏಕಸ್ಯ "ತತ್ರೇತ್ಯರ್ಥಕತ್ವಂ, ದ್ವಿತೀಯಸ್ಯ" ವ್ಯತಿರೇಕಾನವಕ್ಲೃಪ್ತೇರಿತ್ಯುಕ್ತಪರಾಮರ್ಶಕತ್ವಮ್ ।**
> **ತಥಾ ಚ ತತ್ರಾಪಿ = ಪುರುಷಾರ್ಥಾದಾವಪಿ ।**

ಎಂದು ಸೂತ್ರಭಾಷ್ಯಾನುಸಾರಿಯಾದ ಸೂತ್ರಪಾಠವನ್ನು "ತಥಾಪಿ" ಎಂದೇ ತೋರಿಸಿ, "ತಥಾಪಿ" ಎಂಬುದಕ್ಕೇನೇ "ತತ್ರಾಪಿ" ಎಂದು ವ್ಯಾಖ್ಯಾನ ಮಾಡಿರುತ್ತಾರೆ. ಅಂದರೆ ಅಭಿನವಚಂದ್ರಿಕೆಯ ಅಭಿಪ್ರಾಯವು ಭಾವಬೋಧಕಾರರ ವ್ಯಾಖ್ಯಾನಕ್ಕೆ ವಿರುದ್ಧವಾಗಿದೆ.

ಪ್ರಾಚೀನ ಟೀಕಾಕಾರರಾದ ತತ್ವಪ್ರದೀಪಕಾರರ ಸೂತ್ರಭಾಷ್ಯವ್ಯಾಖ್ಯಾನವಾದ ತತ್ವಪ್ರದೀಪದಲ್ಲೂ ಸಹ "ಓಂ ಪುರುಷಾರ್ಥವದಿತಿಚೇತ್ತಥಾಪಿ" ಓಂ ಎಂಬಲ್ಲಿ ತಥಾಪಿ ಎಂಬ ಪಾಠವನ್ನೇ ಇಟ್ಟುಕೊಂಡು ಅದಕ್ಕೆ ತತ್ರಾಪಿ ಎಂಬ ಅರ್ಥವನ್ನು ಭಾಷ್ಯಕಾರರು ಮಾಡಿರುವಂತೆ ಅಭಿಪ್ರಾಯಪಟ್ಟಿರುತ್ತಾರೆ.

ಅಭಿನವಚಂದ್ರಿಕಾವ್ಯಾಖ್ಯಾನಕ್ಕೆ ತತ್ವಪ್ರದೀಪದ ವಿರೋಧವೂ ಕಂಡುಬಂದಿದೆ. ತತ್ವಪ್ರಕಾಶಿಕಾಭಾವದೀಪ ಸಹಿತ ಪ್ರಿಂಟಾಗಿರತಕ್ಕ ಪ್ರತಿಯಲ್ಲೂ ಸೂತ್ರಭಾಷ್ಯಕ್ಕೆ ಮೂಲಭೂತವಾದ ಸೂತ್ರಪಾಠವು "ಓಂ" ಪುರುಷಾರ್ಥವದಿತಿ ಚೇತ್ತಥಾಪಿ ಓಂ" ಎಂದು "ತಥಾಪಿ" ಪದಘಟಿತವಾಗಿದೆ. ತತ್ರಾಪಿ ಎಂದಿಲ್ಲ.

ತತ್ತ್ವಪ್ರಕಾಶಿಕಾವ್ಯಾಖ್ಯಾನವಾದ ಶರ್ಕರಾವ್ಯಾಖ್ಯಾನದಲ್ಲೂ ಕೂಡ ಭಾವಬೋಧವ್ಯಾಖ್ಯಾನದಂತೆಯೇ ಸೂತ್ರಪಾಠವನ್ನು ತಥಾಪಿ ಎಂದೇ ತೋರಿಸಿರುವರು . ನ್ಯಾಯಮುಕ್ತಾವಳಿಯಲ್ಲೂ ಸೂತ್ರಪಾಠವನ್ನು "ತಥಾಪಿ" ಎಂದೇ ನಿರ್ದೇಶ ಮಾಡಿದ್ದಾರೆ.

ನ್ಯಾಯಸುಧಾವ್ಯಾಖ್ಯಾನಕಾರರಾದ ಕಾಶೀ ತಿಮ್ಮಣ್ಣ ಆಚಾರ್ಯರು "ಅಭಿನವ ಚಂದ್ರಿಕಾಯಾಂತು ಎಂದು ಪ್ರಾರಂಭಿಸಿ, ಅಭಿನವಚಂದ್ರಿಕೆಯಲ್ಲಿ ತೋರಿಸಿ ಸಮರ್ಥಿಸಿರುವ "ಅಥಾತೋ ಬ್ರಹ್ಮಜಿಜ್ಞಾಸಾ, ಓಂ ಅಥಾತೋ ಜಿಜ್ಞಾಸಾ ಅಥವಾ ಅಥಾತೋ ಓಂ ಜಿಜ್ಞಾಸಾ" ಎಂಬ ಪಾಠಭೇದಗಳನ್ನೂ ಪ್ರಸ್ತಾಪಿಸಿ ಅಭಿನವ ಚಂದ್ರಿಕೆಯಲ್ಲಿ ಪಾಠಭೇದಕ್ಕೆ ಸಾಧಕವಾಗಿ ತೋರಿಸಿರುವ ಸೂತ್ರಭಾಷ್ಯಾದಿವಾಕ್ಯಗಳಿಗೆಲ್ಲಾ ಬೇರೆ ಅಭಿಪ್ರಾಯವನ್ನು ಹೇಳಿ ಸಯುಕ್ತಿಕವಾಗಿ

ಸಪ್ರಮಾಣವಾಗಿ ''ಓಂಕಾರ ಬ್ರಹ್ಮಶಬ್ದೋಪೇತಸೂತ್ರೋಪನ್ಯಾಸಸ್ತು ಅಸ್ಮತ್ಪಕ್ಷೇ ಏವ ಶ್ಲಿಷ್ಟ ಇತಿಸ್ಪಷ್ಟಮೇವ'' ಎಂದು ಒಂದೇ ವಾಠವೆಂದು ಸಾಧಿಸಿ ಅದಕ್ಕೆ ಪೋಷಕವಾಗಿ ಯತ್ಕುಕಾರರ ಮತವನ್ನೂ ಕೇಟಿತ್ಕುಕಾರರ ಮತವನ್ನೂ ಸಂವಾದರೂಪವಾಗಿ ಉದಾಹರಿಸಿದ್ದಾರೆ. ಅಭಿನವಚಂದ್ರಿಕಾಕಾರರ ಅಭಿಪ್ರಾಯವನ್ನು ನಿರಾಕರಿಸಿರುತ್ತಾರೆ.

**ತಂತ್ರದೀಪಿಕಾ :-**

**(೨) ಅತ್ರನಯೇ ಚತುರಧ್ಯಾಯಾತ್ಮಕೃತಚ್ಛಾಸ್ತ್ರಸ್ಯ ಆರಂಭಣೀಯತ್ವೋಪಯುಕ್ತತಯಾ ಜಿಜ್ಞಾಸಾ ಕರ್ತವ್ಯತ್ವಂ ಸಮರ್ಥ್ಯತೇ ।।ಇತಿ।।**

ಈ ತಂತ್ರದೀಪಿಕಾವಾಕ್ಯವು ಸೂತ್ರಭಾಷ್ಯ ಮತ್ತು ಅನುವ್ಯಾಖ್ಯಾನಗಳಲ್ಲಿ ಸಮರ್ಥಿಸಲ್ಪಟ್ಟ ಬ್ರಹ್ಮಜಿಜ್ಞಾಸಾ ಕರ್ತವ್ಯತ್ವದ ಸಾರಸಂಗ್ರಹರೂಪವಾಗಿದೆ.

ಸೂತ್ರಭಾಷ್ಯ ದಲ್ಲಿ:- ಯತೋ ನಾರಾಯಣಪ್ರಸಾದಮೃತೇ ನ ಮೋಕ್ಷಃ, ನ ಚ ಜ್ಞಾನಂ ವಿನಾ ಅತ್ಯರ್ಥ ಪ್ರಸಾದಃ ಅತೋ ಬ್ರಹ್ಮಜಿಜ್ಞಾಸಾ ಕರ್ತವ್ಯಾ ।। ಇತಿ ।।

**ತತ್ತ್ವಪ್ರಕಾಶಿಕಾ:- ತತ್ರಾದಿಸೂತ್ರಸ್ಯೇದಂ ಸಂಗತ್ಯಾದಿ ।**

**ಅತ್ರ ಬ್ರಹ್ಮಜಿಜ್ಞಾಸಾಯಾಃ ಕರ್ತವ್ಯತ್ವಸಮರ್ಥನಾತ್, ಅಸ್ತಿ ಶಾಸ್ತ್ರಸಂಗತಿಃ ।**
**ಅನ್ಯಥಾ ಶಾಸ್ತ್ರಸ್ಯ ಅನಾರಂಭಣೀಯತ್ವಪ್ರಸಂಗಾತ್ ಸಮರ್ಥನೀಯಮೇತತ್ ।**
**''ಪ್ರಯೋಜನಾದಿಸದ್ಭಾವಾಚ್ಚ ಬ್ರಹ್ಮಜಿಜ್ಞಾಸಾ ಕರ್ತವ್ಯೈವ ।**
**ಅತಃ ಶಾಸ್ತ್ರಂ ಆರಂಭಣೀಯಮೇವೇತಿಸಿದ್ಧಮ್ ।। ಇತಿ ।।**

ಅನುವ್ಯಾಖ್ಯಾನದಲ್ಲಿ:- ''ಸ ಏವ ಸರ್ವವೇದಾರ್ಥೋ ಜಿಜ್ಞಾಸ್ಯೋಽಯಂ ವಿಧೀಯತೇ

ನ್ಯಾಯಸುಧಾ:- ವಿಷಯಸಂಬಂಧಸಂಭವಾತ್ ಜಿಜ್ಞಾಸಾಯಾಃ ಕರ್ತವ್ಯತಾ ಶಾಸ್ತ್ರಸ್ಯಚಾರಂಭಣೀಯತ್ವಂ ಸಿದ್ಧಮಿತ್ಯಾಶಯವಾನ್ ಸಾಕಾಂಕ್ಷಸ್ಯ ವಾಕ್ಯಾಭಾಸಸ್ಯ ಅಪ್ರತಿಪಾದಕತ್ವಾತ್ ಆಕಾಂಕ್ಷಿತಾಧ್ಯಾಹಾರಂ ಸೂಚಯನ್ ಸೂತ್ರವಾಕ್ಯಾರ್ಥಮಾಹ ।। ಜಿಜ್ಞಾಸ್ಯ ।। ಇತಿ ।।

ತಂತ್ರದೀಪಿಕಾ :-

**(೩) ಅತ್ರ ಆದ್ಯಂತಯೋಃ ಓಂಕಾರಃ ''ಸ್ವವಚನೋಂಕೃತಂ ಬ್ರಹ್ಮ ಹರಸ್ತಾಚ್ಚವಿಶೀರ್ಯತೇ'' ಇತಿಶ್ರುತಿಸಿದ್ಧಃ ।**
**ಆದ್ಯೋ ದೃಷ್ಟಾದೃಷ್ಟಾರ್ಥಃ, ಅತ ಏವ ಏತತ್ಸೂತ್ರಾವಯತ್ವಾತ್ ಅನ್ಯತ್ರ ನುಷಂಗೋ ನಸ್ಯಾದಿತಿ ಸರ್ವಸೂತ್ರೇಽಷ್ವದೃಷ್ಟಮಾತ್ರಾರ್ಥತಯಾ ಆದೌ ಅನುಷಂಗಾಯ ಅಸಂಪಿತತಯಾ ಪಠ್ಯತೇ, ಅಂತ್ಯಃ ಅದೃಷ್ಟಮಾತ್ರಾರ್ಥಃ ।**
**ನಸೂತ್ರಾವಯವಃ ।**
**ಅನ್ವಯಪ್ರತಿಯೋಗ್ಯಸಮರ್ಪಕ ಇತಿಯಾವತ್ ।।**

ಈ ಮೇಲೆ ಕಂಡ ತಂತ್ರದೀಪಿಕಾವಾಕ್ಯಗಳು ಶ್ರೀಮದನುವ್ಯಾಖ್ಯಾನ ಮತ್ತು ಶ್ರೀಮನ್ನ್ಯಾಯಸುಧೆಯಲ್ಲಿನ ಅತಿವಿಸ್ತಾರವಾದ ಗ್ರಂಥದ ಅರ್ಥಸಂಗ್ರಹರೂಪವೇ ಆಗಿವೆ.

ಆ ವಾಕ್ಯಗಳು ಈ ರೀತಿ ಇವೆ.

**ಅನುವ್ಯಾಖ್ಯಾನದಲ್ಲಿ** :- ತತ್ರತಾರಾಥಮೂಲತ್ವಂ ಸರ್ವಶಾಸ್ತ್ರಸ್ಯಚೇಷ್ಯತೇ ।
ಸರ್ವತ್ರಾನುಗತತ್ವೇನ ಪೃಥಗೋಂಕ್ರಿಯತೇಽಖಿಲೈಃ ।। ಇತಿ ।।

**ಸುಧಾ** - ತರಂತಿ ಅನೇನ ಅನಿಷ್ಟನಿಚಯಮಿತಿ ಓಂಕಾರಸ್ತಾರಃ ।
ತಾರಶ್ಚ ಅಥಶ್ಚ = ತಾರಾಥೌ ತಯೋಃಮೂಲತ್ವಂ = ಕ್ರಮೇಣ ಆದಿತ್ವಂ ।
ಆದೌಪ್ರಯುಕ್ತೌ ಓಂಕಾರಾಥಶಬ್ದೌ ಇತಿಯಾವತ್ ।
ತತ್ರಪ್ರಥಮಸೂತ್ರೇ ಅವಯವತಯಾ ಸರ್ವಶಾಸ್ತ್ರಸ್ಯ ಚಾಂಗತಯಾಚೇಷ್ಯತೇಂ ಗೀಕ್ರಿಯತೇ ।
ಸೂತ್ರಕೃತೇತಿಶೇಷಃ ।
ಏತದುಕ್ತಂಭವತಿ ।
''ಯತ್ಪರ್ಯಾಯಾಂತರಂ ವಿಹಾಯ ಅನಯೋರೇವ ಕ್ರಮಾಂತರಂವಿಹಾಯ ಆದಾವೇವೋ
ಪಾದಾನಂ ತೇನ ಜ್ಞಾಸೇವೋ ಜ್ಞಾಪಕತಯಾ ಆದಿಸೂತ್ರಸ್ಯ, ಕಾರಕತಯಾ ಸಮಸ್ತಶಾಸ್ತ್ರಸ್ಯ ಚೋಪ
ಯೋಗಿತ್ವೇನ್ಯತೌ ಸೂತ್ರಕೃತಾ ವಿವಕ್ಷಿತಾವಿತಿ ।
ಅನೇನಾಥಶಬ್ದೋ ಮಂಗಳಾರ್ಥ ಇತ್ಯಾದಿಭಾಷ್ಯಂ ವಿವೃತಂಭವತಿ ।
ಏತದುಕ್ತಂ ಭವತಿ । ಸರ್ವಾಣಿ ಹಿ ಸೂತ್ರಾಣಿ ಪ್ರತ್ಯೇಕಂ ಅನೇಕವೇದವಾಕ್ಯವಿಚಾರ
ಪರತ್ವಾದವಾಂತರಬ್ರಹ್ಮವಿದ್ಯಾಃ ।
''ಪ್ರಣವಸ್ತೋಂಕೃತಂ ಬ್ರಹ್ಮ ಪರಸ್ತಾಚ್ಚಪಿಧೀಯತೇ'' ಇತಿ ಶ್ರೌತಾರ್ಥವಾದಸಾಮರ್ಥ್ಯಾತ್
ಸರ್ವಾಸ್ವಪಿಬ್ರಹ್ಮವಿದ್ಯಾಸು
ಆದ್ಯಂತಯೋರೋಂಕಾರಸ್ಯೋಚ್ಚಾರ್ಯ ಇತಿಗಮ್ಯತೇ ।
ತತಶ್ಚ ಪ್ರತಿಸೂತ್ರಂ ಆದ್ಯಂತಯೋರುಚ್ಚಾರಣೇ ಗೌರವಂ ಸ್ಯಾದಿತಿ ಆದಾವೇವೋಂಕಾರೋ
ಅಧಿಕೃತತ್ವೇನೋಚ್ಚಾರ್ಯತೇ ।
ತಸ್ಯ ಸಂಹಿತತಯಾ ನಿರ್ದೇಶೇ ಪ್ರಥಮಸೂತ್ರವಯವ ಏವಾಯಂ ವಿಜ್ಞಾಯೇತ ।
ತಸ್ಮಾ ವಿಜ್ಞಾಯೀತಿ ಶಿಷ್ಯೈಃ ಪೃಥಗೋಂಕ್ರಿಯತೇ ।
ನ ಚ ವ್ಯಾಖ್ಯಾನತೋಽಸ್ಯಾಧಿಕಾರೋ ಜ್ಞಾಯತ ಇತಿವ್ಯರ್ಥಂ ಪೃಥಕ್ಕರಣಮಿತಿ ವಾಚ್ಯಮ್ ।
ಅಂತರಂಗಜ್ಞಾಪಕಾಭಾವೇ ಏವ ಬಹಿರಂಗಸ್ಯಾನ್ವೇಷಣೀಯತ್ವಾದಿತಿ
ತದನೇನ ಅಸಂಹಿತತಯಾ ನಿರ್ದೇಶೇ ನಿಮಿತ್ತಾಂತರಂ ವದತಾ ಹೇತೋರನ್ಯಥಾಸಿದ್ಧಿರುಕ್ತಾಭವತೀತಿ ॥

**ಟಿಪ್ಪಣಿಕಾರರು** :- ಕ ಅಸಂಹಿತಾಪಾಠೋಽಂತರಂಗಂ; ವ್ಯಾಖ್ಯಾನಂ ಬಹಿರಂಗಮಿತಿ ।

**ವಾಕ್ಯಾರ್ಥಚಂದ್ರಿಕಾ** :ವಾಕ್ಯಸ್ಯ ನಿರ್ದೇಶಾಪೇಕ್ಷಯಾ ವ್ಯಾಖ್ಯಾನಸ್ಯ ಬಹಿರಂಗತ್ವಾದಿ ಭಾವಃ

**ಸತ್ಯವ್ರತೀ/ಯ** :- ಓಂಕಾರಸ್ಯ ಪ್ರಥಗುಚ್ಚಾರಣ ಏವ ಸರ್ವತ್ರಾಧಿಕೃತತ್ವಜ್ಞಾನಾತ್ ಉಚ್ಚಾರಣಸ್ಯ ಅಂತರಂಗತ್ವಂ, ವ್ಯಾಖ್ಯಾನಂತೂಚ್ಚಾರಣಾನಂತರಭಾವಿತ್ವಾತ್ ಬಹಿರಂಗಮಿತಿಭಾವಃ । ಇತಿ

ಪರಿಮಳಾಚಾರ್ಯರು :-ಪ್ರಥಮಸೂತ್ರಾವಯವ ಏವೇತ್ಯತ್ರ ಅವಯವಶಬ್ದಃ ಉಪಕಾರಮಾತ್ರಪರಃ
ನತ್ವನ್ವಯಪ್ರತಿಯೋಗಿಸಮರ್ಪಕರೂಪಾವಯವಪರಃ।
ತಥಾತ್ವೇ ಸತಿ ತನ್ನಾವಿಜ್ಞಾಯೇತ್ಯುತ್ತರವಾಕ್ಯೇ ಪ್ರಥಮಸೂತ್ರಾವಯತ್ವಮಾತ್ರಂ ವಿಜ್ಞಾತಂ
ಮಾಭೂತ್ ಕಿಂತು ದ್ವಿತೀಯಾದಿಸೂತ್ರಾವಯವತ್ವಮಪಿನ್ನ-
ಜ್ಞಾಯೇತ್ಯರ್ಥಸ್ಯ ವಾಚ್ಯತ್ವೇನ ದ್ವಿತೀಯಾದೌ ಅದೃಷ್ಟಮಾತ್ರೋಪಕಾರಕತಯಾ
ಅನ್ವಯಪ್ರತಿಯೋಗಿಸಮರ್ಪಕತ್ವಸ್ಯಬಾಧಾತ್।
ಯದ್ವಾ ಪ್ರಥಮಸೂತ್ರಾವಯವ ಏವ ವಿಜ್ಞಾಯೇತೇತಿ ದ್ವಿತೀಯಾದೌ ಅದೃಷ್ಟ
ಮಾತ್ರೋಪಕಾರಕತ್ವೇನ ಅನುವೃತ್ತಿರ್ನಜ್ಞಾಯೇತೇತ್ಯೇವಂ ವ್ಯಾಖ್ಯೇಯಮಿತಿ ॥
ಏವಮನುಮಾನೇ ನಿರಸ್ತೇನಿರಪವಾದೇನ ಆದೌ ಉಚ್ಚಾರಣೇನ, ಓಂಕಾರಸ್ಯ ಪ್ರಥಮ
ಸೂತ್ರಾವಯವತಾಸಿದ್ಧೌ, ಉಕ್ತಮುಪಪನ್ನಮಿತಿ ॥

ಈ ವಿಷಯದಲ್ಲಿಯೇ ಹಿಂದೆಯೇ ತಾತ್ಪರ್ಯಚಂದ್ರಿಕಾಕಾರರ ಅಭಿಪ್ರಾಯವನ್ನು ವಿವರಿಸಲಾಗಿದೆ.

ತತ್ತ್ವಪ್ರಕಾಶಿಕಾ 'ಭಾಷ್ಯದೀಪದಲ್ಲಿ' = ತಾವೇವಾದೌ ಇತಿ ಭಾಷ್ಯೇ ಸಂಹಿತತಯೇತಿಯೋಜ್ಯಂ ॥
ಓಂಕಾರಂತು ಅಸಂಹಿತತಯೇತಿಭಾವಃ।ಇತಿ।
(೪) ತಂತ್ರದೀಪಿಕಾ ಓಂಕಾರಾಥಶಬ್ದೌ ಮಂಗಲಫಲಕೌ ಕ್ರಮಾತ್ ಗುಣಪೂರ್ಣ್ಯಾನಂತರ್ಯ್ಯವಾಚಕೌ ॥
ಅಥೇತಿಯೋಗ್ಯತಯಾ ಅಧಿಕಾರಾದಿಕ್ಷನ್ನೇತಿ ॥

ಇದಕ್ಕೆ ಮೂಲಭೂತವಾದ ಗ್ರಂಥ ವಾಕ್ಯಗಳು ಯಾವುವೆಂದರೆ:-

**ಸೂತ್ರಭಾಷ್ಯದಲ್ಲಿ** :- ಅಥಶಬ್ದೋ ಮಂಗಲಾರ್ಥೋ, ಅಧಿಕಾರಾನಂತರ್ಯಾರ್ಥಶ್ಚ ।ಇತಿ ।

**ಅನುವ್ಯಾಖ್ಯಾನದಲ್ಲಿ** :- ತತ್ರ ಓಂಕಾರಾಥಮೂಲತ್ವಂ ಸರ್ವಶಾಸ್ತ್ರಸ್ಯ ಚೇಷ್ಯತೇ ।
ಸರ್ವತ್ರಾನುಗತತ್ವೇನ ಪೃಥಗೋಂಕ್ರಿಯತೇನಹಿತ್ಯೈ ॥ ಇತಿ ॥

**ಸುಧಾ** :- ಏತದುಕ್ತಂಭವತಿ ॥
ಪ್ರಥಮಸೂತ್ರೇ ಅಧಿಕಾರ್ಯಾದಿಪ್ರತಿಪಾದನಾಯ ಉಪಾತ್ತೌ
ಓಂಕಾರಾಥಶಬ್ದೌ ಸಂಪಿಂಡಿತಾ
ವೇಣುಧ್ವನಿವತ್ ಶ್ರುತಿತಃ ಮಂಗಲೌಕತ್ವಾತ್ ಕೃತ್ಸ್ನಶಾಸ್ತ್ರಸ್ಯ, ಅನಂತರಾಯ
ಪರಿಸಮಾಪ್ತಾ [illegible] ।

**ಸುಧಾ:-** ಓಂಕಾರಸ್ಯಾಪಿ ಅತ್ರಸ್ಥ ಗತಸ್ಯ ಪ್ರವಿಷ್ಟಸ್ಯವಾ ವಾಚಕಃ, ಗತ್ಯಾದ್ಯರ್ಥಸ್ಯ ಅವತೇಃ ಖಲುರೂಪಮೇತತ್ ।
"ಅವತೇಷ್ಟಿಲೋಪಶ್ಚೇತಿ " ಸೂತ್ರಾತ್ ।

"ಓಂ ಇತಿ ಪುನಃ ಕಸ್ಯ ವಕ್ತೀತಿ" ಪ್ರಶ್ನಪೂರ್ವಕಂ ಅವತಿರ್ನಾಮಾಯಂಧಾತುಃ ಗತಿಕರ್ಮಾ(ಕ್ರಿಯಾ) ಪ್ರವೇಶಕರ್ಮಾ (ಕ್ರಿಯಾ) ಚೇತಿ ಅನ್ಯತ್ರಾಪಿ (ಮಹಾಭಾಷ್ಯೇ ಇತ್ಯೇಕೇ, ನಿರುಕ್ತಗ್ರಂಥೇ ಇತ್ಯನ್ಯೇ)ಏವಮೇವ ನಿರುಕ್ತತ್ವಾತ್।

ತಥಾಚ ಯದ್ಯಸೌ ಕರ್ಮಣಿ ತದಾಕರ್ತುಃ। ಯದಿವಾ ಕರ್ತರಿ ತದಾ ಕರ್ಮಣಾಂಅಪೇಕ್ಷಾಯಾಂ ಉಪ ಪದಾದ್ಯಭಾವೇಽಪಿ ಯೋಗ್ಯತಯಾ ಪ್ರತ್ಯಯಾದಿ ಬಲಾದ್ವಾ ಅಸೌ ಓಂಕಾರಃ ತಸ್ಯ ಜಿಜ್ಞಾಸ್ಯಸ್ಯ ಗುಣೈಃ। ಆನಂದಾದ್ಯನಂತಕಲ್ಯಾಣಗುಣೈಃ। ಗುಣಾನ್ವಾಪ್ತಾಂವಕ್ತಿ।

ಪಕ್ಷದ್ವಯೇಽಪಿ ಅನಂತಾನವದ್ಯಕಲ್ಯಾಣಗುಣಪೂರ್ಣತ್ವೈವ ಓಂಕಾರಸ್ಯಾರ್ಥಃ, ಬ್ರಹ್ಮಶಬ್ದಸ್ಯಾಪಿ ಸ ಏವಾರ್ಥಃ ।

**ಬೃಹತೇಃ ವೃದ್ಧ್ಯರ್ಥಸ್ಯ ಖಲು ಏತದ್ ರೂಪಮ್ ।**
**ತಥಾ ಚ ಪೂರ್ವವತ್ ಯೋಗ್ಯತಯಾ"ಅಥ ಕಸ್ಮಾದ್ ಉಚ್ಯತೇ ಬ್ರಹ್ಮೇತಿಬೃಹಂತೋ ಹ್ಯಸ್ಮಿನ್ ಗುಣಾಃ" ಇತ್ಯಾದಿಶ್ರುತ್ಯಂತರಬಲಾದ್ಗುಣಾನಾಂ ಸಂಬಂಧಃ ।।೧೩।।**

**ಸೂತ್ರಭಾಷ್ಯದಲ್ಲಿ** :- ಅಥಶಬ್ದೋ ಮಂಗಲಾರ್ಥೋಽಧಿಕಾರಾನಂತರ್ಯಾರ್ಥಶ್ಚ.

**ತತ್ತ್ವಪ್ರಕಾಶಿಕಾ** :- ಅಥಶಬ್ದಸ್ಯಾನಂತರ್ಯಮಾತ್ರಾರ್ಥತ್ವೇಽಪಿ, ಅಧಿಕಾರಸ್ಯ ಯೋಗ್ಯತಯಾ ಸಂಬಂಧಃ।

**ಭಾವದೀಪದಲ್ಲಿ** :- ಯೋಗ್ಯತಯೇತಿ = ಆನಂತರ್ಯಪ್ರತಿಯೋಗಿತ್ವ ಸಾಮರ್ಥ್ಯೇನೇತ್ಯರ್ಥಃ। ಸಾ ಚ ಯೋಗ್ಯತಾ, ಅಧಿಕಾರಸ್ಯೈವ, ನಾನ್ಯಸ್ಯೇತ್ಯೇತದ್ವಿವೃತಂ ನ ತಾವದಧ್ಯಯನ ಮಾತ್ರಾದಿತ್ಯಾದಿನಾ ಚಂದ್ರಿಕಾಯಾಂ ಪ್ರಪಂಚಿತಂ ಚ ಗುರುಪಾದೈಃ ನ್ಯಾಯಮೌಕ್ತಿಕಮಾಲಾಯಾಮ್ ।।೧೩।।

**ತಂತ್ರದೀಪಿಕಾ** :- (೫) ಅತ ಇತಿಯಸ್ಯ ಪ್ರಸಾದಾದಿತ್ಯಾದಿ ನಿರ್ಣೀಯಶ್ರುತ್ಯಾದಿಸ್ತಂ ಫಲಾದಿ ಪರಾಮೃಶತಿ ।।೧೩।।

ಇದಕ್ಕೆ ಮೂಲಭೂತವಾದ ಭಾಷ್ಯ ಮತ್ತು ಟೀಕಾ ಭಾಗಗಳು.

**ಸೂತ್ರಭಾಷ್ಯದಲ್ಲಿ** :- ಅತಃ ಶಬ್ದೋ ಹೇತ್ವರ್ಥಃ।

**ತತ್ವ ಪ್ರಕಾಶಿಕಾ :-** ಬ್ರಹ್ಮಜಿಜ್ಞಾಸಯಾಃ ಪ್ರಯೋಜನ ಶೂನ್ಯತಾಶಂಕಾನಿವರ್ತಕತಯಾ ಅತಃ ಶಬ್ದಂ ವ್ಯಾಚಷ್ಟೇ ಅತ ॥ಇತಿ ॥

**ಭಾವದೀಪದಲ್ಲಿ :-** ಮೋಕ್ಷಹೇತೋಃ ಜ್ಞಾನಸ್ಯ ವಿಷ್ಣುಪ್ರಸಾದಸ್ಯ ವಾ ಕರ್ಮಣಾ ಜ್ಞಾನಮಾತನೋತಿ ತತ್ಕರ್ಮ ಪರಿತೋಷಂ, ಯತ್ ಇತ್ಯುಕ್ತ್ಯಾ ಕರ್ಮಜನ್ಯತ್ವಪ್ರಯುಕ್ತ ನಿಷ್ಪ್ರಯೋಜನತ್ವ ಶಂಕೇತ್ಯರ್ಥಃ।

**ಸೂತ್ರಭಾಷ್ಯದಲ್ಲಿ :-** ಉಕ್ತಂ ಚ ಗಾರುಡೇ - ಅತಃ ಶಬ್ದೋ ಹೇತ್ವರ್ಥೇ ಸಮುದೀರಿತಃ
ಪರಸ್ಯ ಬ್ರಹ್ಮಣೋ ವಿಷ್ಣೋಃ ಪ್ರಸಾದಾದಿತಿವಾ ಭವೇದಿತಿ
ಸ ಹಿ ಸರ್ವಮನೋವೃತ್ತಿ ಪ್ರೇರಕಃ ಸಮುದಾಹೃತಃ । ಇತಿ ಚ

**ತತ್ವಪ್ರಕಾಶಿಕಾ :-** ಅತಃ ಶಬ್ದಸ್ಯ ಅವಶ್ಯಕತ್ವಂ ಅರ್ಥಾಂತರ ಚಾಹ ಪರಸ್ಯೇತಿ ।
ಅಕಾರವಾಚ್ಯಾತ್, ವಿಷ್ಣೋಃ ಪ್ರಸಾದಾದಿತಿವಾ ಭವೇದಿತಿ
ಅಃ ಇತಿ ಬ್ರಹ್ಮ (ಐ. ಆ. ೨-೩-೮-೭) ಇತ್ಯಾದಿ ಶ್ರುತಿಂ ಸೂಚಯತಿ ಪರಬ್ರಹ ಗ್ರಹಣೇನ
ಕಿಂ ಜಿಜ್ಞಾಸಾದ್ಯರ್ಥಂ ಭಗವತ್ಪ್ರಸಾದೇನೇತ್ಯತ ಆಹ ಸಹೀತಿ

**ಸೂತ್ರಭಾಷ್ಯದಲ್ಲಿ :-** ಯತೋ ನಾರಾಯಣ ಪ್ರಸಾದಂ ಋತೇನ ಮೋಕ್ಷಃ, ನ ಚ ಜ್ಞಾನಂ ವಿನಾ ಅತ್ಯರ್ಥ ಪ್ರಸಾದಃ ಅತೋ ಬ್ರಹ್ಮಜಿಜ್ಞಾಸಾ ಕರ್ತವ್ಯಾ ಇತಿ

**೭) ತಂತ್ರದೀಪಿಕಾ :-** ಬ್ರಹ್ಮಶಬ್ದೋ ಗುಣಪೂರ್ತ್ಯರ್ಥಃ ಸನ್ ಚಿದಚಿದ್ವಿಲಕ್ಷಣ ವಿಷ್ಣುವಾಚೀ "ಸ ವಿಷ್ಣು ರಾಹ ಹಿ ತಂ ಬ್ರಹ್ಮೇತ್ಯಾಚಕ್ಷತೇ" ಇತ್ಯುಕ್ತೇಃ।

ಈ ಸಂಗ್ರಹಕ್ಕೆ ಮೂಲಭಾಗಗಳು :-

**ಸೂತ್ರಭಾಷ್ಯ :-** ಬ್ರಹ್ಮಶಬ್ದಶ್ಚ ವಿಷ್ಣಾವೇವ
ಯಮಂತಃ ಸಮುದ್ರೇ ಕವಯೋ ಅವಯಂತಿ, ತದಕ್ಷರೇ ಪರಮೇ ಪ್ರಜಾಃ।
ಯತಃ ಪ್ರಸೂತಾ ಜಗತಃ ಪ್ರಸೂತೀ ತೋಯೇನ ಜೀವಾನ್
ವ್ಯಸಸರ್ಜ ಭೂಮ್ಯಾಮಿತ್ಯುಕ್ತ್ಯಾ 'ತದೇವರ್ತಂ ತದು ಸತ್ಯಮಾಹುಃ ತದೇವ ಬ್ರಹ್ಮ
ಪರಮಂ ಕವೀನಾಮ್ ಇತಿ (ಮಹಾನಾರಾಯಣೋಪನಿಷತ್) ಇತಿಹಿಶ್ರುತಿಃ ।
ಇತಿ ವಚನಾತ್ ವಿಷ್ಣುರೇವಹಿ ತತ್ಪ್ರೋಚ್ಯತೆ । ಇತಿ ।

ತದೇವ ಬ್ರಹ್ಮ ಪರಮಂ ಕವೀನಾಂ ಎಂಬದಲ್ಲಿ ತದೇವ ಎಂಬ ಶಬ್ದದಿಂದ ವಿಷ್ಣುನಿಶ್ಚಯವು ಹೇಗೆಂದರೆ - ಸಮುದ್ರಸ್ಥಲಿಂಗದಿಂದ ಎಂದು ತಿಳಿಬೇಕು. ಯಮಂತಃ ಸಮುದ್ರೇ ಎಂಬ ವಾಕ್ಯದಿಂದ ಹೇಳತಕ್ಕ ಸಮುದ್ರಾಂತಸ್ಥತ್ವವು ಕಥಂಚಿತ್ ರುದ್ರನಿಗೂ ಬರಬಹುದಲ್ಲ ಎಂದರೆ ಅದಕ್ಕೆ ಉತ್ತರವಾಗಿ ಮಹಾನಾರಾಯಣೋಪನಿಷತ್ತಿನಲ್ಲಿ ''ತನ್ನೋ ವಿಷ್ಣುಃ ಪ್ರಚೋದಯಾತ್'' ಎಂದು ಸ್ಪಷ್ಟವಾಗಿ ವಿಷ್ಣುವಾಚಕವಾದ ಪದವೇ ಇರುವುದರಿಂದ ಇತರರ ಶಂಕೆಗೆ ಅವಕಾಶವೇ ಇಲ್ಲ.

ಇದೇ ರೀತಿ ನಿರವಕಾಶವಾದ ಸುಪ್ರಸಿದ್ಧವಾದ ಪದ್ಮನಾಭತ್ವಲಿಂಗಪ್ರತಿಪಾದಕವಾದ ಋಕ್ ಸಂಹಿತಾ ವಾಕ್ಯವನ್ನೂ ಭಾಷ್ಯಕಾರರು ಉದಾಹರಿಸಿರುತ್ತಾರೆ.

''ಅಜಸ್ಯನಾಭೌ ಅಧಿ ಏಕಂ ಅರ್ಪಿತಂ'' ಇತ್ಯಾದಿ
ಇತಿ ಹಿ ವಿಷ್ಣೋರ್ಲಿಂಗಮ್ ।ಇತಿ।

''ಯಂ ಕಾಮಯೇ'' (ಋ. ಸಂ. ೧೦. ೧೨೫-೫) ಇತ್ಯುಕ್ತ್ವಾ ಮಮ ಯೋನಿಃ ಅಪ್ಸು ಅಂತಃ ಸಮುದ್ರೇ ( ಋ. ಸಂ. ೧೦. ೧೨೫-೭)

ಮಹಾಲಕ್ಷ್ಮೀದೇವಿಯು ತನಗೂ ಕಾರಣನಾದವನು ಸಮುದ್ರ ಮಧ್ಯದಲ್ಲಿರುವನೆಂದು ಹೇಳಿರುವ ವಚನವೂ ಸಹ ಶ್ರೀ ವಿಷ್ಣುವಿಗೇನೇ ಸಂಭವಿಸುವುದರಿಂದ ಬ್ರಹ್ಮಶಬ್ದವಾಚ್ಯನಾದವನು ವಿಷ್ಣುವೇ ಹೊರತು ಬೇರೆ ಯಾರೂ ಅಲ್ಲ.

ಅನುವ್ಯಾಖ್ಯಾನದಲ್ಲಿ :- ಓ ತತ್ತ್ವವಾಚೀತ್ಯೋಂಕಾರೋ ಪಠ್ಯತೇ ತದ್ಗುಣೋತ್ತಮಾಮ್ ।ಇತಿ।

ನ್ಯಾಯಸುಧಾದಲ್ಲಿ :- ಯತ್ತಾವದುಕ್ತಂ ವಿಷಯಾಭಾವಾತ್ ನ ಜಿಜ್ಞಾಸಾ ಕರ್ತವ್ಯಾ । ಇತಿ
ತದನುಪಪನ್ನಂ।
ಅನಾತ್ಮಜೀವಾತ್ಮನೋಃ ವಿಷಯತ್ವಾನುಪಪತ್ತಾವಪಿ, ಈಶ್ವರಸ್ಯ ತದುಪಪತ್ತೇಃ।
ಅತ್ರಯದುಕ್ತಂ ಜೀವವ್ಯತಿರಿಕ್ತ ಈಶ್ವರ ಏವ ನಾಸ್ತೀತಿ ತತ್ಪರಿಹಾರಾಯ ಸೂತ್ರಕೃತಾ
ಓಂಕಾರಬ್ರಹ್ಮಶಬ್ದೌ ಪ್ರಯುಕ್ತೌ।
ತೇನಾಯಮರ್ಥಃ ಸೂಚಿತಃ।
ಓ ಇತ್ಯೇತದಕ್ಷರಮುದ್ಗೀಥಮುಪಾಸೀತ ತದ್ವಿಜಿಜ್ಞಾಸಸ್ವ ತದ್ಬ್ರಹ್ಮೇತ್ಯಾದಿ
ಶ್ರುತೌ ಓಂಕಾರ ಬ್ರಹ್ಮಶಬ್ದೌ ಜಿಜ್ಞಾಸ್ಯೇ ವಸ್ತುನಿ ಶ್ರೂಯೇತೇ
ತಾಭ್ಯಾಂ ಚ ತತ್ ಸಕಲ ಜೀವಾನಾತ್ಮಕಾತ್ ಪ್ರಪಂಚಾತ್ ವಿಲಕ್ಷಣ ಮವಗಮ್ಯತ
।ಇತಿ ಸುಧಾ ॥

ಈ ಸುಧಾವಾಕ್ಯದಲ್ಲಿ ವಿವರಿಸಲ್ಪಟ್ಟ ಓ ತತ್ತ್ವವಾಚೀತ್ಯಾದಿ ಅನುವ್ಯಾಖ್ಯಾನದ ಅರ್ಥವನ್ನೇ ಸಂಗ್ರಹಿಸಿ ಶ್ರೀಗುರು ರಾಜರು ಬ್ರಹ್ಮಶಬ್ದೋ ಗುಣಪೂರ್ತ್ಯರ್ಥ। ಸನ್ ಚಿದಚಿದ್ವಿಲಕ್ಷಣವಿಷ್ಣುವಾಚೀ ಎಂದು ನುಡಿದಿದ್ದಾರೆ. ಮತ್ತು ಜಿಜ್ಞಾಸಾಧಿಕರಣದ ಅನುವ್ಯಾಖ್ಯಾನದ ಅಂತಿಮ ವಾಕ್ಯಗಳಲ್ಲಿ ಪ್ರತಿಪಾದಿತವಾಗಿರುವುವನ್ನೇ ಅಂದರೆ ಉತ್ತರ ಪ್ರಸ್ಥಾನ ಭಾಷ್ಯದಲ್ಲಿ ವಿಸ್ತಾರವಾಗಿ ಹೇಳುವುದನ್ನೇ ತಂತ್ರದೀಪಿಕಾಕಾರರು ಸಂಗ್ರಹಿಸಿರುತ್ತಾರೆ.

ಅನುವ್ಯಾಖ್ಯಾನದಲ್ಲಿ :-

"ಬ್ರಹ್ಮಶಬ್ದೋಽಪಿ ಹಿ ಗುಣಪೂರ್ತಿಮೇವ ವದತ್ಯಯಮ್।
ಅತೋ ನಾರಾಯಸ್ಯೈವ ಜಿಜ್ಞಾಸಾತ್ರ ವಿಧೀಯತೇ॥

ಸಿದ್ಧತ್ವಾತ್ ಬ್ರಹ್ಮಶಬ್ದಸ್ಯ ವಿಷ್ಣೌ ಸ್ಪಷ್ಟತಯಾ ಶ್ರುತೌ।
ಅಂಭಸ್ಯಪಾರ ಇತ್ಯುಕ್ತ್ವಾ ನಾರಾಯಣಪದೋದಿತಃ॥

ಆಪೋ ನಾರಾ ಇತಿಖ್ಯಾತ ಸ ಏವಾಪ್ಯಂತರೀರಿತಃ।
ಕಾಮತೋ ವಿಧಿರುದ್ರಾದಿಪದವಾಚ್ಯಾ ಸ್ವಯಂ ಶ್ರಿಯಾ॥

ಯೋನಿತ್ವೇನಾತ್ಮನೋ ವಿಷ್ಣೋಃ ತಿಷ್ಠಂತೀತ್ಯುದಿತಸ್ಯ ಚ।
ಯಸ್ಮಿನ್ನೇವಾ ಅಧೀತ್ಯುಕ್ತ್ವಾ ಸಮುದ್ರಂ ಸ್ಥಾನಮೇವ ಚ॥

ನಾಮಚಾಕ್ಷರಮಿತ್ಯೇವ ಋಚಿ ಇತ್ಯುದಿತಂತು ಯತ್।
ಯತಃ ಪ್ರಸೂತೇತ್ಯುಕ್ತ್ವಾ ಚ ತದೇವ ಬ್ರಹ್ಮಚಾಬ್ರವೀತ್॥ ಇತಿ

ಅನುವ್ಯಾಖ್ಯಾನದಲ್ಲಿ ಹಿಂದೆ ಉದಾಹರಿಸಿರುವ ವಾಕ್ಯಗಳಿಗೆ ಮುಂಚಿತವಾಗಿ ಈ ರೀತಿ ಉಕ್ತವಾಗಿದೆ.

ಸ್ವಯಂ ಭಗವತಾವಿಷ್ಣುಃ ಬ್ರಹ್ಮೇತ್ಯೇತತ್[illegible]ರೋದಿತಮ್।
ಸ ವಿಷ್ಣುರಾಹಹೀತ್ಯಂತೇ ದೇವತಾಸ್ತ್ವ[illegible] ತೇ ನ ಹಿ॥
ಆದ್ಯಂತಂ ದೇವತಾಸ್ತ್ವಸ್ಯ ಸ್ವಯಂ ಭ[illegible]ಕೃತಮ್।
ಮಧ್ಯಂ ತದಾಜ್ಞಯಾ ಶೇಷಪ್ರೈಲಾ[illegible]ಂ ಕೃತಮಂಜಸಾ।
ಅತಸ್ತತ್ತ್ವೈವ ವಿಷ್ಣುತ್ವಸಿದ್ಧೇಃ ಬ್ರಹ್ಮ[illegible] ಸೂಚಯತ್॥ ಇತಿ

ತತ್ತ್ವಪ್ರಕಾಶಿಕಾ ವ್ಯಾಖ್ಯಾನದಲ್ಲಿ:-

ಬ್ರಹ್ಮಶಬ್ದಸ್ಯ ಅನೇಕ[illegible]ತ್ರೇಽಪಿ ತಸ್ಯ ವಿಷ್ಣಾವೇವ ಮುಖ್ಯತ್ವಾತ್, ಮುಖ್ಯಸ್ಯೈವ
ಗ್ರಾಹ್ಯತ್ವಾತ್ ಸ ಏವ ಸೂತ್ರಕಾರವಿವಕ್ಷಿತೋ ಜ್ಞಾಯತ ಇತಿಭಾವಃ।
"ಸ ವಿಷ್ಣುರಾಹ ಹಿ [illegible] ತಂ ಬ್ರಹ್ಮೇತ್ಯಾಚಕ್ಷತ ಇತಿ" ನಿರಂತರಸೂತ್ರದ್ವಯ[illegible]ತ್ವೇನ
ನಾರಾಯಣಸ್ಯೈವ ಪ್ರಸ್ತುತಿಂ ಸೂಚಯತಿ ವಿಷ್ಣುಗ್ರಹಣೇನ।
ಯದ್ಯಪ್ಯಸ್ಯತ್ರ ರ[illegible]ತೋ ಬ್ರಹ್ಮಶಬ್ದಃ ತಥಾಪಿ ವಿಷ್ಣಾವೇವ ಮುಖ್ಯಃ।

ಅನ್ಯತ್ರ ಅಜ್ಞರೂಢಿತ್ವಾತ್ ಭಾವತಿ ಚ ವಿದ್ವದ್ರೂಢ್ಯಾ ಬ್ರಹ್ಮಶಬ್ದ ಇತಿ ||
ಋಷೀಣಾಂ ತದೇವ ಪರಮಂ ಬ್ರಹ್ಮೇತಿ ಶ್ರುತ್ಯುಕ್ತತ್ವಾತ್ ವಿದ್ವದವಿದ್ವ ದ್ರೂಢ್ಯೋಃ ವಿದ್ವ ದ್ರೂಢೇರೇವ ಮುಖ್ಯತ್ವಾತ್ || ಇತಿ ||

(೧)ತಂತ್ರದೀಪಿಕಾ:- **ಬ್ರಹ್ಮಣೋಃ ಜಿಜ್ಞಾಸಾ ಇತಿ ಕರ್ಮಣಿ ಷಷ್ಠ್ಯಾ ಸಮಾಸಃ || ಇತಿ ||**

ಇದಕ್ಕೆ ಮೂಲಭೂತವಾದ ಅನುವ್ಯಾಖ್ಯಾನವು

"ಸ ಏವ ಸರ್ವವೇದಾರ್ಥೋ ಜಿಜ್ಞಾಸ್ಯೋಽಯಂ ವಿಧೀಯತೇ || ಇತಿ

ನ್ಯಾಯಸುಧಾ:- ತತ್ರ ತಾವತ್, ಬ್ರಹ್ಮಣೋ-ಜಿಜ್ಞಾಸಾ = ಬ್ರಹ್ಮಜಿಜ್ಞಾಸಾ ಇತಿ ಷಷ್ಠೀಸಮಾಸ|
ತತ್ರಕರ್ಮಣಿ ಷಷ್ಠೀ ಪರಿಗ್ರಹಾಯ ಜಿಜ್ಞಾಸ್ಯ ಇತ್ಯುಕ್ತಮ್ ಕೃತ್ಯಾನಾಂ ಕರ್ಮಣಿ ಸ್ಮರಣಾತ್ ||

ಅನ್ಯಥಾ ಜಿಜ್ಞಾಸಾ ಅಸ್ಯೇತ್ಯವಕ್ಷ್ಯತ್|
ಜಿಜ್ಞಾಸಾ ಖಲು ಕರ್ಮಾಪೇಕ್ಷಾ, ವಿನಾ ಕರ್ಮಣಾ ನ ಜ್ಞಾತುಂ ಶಕ್ಯಾ ನ ತು ಸಂಬಂಧಿನಂ ವಿನೇತಿ ಕರ್ಮಣಃ ಪ್ರಾಧಾನ್ಯಾತ್ತದೇವ ವಕ್ತವ್ಯಮ್|
ನಿರ್ವಿಷಯತ್ವಶಂಕಾಪನೋದನಾರ್ಥಂ ಪ್ರಯುಕ್ತಂ ಪದಮಿದಂ ಕರ್ಮಾಭಿಧಾಯ್ಯೇವ ಯುಕ್ತಮ್|
ತದ್ವಿಜಿಜ್ಞಾಸಸ್ವೇತ್ಯಾದಿಶ್ರುತ್ಯರ್ಥಾನುಗತಂಚೈವಂ ಸತಿ ಸೂತ್ರಂಸ್ಯಾತ್ || ಇತಿ ||

(೮) ತಂತ್ರದೀಪಿಕಾ :- ತತ್ರ ಅಥ = ಅಧ್ಯಯನಶಮದಮಾದಿರೂಪಾಧಿಕಾರಸಂಪತ್ತ್ಯನಂತರಮ್|

ಅತಃ = (೧) ಅಕಾರವಾಚ್ಯಾತ್ ಪ್ರಸನ್ನಾತ್ ಬ್ರಹ್ಮಣಃ| ಜ್ಞಾನೋತ್ಥಪ್ರಸಾದಜಮೋಕ್ಷಪ್ರಾಪ್ತಿಫಲತ್ವಾತ್,

(೨) ಬಂಧಸ್ಯಸತ್ಯತ್ವಾತ್,

(೩) ಆಗಮಸ್ಯಪ್ರಾಮಾಣ್ಯಾತ್,

(೪) ಸಿದ್ಧಾರ್ಥಪ್ರಮಾಪಕತ್ವಾದ್ವಾ ಏಂ ಬ್ರಹ್ಮಣಃ ಗುಣಪರಿಪೂರ್ಣಸ್ಯ ವಿಷ್ಣೋಃ ಜಿಜ್ಞಾಸಾ| ಕರ್ತವ್ಯೇತಿಶೇಷಃ || ಇತಿ ||

ಈ ತಂತ್ರದೀಪಿಕಾ ವಾಕ್ಯದಲ್ಲಿ ಅತಃ ಎಂಬ ಸೂತ್ರಘಟಕವಾದ ಶಬ್ದಕ್ಕೆ ವೇದಸ್ಯ ಅನ್ವಿತಾಭಿಧಾಯಿತ್ವಾತ್ ಎಂಬ ಅರ್ಥವನ್ನೂ ಇಟ್ಟುಕೊಳ್ಳಬೇಕು. ಇದಕ್ಕೆ ಆಧಾರವೇನೆಂದರೆ ನ್ಯಾಯಸುಧಾ ವ್ಯಾಖ್ಯಾನವಾದ ಪರಿಮಳದಲ್ಲಿ ಅತಃ ಎಂಬ ಪದಕ್ಕೆ ವೇದಸ್ಯ ಅನ್ವಿತಾಭಿಧಾಯಿತ್ವಾತ್ ಎಂಬುದಾಗಿ ಐದನೇ ಹೇತುವನ್ನು ತೋರಿಸಲಾಗಿದೆ.

ಆ ಪರಿಮಳ ವಾಕ್ಯವು ಈ ರೀತಿ ಇದೆ.

"ಪರಿಮಳ ವ್ಯಾಖ್ಯಾ ವಾಕ್ಯವು" ಏವಂ ಓಂ ಬ್ರಹ್ಮಪದಾಭ್ಯಾಂಚಿದಚಿದ್ವಿಲಕ್ಷಣ ವಿಷಯಸಿದ್ಧಿಂ, ಅನುಗ್ರಾಹ್ಯಪ್ರಮಾಣಂ, ಅನ್ಯೇನಾಗತಾರ್ಥತ್ವಂ ಚೋಪಪಾದ್ಯ ಅಥಪದಸ್ಯ ಭಾಷ್ಯೇ ಏವ ಸಂಕ್ಷೇಪವಿಸ್ತರಾಭ್ಯಾಂ ಅರ್ಥಸ್ಯೋಕ್ತತ್ವೇನ ಇಹ ವಕ್ತವ್ಯ ವಿಶೇಷಾಭಾವಾತ್, ಉಪಾಸನಾ ಪಾದೋಪಕ್ರಮೇ ಸಂಗ್ರಹೇಣ ವ್ಯಾಖ್ಯಾಸ್ಯಮಾನತ್ವಾಚ್ಚ, ಅತಃ ಪದಸ್ಯೈವ ಜ್ಞಾನಾದಿ ಪ್ರಣಾಡ್ಯಾ

೧. ಮೋಕ್ಷಫಲಕತ್ವಾತ್

೨. ಬಂಧಸ್ಯಸತ್ಯತ್ವಾತ್

೩. ವೇದಸ್ಯ ಸಿದ್ಧರೂಪವಸ್ತುಪರತ್ವಾತ್

೪. ವೇದಸ್ಯಪ್ರಾಮಾಣ್ಯಾತ್

೫. ವೇದಸ್ಯ ಅನ್ವಿತಾಭಿಧಾಯಿತ್ವಾದಿತ್ಯೇವಂ ರೂಪಹೇತು ಪಂಚಕಪರತ್ವೇನ ಪಂಚಧಾ ವ್ಯಾಖ್ಯಾ ಆಚಾರ್ಯೈಃ ಪ್ರಾರಭ್ಯತೇ "ಜ್ಞಾನೇತ್ಯಾದಿನಾ" "ಸ್ವಯಂಭಗವತೇ" ತ್ಯತಃ ಪ್ರಾಕ್ತನ ಗ್ರಂಥೇನ।। ಇತಿ।।

ನ್ಯಾಯಸುಧಾದಲ್ಲಿ ಜಿಜ್ಞಾಸಾಧಿಕರಣದ ಕಡೆ ಭಾಗದಲ್ಲಿ

"ಏವಂ ತಾವತ್ ಬ್ರಹ್ಮಜಿಜ್ಞಾಸಾಕರ್ತವ್ಯತ್ವೋಪಯುಕ್ತಂ ಯುಕ್ತಿಜಾತಂ ಅತಃಶಬ್ದಾರ್ಥತ್ವೇನ ವ್ಯಾಖ್ಯಾತಮ್।।

ಎಂದು ಹೇಳಲಾಗಿದೆ.

ಪರಿಮಳಾಚಾರ್ಯರು ಪರಿಮಳದಲ್ಲಿ ಯುಕ್ತಿಜಾತಂ ಎಂಬ ಸುಧಾಕ್ಕೆ ಈ ರೀತಿ ವ್ಯಾಖ್ಯಾನ ಮಾಡಿರುತ್ತಾರೆ.

"ಯುಕ್ತಿಜಾತಮಿತಿ"

೧. ಮೋಕ್ಷಜನಕ ಪ್ರಸಾದಹೇತು ಜ್ಞಾನೋತ್ಪಾದಕತ್ವ,

೨. ಬಂಧಸತ್ಯತ್ವಾತ್

೩. ವೇದಾದಿಶಬ್ದಗತ ಸಿದ್ಧಾರ್ಥಪರತ್ವ

೪. ಪ್ರಾಮಾಣ್ಯ

೫. ಅನ್ವಿತಾಭಿಧಾಯಿತ್ವರೂಪಯುಕ್ತಿಜಾತಮಿತ್ಯರ್ಥಃ।। ಇತಿ
"ಪರಿಮಳವ್ಯಾಖ್ಯಾ"

ಪರಿಮಳ ವ್ಯಾಖ್ಯಾನದಲ್ಲಿ "ವಿಷಯ ಪ್ರಯೋಜನೇತಿ"

ಅತಃಪದಸ್ಯಹಿ

೧. ಮೋಕ್ಷಹೇತು ಪ್ರಸಾದಜನಕಜ್ಞಾನ ಕಾರಣತ್ವಾತ್

೨. ಬಂಧಸ್ಯಸತ್ಯತ್ವಾ

೩. ವೇದಸ್ಯ ಸಿದ್ಧಾರ್ಥಪರತ್ವಾತ್

೪. ವೇದಸ್ಯಪ್ರಾಮಾಣ್ಯಾತ್

೫. ಅನ್ವಿತಾಭಿಧಾಯಕತ್ವಾಚ್ಚೇತ್ಯೇವಂ

ಯುಕ್ತಿಪಂಚಕಪರತ್ವೇನ, ಅತಃಶಬ್ದಃ ಪಂಚಧಾ ವ್ಯಾಖ್ಯಾತಃ।।
ತತ್ರ ಆದ್ಯದ್ವಯಂ ಪ್ರಯೋಜನಸಿದ್ಧ್ಯಂಗಭೂತಮ್।
ಅಂತ್ಯತ್ರಯಂತು ವಿಷಯಸಿದ್ಧ್ಯಂಗಭೂತಮಿತಿ ವಿಷಯಪ್ರಯೋಜನಸಿದ್ಧ್ಯಂಗಭೂತನ್ಯಾಯ
ಕಲಾಪಮಿತ್ಯುಕ್ತಮ್।।

ಮೊದಲನೆಯ ಸೂತ್ರವಾದ ಜಿಜ್ಞಾಸಾ ಸೂತ್ರದ ವಿಶಿಷ್ಟಾರ್ಥ ನಿರೂಪಣಾ ಪರವಾದ ತತ್ರ ಎಂದು ಪ್ರಾರಂಭಿಸಿ ಸಂಗ್ರಹಿಸಿರುವ ಅರ್ಥವು ಬ್ರಹ್ಮಸೂತ್ರ ಭಾಷ್ಯ ಮತ್ತು ಅನುವ್ಯಾಖ್ಯಾನಗಳಲ್ಲಿ ಪ್ರತಿಪಾದಿಸಿರುವ ಅರ್ಥದ ಸಂಗ್ರಹವೇ ಆಗಿದೆ. ಅಥ ಎಂಬ ಪದಕ್ಕೆ ಅಧ್ಯಯನಶಮದಮಾದಿರೂಪಾಧಿಕಾರಸಂಪತ್ತ್ಯನಂತರಂ, ಎಂಬ ಅರ್ಥವನ್ನು ಹೇಳಿರುವುದು, ಅಧಿಕಾರಶ್ಚೋಕ್ತೋ ಭಾಗವತತಂತ್ರೇ ಎಂದು ಸೂತ್ರಭಾಷ್ಯದಲ್ಲಿ ಪ್ರಾರಂಭಿಸಿ ಪ್ರತಿಪಾದಿಸಿರುವ ಗುಣಕೃತವಾದ ಅಧಿಕಾರದ ಸಂಗ್ರಹ ನಿರೂಪಣೆಯಾಗಿದೆ.

ಸೂತ್ರಭಾಷ್ಯದ ವಾಕ್ಯಗಳು ಈ ರೀತಿ ಇವೆ :- ಆನಂತರ್ಯೇಽಧಿಕಾರಸ್ಯ ಮಂಗಳಾರ್ಥೇ ತಥೈವ ಚ।
ಅಥಶಬ್ದಃ।।

ಅಧಿಕಾರಶ್ಚೋಕ್ತೋ ಭಾಗವತತಂತ್ರೇ - "ತಥಾನ್ಯೋ ಗುಣಪೂರ್ವಕಃ।
ಭಕ್ತಿಮಾನ್ ಪರಮೋ ವಿಷ್ಣೌ ಯಸ್ತ್ವಧ್ಯಯನವಾನ್ ನರಃ।
ಅಧಮಃ ಶಮಾದಿಸಂಯುಕ್ತಃ ಮಧ್ಯಮಃ ಸಮುದಾಹೃತಃ।।

ಆಬ್ರಹ್ಮಸ್ತಂಬಪರ್ಯಂತಂ ಅಸಾರಂ ಚಾಪ್ಯನಿತ್ಯಕಮ್।
ವಿಜ್ಞಾಯ ಜಾತವೈರಾಗ್ಯೋ ವಿಷ್ಣುಪಾದೈಕಸಂಶ್ರಯಃ।
ಸ ಉತ್ತಮೋಽಧಿಕಾರೀ ಸ್ಯಾತ್ ಸನ್ನ್ಯಸ್ತಾಖಿಲಕರ್ಮವಾನ್।। ಇತಿ

**ಅರ್ಥ :- ಆ ಬ್ರಹ್ಮಸ್ತಂಬಪರ್ಯಂತಂ = ಚತುರ್ಮುಖಬ್ರಹ್ಮಾರಭ್ಯತೃಣಜೀವಪರ್ಯಂತಂ
"ಅಸಾರಂ" = ಅಸರ್ವೋತ್ತಮಂ. ಅಸಾರಪದಂ = ಮೋಕ್ಷಪ್ರದವರ ಪರಂವಾ.**

**ಅನಿತ್ಯಕಂ = ಅನಿತ್ಯಂ, ಬ್ರಹ್ಮಾದಿದೇವಾನಾಂ ದೇಹನಾಶೇಽಪಿ ಸ್ವರೂಪನಾಶಾಭಾವಾತ್ ಕ ಪ್ರತ್ಯಯಃ ।**
**ಪರಬ್ರಹ್ಮತು ಸರ್ವಸಾರಂ, ಸರ್ವಥಾನಿತ್ಯಂಚೇತಿ ।।**

ಅಥ ಎಂಬ ಪದಕ್ಕೆ ಭಾಷ್ಯದಲ್ಲೂ, ಮೂರನೇ ಅಧ್ಯಾಯದ ಮೂರನೇ ಪಾದವಾದ ಉಪಾಸನಾ ಪಾದದ ಉಪಕ್ರಮದಲ್ಲಿಯೂ ಸಂಗ್ರಹವಾಗಿ ವ್ಯಾಖ್ಯಾನಿಸಲಾಗಿದೆ ಎಂದು ಹೇಳಿರುವಂತೆ ಆ ವಾಕ್ಯಗಳನ್ನೇ ಉದಾಹರಿಸಿ ತೋರಿಸುತ್ತೇವೆ.

ಮೂರನೇ ಅಧ್ಯಾಯ ಮೂರನೇ ಪಾದದಲ್ಲಿನ ಅನುವ್ಯಾಖ್ಯಾನದ ಭಾಗವು ಈ ರೀತಿ ಇದೆ.

ಅನುವ್ಯಾಖ್ಯಾನದಲ್ಲಿ ಅಧ್ಯಾಯ ೩ - ಪಾದ ೩ - ಉಪಕ್ರಮಭಾಗದ ಆರಂಭದಲ್ಲಿನ ವಾಕ್ಯಗಳು ಅಥಶಬ್ದಾರ್ಥದ ನಿರೂಪಣಾಪರವಾಗಿದೆ.

**ಯುಕ್ತಿತೋ ಜ್ಞಾತವೇದಾರ್ಥೋ ನಿರಸ್ಯ ಸಮಯಾನ್ ಪರಾನ್ ।**
**ಪರಸ್ಪರವಿರೋಧಂ ಚ ಶ್ರುತ್ಯಾದ್ಯಶೇಷವಾಕ್ಯಗಮ್ ।।**

**ಅಧ್ಯಾತ್ಮಶ್ರವಣೋ ಭೂತ್ವಾ ತಸ್ಯ ಸನ್ನಿಹಿತತ್ವತಃ ।**
**ಬಹುಯುಕ್ತಿವಿರೋಧಾನಾಂ ಭಾನಾತ್ ತತ್ಸಹಿತಶ್ರುತೇಃ ।।**

**ವಿರೋಧಂ ಚ ನಿರಾಕೃತ್ಯ ಶ್ರುತೀನಾಂಪ್ರಾಣತತ್ತ್ವಗಾನ್ ।**
**ಪರಿಹೃತ್ಯ ವಿರೋಧಾಂಶ್ಚ ತತ್ಪ್ರಸಾದಾನುರಂಚಿತಃ ।।**

**ದೇಹಕರ್ತೃತ್ವಮೀಶಸ್ಯ ಜ್ಞಾತ್ವಾ ತತ್ಪ್ರಿಯತಾಸ್ಮೃತೇಃ ।**
**ವಿಶೇಷಸ್ನೇಹಮಾಪಾದ್ಯ ಸರ್ವಕರ್ತೃತ್ವತೋಽಧಿಕಮ್ ।।**

**ನಿಷ್ಪಾದ್ಯ ಬಹುಮಾನಂಚ ತದನ್ಯತ್ರಾತಿದುಃಖತಃ ।**
**ಉತ್ಪಾದ್ಯಾಧಿಕ ವೈರಾಗ್ಯಂ ತದ್ಗುಣಾಧಿಕ್ಯವೇದನಾತ್ ।।**

**ಸರ್ವಸ್ಯ ತದ್ವಶತ್ವಾಚ್ಚ ದಾರ್ಢ್ಯಂಭಕ್ತೇರವಾಪ್ಯ ಚ ।**
**ಯತೇತೋಪಾಸನಾಯೈವ ವಿಶಿಷ್ಟಾಚಾರ್ಯ ಸಂಪದಾ ।।**

**ಕರ್ತವ್ಯಾ ಬ್ರಹ್ಮಜಿಜ್ಞಾಸೇತ್ಯುಕ್ತೇ ಕಿಮಿತಿಸಂಶಯೇ ।**
**ಅತ ಇತ್ಯುದಿತೇಽಪ್ಯಸ್ಯ ವಿಶೇಷಾನುಕ್ತಿತಃ ಪುನಃ ।।**

**ಸೃಷ್ಟಿಬಂಧನ ಮೋಕ್ಷಾದಿ ಕರ್ತೃತ್ವಸ್ಯ ಶ್ರುತತ್ವತಃ ।**
**ಯತೋ ಮೋಕ್ಷಾದಿದಾತಾಸೌ ಅತೋಜಿಜ್ಞಾಸ್ಯ ಏವ ನಃ ।।**

**ಇತ್ಯಾಹ ತತ್ಪರಂ ಬ್ರಹ್ಮ ವ್ಯಾಸಾಖ್ಯಂ ಜ್ಞಾನರಶ್ಮಿಮತ್ ।। ಇತಿ ಅನುವ್ಯಾಖ್ಯಾನೇ ।।**

**ಯೋ ಹ್ಯೇವ ಬಂಧಮೋಕ್ಷಃ ಸ್ಯಾತ್ ಸ ಚ ಜಿಜ್ಞಾಸಯಾಗತಃ।**
**ಸುಪ್ರಸನ್ನೋ ಭವೇದೀಶೋ ಜಿಜ್ಞಾಸಾತೋಽಸ್ಯಮುಕ್ತಿದಾ॥ ಇತಿ ಚ॥**

**ಅಭಿಪ್ರಾಯ ವಿವರಣೆ** :- ಈ ಅನುವ್ಯಾಖ್ಯಾನ ವಾಕ್ಯದಲ್ಲಿ ಯತೇತೋಪಾಸನಾಯ್ಯೈವ ಎಂಬುದರಿಂದ ಬ್ರಹ್ಮ ಜಿಜ್ಞಾಸಾ ಕರ್ತವ್ಯಾ ಎಂಬುದು ವ್ಯಾಖ್ಯಾನಿಸಲ್ಪಟ್ಟಿದೆ.

ಯುಕ್ತಿತೋ ಜ್ಞಾತವೇದಾರ್ಥೋ ಎಂದು ಪ್ರಾರಂಭಿಸಿ ಹೇಳಿರುವುದೆಲ್ಲವೂ ಅಥಾತೋಬ್ರಹ್ಮಜಿಜ್ಞಾಸಾ ಎಂಬ ಸೂತ್ರದಲ್ಲಿನ ಅಥ ಶಬ್ದಕ್ಕೆ ವ್ಯಾಖ್ಯಾನವಾಗಿ ಪ್ರವೃತ್ತವಾಗಿದೆ. ಹಿಂದೆ ಅಥ ಶಬ್ದಕ್ಕೆ ವಿಸ್ತಾರವಾಗಿ ವ್ಯಾಖ್ಯಾನ ಮಾಡಿಲ್ಲವಾದ್ದರಿಂದ, ಸೂತ್ರಾರ್ಥವನ್ನೇ ಅನುವಾದ ಮಾಡಿ ಅಥ ಶಬ್ದಕ್ಕೆ ವ್ಯಾಖ್ಯಾನವನ್ನು ಮಾಡಲಾಗಿದೆ. ಮುಕ್ತಿಯೋಗ್ಯಚೇತನನಾದ ಅಧಿಕಾರಿಯಾದವನು ಉತ್ತಮರಾದ ಆಚಾರ್ಯರ ಉಪದೇಶ ಮೊದಲಾದ ಸಂಪತ್ತಿನಿಂದ "ಸಕಲ ವೇದಗಳಿಗೂ ಭಗವಂತನೇ ಪರಮ ಮುಖ್ಯಾರ್ಥವೆಂಬುದನ್ನು ಪರಮಮುಖ್ಯವೃತ್ತಿಯಿಂದ ತಿಳಿದವನಾಗಬೇಕು.

ಆಪಾತತಃ ತೋರತಕ್ಕ ಯುಕ್ತಿಗಳ ವಿರೋಧಗಳನ್ನು ಪ್ರಬಲ ಯುಕ್ತಿಗಳ ದೆಸೆಯಿಂದ ಉತ್ತಮ ಗುರುಗಳ ಉಪದೇಶದಿಂದ ಪರಿಹರಿಸಿಕೊಳ್ಳಬೇಕು. ಉತ್ತಮ ಗುರುಗಳ ಉಪದೇಶ ಪ್ರಭಾವದಿಂದ ಚಾರ್ವಾಕಾದಿ ಇತರ ಮತಗಳ ನಿರಾಕರಣೆಯನ್ನೂ ಆಯಾ ಮತಗಳಲ್ಲಿನ ದೋಷಗಳನ್ನೂ ಅರಿಯಬೇಕು. ವೇದವಾಕ್ಯಗಳಲ್ಲೂ ಸಹ ಆಪಾತತಃ ತೋರತಕ್ಕ ವಿರೋಧಗಳನ್ನು ಪರಿಹರಿಸಿಕೊಳ್ಳಬೇಕು. ದೇಹೇಂದ್ರಿಯ ಮುಖ್ಯ ಪ್ರಾಣಾದಿಪರವಾಗಿ ತೋರತಕ್ಕ ಯುಕ್ತಿಸಹಿತಗಳಾದ ಶ್ರುತಿ ವಾಕ್ಯಗಳಿಗೆ ಪರಸ್ಪರ ವಿರೋಧವೆಂದು ಆಪಾತತಃ ತೋರತಕ್ಕ ವಿರೋಧವನ್ನು ಉತ್ತಮ ಗುರುಗಳ ಉಪದೇಶದಿಂದ ಪರಿಹರಿಸಿಕೊಂಡು ಇಂದ್ರಿಯಾದಿಗಳ ಸಂಖ್ಯಾದಿಗಳಲ್ಲಿಯೂ ಆಪಾತತಃ ತೋರತಕ್ಕ ವಿರೋಧಗಳನ್ನು ಪರಿಹರಿಸಿಕೊಂಡವನಾಗಿ, ಇಂದ್ರಿಯಾಭಿಮಾನಿ ದೇವತೆಗಳ ಪ್ರಸಾದಕ್ಕೂ ತನ್ನಿಯಾಮಕರಾದ ಮುಖ್ಯ ಪ್ರಾಣದೇವರ ಅನುಗ್ರಹಕ್ಕೂ ಪಾತ್ರನಾಗಿ, ತತ್ತದಂತರ್ಯಾಮಿಯಾದ ಪರಮಾತ್ಮನ ಪರಮಾನುಗ್ರಹಕ್ಕೆ ವಿಷಯನಾಗಿ ಸರ್ವೋತ್ತಮನಾದ ಶ್ರೀಹರಿಯೇ ಅಸ್ವತಂತ್ರವಾದ ಈ ಜಗತ್ತಿಗೆಲ್ಲಾ ಕರ್ತೃವೆಂಬುದಾಗಿ ಸಂದೇಹಭ್ರಾಂತಿಗಳಿಲ್ಲದಂತೆ ದೃಢವಾಗಿ ತಿಳಿದು, ಅಸಾರವಾದ ಅನಿತ್ಯವಾದ ಈ ಜಗತ್ತಿನಲ್ಲಿ ವೈರಾಗ್ಯವನ್ನು ಹೊಂದಿ, ತನ್ನ ದೇಹೇಂದ್ರಿಯಾದಿಗಳಲ್ಲಿ ಅಭಿಮಾನವನ್ನು ತ್ಯಜಿಸಿ, ಸರ್ವಕರ್ತನಾದ ಸರ್ವನಿಯಾಮಕನಾದ, ಸರ್ವಸದ್ಗುಣ ಪರಿಪೂರ್ಣನಾದ, ಸಕಲ ದೋಷ ರಹಿತನಾದ ಸರ್ವೋತ್ತಮನಾದ ಪರಮಾತ್ಮನಲ್ಲಿ ಅತ್ಯಾದರದಿಂದ, ನಿರಂತರವಾಗಿ ದೃಢವಾದ ಶ್ರೇಷ್ಠವಾದ ಭಕ್ತಿಯನ್ನು ಹೊಂದಿ ವಿಶಿಷ್ಟಾಚಾರ್ಯರ ಉಪದೇಶ ಸಂಪತ್ತಿನಿಂದ ಭಗವಂತನ ಉಪಾಸನೆಗೆ ಪ್ರಯತ್ನ ಮಾಡಬೇಕು.

ಯಾವ ಸಾಧನ ಸಂಪತ್ತು ಇಲ್ಲದಿದ್ದರೆ ಬ್ರಹ್ಮಜಿಜ್ಞಾಸೆಯು ಆಗುವುದಿಲ್ಲವೋ ಅಂತಹ ಸಾಧನ ಸಂಪತ್ತಿನ ಅನಂತರವೆಂದು ಎಂಬುದಾಗಿ ಅಥ ಶಬ್ದದ ಅರ್ಥವನ್ನು ಇಟ್ಟುಕೊಳ್ಳಬೇಕೆಂಬ ಅಂಶವು ಈ ಭಾಷ್ಯದಲ್ಲಿ ಯಾವುದು ನಿರೂಪಿತವಾಗಿದೆಯೋ ಅದರ ಸಂಗ್ರಹ ರೂಪವಾಗಿಯೇ ಶ್ರೀ ಗುರುಪಾದರು ಅಥ = ಅಧ್ಯಯನ ಶಮದಮಾದಿ ರೂಪಾಧಿಕಾರ ಸಂಪತ್ತ್ಯನಂತರಂ" ಎಂದು ಅರ್ಥವನ್ನು ತೋರಿಸುತ್ತಾರೆ.

ಇತರ ಮತದವರು (ಅದ್ವೈತಿಗಳು) ನಿತ್ಯಾನಿತ್ಯವಸ್ತುವಿವೇಕ, ಇಹಾಮುತ್ರಫಲಭೋಗ ವೈರಾಗ್ಯ ವಿಷಯ ವೈರಾಗ್ಯ, ಶಮದಮಾದಿ ಸಾಧನಸಂಪತ್ತು, ಮುಮುಕ್ಷುತ್ವರೂಪ ಅಧಿಕಾರ ಚತುಷ್ಟಯಾನಂತರಂ ಎಂಬುದಾಗಿ ಹೇಳುತ್ತಾರೆ. ಇವೆಲ್ಲವೂ ಸಿದ್ಧಾಂತಿಗಳು ತಿಳಿಸುವ ಅಥ ಶಬ್ದದ ಅರ್ಥದಲ್ಲೇ ಅಂತರ್ಭಾವವನ್ನು ಹೊಂದುತ್ತದೆ.

ಜಿಜ್ಞಾಸೆಯಿಂದಲೇ ವೈರಾಗ್ಯ - ವೈರಾಗ್ಯವಿದ್ದರೆ ಜಿಜ್ಞಾಸಾ ಎಂಬುದಾಗಿ ಅನ್ಯೋನ್ಯಾಶ್ರಯ ದೋಷವು ಆಪಾತತಃ ತೋರುತ್ತದೆ. ಕೂಲಂಕಷವಾಗಿ ಪರಿಶೀಲಿಸಿದರೆ ಅದಕ್ಕೆ ಅವಕಾಶವಿಲ್ಲ. ಸಾತ್ವಿಕ ಪ್ರಕೃತಿಗೆ ಸತ್ಸಂಗ ಪ್ರಭಾವದಿಂದ ಸ್ವಲ್ಪ ವೈರಾಗ್ಯವು ಉಂಟಾಗುತ್ತದೆ. ಶ್ರವಣದಿಂದ ಅದು ವೃದ್ಧಿಗೊಂಡು ಮನನದಿಂದ ಅಧಿಕವಾಗಿ ಅಭಿವೃದ್ಧಿಗೊಳ್ಳುತ್ತದೆ ಎಂದು ಪರಮಾಭಿಪ್ರಾಯ.

ಇತರರು ಹೇಳಿರುವ ನಿತ್ಯಾನಿತ್ಯ ವಸ್ತು ವಿವೇಕಾದಿಗಳ ಅಂತರ್ಭಾವವು ಹೇಗೆಂದರೆ ಯುಕ್ತಿತೋಜ್ಞಾತ ವೇದಾರ್ಥಃ ಎಂಬುದರಿಂದ ನಿತ್ಯಾನಿತ್ಯ ಜ್ಞಾನವು ಲಾಭವಾಗುವುದು. ವಿಶೇಷಸ್ಸೇಹಮಾಪಾದ್ಯ ಎಂಬುದರಿಂದ ಶಮದಮಾದಿಗಳನ್ನು ಹೇಳಿದಂತಾಗುವುದು. ಉತ್ಪಾದ್ಯಾಧಿಕ ವೈರಾಗ್ಯಂ = ಎಂಬುದರಿಂದ = ಇಹಾಮುತ್ರಫಲಭೋಗ ವೈರಾಗ್ಯವನ್ನು ಹೇಳಿದಂತಾಗುವುದರಿಂದ ಶ್ರೀಮದಾಚಾರ್ಯರು ತೋರಿಸಿರುವ ಸಾಧನಗಳಲ್ಲೇ ಇತರರು ಹೇಳಿರುವ ಸಾಧನಗಳಿಗೆಲ್ಲಾ ಅಂತರ್ಭಾವವು ಸಂಭವಿಸುವುದು.

ಸಾಧನ ಸಂಪತ್ತುಗಳಲ್ಲಿ ಇತರರು ಮುಮುಕ್ಷಾ ಎಂಬುದಾಗಿ ಮೋಕ್ಷೇಚ್ಛೆಯನ್ನು ಅಧಿಕವಾಗಿ ಹೇಳಿದ್ದಾರೆ.

ಯತೇತೋಪಾಸನಾಯೈವ ಎಂಬ ವಿಧಿವಾಕ್ಯದ ಬಲದಿಂದ ಮುಮುಕ್ಷುತ್ವವೂ ಅಧಿಕಾರಿಗಳಿಗೆ ಅರ್ಥಾತ್ ಉಕ್ತವೇ ಆಗಿದೆ. ಅಧಿಕಾರಿ ವರ್ಗದಲ್ಲಿ ಉತ್ತಮಾಧಿಕಾರಿಗಳಿಗೆ ಮುಮುಕ್ಷುತಾ (ಮೋಕ್ಷದ ಅಪೇಕ್ಷೆಯು) ಇಲ್ಲವಾದ್ದರಿಂದ ಕಂಠರವದಿಂದ ಆಚಾರ್ಯರು ಅದನ್ನು ಹೇಳಿಲ್ಲ.

ಅತಃ ಶಬ್ದದ ಅರ್ಥವಾಗಿ ಐದು ಯುಕ್ತಿಗಳನ್ನು ತಂತ್ರದೀಪಿಕಾಕಾರರು ಸಂಗ್ರಹಿಸಿ ತಿಳಿಸಿದ್ದಾರೆ. ಇದು ಅನುವ್ಯಾಖ್ಯಾನಕಾರರು ಜಿಜ್ಞಾಸಾಧಿಕರಣದಲ್ಲಿ ವಿವರಿಸುವ ಅರ್ಥದ ಸಂಗ್ರಹವೇ ಆಗಿದೆ.

ನ್ಯಾಯಸುಧಾ ಗ್ರಂಥದ ಜಿಜ್ಞಾಸಾಧಿಕರಣದಲ್ಲಿ (ಅತಃ ಶಬ್ದಾರ್ಥದ ವಿವರಣೆಯೇ) ಐದು ಹೇತುಗಳ ವಿಸ್ತಾರವಾದ ವ್ಯಾಖ್ಯಾನವೇ ಹೆಚ್ಚು ಪುಟಗಳಲ್ಲಿ ಉಕ್ತವಾಗಿದೆ. ಈ ಅತಃ ಎಂಬ ಶಬ್ದದ ನಿಷ್ಪತ್ತಿಯನ್ನು ಹಿಂದೆಯೇ ನಿರೂಪಿಸಲಾಗಿದೆ. ಪ್ರಕೃತದಲ್ಲಿ ಈ ಮೊದಲನೆಯ ಸೂತ್ರದಲ್ಲಿರತಕ್ಕ ಅತಃ ಎಂಬ ಶಬ್ದವು ಸರ್ವನಾಮ ಪ್ರಕೃತಿಕವಾದತ ಸಿಲಂತಶಬ್ದವಾಗಿದೆ.

ಈ ಅತಃ ಎಂಬ ಶಬ್ದಕ್ಕೆ ಐದು ಬಗೆಯಾದ ವ್ಯಾಖ್ಯಾನವನ್ನು ಹಿಂದೆಯೇ ತೋರಿಸಿರುತ್ತೇವೆ. ಅತಃ ಎಂಬ ಶಬ್ದದಿಂದ ಪರಾಮರ್ಶಿಸಲ್ಪಟ್ಟ ವೇದಪ್ರಾಮಾಣ್ಯಾದಿ ಸಕಲವೂ ಅತಿ ವಿಸ್ತಾರವಾಗಿ "ಬ್ರಹ್ಮತರ್ಕವೆಂಬ" ಹೆಸರಿನಿಂದ ಸುಪ್ರಸಿದ್ಧವಾದ ತರ್ಕಶಾಸ್ತ್ರದಲ್ಲಿ ಪ್ರತಿಪಾದಿಸಲ್ಪಟ್ಟರೆ ಆ ತರ್ಕವಿದ್ಯಾನೇ ಬೇರೆ, ಮೀಮಾಂಸಾ ಶಾಸ್ತ್ರ ಪ್ರತಿಪಾದ್ಯವಾದ ವಿದ್ಯೆಯೇ ಬೇರೆ. ಪ್ರಮೇಯವ್ಯುತ್ಪಾದನ ಪರವಾದ ಮೀಮಾಂಸಾ ಶಾಸ್ತ್ರಕ್ಕೆ ವೇದಪ್ರಾಮಾಣ್ಯಾದಿಗಳನ್ನು ವಿಸ್ತಾರವಾಗಿ ನಿರೂಪಿಸತಕ್ಕ ಬ್ರಹ್ಮತರ್ಕಶಾಸ್ತ್ರವು ಅಂಗವಾಗಿದೆ. ವ್ಯುತ್ಪಾದ್ಯವೃಥಕ್ತ್ವದಿಂದ ವಿದ್ಯಾವೃಥಕ್ತ್ವವನ್ನು ಹೇಳಲೇಬೇಕು.

ಈ ಮೀಮಾಂಸಾ ಶಾಸ್ತ್ರದಲ್ಲೂ ವೇದ ಪ್ರಾಮಾಣ್ಯಾದಿಗಳನ್ನು ಅತಿ ವಿಸ್ತಾರವಾಗಿ ಸೂತ್ರಕಾರರು ತೋರಿಸಿದ್ದರೆ ಆಗ ವಿದ್ಯಾಭೇದವೇ ಇಲ್ಲದಂತಾಗುವುದು. ಪ್ರಾಧಾನ್ಯಾಭಿಪ್ರಾಯದಿಂದ ವಿದ್ಯಾಭೇದವು ವ್ಯವಸ್ಥಿತವಾಗಿದೆ. ಸರ್ವಥಾ ಬ್ರಹ್ಮತರ್ಕ ಶಾಸ್ತ್ರಕ್ಕೂ ಈ ಬ್ರಹ್ಮಮೀಮಾಂಸಾ ಶಾಸ್ತ್ರಕ್ಕೂ ಪರಸ್ಪರ ಸಂಬಂಧವೇ ಇಲ್ಲವಾದರೆ ಈ ಎರಡು ಶಾಸ್ತ್ರಗಳಿಗೆ ಅಂಗೀಕರಿಸಲ್ಪಟ್ಟಿರುವ ಅಂಗಾಂಗಿ ಭಾವಕ್ಕೇನೇ ಚ್ಯುತಿಯುಂಟಾಗುವುದು. ಪ್ರಕೃತದಲ್ಲಿ ಬ್ರಹ್ಮತರ್ಕ ಶಾಸ್ತ್ರವು ಈ

ಬ್ರಹ್ಮಮೀಮಾಂಸಾ ಶಾಸ್ತ್ರಕ್ಕೆ ಅಂಗ ಬ್ರಹ್ಮಮೀಮಾಂಸಾ ಶಾಸ್ತ್ರವು ಅಂಗಿಶಾಸ್ತ್ರ. ಆದಕಾರಣ ಇದಕ್ಕೆ ಅಂಗವಾದ ಬ್ರಹ್ಮತರ್ಕದಲ್ಲಿ ವಿಸ್ತಾರವಾಗಿ ಪ್ರತಿಪಾದಿತಗಳಾದ ವೇದ ಪ್ರಾಮಾಣ್ಯಾದಿಗಳನ್ನು ಇಲ್ಲಿ ವಿಸ್ತಾರವಾಗಿ ವಿವರಿಸದೇ ಕೇವಲ ಅತಃ ಎಂಬ ಶಬ್ದದಿಂದ ಸೂತ್ರಕಾರರು ಪರಾಮರ್ಶೆ ಮಾಡಿದ್ದಾರೆ. ಸಂಕ್ಷೇಪವಾಗಿ ಸೂಚಿಸಿದ್ದಾರೆ.

ಈ ಅಭಿಪ್ರಾಯವು ಈ ಅನುವ್ಯಾಖ್ಯಾನ ವಾಕ್ಯದಿಂದ ತಿಳಿದು ಬರುತ್ತದೆ.

''ಏತತ್ಸರ್ವಂ ತರ್ಕಶಾಸ್ತ್ರೇ ಬ್ರಹ್ಮತರ್ಕೇಹಿ ವಿಸ್ತರಾತ್।
ಉಕ್ತಂ ವಿದ್ಯಾಪೃಥಕ್ತ್ವಾತ್ತು ಸಂಕ್ಷೇಪೇಣಾತ್ರ ಸೂಚಿತಮ್॥ ಇತಿ॥

ಆ ಬ್ರಹ್ಮ ತರ್ಕಶಾಸ್ತ್ರದಲ್ಲಿ ವಿಸ್ತಾರವಾಗಿ ಉಕ್ತವಾಗಿರುವುದಕ್ಕೆ ಈ ಮೀಮಾಂಸಾ ಶಾಸ್ತ್ರದಲ್ಲಿ ಸಂಕ್ಷೇಪವಾಗಿ ನಿರೂಪಿಸುವುದು ಉಚಿತವೇ ಆಗಿದೆ.

ಬ್ರಹ್ಮತರ್ಕಶಾಸ್ತ್ರದಲ್ಲಿ ಪ್ರತ್ಯಕ್ಷ, ಅನುಮಾನ, ಆಗಮ ಎಂಬ ಪ್ರಮಾಣಗಳ ಸ್ವರೂಪ ನಿರೂಪಣೆ, ಸಂಖ್ಯಾ ಮೊದಲಾದುವುಗಳು ಮತ್ತು ಅರ್ಥಾಪತ್ತ್ಯಾದಿಗಳ ಅಂತರ್ಭಾವ ಮೊದಲಾದವುಗಳ ನಿರ್ಣಯವನ್ನು ಮಾಡಲಾಗಿದೆ. ಆ ತರ್ಕಶಾಸ್ತ್ರದಿಂದ ಪ್ರತಿಪಾದಿಸಲ್ಪಟ್ಟ ಪ್ರಮಾಣಗಳಿಂದ ಈ ಶಾಸ್ತ್ರದಲ್ಲಿ ಪ್ರಮೇಯ ಪರಿಶೋಧನವು ಮಾಡಲ್ಪಟ್ಟಿದೆ. ಪ್ರಮೇಯಕ್ಕೆ ಇತರರು ಹೇಳತಕ್ಕ ಆರೋಪಿತವಾದ ಆಕಾರದ ನಿರಾಕರಣೆಯನ್ನು ಮಾಡುವ ಮೂಲಕವಾಗಿ ನೈಜವಾದ ಪ್ರಮೇಯ ಸ್ವರೂಪ ನಿರೂಪಣೆಯನ್ನು ಮಾಡಲಾಗಿದೆ. ಈ ಸಂಗತಿಯನ್ನು ತಿಳಿಸುವ ಅನುವ್ಯಾಖ್ಯಾನದ ವಾಕ್ಯವು ಈ ರೀತಿ ಇದೆ.

''ಪ್ರಮಾಣ ನ್ಯಾಯಸಂಕ್ಲೃಪ್ತಿಃ ಕ್ರಿಯತೇ ತರ್ಕಶಾಸ್ತ್ರತಃ।
ಮಾನನ್ಯಾಯೈಸ್ತು ತತ್ಸಿದ್ಧೈರ್ಮೀಮಾಂಸಾ ಮೇಯ ಶೋಧನಮ್॥
॥ ಇತ್ಯನುವ್ಯಾಖ್ಯಾನಮ್॥

ಬ್ರಹ್ಮಸೂತ್ರಕಾರರಾದ ಬಾದರಾಯಣರಿಂದಲೇ ನಾರಾಯಣ ರೂಪದಿಂದ ಐವತ್ತು ಕೋಟಿ ವಿಸ್ತಾರವಾದ ಗ್ರಂಥ ಸಂಖ್ಯೆಯುಳ್ಳ ಬ್ರಹ್ಮತರ್ಕ ಶಾಸ್ತ್ರವು ರಚಿಸಲ್ಪಟ್ಟಿದೆ. ಆ ತರ್ಕಶಾಸ್ತ್ರವೇ ಈ ಬ್ರಹ್ಮಮೀಮಾಂಸಾ ಶಾಸ್ತ್ರಕ್ಕೆ ಅಂಗವು. ಕಣಾದ ಅಥವಾ ಗೌತಮರಿಂದ ರಚಿತವಾದ ವೈಶೇಷಿಕ ಶಾಸ್ತ್ರವಾಗಲಿ ನ್ಯಾಯಶಾಸ್ತ್ರವಾಗಲಿ ಇಲ್ಲಿ ಅಂಗವಾಗಿ ಅಂಗೀಕೃತವಾಗಿಲ್ಲ. ಐವತ್ತು ಕೋಟಿಯ ಸಂಖ್ಯೆಯ ಗ್ರಂಥರೂಪವಾದ ಆ ಬ್ರಹ್ಮ ತರ್ಕಶಾಸ್ತ್ರದಿಂದ ಐದು ಸಾವಿರ ಗ್ರಂಥ ಸಂಖ್ಯೆಯನ್ನು ಆರಿಸಿ ಪ್ರತ್ಯೇಕಿಸಿ, ಶ್ರೀ ಬಾದರಾಯಣರು ಐದು ಸಾವಿರ ಸಂಖ್ಯೆಯುಳ್ಳ ಗ್ರಂಥವಾದ ತರ್ಕಶಾಸ್ತ್ರವನ್ನು ರಚಿಸಿರುವರು. ಆ ಬ್ರಹ್ಮ ತರ್ಕಶಾಸ್ತ್ರದ ವಾಕ್ಯಗಳನ್ನೇ ಶ್ರೀಮನ್ಮಧ್ವಾಚಾರ್ಯರು ಸಾಕ್ಷಾತ್ ಬಾದರಾಯಣರಿಂದಲೇ ಕೇಳಿ ತಿಳಿದು ಸರ್ವಮೂಲ ಗ್ರಂಥಗಳಲ್ಲಿ ಉದಾಹರಿಸಿರುವರು.

ಈ ಗಹನವಾದ ವಿಷಯವು ಶ್ರೀಮದಾಚಾರ್ಯರ ಅನುವ್ಯಾಖ್ಯಾನಭಾಷ್ಯ ಗ್ರಂಥದಿಂದಲೇ ತಿಳಿದು ಬಂದಿದೆ.

ಅನುವ್ಯಾಖ್ಯಾನದಲ್ಲಿ "ಬ್ರಹ್ಮತರ್ಕಂ ಚ ಭಗವಾನ್ ಸ ಏವ ಕೃತವಾನ್ ಪ್ರಭುಃ।
ಪಂಚಾಶತ್ಕೋಟಿವಿಸ್ತಾರಾತ್ ನಾರಾಯಣತನೌ ಕೃತಾತ್।
ಉದ್ಧೃತ್ಯ ಪಂಚಸಾಹಸ್ರಂ ಕೃತವಾನ್ ಬಾದರಾಯಣಃ।
ಅತಃ ತದರ್ಥಂ ಸಂಕ್ಷೇಪಾದತ ಇತ್ಯಭ್ಯಸೂಚಯತ್ ।ಇತಿ।

ಮೊದಲನೆಯ ಸೂತ್ರದ ಅರ್ಥವನ್ನು ನಿಗಮನ ಮಾಡಿ ತಿಳಿಸಿರುವ ತಂತ್ರದೀಪಿಕಾ ವಾಕ್ಯದ ಜೊತೆಗೆ ಪ್ರಥಮ ಸೂತ್ರವಾದ ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ ಎಂಬ ಸೂತ್ರದ ವಚನ ವ್ಯಕ್ತಿಯನ್ನು ನಿರ್ಣೀತ ಅರ್ಥ ನಿರ್ವಚನ ಕ್ರಮವನ್ನು ಹಿಂದೆಯೇ ಬರೆಯಲಾಗಿದೆ. ಆದಾಗ್ಯೂ ಜಿಜ್ಞಾಸುಗಳ ಮನನಕ್ಕಾಗಿ ಪುನಃ ಪ್ರಕಟಿಸುತ್ತೇನೆ.

ಈ ಸಂದರ್ಭದಲ್ಲಿ ನ್ಯಾಯಸುಧಾ ವಾಕ್ಯವನ್ನು ಪರಿಮಳ ವ್ಯಾಖ್ಯಾಭಾಗವನ್ನೂ ಉದಾಹರಿಸಿ ತಿಳಿಸುತ್ತೇನೆ.

**ಸುಧಾ** :- ಬ್ರಹ್ಮಣಃ ಜಿಜ್ಞಾಸಾ ಬ್ರಹ್ಮಜಿಜ್ಞಾಸಾ ಎಂದು ಕರ್ಮಣಿ ಷಷ್ಠೀ ಸಮಾಸವನ್ನು ಮಾಡಿದಾಗ ಬ್ರಹ್ಮನಿಗೆ ಜಿಜ್ಞಾಸಾ ಕರ್ಮತ್ವವು ಉಕ್ತವಾಗಿರುವುದರಿಂದ ಅಪ್ರಾಧಾನ್ಯವನ್ನು ಹೇಳಿದಂತಾಗುತ್ತದೆ. ಆ ಶಂಕೆಯನ್ನು ಪರಿಹರಿಸುವ ಸಲುವಾಗಿ ಅನುವ್ಯಾಖ್ಯಾನದಲ್ಲಿ

''ಸ ಏವ ಸರ್ವವೇದಾರ್ಥೋ ಜಿಜ್ಞಾಸ್ಯೋಽಯಂ ವಿಧೀಯತೇ ।

ಎಂದು ಜಿಜ್ಞಾಸ್ಯ ಎಂಬ ಪದವನ್ನು ಪ್ರಯೋಗಿಸಿದ್ದಾರೆ. ಈ ಜಿಜ್ಞಾಸ್ಯ ಎಂಬ ಪದವು ಸನ್ ಪ್ರತ್ಯಯಾಂತವಾದ ಜಿಜ್ಞಾಸಾ ಎಂಬ ಶಬ್ದದ ಮುಂದೆ ಅಚೋ ಯತ್ ಎಂಬ ಸೂತ್ರದಿಂದ ಯತ್ ಎಂಬ ಪ್ರತ್ಯಯವು ಬಂದು ಅತೋಲೋಪಃ ಎಂಬ ಸೂತ್ರದಿಂದ ಅಕಾರಕ್ಕೆ ಲೋಪವು ಬಂದು ಜಿಜ್ಞಾಸ್ಯ ಎಂದಾಗಿದೆ. ಈ ಯತ್ ಪ್ರತ್ಯಯವು ಕೃತ್ ಸಂಜ್ಞಕವಾಗಿದೆ. ಕೃತ್ ಸಂಜ್ಞಕ ಪ್ರತ್ಯಯಗಳು ''ತಯೋರೇವ ಕೃತ್ಯಕ್ತಖಲಾರ್ಥಾಃ'' ಎಂಬ ಸೂತ್ರದಿಂದ ಭಾವಾರ್ಥದಲ್ಲೂ ಕರ್ಮಾರ್ಥದಲ್ಲೂ ವಿಧಿಸಲ್ಪಟ್ಟಿದೆ. ಅಂದಮೇಲೆ ಜಿಜ್ಞಾಸ್ಯ ಎಂದರೆ ಜಿಜ್ಞಾಸಾ ಕರ್ಮ ಎಂದೇ ಅರ್ಥವಾಗುತ್ತದೆ.

ಕರ್ಮಪ್ರಾಧಾನ್ಯ ಜ್ಞಾಪಕವಾಗಿ ಜಿಜ್ಞಾಸ್ಯ ಎಂದು ಭಾಷ್ಯಕಾರರು ಪ್ರಯೋಗಿಸಿದ್ದಾರೆ ಎಂದು ಅಭಿಪ್ರಾಯ.

ಏವಂ ಚ ಜಿಜ್ಞಾಸಾ ಸೂತ್ರಕ್ಕೆ ಬ್ರಹ್ಮನಿಗೆ ಕರ್ಮತ್ವ ಮಾತ್ರದಲ್ಲೇ ತಾತ್ಪರ್ಯವು.ಆದರ ಉಪಸರ್ಜನತ್ವದಲ್ಲಿ ತಾತ್ಪರ್ಯವಿಲ್ಲನೆಂದು ಅಭಿಪ್ರಾಯವಾಗಿದೆ.

ಈ ಸೂತ್ರದಲ್ಲಿ ಕರ್ತವ್ಯಾ ಎಂಬ ಪದವನ್ನು ಅಧ್ಯಾಹಾರ ಮಾಡಿರುವುದರಿಂದ ಕರ್ತವ್ಯಪದದಿಂದ ತಿಳಿಯಲ್ಪಟ್ಟ ನಿಯೋಗಕ್ಕೆ (ವಿಧ್ಯರ್ಥಕ್ಕೆ) ಪ್ರಾಧಾನ್ಯವೂ ಆನಿಯೋಗದಲ್ಲಿ ಜಿಜ್ಞಾಸಾಕ್ಕೆ ಉಪಸರ್ಜನತ್ವವೂ ವಿಶೇಷಣವಾಗಿರತಕ್ಕ ಬ್ರಹ್ಮನಿಗೆ ನಿಯೋಗ (ವಿಧಿ) ವಿಶೇಷಣ ವಿಶೇಷಣತ್ವರೂ ಬರುವುದರಿಂದ ''ಜಿಜ್ಞಾಸಾ ಅಸ್ಯವಿಧೀಯತೇ'' ಎಂದು ಹೇಳಬೇಕಾಗಿರುವಾಗ, ಭಾಷ್ಯಕಾರರು ಜಿಜ್ಞಾಸ್ಯ ಎಂದು ಜಿಜ್ಞಾಸಾಕ್ಕೆ ವಿಶೇಷವಾಗಿ ನಿರ್ದೇಶ ಮಾಡಿರುವುದರಿಂದ ಕರ್ಮವಾದ ಬ್ರಹ್ಮನಿಗೆ ಪ್ರಾಧಾನ್ಯವು ಸೂಚಿತವಾದಂತಾಯಿತು.

ಅಂದರೆ ಜಿಜ್ಞಾಸ್ಯೋಽಯಂ ವಿಧೀಯತೇ ಎಂದು ಪ್ರಾಧಾನ್ಯೇನ ಕರ್ಮಕಾರಕವಾಗಿರುವ ಬ್ರಹ್ಮನು ನಿರ್ದಿಷ್ಟನಾಗಿರುತ್ತಾನೆಂದು ಅಭಿಪ್ರಾಯ. ಆದಕಾರಣ ಬ್ರಹ್ಮಜ್ಞಾನಂ ಸಂಪಾದ್ಯಂ, ಎಂದಾಗಲಿ, ಬ್ರಹ್ಮಜಿಜ್ಞಾಸಾಕರ್ತವ್ಯಾ ಎಂಬುದಾಗಿ ಆಗಲಿ ಸೂತ್ರವಚನ ವ್ಯಕ್ತಿಯಲ್ಲ ಎಂದು ತಿಳಿದು ಬರುತ್ತದೆ.

ಮತ್ತೇನೆಂದರೆ ''ಬ್ರಹ್ಮಜ್ಞಾನಾಯ ಸಕಲ ವೇದಾರ್ಥ ವಿಷಯಕ ಜಿಜ್ಞಾಸಾ ಕರ್ತವ್ಯಾ'' ಎಂಬುದಾಗಿಯೇ ''ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ'' ಎಂಬ ಪ್ರಥಮ ಸೂತ್ರದ ವಚನವ್ಯಕ್ತಿಯನ್ನು ಇಟ್ಟುಕೊಳ್ಳಬೇಕು.

ನ್ಯಾಯಾಮೃತದಲ್ಲಿ ಮೂರನೇ ಪರಿಚ್ಛೇದದಲ್ಲಿ ಶ್ರೀವ್ಯಾಸರಾಜರು ಈ ವಿಚಾರವಾಗಿ ಆಡಿರತಕ್ಕ ವಾಕ್ಯಗಳು ಈ ರೀತಿ ಇವೆ.

> "ಬ್ರಹ್ಮಜ್ಞಾನಾಯ ಬ್ರಹ್ಮವಿಚಾರಃ ಕರ್ತವ್ಯಃ" ಇತಿ ನ ವಚನವ್ಯಕ್ತಿಃ ತಥಾತ್ವೇ ಬ್ರಹ್ಮಣಃ
> ವಿಧೇಯ ವಿಶೇಷಣಾ ತಯಾ ಗುಣತ್ವಾಪಾತಾತ್।

ಕಿಂತು "ಬ್ರಹ್ಮಜ್ಞಾನಾಯ ವೇದವಿಚಾರಃ ಕರ್ತವ್ಯಃ", ಇತ್ಯೇವ ವಚನವ್ಯಕ್ತಿಃ ಇತ್ಯಾದಿ ತಥಾ ಚ ಉದ್ದೇಶ್ಯಜ್ಞಾನ ವಿಶೇಷಣತ್ವೇನ ಬ್ರಹ್ಮಣೋಽಪಿ,ಉದ್ದೇಶ್ಯಕೋಟಿ ಪ್ರವೇಶಾತ್ ಪ್ರಾಧಾನ್ಯ ಲಾಭಃ, ಇತಿಭಾವಃ ಇದಿಷ್ಟು ಸುಧಾಪರಿಮಳದಲ್ಲಿ ಉಕ್ತವಾಗಿರುವ ಅಂಶವಾಗಿದೆ.

ಆದಕಾರಣ ತಂತ್ರದೀಪಿಕಾದಲ್ಲಿನ ಸೂತ್ರಾರ್ಥ ನಿಗಮನ ಪರವಾದ ವಾಕ್ಯಕ್ಕೂ ಸಹ ಪರಿಮಳದಲ್ಲಿ ಉಕ್ತವಾಗಿರುವಂತೆ ನ್ಯಾಯಾಮೃತ ತೃತೀಯ ಪರಿಚ್ಛೇದದಲ್ಲಿ ಶ್ರೀವ್ಯಾಸರಾಜರು ಹೇಳಿರುವಂತೆ ಸೂತ್ರವಚನ ವ್ಯಕ್ತಿಯನ್ನೇ ಇಟ್ಟುಕೊಳ್ಳಬೇಕು.

ಅಥ ಶಬ್ದಾರ್ಥವನ್ನೂ ಅತಃ ಶಬ್ದರ ಅರ್ಥವನ್ನು ಹೇಳಿದ ನಂತರ "ಬ್ರಹ್ಮಜ್ಞಾನಾಯ ಸಕಲ ವೇದಾರ್ಥ ವಿಷಯಕ ಜಿಜ್ಞಾಸಾ ಕರ್ತವ್ಯಾ" ಎಂಬುದಾಗಿಯೇ ಸೂತ್ರವಚನ ವ್ಯಕ್ತಿಯನ್ನು ಹೇಳಬೇಕೆಂದು ಪರಮಾಭಿಪ್ರಾಯ.

ಇದೇ ಅಭಿಪ್ರಾಯದಿಂದಲೇ ಕೆಲವು ವ್ಯಾಖ್ಯಾಕಾರರು "ಬ್ರಹ್ಮಜ್ಞಾನಾಯ ವೇದವಾಕ್ಯಾನಿ ವಿಚಾರಯೇತ್" ಎಂದು ಹೇಳಿರುತ್ತಾರೆ.

ಇದರ ವಿಚಾರವಾಗಿ ವಿಷಯಗಳ ವಿವರವನ್ನು ಹಿಂದೆಯೇ ಬರೆಯಲಾಗಿದೆ.

(೯) ತಂತ್ರದೀಪಿಕಾ :- ಬ್ರಹ್ಮಜ್ಞಾನಾಯ ಸರ್ವವೇದವಿಷಯಕ
ಶ್ರವಣಮನನಿಧಿಧ್ಯಾಸನರೂಪಾ,
ಮನನಮಾತ್ರರೂಪಾ ವಾಽಪಿ ಜಿಜ್ಞಾಸ್ಯೇತ್ಯಾದಿ
ಶ್ರುತ್ಯುಕ್ತಾ, ಜಿಜ್ಞಾಸಾ ಕರ್ತವ್ಯೇತ್ಯರ್ಥಃ ॥ ಇತಿ ॥

ಈ ತಂತ್ರದೀಪಿಕಾ ವಾಕ್ಯವೂ ಸಹ ಸೂತ್ರಭಾಷ್ಯವ್ಯಾಖ್ಯಾನವಾದ ತತ್ವಪ್ರಕಾಶಿಕಾದಲ್ಲಿ ದರ್ಶಿತವಾದ ಕ್ರಮವನ್ನೂ, ನ್ಯಾಯಸುಧಾದಲ್ಲಿ ಹೇಳಿರುವ ಮನನ ಮಾತ್ರರೂಪವಾದ ಅರ್ಥವನ್ನೂ ಒಳಗೊಂಡಂತೆ ಸಂಗ್ರಹವಾಗಿ ತಿಳಿಸುತ್ತಲಿದೆ.

ತತ್ವಪ್ರಕಾಶಿಕಾವಾಕ್ಯವು ಹೀಗಿದೆ :- ಭಾಷ್ಯದಲ್ಲಿ ಅತೋಬ್ರಹ್ಮಜಿಜ್ಞಾಸಾ ಕರ್ತವ್ಯಾ" ॥ ಇತಿ ॥

ಇದರ ವ್ಯಾಖ್ಯಾನವಾದ ತತ್ವಪ್ರಕಾಶಿಕಾ ವಾಕ್ಯವು ಯಾವುದೆಂದರೆ :-

''ದರ್ಶನಾರ್ಥಂ ಶ್ರವಣಾದಿರೂಪಾ ಜಿಜ್ಞಾಸಾ ಕಾರ್ಯೇತ್ಯರ್ಥಃ ॥

(ತತ್ತ್ವಪ್ರಕಾಶಿಕಾ)

ಜ್ಞಾನಸ್ಯ ಶ್ರವಣಾದ್ಯನ್ವಯವ್ಯತಿರೇಕಿತ್ವಾತ್ ತದೇವ ಪ್ರಧಾನಸಾಧನಂ ಕರ್ಮಾದೇಸ್ತಥಾ
ಭಾವಾತ್ ಪಾರಂಪರ್ಯೇಣ ಸಾಧನತ್ವಮ್ ॥ ಇತಿ ॥

ಭಾವದೀಪದಲ್ಲಿ :–ಜ್ಞಾನವೇ(೩-೪-೫೦) ಓಂ ಐಹಿಕಂ ಅಪ್ರಸ್ತುತಪ್ರತಿಬಂಧೇ ತದ್ದರ್ಶನಾತ್ ಓಂ ಇತ್ಯತ್ರ ''ದರ್ಶನಾರ್ಥಂ ಶ್ರವಣಾದಿ ವಿಧೀಯತೇ''ಇತಿಭಾಷ್ಯಂ ಹೃದಿಕೃತ್ವಾಹ ॥ದರ್ಶನಾರ್ಥಮಿತಿ ॥

ಏತೇನ ಬ್ರಹ್ಮಜಿಜ್ಞಾಸೇತ್ಯತ್ರ ಬ್ರಹ್ಮಜ್ಞಾನಾಯ ವೇದಾರ್ಥವಿಷಯಶ್ರವಣ, ಮನನ,
ನಿಧ್ಯಾಸನರೂಪಾ ಜಿಜ್ಞಾಸಾ ಕಾರ್ಯೇತಿವಚನವ್ಯಕ್ತಿಃ ಸೂಚಿತಾ।

ಉಕ್ತಂ ಚ ಜಿಜ್ಞಾಸೋಽಯಂ ವಿಧಿಯತೆ, ಇತ್ಯತ್ರಸುಧಾಯಾಂ
''ಜ್ಞಾನವಿಧೌ ಹಿ ಬ್ರಹ್ಮಣೋಽಪ್ರಾಧಾನ್ಯಂಸ್ಯಾತ್।
ಬ್ರಹ್ಮಜ್ಞಾನೋದ್ದೇಶೇನ ಜಿಜ್ಞಾಸಾವಿಧಾನಾತ್ಕುತೋಽಪ್ರಾಧಾನ್ಯಮಿತಿ'' ॥

ಮುಂದಿನ ವಾಕ್ಯವು ನ್ಯಾಯಾಮೃತಕ್ಕೆ ಸಂಬಂಧಪಟ್ಟದ್ದನ್ನು ಪರಿಮಳ ವ್ಯಾಖ್ಯಾನದಲ್ಲೇ ಉದಾಹರಿಸಲಾಗಿದೆ.

''ಯದ್ಯಪಿ ಬ್ರಹ್ಮಪರವೇದವಿಚಾರ ಏವ ಬ್ರಹ್ಮವಿಚಾರಃ ತಥಾಪಿ ನ ಬ್ರಹ್ಮವಿಚಾರರೂಪೇಣ
ವಿಧಾನಂ।
ಕಿಂತು ವೇದವಿಚಾರರೂಪೇಣ ॥ ತಥಾ ಚ ಶ್ರುತಿಃ ॥
ತಸ್ಮಾದೇನಂ ಸರ್ವವೇದಾನಧೀತ್ಯ ವಿಚಾರ್ಯ ಚ ಜ್ಞಾತುಮಿಚ್ಛೇದಿತೀತ್ಯಾದಿ
ವ್ಯಕ್ತಂ ಸರ್ವವೇದಾಂತ ನಯ ಭಾಷ್ಯಾದೌ।
ಶ್ರವಣಂನಾಮ = ಉಪನಿಷದ್ವ್ಯಾಖ್ಯಾದಿರೂಪೋಪದೇಶಜನ್ಯ ವಾಕ್ಯಾರ್ಥಜ್ಞಾನಂ।
ಮನನಂ = ಶ್ರುತವಾಕ್ಯಾರ್ಥೇ ಯುಕ್ತ್ಯನುಸಂಧಾನಮ್।
ನಿದಿಧ್ಯಾಸನಂತು = ನಿರಂತರತದ್ವಿಷಯ ಚಿಂತನಮ್।
ಶ್ರವಣಂ ಶಬ್ದಜಂ ಜ್ಞಾನಂ ಉಪಪತ್ಯನುಚಿಂತನಮ್।
ಮತಿಃ, ನಿರಂತರಾಚಿಂತಾ ನಿದಿಧ್ಯಾಸನಮುಚ್ಯತೆ ಇತ್ಯುಕ್ತೇಃ ॥

**ಅಭಿಪ್ರಾಯ** :- ಭಾವದೀಪಕಾರರು,ಬ್ರಹ್ಮಸೂತ್ರದಲ್ಲಿ ಮೂರನೇ ಅಧ್ಯಾಯದ ನಾಲ್ಕನೇ ಪಾದವಾದ ಜ್ಞಾನ ಪದದ ಐವತ್ತನೇ ಸೂತ್ರದ ವ್ಯಾಖ್ಯಾನವಾದ ಭಾಷ್ಯದಲ್ಲಿ ''ಆತ್ಮಾವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ, ಮಂತ್ರವ್ಯೋ, ನಿಧ್ಯಾಸಿತವ್ಯಃ (ಬೃ.೪-೪-೫) ಇತಿ ದರ್ಶನಾರ್ಥಂ ಶ್ರವಣಾದಿವಿಧೀಯತೇ'' ಎಂಬ ಭಾಷ್ಯವಾಕ್ಯವನ್ನು ಉದಾಹರಿಸಿ ಈ ಭಾಷ್ಯಯವಾಕ್ಯದ ಅಭಿಪ್ರಾಯದಂತೆ ಟೀಕಾಕಾರರೂ ಸಹ ''ದರ್ಶನಾರ್ಥಂ ಶ್ರವಣಾದಿರೂಪಾಜಿಜ್ಞಾಸಾ ಕಾರ್ಯೇತ್ಯರ್ಥಃ।'' ಎಂದು ಹೇಳಿರುವುದನ್ನು ತೋರಿಸಿ ಜಿಜ್ಞಾಸಾ ಎಂದರೆ ಶ್ರವಣ, ಮನನ, ಧ್ಯಾನ ಎಂಬುದಾಗಿ ಮೂರನ್ನುತೆಗೆದುಕೊಳ್ಳಬೇಕೆಂಬುದಾಗಿ ತತ್ತ್ವಪ್ರಕಾಶಿಕಾ ತಾತ್ಪರ್ಯವನ್ನು ವ್ಯಕ್ತಪಡಿಸಿದ್ದಾರೆ. ಇದು ಸೂತ್ರಭಾಷ್ಯದ

ಅಭಿಪ್ರಾಯ ಪ್ರಕಾಶನಪರವಾದ ಭಾಗವಾಗಿದೆ. ಮನನಮಾತ್ರರೂಪಾಯಾ ತದ್ವಿಜಿಜ್ಞಾಸ ಸ್ಯೇತ್ಯಾದಿ ಶ್ರುತ್ಯುಕ್ತಾ ಜಿಜ್ಞಾಸಾಕರ್ತವ್ಯೇತ್ಯರ್ಥಃ। ಎಂಬುದಾಗಿ ಮತ್ತೊಂದು ಕಲ್ಪವನ್ನು ತಂತ್ರದೀಪಿಕಾಕಾರರು ಹೇಳಿರುವುದು ಶ್ರೀಮನ್ನ್ಯಾಯಸುಧಾದಲ್ಲಿ ದರ್ಶಿತವಾದ ಕ್ರಮವನ್ನು ಅನುಸರಿಸಿ ಸಂಗ್ರಹಿಸುತ್ತಾರೆ. ಜಿಜ್ಞಾಸಾಧಿಕರಣದಲ್ಲಿ ಜಿಜ್ಞಾಸಾ ಶಬ್ದಕ್ಕೆ ನ್ಯಾಯಸುಧಾ ಗ್ರಂಥದಲ್ಲಿ.

''ನ್ಯಾಯಂ ಯುಕ್ತ್ಯನುಸಂಧಾನಾತ್ಮಕ ವಿಚಾರ, ಮಿಮಾಂಸ, ಮನನಾ, ಪರನಾಮಕ ಜಿಜ್ಞಾಸಾಂಗ ಭೂತನ್ಯಾಯ ನಿಬಂಧನಂ ಜಿಜ್ಞಾಸಾಯಾಃ ಕರ್ತವ್ಯತಾಯಾಂ ಆರಂಭಣೀಯಂ ಭವಿಷ್ಯತಿ'' ಇತ್ಯಾದಿ ವಾಕ್ಯವು ಕಂಡುಬಂದಿದೆ.

ಈ ಸುಧಾವಾಕ್ಯದಲ್ಲಿ ಕಂಡುಬಂದಿರುವ, ಯುಕ್ತ್ಯನುಸಂಧಾನಾತ್ಮಕ ವಿಚಾರ, ಮೀಮಾಸಾ,ಮನನ, ಏತದಪರ ನಾಮಕ ಜಿಜ್ಞಾಸಾ ಎಂಬ ಭಾಗದಿಂದ ಜಿಜ್ಞಾಸಾ ಸ್ವರೂಪವನ್ನೂ, ತದಂಗಭೂತನ್ಯಾಯನಿಬಂಧನಂ ಎಂಬುದರಿಂದ ಶಾಸ್ತ್ರ ಸ್ವರೂಪವನ್ನೂ ಹೇಳಿರುವುದು ಜಿಜ್ಞಾಸಾ ಕರ್ತವ್ಯಕ್ಕೆ ಶಾಸ್ತ್ರಾರಂಭಣೀಯತ್ವಾದಿಸಾಧಕತ್ವವನ್ನು ಉಪಪಾದಿಸುವುದಕ್ಕಾಗಿಯೇ ಎಂದು ವಾಕ್ಯಾರ್ಥ ಚಂದ್ರಿಕಾಕಾರರು ಸ್ಪಷ್ಟಪಡಿಸಿರುತ್ತಾರೆ. ಮತ್ತು ಮನನಾಪರನಾಮಕ ಎಂದು ಸುಧಾದಲ್ಲಿ ಹೇಳಿರುವುದು ಜಿಜ್ಞಾಸಾಸೂತ್ರವು ಮನನ ವಿಧಿಮೂಲವೇ ಹೊರತು ಶ್ರವಣವಿಧಿ ಮೂಲವಲ್ಲ ಎಂಬುದನ್ನು ತೋರಿಸಲಿಕ್ಕಾಗಿ ಎಂದು ಅಭಿಪ್ರಾಯಪಟ್ಟಿರುತ್ತಾರೆ. ಮಿಮಾಂಸಾ, ಅಪರನಾಮಕ ಎಂಬುದಾಗಿ ಹೇಳಿರುವುದರಿಂದ ಶಾಸ್ತ್ರಸಮ್ಮತವಾದ ಮಾನ್ ಧಾತುವಿನಿಂದ ನಿಷ್ಪನ್ನವಾದ ಮೀಮಾಂಸ ಶಬ್ದವು ವಿಚಾರ ಎಂಬ ಅರ್ಥದಲ್ಲಿ ರೂಢವಾದವೆಂಬುದು ಸರ್ವಸಿದ್ಧವಾಗಿರುವುದರಿಂದ ಜಿಜ್ಞಾಸಾ ಶಬ್ದವು ಸಹ ವಿಚಾರ ಎಂಬ ಅರ್ಥದಲ್ಲಿ ರೂಢವಾದದ್ದೇ ಆಗಿದೆ.ಎಂಬಂಶವು ಸೂಚಿತವಾದಂತಾಗಿದೆ. ಆದ್ದರಿಂದಲೇ ಸಿದ್ಧಾಂತದಲ್ಲಿ ಜಿಜ್ಞಾಸಾ ಪದಕ್ಕೆ ವಿಚಾರ ಎಂಬರ್ಥದಲ್ಲಿ ರೂಢತ್ವವನ್ನು ''ಜಾಜ್ಞಾಸಿತಂ ಸುಸಂಪನ್ನಂ'' ಇತ್ಯಾದಿ ಭಾಗವತ ವಾಕ್ಯದ ಸಂವಾದವನ್ನು ತೋರಿಸಿ ಸಾಧಿಸಲಾಗಿದೆ.

ಈ ಮೇಲಿನ ಅಭಿಪ್ರಾಯವನ್ನು ತೋರಿಸುವ ಈ ಸಂದರ್ಭದಲ್ಲಿನ ವಾಕ್ಯಾರ್ಥಚಂದ್ರಿಕಾ ವ್ಯಾಖ್ಯಾನದ ವಾಕ್ಯಗಳು ಈ ರೀತಿ ಇವೆ.

> ಅತ್ರಶಾಸ್ತ್ರ ಜಾಜ್ಞಾಸಯೋಃ। ಸ್ವರೂಪಕಥನಂ ಜಾಜ್ಞಾಸಾಕರ್ತವ್ಯತ್ವಾದೇಃ। ಆರಂಭಣಿಯತ್ವಾದಿ
> ಸಾಧಕತ್ವಮುಪಪಾದಯಿತು ಮಿತಿ ದ್ರಷ್ಟವ್ಯಮ್।
> ಅತ್ರಮನನಾಪರನಾಮಕೇತ್ಯುಕ್ತ್ಯಾ ಚ ವಿಚಾರಾರ್ಥಕಮಾನ್ ಧಾತೋಃ ಮಾನ್ ಬಧೇತಿ
> ಸ್ವಾರ್ಥಸನ್ನಂತಾನ್ನಿಷ್ಪನ್ನಸ್ಯ ಮೀಮಾಂಸ ಶಬ್ದಸ್ಯ ವಿಚಾರರೂಢೇಃ। ಸರ್ವಸಿದ್ಧತ್ವಾತ್
> ಜಿಜ್ಞಾಸಾಶಬ್ದಸ್ಯಾಪಿ ವಿಚಾರರೂಢಿಂ, ಯುಕ್ತ್ಯನುಸಂಧಾನಾತ್ಮಕೇತಿ ವಿಚಾರಶಬ್ದ ವ್ಯಾಖ್ಯಾನ
> ಪೂರ್ವಕಂ, ವಿಚಾರಶಬ್ದ ಪರ್ಯಾಯತ್ವೋಕ್ತ್ಯಾ ಚ, ತರ್ಹಿಮಾನ್ ಧಾತೋಃ ವಿಚಾರಾರ್ಥತ್ವೇऽಪಿ
> ವಿಚಾರಸ್ಯ ಶ್ರವಣ ರೂಪತ್ವಾತ್ ಮಿಮಾಂಸಾಪರ ನಾಮಕತ್ವಂ ಮನನಾಪರ ನಾಮಕತ್ವಂ
> ಚ ವಿರುದ್ಧಮಿತಿ ಶಂಕಾ ಪರಿಹಾರಂ ಚ ಸೂಚಯತಿ ॥ ವಿಚಾರಣೇಯೇತಿ ॥

ಈ ಸಂದರ್ಭದಲ್ಲಿನ ಪರಿಮಳ ವ್ಯಾಖ್ಯಾ ವಾಕ್ಯಗಳ ಅಭಿಪ್ರಾಯವು ಈ ಕೆಳಗೆ ಕಂಡಂತಿದೆ.

> ''ಶಬ್ದಾನಾಂ ಪಿನ್ನಾರ್ಥತ್ವಭ್ರಮ ನಿರಾಸಾಯೋಕ್ತಂ ಯುಕ್ತ್ಯನುಸಂಧಾನಾತ್ಮಕೇತ್ಯಾದಿ।
> ಶ್ರವಣಾದ್ಯಾತ್ಮಕತ್ವ: ಶಾಸ್ತ್ರಾರಂಭೇಣ ಹೇತುಹೇತುಮದ್ಭಾವಾಯೋಗಾದುಕ್ತಂ ಯುಕ್ತ್ಯನು
> ಸಂಧಾನೇತಿ।

**ಅಭಿಪ್ರಾಯ** :- ವಿಚಾರ, ಮೀಮಾಂಸಾ, ಮನನ, ಜಿಜ್ಞಾಸಾ ಶಬ್ದಗಳೆಲ್ಲಾ ಭಿನ್ನಭಿನ್ನಾರ್ಥಗಳೆಂಬ ಭ್ರಾಂತಿ ಪರಿಹಾರಕ್ಕಾಗಿ ''ನ್ಯಾಯಂ ಯುಕ್ತ್ಯನುಸಂಧನಾತ್ಮಕ ವಿಚಾರ, ಮೀಮಾಂಸಾ, ಮನನಾಪರನಾಮಕ ಜಿಜ್ಞಾಸಾಂಗ ಭೂತನ್ಯಾಯ ನಿಬಂಧನಂ''ಎಂಬ ವಾಕ್ಯವು ಪ್ರವೃತ್ತವಾಗಿದೆ ಎಂದು ಅಭಿಪ್ರಾಯ.

ಯುಕ್ತ್ಯನುಸಂಧಾನಾತ್ಮಕ ವಿಚಾರದ ಕರ್ತವ್ಯತ್ವವು ನ್ಯಾಯನಿಬಂಧನಾತ್ಮಕ ಶಾಸ್ತ್ರದ ಆರಂಭಣೀಯತ್ವಕ್ಕೆ ಉಪಯೋಗಿಯೇ ಹೊರತು ಕೇವಲಶ್ರವಣರೂಪವಾದ ಜಿಜ್ಞಾಸೆಯು ಅಲ್ಲವೆಂದು ಅಭಿಪ್ರಾಯ.

ಅಂದರೆ ಇಲ್ಲಿ ಜಿಜ್ಞಾಸಾಶಬ್ದಕ್ಕೆ ಮನನ ಮಾತ್ರ ಪರತ್ವವನ್ನು ಇಟ್ಟುಕೊಂಡಿರುತ್ತಾರೆಯೇ ಹೊರತು ಶ್ರವಣನಿದಿಧ್ಯಾಸನಗಳಲ್ಲವೆಂಬುದು ಪರಮಾಭಿಪ್ರಾಯವಾಗಿದೆ.

ಸತ್ಯಪ್ರತೀಯ ವ್ಯಾಖ್ಯಾನವೂ ಸಹ ಇದೇ ಅರ್ಥವನ್ನು ಸಮರ್ಥಿಸುತ್ತಲಿದೆ. ಕೆಲವರು ಜಿಜ್ಞಾಸಾ ಶಬ್ದಕ್ಕೆ ರೂಢಿ ಯಿಂದಲಾಗಲಿ, ಲಕ್ಷಣಾವೃತ್ತಿಯಿಂದಲಾಗಲಿ, ಶ್ರವಣಾರ್ಥತ್ವವನ್ನು ಹೇಳುತ್ತಾರೆ. ಅದರ ನಿರಾಕರಣಾಗಾಗಿಯೇ ಯುಕ್ತ್ಯನು ಸಂಧಾನೇತ್ಯಾದಿನಾ ನ್ಯಾಯಸುಧಾದಲ್ಲಿ ಜಿಜ್ಞಾಸಾ ಶಬ್ದಾರ್ಥವು ತೋರಿಸಲ್ಪಟ್ಟಿದೆ. ಶ್ರವಣವು ಉಪದೇಶ ಮಾತ್ರದಿಂದಲೇ ಸಿದ್ಧಿಸುತ್ತದೆ, ನಿದಿಧ್ಯಾಸನವಾದರೋ (ಧ್ಯಾನವಾದರೋ) ಮನನವಾದಮೇಲೆ ಸ್ವತ ಏವ ಸಿದ್ಧಿಸುದರಿಂದ ಮನನವು ನ್ಯಾಯನಿಬಂಧನೆಯನ್ನು ಅಪೇಕ್ಷಿಸುವುದರಿಂದ ಮನನವು ಮಾತ್ರವೇ ಜಿಜ್ಞಾಸಾ ಶಬ್ದಾರ್ಥವು. ಇದು ಸತ್ಯಪ್ರತೀಯ ವ್ಯಾಖ್ಯಾನದ ಅಭಿಪ್ರಾಯ.

ಯುಕ್ತ್ಯನುಸಂಧಾನವೆಂದರೆ ಯುಕ್ತಿಗಳಿಂದ ಪೂರ್ವೋತ್ತ ಪಕ್ಷಗಳ ಬಲಾಬಲ ಚಿಂತನವು.ಪೂರ್ವೋತ್ತರ ಪಕ್ಷಬಲಾಬಲ ಚಿಂತಾ ವಿಚಾರ ಎಂಬುದಾಗಿ ಪ್ರಾಜ್ಞರು ಹೇಳುವರು.

ಒಟ್ಟಿನಲ್ಲಿ ನ್ಯಾಯಸುಧಾ ವಾಕ್ಯದ ಅಭಿಪ್ರಾಯದಂತೆ ಜಿಜ್ಞಾಸಾಶಬ್ದವು ಮನನರೂಪ ವಿಚಾರದಲ್ಲಿ ರೂಢವೆಂದು, ಕೇವಲ ಮನನ ಮಾತ್ರವೇ ಇಲ್ಲಿ ಜಿಜ್ಞಾಸಾಶಬ್ದದಿಂದ ವಿವಕ್ಷಿತವಾಗಿದೆಯೆಂದು ನಿರ್ಗಳಿತಾಭಿಪ್ರಾಯ.

ಹೀಗೆ ಹೇಳಿದಪಕ್ಷದಲ್ಲಿ ಸೂತ್ರಭಾಷ್ಯ ಟೀಕಾದಲ್ಲಿ ಹಿಂದೆಯೇ ತಿಳಿಸಿದಂತೆ ಶ್ರವಣಾದಿರೂಪವಾದುದು ಜಿಜ್ಞಾಸಾ ಎಂದು ಹೇಳುವುದರಿಂದ ಅದಕ್ಕೂನ್ಯಾಯಸುಧೆಗೂ ಪರಸ್ಪರ ವಿರೋಧವಿದ್ದಂತೆ ತೋರುತ್ತದೆ ಎಂಬ ಶಂಕೆಗೆತಾತ್ಪರ್ಯ ಚಂದ್ರಿಕಾಕಾರರು ಭಾಷ್ಯ ಟೀಕೆಗಳ ಅಭಿಪ್ರಾಯವನ್ನು ಸ್ಪಷ್ಟಪಡಿಸಿ ಆಪಾತತಃ ತೋರತಕ್ಕ ವಿರೋಧವನ್ನು ಪರಿಹರಿಸಿದ್ದಾರೆ. ಇದನ್ನು ಹಿಂದೆಯೇ ಹೇಳಲಾಗಿದೆ.

ಪರಿಮಳ ವ್ಯಾಖ್ಯಾಕಾರರು ಈ ಅಂಶವನ್ನು ಪ್ರಸ್ತಾಪಿಸಿದ್ದಾರೆ.

''ಭಾಷ್ಯಟೀಕಾಯಾಂ ಶ್ರವಣಾದಿರೂಪತ್ವೋಕ್ತೇಃ ಭಾವಃ ಚಂದ್ರಿಕಾಯಾಂ ವ್ಯಕ್ತಃ ॥

ಇತಿ ಪರಿಮಳ ವ್ಯಾಖ್ಯಾ ॥

ತಾತ್ಪರ್ಯಚಂದ್ರಿಕಾ ವಾಕ್ಯವು ಈ ಕೆಳಗೆ ಕಂಡಂತಿದೆ.

ತಾತ್ಪರ್ಯ ಚಂದ್ರಿಕಾಕಾರರಾದ ಶ್ರೀ ವ್ಯಾಸರಾಜರು ತತ್ವಪ್ರಕಾಶಿಕೆಗೂ ನ್ಯಾಯಸುಧೆಗೂ ಜಿಜ್ಞಾಸಾ ಶಬ್ದಾರ್ಥದ ವಿಷಯವಾಗಿ ಆಪಾತತಃ ತೋರುತ್ತಿದ್ದ ವಿರೋಧಕ್ಕೆ ನಾಲ್ಕು ಬಗೆಯಾದ ಸಮಾಧಾನವನ್ನು ಹೇಳಿ ಆ ವಿರೋಧವನ್ನು ಪರಿಹರಿಸಿರುವುದನ್ನು ಗಮನಿಸಬೇಕಾಗಿದೆ. ಇದನ್ನು ಹಿಂದೆಯೇ ವಿವರಿಸಲಾಗಿದೆ.

ತಂತ್ರದೀಪಿಕಾಕಾರರಾದ ಶ್ರೀ ರಾಘವೇಂದ್ರ ಗುರುಸಾರ್ವಭೌಮರು ಬ್ರಹ್ಮಸೂತ್ರಗಳಿಗೆ ಸೂತ್ರಭಾಷ್ಯದಲ್ಲೂ, ಅನುವ್ಯಾಖ್ಯಾನದಲ್ಲಿಯೂ ಉಕ್ತವಾಗಿರುವ ಅರ್ಥಗಳನ್ನೂ, ಸೂತ್ರಭಾಷ್ಯ ವ್ಯಾಖ್ಯಾನವಾದ ತತ್ವಪ್ರಕಾಶಿಕಾದಲ್ಲೂ, ಅನುವ್ಯಾಖ್ಯಾನ ವ್ಯಾಖ್ಯಾನವಾದ ನ್ಯಾಯಸುಧೆಯಲ್ಲಿಯೂ ಅಂತಿಮವಾಗಿ ನಿರ್ಣಯಿಸಲ್ಪಟ್ಟ ಸಿದ್ಧಾಂತಸಿದ್ಧವಾದ ಪ್ರಮೇಯಗಳನ್ನೂ ಏಕತ್ರಕ್ರೋಡೀಕರಿಸಿ ತಾವು ಪ್ರತಿಜ್ಞೆ ಮಾಡಿದಂತೆ "ಕುರ್ಮಃ ಸೂತ್ರಾರ್ಥ ಸಂಗ್ರಹಂ" ಎಂಬುದಕ್ಕೆ ಅನುಗುಣವಾಗಿ, ಸೂತ್ರಗಳ ಅರ್ಥಗಳನ್ನು ಸಂಗ್ರಹಿಸಿರುತ್ತಾರೆ. ಇಷ್ಟು ಮಾತ್ರವಲ್ಲದೆ ಪ್ರಸ್ಥಾನಭೇದ ಪ್ರೋಕ್ತಾರ್ಥ ಸಂಗ್ರಹವನ್ನೂ ಚಿಕ್ಕ ಚಿಕ್ಕ ವಾಕ್ಯಗಳಲ್ಲಿ ತೋರಿಸಿರುತ್ತಾರೆ.

ಈ ಸಂಗ್ರಾಹಕವಾದ ವಾಕ್ಯಗಳು ಜಿಜ್ಞಾಸಾಧಿಕರಣದಲ್ಲಿ ಅತ್ರನಯೇ ಎಂದು ಪ್ರಾರಂಭಿಸಿ "ಶ್ರುತ್ಯುಕ್ತಾ ಜಿಜ್ಞಾಸಾ ಕರ್ತವ್ಯೇತ್ಯರ್ಥಃ" ಎಂಬಲ್ಲಿಗೆ ಮುಗಿದಿರುತ್ತವೆ.

ಆದರೆ ಇಷ್ಟಕ್ಕೆ ಮಾತ್ರ ಮೊದಲನೆಯ ಸೂತ್ರಕ್ಕೆ ವ್ಯಾಖ್ಯಾನವಾದ ತಂತ್ರದೀಪಿಕೆಯು ಮುಗಿದಿಲ್ಲ. ಮತ್ತೇನೆಂದರೆ ಹಿಂದೆ ವಿವರಿಸಿದ ಅರ್ಥಗಳ ವಿಷಯದಲ್ಲಿ ಏನೇನು ಆಕ್ಷೇಪಗಳು ಸಂಭಾವಿತಗಳಾಗಿರುವವೋ ಅವುಗಳಿಗೆಲ್ಲಾ ನ್ಯಾಯಸುಧಾದಲ್ಲಿಯೂ, ತಾತ್ಪರ್ಯ ಚಂದ್ರಿಕಾದಲ್ಲಿಯೂ ಯಾವ ಯಾವ ಸಮಾಧಾನಗಳನ್ನು ಹೇಳಿ ಸಿದ್ಧಾಂತಾರ್ಥಗಳನ್ನು ಸಮರ್ಥಿಸಿರುವರೋ, ಅವೆಲ್ಲವನ್ನೂ ಕೂಡ ಜಿಜ್ಞಾಸಾಧಿಕರಣದ ಮುಂದಿನ ತಂತ್ರದೀಪಿಕಾಗ್ರಂಥ ಭಾಗದಲ್ಲಿ ಪ್ರಸ್ತಾಪಿಸಿ ಅದಕ್ಕೆ ತಕ್ಕ ಸಮಾಧಾನಗಳನ್ನೂ ಸಂಗ್ರಹಿಸಿ ತಿಳಿಸಿರುವುದು ಜಿಜ್ಞಾಸು ವರ್ಗಕ್ಕೆ ಮಹೋಪಕಾರವನ್ನು ಮಾಡಿದಂತಾಗಿದೆ.

ಇಂತಹ ಸಮರ್ಥ ಸಮರ್ಥಕಾಭಾವಾಪನ್ನವಾದ ಶೈಲಿಯ ವ್ಯಾಖ್ಯಾನಗಳು ಬಹಳ ವಿರಳ. ಮತ್ತು ಸೂತ್ರದ ಆನುಪೂರ್ವಿಯ ವಿಚಾರವಾಗಿಯೂ ಸಹ, ಸೂತ್ರಘಟಕ ಪದಗಳಿಗೆ ದಳ ಕೃತ್ಯವನ್ನೂ ಸಹ ಸಂಗ್ರಹವಾಗಿ ತಿಳಿಸಿರುವುದು ಮನೋರಂಜಕವಾಗಿದೆ.

ಸುಧಾದಿಗ್ರಂಥಗಳಲ್ಲಿ ಅಲ್ಲಲ್ಲಿ ಬೇರೆ ಬೇರೆ ಸಂದರ್ಭದಲ್ಲಿ ಹೇಳಿರುವ ಅರ್ಥಗಳನ್ನೆಲ್ಲಾ ಒಂದೇ ಕಡೆ ತೋರಿಸಿರುವುದು ಪಾಠವನ್ನು ಹೇಳತಕ್ಕವರಿಗೂ, ಕೇಳತಕ್ಕವರಿಗೂ ಯಾವ ವಿಧವಾದ ಮನಸ್ಸಿನ ಆಯಾಸವೂ ಆಗದಂತೆ, ಸುಲಭವಾಗಿ ಪ್ರಮೇಯವನ್ನು ತಿಳಿಯಲು ಅತಿಸಹಕಾರಿಯಾಗಿದೆ. ತಂತ್ರದೀಪಿಕೆಯ ಪದಗಳಿಗೆ ಅರ್ಥವನ್ನು ವಿವರಿಸುವಾಗಲೇ ಇವೆಲ್ಲವನ್ನೂ ಹೇಳಿರುವುದರಿಂದ ಲೇಖನವಿಸ್ತಾರ ಭಯದಿಂದ ಮತ್ತೆ ಆ ವಿಷಯಗಳನ್ನು ಹೇಳಿಲ್ಲ.

ಇಲ್ಲಿಗೆ ಪ್ರಸ್ಥಾನಭೇದಪ್ರೋಕ್ತಾರ್ಥ ಸಂಗ್ರಹದ ಬಗ್ಗೆ ವಿವರಣೆಯನ್ನು ತಿಳಿಸಿದ್ದಾಯಿತು.

ಪ್ರಸ್ಥಾನಭೇದದಲ್ಲಿ ಅಂದರೆ ಬ್ರಹ್ಮಸೂತ್ರ ಭಾಷ್ಯದಲ್ಲೂ, ಅನುವ್ಯಾಖ್ಯಾನದಲ್ಲೂ ಉಕ್ತವಾಗಿರುವ ಅರ್ಥಗಳ ಸಂಗ್ರಹರೂಪವಾದ ತಂತ್ರದೀಪಿಕೆಯಲ್ಲಿನ ವಾಕ್ಯಗಳನ್ನು ತಂತ್ರದೀಪಿಕಾಕಾರರು ಬಳಸಿರುವುದನ್ನು ತೋರಿಸಿದ್ದಾಯಿತು.

ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ ಎಂಬ ಬ್ರಹ್ಮಮೀಮಾಂಸಾ ಶಾಸ್ತ್ರದ ಮೊದಲನೆಯ ಸೂತ್ರದಲ್ಲಿರುವ ಬ್ರಹ್ಮಶಬ್ದವು "ವಿಷ್ಣುವನ್ನೇ" ಹೇಳುತ್ತದೆಯೆಂಬುದಾಗಿ ದೈವೀಮೀಮಾಂಸಾ ಶಾಸ್ತ್ರದಲ್ಲಿನ ಅಂತಿಮವಾದ ಎರಡು ಸೂತ್ರಗಳಲ್ಲಿ ಸೂತ್ರಕಾರರಾದ ಶ್ರೀಬಾದರಾಯಣರು ಸೂಚಿಸಿ ನಿಶ್ಚಯಿಸಿರುವುದನ್ನು "ಬ್ರಹ್ಮಶಬ್ದಶ್ಚ ವಿಷ್ಣಾವೇವ" ಎಂದು ಭಾಷ್ಯಕಾರರಾದ ಶ್ರೀಮದಾನಂದತೀರ್ಥರು ಸಕಲಶ್ರುತಿ ಮತ್ತು ಸ್ಮೃತಿವಚನಗಳಿಂದ ಸಯುಕ್ತಿಕವಾಗಿ ಸೂತ್ರ ಭಾಷ್ಯದಲ್ಲೂ, ಅನುವ್ಯಾಖ್ಯಾನದಲ್ಲೂ ಸಮರ್ಥಿಸಿರುತ್ತಾರೆ. ಅದರಂತೆಯೇ ಸೂತ್ರಪ್ರಸ್ಥಾನಕ್ಕೆ ಸಂಬಂಧಿಸಿದ ಶ್ರೀಮದಾಚಾರ್ಯರಿಂದ ರಚಿತವಾಗಿರುವ ಸೂತ್ರಭಾಷ್ಯದ ಮಂಗಳ ಪದ್ಯದಲ್ಲೂ, ಅನುವ್ಯಾಖ್ಯಾನದ ಮಂಗಳ ಪದ್ಯದಲ್ಲೂ ನ್ಯಾಯ ವಿವರಣ ಮಂಗಳ ಪದ್ಯದಲ್ಲೂ ಅಣುಭಾಷ್ಯದ ಆದ್ಯ ಮಂಗಳ ಪದ್ಯದಲ್ಲೂ ಬ್ರಹ್ಮಶಬ್ದಕ್ಕೆ ಪರ್ಯಾಯವಾದ ನಾರಾಯಣ ಪದವನ್ನೇ ಪ್ರಯೋಗಿಸಿದ್ದಾರೆ.

ಸೂತ್ರಭಾಷ್ಯ ಮಂಗಳ ಪದ್ಯವು ಈ ರೀತಿ ಇದೆ.

ನಾರಾಯಣಂಗುಣೈಃ ಸರ್ವೈಃ ಉದೀರ್ಣಂ ದೋಷವರ್ಜಿತಮ್ ।
ಜ್ಞೇಯಂ ಗಮ್ಯಂ ಗುರೂಂಶ್ಚಾಪಿ ನತ್ವಾ ಸೂತ್ರಾರ್ಥ ಉಚ್ಯತೇ ।। ಇತಿ ।।

ಸೂತ್ರಭಾಷ್ಯದ ಮಂಗಳ ಪದ್ಯದ ಅರ್ಥ ವಿವರಣರೂಪವಾಗಿ ರಚಿತವಾಗಿರುವ ವ್ಯಕ್ತತರ್ಕತತಿರೂಪವಾದ ಅನುವ್ಯಾಖ್ಯಾನದ ಆದ್ಯಪದ್ಯತ್ರಯದಲ್ಲಿ ಮೊದಲನೆಯ ಮಂಗಳ ಪದ್ಯವು ಈ ರೀತಿ ಇದೆ.

ಅದರಲ್ಲೂ ನಾರಾಯಣ ಪದವನ್ನೇ ಬ್ರಹ್ಮಪದದ ಪರ್ಯಾಯವಾಗಿ ಹೇಳಿರುತ್ತಾರೆ.

**ನಾರಾಯಣಂ ನಿಖಿಲಪೂರ್ಣಗುಣೈಕದೇಹಂ ನಿರ್ದೋಷಮಾಪ್ಯತಮಮಪ್ಯಖಿಲೈಃ ಸುವಾಕ್ಯೈಃ ।**
**ಅಸ್ಯೋದ್ಭವಾದಿದಮಶೇಷ ವಿಶೇಷತೋಽಪಿ ವಂದ್ಯಂ ಸದಾ ಪ್ರಿಯತಮಂ ಮಮ ಸನ್ನಮಾಮಿ ।। ಇತಿ ।।**

ನ್ಯಾಯವಿವರಣದಲ್ಲಿನ ಮಂಗಳ ಪದ್ಯವು:-

**ಚೇತನಾಚೇತನಜಗನ್ನಿಯಂತ್ರೇಽಶೇಷಸಂವಿದೇ ।**
**ನಮೋ ನಾರಾಯಣಾಯಾಜಶರ್ವಶಕ್ರಾದಿವಂದಿತ ।। ಇತಿ ।।**

ಸಂಗ್ರಹಭಾಷ್ಯ (ಸರ್ವಶಾಸ್ತ್ರಾರ್ಥಸಂಗ್ರಹ) ಅಥವಾ ಅಣುಭಾಷ್ಯದ ಮಂಗಳ ಪದ್ಯ:-

ಸೂತ್ರಭಾಷ್ಯದ ಮಂಗಳ ಪದ್ಯದಂತೆಯೇ ಇದೆ. ಆದರೆ ಮೂವತ್ತೆರಡು ಲಕ್ಷಣಗಳಿಂದ ಕೂಡಿದ ಋಜು ವರೇಣ್ಯರಾದ ಶ್ರೀಮದಾನಂದತೀರ್ಥ ಭಗವತ್ಪಾದರಿಂದ ಸಕಲ ಶಾಸ್ತ್ರಾರ್ಥಸಂಗ್ರಹ ರೂಪವಾಗಿ ರಚಿತವಾಗಿರುವ ೩೨ ಶ್ಲೋಕಗಳುಳ್ಳ ಅಣುಭಾಷ್ಯದ ಪಾಠದಲ್ಲಿ ಮತಭೇದವಿದೆ. ನಾರಾಯಣಂಗುಣೈಃ ಸರ್ವೈಃ ಎಂಬ ಮಂಗಳ ಪದ್ಯವು ಹೃಷೀಕೇಶತೀರ್ಥೀಯ ಪಾಠದಲ್ಲಿ ಇಲ್ಲ. ಶ್ರೀ ತ್ರಿವಿಕ್ರಮಪಂಡಿತಾಚಾರ್ಯರ ಮೊಮ್ಮಕ್ಕಳಾದ ತ್ರಿವಿಕ್ರಮದಾಸ ವಿರಚಿತವಾದ ಆನಂದಮಾಲಾದಲ್ಲೂ ಇಲ್ಲ.

ಆದರೆ ಶ್ರೀಮದಾನಂದತೀರ್ಥ ಭಗವತ್ಪಾದರ ದಿವ್ಯ ಚರಿತ್ರೆಯನ್ನು ಶ್ರೀ ಸುಮಧ್ವವಿಜಯ ಹಾಗೂ ಅಣುಮಧ್ವ ವಿಜಯಗಳಲ್ಲಿ ಬರೆದಿರುವ ಶ್ರೀಮನ್ನಾರಾಯಣ ಪಂಡಿತಾಚಾರ್ಯರಿಂದ ರಚಿತವಾಗಿರುವ ಶ್ರೀಮದ್ ಬ್ರಹ್ಮಸೂತ್ರಾಣು ಭಾಷ್ಯ ಪ್ರದೀಪವೆಂಬ ವ್ಯಾಖ್ಯಾನದಲ್ಲಿ ನಾರಾಯಣಂಗುಣೈಃ ಸರ್ವೈರುದೀರ್ಣಂ ಇತ್ಯಾದಿ ಮಂಗಳ ಪದ್ಯವು ಕಂಡುಬಂದಿದೆ. ಅದಕ್ಕೆ ನಾರಾಯಣಪಂಡಿತಾಚಾರ್ಯರು

"ಪೂರ್ಣಮತಿಃ ತದ್ಬ್ರಹ್ಮಸೂತ್ರಾಣಾಂ ಅಣುಭಾಷ್ಯಂಕರ್ತುಂ ತದ್ಗುಣ ವಿಶಿಷ್ಟಂ ವಿಷ್ಣುಂ ನಮತಿ"।। ನಾರಾಯಣಮಿತಿ।।

ಇತ್ಯಾದಿಯಾಗಿ ವ್ಯಾಖ್ಯಾನ ಮಾಡಿದ್ದಾರೆ.

ತತ್ವಮಂಜರೀ ವ್ಯಾಖ್ಯಾನಕಾರರಾದ ಶ್ರೀ ರಾಘವೇಂದ್ರ ಗುರುಸಾರ್ವಭೌಮರೂ ಸಹ ತತ್ವಮಂಜರೀಯಲ್ಲಿ ನಾರಾಯಣಂ ಗುಣೈಃ ಸರ್ವೈಃ ಇತ್ಯಾದಿ ಮಂಗಳ ಪದ್ಯವನ್ನು ಉಲ್ಲೇಖಿಸಿ ವ್ಯಾಖ್ಯಾನಿಸಿರುವರು. ಇದರಂತೆ ಅಣುಭಾಷ್ಯದ ಫಲಾರೀಯ ವ್ಯಾಖ್ಯಾನದಲ್ಲೂ ನಾರಾಯಣಂಗುಣೈಃ ಸರ್ವೈಃ ಎಂಬ ಮಂಗಳ ಪದ್ಯದ ವ್ಯಾಖ್ಯಾನವು ಕಂಡುಬಂದಿದೆ. ಅಂತೂ ಸೂತ್ರಪ್ರಸ್ಥಾನಕ್ಕೆ ಸೇರಿದ ಶ್ರೀಮದಾಚಾರ್ಯರ ನಾಲ್ಕು ಗ್ರಂಥಗಳಲ್ಲೂ ನಾರಾಯಣಪದ ಘಟಿತವಾದ ಮಂಗಳ ಪದ್ಯಗಳಲ್ಲಿ ಬ್ರಹ್ಮಸೂತ್ರದಲ್ಲಿನ ಬ್ರಹ್ಮಪದಕ್ಕೆ ಪರ್ಯಾಯವಾಗಿ ನಾರಾಯಣ ಪದವನ್ನು ಪ್ರಯೋಗಿಸಿದ್ದಾರೆ.

ಶ್ರೀಮನ್ಮಧ್ವಾಚಾರ್ಯರು ಸೂತ್ರಭಾಷ್ಯದಲ್ಲೂ (ಸಂಗ್ರಹಭಾಷ್ಯ) ಅಥವಾ ಅಣುಭಾಷ್ಯದಲ್ಲೂ ಮಂಗಳ ಪದ್ಯವಾಗಿ ಒಂದೇ ಶ್ಲೋಕವನ್ನು ರಚಿಸಿರುತ್ತಾರೆ. ಇದನ್ನು ಕಂಡು ಕೆಲವರು ಆಕ್ಷೇಪಿಸಿರುವರು. ಅವರ ಆಕ್ಷೇಪವು ಈ ರೀತಿ ಇದೆ.

ಏನೆಂದರೆ:-

ಶ್ರೀ ಮದಾಚಾರ್ಯರು "ಗ್ರಂಥಾನ್ಮಧ್ವಃ ಚಕಾರಾಸೌಸಪ್ತತ್ರಿಂಶದಮಂದಧೀಃ" ಎಂಬ ಗ್ರಂಥಮಾಲಿಕಾ ಸ್ತೋತ್ರದಲ್ಲಿರುವಂತೆ ಮೂವತ್ತೇಳು ಗ್ರಂಥಗಳನ್ನು ರಚಿಸಿರುವುದು ಸುಪ್ರಸಿದ್ಧವಾಗಿದೆ. ಇತ್ತೀಚೆಗೆ ತಿಥಿ ನಿರ್ಣಯವೆಂಬ ಗ್ರಂಥವೂ ನ್ಯಾಸಪದ್ಧತಿಯೆಂಬ ಗ್ರಂಥವೂ ಮೂಲಕೋಶಾಗಾರಗಳಲ್ಲಿ ದೊರಕಿರುವುದಾಗಿ ತಿಳಿದು ಬಂದಿದೆ. ಸಾಮಾನ್ಯವಾಗಿ ಬೇರೆ ಬೇರೆ ಗ್ರಂಥಗಳಲ್ಲಿನ ಮಂಗಳ ಪದ್ಯಗಳನ್ನು ಪರಿಶೀಲಿಸಿದಾಗ ಆ ಮಂಗಳ ಪದ್ಯಗಳೂ ಸಹ ಭಿನ್ನ ಭಿನ್ನವಾದ ಆನುಪೂರ್ವೀಸಹಿತವಾಗಿಯೇ ಉಪಲಬ್ಧವಿವೆ. ಹೀಗಿರುವಲ್ಲಿ ಸೂತ್ರಭಾಷ್ಯದಲ್ಲಿನ ಮಂಗಳ ಪದ್ಯವನ್ನೇ ಬಾಹೂ ದ್ಧೃತ್ಯಸಹಿಲ್ಲದಂತೆ ಅಣುಭಾಷ್ಯದಲ್ಲೂ (ಹೇಳಲು) ನಿಬಂಧಿಸಲು ಕಾರಣವೇನು ? ಇದರಿಂದ ಗ್ರಂಥಕಾರರಿಗೆ ರಚನೆಯ ವಿಷಯದಲ್ಲಿ ಅಸಾಮರ್ಥ್ಯರೂಪವಾದ ಕುಂದಕ್ಕೆ ಅವಕಾಶವಾಗುವುದಿಲ್ಲವೇ ಎಂದು ಕೆಲವು ವ್ಯಕ್ತಿಗಳು ಆಕ್ಷೇಪಿಸಬಹುದು.

ಅದಕ್ಕೆ ಸಮಾಧಾನವು ಈ ರೀತಿ ಇದೆ.

ಗ್ರಂಥದ ಆದಿಯಲ್ಲಿ ಮಂಗಳವನ್ನು ಮಾಡಬೇಕೆಂಬುದು ಶಿಷ್ಟಾಚಾರಾನುಮಿತವಾದ ಶ್ರುತಿ ಸಿದ್ಧವಾದ ಸಂಗತಿಯಾಗಿದೆ. "ಸಮಾಪ್ತಿಕಾಮೋ ಮಂಗಳಮಾಚರೇತ" ಎಂಬುದಾಗಿ ಅನುಮಿತವಾದ ಶ್ರುತಿಪ್ರಮಾಣದಿಂದ ಆಸ್ತಿಕರು ಗ್ರಂಥದ ಆದಿಯಲ್ಲಿ ನಿರ್ವಿಘ್ನವಾಗಿ ಗ್ರಂಥವು ಸಮಾಪ್ತಿಗೊಳ್ಳಲಿ ಎಂಬ ಅಭಿಪ್ರಾಯದಿಂದ ಮಂಗಳವನ್ನು ಆಚರಿಸಿ

ನಿಬಂಧಿಸುವ ವಾಡಿಕೆಯು ಇರುವುದರಿಂದ ಅದರಂತೆ ಋಜುವರೇಣ್ಯರಾದ ಶ್ರೀಮದ್ವರಿಗೆ ಯಾವ ವಿಧವಾದ ವಿಘ್ನಗಳಿಲ್ಲದುದಾಗ್ಯೂ, ಶಿಷ್ಯ ಶಿಕ್ಷಾರ್ಥವಾಗಿ ಗ್ರಂಥದ ಆದಿಯಲ್ಲಿ ಅಣುಭಾಷ್ಯದ ಆದಿಯಲ್ಲೂ ಮಂಗಳಾಚರಣೆಯನ್ನು ಮಾಡಿರುವರು.

ಶ್ರುತಿವಿಹಿತವಾದ ಮಂಗಳಾಚರಣೆಯನ್ನು ಮಾಡಿರುವುದಾದರೂ ಎರಡೂ ಗ್ರಂಥಗಳಲ್ಲಿ ಏಕಪ್ರಕಾರವಾಗಿ ಏತಕ್ಕೆ ಮಂಗಳಪದ್ಯವನ್ನು ನಿಬಂಧಿಸಿರುವರು ಎಂಬ ಶಂಕೆಯು ಉಳಿಯುತ್ತದೆ. ಅದಕ್ಕೆ ಈ ಕೆಳಗೆ ಕಂಡಂತೆ ಸಮಾಧಾನವನ್ನು ತಿಳಿಯಬಹುದಾಗಿದೆ.

ಗ್ರಂಥಭೇದವಿರುವ ಕಡೆಗಳಲ್ಲೆಲ್ಲಾ ಭಿನ್ನ ಭಿನ್ನವಾದ ಆನುಪೂರ್ವೀಯಿಂದ ಕೂಡಿದ ವಿಲಕ್ಷಣವಾದ ಮಂಗಳ ಪದ್ಯವೇ ಇರಬೇಕೆಂಬ ನಿಯಮವು ಇರುವುದಿಲ್ಲ. ಇಂತಹ ನಿಯಮ ವಿಧಾಯಕವಾದ ಪ್ರಮಾಣ ವಾಕ್ಯವು ಎಲ್ಲೂ ಕಂಡಿಲ್ಲ, ಕೇಳಿಲ್ಲ ಶಿಷ್ಟರಾರೂ ಇಂತಹ ನಿಯಮವನ್ನು ಉದಾಹರಿಸಿಲ್ಲ. ಅನುಸರಿಸಿಯೂ ಇಲ್ಲ. ಆದಕಾರಣ ಶ್ರೀಮದಾಚಾರ್ಯರ ಎರಡು ಕೃತಿಗಳಲ್ಲಿ ಅಂದರೆ ಸೂತ್ರಭಾಷ್ಯದ ಆದಿಯಲ್ಲಿಯೂ ಅಣುಭಾಷ್ಯದ ಆದಿಯಲ್ಲಿಯೂ ಏಕಪ್ರಕಾರವಾದ ಮಂಗಳಪದ್ಯವನ್ನು ರಚಿಸಿರುವುದಕ್ಕೆ ಯಾವ ಬಾಧಕವೂ ಇರುವುದಿಲ್ಲ. ಇದರಿಂದ ಯಾವ ಕುಂದಕವೂ ಇಲ್ಲ. ಎಂಬುದೊಂದು ಸಮಾಧಾನ. ಮತ್ತು ಈ ಸಂದರ್ಭದಲ್ಲಿ ಮತ್ತೊಂದು ವಿಚಾರವನ್ನು ಮುಖ್ಯವಾಗಿ ಗಮನಿಸಬೇಕಾಗಿದೆ.

**''ನಾರಾಯಣಂ ಗುಣೈಃ ಸರ್ವೈರುದೀರ್ಣಂ ದೋಷವರ್ಜಿತಮ್ ।**
**ಜ್ಞೇಯಂಗಮ್ಯಂ ಗುರೂಂಶ್ಚಾಪಿ ನತ್ವಾ ಸೂತ್ರಾರ್ಥ ಉಚ್ಯತೇ'' ।।**

ಎಂಬುದೇ ಎರಡೂ ಭಾಷ್ಯಗಳಲ್ಲಿನ ಮೊದಲನೆಯ ಮಂಗಳಪದ್ಯವಾಗಿದೆ.

ಇದು ಕಾಮಿಜನಮನೋರಂಜಕವಾದ ಗ್ರಂಥವಲ್ಲ. ಇದು ಬೇರೆ ಬೇರೆ ಇತರ ಕಾವ್ಯಗಳಲ್ಲೂ, ಕವಿಕಪೋಲ ಕಲ್ಪಿತಕಥಾಗರ್ಭಿತಗಳಾದ ಕಾದಂಬರಿಗಳಲ್ಲಿ ಕಂಡುಬರುವಂತಹ ಮಂಗಳವಲ್ಲ. ರಘುವಂಶಾದಿ ಕಾವ್ಯಗಳ ಆರಂಭದಲ್ಲಿರುವ ''ವಾಗರ್ಥಾವಿವ ಸಂಪೃಕ್ತೌ'' ಇತ್ಯಾದಿ ಪದ್ಯಗಳಂತೆ ಇರತಕ್ಕ ಮಂಗಳಪದ್ಯವಾಗಿಲ್ಲ. ಮತ್ತೇನೆಂದರೆ ಸರ್ವಸಚ್ಛಾಸ್ತ್ರಮುಖ್ಯ ತಾತ್ಪರ್ಯ ವಿಷಯನಾದ ಸರ್ವೋತ್ತಮನಾದ ನಾರಾಯಣನ ನಮಸ್ಕಾರದಿಂದ ಕೂಡಿದ ಮಂಗಳಪದ್ಯವಾಗಿದೆ.

ಅಷ್ಟು ಮಾತ್ರವಲ್ಲದೆ ನಾಲ್ಕು ಅಧ್ಯಾಯಗಳಿಂದ ಕೂಡಿದ ಸಮಗ್ರಬ್ರಹ್ಮಮೀಮಾಂಸಾ ಶಾಸ್ತ್ರಪ್ರತಿಪಾದ್ಯವಾದ ಅರ್ಥ ವಿಶೇಷದಿಂದ ಕೂಡಿದ ಮಂಗಳಪದ್ಯವಾಗಿದೆ. ಇದರಲ್ಲಿ ತೋರಿಸಿರುವ ಒಂದೊಂದು ವಿಶೇಷಣವೂ ಸಹ ಬ್ರಹ್ಮ ಸೂತ್ರಗಳ ಒಂದೊಂದು ಅಧ್ಯಾಯದ ಅರ್ಥದ ಸಂಗ್ರಹರೂಪವಾಗಿಯೇ ಶ್ರೀಮದಾಚಾರ್ಯರು ಬಳಸಿರುತ್ತಾರೆ. ಸಮನ್ವಯಾಧ್ಯಾಯದ ಅರ್ಥಸಂಗ್ರಹರೂಪವಾಗಿರುವುದು ''ಗುಣೈಃ ಸರ್ವೈಃ ಉದೀರ್ಣಂ'' ಎಂಬ ಮೊದಲನೆಯ ವಿಶೇಷಣವು. ''ದೋಷವರ್ಜಿತಂ'' ಎಂಬ ಎರಡನೇ ವಿಶೇಷಣವು ಎರಡನೆಯದಾದ ಅವಿರೋಧಾಧ್ಯಾಯದ ಅರ್ಥ ಸಂಗ್ರಹರೂಪವಾಗಿದೆ. ಜ್ಞೇಯಂ ಎಂಬ ವಿಶೇಷಣವು ಮೂರನೇ ಅಧ್ಯಾಯವಾದ ಸಾಧನಾಧ್ಯಾಯದ ಅರ್ಥಸಂಗ್ರಹವಾಗಿದೆ. ಫಲಾಧ್ಯಾಯಪ್ರತಿಪಾದ್ಯವಾದ ಅರ್ಥವನ್ನು ''ಗಮ್ಯಂ'' ಎಂಬ ನಾಲ್ಕನೇ ವಿಶೇಷಣದಿಂದ ಸಂಗ್ರಹಿಸಿರುತ್ತಾರೆ.

ಸರ್ವಶಾಸ್ತ್ರಾರ್ಥ ಸಂಗ್ರಹರೂಪವಾಗಿರುವ ಈ ಭಾಷ್ಯಾದ್ಯ ಮಂಗಳಪದ್ಯವು ಇತರ ಕಾವ್ಯಾದಿ ಗ್ರಂಥಗಳ ಮಂಗಳ ಪದ್ಯಕ್ಕಿಂತ ವಿಲಕ್ಷಣವಾಗಿರುವುದನ್ನು ಮನಗಾಣಬೇಕು.

ಆದಕಾರಣ ಮನನಶಾಸ್ತ್ರವಾದ ಬ್ರಹ್ಮಮೀಮಾಂಸಾಶಾಸ್ತ್ರದ ಭಾಷ್ಯದಲ್ಲಿ ಶಾಸ್ತ್ರನಿರ್ಣೀತವಾದ ಅರ್ಥವಿಶೇಷವನ್ನು ಮತ್ತೆ ಮತ್ತೆ ಅನುಸಂಧಾನ ಮಾಡಲು ಅನುಕೂಲಿಸುವಂತೆ ಏಕಪ್ರಕಾರವಾಗಿ ಮತ್ತೆ ಮತ್ತೆ ಎಷ್ಟು ಹೇಳಿದರೂ "ಓಂ ಆವೃತ್ತಿರಸಕೃದುಪದೇಶಾತ್ ಓಂ" ಎಂಬ ಸೂತ್ರದಲ್ಲಿ ಶ್ರೀ ಬಾದರಾಯಣರೇ ನಿರ್ಣಯಿಸಿರುವಂತೆ ತಾತ್ಪರ್ಯ ನಿರ್ಣಾಯಕಗಳಾದ ಯುಕ್ತಿಗಳಲ್ಲೊಂದಾದ ಏಕಪ್ರಕಾರಾಸಕೃದುಕ್ತಿರೂಪವಾದ ಅಭ್ಯಾಸವು ತಾತ್ಪರ್ಯ ಲಿಂಗಗಳಲ್ಲಿ ಸೇರಿರುವುದರಿಂದ ಸಮಗ್ರಶಾಸ್ತ್ರಪ್ರತಿಪಾದ್ಯನಾದ ಶ್ರೀಹರಿಯ ಸರ್ವೋತ್ತಮತ್ವದಲ್ಲಿಯೇ ಮುಖ್ಯ ತಾತ್ಪರ್ಯದ ದೃಷ್ಟಿಯಿಂದ ಭಾಷ್ಯಕಾರರು ಏಕಪ್ರಕಾರವಾಗಿ ಹೇಳಿರುವುದು ಅತ್ಯಂತಸಂಗತವೇ ಆಗಿದೆ. ಆದಕಾರಣ ಯಾವ ಕ್ಷುದ್ರ ಶಂಕೆಗೂ ಅವಕಾಶವೇ ಇಲ್ಲ.

ಇದು ಶಾಸ್ತ್ರಾರ್ಥಸಂಗ್ರಹ ಗ್ರಂಥಕ್ಕೆ ಶಾಸ್ತ್ರಾರ್ಥಾನುಸಂಧಾನದ ದೃಷ್ಟಿಯಿಂದ ಭೂಷಣವೇ ಹೊರತು ದೂಷಣವಾಗಲಾರದು. ಗ್ರಂಥಕಾರರ ಅಸಾಮರ್ಥ್ಯ - ಶಂಕೆಗೂ ಸರ್ವಥಾ ಅವಕಾಶವಾಗಲಾರದು. ವೇದಾದಿಪ್ರಮಾಣ ಪುಂಜದಿಂದ ಆಳವಾಗಿ ವಿಮರ್ಶೆ ಮಾಡಲಾಗಿ ಶ್ರೀಭಾರತೀಪತಿಗಳಾದ ಜೀವೋತ್ತಮರಾದ ಪ್ರಧಾನ ವಾಯುದೇವರ ಮೂರನೇ ಅವತಾರವೇ ಶ್ರೀಮಧ್ವಾವತಾರವು. ಶ್ರೀಮನ್ಮಧ್ವಾಚಾರ್ಯರು ಸಾಕ್ಷಾತ್ ಶ್ರೀವೇದವ್ಯಾಸರ ಶಿಷ್ಯರು.

ಇಂದಿಗೂ ಉತ್ತರ ಬದರೀಕ್ಷೇತ್ರದಲ್ಲಿ ದಿವ್ಯಭಗವದ್ರೂಪದ ಸನ್ನಿಧಾನದಲ್ಲಿರುತ್ತಾರೆ. ಬ್ರಹ್ಮಮೀಮಾಂಸಾ ಸೂತ್ರಗಳಿಗೆ ಪ್ರವೃತ್ತವಾಗಿರುವ ಹಿಂದಿನ ೨೧ ಜನ ಭಾಷ್ಯಕಾರರಲ್ಲಿ ಯಾರು ಸಹ ಶ್ರೀ ವೇದವ್ಯಾಸಸಮ್ಮತವಾದ ಅರ್ಥವನ್ನು ಗ್ರಹಿಸಿಯೇ ಇಲ್ಲ. ಅದಕ್ಕೆ ವಿರುದ್ಧವಾಗಿಯೇ ತಮ್ಮ ತಮ್ಮಗೆ ತೋರಿದ ರೀತಿಯಲ್ಲಿ ಭಾಷ್ಯಗಳನ್ನು ರಚಿಸಿದ್ದಾರೆ. ಅವರೆಲ್ಲಾ ಅವಿದ್ಯಾಪಟಲಪಿಹಿತನಯನರಾಗಿದ್ದಾರೆ.

ಶ್ರೀಮನ್ಮಧ್ವರಂತೆ ಅವರಾರೂ ಪ್ರಸ್ಥಾನತ್ರಯಗಳಿಗೂ ಭಾಗವತ, ಮಹಾಭಾರತ, ಮೂಲರಾಮಾಯಣ, ತಂತ್ರಶಾಸ್ತ್ರ, ಮಂತ್ರಶಾಸ್ತ್ರ ಮುಂತಾದವುಗಳಿಗೆ ಸಂಬಂಧಪಟ್ಟಂತೆ ಭಾಷ್ಯರೂಪವಾದ ವ್ಯಾಖ್ಯಾನಗಳನ್ನಾಗಲಿ ತಾತ್ಪರ್ಯ ಗ್ರಂಥಗಳನ್ನಾಗಲಿ ರಚಿಸಿಲ್ಲ. ಶತಕೋಟಿ ವಿಸ್ತೀರ್ಣವಾದ ಮೂಲರಾಮಾಯಣವೇನು, ಮೂಲನಾರಾಯಣ ರಚಿತವಾದ ಐವತ್ತು ಕೋಟಿ ವಿಸ್ತೀರ್ಣವಾದ ಬ್ರಹ್ಮತರ್ಕಶಾಸ್ತ್ರವೇನು ಇವುಗಳೇ ಅಲ್ಲದೆ ಅನೇಕ ಪ್ರಮಾಣ ಗ್ರಂಥಗಳ ಹೆಸರುಗಳನ್ನೂ ಸಹ ಇತರ ಭಾಷ್ಯಕಾರರು ಕೇಳಿಯೇ ಇಲ್ಲ, ಉದಾಹರಿಸಿಯೂ ಇಲ್ಲ. ಇತರ ಭಾಷ್ಯಕಾರರ ದೃಷ್ಟಿಯೇ ಬೀಳದಿರುವ ಅನೇಕ ಪ್ರಮಾಣಗಳ ಮಾಲೆಯನ್ನೇ ಶ್ರೀಮನ್ಮಧ್ವಾಚಾರ್ಯರು ಅನೇಕ ಕಡೆ ಉದಾಹರಿಸಿರುತ್ತಾರೆ.

ಇತರ ಭಾಷ್ಯಕಾರರ ಅಸಾಮರ್ಥ್ಯವನ್ನೂ, ಅಲ್ಪಜ್ಞತ್ವವನ್ನೂ ಇತರ ಭಾಷ್ಯಕಾರರ ವೇದವಾಕ್ಯಜ್ಞಾನ ದಾರಿದ್ರ್ಯವನ್ನೂ ಒಂದೆಡೆ ಶ್ರೀಮನ್ನ್ಯಾಯಸುಧಾಕಾರರು ಎತ್ತಿ ತೋರಿಸಿದ್ದಾರೆ.

ಶಂಕರಭಾಷ್ಯದಲ್ಲೂ, ರಾಮಾನುಜ ಭಾಷ್ಯದಲ್ಲೂ "ಮೊದಲನೆಯ ಅಧ್ಯಾಯದಲ್ಲಿನ ಮೊದಲನೆಯ ಪಾದದ ಏಳನೇ ಅಧಿಕರಣವಾದ ಅಂತಸ್ತ್ವಾಧಿಕರಣವನ್ನು ಅಂತರಾಧಿಕರಣವೆಂದು ಕರೆದು ಇದೇ ಅಧ್ಯಾಯದ ಎರಡನೇ ಪಾದದ ನಾಲ್ಕನೇ ಅಧಿಕರಣವಾದ ಅಂತರಾಧಿಕರಣದಲ್ಲಿ ವಿಷಯವಾಕ್ಯವಾಗಿ ಛಾಂದೋಗ್ಯದ

**"ಯ ಏಷೋಂತರಕ್ಷಿಣಿ ಪುರುಷೋದೃಶ್ಯತೇ ಏಷ ಆತ್ಮೇತಿಹೋವಾಚ ಏತದಮೃತಂ,**
**ಅಭಯಂ ಏತದ್ಬ್ರಹ್ಮೇತಿ" ।। (ಛಾಂದೋಗ್ಯ ೧-೭-೧-೪)**

ಎಂಬುದನ್ನೇ ನಿರ್ಣೇಯವಾದ ವಿಷಯವಾಕ್ಯವಾಗಿ ಪರಿಗ್ರಹಿಸಲಾಗಿದೆ.

ಶ್ರೀಮದ್ಭಾಷ್ಯದಲ್ಲಾದರೋ ಅಂತಸ್ತ್ವತ್ವಾಧಿಕರಣದ ವಿಷಯವಾಕ್ಯವೇ ಬೇರೆ, ಎರಡನೇ ಪಾದದ ಅಂತರಾಧಿಕರಣದ ವಿಷಯವಾಕ್ಯವೇ ಬೇರೆ.

''ಅಂತಸ್ತ್ವತ್ವಾಧಿಕರಣದಲ್ಲಿ ತೈತ್ತಿರೀಯ ಆರಣ್ಯಕದ ''ಅಂತಃಪ್ರವಿಷ್ಟಂ'' ಇತ್ಯಾದಿರೂಪವಾದುದು ವಿಷಯವಾಕ್ಯ. ಅಂತರಾಧಿಕರಣದಲ್ಲಿ ಛಾಂದೋಗ್ಯದ ''ಯ ಏಷೋಽಂತರಕ್ಷಿಣಿ ಪುರುಷೋದೃಶ್ಯತೇ ಇತ್ಯಾದಿಯಾದುದು ವಿಷಯವಾಕ್ಯ.

ಆದಕಾರಣ ಶಂಕರಭಾಷ್ಯರೀತ್ಯಾ ರಾಮಾನುಜಭಾಷ್ಯರೀತ್ಯಾ ಅಂತರಧಿಕರಣಕ್ಯಂತಲೂ, ಅಂತರಾಧಿಕರಣವೆಂಬ ಬೇರೆ ಅಧಿಕರಣದ ಆರಂಭವೇ ವ್ಯರ್ಥವೆಂಬುದನ್ನು ಶ್ರೀ ನ್ಯಾಯಸುಧಾಕಾರರು ಸಮರ್ಥಿಸಿ ಕಡೆಯದಾಗಿ

''ತಸ್ಮಾತ್ ವಾಕ್ಯಜ್ಞಾನದರಿದ್ರಾಣಾಂ ವ್ಯಾಖ್ಯಾನಮುಪೇಕ್ಷಣೀಯಮ್''

ಎಂದು ಇತರ ಭಾಷ್ಯಕಾರರ ಅಲ್ಪಜ್ಞತ್ವವನ್ನು ಎತ್ತಿ ತೋರಿಸಿರುವರು.

ಸರ್ವಜ್ಞಶಿಖಾಮಣಿಗಳಾದ ಅನಂತ ವೇದವೇತ್ತಗಳಾದ ಜೀವೋತ್ತಮರಾದ ಶ್ರೀಮದಾಚಾರ್ಯರ ಭಾಷ್ಯವು ಪಂಡಿತಾಚಾರ್ಯರು ಹೇಳಿರುವಂತೆ ''ಅಸ್ಮದೂಷ್ಯಮಕರೋದನಂತಧೀಃ ಭೂತಭಾವಿಭವದಾತ್ಮಧೀ ಕ್ವಚಿತ್'' ಎಂಬಂತೆ ಭೂತ, ವರ್ತಮಾನ, ಭವಿಷ್ಯತ್ ಕಾಲಗಳಲ್ಲಿ ಯಾರಿಂದಲೂ ಅದೂಷ್ಯವಾಗಿ ಪರಮಪವಿತ್ರವಾಗಿರುವುದನ್ನು ಕಾಣಬಹುದಾಗಿದೆ. ಆದಕಾರಣ ಇತರರ ಕ್ಷುದ್ರರ ಕುಚೋದ್ಯಕ್ಕೆ ಯಾವ ಅವಕಾಶವೂ ಇರುವುದಿಲ್ಲ. ಸರ್ವೋತ್ತಮನಾದ ಶ್ರೀ ನಾರಾಯಣನ ಸರ್ವೋತ್ತಮತ್ವವನ್ನು ಸಾಧಿಸಲು ಎಲ್ಲಾ ಮಂಗಳ ಪದ್ಯಗಳಲ್ಲೂ ನಮ್ಮ ಭಾಷ್ಯಕಾರರಾದ ಶ್ರೀಮದಾಚಾರ್ಯರು ನಾರಾಯಣ ಪದವನ್ನೇ ಬಳಸಿರುತ್ತಾರೆ.

ಇದರಿಂದ ಜಗಜ್ಜನನಿಯಾದ ಶ್ರೀ ಮಹಾಲಕ್ಷ್ಮೀಪತಿಯಾದ ಶ್ರೀಮನ್ನಾರಾಯಣನೇ ಬ್ರಹ್ಮಶಬ್ದವಾಚ್ಯನೆಂಬ ವಿಷಯದಲ್ಲೂ ಬ್ರಹ್ಮಜಿಜ್ಞಾಸಾ ಎಂದರೆ ಬ್ರಹ್ಮಜಿಜ್ಞಾಸಾ ಕರ್ತವ್ಯೇತಿವಾಕ್ಯೇನ ನಾರಾಯಣಜಿಜ್ಞಾಸಾ ಎಂಬಲ್ಲಿಯೂ ಶ್ರೀಮದಾನಂದತೀರ್ಥರು ಅನೇಕ ನಿರವಕಾಶಗಳಾದ ಶ್ರುತಿ ಸ್ಮೃತಿವಚನಗಳನ್ನು ಉದಾಹರಿಸಿ ಸಮರ್ಥಿಸಿರುವುದು, ಸೂತ್ರಭಾಷ್ಯದಲ್ಲೂ ಅನುವ್ಯಾಖ್ಯಾನದ ಜಿಜ್ಞಾಸಾಧಿಕರಣ ಅಂತಿಮ ಭಾಗದಲ್ಲಿಯೂ ಜಿಜ್ಞಾಸು ವರ್ಗಕ್ಕೆ ಸ್ಪಷ್ಟವಾಗಿ ಗೋಚರವಾಗುತ್ತಿದೆ. ಇದೇ ಸಿದ್ಧಾಂತಸಿದ್ಧವಾದ ಸಕಲ ಪ್ರಮಾಣಪುಂಜ ಪ್ರತಿಪಾದ್ಯವಾದ ಪ್ರಾಮಾಣಿಕವಾದ ಅರ್ಥವಾಗಿದೆ.

''ಅತೋ ನಾರಾಯಣಸ್ಯೈವ ಜಿಜ್ಞಾಸಾಽತ್ರವಿಧೀಯತೇ'' - ಎಂದು ಅನುವ್ಯಾಖ್ಯಾನವಿದೆ
ಈ ಸಂದರ್ಭದ ನ್ಯಾಯಸುಧಾ-
ಯತೋ ಬ್ರಹ್ಮಶಬ್ದೋ ನಾರಾಯಣ ಶಬ್ದಸಮಾನಾರ್ಥೋಽತೋ ಬ್ರಹ್ಮಜಿಜ್ಞಾಸಾ
ಕರ್ತವ್ಯೇತಿವಾಕ್ಯೇನ ನಾರಾಯಣಸ್ಯೈವ ಜಿಜ್ಞಾಸಾ ವಿಧೀಯತ ಇತಿಜ್ಞಾಯತೆ, ಇತ್ಯರ್ಥಃ

ಆದರೆ ಶಿವನ ಸರ್ವೋತ್ತಮತ್ವವಾದಿಗಳಾದ ಕೆಲವರು ಶೈವರು ಎಲ್ಲಾ ಶಬ್ದಗಳನ್ನೂ ಶಿವನ ಪರವಾಗಿ ವ್ಯಾಖ್ಯಾನ ಮಾಡಿ ಆಗ್ರಹದಿಂದ ನಾರಾಯಣ ಶಬ್ದವನ್ನು ಶಿವನ ಪರವಾಗಿ ಹೇಳಲು ಪ್ರಯತ್ನ ಮಾಡಿ ವಾದರಂಗದಲ್ಲಿ ಪರಾಜಿತರಾಗಿದ್ದಾರೆ. ಅವರ ವಾದದ ಶೈಲಿಯನ್ನು ಮುಂದೆ ಉದಾಹರಿಸಿ ಆ ಶೈವರ ಪ್ರತಿಪಾದನೆಯಲ್ಲಿನ ಆಭಾಸಗಳನ್ನು ಎತ್ತಿ ಹೇಳಿ ಖಂಡತುಂಡವಾಗಿ ಪ್ರಾಚೀನರು ಖಂಡಿಸುವುದನ್ನು ಮುಂದೆ ವಿವರಿಸುತ್ತೇವೆ.

ಅದಕ್ಕೆ ಮುಂಚಿತವಾಗಿ ''ನಾರಾಯಣ'' ಎಂಬ ಶಬ್ದದ ನಿಷ್ಪತ್ತಿಯ ವಿಚಾರವಾಗಿ ಕೆಲವು ವಿವರಣೆಗಳನ್ನು ಕೊಡುತ್ತೇವೆ.

ನಾರಾಃ = ಆಪಃ = ನೀರು, ಅಯನಂ = ಆಶ್ರಯಃ = ಯಸ್ಯಸಃ = ಯಾರಿಗುಂಟೋ ಅವನು ನಾರಾಯಣನು.

ಇಲ್ಲಿ ನಾರಾ ಎಂಬುದು ಪೂರ್ವಪದ, ಅಯನ ಎಂಬುದು ಉತ್ತರ ಪದ.

ಪೂರ್ವಪದಾತ್ಸಂಜ್ಞಾಯಾಂ ಅಗಃ (ಪಾಣಿನಿ ಸೂತ್ರಅಧ್ಯಾಯ ೮. ಪಾದ ೪ ಸೂತ್ರ ೩)

ವೃತ್ತಿ:- ಪೂರ್ವಪದಸ್ಥಾತ್, ನಿಮಿತ್ತಾತ್, ಪರಸ್ಯ ನಸ್ಯಣಃ ಸ್ಯಾತ್ ಸಂಜ್ಞಾಯಾಂ, ನ ತುಗ ಕಾರವ್ಯವಧಾನೇ ।। ಇತಿ ।।

ಅಂದರೆ ಪೂರ್ವಪದದಲ್ಲಿರುವ ರೇಃ ಷಕಾರಗಳಿರುವ ನಿಮಿತ್ತದಿಂದ ಉತ್ತರ ಪದದಲ್ಲಿರುವ ನಕಾರಕ್ಕೆ ಣಕಾರವು ಬರುತ್ತದೆ.

ಆದರೆ ಗಕಾರದ ವ್ಯವಧಾನವು ಇದ್ದರೆ ನಕಾರಕ್ಕೆ ಣಕಾರವು ಬರುವುದಿಲ್ಲ. ಎಂಬ ಸೂತ್ರಾರ್ಥದ ನಿಯಮದಂತೆ ದ್ರುಣಸಃ ಎಂಬ ಉದಾಹರಣೆಯಲ್ಲಿ ದ್ರುರಿವ + ನಾಸಿಕಾ (ಮೂಗು) ಎಂಬಲ್ಲಿ ನಾಸಿಕಾ ಶಬ್ದಕ್ಕೆ ನಸಾ ದೇಶವು ಬಂದು ದ್ರುರಿವ = ವೃಕ್ಷ ಇವ (ವೃಕ್ಷದಂತೆ ಇರುವ ಮೂಗು ಎಂಬುದಾಗಿ) ದ್ರುರಿವ ಎಂಬ ಪೂರ್ವಪದದಲ್ಲಿರುವ ರೇಫ ನಿಮಿತ್ತಕವಾಗಿ ಉತ್ತರಪದದಲ್ಲಿನ ನಕಾರಕ್ಕೆ ಣಕಾರ ದೇಶವು ಬಂದು ದ್ರುಣಸಃ ಎಂದಾಗಿದೆ.

ಗಕಾರದ ವ್ಯವಧಾನವು ಇದ್ದರೆ ಬರುವುದಿಲ್ಲ ಎಂಬ ನಿಷೇಧಕ್ಕೆ ತಕ್ಕಂತೆ ಋಗಯನಮ್ ಎಂಬಲ್ಲಿ ಗಕಾರದ ವ್ಯವಧಾನವಿರುವುದರಿಂದ ನಕಾರಕ್ಕೆ ಣಕಾರವು ಬಂದಿಲ್ಲ.

ಪ್ರಕೃತದಲ್ಲಿ ಪೂರ್ವಪದಾತ್ ಸಂಜ್ಞಾಯಾಮಗಃ (೮-೪-೩) ನೇ ಪಾಣಿನಿ ಸೂತ್ರದ ನಿಯಮದಂತೆ ನಾರಾಃ + ಅಯನಂ = ಯಸ್ಯಸಃ ಎಂಬಲ್ಲಿ ಉತ್ತರಪದದಲ್ಲಿನ ನಕಾರಕ್ಕೆ, ಸಂಜ್ಞಾಯಾಂ (ರೂಢಿಯಲ್ಲಿ = ಪ್ರಯೋಗ ಪ್ರಾಚುರ್ಯದಲ್ಲಿ) ಣಕಾರಾರ ದೇಶವು ಬಂದು ನಾರಾಯಣ ಎಂದಾಗಿದೆ. ಪ್ರಯೋಗದ ಪ್ರಾಚುರ್ಯವು (ರೂಢಿಯು) ನಾರಾಯಣ ಶಬ್ದಕ್ಕೆ ಪ್ರಾಚುರ್ಯವು ಶ್ರೀಹರಿಯಲ್ಲಿದೆಯೇ ಹೊರತು ಮತ್ತಾವ ದೇವತೆಯಲ್ಲಿಯೂ ಇರುವುದಿಲ್ಲ.

ಇದಕ್ಕೆ "ಆಪೋ ನಾರಾ ಇತಿಪ್ರೋಕ್ತಾ ಆಪೋ ವೈ ನರಸೂನವಃ ।
ಅಯನಂ ತಸ್ಯ ತಾಃ ಪೂರ್ವಂ ತೇನ ನಾರಾಯಣೋಽಸ್ಮೃತಮ್" ।। (ಇತಿ ವ್ಯಾಸಸ್ಮೃತಿಃ)

ಎಂಬ ವ್ಯಾಸಸ್ಮೃತಿ ವಚನವೇ ಸಾಕ್ಷಿಯಾಗಿದೆ. ಸಾಧಕವಾಗಿದೆ.

ಯತಃ ಆಪಃ = ನರಸೂನವಃ = ವಿಷ್ಣುಸೂನವಃ, ಅತಃನಾರಾಃ, ಪ್ರೋಕ್ತಾ ಯೇನ ಕಾರಣೇನಪೂರ್ವಂ = ಪ್ರಳಯೇ, ತಾಃ = ಆಪಃ ತಸ್ಯ = ವಿಷ್ಣೋಃ ಅಯನಂ ತೇನ, ಸಃ, ನಾರಾಯಣಃ = ನಾರಾಯಣ ಶಬ್ದ ವಾಚ್ಯಃ ಇತಿ ಸ್ಮೃತಃ ಎಂಬ ವಿವರಣೆಯನ್ನು ಪ್ರಾಚೀನರು ಕೊಟ್ಟಿರುತ್ತಾರೆ.

ಪ್ರಳಯೋದಕಶಾಯೀ ಅಥವಾ ಕ್ಷೀರಾಬ್ಧಿಶಾಯೀ ಎಂದು ತಾತ್ಪರ್ಯಾರ್ಥವಾಗಿದೆ.

ಪರಮಾತ್ಮನಿಗೆ ಸಮುದ್ರಸ್ಥತ್ವ ಅಂದರೆ ಕ್ಷೀರಾಬ್ಧಿಶಾಯಿತ್ವ, ಪ್ರಳಯಸಮುದ್ರಶಾಯಿತ್ವವು ವಿವಕ್ಷಿತವಾಗಿದೆ ಯೆಂದು ತತ್ವಪ್ರಕಾಶಿಕಾಕಾರರು ಸ್ಪಷ್ಟಪಡಿಸಿದ್ದಾರೆ.

ಯಮಂತಃ ಸಮುದ್ರೇಕವಯೋऽವಯಂತಿ = ಎಂಬಲ್ಲಿ ಯಾರನ್ನು ಜ್ಞಾನಿಗಳು ಸಮುದ್ರದಲ್ಲಿರುವವನ್ನಾಗಿ ತಿಳಿಯುತ್ತಾರೋ ಎಂಬಲ್ಲಿ ಉಕ್ತವಾಗಿರುವ ಸಮುದ್ರಸ್ಥತ್ವವು ಎಂದರೆ .

> "ಅತ್ರ ಸಮುದ್ರಸ್ಥತ್ವಂ ನಾಮ ಕ್ಷೀರಾಬ್ಧಿಶಾಯಿತ್ವಂ ಪ್ರಳಯಸಮುದ್ರಶಾಯಿತ್ವಂ ಚ ವಿವಕ್ಷಿತಮ್" ।।
> (ಇತಿ ತತ್ತ್ವಪ್ರಕಾಶಿಕಾಟೀಕಾ)

ಎಂದು ಟೀಕಾಕಾರರು ಸಮರ್ಥಿಸುವರು.

ಅರಾಃ = ದೋಷಾಃ = ತದ್ವಿರುದ್ಧಾಃ = ಗುಣಾಃ ನಾರಾಃ = ತೇಷಾಂ ಅಯನಂ = ನಾರಾಯಣಃ = ಅರ ಎಂದರೆ ದೋಷಗಳು ಎಂದರ್ಥ. ಅದಕ್ಕೆ ವಿರುದ್ಧವಾದವುಗಳು = ಗುಣಗಳು ನಾರಾ ಎಂದು ಹೇಳಲ್ಪಡುತ್ತವೆ.

ಅಂತಹ ನಾರಾಣಾಂ = ಗುಣಗಳಿಗೆ, ಅಯನಂ = ಆಶ್ರಯನು = ನಾರಾಯಣನು ಗುಣಪರಿಪೂರ್ಣನು ಎಂದು ಅರ್ಥ.

ತತ್ತ್ವಪ್ರಕಾಶಿಕಾಕಾರರು ತೋರಿಸಿರುವ ನಿರ್ವಚನಗಳು ಈ ಕೆಳಗೆ ಕಂಡಂತಿವೆ.

೧. ದೋಷಾರಶಬ್ದಯೋಃ ಅಭಿನ್ನಾರ್ಥತ್ವಾತ್, ನಞಶ್ಚ ವಿರುದ್ಧಾರ್ಥವಾಚಿತ್ವಾತ್ ದೋಷವಿರುದ್ಧಾಃ ಗುಣಾಃ ನಾರಾಃ ತದಾಶ್ರಯೋ ನಾರಾಯಣಃ = ಗುಣಪರಿಪೂರ್ಣಃ

ಇದು ಪ್ರಥಮಾಧ್ಯಾಯದ ಅರ್ಥವಾಗಿದೆ.

೨. ನಞಃ = ಅಭಾವಾರ್ಥತ್ವಾತ್ ಅರಾಶ್ರಯೋ ನ ಭವತೀತಿವಾ ನಾರಾಯಣಃ = ನಿರ್ದೋಷಃ

ಇದು ಎರಡನೆಯ ಅಧ್ಯಾಯವಾದ ಅವಿರೋಧಾಧ್ಯಾಯದ ಅರ್ಥವಾಗಿದೆ.

| | | |
|---|---|---|
| ೩. | ೧) ನರಸಂಬಂಧಿತ್ವಾತ್ | ನಾರಂ = ಜ್ಞಾನಂ |
| | ೨) ನರೀಯತೆ ಅನೇನೇತಿವಾ | ವಿಷಯತಯಾ ತದಾಶ್ರಯತ್ವಾಚ್ಚ ನಾರಾಯಣಃ ಇದು |
| | ೩) ನಾ, ಅರಮಣಂ ಯೇನೇತಿವಾ | ಮೂರನೇ ಅಧ್ಯಾಯವಾದ ಸಾಧನಾಧ್ಯಾಯದ |
| | ೪) ನಿರ್ದೋಷ ವೇದೋಕ್ತತ್ವ | ಅರ್ಥಸಂಗ್ರಹರೂಪವಾದ ಜ್ಞೇಯಂ ಎಂಬುದರ |
| | ತ್ವಾದ್ವಾ ನಾರಂ | ಅರ್ಥವಾಗಿದೆ. |
| ೪. | ೧) ಅರವಿಧುರತ್ವಾತ್ | ನಾರಾಃ ಮುಕ್ತಾಃ = ತದಾಶ್ರಯೋಃ = ನಾರಾಯಣಃ |
| | ೨) ಅರತಿರಹಿತತ್ವಾತ್ | ಇದು ಫಲಾಧ್ಯಾಯದ ಅರ್ಥಸಂಗ್ರಹರೂಪವಾಗಿ |
| | ೩) ಕ್ಷಯರಹಿತತ್ವಾದ್ವಾ | ಭಾಷ್ಯಕಾರರು ತೋರಿಸಿರುವ ಗಮ್ಯಂ ಎಂಬುದರ |
| | ನಾರಾಃ ಮುಕ್ತಾಃ | ಅರ್ಥವೇ ಆಗಿದೆ. |

ನ್ಯಾಯಸುಧಾದಲ್ಲೂ ಅನುವ್ಯಾಖ್ಯಾನದ ಮೊದಲನೆಯ ಮಂಗಳ ಪದ್ಯದಲ್ಲಿ ಉಕ್ತವಾಗಿರುವ ಆರು ವಿಶೇಷಣಗಳಿಗೂ ಸ್ತುತಿಪರತ್ವರೂಪವಾದ ಪ್ರಯೋಜನವನ್ನು ಹೇಳಿದ ತರುವಾಯ ಅಥವಾ ಎಂಬ ಎರಡನೇ ಕಲ್ಪದಲ್ಲಿ

ನಾರಾಯಣನಿಗೇ ಏತಕ್ಕೆ ನಮಸ್ಕಾರ ಮಾಡಬೇಕು. ಇತರ ದೇವತೆಗಳಿಗೂ ಏತಕ್ಕೆ ಪ್ರಾಧಾನ್ಯೇನ ನಮಸ್ಕಾರ ಮಾಡಬಾರದು ಎಂಬ ಶಂಕೆಯ ಪರಿಹಾರ ರೂಪವಾಗಿ ನಮಸ್ಕಾರ ಪ್ರಯೋಜಕಗಳಾದ ವಿಶಿಷ್ಟತ್ವ, ಇಷ್ಟತ್ವ, ಅಧಿಕೃತತ್ವ ರೂಪಗಳಾದ ಧರ್ಮ ಸಂಪಾದಕತ್ವರೂಪವಾದ ಸಾರ್ಥಕ್ಯವನ್ನು ವಿಶೇಷಣಗಳಿಗೆ ತೋರಿಸಿ,

೩. ಯದ್ವಾ ಎಂಬ ಮೂರನೇ ಕಲ್ಪದಲ್ಲಿ ನಾರಾಯಣನ ಸ್ವರೂಪ ನಿರ್ಧಾರಕಗಳಾದ ಲಕ್ಷಣ ಸಮರ್ಪಕತ್ವ ರೂಪವಾದ ಪ್ರಯೋಜನಗಳನ್ನು ವಿಶೇಷಣಗಳಿಗೆ ಪ್ರತಿಪಾದಿಸಿ

೪. ಅಥವಾ ಎಂದು ಪ್ರಾರಂಭಿಸಿರುವ ನಾಲ್ಕನೇ ಕಲ್ಪದಲ್ಲಿ ಹಿಂದೆ ಉಕ್ತವಾದ ಲಕ್ಷಣದ ವಿಷಯದಲ್ಲಿ ಪ್ರಮಾಣಗಳ ಪ್ರದರ್ಶನ ರೂಪವಾದ ಪ್ರಯೋಜನವನ್ನು ಹೇಳಿ

೫. ಯದ್ವಾ ಎಂದು ಪ್ರಾರಂಭವಾಗಿರುವ ಐದನೇ ಪಕ್ಷದಲ್ಲಿ ಹಿಂದೆ ಉಕ್ತವಾದ ನಾರಾಯಣನ ಲಕ್ಷಣದ ವಿಷಯದಲ್ಲೂ ಪ್ರಮಾಣದ ಬಗ್ಗೆಯೂ ಸಹ ಬಾಧಕಗಳನ್ನೆಲ್ಲಾ ಪರಿಹರಿಸಿದನಂತರ

೬. ಅಥವಾ ಎಂದು ಪ್ರಾರಂಭಿಸಿರುವ ಆರನೇ ಕಲ್ಪದಲ್ಲಿ ನ್ಯಾಯಸುಧಾಕಾರರು

> "ನಾಯಂ ನಾರಾಯಣಶಬ್ದೋ ಡಿತ್ಥಾದಿಶಬ್ದ ಇವ ಭಗವತಿ ಸಾಂಕೇತಿಕಃ ಘಟಾದಿಶಬ್ದ ಇವ ವಾ ರೂಢಿಮಾತ್ರಪ್ರವೃತ್ತಃ ಕಿಂತು ವಿಶಿಷ್ಟಗುಣಾನಪ್ಯಾಚಷ್ಟೆ, ಇತಿ ಜ್ಞಾಪಯನ್ ತದರ್ಥಮನೇಕಧಾಕಥಯತಿ।

ತಥಾಹಿ ಎಂದು ನಾರಾಯಣ ಎಂಬ ಪದಕ್ಕೆ ಆರು ಬಗೆಯಾದ ನಿರ್ವಚನವನ್ನು ತೋರಿಸಿರುತ್ತಾರೆ.

| | | |
|---|---|---|
| ೧. | ಅರಾಃ ದೋಷಾಃ ತದ್ವಿರುದ್ಧಾಃ ಗುಣಾಃ ನಾರಾಃ ತದಯನತ್ವಾನ್ನಾರಾಯಣಃ \| | ಇದು ಅನುವ್ಯಾಖ್ಯಾನದ ಮಂಗಳಪದ್ಯದಲ್ಲಿರುವ ನಿಖಿಲ ಪೂರ್ಣಗುಣೈಕದೇಹಂ ಎಂಬ ಮೊದಲನೆಯ ವಿಶೇಷಣದಿಂದ ವಿವರಿಸಲ್ಪಟ್ಟ ಅರ್ಥವಾಗಿದೆ. |
| ೨. | ಅರಾಣಾಂ ಅಯನಂ ನಭವತೀತಿ ವಾ = ನಾರಾಯಣಃ \| | ಇದು ನಿರ್ದೋಷಂ ಎಂಬ ಎರಡನೇ ವಿಶೇಷಣದಿಂದ ವಿವರಿಸಲ್ಪಟ್ಟ ಅರ್ಥ. |
| ೩. | ಉಪಕ್ರಾಂತ್ಯಾದಿನಾ ನರಾಣಾಮಿಮೇ ನಾರಾಃ = ವೇದಾಃ ತೈಃ ಪ್ರತಿಪಾದ್ಯತಯಾ ತದಯನತ್ವಾದ್ವಾ \| | ಇದು ಮಂಗಳ ಪದ್ಯದಲ್ಲಿನ ಆಪ್ಯತಮಮಪ್ಯಖಿಲೈಃ ಸುವಾಕ್ಯೈಃ ಎಂಬ ಮೂರನೇ ವಿಶೇಷಣದಿಂದ ವಿವರಿಸಲ್ಪಟ್ಟ ಅರ್ಥ. |
| ೪. | ನರಾಣಾಂ ಇದಂ = ನಾರಂ ಉದ್ಧಾರಾದಿ, ದಾತೃತಯಾ ತದಯನತ್ವಾದ್ವಾ \| | ಇದು ಅಸ್ಮೋದ್ಧಾರಾದಿದಂ ಎಂಬ ನಾಲ್ಕನೇ ವಿಶೇಷಣದಿಂದ ವಿವರಿಸಲ್ಪಟ್ಟಂತಹ ಅರ್ಥ. |

| | | |
|---|---|---|
| ೫. | ನರಸಮೂಹೋ ನಾರಂ,<br>ಪಂಧ್ಯತಯಾ, ತದಯನತ್ವಾದ್ವಾ } | ಇದರ ವ್ಯಾಖ್ಯಾನರೂಪವಾಗಿಯೇಅಶೇಷವಿಶೇಷತೋಽಪಿ<br>ವಂದ್ಯಂ ಎಂಬ ಐದನೇ ವಿಶೇಷಣವು ಉಕ್ತವಾಗಿದೆ. |
| ೬. | ನರಾಣಾಮಧಿಪತಿಃ ನಾರೋ ಮುಖ್ಯ<br>ವಾಯುಃ ಪರಮಪ್ರೇಮಾಸ್ಪದತಯಾ<br>ತಸ್ಯಾಯನತ್ವಾದ್ವಾ, ಇತಿ ।। } | ಇದು ಸದಾ ಪ್ರಿಯತಮಂ ಮಮ<br>ಎಂಬ ಆರನೇ ವಿಶೇಷಣದಿಂದ<br>ವಿವೃತವಾಗಿರುವ ಅರ್ಥ. |

ಈ ರೀತಿ ತತ್ವಪ್ರಕಾಶಿಕಾದಲ್ಲೂ, ನ್ಯಾಯಸುಧಾದಲ್ಲೂ ನಾರಾಯಣ ಎಂಬ ಪದಕ್ಕೆ ವಿವರಿಸಿರುವ ಅರ್ಥಗಳಲ್ಲದೆ ವಿಷ್ಣು ಸಹಸ್ರನಾಮದಲ್ಲಿಯೂ ಸೇರಿರುವ ಈ ಪದಕ್ಕೆ ಒಂದು ನೂರು ಅರ್ಥಗಳಿರುತ್ತವೆ.

''ತ್ರಯೋಽರ್ಥಾಃ ಸರ್ವವೇದೇಷು ದಶಾರ್ಥಾಃ ಸರ್ವಭಾರತೇ ।
ವಿಷ್ಣೋಃ ಸಹಸ್ರನಾಮಾಪಿ ನಿರಂತರಶತಾರ್ಥಕಮ್'' ।।

ಎಂಬ ಪ್ರಮಾಣ ವಚನದಂತೆ ವಿಶ್ವಾದಿ ಶಬ್ದಗಳಿಗೆ ನೂರು ನೂರು ಅರ್ಥಗಳಿರುವಂತೆ ನಾರಾಯಣ ಪದಕ್ಕೂ ಅನೇಕಾರ್ಥಗಳಿವೆ.

''ಅರಾಃ = ದೋಷಾಃ ತದ್ವಿರುದ್ಧಾಃ ಗುಣಾಃ = ನಾರಾಃ''

ಎಂಬ ನಿರ್ವಚನದಲ್ಲಿ ಅರ ಎಂಬ ಶಬ್ದಕ್ಕೆ ದೋಷಗಳೆಂದು ಅರ್ಥ.

''ದೋಷಾರದಛಿದ್ರ ಶಬ್ದಾನಾಂ ಪರ್ಯಾಯತ್ವಂ ಯತಸ್ತತಃ''

ಎಂದು ಉಕ್ತವಾಗಿರುವಂತೆ, ದೋಷ, ಅರ, ಛಿದ್ರ ಎಂಬಿವೇ ಮೊದಲಾದ ಶಬ್ದಗಳು ಏಕಾರ್ಥಕಗಳಾದ ವಿಭಿನ್ನಾನುಪೂರ್ವೀಯಿಂದ ಕೂಡಿರತಕ್ಕ ಪರ್ಯಾಯ ಶಬ್ದಗಳೇ ಆಗಿವೆ.

ಛಿದ್ರ ಶಬ್ದವು ದೋಷವಾಚಿ ಎಂಬುದು ಸುಪ್ರಸಿದ್ಧ.

''ಛಿದ್ರಂ ರಂಧ್ರೇ ದೂಷಣೇಽಪಿ ಪಕ್ಷಂ ವೃತ್ತಾಂತರೇಽಪಿಚ''

ಎಂದು ನಾನಾರ್ಥರತ್ನ ಮಾಲಾ ವಚನವುಂಟು.

''ಗೃಹಛಿದ್ರಂಬಹಿಃ ನ ಪ್ರಕಟನೀಯಮ್'' ಎಂಬ ಅಭಿಯುಕ್ತರ ಮಾತಿನಿಂದಲೂ, ನ್ಯೂನಾತಿರಿಕ್ತಂ ಅಚ್ಛಿದ್ರ ಮಸ್ತು ಇತಿಭವಂತೋ ಬ್ರುವಂತು'' ಎಂಬ ಪ್ರಾಮಾಣಿಕರ ನುಡಿಯಿಂದಲೂ, ''ಛಿದ್ರಾನ್ವೇಷಣತತ್ಪರಃ'' ಎಂದು ದುರ್ಜನರ ಸ್ವಭಾವವನ್ನು ತಿಳಿಸುವ ಸುಭಾಷಿತ ಪ್ರಯೋಗದಿಂದಲೂ, ಛಿದ್ರ ಎಂಬ ಶಬ್ದಕ್ಕೆ ದೋಷ ಎಂಬ ಅರ್ಥವು ಪ್ರಸಿದ್ಧವೇ ಆಗಿದೆ. ಪ್ರಕೃತದಲ್ಲಿ ''ದೋಷಾರಛಿದ್ರ ಶಬ್ದಾನಾಂ ಪರ್ಯಾಯತ್ವಂ ಯತಸ್ತತಃ'' ಎಂದು ಛಿದ್ರ ಶಬ್ದವನ್ನು ದೃಷ್ಟಾಂತವಾಗಿ ತೋರಿಸಿರುವುದರಿಂದ ಅರಶಬ್ದಕ್ಕೆ ದೋಷ ಎಂದು ಅರ್ಥ. ಈ ವಿಷಯದಲ್ಲಿ ವಿಶ್ವಕೋಶವೂ, ಅಭಿಧಾನಕೋಶವೂ ಸಂವಾದರೂಪಗಳಾಗಿವೆ.

"ಅರಂ ಶೀಘ್ರೇऽಪಿ ಚಕ್ರಾಂಗೇ ಶೀಘ್ರಗೇ ಪುನರನ್ಯವತ್।
ಮಹೀರುಹೇಶ ಕುಂತೇ ಚ ನೇಮೌ, ದೋಷೇ" ಇತಿ ವಿಶ್ವಃ।।

ಮತ್ತು "ಅರೋ ರಥಾಂಗೇ ಚಕ್ರಾಂಗೇ ಶೀಘ್ರಗಾಮಿನಿ ಕಲ್ಪಿತೇ" ಇತ್ಯಭಿಧಾನೇ।।

"ನ ವಿದ್ಯತೇ, ರಂ = ಸುಖಂ ಯಸ್ಮಾತ್" ಎಂಬ ವ್ಯುತ್ಪತ್ತಿಯಿಂದಲೂ ಕೂಡ ಅರ ಎಂಬ ಶಬ್ದಕ್ಕೆ ದೋಷವಾಚಿತ್ವವು ಬರುತ್ತದೆ.

ನಾರಾಣಾಂ + ಅಯನಂ = ನಾರಾಯಣಃ ಎಂಬ ವಿಗ್ರಹದಲ್ಲಿ ಅಯನಂ ಎಂಬ ಉತ್ತರ ಪದವು ಅಧಿಕರಣ ಲ್ಯುಡಂತವಾದ ಶಬ್ದವಾದ್ದರಿಂದ ನಪುಂಸಕ ಶಬ್ದವಾಗಿರುವ ಪ್ರಯುಕ್ತ "ಪರವಲ್ಲಿಂಗಂ ದ್ವಂದ್ವತತ್ಪುರುಷಯೋಃ" (ಪಾಣಿನಿಸೂ ೨-೪-೨೬) ಎಂಬ ಸೂತ್ರದಿಂದ ಇತರೇತರಯೋಗದ್ವಂದ್ವ ಸಮಾಸದಲ್ಲೂ, ತತ್ಪುರುಷ ಸಮಾಸದಲ್ಲೂ ಪರಪದದಂತೆ ಲಿಂಗವು ಆಗಬೇಕೆಂಬ ನಿಯಮದಂತೆ ನಾರಾಯಣಂ ಎಂಬುದಾಗಿ ನಪುಂಸಕದಲ್ಲೇ ಪ್ರಯೋಗಿಸಬೇಕಲ್ಲ ಎಂಬ ಶಂಕೆಯು ಉಂಟಾಗುತ್ತದೆ. ಆದರೆ

ಕರಣಾಧಿಕರಣಯೋಶ್ಚ (ಪಾಣಿನಿಸೂ. ೩-೩-೧೧೭) ಎಂಬ ಸೂತ್ರದಿಂದ ಕರಣ ಮತ್ತು ಅಧಿಕರಣ ಕಾರಕಾರ್ಥಕವಾದ ಧಾತುವಿನ ಮುಂದೆ ಲ್ಯುಟ್ಪ್ರತ್ಯಯವನ್ನು ವಿಧಿಸುವ ಸೂತ್ರದಿಂದ ಬಂದಿರತಕ್ಕ ಲ್ಯುಟ್ಪ್ರತ್ಯಯವು ಟಿತ್ ಆಗಿದೆ. ಟಕಾರಕ್ಕೆ ಇತ್ ಆಗಿ ಟಿತ್ಕರಣ ಮಾಡಿರುವುದರಿಂದ ಅಧಿಕರಣಾರ್ಥಕವಾದ ಲ್ಯುಡಂತ ಶಬ್ದವೂ ಸಹ ಕೆಲವು ಕಡೆ ಲಿಂಗಾಂತರದಲ್ಲೂ ಪ್ರಯೋಗವುಳ್ಳದುದಾಗಿದೆ.

ಆದುದರಿಂದಲೇ ನಾರಾಯಣಃ ಎಂಬುದಾಗಿ ಪುಲ್ಲಿಂಗ ಪ್ರಯೋಗವೂ ಸಾಧುವಾಗಿದೆ.

ಕರಣಾರ್ಥದಲ್ಲಿ ಉದಾ:- ಇಧ್ಮಪ್ರವ್ರಶ್ಚನಃ = ಕುಠಾರು, ಇಲ್ಲಿ ಪ್ರವೃಶ್ಚ್ಯತೇ ಅನೇನ ಎಂಬ ಅರ್ಥದಲ್ಲಿ ಲ್ಯುಟ್ ಬಂದು ಇಧ್ಮಸ್ಯ + ಪ್ರವ್ರಶ್ಚನಃ ಎಂದು ವಿಗ್ರಹವಾಗಿ ಇಧ್ಮಪ್ರವ್ರಶ್ಚನಃ ಎಂದು ಪುಲ್ಲಿಂಗ ರೂಪವು ನಿಷ್ಪನ್ನವಾಗಿದೆ.

ಅಧಿಕರಣಾರ್ಥದಲ್ಲಿ ಗೋದೋಹನೀ ಎಂಬುದಾಗಿ ಉದಾಹರಣೆ.

ಇಲ್ಲಿ ದುಹ್ಯತೇ + ಅಸ್ಯಾಂ ಎಂಬ ಅರ್ಥದಲ್ಲಿ ಅಧಿಕರಣಾರ್ಥದಲ್ಲಿ ಲ್ಯುಟ್ ಬಂದು ಗೋಃ + ದೋಹನೀ = ಗೋದೋಹನೀ ಎಂದು ವಿಗ್ರಹವಾಗಿ ಗೋದೋಹನೀ ಎಂಬ ಶಬ್ದವು ಸ್ತ್ರೀಲಿಂಗದಲ್ಲಿ ಪ್ರಯೋಗವಿದೆ. ಅದ್ದರಿಂದ ಮಾಷವಾಪನೀ ಎಂಬಲ್ಲಿಯೂ ಸಹ ಸ್ತ್ರೀಲಿಂಗದಲ್ಲಿ ಡೀಪ್ ಪ್ರತ್ಯಯವು ಬಂದಿದೆ.

ಲ್ಯುಟ್ ಎಂಬ ಪ್ರತ್ಯಯದಲ್ಲಿ ಟಿತ್ಕರಣ ಮಾಡಿರುವುದರಿಂದಲೇನೇ ಲಿಂಗಾಂತರದಲ್ಲೂ ಪ್ರಯೋಗವಿರುವ ಪ್ರಯುಕ್ತ ಪಾಣಿನ್ಯಾಚಾರ್ಯರ ವ್ಯಾಕರಣ ಸೂತ್ರದಲ್ಲೂ ಕೂಡ ಸೂತ್ರಕಾರರು "ಯಥಾ ಮುಖ ಸಮ್ಮುಖಸ್ಯ ದರ್ಶನಃ ಖಃ" (ಪಾಣಿನಿಸೂತ್ರ ೫-೨-೬) ಎಂಬ ಸೂತ್ರದಲ್ಲಿ ದೃಶ್ಯತೇ + ಅಸ್ಮಿನ್ = ದರ್ಶನಃ (ಕನ್ನಡಿ) ಎಂದು ಅಧಿಕರಣಾರ್ಥದಲ್ಲಿ ಲ್ಯುಡಂತವಾದ ಶಬ್ದವನ್ನು ಪುಲ್ಲಿಂಗದಲ್ಲಿ ಪ್ರಯೋಗಿಸಿರುತ್ತಾರೆ.

ಈ ಎಲ್ಲಾ ಕಾರಣಗಳಿಂದಲೂ ನಾರಾಯಣ ಶಬ್ದದಲ್ಲೂ ಸಹ ಅಯನಂ ಎಂಬ ಉತ್ತರಪದವು ಪುಲ್ಲಿಂಗವಾಗಿ ಅಂಗೀಕೃತವಾಗಿರುವುದರಿಂದಲೂ, ಇದೇ ರೀತಿ ಪ್ರಯೋಗಬಾಹುಳ್ಯವಿರುವುದರಿಂದಲೂ ಮತ್ತು "ಲಿಂಗಮಶಿಷ್ಯಂ ಲೋಕಾಶ್ರಯತ್ವಾತ್ ಲಿಂಗಸ್ಯ" ಎಂಬಂತೆ ಲೋಕದಲ್ಲಿ ಪ್ರಾಮಾಣಿಕವಾದ ಪ್ರಯೋಗದ ಬಾಹುಲ್ಯಾನುಸಾರಿಯಾಗಿ ಲಿಂಗವ್ಯವಸ್ಥೆಯು ಇರುವುದರಿಂದಲೂ ಸಹ "ನಾರಾಯಣಃ" ಎಂಬ ಪುಲ್ಲಿಂಗಶಬ್ದ ಪ್ರಯೋಗಕ್ಕೆ ಯಾವ ದೋಷವೂ ಇರುವುದಿಲ್ಲ.

"ಪರವಲ್ಲಿಂಗಂ ದ್ವಂದ್ವತತ್ಪುರುಷಯೋಃ" ಎಂಬ ಸೂತ್ರಕ್ಕೆ ಇಲ್ಲಿ ಪ್ರವೇಶವೂ ಇಲ್ಲ. ಮಹಾಭಾಷ್ಯಕಾರರು ಈ ಸೂತ್ರದ ನಿಯಮವನ್ನು ನಿರಾಕರಿಸಿಯೂ ಇರುತ್ತಾರೆ.

ಶಂಕಾ:- ನಾರಾ ಎಂಬಲ್ಲಿ ನ + ಅರಾಃ = ನಾರಾಃ ಎಂದು ನಞ್ ತತ್ಪುರುಷ ಸಮಾಸವನ್ನು ಹೇಳಿದ ನಂತರ "ನ ಲೋಪೋ ನಞಃ (ಪಾಣಿನಿಸೂ. ೬-೩-೭೩) ನಞ್ ಸಮಾಸದಲ್ಲಿ ನಞ್ ಸಂಬಂಧಿಯಾದ ನಕಾರಕ್ಕೆ ಉತ್ತರ ಪದವು ಪರವಾದಾಗ ಲೋಪವು ಬಂದು "ತಸ್ಮಾನ್ನುಡಚಿ (ಪಾ. ಸೂ. ೬-೩-೭೪) ಎಂಬ ಸೂತ್ರದಲ್ಲಿ ಹೇಳಿರುವಂತೆ ಲುಪ್ತನಕಾರವನ್ನುಳ್ಳ ನಞ್ಗೆ ಉತ್ತರ ಪದ ಪರವಾದಾಗ ಅಜಾದಿಗೆ ನುಡಾಗಮವು ಬಂದು ಅನಶ್ವಃ ಎಂದಾಗುವಂತೆ ಇಲ್ಲೂ ಸಹ ಅನರಾ ಎಂದೇ ಆಗಬೇಕಲ್ಲವೇ ?

ಸಮಾಸ ಮಾಡಿದಾಗ ನಞ್ ಸಂಬಂಧಿಯಾದ ನಕಾರಕ್ಕೆ ಲೋಪ ಬರಲಾಗಿ ತಸ್ಮಾನ್ನುಡಚಿ ಎಂಬ ಸೂತ್ರದಿಂದ ನುಡಾಗಮವು ಬಂದಮೇಲೆ ನುಟ್ ಎಂಬಲ್ಲಿ ಟಕಾರವು ಇತ್ತಾದ್ದರಿಂದ ಟಿತ್ವಾತ್ ಆದ್ಯವಯವಾಗಲಾಗಿ ಅನರಾ ಎಂದೇ ಆಗಬೇಕು ನಾರಾ ಎಂದು ಆಗುವಂತಿಲ್ಲ ಎಂದು ಶಂಕಾಭಿಪ್ರಾಯವಾಗಿದೆ.

**ಸಮಾಧಾನ** :- ಅರ ಎಂಬ ಶಬ್ದಕ್ಕೂ ನಞ್ನ್ನು ಸಮಾಸವನ್ನು ಹೇಳಿದಾಗ ಮಾತ್ರ ನಲೋಪೋನಞಃ ಎಂಬ ಸೂತ್ರದಿಂದ ನಕಾರಕ್ಕೆ ಲೋಪ ಬಂದನಂತರ ನುಡಾಗಮವು ಬಂದು, ಅನರಾ ಎಂದಾಗುವುದಾದರೂ ಇಲ್ಲಿ ನಞ್ ಸಮಾಸವನ್ನೇ ಹೇಳುವುದಿಲ್ಲ. ನ ಶಬ್ದದಿಂದಲೇ ವಿಗ್ರಹವನ್ನು ಹೇಳಿ ನ ಸಮಾಸವೆಂದೇ ಹೇಳುತ್ತೇವೆ. ಆದಕಾರಣ ನ ಲೋಪೋ ನಞಃ ಎಂಬ ಸೂತ್ರದ ಕಾರ್ಯವಾದ ನ ಲೋಪಕ್ಕೆ ಅವಕಾಶವೇ ಇಲ್ಲ. ಆದಕಾರಣ ನ + ಅರಾಃ = ನಾರಾಃ ಎಂಬ ರೂಪದ ಸಿದ್ಧಿಯ ವಿಷಯದಲ್ಲಿ ಯಾವ ಬಾಧಕವೂ ಇಲ್ಲ ಎಂಬುದಾಗಿ ಒಂದು ಸಮಾಧಾನ.

ಆದುದರಿಂದಲೇ ನೈಕಧಾ ಎಂಬಲ್ಲಿ ನ + ಏಕಧಾ = ನೈಕಧಾ ಎಂದು "ನ" ಶಬ್ದದಿಂದಲೇ ಸಮಾಸವನ್ನು ಹೇಳಿದ್ದಾರೆ. ಅಲ್ಲಿಯೂ "ಸಹಸುಪ್" (ಪಾ. ಸೂ. ೬-೧-೪) ಎಂಬ ಸೂತ್ರದಿಂದ, "ಸುಬಂತಂಸುಬಂತೇನ ಸಮಸ್ಯತೇ" ಎಂದು ಹೇಳಿ ಸಮಾಸವಾಗಿ ನೈಕಧಾ ಎಂದು ಹೇಳಿರುವಂತೆ "ನಾಂತರೀಯಕಮ್" ಇತ್ಯಾದಿ ಉದಾಹರಣೆಗಳೂ ಪ್ರಸಿದ್ಧಗಳೇ ಆಗಿವೆ.

**ಶಂಕಾ**:- ಆದರೆ ತತ್ವಪ್ರಕಾಶಿಕಾಟೀಕಾದಲ್ಲಿ ದೋಷಾರಶಬ್ದಯೋಃ ಅಭಿನ್ನಾರ್ಥತ್ವಾತ್, ನಞಶ್ಚ ವಿರುದ್ಧಾರ್ಥತ್ವಾತ್ ದೋಷವಿರುದ್ಧಾಃ ಗುಣಾಃ ನಾರಾಃ ತದಾಶ್ರಯೋ ನಾರಾಯಣಃ ಎಂದು ನಞ್ ಸಮಾಸವನ್ನೇ ಹೇಳಿದ್ದಾರೆ. ಮತ್ತು ನಞಃ ಅಭಾವಾರ್ಥತ್ವಾತ್ ಅರಾಶ್ರಯೋನಭವತೀವಾ ನಾರಾಯಣಃ ಎಂದು ಎರಡೂ ಕಡೆಗಳಲ್ಲಿ ನಞ್ ಸಮಾಸವನ್ನೇ

ಹೇಳಿರುವರು. ನ ಎಂಬ ಶಬ್ದದಿಂದ ಸಮಾಸವನ್ನು ಹೇಳಿಲ್ಲ. ಪ್ರಕೃತದಲ್ಲಿ ಟೀಕಾದಲ್ಲಿ ಹೇಳಿರುವ ನಞ್ ಸಮಾಸವಾದರೆ, ನಲೋಪ, ನುಡಾಗಮಗಳಿಗೆ ಪ್ರಸಕ್ತಿ ಇರುವುದರಿಂದ ಅನಾರಾಯಣ ಎಂದೇ ಆಗಬೇಕಲ್ಲವೇ ? ನಾರಾಯಣ ಎಂದು ಹೇಗೆ ರೂಪವು ಸಿದ್ಧವಾಗುವುದು ಎಂಬ ಮತ್ತೊಂದು ಶಂಕೆಗೆ ಮತ್ತೆ ಅವಕಾಶವಾಗುತ್ತದೆ.

**ಸಮಾಧಾನ:-** ಟೀಕಾದಲ್ಲಿ ಸಮಾಸವನ್ನು ಹೇಳಿರುವುದಕ್ಕೆ ಯಾವ ಬಾಧಕವೂ ಇಲ್ಲವೆಂದು ತಾತ್ಪರ್ಯ ಚಂದ್ರಿಕಾಕಾರರು ಟೀಕಾಕಾರರ ನಿರ್ವಚನವನ್ನು ಸಮರ್ಥಿಸಿರುತ್ತಾರೆ/ಅದರ ವಿವರಣೆಯು ಈ ರೀತಿ ಇದೆ.

ನಲೋಪೋ ನಞಃ ಎಂಬುದು (ಪಾ. ಸೂ. ೬-೩-೭೩) ನೇ ಸೂತ್ರವಾಗಿದೆ. ಇದಕ್ಕೆ ಮುಂಚೆ ರಾತ್ರೇಃ ಕೃತಿವಿಭಾಷಾ (ಪಾ. ಸೂ. ೬-೩-೭೨) ಎಂಬ ಮತ್ತೊಂದು ಸೂತ್ರವೊಂದಿದೆ. ಈ ಹಿಂದಿನ ಸೂತ್ರದಲ್ಲಿರುವ "ವಿಭಾಷಾ" ಎಂಬ ಪದವನ್ನು ಅದಕ್ಕೆ ಮುಂದಿರುವ ನಲೋಪೋನಞಃ ಎಂಬ ಸೂತ್ರದಲ್ಲಿ ಅನುವೃತ್ತಿ ಮಾಡಲಾಗಿದೆ. ಈ ರೀತಿ ಅನುವೃತ್ತವಾದ ವಿಭಾಷಾಪದವು ವ್ಯವಸ್ಥಿತ ವಿಭಾಷಾರೂಪವಾಗಿದೆ. ಕ್ವಚಿತ್ ನಿತ್ಯಂ ಸ್ಯಾತ್ಕ್ವಚಿತ್ ನೈವಸ್ಯಾತ್" ಎಂದು ವ್ಯವಸ್ಥಿತ ವಿಭಾಷಾಪದವಾಗಿದೆ. ಅಂದರೆ ಕೆಲವು ಕಡೆ ನಿತ್ಯವಾಗಿ ಬರುತ್ತದೆ. ಕೆಲವು ಕಡೆ ಬರುವುದೇ ಇಲ್ಲ. ಎಂದು ವ್ಯವಸ್ಥಿತ ವಿಕಲ್ಪವಾಗಿ ಇರುತ್ತದೆಯೆಂದು ವೃತ್ತಿವ್ಯಾಖ್ಯಾನವಾದ ನ್ಯಾಸದಲ್ಲಿ ಹೇಳಿರುವುದರಿಂದ ನಾವು ಅದಕ್ಕೆ ಪ್ರಯತ್ನವನ್ನೇ ಮಾಡಬೇಕಾಗಿಲ್ಲ. ಆದಕಾರಣ ಕೆಲವು ಕಡೆ ನಞ್ ಸಂಬಂಧಿಯಾದ ನಕಾರಕ್ಕೆ ಲೋಪವೇ ಬಾರದಿರುವುದರಿಂದ ನಾರಾ ಎಂಬಲ್ಲಿಯೂ ಸಹ ನಞ್ ಸಮಾಸವನ್ನು ಹೇಳಿದಾಗ್ಯೂ ನಞ್ ಸಂಬಂಧಿಯಾದ ನಕಾರಕ್ಕೆ ಲೋಪವೇ ಇಲ್ಲವಾದಮೇಲೆ ನುಡಾಗಮಕ್ಕೆ ಪ್ರಸಕ್ತಿಯೇ ಇಲ್ಲವಾದ್ದರಿಂದ ನಾರಾ ಎಂಬ ರೂಪವು ಅಬಾಧಿತವಾಗಿ ಸಾಧುವೇ ಆಗಿದೆ ಎಂದು ಅಭಿಪ್ರಾಯ.

**ಶಂಕಾ:-** ನಲೋಪೋನಞಃ (ಪಾ. ಸೂ. ೬-೩-೭೩) ಎಂಬ ಸೂತ್ರದಲ್ಲಿ ಅದರ ಹಿಂದಿನ ಸೂತ್ರವಾದ ರಾತ್ರೇಃ ಕೃತಿ ವಿಭಾಷಾ (ಪಾ. ಸೂ. ೬-೩-೭೨) ಎಂಬ ಸೂತ್ರದಿಂದ ವಿಭಾಷಾ ಎಂಬ ಪದವನ್ನು ಅನುವೃತ್ತಿಗೊಳಿಸಿ ನ ಲೋಪಕ್ಕೆ ವ್ಯವಸ್ಥಿತ ವಿಭಾಷಾರೀತ್ಯಾ ಅವಕಾಶವಿಲ್ಲದಿರುದರಿಂದ ನುಡಾಗಮಕ್ಕೂ ಅವಕಾಶವಾಗದೇ ನಾರಾ ಎಂಬ ರೂಪವು ಸಿದ್ಧವಾಗಿ ನಾರಾಯಣ ಎಂಬುದಾಗಿ ಸಿದ್ಧಿಸುವುದಾದರೆ,

ಇದೇ ಕ್ರಮದಿಂದ

**ಶಂಕಾ:-** "ನಭ್ರಾಣ್, ನಪಾ ನ್ನವೇದಾ, ನಾಸತ್ಯಾ, ನಮುಚಿ, ನಕುಲ, ನಖ, ನಪುಂಸಕ, ನಕ್ಷತ್ರ, ನಕ್ರ, **ನಾಕೇಷುಪ್ರಕೃತ್ಯಾ** (ಪಾಣಿಸೂ ೬-೩-೭೫) ಎಂಬ ಸೂತ್ರದಲ್ಲಿ ನ, ಪದಗಳ ರೂಪಗಳೂ ಸಿದ್ಧಿಸುವುದರಿಂದ, ಅವುಗಳನ್ನು ಸೂತ್ರಕಾರರು ನ ಲೋಪವಿಲ್ಲದಂತೆ ನಿಪಾತ ಮಾಡಬೇಕಾಗಿರಲಿಲ್ಲ. ಅಂದರೆ ನ ಲೋಪಾಭಾವಕ್ಕಾಗಿ ನಿಪಾತ ಮಾಡಿರುವ ಸೂತ್ರವು ವ್ಯರ್ಥ.

ನ ಭ್ರಾಜತೇ ಇತಿ ನಭ್ರಾಟ್, ನಪಾತೀತಿ ನಪಾತ್ (ಪಾತಿ ಶತ್ರೂನ್) ನವೇತ್ತೀತಿ ನವೇದಾಃ (ವೇತ್ತೇಃ ಅಸುನ್ ಪ್ರತ್ಯಯಾಂತಃ) ನಾಸತ್ಯಾಃ ಸತ್ಸು ಸಾಧವಃ ಸತ್ಯಾಃ ನಸತ್ಯಾಃ ಅಸತ್ಯಾಃ ನ ಅಸತ್ಯಾಃ ನಾಸತ್ಯಾಃ ನಮುಚಿಃ - ನಮುಂಚತೀತಿ ನಮುಚಿಃ, ನಕುಲಃ = ನಾಸ್ಯ ಕುಲಮಸ್ತೀತಿ ನಕುಲಃ, ನಾಸ್ಯಖಮಸ್ತೀತಿ ನಖಮ್, ನಸ್ತ್ರೀನಪುಮಾನ್ ನಪುಂಸಕಮ್, ನಕ್ಷತ್ರಮ್ - ನಕ್ಷರತಿ, ಕ್ಷೀಯತ ಇತಿವಾ ನಕ್ಷತ್ರಮ್, ನಕ್ರಾಮತೀತಿ ನಕ್ರಃ, ನಾಸ್ಮಿನ್ ಅಕಮಿತಿ ನಾಕಮ್' ಎಂಬ ಹನ್ನೊಂದು ಉದಾಹರಣೆಗಳಲ್ಲೂ ನಞ್ ಸಂಬಂಧಿಯಾದ ನಕಾರಕ್ಕೆ ಲೋಪವು ವ್ಯವಸ್ಥಿತ ವಿಭಾಷಾರೀತ್ಯಾ ಬಾರದೇ ರೂಪಸಿದ್ಧಿಯಾಗುತ್ತಿರುವಾಗ ನಿಪಾತ ಮಾಡಿರುವ ಸೂತ್ರವೇ ವ್ಯರ್ಥವಲ್ಲವೇ ?

ಮತ್ತು ನಗೋಽಪ್ರಾಣಿಷ್ವನ್ಯತರಸ್ಯಾಮ್ (ಪಾ. ಸೂ. ೬-೩-೭೭) ಎಂಬಲ್ಲಿಯೂ ಸಹ ನಕಾರಕ್ಕೆ ಲೋಪವಿಲ್ಲದಂತೆ, ನಗ ಶಬ್ದದ ನಿಷ್ಪತ್ತಿಯೂ ಆಗುತ್ತಿರುವಾಗ ಈ ಸೂತ್ರವೂ ವ್ಯರ್ಥವಾಯಿತಲ್ಲಾ ಎಂಬ ಶಂಕೆಗೆ ಅವಕಾಶವಾಗುತ್ತದೆ.

ಇದಕ್ಕೆ ಸಮಾಧಾನವು ಹೀಗಿದೆ.

**ಸಮಾಧಾನಃ-** "ನಾಸೂಯಾ ಕರ್ತವ್ಯಾ ಯತ್ರಾನುಗಮಃ ಕ್ರಿಯತೆ" ಎಂಬುದಾಗಿ ವ್ಯಾಕರಣ ಭಾಷ್ಯಕಾರರಿಂದ ಉಕ್ತವಾಗಿರುವ ನ್ಯಾಯದಂತೆ. ಎಲ್ಲಿ ನಿರ್ವಾಹವು ಸರ್ವಥಾ ಸಾಧ್ಯವಿಲ್ಲವೋ ಅಂತಹ ಕಡೆ ಸುಪ್ರಸಿದ್ಧವಾದ ಪ್ರಯೋಗದಲ್ಲಿರತಕ್ಕ ಶಬ್ದದ ರೂಪಸಿದ್ಧಿಗಾಗಿ, ಅದರ ನಿರ್ವಾಹಕ್ಕಾಗಿ ಮಾಡಿರತಕ್ಕ ಪ್ರಯತ್ನದಿಂದ ಮತ್ತೊಂದು ಕಡೆ ಬೇರೆ ಬೇರೆ ಶಬ್ದಗಳ ರೂಪಸಿದ್ಧಿಗಾಗಿ, ಸೂತ್ರಕಾರರು ಸೂತ್ರವಲ್ಲಿ ನಿಪಾತ ಮಾಡಿರುವ ಸೂತರ್ಕ್ಕೇನೇ ವೈಯ್ಯರ್ಥ್ಯವನ್ನು ಆಪಾದಿಸಬಾರದು." ಆದಕಾರಣ ನಭ್ರಾಟ್ ಇತ್ಯಾದಿ ಸೂತ್ರಕ್ಕಾಗಲಿ, ನಗೋಽಪ್ರಾಣಿಷು ಇತ್ಯಾದಿ ಸೂತ್ರಕ್ಕಾಗಲಿ ವೈಯ್ಯರ್ಥವನ್ನು ಹೇಳುವಂತಿಲ್ಲ ಎಂದು ಅಭಿಪ್ರಾಯ.

ಅಥವಾ ನಭ್ರಾಣ್ನಪಾನ್ನಾಸತ್ಯಾ ನಮುಚಿ ನಕುಲ ನಖ ನಪುಂಸಕ, ನಕ್ಷತ್ರ, ನಕ್ರನಾಕೇಷುಪ್ರಕೃತ್ಯಾ (ಪಾ. ಸೂ. ೬-೩-೭೫) ನಗೋಽಪ್ರಾಣಿಷ್ವನ್ಯತರಸ್ಯಾಮ್ ೬-೩-೭೭) ಎಂಬ ಸೂತ್ರಗಳಲ್ಲಿ ಹೀಗೆ ಕ್ರಮವಾಗಿ ನಾಕಶಬ್ದದಲ್ಲೂ ನಗ ಶಬ್ದದಲ್ಲೂ, ನಕಾರಕ್ಕೆ ಲೋಪವಿಲ್ಲದಂತೆ ನಾಕ ಎಂದೂ, ನಗ ಎಂದೂ ನಿಪಾತ ಮಾಡಲಾಗಿದೆಯೋ ಅದರಂತೆ ಆ ಸೂತ್ರಗಳಲ್ಲಿ ನಾರಾಯಣ ಶಬ್ದವನ್ನೂ ಸಹ ಪರಿಗಣಿಸಿ, ಇದೂ ಸಹ ಸೂತ್ರ ನಿಷ್ಪನ್ನ ಎಂದೇ ಹೇಳಿದರೂ, ನಾರಾಯಣ ಎಂಬ ಶಬ್ದವು ಸಾಧುವಾಗಿರುತ್ತದೆಯೆಂಬ ಅಭಿಪ್ರಾಯದಿಂದ ಟೀಕಾಕಾರರು "ನಗನಾಕಾದಿ ಶಬ್ದವತ್ ಅಯಂ ಶಬ್ದೋಽಪ್ಯಾತವ್ಯಃ" ಎಂದು ಹೇಳಿದ್ದಾರೆ ಎಂದು ಅಭಿಪ್ರಾಯ.

**ಶಂಕಾಃ-** ನಾರ ಎಂಬ ಶಬ್ದದ ನಿಷ್ಪತ್ತಿಯಲ್ಲಿ ಮತ್ತೊಂದು ಶಂಕೆಗೆ ಅವಕಾಶವಿದೆ.

ನೄನ್ ಉಪಪದವಾಗಿರುವ ರೀಙ್ಷಯೇ ಎಂಬ ಧಾತುವಿಗೆ ಕರಣಾರ್ಥದಲ್ಲಿ ಡಪ್ರತ್ಯಯವು ಬಂದಾಗ ನರೀಯತೇ ಅನೇನ ಎಂ. ನಿರ್ವಚನದಿಂದ "ನರಂ" ಎಂದಾಗುತ್ತದೆ. "ನಾರಂ" ಎಂದಾಗುವುದಿಲ್ಲ. ಆದ್ದರಿಂದ "ನಾರಂ" ಎಂಬ ರೂಪದ ಸಾಧುತ್ವವು ಹೇಗೆ ?

**ಸಮಾಧಾನ :-** ನರೀಯತೇ ಅನೇನ ಎಂದು ಕರಣಾರ್ಥದಲ್ಲಿ ಔಣಾದಿಕವಾದ ಡಪ್ರತ್ಯಯವು ಬಂದಾಗ ಡಕಾರಕ್ಕೆ ಲೋಪವಾಗಿ ಟಿಲೋಪವಾದಾಗ "ನರಂ" ಎಂದು ರೂಪವೇನೋ ಆಗುತ್ತದೆ. ಆದರೆ ಆಮೇಲೆ ಪ್ರಜ್ಞಾದಿಭ್ಯಶ್ಚ (ಪಾ. ಸೂ. ೫-೪-೩೮) ಎಂಬ ಸೂತ್ರದಿಂದ ಪ್ರಜಾನಾತೀತಿಪ್ರಜ್ಞಃ, ಪ್ರಜ್ಞ‌ಏವಪ್ರಾಜ್ಞಃ ಪ್ರಜ್ಞ, ಶಬ್ದಾತ್ಸ್ವಾರ್ಥೇ ಅಣ್ಪ್ರತ್ಯಯಃ" ಎಂದು ಪ್ರಜ್ಞ ಮೊದಲಾದ ಪ್ರಾತಿಪದಿಕಗಳಿಗೆ ಸ್ವಾರ್ಥದಲ್ಲಿ ಅಣ್ಪ್ರತ್ಯಯವು ಸೂತ್ರವಿಹಿತವಾಗಿರುವುದರಿಂದ, ಸ್ವಾರ್ಥಿಕವಾದ ಅಣ್ಪ್ರತ್ಯಯವು ಬಂದನಂತರ "ತದ್ಧಿತೇಷ್ವಚಾಮಾದೇಃ (ಪಾ. ಸೂ. ೭-೨-೧೧೭) ತದ್ಧಿತಸಂಜ್ಞಕವಾದ ಞಿತಿ, ಣಿತಿಚ ಪ್ರತ್ಯಯೇಪರತಃ ಅಂಗಸ್ಯ ಅಚಾಮಾದೇಃ ಅಚಃ ಸ್ಥಾನೇ ವೃದ್ಧಿರ್ಭವತಿ ಉದಾ:- ಗಾರ್ಗ್ಯಃ ಎಂಬಂತೆ ಇಲ್ಲಿಯೂ ಸಹ ಸ್ವಾರ್ಥಿಕವಾದ ಪ್ರತ್ಯಯವು ಬಂದು ಆದಿಯಾದ ಅಚ್ ವೃದ್ಧಿ ಬಂದು "ನಾರಂ" ಎಂದು ರೂಪವು ಸಿದ್ಧಿಸುವುದು. ಮತ್ತು

ಯಸ್ಯೇತಿ ಚ (ಪಾ. ಸೂ. ೬-೪-೧೪೮) ಈಕಾರ ಮತ್ತು ತದ್ಧಿತಸಂಜ್ಞಕ ಪ್ರತ್ಯಯವು ಬಂದಾಗ ಇಲ್ಲಿ ಅಕಾರಕ್ಕೆ ಲೋಪವು ಬಂದು ನ ಕಾರಕ್ಕೆ ವ್ಯವಸ್ಥಿತ ವಿಭಾಷಾರೀತ್ಯಾ ಲೋಪವಿಲ್ಲವಾದುದರಿಂದ ''ನಾರಂ'' ಎಂಬ ರೂಪ ಸಿದ್ಧಿಗೆ ಯಾವ ಬಾಧಕವೂ ಇಲ್ಲವೆಂದು ಪರಮಾಭಿಪ್ರಾಯ.

**ಶಂಕಾ:-** ''ನಾರಂ'' ಎಂಬ ಶಬ್ದವು ಈ ರೀತಿ ನಿಷ್ಪನ್ನವಾದರೂ ಸಹ ಇದಕ್ಕೂ ಮಿಗಿಲಾಗಿ ಮತ್ತೊಂದು ಶಂಕೆಗೆ ಅವಕಾಶವಿದೆ.

ನಾರ ಎಂಬ ಶಬ್ದದ ಮುಂದೆ ವೃದ್ಧಿರ್ಯಸ್ಯಾಚಾಂತದ್ವೃದ್ಧಮ್ (ಪಾಣಿನಿ ಸೂ. ೧-೧-೭೩) ನೇ ಸೂತ್ರದ ವೃತ್ತಿಯಲ್ಲಿ ''ಯಸ್ಯ ಸಮುದಾಯಸ್ಯ ಅಚಾಂ ಮಧ್ಯೆ ಆದಿವೃದ್ಧಿಃ ಸ್ಯಾತ್ತದ್ವೃದ್ಧಸಂಜ್ಞಂ ಸ್ಯಾತ್'' ಎಂಬ ವೃತ್ತ್ಯನುಸಾರವಾಗಿ, ನಾರಂ ಎಂಬಲ್ಲಿ ಆದಿಯಾದ ಅಚ್ಗೆ ವೃದ್ಧಿ ಬಂದು ವೃದ್ಧಸಂಜ್ಞೆ ಬಂದಿರುವ ಪ್ರಯುಕ್ತ ''ವೃದ್ಧಾಚ್ಛಃ (ಪಾ. ಸೂ. ೪-೨-೧೧೪) ಎಂಬ ಸೂತ್ರದಿಂದ ವೃದ್ಧಸಂಜ್ಞಕವಾದ ಪ್ರಾತಿಪದಿಕಕ್ಕೆ ಛ ಎಂಬ ಪ್ರತ್ಯಯವು ಬರುತ್ತದೆ.

ಉದಾ:- ಗಾರ್ಗೀಯ, ಶಾಲೀಯ.

ಅದರಂತೆ ಇಲ್ಲೂ ನಾರಶಬ್ದದ ಮುಂದೆ ಛ ಪ್ರತ್ಯಯವು ಬಂದರೆ, ''ಆಯನೇಯೀನೀಯಿಯಃ ಫ, ಢ, ಖ, ಛಘಾಂ ಪ್ರತ್ಯಯಾದೀನಾಮ್ (ಪಾ. ಸೂ. ೭-೧-೨) ಎಂಬ ಸೂತ್ರದಂತೆ, ಯಥಾಸಂಖ್ಯವಾಗಿ ಪ್ರತ್ಯಯಾದಿಭೂತವಾದ

**ಫಕ್ಕೆ = ಆಯನ್ ಎಂಬಾದೇಶವೂ ಉದಾ:- ನಾಡಾಯನಃ**

**ಢಕ್ಕೆ = ಏಯ್ ಎಂಬ ಆದೇಶವೂ ಉದಾ:- ಸೌಪರ್ಣೇಯಃ**

**ಖಕ್ಕೆ = ಈನಾದೇಶವೂ ಬಂದು ಉದಾ:- ಆಢ್ಯಕುಲೀನಃ, ಶ್ರೋತ್ರಿಯಕುಲೀನಃ**

**ಘಕ್ಕೆ = ಕ್ಷತ್ರಿಯಃ (ಕ್ಷತ್ರಾದ್ಘಃ) ಎಂದು ರೂಪಗಳು ಸಿದ್ಧಿಸುತ್ತವೆ.**

ಪ್ರಕೃತದಲ್ಲಿ ಗಾರ್ಗೀಯ ಎಂಬಲ್ಲಿ ರೂಪವಾದಂತೆ ಇಲ್ಲಿ ನಾರಶಬ್ದವು ವೃದ್ಧಸಂಜ್ಞಕವಾಗಿರುವುದರಿಂದ ವೃದ್ಧಾಚ್ಛ ಎಂಬ ಸೂತ್ರದಿಂದ ಛ ಪ್ರತ್ಯಯವು ಬಂದು ಅದಕ್ಕೆ ''ಈಯ್'' ಆದೇಶ ಬಂದರೆ, ''ನಾರೀಯಂ'' ಎಂದೇ ಆಗುತ್ತದೆ. ''ನಾರಂ'' ಎಂಬ ರೂಪವು ಹೇಗೆ ? ಎಂದು ಮತ್ತೊಂದು ಶಂಕೆಯ ಅಭಿಪ್ರಾಯ.

**ಸಮಾಧಾನ:-** ವಾ ನಾಮಧೇಯಸ್ಯವೃದ್ಧಸಂಜ್ಞಾ (ವಾರ್ತಿಕ ೫೭೬)

ಉದಾ:- 'ದೈವದತ್ತ', ದೇವದತ್ತೀಯಃ।

ಈ ವಾರ್ತಿಕವು ಏಙ್ಪ್ರಾಚಾಂದೇಶೇ (ಪಾ. ಸೂ. ೧-೧-೭೫) ಎಂಬ ಸೂತ್ರದಲ್ಲಿ ಪಠಿತವಾಗಿದೆ. ಪ್ರಿಂಟಾಗಿರತಕ್ಕ ಸಿದ್ಧಾಂತ ಕೌಮುದಿಯಲ್ಲಿ ''ವಾನಾಮಧೇಯಸ್ಯ ವೃದ್ಧಸಂಜ್ಞಾವಕ್ತವ್ಯಾ'' ಎಂದು ವಾರ್ತಿಕ ಪಾಠವಿದೆ.

ಅದರಂತೆ ವೃದ್ಧಸಂಜ್ಞೆಯು ವಿಕಲ್ಪವಾಗಿರುವ ಪ್ರಯುಕ್ತ, ವೃದ್ಧಾತ್ ಛ ''ಇತ್ಯಾದಿಯಾದ ಕಾರ್ಯಗಳಾವುವೂ ಇಲ್ಲವಾದುದರಿಂದ, ''ನಾರೀಯಂ'' ಎಂದಾಗದೇ ''ನಾರಂ'' ಎಂದೇ ರೂಪವು ಅಂತಿಮವಾಗಿ ಸಿದ್ಧಿಸುತ್ತಿರುವುದರಿಂದ ''ನಾರಂ'' ಎಂಬುದೇ ಸಾಧುರೂಪವೆಂದು ಪರಮಾಭಿಪ್ರಾಯ.

**ಶಂಕಾ** :- ನಭ್ರಾಣ್ನಪಾತ್ ಇತ್ಯಾದಿ ಸೂತ್ರದಲ್ಲಾಗಲಿ, ನಗೋಽಪ್ರಾಣಿಷು ಇತ್ಯಾದಿ ಸೂತ್ರದಲ್ಲಾಗಲಿ ನಾರಾಯಣ ಶಬ್ದವೇ ಕಂಡುಬಂದಿಲ್ಲ. ಹೀಗಿರುವಾಗ ನಗನಾಕಾದಿಶಬ್ದವತ್ ಎಂದು ಟೀಕಾದಲ್ಲಿ ಅದರ ದೃಷ್ಟಾಂತವನ್ನು ಕೊಟ್ಟಿರುವುದು ಹೇಗೆ ಕೂಡುತ್ತದೆ ?

**ಸಮಾಧಾನ** :- ನಭ್ರಾಟ್ ಇತ್ಯಾದಿ ಎರಡೂ ಸೂತ್ರಗಳಲ್ಲಿ ನಾರಾಯಣ ಶಬ್ದವು ಶ್ರುತವಾಗದೇ ಇದ್ದರೂ ಅದರ ಜೊತೆಗೆ ನಾರಾಯಣ ಶಬ್ದವೂ "ಉಪಸಂಖ್ಯೇಯ" ಆದರಂತೆ ಇದನ್ನೂ ಸೇರಿಸಿಕೊಳ್ಳಬೇಕು ಎಂದು ಟೀಕಾವಾಕ್ಯಕ್ಕೆ ಅಭಿಪ್ರಾಯ.

**ಅಥವಾ** :- ಸ್ತ್ರೈಣಾರ್ಥಃ ಎಂಬ ಪ್ರಾಮಾಣಿಕವಾದ ಪ್ರಯೋಗವಿದೆ. ಇಲ್ಲಿ "ಸ್ತ್ರೀಪುಂಸಾಭ್ಯಾಂನಞ್ಸ್ನಞೌ ಭವನಾತ್ (ಪಾ. ಸೂ. ೪-೧-೮೭) ಎಂಬ ಸೂತ್ರದಿಂದ ಸ್ತ್ರೀಶಬ್ದದ ಮುಂದೆ ಸ್ತ್ರಿಯಾ ಅಪತ್ಯಂ, ಸ್ತ್ರೀಷುಭವಃ, ಸ್ತ್ರೀಣಾಂಸಮೂಹಃ, ಎಂಬ ಅರ್ಥದಲ್ಲಿ ನಞ್ಪ್ರತ್ಯಯವು ಬರಲಾಗಿ, ಸ್ತ್ರೀ, ನಞ್ ಎಂದಾಗಿ, ಞಿತ್ತ್ವಾದ್ದರಿಂದ ಆದಿವೃದ್ಧಿ ಬಂದು, ನಕಾರಕ್ಕೆ ಣತ್ವವು ಬಂದ್ದದು "ಸ್ತ್ರೈಣ" ಎಂದು ರೂಪವಾಗಿ ಸ್ತ್ರೈಣ ಶಬ್ದಕ್ಕೂ ಅರ್ಥ ಶಬ್ದಕ್ಕೂ ಸಮಾ ಮಾಡಿದಾಗ ಸ್ತ್ರೈಣಾರ್ಥಃ ಎಂದು ರೂಪವು ಸಿದ್ಧಿಸುತ್ತದೆ.

ಇಲ್ಲಿ ಸ್ತ್ರೀಪುಂಭ್ಯಾಂ ಇತ್ಯಾದಿ ಸೂತ್ರದಿಂದ ಬಂದಿರುವ ನಞ್ ಸಂಬಂಧಪಟ್ಟ ನಕಾರಕ್ಕೆ ಲೋಪವು ಬಾರದಿರಲು "ನಲೋಪೋನಞಃ" ಎಂಬ ಸೂತ್ರದಲ್ಲಿ ರಾತ್ರೇಃ ಕೃತಿವಿಭಾಷಾ ಎಂಬ ಸೂತ್ರದಿಂದ ಅನುವೃತ್ತವಾದ ವಿಭಾಷಾ ಆದ್ದರಿಂದ, ನಲೋಪಾಭಾವವು ಬಂದು "ಸ್ತ್ರೈಣ" ಎಂದು ರೂಪ ನಿಷ್ಪತ್ತಿಯನ್ನು ಹೇಳಿರುವಂತೆ, ಪ್ರಕೃತವಾದ ನಾರಾಯಣ ಶಬ್ದದಲ್ಲೂ ಶಬ್ದದಲ್ಲೂ ಸಹ ನಞ್ ಎಂದು ಹೇಳಿದರೂ ಅದಕ್ಕೆ ಲೋಪವು ಬಾರದೇ "ನಾರಾಯಣ" ಎಂದೇ ರೂಪವು ಸಿದ್ಧಿಸುವುದು ಎಂದು ಅಭಿಪ್ರಾಯ.

ಹಾಗಿಲ್ಲದ ಪಕ್ಷದಲ್ಲಿ ಸ್ತ್ರೈಣ ಎಂಬಲ್ಲಿಯೂ ಸಹ, ನಲೋಪವಾದರೆ ನುಡಾಗಮವು ಬಂದು "ಸ್ತ್ರಾಯನಾರ್ಥ" ಎಂದೇ ಅನಿಷ್ಟರೂಪವು ಆಗಬೇಕಾದೀತು. ಆದಕಾರಣ ನಲೋಪಕ್ಕೆ ಅವಕಾಶವಿಲ್ಲದಂತೆ ವ್ಯವಸ್ಥಿತ ವಿಭಾಷಾ ಪಕ್ಷವನ್ನು ಅನುಸರಿಸಿ ಸ್ತ್ರೈಣ ಎಂದಾಗುವಂತೆ "ನಾರಾಯಣ" ಎಂಬಲ್ಲಿಯೂ ರೂಪವು ಸಿದ್ಧಿಸುವುದರಲ್ಲಿ ಬಾಧಕವಿಲ್ಲವೆಂದು ಅಭಿಪ್ರಾಯ.

ಮತ್ತೊಂದು ಬಗೆಯಾದ ಸಮಾಧಾನವನ್ನೂ ಸಹ ತಾತ್ಪರ್ಯ ಚಂದ್ರಿಕಾಕಾರರು ತೋರಿಸಿರುತ್ತಾರೆ.

ನಲೋಪೋನಞಃ (೬-೩-೭೩) ಎಂಬ ಸೂತ್ರದಲ್ಲಿ ರಾತ್ರೇಃ ಕೃತಿ ವಿಭಾಷಾ (೬-೩-೭೨) ಎಂಬ ಪೂರ್ವ ಸೂತ್ರದಿಂದ ವಿಭಾಷಾ ಎಂಬ ಪದಕ್ಕೆ ಅನುವೃತ್ತಿಯೇ ಇಲ್ಲವೆಂಬ ಪಕ್ಷದಲ್ಲೂ ಸಹ ನಾರಾಯಣ ಎಂಬ ರೂಪಸಿದ್ಧಿಗೆ ಯಾವ ತೊಂದರೆಯೂ ಇರುವುದಿಲ್ಲ.

**ಹೇಗೆಂದರೆ** :- ವ್ಯಾಕರಣ ಶಾಸ್ತ್ರಕಾರರ ರೀತ್ಯಾ "ಅ, ಮಾ, ನೋ, ನಾ ಪ್ರತಿಷೇಧಃ" ಎಂಬುದಾಗಿ ನಿಷೇಧಾರ್ಥಕವಾದ ನಞ್ ಭಿನ್ನವಾದ ನ ಶಬ್ದವೂ ಇದೆ. ಅಂತಹ ನ ಶಬ್ದದಿಂದ ನ · ಅರಾಃ = ನಾರಾಃ ಎಂದು ನ

ಶಬ್ದದಿಂದ ಸಮಾಸವನ್ನು ನ + ಏಕಧಾ = ನೈಕಧಾ ಎಂಬಲ್ಲಿ ಹೇಳುವಂತೆ ಹೇಳಿದಾಗ ಯಾವ ತೊಂದರೆಯೂ ಇಲ್ಲ. ಇಲ್ಲಿ ನಞ್ ಸಮಾಸವೇ ಇಲ್ಲವಾದ ಪ್ರಯುಕ್ತ ನಲೋಪೋನಞಃ ಎಂಬ ಸೂತ್ರದ ಪ್ರವೃತ್ತಿಗೆ ಅವಕಾಶವೇ ಇಲ್ಲ ಎಂದು ಅಭಿಪ್ರಾಯ.

ಆದ್ದರಿಂದಲೇ ಸಿದ್ಧಾಂತ ಕೌಮುದಿಯಲ್ಲಿ ನ + ಏಕಧಾ = ನೈಕಧಾ ಇತ್ಯಾದಿ ಸ್ಥಳಗಳಲ್ಲಿ ನ ಶಬ್ದದಿಂದ ಸಮಾಸವೆಂದು ಹೇಳಿದ್ದಾರೆ, ನಞ್ ಸಮಾಸವೆಂದು ಹೇಳಿಲ್ಲ.

ನಾರಾಃ - ಅಯನಂ ಯಸ್ಯಸಃ ಎಂದಾಗಲಿ, ನಾರಾಣಾಂ - ಅಯನಂ = ನಾರಾಯಣ ಎಂದಾಗಲಿ ವಿಗ್ರಹ ಮಾಡಿದಾಗ ಉತ್ತರಪದವಾದ ಅಯನ ಶಬ್ದದಲ್ಲಿನ "ನಕಾರಕ್ಕೆ" ಪೂರ್ವಪದಾತ್ ಸಂಜ್ಞಾಯಾಂ ಅಗಃ (ಪಾ. ಸೂ. ೮-೪-೩) ಎಂಬ ಸೂತ್ರದಿಂದ ಣತ್ವವೆಂದು ಹಿಂದೆಯೇ ತಿಳಿಸಲಾಗಿದೆ.

ಮತ್ತು ಲ್ಯುಟ್ಚ, "ಕರಣಾಧಿಕರಣಯೋಶ್ಚ" ಎಂಬ ಸೂತ್ರದಿಂದ ಲ್ಯುಟ್ ಪ್ರತ್ಯಯವನ್ನು ಹೇಳಿ, ಲ್ಯುಟ್ಗೆ ಟಿತ್ಕರಣವನ್ನು ಮಾಡಿ ಟಿತ್ಕರಣವು ಟಿಡ್ಢಾಣಞ್ ಇತ್ಯಾದಿ ಸೂತ್ರದಲ್ಲಿ ವಿಹಿತವಾದ ಸ್ತ್ರೀಲಿಂಗದ ಙೀಪ್ ಪ್ರತ್ಯಯಕ್ಕಾಗಿ ಎಂದು ಸೂತ್ರಕಾರರ ಅಭಿಪ್ರಾಯವಿರುವುದರಿಂದ, ಲ್ಯುಡಂತವಾದ ಶಬ್ದವು ನಪುಂಸಕ ಮಾತ್ರವಲ್ಲದೆ ಬೇರೆ ಲಿಂಗಗಳಲ್ಲಿಯೂ ಉಂಟೆಂಬ ಅಭಿಪ್ರಾಯಕ್ಕೆ ಅವಕಾಶವಾಗಿರುವ ಪ್ರಯುಕ್ತ ಪುಲ್ಲಿಂಗದಲ್ಲೂ ಲ್ಯುಡಂತ ಶಬ್ದಕ್ಕೆ ಪ್ರಯೋಗ ಮಾಡಿರುವುದು ಪರಮ ಸಾಧುವೇ ಆಗಿರುವುದರಿಂದ "ನಾರಾಯಣಃ" ಎಂಬ ಪುಲ್ಲಿಂಗ ಪ್ರಯೋಗಕ್ಕೆ ಯಾವ ಬಾಧಕವೂ ಇರುವುದಿಲ್ಲ.

ಈ ಅಭಿಪ್ರಾಯದಿಂದ ತಾತ್ಪರ್ಯ ಚಂದ್ರಿಕಾಕಾರರು "ಲ್ಯುಟಃ ಟಿತ್ಕರಣ ಸಾಮರ್ಥ್ಯೇನ ಅಯನಶಬ್ದೋ ಅಧಿಕರಣೇ ತ್ರಿಲಿಂಗ ಇತಿ ಪುಲ್ಲಿಂಗತ್ವಂ ಚ ದ್ರಷ್ಟವ್ಯಮ್" ಎಂದು ಸಿದ್ಧಾಂತಗೊಳಿಸಿರುವರು. ಏವಂ ಚ "ನಾರಾಯಣಃ" ಎಂಬ ಶಬ್ದದ ರೂಪವು ಪರಮಸಾಧುವೇ ಆಗಿದೆ. ತಂತ್ರದೀಪಿಕಾಕಾರರು ಪ್ರಥಮಸೂತ್ರದ ವ್ಯಾಖ್ಯಾನದಲ್ಲಿ ಬ್ರಹ್ಮಶಬ್ದವು "ಗುಣಪೂರ್ತ್ಯರ್ಥಃ ಸನ್ ಚಿದಚಿದ್ವಿಲಕ್ಷಣ ವಿಷ್ಣುವಾಚೀ" ಎಂದು ಬ್ರಹ್ಮಶಬ್ದ ಪರ್ಯಾಯವಾದ ವಿಷ್ಣು ಶಬ್ದವನ್ನು ಬಳಸಿರುವುದರಿಂದ ಪೂರ್ವಪ್ರಸ್ತಾವದಲ್ಲೂ, ಭಾಷ್ಯಕಾರರು ಆ ವಿಷ್ಣುವಾಚಕವಾದ ನಾರಾಯಣ ಪದವನ್ನು ಬ್ರಹ್ಮಪದದ ಪರ್ಯಾಯವಾಗಿ ಹೇಳಿರುವುದರಿಂದ ಜಿಜ್ಞಾಸುವರ್ಗವು "ನಾರಾಯಣ ಶಬ್ದದ" ನಿಷ್ಪತ್ತಿಯನ್ನು ಅವಶ್ಯ ತಿಳಿದಿರಲೇಬೇಕಾಗಿರುವುದರಿಂದ ತತ್ತ್ವಪ್ರಕಾಶಿಕಾದಲ್ಲೂ ನ್ಯಾಯಸುಧಾದಲ್ಲೂ ನಾರಾಯಣ ಶಬ್ದದ ವಿವಿಧ ವ್ಯುತ್ಪತ್ತಿಗಳನ್ನೂ ನಿರ್ವಚನಗಳನ್ನೂ ತೋರಿಸಿರುವುದರಿಂದ ಇಷ್ಟು ವಿಸ್ತಾರವಾಗಿ ನಾರಾಯಣ ಶಬ್ದದ ಬಗ್ಗೆ ವಿಮರ್ಶಿಸಬೇಕಾಯಿತು.

ಇನ್ನು ಮುಂದೆ ಶಿವಸರ್ವೋತ್ತಮತ್ವವಾದಿಗಳ ಮತವನ್ನು ಸಪ್ರಮಾಣವಾಗಿ ಶ್ರುತಿ ಸ್ಮೃತಿವಚನಗಳಿಂದ ನಿರಾಕರಿಸಿ, ಶ್ರೀಹರಿ ಸರ್ವೋತ್ತಮತ್ವವನ್ನು ಸಪ್ರಮಾಣವಾಗಿ ನಿರೂಪಿಸಿ "ಬ್ರಹ್ಮಜಿಜ್ಞಾಸಾ ಕರ್ತವ್ಯಾ" ಎಂಬ ಪ್ರಥಮಸೂತ್ರಕ್ಕೆ ಗುಣಪರಿಪೂರ್ಣ ನಾರಾಯಣ ಜಿಜ್ಞಾಸಾಕರ್ತವ್ಯಾ ಎಂಬುದೇ ಬ್ರಹ್ಮಸೂತ್ರಕಾರರಾದ ಶ್ರೀವೇದವ್ಯಾಸರಿಗೆ ಪರಮಸಮ್ಮತವಾದ ಅರ್ಥ ಎಂಬುದನ್ನೂ ಶ್ರೀಮದಾನಂದತೀರ್ಥರಿಂದ ಸಮರ್ಥಿಸಲ್ಪಟ್ಟ ಪರಮಪ್ರಾಮಾಣಿಕವಾದ ಅರ್ಥ ಎಂಬುದನ್ನೂ ನಿರೂಪಿಸುತ್ತೇವೆ.

# "ವಿಷ್ಣೋಃ ಸರ್ವೋತ್ತಮತ್ವಂಚ ಸರ್ವದಾಪ್ರತಿಪಾದಯ"
# ಶ್ರೀ ಹರಿಸರ್ವೋತ್ತಮತ್ವದ ಸಮರ್ಥನೆ.
# (ಹರಿಃಪರತರಃ)

ಶ್ರೀಹರಿ ಸರ್ವೋತ್ತಮತ್ವಜ್ಞಾನವೇ ತಾರಕ, ಪರಮಾತ್ಮನ ಪ್ರೀತಿಜನಕ, ಮೋಕ್ಷದಾಯಕ.

ಚತುರ್ಮುಖಬ್ರಹ್ಮ, ರುದ್ರ, ಶಕ್ತಿ, ಸ್ಕಂದ, ಸೂರ್ಯ, ಗಣಪತಿ, ಮೊದಲಾದ ತಾರತಮ್ಯದಲ್ಲಿ ಅಧಮರಾದ ಇತರ ದೇವತೆಗಳ ಸರ್ವೋತ್ತಮಜ್ಞಾನವಾಗಲಿ, ನಿರ್ವಿಶೇಷ, ನಿರ್ಧರ್ಮಕ, ನಿರಾಕಾರ ಮತ್ತು ಅವಾಚ್ಯವು ಬ್ರಹ್ಮ ಎಂಬ ಜ್ಞಾನವಾಗಲಿ, ಪ್ರಪಂಚಮಿಥ್ಯಾತ್ವಜ್ಞಾನವೇ ಆಗಲಿ ಇವೆಲ್ಲವೂ ತಾಮಸ ಮಾರಕ, ಪರಮಾತ್ಮನ ಅಪ್ರೀತಿಜನಕ, ನಿತ್ಯ ನರಕಪ್ರಾಪಕವೆಂಬುದರಲ್ಲಿ ಯಾವ ಸಂದೇಹವೂ ಇರುವುದಿಲ್ಲ.

ಪ್ರಕೃತದಲ್ಲಿ ಬ್ರಹ್ಮಮೀಮಾಂಸಾ ಶಾಸ್ತ್ರಾಧ್ಯಯನಕ್ಕೆ ಅತ್ಯವಶ್ಯವಾಗಿ ಇರಬೇಕಾದ ಗುಣಗಳು ಯಾರಿಗಿಲ್ಲವೋ ಅಂತಹವರಿಗೆ ಶಾಸ್ತ್ರಾಧ್ಯಯನದಲ್ಲಿ ಅಧಿಕಾರವೇ ಇರುವುದಿಲ್ಲ.

ಅಧಿಕಾರಿಯಾದ ಚೇತನನಿಗೆ ಪ್ರಪ್ರಥಮವಾಗಿ ಅತ್ಯವಶ್ಯವಾಗಿ ಇರಬೇಕಾದ ಗುಣವು "ವಿಷ್ಣುಭಕ್ತಿರ್ಹಿ ಸರ್ವೇಷಾಂ ಸದ್ಗುಣಾನಾಂ ಸ್ವಲಕ್ಷಣಮ್" (ಕಥಾಲಕ್ಷಣ) ಎಂಬಂತೆ ಶ್ರೀಹರಿಭಕ್ತಿಯು ಎಲ್ಲ ಸಜ್ಜನರಿಗೂ ಅವ್ಯಭಿಚಾರಿಯಾದ ಅತ್ಯಾವಶ್ಯಕವಾದ ಲಕ್ಷಣವಾಗಿದೆ. ಅಂತಹ ವಿಷ್ಣುಭಕ್ತಿಯ ಗುಣದ ವಿವರಣೆಯು ಇತರ ದೇವತಾಪೇಕ್ಷಯಾ ಉತ್ತಮತ್ವವೂ ಅಂದರೆ ಶ್ರೀಹರಿ ಸರ್ವೋತ್ತಮತ್ವವೂ ಮೊದಲನೆಯ ಅಂಶವಾಗಿ ಪರಿಗಣಿತವಾಗಿದೆ.

ಗೀತಾತಾತ್ಪರ್ಯಟೀಕಾದಲ್ಲಿ ಟೀಕಾ ವಾಕ್ಯವು ಈ ರೀತಿ ಇದೆ.

ಕೀದೃಶೀ ವಿಷ್ಣುಭಕ್ತಿರಿತ್ಯತ ಆಹ-

**ಅರ್ಥ** :- ವಿಷ್ಣು ಭಕ್ತಿಯು ಎಂತಹುದು ಎಂಬುದಕ್ಕೆ ಉತ್ತರವಾಗಿ ಹೇಳುತ್ತಿದ್ದಾರೆ.

**ಗೀತಾ ತಾತ್ಪರ್ಯ**:-

**"ಬ್ರಹ್ಮರುದ್ರರಮಾದಿಭ್ಯೋಽಪ್ಯುತ್ತಮತ್ವಂ ಸ್ವತಂತ್ರತಾಮ್ ।**
**ಸರ್ವಸ್ಯ ತದಧೀನತ್ವಂ ಸರ್ವಸದ್ಗುಣಪೂರ್ಣತಾಮ್ ॥**
**ನಿರ್ದೋಷತ್ವಂಚ ವಿಜ್ಞಾಯ ವಿಷ್ಣೋಸ್ತ್ವಖಿಲಾಧಿಕಃ ।**
**ಸ್ನೇಹೋ ಭಕ್ತಿರಿತಿ ಪ್ರೋಕ್ತಃ ಸರ್ವೋಪಾಯೋತ್ತಮೋತ್ತಮಃ ॥**

ತೇನೈವ ಮೋಕ್ಷೋ ನಾನ್ಯೇನ ದೃಷ್ಟ್ಯಾದಿ ತಸ್ಯ ಸಾಧನಮ್ ॥ ಇತಿ ॥ ಗೀತಾತಾತ್ಪರ್ಯ ॥

ಅತಿಪರಿಪಕ್ವಭಕ್ತಿಯೋಗವು ಅತ್ಯರ್ಥಪ್ರಸಾದದ್ವಾರಾ ಮೋಕ್ಷಸಾಧನವು.

ಅಂತಹ ಅತಿಪರಿಪಕ್ವಭಕ್ತಿಯೋಗಕ್ಕೆ ಬಿಂಬಾಪರೋಕ್ಷವು ಸಾಧನವು. ಅತಿಪರಿಪಕ್ವ ಭಕ್ತಿಯೋಗಕ್ಕೆ ಸಾಧನವಾದ ಬಿಂಬಾಪರೋಕ್ಷಕ್ಕೆ ಪರಿಪಕ್ವಭಕ್ತಿಯೋಗವು ಸಾಧನವು. ಅಂತಹ ಬಿಂಬಾಪರೋಕ್ಷಕ್ಕೆ ಸಾಧನವಾದ ಪರಿಪಕ್ವಭಕ್ತಿಯೋಗಕ್ಕೆ ಧ್ಯಾನವು ಸಾಧನವು. ಧ್ಯಾನವು ಬಿಂಬಾಪರೋಕ್ಷಕ್ಕೆ ಸಾಧನವಾದ ಪರಿಪಕ್ವಭಕ್ತಿಯೋಗಕ್ಕೆ ಸಾಧನವಾದುದರಿಂದ ಭಗವದಪರೋಕ್ಷಕ್ಕೆ ಸಾಧನವೆಂದು ಹೇಳಲಾಗಿದೆ.

ಅಂತಹ ಧ್ಯಾನವಾದರೋ "ಧ್ಯಾನಂ ನಿಶ್ಚಿತತತ್ತ್ವಸ್ಯ" ಎಂದು ಹೇಳಿರುವ ಪ್ರಕಾರ ತತ್ತ್ವನಿಶ್ಚಯವಾದ ಮೇಲೆ ಆಗಬೇಕಾಗಿರುವ ಪ್ರಯುಕ್ತ ಅಂತಹ ತತ್ತ್ವನಿಶ್ಚಯವು ಶ್ರವಣಮನನಗಳಿಂದ ಆಗುತ್ತದೆಯೆಂದು ಹೇಳಲ್ಪಟ್ಟಿದ್ದರೂ ಸಹ ಸಾಕ್ಷಾತ್ತಾಗಿ ಶ್ರವಣಮನನಗಳಿಗೆ ಧ್ಯಾನಸಾಧನತ್ವವು ಇರುವುದಿಲ್ಲ. ವಿಷ್ಣುಭಕ್ತಿದ್ವಾರಾ ಧ್ಯಾನಸಾಧನತ್ವವು ವಿವಕ್ಷಿತವಾಗಿದೆ. ಅಂದರೆ :-

ಭಕ್ತಿಪೂರ್ವಕವಾದ ಶ್ರವಣದಿಂದ ಅಜ್ಞಾನವು ಪರಿಹಾರವಾಗಿ ತತ್ತ್ವಜ್ಞಾನವು ಹುಟ್ಟುತ್ತದೆ ಪಕ್ವ ಭಕ್ತಿಪೂರ್ವಕವಾದ ಮನನದಿಂದ ಸಂದೇಹಭ್ರಾಂತಿಗಳು (ಪ್ರತಿಬಂಧಕಗಳು) ಪರಿಹಾರವಾಗಿ ತತ್ತ್ವನಿಶ್ಚಯವುಂಟಾಗುತ್ತದೆ. ತತ್ತ್ವನಿಶ್ಚಯ ಪೂರ್ವಕವಾದ ಧ್ಯಾನವು ಪರಿಪಕ್ವಭಕ್ತಿಪೂರ್ವಕವಾಗಿ ಬಿಂಬಸಾಕ್ಷಾತ್ಕಾರಕ್ಕೆ ಕಾರಣವಾಗುತ್ತದೆ. ಅಂತಹ ಬಿಂಬಸಾಕ್ಷಾತ್ಕಾರವು ಅತಿ ಪರಿಪಕ್ವಭಕ್ತಿಯೋಗಪೂರ್ವಕವಾಗಿ ಪರಮಾತ್ಮನ ಅತ್ಯರ್ಥಪ್ರಸಾದದ್ವಾರಾ ಮೋಕ್ಷಕ್ಕೆ ಕಾರಣವಾಗುವುದೆಂದು ಸಂಗ್ರಹವಾಗಿ ಹೇಳಿದಂತಾಗುವುದು.

ಅಂತೂ ಅಧಿಕಾರಸಂಪತ್ತಿನಲ್ಲಿ ಪರಿಗಣಿಸಲ್ಪಟ್ಟ ಗುಣಗಳ ಪೈಕಿ ಹರಿಭಕ್ತಿಯು ಅತಿಮುಖ್ಯವಾದ ಗುಣವಾದುದರಿಂದಲೇ 'ಅಧಿಕಾರಶ್ಲೋಕೋ ಭಾಗವತತಂತ್ರೇ' ಎಂದು ಭಾಷ್ಯಕಾರರು ಉದಾಹರಿಸಿರುವ ಪ್ರಮಾಣಗ್ರಂಥದಲ್ಲಿ 'ಭಕ್ತಿಮಾನ್ಪರಮೇ ವಿಷ್ಣೌ' ಎಂದು ಪ್ರಪ್ರಥಮವಾಗಿ ಹರಿಭಕ್ತಿಯು ಪರಿಗಣಿಸಲ್ಪಟ್ಟಿದೆ.

ಹಿಂದೆಯೇ ತಿಳಿಸಿದಂತೆ ಶ್ರೀಹರಿಭಕ್ತಿಯು ಯಾರಿಗೆ ಇಲ್ಲವೋ ಅವನು ವೈಷ್ಣವರ ಕುಲದಲ್ಲಿ ಜನಿಸಿದವನಾದಾಗ್ಯೂ ಅಂತಹವನಿಗೆ ಬ್ರಹ್ಮಜಿಜ್ಞಾಸಾದಲ್ಲಿ ಅಧಿಕಾರವೇ ಇಲ್ಲವೆಂದು ತತ್ತ್ವಪ್ರಕಾಶಿಕಾಟೀಕಾದಲ್ಲಿ ಸ್ಪಷ್ಟವಾಗಿ ಆದಿಪದ ದಿಂದ ಸೂಚಿಸಿ ನಿರೂಪಿಸಿರುವ ಅಂಶವನ್ನು ಹಿಂದೆಯೇ ವಿವರಿಸಿದ್ದೇವೆ.

ಭಕ್ತ್ಯೈವ ವೃಣುತೇ ವಿಷ್ಣುಃ ಭಕ್ತ್ಯಾ ದದ್ಯಾತ್ ನಿಜಂ ಪದಮ್ ।
ಭಕ್ತ್ಯೈವ ದೃಶ್ಯತೇ ನಿತ್ಯಂ ಭಕ್ತ್ಯಾ ದದ್ಯಾತ್ ನಿಜಂ ಪದಮ್ ॥ ಎಂಬ ಪಾದ್ಮವಚನವೂ,
ದಾನತೀರ್ಥತಪೋಯಜ್ಞಪೂರ್ವಾಃ ಸರ್ವೇಽಪಿ ಸರ್ವದಾ ।
ಅಂಗಾನಿ ಹರಿಸೇವಾಯಾಂ ಭಕ್ತಿಸ್ತ್ವೇಕಾ ವಿಮುಕ್ತಯೇ ॥
ಭವಿಷ್ಯತ್ಪರ್ವವಚನಮ್ ॥
ಯಮೇವೈಷ ವೃಣುತೇ ತೇನ ಲಭ್ಯಃ ।
ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಮ್ ॥ (ಕಠೋಪನಿಷತ್ ೨ - ೨೩)
"ಅತ್ರ ಭಕ್ತಮೇವ ವೃಣುತ ಇತಿ ಪ್ರಸಿದ್ಧಿಃ" ಇತಿ ಪ್ರಮೇಯದೀಪೋಕ್ತರೀತ್ಯಾ ವೃಣುತ ಇತ್ಯನೇನ
ಭಕ್ತತ್ವಂ ಸೂಚಿತಮ್ ।
ತತ್ತ್ವಪ್ರದೀಪೇ ತು "ಯಮೇವೈಷಃ" ಪರಮಾತ್ಮಾ ಭಕ್ತಿದಾನೇನ "ವೃಣುತೇ" ಸ್ವೀಕರೋತಿ
ತೇನ ಪ್ರಾಪ್ಯೋ ಯತಃ ತಸ್ಯೈವ ಸ್ವಾಂ ತನುಂ ಪ್ರಕಾಶಯತೀತ್ಯುಕ್ತಮ್ ॥
ಭಕ್ತ್ಯಾ ತ್ವನನ್ಯಯಾ ಶಕ್ಯ ಅಹಮೇವಂವಿಧೋಽರ್ಜುನ ।
ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ ॥ (ಭಗವದ್ಗೀತಾ ೧೧-೫೪)

ಇತ್ಯಾದಿ ವಚನಗಳು ಭಕ್ತಿಯ ಆವಶ್ಯಕತೆಯನ್ನು ತೋರಿಸುತ್ತಲಿವೆ.

ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ ಇತ್ಯಾದಿಯಾದ ಬ್ರಹ್ಮಮೀಮಾಂಸಾಶಾಸ್ತ್ರದ ಅಧ್ಯಯನಕ್ಕೆ ಪ್ರವರ್ತಿಸುವ ಯೋಗ್ಯನಾದ ಅಧಿಕಾರಿಗೆ ಶ್ರೀ ವಿಷ್ಣುಭಕ್ತಿಯು ಇರಲೇಬೇಕು. ಅಂತಹ ವಿಷ್ಣುಭಕ್ತಿಯ ಅಂಗವಾಗಿರತಕ್ಕ ಪ್ರಧಾನ ಪ್ರಮೇಯ ವಾದ ಶ್ರೀಹರಿಸರ್ವೋತ್ತಮತ್ವಜ್ಞಾನವಂತೂ ಅತಿ ದೃಢವಾಗಿರಬೇಕು. ಆದರ ಧಾರ್ಢ್ಯಕ್ಕಾಗಿಯೇ ಶ್ರೀಮದಾಚಾರ್ಯರು ಸೂತ್ರಭಾಷ್ಯದಲ್ಲೂ, ಅನೂವ್ಯಾಖ್ಯಾನದಲ್ಲೂ ಮತ್ತು ತಮ್ಮ ಸಕಲ ಗ್ರಂಥಗಳಲ್ಲೂ ಯತಿಪ್ರಣವಕಲ್ಪದಲ್ಲೂ "ವಿಷ್ಣೋಸ್ಸರ್ವೋತ್ತಮತ್ವಂ ಚ ಸರ್ವದಾಪ್ರತಿಪಾದಯ"ಎಂಬ ಸಂದೇಶವನ್ನು ಅನುಗ್ರಹಿಸಿರುವುದಲ್ಲದೇ, ಪ್ರಕರಣಗ್ರಂಥ ಗಳಲ್ಲಿ "ತಸ್ಮಾದ್ವಿಷ್ಣೋಃ ಸರ್ವೋತ್ತಮತ್ವೇ ಏವ ಮಹಾ ತಾತ್ಪರ್ಯಂ ಸರ್ವಾಗಮಾನಾಮ್"ಎಂಬುದಾಗಿ ಅನೇಕ ಸಂದರ್ಭ ಗಳಲ್ಲಿ ಸಾಧಿಸಿ ತೋರಿಸಿರುತ್ತಾರೆ. ನಿಶ್ಚಯಿಸರುತ್ತಾರೆ.

ಆದ್ದರಿಂದ ಸಕಲ ಮುಕ್ತಿಯೋಗ್ಯಚೇತನರಿಗೆ ಅತ್ಯಂತ ಅಗತ್ಯವಾಗಿರಬೇಕಾದ ಶ್ರೀಹರಿಯ ಸರ್ವೋತ್ತಮತ್ವ ಜನಕಗಳಾದ ಶ್ರೀಮದಾನಂದತೀರ್ಥರು ಉದಾಹರಿಸಿರುವ ಪ್ರಮಾಣಗಳ ಪುಂಜದಲ್ಲಿ ಕೆಲವನ್ನು ಮಾತ್ರ ಆರಿಸಿಕೊಂಡು ಅದರ ಸರಳವಾದ ಅರ್ಥ ತಾತ್ಪರ್ಯಗಳನ್ನು ಬರೆದು ಮುಂದುವರೆಯುತ್ತೇವೆ. ಈ ಎಲ್ಲಾ ನಿರೂಪಣೆಗಳೂ ತಂತ್ರ ದೀಪಿಕಾಗ್ರಂಥದಲ್ಲಿನ ಜಿಜ್ಞಾಸಾಧಿಕರಣದ ಒಂದೊಂದು ವಾಕ್ಯದಲ್ಲಿನ ಗಂಭೀರವಾದ ಪದಗಳ ನಿಗೂಢವಾದ ಅರ್ಥಗಳ ಮತ್ತು ಅಭಿಪ್ರಾಯಗಳ ಪ್ರತಿಪಾದನೆಯೇ ಆಗಿವೆ.

ಶ್ರೀಹರಿಯ ಗುಣೋತ್ಕರ್ಷಪ್ರತಿಪಾದನೆಯು ಆ ಸರ್ವೋತ್ತಮದೇವತೆಯ ಗುಣೋತ್ಕರ್ಷಜ್ಞಾನಕ್ಕೆ ಕಾರಣವಾಗಿದೆ. ಇಂತಹ ಗುಣೋತ್ಕರ್ಷಜ್ಞಾನವನ್ನು ಅತಿದೃಢವಾಗಿ ಉಳ್ಳ ಭಕ್ತನ ವಿಷಯದಲ್ಲಿ ಶ್ರೀಹರಿಗೆ ಹೆಚ್ಚುಪ್ರೀತಿ ಎಂಬುದಾಗಿ ಪ್ರಮಾಣಗಳು ಘೋಷಿಸುತ್ತಲಿವೆ.

ಶ್ರೀಹರಿಯು ಸುಪ್ರೀತನಾದರೆ ಮೋಕ್ಷವನ್ನು ಕರುಣಿಸುತ್ತಾನೆಂದೂ ಶ್ರುತಿವಚನವು ಸ್ಪಷ್ಟಪಡಿಸುತ್ತಿರುವುದಲ್ಲದೆ ಸಕಲ ವೇದಗಳೂ ಶ್ರೀಹರಿಯನ್ನೇ ಪ್ರಶಂಸಿಸುತ್ತವೆಯೆಂದು ಹೇಳುತ್ತಲಿವೆ.

"ನ ತಾದೃಶೀ ಪ್ರೀತಿರೀಶ್ಯಸ್ಯ ವಿಷ್ಣೋರ್ಗುಣೋತ್ಕರ್ಷಜ್ಞಾತರಿ ಯಾದೃಶೀ ಸ್ಯಾತ್।

ತತ್ಪ್ರೀಣನಾನ್ಮೋಕ್ಷಮಾಪ್ನೋತಿ ಸರ್ವಸ್ತತೋ ವೇದಾಃತತ್ಪರಾಸ್ಸರ್ವ ಏವ ।।ಇತಿಶ್ರುತಿಃ।।

**ತಾತ್ಪರ್ಯ** :-ಶ್ರೀಹರಿಗೆ ತನ್ನ ಗುಣೋತ್ಕರ್ಷವನ್ನು ತಿಳಿದವನ ವಿಷಯದಲ್ಲಿ ಅತಿಪ್ರೀತಿಯು ಇರುವಂತೆ ಬೇರೆ ಯಾರಲ್ಲೂ ಇರುವುದಿಲ್ಲಾ. ಆದ್ದರಿಂದ ಗೀತಾಚಾರ್ಯನಾದ ಶ್ರೀಕೃಷ್ಣ ಪರಮಾತ್ಮನು "ಜ್ಞಾನೀತ್ವಾತ್ಮೈವಮೇ ಮತಮ್"ಎಂದು ಹೇಳಿರುತ್ತಾನೆ.

"ಜ್ಞಾನೀಪ್ರಿಯತಮೋಽತೋ ಮೇ ಜ್ಞಾನೇನಾಸೌ ಬಿಭರ್ತಿ ಮಾಮ್"ಇತ್ಯಾದಿ ವಚನಗಳು ಇದೇ ಅಭಿಪ್ರಾಯ ವುಳ್ಳವುಗಳಾಗಿವೆ.

(೧) ಜಗನ್ಮಾತೆಯಾದ ಶ್ರೀಮನ್ನಾರಾಯಣನ ಪತ್ನಿಯಾದ ರಮಾದೇವಿಯು ಋಗ್ವೇದದಸಂಹಿತಾಮಂತ್ರದಲ್ಲಿ ತನಗೆ ಬ್ರಹ್ಮಾದಿದೇವತೆಗಳು ಅಧೀನರಾಗಿರುವರೆಂದು ಹೇಳಿ"ವರೋ ದಿವಾ" ಇತ್ಯಾದಿ ವಾಕ್ಯಗಳಿಂದ "ಮಮಯೋನಿಃ ಅಪ್ಸ್ವಂತಃ ಸಮುದ್ರೇ" ಎಂಬುದಾಗಿ ವಿಷ್ಣುವನ್ನು ತನಗೂ ಕಾರಣವನ್ನಾಗಿ ಹೇಳಿರುವಳು.

ಆ ಮಂತ್ರಪಾಠವು ಈ ರೀತಿ ಇದೆ.

"ಪರೋದಿವಾ ಪರಏನಾಪೃಥಿವ್ಯಾ, ಪರೋ ದೇವೇಭಿಃ, ಅಸುರೈಃ (ಕಿಂಬಹುನಾ) ಯದಸ್ತಿ ಅಹಂತು ಮಹಿನಾಏತಾವತೀಬಭೂವ (ಋಗ್ವೇದಸಂ.೧೦- ೧೨೫ =೮) ಯಂ ಕಾಮಯೇ ತಂ ತಂ ಉಗ್ರಂ ಕೃಣೋಮಿ ತಂ ಬ್ರಹ್ಮಾಣಂತಮೃಷಿಂ ತಂ ಸುಮೇಧಾಮ್ (ಋಗ್ವೇದ ಸಂ. ೧೦.೧೨೫-೫) ಇತ್ಯುಕ್ತ್ವಾ ಮಮಯೋನಿ ರಪ್ಸ್ವ ಅಂತಃ ಸಮುದ್ರೇ"

**ಅರ್ಥ**:- ದಿವಾ = ದಿವಃ = ಶ್ರಿಯಃ = ಶ್ರೀದೇವಿಗಿಂತಲೂ, ಪರಃ = ಉತ್ತಮನು, ಏನಾ = ಏತಸ್ಯಾಃ = ಭೂಮ್ಯಾಶ್ಚ ಪೃಥಿವ್ಯಾಃ ಭೂಮ್ಯಾಶ್ಚ = ಈಭೂಮಿಗಿಂತಲೂ, ಪರಃ = ಉತ್ತಮನು, ದೇವೇಭಿಃ = ದೇವೇಭ್ಯಃ = ದೇವತೆಗಳಿಗಿಂತಲೂ, ಅಸುರೈಃ = ಅಸುರೇಭ್ಯಶ್ಚ = ಅಸುರರಿಗಿಂತಲೂ, ಪರಃ = ಉತ್ತಮನು, (ಕಿಂಬಹುನಾ = ಹೆಚ್ಚು ಹೇಳತಕ್ಕದ್ದೇನಿದೆ?) ಯದಸ್ತಿ = ಉಂಟೂ ಅನ್ನುವವುದೇನುಂಟೋ, ಅಂತಹ ಎಲ್ಲಕ್ಕಿಂಲೂ, ಪರಃ = ಉತ್ತಮನು, (ಮಹಿನಾ ಏತಾವತೀ) ನಾನಾದರೋ ಮಹಿಮೆಯಲ್ಲಿ ಪರಿಮಿತಳಾಗಿರುತ್ತೇನೆಂದು ರಮಾದೇವಿಯು ನುಡಿದಿದ್ದಾಳೆ.

ಮತ್ತು ಅಹಂ = ನಾನು, ಯಂಯಂ = ರುದ್ರಪದವಿಗೆಯೋಗ್ಯನಾದ ಸಾಧನಪೂರ್ತಿಯಾಗಿ ಉಳ್ಳ ಯಾವ ಯಾವ ಜೀವನನ್ನು, ರುದ್ರಂ ಕರ್ತುಂ ಕಾಮಯೇ = ರುದ್ರನನ್ನಾಗಿ ಮಾಡಲು ಆ ಪದವಿಗೆ ತರಲು, ಕಾಮಯೇ = ಇಚ್ಛಿಸುತ್ತೇನೆಯೋ, (ಪರಮಾತ್ಮನ ಸಂಕಲ್ಪದಂತೆ ಅವನಿಂದ ಪ್ರೇರಿತಳಾಗಿ) ಅಪೇಕ್ಷಿಸುತ್ತೇನೆಯೋ, ತಂತಂ = ಅಂತಹ ವನನ್ನು, ಉಗ್ರಂ =(ಉಗ್ರೋರುದ್ರಃ, ಸಮುದ್ರೇಣಾರ್ಣಾರಾಯಣಃ) = ರುದ್ರನನ್ನಾಗಿ, ಕೃಣೋಮಿ = ಕರೋಮಿ, ಮಾಡುತ್ತೇನೆ. ಹೀಗೆಯೇ ಬ್ರಹ್ಮಪದವಿಗೆ ಯೋಗ್ಯನಾದ ಸಾಧನಪೂರ್ತಿಯಾಗಿ ಉಳ್ಳ ಋಜುವರೇಣ್ಯನನ್ನು ಚತುರ್ಮುಖ ಬ್ರಹ್ಮ ಪದವಿಗೆ ತರುತ್ತೇನೆ.

ಹೀಗೆಯೇ ಋಷಿಂ = ಋಷಿ ಪದವಿಗೆ ಯೋಗ್ಯನಾದ ಜೀವನನ್ನು ಋಷಿಯನ್ನಾಗಿಯೂ, ಸುಮೇಧಸಂಪಾಕರ್ತುಂ ಕಾಮಯೇತಂತಂ ಸುಮೇಧಸಂಕೃಣೋಮಿ = ಕರೋಮಿ . ಇಂತಹ ಚತುರ್ಮುಖ ಬ್ರಹ್ಮಪದವಿಯೇ ಮೊದಲಾದ ಪದವಿಗಳನ್ನು ಕೊಡತಕ್ಕ ಸಾಮರ್ಥ್ಯವನ್ನುಳ್ಳ ನಾನೂ ಸಹ ಪರಿಮಿತವಾದ ಮಹಿಮೆಯುಳ್ಳವಳಾಗಿದ್ದೇನೆ. ಮಮ ಯೋನಿ = ಇಂತಹ ನನಗೂ ಕಾರಣನಾದವನು, ಅಂತಃ ಸಮುದ್ರೇ ಅಪ್ಸು ತಿಷ್ಠತಿ = ಸಮುದ್ರದಲ್ಲಿರುತ್ತಾನೆ. ಇಲ್ಲಿ ಆಧಿಕ್ಯವು ಅಂಪ್ಸ್ವರಾರ್ಥವಾಗಿದೆ. ಗಂಡನ ಹೆಸರನ್ನು ಹೆಂಡತಿಯಾದವಳು ಹೇಳಬಾರದೆಂಬ ಸಂಪ್ರದಾಯಜ್ಞಳಾಗಿರುವ ರಮಾದೇವಿಯೂ ನಾರಾಯಣ ಎಂದೇ ಹೇಳದೇ ಆಪೋನಾರಾ ಇತಿಪ್ರೋಕ್ತಾ ಎಂಬ ವ್ಯಾಸಸ್ಮೃತಿಯ ಅರ್ಥವನ್ನೇ ಅಂತಃಸಮುದ್ರೇ ತಿಷ್ಠತಿ = ಕ್ಷೀರಾಬ್ಧಿಶಾಯಿ. ಪ್ರಳಯೋದಕಶಾಯಿಯಾಗಿರುವನೆಂದು ಹೇಳಿರುತ್ತಾಳೆ.

ಇದರಿಂದ ಬ್ರಹ್ಮನಸತಿಯೇ ಮಹಾಲಕ್ಷ್ಮಿಯೇ ತನಗಿಂತಲೂ ಶ್ರೀಮನ್ನಾರಾಯಣನು ಉತ್ತಮನೆಂದು ಶ್ರೀಹರಿಯ ಸರ್ವೋತ್ತಮತ್ವವನ್ನು ಹೇಳಿರುವಾಗ ಶೈವರು ಹೇಳುವಂತೆ ರುದ್ರಾದಿಗಳ ಸರ್ವೋತ್ತಮತ್ವವು ಹೇಗೆ ತಾನೇ ಸಂಭವಿಸಬಹುದು? ಅನಾದಿಯಾದ, ಅಪೌರುಷೇಯವಾದ, ಸ್ವತಃ ಪ್ರಮಾಣವಾದ ಅಬಾಧಿತಾರ್ಥವನ್ನುಳ್ಳ ವೇದವಾಣಿಗಿಂತ ಮಿಗಿಲಾದ ಪ್ರಮಾಣವು ಇನ್ನಾವುದುಂಟು? ವಿಮರ್ಶಕರೇ ಪರ್ಯಾಲೋಚಿಸಿರಿ:

(೨) ಎರಡನೆಯದಾಗಿ ಚತುರ್ಮುಖ ಬ್ರಹ್ಮನಂತೂ ಪರಮಾತ್ಮನಾದ ಶ್ರೀಮನ್ನಾರಾಯಣನ ನಾಭಿಕಮಲದಲ್ಲಿ ಜನಿಸಿರುವ ಪರಮಾತ್ಮನ ಜ್ಯೇಷ್ಠ ಶ್ರೇಷ್ಠ ಜೀವೋತ್ತಮನಾದ ಪುತ್ರನೇ ಆಗಿರುತ್ತಾನೆ. ಅವನ ತಂದೆಯಾದ ಶ್ರೀಮನ್ನಾರಾಯಣನು ಅವನಿಗಿಂತಲೂ ಉತ್ತಮನೆಂಬಲ್ಲಿ ಲೇಶಮಾತ್ರವೂ ಸಂದೇಹಕ್ಕೆ ಅವಕಾಶವೇ ಇಲ್ಲಾ.

(೩) ಮತ್ತುಬ್ರಹ್ಮದೇವನ ವಿಚಾರವನ್ನು ಹೇಳತಕ್ಕ ಬ್ರಹ್ಮವೈವರ್ತ ಪುರಾಣದಲ್ಲಿ ಚತುರ್ಮುಖನ ವಾಕ್ಯದಲ್ಲೇ ಶ್ರೀಹರಿಯ ಹಿರಿಮೆಯು ವ್ಯಕ್ತವಾಗುತ್ತದೆ.

**ನಾಹಂ ನ ಚ ಶಿವೋಽನ್ಯೇ ಚ ತಚ್ಛಕ್ತ್ಯೇಕಾಂಶಭಾಗಿನಃ।**
**ಬಾಲಃ ಕ್ರೀಡನಕೈರ್ಯದ್ವತ್ ಕ್ರೀಡತ್ಯಸ್ಮಾಭಿರಚ್ಯುತಃ।।೧೩।।**

ಇದರ ಅರ್ಥದ ವಿವರಣೆಯನ್ನು ಹಿಂದೆಯೇ ಬರೆಯಲಾಗಿದೆ.

(೪) ಶಿವೋತ್ಕರ್ಷಪ್ರತಿಪಾದಕವಾದ ಶೈವಸ್ಕಾಂದದಲ್ಲಿನ ಅಚ್ಯುತನನ್ನು ಕುರಿತು ರುದ್ರನು ಆಡಿರುವ ವಾಕ್ಯದಿಂದಲೂ ಶ್ರೀಹರಿಯ ಉತ್ಕರ್ಷವು ಅತ್ಯಂತ ಸ್ಪಷ್ಟವಾಗಿ ತಿಳಿಯುತ್ತಲಿದೆ.

**ಶ್ವಪಚಾದಪಿ ಕಷ್ಟತ್ವಂ ಬ್ರಹ್ಮೇಶಾನಾದಯಃಸುರಾಃ।**
**ತದೈವಾಚ್ಯುತ ಯಾನ್ತ್ಯೇವ ಯದೈವ ತ್ವಂ ಪರಾಙ್ಮುಖಃ।।೧೩।।**

**ತಾತ್ಪರ್ಯ** :- ರುದ್ರನು ಅಚ್ಯುತನನ್ನು ಕುರಿತು ಹೀಗೆ ಹೇಳಿದ್ದಾನೆ.

ಎಲೈ ಅಚ್ಯುತ್ಯನೇ, ನೀನು ನಮ್ಮ ವಿಷಯದಲ್ಲಿ ಪರಾಙ್ಮುಖನಾದರೆ, ಅನುಗ್ರಹವನ್ನು ತೋರದಿದ್ದರೆ,ಆಗ, ಚತುರ್ಮುಖಬ್ರಹ್ಮ, ರುದ್ರನಾದ ನಾನು ಇಂದ್ರಾದಿ ಮಿಕ್ಕ ಎಲ್ಲಾ ದೇವತೆಗಳೂ ಸಹ ನಾಯಿಗೆ ಅನ್ನ ಬೇಯಿಸುವ ಚಂಡಾಲನಿಗಿಂತಲೂ ಅತಿಕ್ಲೇಶಯುಕ್ತವಾದ ಹೀನಸ್ಥಿತಿಗೆ ಈಡಾಗುತ್ತಿದ್ದೆವು. ಆದರೆ ನಾವು ಹಾಗೆ ಆಗಿಲ್ಲಾ . ಯಾವಾಗಲೂ ನಿನ್ನ ಅಧಿನರಾಗಿನಿನ್ನ ಅತ್ಯಂತ ಅನುಗ್ರಹಕ್ಕೆ ಪಾತ್ರರೇ ಆಗಿರುತ್ತೇವೆ. ಎಂದು ಪಾರ್ವತೀಪತಿಯಾದ ಶಿವನು ಪರಮಾತ್ಮನನ್ನು ಕುರಿತು ಹೇಳಿದ್ದಾನೆ. ಇದರಿಂದ ಶಿವನು ಶ್ರೀವಿಷ್ಣುವಿನ ಪರಮಭಕ್ತನೆಂದು ಶಿವನ ಮಾತಿನಿಂದಲೇ ಸ್ಪಷ್ಟ ಪಡುತ್ತದೆ.

ಶ್ರೀ ಮಹಾವಿಷ್ಣುವಿನಿಂದ ಹೇಳಲ್ಪಟ್ಟ ವಿಷಯದಿಂದ ಕೂಡಿದ ಸತ್ತ್ವತಂತ್ರ ಹೆಸರಿನ ಗ್ರಂಥದಲ್ಲಿ ಈ ಕೆಳಗೆ ಬರೆದಿರುವ ವಿಚಾರವನ್ನು ಶ್ರೀ ವಿಷ್ಣುವೇ ಹೇಳಿದ್ದಾನೆ.

ಲಿಂಗಾಲ್ಲಾತವ್ಯತಃ ಪೂರ್ವಂ ಮುಖೋಃ ಬ್ರಹ್ಮತ್ರತಃ ಶತಾತ್।
ಶುಶ್ರಾವೋಗ್ರತಪಾನಾಮ ಯೋಗ್ಯೋ ರುದ್ರಪದಸ್ಯ ಯಃ।।

ಸಾರ್ಧಂ ಪರಾರ್ಧಂ ವಿಷ್ಣೋಸ್ತು ಗುಣಾನ್ವೃತ್ವಾ ಸದೋದ್ಧೃತಃ।
ತತ್ತ್ರಿಭಾಗಂ ಉಪಾಸಾಂ ಚ ಚಕ್ರೇಸಂಧೃತಮಾನಸಃ॥

ದಶಮನ್ವಂತರಂ ಶಕ್ರಪದಯೋಗ್ಯೋಗ ರುತ್ಕೃತಃ।
ಪದಯೋಗ್ಯಾತ್ಸುಮನಸಃ ಸುನಂದೋ ನಾಮ ಚಾಶೃಣೋತ್॥

ಉಪಾಸಾಂಚಕ್ರ ಉದ್ಯುಕ್ತೋ ಮನ್ವಂತರಚತುಷ್ಟಯಮ್।
ಸೂರ್ಯಚಂದ್ರಮಸೋಶ್ಚೈವ ಪದಯೋಗ್ಯೌ ಸುತೇಜಸೌ॥

ಸುರೂಪಃ ಶಾಂತರೂಪಶ್ಚ ಮನ್ವಂತರಚತುಷ್ಟಯಮ್।
ಅಶೃಣ್ವತಾಂ ಸುಮನಸೋ ಮನ್ವಂತರಮುಪಾಸತಾಮ್॥

ತತಃಪ್ರತ್ಯೇಕಶಸ್ತುತೇಸರ್ವೇ ಭಕ್ತ್ಯಾ ಉಗ್ರತಪ ಆದಯಃ।
ಅಪಶ್ಯನ್ ಪರಮಂ ವಿಷ್ಣುಂ ತತ್ತ್ವಸಾಧ್ಯಧಿತಾಃ ಸದಾ॥
ಇತ್ಯುಕ್ತಂ ವಿಷ್ಣುನಾ ಸಾಕ್ಷಾತ್ ಗ್ರಂಥೇಸತ್ತತ್ತ್ವಸಂಜ್ಞಿತೇ॥

(ಸತ್ತತ್ತ್ವ ಗ್ರಂಥ ವಚನಗಳು)

**ಅಭಿಪ್ರಾಯ** :- ತೊಂಭತ್ತೊಂಭತ್ತು ಬ್ರಹ್ಮಮಹಾಕಲ್ಪಗಳಿಗೆ ಮುಂಚಿನ ಬ್ರಹ್ಮಮಹಾಕಲ್ಪದಲ್ಲಿ ಆರಂಭಿಸಿ ಬ್ರಹ್ಮಮಾನದಿಂದ ಪರಿಗಣಿತವಾದ ಎಪ್ಪತ್ತೈದು ವರ್ಷಗಳ ಪರ್ಯಂತವಾಗಿ ಒಂದು ದಿನವೂ ಬಿಡದಂತೆ ಆಗಿದ್ದಬ್ರಹ್ಮಪದವಿಗೆ ಯೋಗ್ಯಚೇತನನಾದ ಲಾತವ್ಯ ಎಂಬ ಹೆಸರಿನ ಋಜು ಜೀವನಿಂದ "ಉಗ್ರತಪಾ"ಎಂಬ ರುದ್ರಪದವಿಗೆ ಯೋಗ್ಯನಾದ ಜೀವನು ಶ್ರೀ ವಿಷ್ಣುವಿನ ಗುಣಗಳನ್ನೂ ಮಹಿಮೆಯನ್ನು ಶ್ರವಣ ಮಾಡಿದ್ದಾನೆ . ಅದೇಬ್ರಹ್ಮಮಾನದಿಂದ ಇಪ್ಪತ್ತೈದು ವರ್ಷ ಗಳ ಕಾಲ ಮನನವನ್ನು ಧ್ಯಾನವನ್ನು ಬಹಳ ಭಕ್ತಿಪೂರ್ವಕವಾಗಿ ಆಚರಿಸಿ ಶ್ರೀವಿಷ್ಣುವಿನ ಸಾಕ್ಷಾತ್ಕಾರವನ್ನು ಪಡೆದಿದ್ದಾನೆ.

ಇಂದ್ರನ ಪದವಿಗೆ ಬರಲು ತಕ್ಕ ಯೋಗ್ಯತೆಯುಳ್ಳ ಸುನಂದನೆಂಬ ಹೆಸರಿನ ದೇವತೆಯು ಗರುಡ ಪದವಿಗೆ ಬರಲು ಯೋಗ್ಯತೆಯುಳ್ಳ ಸುಮನಸ್ಸೆಂಬುವ ದೇವತೆಯ ದೆಸೆಯಿಂದ ಶ್ರೀವಿಷ್ಣುವಿನ ಗುಣಗಳನ್ನು ಶ್ರವಣ ಮಾಡಿ ನಾಲ್ಕು ಮನ್ವಂತರಕಾಲ ಮನನ ಮತ್ತು ಧ್ಯಾನಗಳನ್ನು ಬಹಳ ಭಕ್ತಿಪೂರ್ವಕವಾಗಿ ಆಚರಿಸಿ ತನ್ನ ಯೋಗ್ಯತೆಗೆ ತಕ್ಕಂತೆ ಶ್ರೀವಿಷ್ಣುವಿನ ಸಾಕ್ಷಾತ್ಕಾರವನ್ನು ಪಡೆದಿರುತ್ತಾನೆ. ಪ್ರಶಸ್ತವಾದ ಮನಸ್ಸುಳ್ಳ ಸುಮನೋನಾಮಕನಾದ ದೇವತೆಯ ದೆಸೆಯಿಂದಲೇ,ಸೂರ್ಯ ಪದವಿಗೆ ಬರತಕ್ಕ ಯೋಗ್ಯತೆಯನ್ನುಳ್ಳ ಸುರೂಪ ನೆಂಬುವನೂ,ಚಂದ್ರ ಪದವಿಗೆ ಬರಲು ತಕ್ಕ ಯೋಗ್ಯತೆಯನ್ನುಳ್ಳ ಶಾಂತರೂಪನೆಂಬ ದೇವತೆಯೂ ಸಹ ನಾಲ್ಕು ಮನ್ವಂತರಗಳ ಕಾಲ ಶ್ರೀವಿಷ್ಣುವಿನ ಗುಣಗಳನ್ನು ಶ್ರವಣಮಾಡಿದ ನಂತರ ಮನ್ವಂತರಪರಿಮಿತಕಾಲದಲ್ಲಿ ಮನನ ಧ್ಯಾನಗಳನ್ನು ಬಹಳ ಭಕ್ತಿಪೂರ್ವಕವಾಗಿ ಆಚರಿಸಿ ಆ ಶ್ರೀಹರಿಯ ಅನುಗ್ರಹದಿಂದಲೇ ಪರಮಾತ್ಮನ ಸಾಕ್ಷಾತ್ಕಾರ ಪಡೆದಿರುವ ಸಂಗತಿಯನ್ನು ಶ್ರೀವಿಷ್ಣುವೇ ಹೇಳಿರುವುದನ್ನು ಸತ್ತತ್ತ್ವವೆಂಬ ಗ್ರಂಥವು ತಿಳಿಸುತ್ತದೆ.

ಇದರಿಂದ ಶ್ರೀಹರಿಯ ಅಸೀಮವಾದ ಮಹಾಮಹಿಮೆಯು ಎಂತಹದೆಂಬುದನ್ನು ತಿಳಿಯಬೇಕಾಗಿದೆ.

ರುದ್ರಾದಿ ದೇವತೆಗಳು ಆಯಾ ಪದವಿಗೆ ಬರಬೇಕಾದರೆ ಎಷ್ಟು ಸಾಧನೆಗಳನ್ನು ಮಾಡಿ ಶ್ರೀವಿಷ್ಣುವಿನ ಅನುಗ್ರಹಕ್ಕೆ ಪಾತ್ರರಾಗಿದ್ದಾರೆಂಬುದೂ ಕೂಡ ಗೊತ್ತಾಗುತ್ತದೆ.

ಮತ್ತು ತಾರತಮ್ಯದಿಂದ ಕೂಡಿರುವ ದೇವತಾ ವರ್ಗದಲ್ಲಿ ತಾರತಮ್ಯದಿಂದ ಕೂಡದ ಅವರವರ ಸಾಧನವು ಪೂರ್ತಿಯಾದ ನಂತರ ಮೋಕ್ಷದಲ್ಲಿಯೂ ಆನಂದದಲ್ಲಿ ತಾರತಮ್ಯವಿರುವ ಸಂಗತಿಯು ಆನಂದವಲ್ಲಿಯಲ್ಲಿ ಕಾಣ ಬರುತ್ತಿದೆ.

ಸಾಧನದಲ್ಲಿ ಆಧಿಕ್ಯವು ಇರುವುದರಿಂದಲೇ ಸಾಧ್ಯವಾದ ಫಲರೂಪವಾದ ಆನಂದದಲ್ಲೂ ಆಧಿಕ್ಯವು ಕಂಡುಬಂದಿದೆ. ಆನಂದರೂಪವಾದ ಫಲದಲ್ಲಿ ವ್ಯತ್ಯಾಸವು ಇರಬೇಕಾದರೆ (ತಾರತಮ್ಯವು ಇರಬೇಕಾದರೆ) ಅದಕ್ಕೆ ತಕ್ಕಂತೆ ಸಾಧನದಲ್ಲೂ ತರತಮಭಾವವು ಹೆಚ್ಚು ಹೆಚ್ಚು ಸಾಧನಾನುಷ್ಠಾನವೂ ಇರಲೇಬೇಕು. ಹೆಚ್ಚು ಹೆಚ್ಚು ಸಾಧನಾನುಷ್ಠಾನವನ್ನು ಮಾಡಿದಾಗ್ಯೂ ಸಹ ಫಲದಲ್ಲಿ ವ್ಯತ್ಯಾಸವಿಲ್ಲವೆಂದರೆ, ಯಾವ ವಿವೇಕಿಯೂ ತಾನೆ ಅತಿ ಕಠಿಣವಾದ ಘೋರವಾದ ತಪಸ್ಸಿಗೆ ಪ್ರಯತ್ನಪಟ್ಟಾನು. ಆದ್ದರಿಂದಲೇ ಅವರವರ ಯೋಗ್ಯತೆಗೆ ತಕ್ಕಂತೆ ಫಲದಲ್ಲೂ ಆಧಿಕ್ಯವು (ಮೋಕ್ಷದ ಆನಂದದಲ್ಲೂ ತಾರತಮ್ಯವು) ಕಂಡುಬಂದಿದೆ. ಜ್ಞಾನಿಗಳಾದ ರುದ್ರಾದಿ ದೇವತೆಗಳ ಮೊದಲುಗೊಂಡು ಮುಕ್ತಿಯೋಗ್ಯರಾದ ಮಾನವ ಪರ್ಯಂತವಾದ ಮುಕ್ತಿಯೋಗ್ಯಚೇತನರು ಸಾಧನತಾರತಮ್ಯದಿಂದಲೇ ಮೋಕ್ಷದಲ್ಲೂ ಆನಂದ ರೂಪವಾದ ಫಲದಲ್ಲೂ ತಾರತಮ್ಯವನ್ನುಳ್ಳವರಾಗಿರುತ್ತಾರೆ.

ಬ್ರಹ್ಮಾದಿಮಾನುಷಾಂತಜೀವರು ತಾರತಮ್ಯದಿಂದ ಅನುಷ್ಠಾನ ಮಾಡುವ ಸಾಧನವು ತಾರತಮ್ಯದಿಂದ ಫಲವನ್ನು ಕೊಡತಕ್ಕದ್ದೇ ಆಗಿದೆ. ಅದಕ್ಕೆ ಉದಾಹರಣೆಯಾಗಿ ಕೆಲವು ವಿಚಾರವನ್ನ ಆಗಮ ಪ್ರಮಾಣದಲ್ಲಿ ಉದಾ ಹರಿಸಲಾಗಿದೆ. ಉಗ್ರತಪಾ ಎಂಬ ರುದ್ರಪದವಿಗೆ ಬಂದಮೇಲೂ ಸಹ, ಆ ರುದ್ರನು ಸಕಲ ಸುಖಗಳನ್ನು ಬಿಟ್ಟು ,ಅತಿ ಕ್ಲೇಶ ದಿಂದ ಉಪ್ಪಿನ ನೀರನ್ನು ಕುಡಿಯುತ್ತಾ ಉಪ್ಪಿನ ಸಮುದ್ರದಲ್ಲಿ ಬ್ರಹ್ಮದೇವರ ಹತ್ತು ದೈನಂದಿನ ಕಲ್ಪಕಾಲ ಪರ್ಯಂತವಾಗಿ ಶ್ರೀವಿಷ್ಣುವನ್ನು ಪ್ರಸನ್ನೀಕರಿಸಲು ಅತಿ ಘೋರವಾದ ತಪಸ್ಸನ್ನು ಆಚರಿಸುತ್ತಾನೆ.

ದೇವರಾಜನಾದ ದೇವೇಂದ್ರನು, ಅತಿ ದುಃಖದಿಂದ ಹೋಮಧೂಮವನ್ನು (ಹೋಮದ ಹೊಗೆಯನ್ನು) ಕುಡಿ ಯುತ್ತಾ ಒಂದು ಕೋಟಿ ವರ್ಷಗಳವರೆಗೆ ಭಯಂಕರವಾದ ತಪಸ್ಸನ್ನು ಮಾಡಿದ್ದಾನೆ.

ಸೂರ್ಯನಾದರೋ ತಲೆಯನ್ನು ಕೆಳಗೆ ಮಾಡಿಕೊಂಡು ಹತ್ತು ಸಾವಿರ ವರ್ಷಗಳ ಪರ್ಯಂತ ಶ್ರೀವಿಷ್ಣುವನ್ನು ಕುರಿತು ತಪಸ್ಸನ್ನು ಆಚರಿಸಿದ್ದಾನೆ.

ಯಮ (ಧರ್ಮರಾಜ) ನೂ ಸಹ ಆಕಾಶದಲ್ಲಿ ಮಲಗಿದವನಾಗಿ ಸಕಲ ಸುಖಗಳನ್ನು ತೃಣೀಕರಿಸಿ ಸಾವಿರ ವರ್ಷ ಅತ್ಯಾದರದಿಂದ ಕಿರಣಗಳ ಪಾನಪೂರ್ವಕವಾಗಿ ಶ್ರೀ ಹರಿಭಕ್ತಿಪೂರ್ವಕವಾಗಿ ತಪಸ್ಸನ್ನು ಮಾಡಿ ಶ್ರೀಹರಿಯ ಅನುಗ್ರಹಕ್ಕೆ ಪಾತ್ರನಾಗಿದ್ದಾನೆ.

ಬ್ರಹ್ಮಜ್ಞಾನಿಗಳಾದ ಋಷಿವರೇಣ್ಯರೂ ಸಹ ಐಹಿಕ ಸುಖವನ್ನು ಸರ್ವಥಾ ಹೇಯವೆಂದು ದೂರ ಮಾಡಿ ವೈರಾಗ್ಯಭಾಗ್ಯ ಸಂಪನ್ನರಾಗಿ, ಅತಿ ಕಷ್ಟದಿಂದ ಶ್ರೀ ಹರಿಭಕ್ತಿಯಿಂದ ತಪಸ್ಸೇ ಮೊದಲಾದ ಪ್ರಯತ್ನಶೀಲರಾಗಿರುತ್ತಾರೆ. ಶ್ರೀಹರಿಯ ಪ್ರಸನ್ನತೆಗಾಗಿ ಅತಿಯಾದ ಪ್ರಯತ್ನವನ್ನು ಮಾಡುತ್ತಲೇ ಇರುತ್ತಾರೆ.

ಈ ರೀತಿ ರುದ್ರ, ಇಂದ್ರ, ಸೂರ್ಯ, ಯಮ ಮೊದಲಾದ ದೇವತೆಗಳೂ ಆಯಾ ಪದವಿಗೆ ಬರುವದಕ್ಕೆ ಮುಂಚೆಯೂ, ಆಯಾ ಪದವಿಯನ್ನು ಪಡೆದ ಮೇಲೂ ಸಹ ಯಾವ ಸರ್ವೋತ್ತಮನಾದ ಶ್ರೀಹರಿಯ ಆರಾಧನೆಯಲ್ಲೇ ಭಕ್ತಿಯಿಂದ ತಲ್ಲೀನರಾಗಿರುತ್ತಾರೆಯೋ ಅಂತಹ ಸರ್ವಸ್ವಾಮಿಯಾದ ಶ್ರೀಹರಿಯು ಸರ್ವೋತ್ತಮನೆಂಬಲ್ಲಿ ಸಂದೇಹ ಲೇಶವೂ ಅವಕಾಶವೇ ಇಲ್ಲ.

ಹಿಂದೆ ತಿಳಿಸಿದ ವಿಷಯವನ್ನು ಹೇಳತಕ್ಕ ಪ್ರಮಾಣ ವಾಕ್ಯಗಳು ಈ ರೀತಿ ಇವೆ.

**ದಶಕಲ್ಪಂ ತಪಸ್ತೀರ್ಣಂ ರುದ್ರೇಣ ಲವಣಾರ್ಣವೇ ।**
**ಕೃತ್ವಾ ಸಹಾಪಿ ಸರ್ವಾಣಿ ಕೃಷ್ಣೇನ ಲವಣಾಂಭಸಾ ॥**
**ಶಕ್ರೇಣ ವರ್ಷಕೋಟ್ಯೇಕ್ಯಧೂಮಃ ಪೀತೋಽತಿದುಃಖತಃ ।**
**ವರ್ಷಾಯುತಂ ಚ ಸೂರ್ಯೇಣ ತಪೋಽಕಾರ್ಷ್ ಶಿರಸಾಕೃತಮ್ ॥**
**ಸುದುಃಖೇನ ಸುಖಂ ಕೃತ್ವಾ ಧರ್ಮೇಣಾಕಾಶಶಾಯಿನಾ ।**
**ಪೀತಾ ಮರೀಚಯೋ ವರ್ಷಸಾಹಸ್ರಮತಿಸಾದರಮ್ ॥**
**ಅತಿಕೃಚ್ಛ್ರೇಣ ಕುರ್ವಂತಿ ಯತ್ನಂ ಬ್ರಹ್ಮವಿದೋಽಪಿ ಚ (ಹಿ)।**
**ಇತ್ಯೇತದಖಿಲಂ ಮೋಕ್ಷವಿಶೇಷಾಭಾವತಃ ಕಥಮ್ ॥ (ಅನುವ್ಯಾಖ್ಯಾನ)**

ಋಗ್ವೇದದಲ್ಲಿನ ಎಂಟನೇ ಮಂಡಲ ಏಳನೇ ಸೂಕ್ತದ ಹದಿನೇಳನೇ ಮಂತ್ರವು ಶ್ರೀಹರಿಯ ಅಪಾರವಾದ, ಸಾಕಲ್ಯೇನ ಅಗಮ್ಯವಾದ ಮಹಿಮೆಯನ್ನು ಕೊಂಡಾಡುತ್ತಲಿದೆ. ಚತುರ್ಮುಖನಿಗೂ ಅಗಮ್ಯವಾದ ಶ್ರೀಹರಿಯ ಮಹಿಮೆಯನ್ನು ಈ ಮಂತ್ರವು ಹೇಳುತ್ತಲಿದೆ.

**ಇಯಂ ವಿಸೃಷ್ಟಿಃ ಯತ ಆಬಭೂವ**
**ಯದಿವಾದಧೆಯದಿವಾನ ।**
**ಯೋಽಸ್ಯಾಧ್ಯಕ್ಷಃ ಪರಮೇವ್ಯೋಮನ್**
**ಸೋಽಅಂಗವೇದಯದಿವಾನವೇದ(ಋಗ್ವೇದ೮-೭-೧೭)**

**ಅರ್ಥ** :- ಇಯಂ ವಿಸೃಷ್ಟಿಃ =ಪ್ರತ್ಯಕ್ಷಾದಿ ಪ್ರಮಾಣಗಳಿಂದ ತಿಳಿಯಲ್ಪಡುವ ಚೇತನಾಚೇತನಾತ್ಮಕವಾದ ಈ ಪ್ರಪಂಚದ ವಿಧವಿಧವಾದ ಸೃಷ್ಟಿಯೂ ಅಥವಾ ಮೊಟ್ಟಮೊದಲನೆಯ ವಿವಿಧವಾದ ಸೃಷ್ಟಿಯು, ಯತಃ = ಯಾವನಿಂದ, ಆಬಭೂವ =ಆ =ಚೆನ್ನಾಗಿ, ಬಭೂವ = ಉಂಟಾಗಿದೆಯೋ, ಆ ಬ್ರಹ್ಮನೇ, ಯದಿವಾದಧೆ =ಯಾವ ಪಕ್ಷದಲ್ಲಿ ಧರಿಸುವನೋ ಯದಿವಾನದಧೇ = ಅಥವಾ ಧರಿಸದೇ ಇರುತ್ತಾನೆಯೋ, ಯಃ =ಯಾರು = ಯಾವ ಚತುರ್ಮುಖ ಬ್ರಹ್ಮನು, ಅಸ್ಯ =ಈ ಪ್ರಪಂಚಕ್ಕೆ, ಅಧ್ಯಕ್ಷಃ = ಅಧಿಪತಿಯೋ, ಸೋಽಪಿ ಅಂತಹ ಜಗತ್ತಿಗೆ ಅಧ್ಯಕ್ಷನಾದ ದೇವತಾ ಗ್ರಣಿಯಾದ ಜೀವೋತ್ತಮನಾದ ಚತುರ್ಮುಖಬ್ರಹ್ಮನೂ ಕೂಡ, ಪರಮೇ ವ್ಯೋಮನ್ = ತನ್ನ ಹೃದಯಾಕಾಶದಲ್ಲಿರುವ ಶ್ರೀಹರಿಯನ್ನು (ವೈಕುಂಠಾಧಿಪತಿಯಾದ ಮುಖ್ಯ ಪ್ರಾಣನ ತಂದೆಯಾದ ಶ್ರೀವಿಷ್ಣುವನ್ನು) ಅಂಗ =ಪ್ರೀತ್ಯಾಸ್ಪದನೇ ! ಯದಿ ವಾ ವೇದ = ತಿಳಿಯುತ್ತಾನೆಯೋ (ಸ್ವಲ್ಪವಾಗಿ ತಿಳಿಯುತ್ತಾನೆಯೋ) ಯದಿ ವಾ ನ ವೇದ = ಸಮಗ್ರವಾಗಿ ತಿಳಿಯುವುದೇ ಇಲ್ಲವೋ.

**ತಾತ್ಪರ್ಯ** :-" ಶೇಷಶಾಯಿಯಾದ ಪರಮಾತ್ಮನ ನಾಭಿಕಮಲದಲ್ಲಿರುವ ಜೀವೋತ್ತಮನಾದ ಚತುರ್ಮುಖನು ಪರಮಾತ್ಮನ ಮುಖಕಮಲದಿಂದಲೇ ಸಕಲ ವೇದಗಳನ್ನು ಅರಿಯುವವನಾದಾಗ್ಯೂ, ತನ್ನ ಹೃದಯಾಕಾಶದಲ್ಲೇ ಯಾವಾಗಲೂ ಇರತಕ್ಕ ಶ್ರೀಹರಿಯನ್ನು ಇತರ ದೇವರಿಗಿಂತಲೂ ಅಧಿಕವಾಗಿ ತಿಳಿಯುವವನಾದಾಗ್ಯೂ, ಸಮಗ್ರವಾಗಿ ತಿಳಿಯಲಾರ, ತಿಳಿಯಲಾರನು" ಎಂದು ಸಾಕಲ್ಯೇನ ತಿಳಿಯಲಾಗದಿರುವ ಮಹಾಮಹಿಮೆಯನ್ನುಳ್ಳ ಹರಿಯ ಸರ್ವೋತ್ತಮತ್ವವನ್ನೂ ಅಪಾರವಾದ ಮಹಿಮಾತಿಶಯವನ್ನೂ ಈ ಋಗ್ವೇದವಾಣಿಯು ಪ್ರಶಂಸೆ ಮಾಡುತ್ತಲಿದೆ.

ಶ್ರೀಹರಿಯು ತನ್ನ ಅಚಿಂತ್ಯವಾದ ಸ್ವರೂಪದ ಮಹಿಮಾತಿಶಯವನ್ನು ತಾನು ತಿಳಿದಿರುವನೇ ಹೊರತು, ಚತುರ್ಮುಖನಾದ ನಾನಾಗಲಿ ಮುಖ್ಯಪ್ರಾಣನಾಗಲಿ ಸಮಗ್ರವಾಗಿ ತಿಳಿಯಲಾರೆವು ಎಂದು ಚತುರ್ಮುಖನು ಹೇಳಿರುತ್ತಾನೆ. ನಾವೇ ತಿಳಿದಿಲ್ಲವೆಂದಮೇಲೆ ಇತರರು ತಿಳಿದಿಲ್ಲವೆಂದು ಹೇಳತಕ್ಕದೇನಿದೆ ?ಎಂದೂ ಉದ್ಗಾರ ಮಾಡಿದ್ದಾನೆ.

ಚತುರ್ಮುಖನೇ ಪರಮಾತ್ಮನ ಮಹಿಮಾತಿಶಯವನ್ನ ಸಮಗ್ರವಾಗಿ ಚೆನ್ನಾಗಿ ತಿಳಿದಿಲ್ಲವೆಂದಮೇಲೆ ಇತರರಾದ ದೇವತೆಗಳೂ, ಮುನಿವರ್ಯರು, ಮರ್ತ್ಯರೂ ತಿಳಿದೇ ಇಲ್ಲವೆಂದು ಏನು ತಾನೇ ಹೇಳಬೇಕು. ಈ ಅಭಿಪ್ರಾಯದ ಭಾಗವತ ಶ್ಲೋಕವು ಈ ರೀತಿ ಇದೆ.

ಭಾಗವತದಲ್ಲಿ ಚತುರ್ಮುಖ ವಾಕ್ಯವು :-

> **ಯಃ ಸ್ವಾತ್ಮಮಾಯಾ ವಿಭವಂ ಸ್ವಯಂಗತೋ**
> **ನಾಹಂ ನಭಸ್ವಾನ್ ತಮುಥಾಪರೇಕುತಃ।**
> **ಬ್ರಹ್ಮಾಪಿ ಯಂವೇತ್ತಿ ನ ಚೇಹ ಸಮ್ಯಗ್**
> **ಅನ್ಯೇ ಕುತೋ ದೇವಮುನೀಂದ್ರಮರ್ತ್ಯಾಃ ॥ (ಚತುರ್ಮುಖ ವಚನ) ಭಾಗವತ ಶ್ಲೋಕ।**

ಮತ್ತೊಂದು ಹಿರಣ್ಯಗರ್ಭನ ವಾಕ್ಯವು ಈ ರೀತಿ ಇದೆ.

> **ನಮಸ್ತೇಽಮಿತತತ್ವಾಯ ಬ್ರಹ್ಮಾದೀನಾಂ ಚ ಸೂತಯೇ।**
> **ನಿರ್ಗುಣಾಯ ಚ ಸತ್ವಾದ್ಯಾಂ ನಾಹಂ ವೇದಾಪರೇಕುತಃ ॥**

**ಅಭಿಪ್ರಾಯ** :- (ಅಗಣಿತವಾದ) ಅಪರಿಮಿತವಾದ (ಸ್ವರೂಪಗಳನ್ನುಳ್ಳ) ರೂಪಗಳನ್ನುಳ್ಳ, ಬ್ರಹ್ಮನೇ ಮೊದಲಾದವರಿಗೆ ಕಾರಣನಾದ ಸತ್ವಾದಿ ಗುಣರಹಿತನಾದ ಎಲೈ ಹರಿಯೇ ! ನಿನಗೆ ನಮಸ್ಕಾರವು. ಸಕಲ ನಿಯಾಮಕನಾದ ಯಾವ ನಿನ್ನ (ಶ್ರೀಹರಿಯಾದ ನಿನ್ನ) ಮಾಹಾತ್ಮ್ಯಯ ಏಕದೇಶವನ್ನೂ ಸಹ ಸಮಗ್ರವಾಗಿ ನಾನು ತಿಳಿಯಲಾರೆನು, ತಿಳಿದಿಲ್ಲ, ಹೀಗಿರುವಲ್ಲಿ ಇತರರು ತಿಳಿಯಲಾರರೆಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಯೇ ಇಲ್ಲ ಎಂದು ಚತುರ್ಮುಖ ಬ್ರಹ್ಮನು ಆಡಿದ್ದಾನೆ.

ರುದ್ರದೇವನೂ ಸಹ ಶ್ರೀಹರಿಯ ಅಪಾರವಾದ ಮಹಿಮಾತಿಶಯವನ್ನು ಭಕ್ತಿಯಿಂದ ಹೊಗಳುತ್ತಾನೆ.

**ನಾಹಂ, ಪರಾಯುಃ, ಋಷಯೋ, ನ ಮರೀಚಿಮುಖ್ಯಾಃ**
**ಜಾನಂತಿಯದ್ವಿರಚಿತಂ ಖಲುಸತ್ವಸಂಘಾಃ।**
**ಯನ್ಮಾಯಯಾ ಮುಷಿತಚೇತಸ ಈಶದೈತ್ಯ**
**ಮರ್ತ್ಯಾದಯಃ ಕಿಮುತಶಶ್ವದಭದ್ರವೃತ್ತಾಃ ಇತಿ ॥ ರುದ್ರವಚನ ॥**

**ಅರ್ಥ** :- ಯದ್ವಿರಚಿತಂ = ಯಾವ ಸರ್ವೋತ್ತಮನಾದ ಶ್ರೀಹರಿಯ ಸೃಷ್ಟ್ಯಾದಿ ವಿಚಿತ್ರವಾದ ಚರಿತ್ರೆಯನ್ನು, ಅಹಂ = ನಾನು ನ (ಜಾನಾಮಿ) = ತಿಳಿದಿಲ್ಲ. ಪರಾಯುಃ = ಚತುರ್ಮುಖಬ್ರಹ್ಮನೂ, ನ (ಜಾನಾತಿ) = ತಿಳಿಯಲಾರನು, ಮರೀಚಿಮುಖ್ಯಾಃ = ಮರೀಚಿ ಋಷಿಯೇ ಪ್ರಧಾನವಾಗುಳ್ಳ, ಸತ್ವಸಂಘಾಃ = (ಗುಃ) ಸಾತ್ವಿಕರಾದ, ಋಷಯಃ = ಋಷಿಗಳು, ನಜಾನಂತಿ = ತಿಳಿಯಲಾರರೋ, ಹೇಈಶ = ಎಲೈ ಶ್ರೀಹರಿಯೇ, ಯನ್ಮಾಯಯಾ = ಯಾವ (ನಿನ್ನ) ಮಾಯೆಯಿಂದ, ಮುಷಿತಚೇತಸಃ = ನಷ್ಟವಾದ ಮನಸ್ಸುಳ್ಳ, ಶಶ್ವತ್ = ಯಾವಾಗಲೂ, ಅದಭ್ರವೃತ್ತಾಃ = ಅಮಂಗಳವಾದ ಚರ್ಯೆಯನ್ನುಳ್ಳ, ದೈತ್ಯಮರ್ತ್ಯಾದಯಃ = ದೈತ್ಯರೂ ಮಾನವರು ಮೊದಲಾದ, ಸತ್ವಸಂಘಾಃ = ಪ್ರಾಣಿಗಳ ಸಮೂಹಗಳು, ಕಿಮುತ = ತಿಳಿದಿಲ್ಲವೆಂಬುದನ್ನು ಏನು ಹೇಳಬೇಕು ?

ಯಮನೂ ಸಹ ಶ್ರೀಹರಿಯ ಮಹಿಮಾತಿಶಯವನ್ನು ಕೊಂಡಾಡಿರುತ್ತಾನೆ.

ಇದು ಯಮದೇವನ ವಚನವಾಗಿದೆ.

**ಅಹಂಮಹೇಂದ್ರೋನಿರ್‌ಋತಿಃ ಪ್ರಚೇತಾಃ।**
**ಸೋಮೋಽಗ್ನಿರೀಶಃ ಪವನೋಽರ್ಕೋ ವಿರಿಂಚಃ ॥**
**ಆದಿತ್ಯವಿಶ್ವೇವಸವೋಽಥಸಾಧ್ಯಾಃ।**
**ಮರುದ್ಗಣಾರುದ್ರಗಣಾಃ ಸ ಸಿದ್ಧಾಃ ॥**
**ಅನ್ಯೇಚಯೇ ವಿಶ್ವಸೃಜೋಽಮರೇಶಾಃ।**
**ಭೃಗ್ವಾದಯೋಽಸ್ಪೃಷ್ಟರಜಸ್ತಮಸ್ಕಾಃ॥**
**ಯಸ್ಯೇಹಿತಂ ನ ವಿದುಃ ಸ್ಪೃಷ್ಟಮಾಯಾಃ।**
**ಸತ್ವಪ್ರಧಾನಾ ಅಪಿ ಕಿಂತತೋಽನ್ಯೇ ॥ ಇತಿಯಮಃ ॥**

**ತಾತ್ಪರ್ಯ** :- (ಯಮನವಾತು) ನಾನು (ಯಮನು) ದೇವೇಂದ್ರನು, ನಿರ್‌ಋತಿಯು, ವರುಣನು, ಚಂದ್ರನು, ಕುಬೇರನು, ಅಗ್ನಿಯು, ರುದ್ರನು, ವಾಯುವು, ಸೂರ್ಯನು, ಬ್ರಹ್ಮದೇವನು, ಆದಿತ್ಯನು, ವಿಶ್ವೇದೇವತೆಗಳೂ, ಅಷ್ಟವಸುಗಳೂ, ರುದ್ರದೇವನ ಪ್ರಮಥಾದಿಗಣಗಳೂ, ಸಿದ್ಧರಿಂದ ಕೂಡಿರುವ, ಇತರರಾದ ಯಾವ ಜಗತ್ತನ್ನು ಸೃಷ್ಟಿ ಮಾಡುವ ವ್ಯಾಪಾರದಲ್ಲಿ ಶ್ರೀಹರಿಯಿಂದ ನಿಯುಕ್ತರಾದ ದೇವತೆಗಳ ಅಧಿಪತಿಗಳುಂಟೋ ಅವರೂ, ರಜೋಗುಣತಮೋಗುಣಗಳಿಂದ ದೂರರಾದ ಯಾವ ಭೃಗುವೇ ಮೊದಲಾದ ಋಷಿಗಳೂ, (ಮೊದಲಾದ ನಾವೆಲ್ಲರೂ) ಅವರೆಲ್ಲರೂ ಸತ್ವಗುಣವನ್ನೇ ಪ್ರಧಾನವಾಗಿ ಉಳ್ಳವರಾಗಿದ್ದಾಗ್ಯೂ, ಸಹ, ಪರಮಾತ್ಮನ ಪ್ರಭಾವದಿಂದ ಯಾವ ಶ್ರೀಹರಿಯ ಚೇಷ್ಟೆ ಇಂತಹುದೇ ಎಂಬುದನ್ನು ತಿಳಿಯಲಾರದಾಗಿದ್ದೇವೆ.

ಹೀಗಿರುವಲ್ಲಿ ಇವರೆಲ್ಲರಿಗಿಂತ ಇತರರಾದವರು ಹರಿಯ ಇಂಗಿತವನ್ನು ಹೇಗೆ ತಾನೇ ತಿಳಿದಾರು ? ಅನಂತವಾದ ಅಚಿಂತ್ಯವಾದ ಮಹಾಮಹಿಮಾನಾದ ಶ್ರೀ ವಿಷ್ಣುವಿನ ವರ್ಣನವನ್ನು ಪಡೆಯುವಿಕೆಯಲ್ಲಿಯೂ ಸಹ ಬ್ರಹ್ಮಾದ್ಯಾದಿ ತಾರತಮ್ಯದಿಂದ ಕೂಡಿದ ದೇವತೆಗಳ ವರ್ಣನದಲ್ಲಿಯೂ ಸಹ ತಾರತಮ್ಯವು ಉಂಟೆಂಬ ಅಂಶವು ಪ್ರಮಾಣ ವಾಕ್ಯಗಳಿಂದ ತಿಳಿದು ಬರುತ್ತಿದೆ.

"ಸುಸೂಕ್ಷ್ಮೈರಪ್ಯಶೇಷೈಶ್ಚವಿಶೇಷೈಃ ಸಹಪಶ್ಯತಿ ।
ಸ್ವಾತ್ಮಾನಂ ಭಗವಾನ್ ವಿಷ್ಣುಃ ಸರ್ವರೂಪೋऽಪಿ ಸರ್ವದಾ ॥
ಸರ್ವತ್ರಚಾನ್ಯದಪ್ಯೇವಂ ತೇನಾದೃಷ್ಟಂ ನ ಹಿ ಕ್ವಚಿತ್ ॥ (ಅನುವ್ಯಾಖ್ಯಾನ)

**ಅಭಿಪ್ರಾಯ** :- ಪರಮಪೂಜ್ಯನಾದ ಶ್ರೀಹರಿಯು ಯಾವಾಗಲೂ ಎಲ್ಲೆಲ್ಲಿಯೂ ಪರಿಪೂರ್ಣಸ್ವರೂಪ ಉಳ್ಳವನೇ ಆಗಿರುತ್ತಾನೆ. ಅತ್ಯಂತ ಸೂಕ್ಷ್ಮಗಳೂ ಎಲ್ಲಾ ವಿಶೇಷಗಳಿಂದಲೂ ಸಹ ಸಹಿತವಾಗಿ ತನ್ನ ಸ್ವರೂಪವನ್ನೂ ನೋಡುತ್ತಿರುತ್ತಾನೆ. ತಾನು ತನ್ನಿಂದ ಇತರವಾದ ಸರ್ವ ಜಗತ್ತನ್ನೂ ಸ್ಪಷ್ಟಾತಿಸ್ಪಷ್ಟವಿಶದವಾಗಿ ನೋಡುತ್ತಲೇ ಇರುತ್ತಾನೆ. ಸರ್ವತ್ರ ಸರ್ವದಾವ್ಯಾಪ್ತನಾದ ಆ ಶ್ರೀಹರಿಯ ದೃಷ್ಟಿಗೆ ಬೀಳದಿರುವ ಕಿಂಚಿತ್ತೂ ಯಾವುದೂ ಇರುವುದಿಲ್ಲ.

ಋಗ್ವೇದ ಮಂತ್ರವು ಕೀರ್ತಿಯಿಂದ ಮಾತ್ರವಲ್ಲದೇ ದೇಹದಿಂದಲೂ ವ್ಯಾಪ್ತನಾದ ಶ್ರೀಹರಿಯ ಮಹಿಮೆಯನ್ನು ಪ್ರಶಂಸೆ ಮಾಡುತ್ತಲಿದೆ.

"(ಋಗ್ವೇದ ಸಂ. ೭-೯೯-೧)
ಪರೋ ಮಾತ್ರಯಾ ತನ್ವಾವೃಧಾನ ನತೇ ಮಹಿತ್ವಂ ಅನ್ವಶ್ನುವಂತಿ ।
ನ ತೇ ವಿಷ್ಣೋ ಜಾಯಮಾನೋ ನ ಜಾತೋ ದೇವ ಮಹಿಮ್ನಃ ಪರಮಂತಮಾಪ ॥
(ಋಗ್ವೇದ ಸಂಹಿತಾ ೭-೯೯-೧)

**ಅರ್ಥ** :- ತನ್ವಾ = ತನ್ನ ಶರೀರದಿಂದಲೇ (ತನ್ನ ಮೂರ್ತಿಯಿಂದಲೇ) ಕೀರ್ತಿಯಿಂದ ಮಾತ್ರವಲ್ಲ ತನ್ನ ದೇಹದಿಂದಲೂ, ("ಅಣೋರಣೀಯಾನ್ ಮಹತೋ ಮಹೀಯಾನ್" ಎಂಬಂತೆ, ಅಣುವಿನಲ್ಲಿ ಅಣುವಾಗಿಯೂ, ಮಹತ್ತಾದುದರಲ್ಲಿ ಮಹತ್ತಮನಾಗಿಯೂ ಇರುವ) ವೃಧಾನ ಅಪರಿಚ್ಛಿನ್ನನಾದ (ಅಪರಿಮಿತನಾದ,) ಹೇ ವಿಷ್ಣೋ = ಎಲೈ ವಿಷ್ಣುವೇ, ತ್ವಂ ನೀನು (ಯತಃ ಯಾವ ಕಾರಣದಿಂದ) ಮಾತ್ರಯಾ = ಮಿತೇಃ = ಪರಿಮಿತಿಗೆ ಪರಃ = ವಿಲಕ್ಷಣನಾಗಿ, ಅಸಿ = ಆಗಿರುತ್ತೀಯೋ, ಅಪರಿಮಿತನಾಗಿಯೇ ಇದ್ದೀಯೋ, ಆದ್ದರಿಂದಲೇ ಈ ರೀತಿ ಸರ್ವತ್ರ ದೇಹದಿಂದಲೂ ಸರ್ವತ್ರ ವ್ಯಾಪ್ತನಾಗಿ ಅಪರಿಮಿತನಾಗಿರುವಿಕೆಯಿಂದ ಕೂಡಿದವನಾದ, ತೇ = ನಿನ್ನ, ಮಹಿತ್ವಂ = ವಿಚಿತ್ರವಾದ ಈ ಜಗತ್ತಿನ ಸೃಷ್ಟ್ಯಾದಿರೂಪವಾದ ಮಹಿಮೆಯನ್ನು, ಅನು = ಅಪಿ ಕೇಽಪಿಮುಕ್ತಾಃ ಅಮುಕ್ತಾಶ್ಚ = ಮೋಕ್ಷದಲ್ಲಿರುವವರಾಗಲಿ, ಅಮುಕ್ತರಾದವರೇ ಆಗಲಿ ಯಾರು ಸಹ, ನಾಶ್ನುವಂತಿ = ಪಡೆಯುವುದಿಲ್ಲ. ಅಥವಾ ಅನುಭವಿಸುವುದಿಲ್ಲ.

ಹೇ ವಿಷ್ಣೋ = ಎಲೈ ವಿಷ್ಣುವೇ ! ದೇವಮಹಿಮ್ನಃ = ರಮಾದೇವಿಯೇ ಮೊದಲಾದ ದೇವತೆಗಳ ಮಹಿಮೆ ಗಳ, ಪರಂ, ಅಂತಂ = ಮಹಿಮೆಗಳ ತಾರತಮ್ಯಕ್ಕೆ ಪರಮಾವಧಿಭೂತವಾದ, ತೇ = ನಿನ್ನ, ಮಹಿತ್ವಂ = ಮಹಿಮೆ ಯನ್ನು, ಜಾಯಮಾನಃ = ಈಗ ಹುಟ್ಟುವವನಾದವನು ಯಾರೂ, ನಾಪ್ನೋತಿ = ಹೊಂದಿಲ್ಲ .ಜಾತಃ = ಹಿಂದೆ ಹುಟ್ಟಿದವನೂ ನಾಪ = ಹೊಂದಿಲ್ಲ. (ಉಪಲಕ್ಷಣವಾಗಿ) ಜನಿಷ್ಯ ಮಾಣಃ = ಮುಂದೆ ಹುಟ್ಟಲಿರುವವನಾ ದೂ ದ ನ ಪ್ರಾಪ್ಸ್ಯತಿ = ಹೊಂದುವುದಿಲ್ಲ.

ಪರಮಾತ್ಮನು ಸೃಷ್ಟಿಕರ್ತನು ಹೇಗೋ ಹಾಗೆಯೇ ಸ್ಥಿತಿಕರ್ತನೂ ಆಗಿರುತ್ತಾನೆಂದು ಶ್ರುತಿಯೇ ಹೊಗಳುತ್ತಲಿದೆ.

ಯ ಉ ತ್ರಿಧಾತು ಪೃಥಿವೀಮುತ ದ್ಯಾಂ ಏಕೋ ದಾಧಾರ ಭುವನಾನಿ ವಿಶ್ವಾ (ಋಗ್ವೇದ ಸಂ ೧-೧೫೪-೪)

**ಅರ್ಥ** :- ಯಃ = ಯಾವ ವಿಷ್ಣುವು, ಏಕಃ = ಏಕಮೇವ = ಒಬ್ಬನೇನೇ, ತ್ರಿಧಾತು = ಪ್ರಕೃತಿ ಪುರುಷ ಕಾಲಗಳಿಗೆ ಧಾರಕನು, ಪೃಥಿವೀಂ = ಭೂಮಿಯನ್ನು, ದ್ಯಾಮುತ = ಶ್ರೀದೇವಿಯನ್ನೂ ಕೂಡ, ವಿಶ್ವಾ ಭುವನಾನಿ = ಸರ್ವಭುವನಗಳನ್ನೂ, ಎಲ್ಲಾ ಲೋಕಗಳನ್ನೂ ದಾಧಾರ = ದಧಾರ = ಧರಿಸಿರುತ್ತಾನೆಯೋ,

ನಿಯಮನವೂ ಸಹ ಶ್ರೀ ವಿಷ್ಣುವಿಗೇನೇ ಎಂಬುದನ್ನು, ಋಗ್ವೇದ ಮಂತ್ರವು ಹೇಳುತ್ತಲಿದೆ.

ಚತುರ್ಭಿಃಸಾಕಂ ನವತಿಂಚ ನಾಮಭಿಃ ಚಕ್ರಂ ನ ವೃತ್ತಂ ವ್ಯತೀನ್ ಅವೀವಿಪತ್ (ಋಗ್ವೇದ ಸಂಹಿತಾ ೧-೧೫೫-೬.)

ಸಃ = ಬೃಹಚ್ಛರೀರನಾದ ಮೂಲರೂಪಿಯಾದ ವಿಷ್ಣುವು, ನಾಮಭಿಃ = ನಾಮಮಾತ್ರದಿಂದ, ಸ್ವರೂಪದಲ್ಲಿ, ಭೇದವಿಲ್ಲದಿರುವ, ಚತುರ್ಭಿಃ = ವಾಸುದೇವ, ಸಂಕರ್ಷಣ. ಪ್ರದ್ಯುಮ್ನ ಅನಿರುದ್ಧ ರೂಪಗಳಿಂದ, ಸಾಕಂ = ಕೂಡಿಕೊಂಡು, ನವತಿಂ = ತೊಂಭತ್ತು ಸಂಖ್ಯೆಯುಳ್ಳ, ವ್ಯತೀನ್ = ವಿಶೇಷದಿಂದ ಅಧಿಕರಾದ ದೇವತೆಗಳನ್ನು, ವೃತ್ತಂನ = ಗುಂಡಾದ ಚಕ್ರದಂತೆ, ಯುಗವತ್ = ಒಂದೇ ಬಾರಿಯಲ್ಲಿ, ಅವೀವಿಪತ್ = ತಿರುಗಿಸುತ್ತಿರುತ್ತಾನೆ ನಿಯಂತ್ರಿಸುತ್ತಿರುತ್ತಾನೆ.

ತೊಂಭತ್ತು ಸಂಖ್ಯಾಕರಾದ ದೇವತೆಗಳು ಯಾರೆಂದರೆ,

ಅಷ್ಟವಸುಗಳು, (ಎಂಟು ಜನ ವಸುಗಳು) ಏಕಾದಶ ರುದ್ರರು (ಹನ್ನೊಂದು ಜನ ರುದ್ರರು) ವಿಷ್ಣು ವ್ಯತಿರಿಕ್ತರಾದ ಹನ್ನೊಂದು ಜನ ಆದಿತ್ಯರು, ಹಿರಣ್ಯಗರ್ಭಸಹಿತರಾಗಿ ಹತ್ತು ಪ್ರಜಾಪತಿಗಳು, ಪ್ರಧಾನವಾಯು ಸಹಿತರಾಗಿ ಐವತ್ತು ಮರುತ್ತುಗಳು =೮+೧೧+೧೧+೧೦+೫೦=೯೦ ಸಂಖ್ಯೆಯ ದೇವತೆಗಳನ್ನು ಗುಂಡಾಗಿರುವ ಚಕ್ರವನ್ನು ಗರ್‍ರನೆ ತಿರುಗಿಸುವಂತೆ ಶ್ರೀಹರಿಯು ಈ ದೇವತೆಗಳನ್ನು ತಮ್ಮ ತಮ್ಮ ಕಾರ್ಯದಲ್ಲಿ ತೊಡಗುವಂತೆ ಆಜ್ಞಾ ಮೂಲಕ ಪ್ರೇರಿಸುತ್ತಿರುತ್ತಾನೆ. ಇದರಿಂದ ಪರಮಾತ್ಮನಾದ ಶ್ರೀಹರಿಗೆ ಸರ್ವನಿಯಾಮಕತ್ವವೂ ಉಂಟೆಂಬುದು ಶ್ರುತಿಸಿದ್ಧವಾಗಿದೆ.

ಯೋ ನಃಪಿತಾ ಜನಿತಾ ಯೋ ವಿಧಾತಾ ಧಾಮಾನಿ ವೇದ ಭುವನಾನಿ ವಿಶ್ವಾ (ಋಗ್ವೇದ ಸಂ. ೧೦-೮೨-೩)

ಯಃ = ಯಾರು, ನಃ = ನಮಗೆ, ಜನಿತಾ ಪಿತಾ = ಜನಕತಂದೆಯೋ (ಪಾಲಕಪಿತೃವಿನಂತಾಗಲಿ, ವಸ್ತ್ರಕ ಪಿತೃವಿನಂತಾಗಲಿ ಅಷ್ಟೇ ಅಲ್ಲ. ಎಂದು ಅಭಿಪ್ರಾಯ.) ಪಿತಾ = ಪಾಲಕನೂ, ಯೋ ವಿಧಾತಾ = ಧಾರಕನು (ಪೋಷಕನೂ ಕರ್ತೃವೂ ಆಗಿರುವನೋ) ವಿಶ್ವಾಭುವನಾನಿ = ವಿಶ್ವಾನಿ ಸರ್ವಾಣಿ ಭುವನಾನಿ, ತದ್ಗತಧಾಮಾನಿ ವೇದ = ಸಕಲ ಭುವನಗಳನ್ನೂ ಸಕಲ ಜೀವರ ಸ್ವರೂಪಗಳನ್ನು ತಿಳಿದಿರುವನೋ ಎಂದು ಹೇಳಿರುವುದರಿಂದ ಪರಮಾತ್ಮನಿಗೆ ಜಗತ್ಕಾರಣತ್ವವು ಭಾಸ್ಕರ ಮತದಲ್ಲಿ ಹೇಳಿದಂತೆ ಪರಿಣಾಮಿಕಾರಣತ್ವೇನ ಅಂದರೆ ವಿಕಾರಿತ್ವೇನ ಅಲ್ಲ. ಆದರೆ ತಂದೆಯಂತೆ ನಿಮಿತ್ತಕಾರಣತ್ವದಿಂದ ಎಂದು ಶ್ರೀಹರಿಗೆ ಜಗತ್ತಿನ ನಿಮಿತ್ತಕಾರಣತ್ವವು ಉಕ್ತವಾಗಿದೆ.

ಪರೋ ಮಾತ್ರಯಾ ಎಂಬ ಋಗ್ವೇದ ಮಂತ್ರದ ಒಟ್ಟು ಅಭಿಪ್ರಾಯವು ಹೀಗಿದೆ.

ಎಲೈ ವಿಷ್ಣುವೇ ಪ್ರಪಂಚದಲ್ಲಿ ಕೆಲವರು ಕೀರ್ತಿಮಾತ್ರದಿಂದಲೇ ಪ್ರಸಿದ್ಧರಾಗಿರುತ್ತಾರೆ. ಅವರ ಕೀರ್ತಿಯು ಎಲ್ಲೆಲ್ಲೂ ಹರಡಿ ಪ್ರಸಿದ್ಧಿ ಪಡೆದಿರುವರು. ಅಂತಹವರೂ ದೇಹದಿಂದ ನಶ್ವರರೇ ಆಗಿದ್ದಾರೆ. ಅವರ ದೇಹವು ಕೀರ್ತಿಯಂತೆ ವ್ಯಾಪ್ತವಲ್ಲ. ಇತಿಮಿತಿಗೆ ಒಳಪಟ್ಟದ್ದಾಗಿದೆ. ನೀನಾದರೂ ಕೀರ್ತಿಯಿಂದ ಮಾತ್ರವಲ್ಲದೆ, ದೇಹದಿಂದಲೂ ಕೂಡ ಸರ್ವದಾ ಸರ್ವತ್ರ ವ್ಯಾಪ್ತನೇ ಆಗಿದ್ದೀಯೇ. ನಿನ್ನ ಜಗತ್ತನ್ನು ಸೃಷ್ಟಿಸುವ ಮಹಿಮಾತಿಶಯವನ್ನು ಹಿಂದಿನ, ಇಂದಿನ, ಮುಂದಿನ ಯಾವ ವ್ಯಕ್ತಿಯೂ ಹೊಂದಿಲ್ಲ, ಪಡೆಯುತ್ತಿಲ್ಲ, ಮುಂದೆ ಎಂದೆಂದೂ ಪಡೆಯುವುದೇ ಇಲ್ಲ.

**ಯಃಉತ್ರಿಧಾತು ಇತ್ಯಾದಿಮಂತ್ರದ ಮತ್ತು ಚತುರ್ಭಿಃಸಾಕಂ ಇತ್ಯಾದಿ ಮಂತ್ರದ ಒಟ್ಟು ಅಭಿಪ್ರಾಯ.**

ಜಡಪ್ರಕೃತಿ ಅದಕ್ಕೆ ಅಭಿಮಾನಿನಿಯಾದ ರಮಾದೇವಿ, ಸಕಲಜೀವರು, ಕಾಲ, ಪೃಥಿವೀ, ಸಕಲ ಭುವನಗಳು, ಇವೆಲ್ಲವುಗಳ ಧಾರಣ, ಪೋಷಣೆ ಮಾಡತಕ್ಕವನಾಗಿಯೂ, ಈ ರೀತಿ ಧಾರಣಾದಿ ಕಾರ್ಯದಲ್ಲಿ ಇತರರ ಸಹಾಯವಿಲ್ಲದೆ ತಾನೊಬ್ಬನೇ ಅಸಹಾಯ ಶೂರನಾಗಿ ಧರಿಸಿರುವವನು ಶ್ರೀಹರಿಯು ಹೊರತು ಮತ್ತಾರೂ ಅಲ್ಲ.

ಬೃಹತ್ತಾದ ವ್ಯಾಪ್ತವಾದ ಶರೀರವುಳ್ಳ ಮೂಲರೂಪಿಯಾದ ಶ್ರೀಮನ್ನಾರಾಯಣನು ಸ್ವರೂಪದಲ್ಲಿ ಭೇದವಿಲ್ಲದಿರುವ ಬೇರೆ ಬೇರೆ ಹೆಸರುಗಳಿಂದ ಕರೆಯಲ್ಪಡತಕ್ಕವನಾಗಿ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಅನಿರುದ್ಧರೂಪಗಳಿಂದ ತೊಂಭತ್ತು ಸಂಖ್ಯೆಯ ದೇವತೆಗಳನ್ನು ಗುಂಡಾದ ಚಕ್ರವನ್ನೇ ತಿರುಗಿಸುವಂತೆ ತಿರುಗಿಸುತ್ತಿರುತ್ತಾನೆ. ಅವರ ಆಜ್ಞಾಮಾತ್ರದಿಂದ ತಮ್ಮ ತಮ್ಮ ಕಾರ್ಯದಲ್ಲಿ ಉದ್ಯುಕ್ತರನ್ನಾಗಿ ಮಾಡುತ್ತಿರುತ್ತಾನೆ. ನಿಯಮನ ಮಾಡುತ್ತಿರುತ್ತಾನೆ.

ಅಷ್ಟವಸುಗಳು, ಏಕಾದಶರುದ್ರರು, ವಿಷ್ಣುವ್ಯತಿರಿಕ್ತರಾದ ಏಕಾದಶಾದಿತ್ಯರು, ಹಿರಣ್ಯಗರ್ಭಸಹಿತರಾದ ಹತ್ತು ಪ್ರಜಾಪತಿಗಳು, ಪ್ರಧಾನವಾಯುಸಹಿತ ಐವತ್ತು ಸಂಖ್ಯೆಯ ಮರುತ್ತುಗಳು ಹೀಗೆ ಒಟ್ಟು ತೊಂಭತ್ತು ಜನ ದೇವತೆಗಳು.

**ಯೋನಃಪಿತಾ ಎಂಬ ಮಂತ್ರದ ಅಭಿಪ್ರಾಯ.**

ಯಾರು ನಮಗೆ ಜನಕನೋ (ಸಾಕುತಂದೆಯಂತೆ ಮಾತ್ರವಲ್ಲ, ದತ್ತು ತಂದೆಯೂ ಮಾತ್ರವಲ್ಲ.) ನಮ್ಮನ್ನೆಲ್ಲಾ ಧರಿಸಿ ಪೋಷಿಸುತ್ತಿರುವನೋ. ಯಾರು ಎಲ್ಲ ಲೋಕಗಳನ್ನು ಅರಿತಿರುವವನೋ ಆ ಎಲ್ಲಾ ಲೋಕಗಳಲ್ಲಿರುವ ಸಕಲ ಜೀವರ ಸ್ವರೂಪಗಳನ್ನು ತಿಳಿದಿರುವವನೋ (ಅಂತಹವನು ಶ್ರೀಹರಿಯು ಎಂದು ಅಭಿಪ್ರಾಯ.)

ಪರಮಾತ್ಮನು (ಸಕಲವನ್ನೂ) ತನ್ನ ಸಕಲ ವಿಷಯಗಳನ್ನು ತಿಳಿದಿರುತ್ತಾನೆ. ಆದರೆ ಅವನಿಗಿಂತಲೂ ಭಿನ್ನರಾದ ರಮಾದಿಗಳ ತಿಳುವಳಿಕೆಯು ಯಾವ ರೀತಿ ಎಂಬ ವಿಷಯದಲ್ಲಿ ಪ್ರಮಾಣ ವಾಕ್ಯಗಳು ಈ ರೀತಿ ಇರುತ್ತವೆ.

**"ಸರ್ವತ್ರ ಸರ್ವದೈವೇಶಂ ಶಕ್ತ್ಯೈವ ರಮಾಪಿತು ।**
**ನತು ಸರ್ವೈರ್ವಿಶೇಷೈಸ್ತಂ ಶಕ್ತ್ಯಂಶಸ್ಯಾನಂತೋಽಧಿಕವ್ ॥**
**ಸ್ವಾತ್ಮಾನಮನ್ಯಚ್ಛಾಶೇಷಂ ಶಕ್ತ್ಯೈವ ಹಿ ಸರ್ವದಾ ॥ ಅನುವ್ಯಾಖ್ಯಾನ ।**

**ತಾತ್ಪರ್ಯ** :- ರಮಾದೇವಿಯು, ಎಲ್ಲಾ ಕಡೆಗಳಲ್ಲಿಯೂ ಯಾವಾಗಲೂ ಪರಮಾತ್ಮನನ್ನು ನೋಡುವವಳಾದಾಗ್ಯೂ, ಇತರ ಜ್ಞಾನಿಗಳಿಗಿಂತಲೂ ಅಧಿಕವಾಗಿ ಶ್ರೀಹರಿಯನ್ನು ಕಾಣುವವಳಾದರೂ, ಸಮಗ್ರವಾಗಿ ಸಕಲ ವಿಶೇಷಗಳ ಸಹಿತವಾಗಿ ರಮಾದೇವಿಯೂ ಕೂಡ ಪರಮಾತ್ಮನನ್ನು ಕಾಣುವುದೇ ಇಲ್ಲ.

**ಚತುರ್ಮುಖನಾದರೋ** :-

> **ಬ್ರಹ್ಮಾ ತು ಸರ್ವಗಂ ಪಶ್ಯೇತ್ ಗುಣಾನಪ್ಯನ್ಯತೋಽಧಿಕಮ್ ।**
> **ನತು ಸರ್ವೇಷು ಕಾಲೇಷು ತಥಾ ಪಶ್ಯತ್ಯಮುಕ್ತಿಗಃ ॥**
> **ನ ರಮಾವದ್ವಿಶೇಷಾಣಾಂದರ್ಶನಂ ತಸ್ಯಯಾತ್ ಕ್ವಚಿತ್ ।**
> **ಸ್ವಾತ್ಮಾನಮಪ್ಯಲ್ಪ ಸದಾ ವಿಶೇಷೈರಖಿಲೈರಪಿ । ಪಶ್ಯತ್ಯಂಚಃ । (ಅನುವ್ಯಾಖ್ಯಾನ)**

**ತಾತ್ಪರ್ಯ** :- ಮುಕ್ತನಾದ ಚತುರ್ಮುಖ ಬ್ರಹ್ಮನು ಸರ್ವತ್ರವ್ಯಾಪ್ತನಾದ ಶ್ರೀಹರಿಯನ್ನು ನೋಡುತ್ತಾನೆ. ತನಗಿಂತಲೂ ನ್ಯೂನರಾದ ಸರಸ್ವತ್ಯಾದಿ ದೇವತೆಗಳಿಗಿಂತಲೂ ಅಧಿಕವಾಗಿ ಶ್ರೀಹರಿಯ ಗುಣಗಳನ್ನು ತಿಳಿಯುತ್ತಾನೆ. ಕಾಣುತ್ತಾನೆ. ಮುಕ್ತನಲ್ಲದ ಬ್ರಹ್ಮನಾದರೋ ಎಲ್ಲಾ ಕಾಲಗಳಲ್ಲೂ ಮುಕ್ತಬ್ರಹ್ಮನಂತೆ ಶ್ರೀಹರಿಯನ್ನು ಕಾಣುವುದಿಲ್ಲ. ರಮಾದೇವಿಯು ಕಾಣುವ ಪರಮಾತ್ಮನ ವಿಶೇಷಾಂಶಗಳನ್ನು ಅವಳಂತೆ ಎಲ್ಲಿಯೂ ಮುಕ್ತಬ್ರಹ್ಮನೂ ಸಹ ಕಾಣಲಾರನು ಚತುರ್ಮುಖನು ಬ್ರಹ್ಮಾಂಡದ ಒಳಗೂ ಹೊರಗೂ ವ್ಯಾಪ್ತವಾದ ಪರಮಾತ್ಮನ ರೂಪವನ್ನು ನೋಡುತ್ತಾನೆ.

**ಸರಸ್ವತಿಯ ವಿಚಾರ** :-

> **ವಾಗೀವಿಶೇಷಾನ್ ತಾವತೋ ನತು ।**
> **ತ್ರೈಗುಣ್ಯಾತ್ಪರತಃಪಶ್ಯೇದ್ವ್ಯಾಪ್ತಂ ಶತಗುಣಂ ಹರಿಮ್ ॥**

**ತಾತ್ಪರ್ಯ** :- ಚತುರ್ಮುಖನು ಎಲ್ಲಾ ವಿಶೇಷಗಳಿಂದಲೂ ಯಾವಾಗಲೂ ಶ್ರೀಹರಿಯ ಸ್ವರೂಪವನ್ನು, ಶ್ರೀಹರಿಗಿಂತಲೂ ಇತರವಾದುದೆಲ್ಲವನ್ನು ರಮಾದೇವಿಯನ್ನ ಬಿಟ್ಟು ಇತರರಿಗಿಂತಲೂ ಅಧಿಕವಾಗಿ ನೋಡುವವನಾದಾಗ್ಯೂ ಸಹ, ಅವನು ನೋಡುವಷ್ಟನ್ನು ಅವನ ಪತ್ನಿಯಾದ ಸರಸ್ವತೀ ದೇವಿಯೂ ನೋಡಲಾರಳು.

ಅವಳು ಐವತ್ತು ಕೋಟಿ ವಿಸ್ತೀರ್ಣವಾದ ಬ್ರಹ್ಮಾಂಡ ಪರಿಮಿತವಾದ ದೇಶವನ್ನು ಪ್ರಾರಂಭಿಸಿ ಬ್ರಹ್ಮಾಂಡದ ಒಳಗೆ ವ್ಯಾಪ್ತನಾದ ಹರಿಯನ್ನು ನೋಡುತ್ತಾಳೆ ಮತ್ತು ಬ್ರಹ್ಮಾಂಡದ ಹೊರಗೆ ಮಹದಾದಿಗಳ ಆವರಣ ರೂಪವಾದ ತ್ರೈಗುಣ್ಯದ ದೆಶೆಯಿಂದ, ಮೇಲಿರುವ ಶತೋತ್ತರ ಪರಿಮಿತವಾದ ದೇಶದವರೆಗೆ ವ್ಯಾಪ್ತನಾದ ಶ್ರೀಹರಿಯನ್ನು ನೋಡುತ್ತಾಳೆ.

**ಗರುಡ** :- ಗಿರೀಶೋ ಗರುಡಶ್ಚೈವ ತಮೋಮಾತ್ರಗತಂ ಹರಿಮ್।
**ರುದ್ರರು** :- ಪಶ್ಯೇತ್ ವಿಶೇಷಾನಪಿಹಿ ವಾಣೀದೃಷ್ಟಾನ್ನಪಶ್ಯತಿ ।।

**ತಾತ್ಪರ್ಯ** :- ರುದ್ರನೂ, ಗರುಡನೂ ಕೂಡ, ಬ್ರಹ್ಮಾಂಡವರಣವಾದ ತಮೋಗುಣದವರೆಗೆ ತಮೋಗುಣದಿಂದ ಪರಿಮಿತವಾಗಿರತಕ್ಕ ಪ್ರದೇಶ ಪರ್ಯಂತರವಾಗಿರತಕ್ಕ ಶ್ರೀಹರಿಯನ್ನು ನೋಡುತ್ತಾರೆ. ಆದರೆ ಸರಸ್ವತೀ ದೇವಿಯಿಂದ ದೃಷ್ಟವಾದ ಶ್ರೀಹರಿಯ ವಿಶೇಷಾಂಶಗಳನ್ನು ನೋಡಲಾರರು.

**ಪಾರ್ವತೀ, ಸುಪರ್ಣೀ (ಗರುಡನ ಹೆಂಡತಿ) ಇವರ ವಿಚಾರ.**

**ಉಮಾ ಸುಪರ್ಣೀ ಚ ಮಹತ್ತತ್ತ್ವಂ ಯಾವತ್ ಪಶ್ಯತಿ।**
**ರುದ್ರದೃಷ್ಟಾನ್ ವಿಶೇಷಾಂಶ್ಚ ನೈವಪಶ್ಯೇತ್ ತದಾಚನ ॥**

**ಉಮಾದೇವಿ ಮತ್ತು ಸುಪರ್ಣೀದೇವಿಯರು (ಗರುಡನ ಹೆಂಡತಿ)**

**ತಾತ್ಪರ್ಯ** :- ಬ್ರಹ್ಮಾಂಡವರಣವಾದ ಎಲ್ಲಿಯವರೆಗೆ ಮಹತತ್ತ್ವದ ವ್ಯಾಪ್ತಿ ಇದೆಯೋ ಅಲ್ಲಿಯವರೆಗೆ ಅಂದರೆ ಮಹತ್ತತ್ವದ ಪರ್ಯಂತವಾಗಿ ವ್ಯಾಪ್ತನಾದ ಶ್ರೀಹರಿಯನ್ನು ಕಾಣುವವರಾದಾಗ್ಯೂ ರುದ್ರದೇವರಿಂದ ಕಾಣಲ್ಪಟ್ಟ ಶ್ರೀಹರಿಯ ವಿಶೇಷಗಳನ್ನು ಎಂದಿಗೂ ನೋಡಲಾರರು.

**ಮುಕ್ತರಾದ ದೇವತೆಗಳು :-**

**ಸ್ವರೂಪಮನ್ಯರೂಪಂಚ ಮುಕ್ತಾದೇವಾಃ ಸಮಸ್ತಶಃ ॥**

**ತಾತ್ಪರ್ಯ** :- (ಮುಕ್ತಿಯಲ್ಲಿರುವ ದೇವತೆಗಳು) ಮುಕ್ತರಾದ ದೇವತೆಗಳು ಎಲ್ಲರೂ ತಮ್ಮ ತಮ್ಮ ಸ್ವರೂಪವನ್ನೂ, ತಮಗಿಂತಲೂ ಅಧಮರಾದವರ ಸ್ವರೂಪಗಳನ್ನೂ ತಿಳಿಯಬಲ್ಲರು.

**ಇಂದ್ರಕಾಮರ ವಿಚಾರ :-**

**ಇಂದ್ರಶ್ಚ ಕಾಮಶ್ಚ ಬ್ರಹ್ಮಯಾವದಹಂಕೃತಿಃ।**
**ಪಶ್ಯತಃ ॥**

**ತಾತ್ಪರ್ಯ** :- ಇಂದ್ರನೂ, ಕಾಮನೂ ಸಹ ಬ್ರಹ್ಮಾಂಡಾವರಣವಾದ ಅಹಂಕಾರತತ್ವದವರೆವಿಗೆ ಮಾತ್ರ ಅದುವರೆವಿಗೆ ವ್ಯಾಪ್ತನಾದ ಪರಬ್ರಹ್ಮನನ್ನು ಕಾಣಲು ಶಕ್ತರೇ ಹೊರತು ಅದಕ್ಕೆ ಮಿಗಿಲಾಗಿ ವ್ಯಾಪ್ತನಾದ ಶ್ರೀಹರಿಯನ್ನು ಕಾಣಲಾರರು.

**ಮನು ಮತ್ತು ದಕ್ಷಾದಿಗಳು :-**

ಮನು ದಕ್ಷಾದ್ಯಾ ಬುದ್ಧಿತತ್ತ್ವಸ್ಥಿತಂ ಹರಿಮ್।
ಪಶ್ಯಂತಿ ॥

**ತಾತ್ಪರ್ಯ** :- ಮನು ಮತ್ತು ದಕ್ಷ ಪ್ರಜಾಪತಿ ಮೊದಲಾದವರು ಬುದ್ಧಿ ತತ್ವದವರೆವಿಗೆ ವ್ಯಾಪ್ತನಾದ ಶ್ರೀಹರಿಯ ದರ್ಶನದಲ್ಲಿ ಮಾತ್ರ ಶಕ್ತರು. ಅಲ್ಲಿಯವರೆಗೆ ವ್ಯಾಪ್ತನಾದ ಶ್ರೀಹರಿಯನ್ನು ನೋಡುತ್ತಾರೆ.

**ಸೋಮ ಮತ್ತು ಸೂರ್ಯರು :-**

**ಸೋಮ ಸೂರ್ಯೌತು ಮನಃಸ್ಥಂ ಪರಮೇಶ್ವರಮ್।**
**(ಪಶ್ಯತಃ) ॥**

**ತಾತ್ಪರ್ಯ** :- ಚಂದ್ರನು ಮತ್ತು ಸೂರ್ಯನೂ ಸಹ ಮನಸ್ತತ್ವದಿಂದ ಪರಿಮಿತವಾದ ದೇಶದಲ್ಲಿ ವ್ಯಾಪ್ತನಾದ ಶ್ರೀಹರಿಯನ್ನು ಕಾಣುವರು.

**ಇತರ ದೇವತೆಗಳು** :-

**ಅನ್ಯೇ ಭೂತಸ್ಥಿತಂ ವಿಷ್ಣುಂ ದೇವಾಃ ಪಶ್ಯಂತಿ ಸರ್ವದಾ ।**

**ತಾತ್ಪರ್ಯ** :- ಇತರ ದೇವತೆಗಳು ಬ್ರಹ್ಮಾಂಡಾವರಣವಾದ ಪಂಚಭೂತಗಳಲ್ಲಿ ಅಂದರೆ ಪೃಥ್ವೀ, ಅಪ್ಪು, ತೇಜಸ್ಸು, ವಾಯು, ಆಕಾಶಗಳಲ್ಲಿ ವ್ಯಾಪ್ತನಾದ ಶ್ರೀಹರಿಯನ್ನು ಯಾವಾಗಲೂ ನೋಡುತ್ತಾರೆ.

**ಮತ್ತು** :-

**ಬಹುಸಾಹಸ್ರವರ್ಷೇಣ ಮಹತ್ತತ್ವೇ ಕ್ವಚಿತ್ ಕ್ವಚಿತ್ ।**

**ತಾತ್ಪರ್ಯ** :- ಅನೇಕ ಸಹಸ್ರ ವರ್ಷಗಳಲ್ಲಿ ಆಚರಿಸಲ್ಪಟ್ಟ ಸಾಧನ ಸಂಪತ್ತಿನಿಂದ ಎಲ್ಲೋ ಕೆಲವು ಕೆಲವು ಕಾಲಗಳಲ್ಲಿ ಮಾತ್ರ ಮಹತ್ತತ್ವದಲ್ಲಿರತಕ್ಕ ವಿಷ್ಣುವನ್ನು ನೋಡುತ್ತಾರೆ.

**ಇತರರು ಕೆಲವರು** :-

**ಅನ್ಯೇ ಚೈವ ಯಥಾಯೋಗಮಂಡಾಂತರ್ವರ್ತಿನಂ ಹರಿಮ್ ।**

**ತಾತ್ಪರ್ಯ** :- ಇತರರು ಕೆಲವರು ಅವರವರ ಯೋಗ್ಯತಾನುಸಾರವಾಗಿ ಬ್ರಹ್ಮಾಂಡದ ಒಳಗೆ ಇರತಕ್ಕ ಹರಿಯನ್ನು ಕಾಣುತ್ತಾರೆ.

**ಮತ್ತೆ ಕೆಲವರು** :-

ಶ್ವೇತದ್ವೀಪಪತಿಂಚೈವ ಹೃದ್ಯೇವಾನ್ಯೇ ತು ಕೇಚನ ।

**ತಾತ್ಪರ್ಯ** :-೧. ಕೆಲವರು ಶ್ವೇತದ್ವೀಪಪತಿಯನ್ನು ಮಾತ್ರನೋಡುತ್ತಾರೆ.

೨. ಕೆಲವರು ತಮ್ಮ ಹೃದಯದ ಒಳಗೆ ಇರುವ ಭಗವಂತನ ರೂಪವನ್ನು ಕಾಣುತ್ತಾರೆ.

ಇನ್ನು ಇತರರು ಕೆಲವರು ಶ್ವೇತದ್ವೀಪಕ್ಕೆ ಸ್ವಾಮಿಯಾದ ಶ್ರೀಹರಿಯನ್ನು ತಮ್ಮ ಹೃದಯಾಕಾಶದಲ್ಲಿಯೇ ನೋಡುತ್ತಾರೆ.

**ಇನ್ನೂ ಕೆಲವರು** :-

ಕದಾಚಿದೇವ ತತ್ರಾಪಿ ಕೇಚಿತ್ಪಶ್ಯಂತಿ ಕೇಶವಮ್ ।

**ತಾತ್ಪರ್ಯ** :- ಇನ್ನು ಕೆಲವರು ತಮ್ಮ ಹೃದಯದಲ್ಲಿಯೂ ಸಹ ಕೆಲವು ವೇಳೆಯಲ್ಲಿ ಶ್ರೀಹರಿಯನ್ನು ನೋಡುವರು.

**ಉಮಾ ಯಾವದನಂತಾಂಶಾನ್ ಪೂರ್ವದೃಷ್ಟೇಭ್ಯ ಏವತು ।**
**ವಿಶೇಷಾನ್ ವಾಸುದೇವಸ್ಯ ಪಶ್ಚಾದುಕ್ತಾ ವಿಚಕ್ಷತೇ ॥**

**ಶಕ್ರಕಾಮಾದಯಶ್ಚೈವ ವಿಶೇಷಾನ್ ಬ್ರಹ್ಮಣಿ ಸ್ಥಿತಾನ್ ।**
**ಉಮಾದಿಭಿಃ ಪೃಥುದೃಷ್ಟೇಭ್ಯಃ ಶತಾಂಶಾನೇವ ಚಕ್ಷತೇ ॥ ಅನುವ್ಯಾಖ್ಯಾನ ॥**

**ಅಭಿಪ್ರಾಯಗಳ ಸಂಗ್ರಹ** :- ಅಚಿಂತ್ಯಾದ್ಭುತ ಶಕ್ತಿಸಂಪನ್ನನಾದ ಅನಂತ ಕಲ್ಯಾಣಗುಣಪರಿಪೂರ್ಣನಾದ ಸಕಲ ದೋಷದೂರನಾದ ಶ್ರೀಹರಿಯ ದರ್ಶನವನ್ನು ಪಡೆಯುವುದರಲ್ಲಿಯೂ ಸಹ ದೇವತಾವರ್ಗದಲ್ಲಿನ ತಾರತಮ್ಯವು ಪ್ರಮಾಣ ವಚನಗಳಿಂದ ತಿಳಿಯಬಂದಿದೆ.

೧. ಚತುರ್ಮುಖ ಬ್ರಹ್ಮನು :- ಬ್ರಹ್ಮಾಂಡದ ಒಳಗೂ ಹೊರಗೂ ಇರತಕ್ಕ ಶ್ರೀಹರಿಯ ರೂಪಗಳನ್ನು ನೋಡುತ್ತಾನೆ.

೨. ಸರಸ್ವತಿಯು :- ಐವತ್ತು ಕೋಟಿ ವಿಸ್ತೀರ್ಣವಾದ ಬ್ರಹ್ಮಾಂಡ ಪರಿಮಿತವಾದ ಪ್ರದೇಶವನ್ನು ಪ್ರಾರಂಭಿಸಿ - ಜಲ -ತೇಜಸ್ಸು - ವಾಯು - ಆಕಾಶ - ಅಹಂಕಾರತತ್ತ್ವ - ಮಹತ್ತತ್ತ್ವ - ತ್ರಿಗುಣ ಪ್ರದೇಶಗಳಲ್ಲಿ ಕ್ರಮವಾಗಿ ಒಂದರಿಂದ ಒಂದು ಹತ್ತುಪಾಲು ಅಧಿಕವಾಗಿರತಕ್ಕ ಬ್ರಹ್ಮಾಂಡಾವರಣಗಳಲ್ಲಿ ವ್ಯಾಪ್ತವಾದ ಮಹತ್ತತ್ತ್ವದಿಂದ ಮೇಲಿನ ಭಾಗದಲ್ಲಿ ಶತೋತ್ತರವಾದ ಪರಿಮಿತ ದೇಶದ ಪರ್ಯಂತವಾಗಿ ಇರತಕ್ಕ ವ್ಯಾಪ್ತನಾದ ಶ್ರೀಹರಿಯನ್ನು ನೋಡುತ್ತಾಳೆ.

೩. ಗರುಡ ರುದ್ರರು :- ಮಹತ್ತತ್ತ್ವಕ್ಕೆ ಆವರಣಭೂತವಾದ ಅದರಿಂದ ಹತ್ತು ಪಾಲು ಅಧಿಕವಾದ ತಮೋಗುಣದಿಂದ ಪರಿಮಿತವಾದ ದೇಶಪರ್ಯಂತ ಇರತಕ್ಕ ವಿಷ್ಣುವನ್ನು ನೋಡುತ್ತಾರೆ.

೪. ಪಾರ್ವತೀ ಸುಪರ್ಣೀದೇವಿಯರು :- ತಮೋಗುಣದಿಂದ ಪರಿಮಾಣದಲ್ಲಿ ಹತ್ತು ಪಾಲು ಕಮ್ಮಿಯಾದ ಮಹತ್ತತ್ತ್ವದಿಂದ ಪರಿಮಿತವಾದ ದೇಶದವರೆಗೇನೇ ಇರತಕ್ಕ ಶ್ರೀಹರಿಯನ್ನೇ ನೋಡುವರು.

೫. ಇಂದ್ರನೂ ಕಾಮನೂ :- ಮಹತ್ತತ್ತ್ವದ ದೆಶೆಯಿಂದ ಪರಿಮಾಣದಿಂದ ಹತ್ತು ಪಾಲು ಕಮ್ಮಿಯಾದ ಅಹಂಕಾರ ತತ್ತ್ವದಿಂದ ಪರಿಮಿತವಾದ ದೇಶಪರ್ಯಂತವಾಗಿ ಇರತಕ್ಕ ಶ್ರೀ ವಿಷ್ಣುವನ್ನು ನೋಡುವರು.

೬. ಮನುಬೃಹಸ್ಪತ್ಯಾದಿಗಳು :- ಅಹಂಕಾರತತ್ತ್ವದ ದೆಶೆಯಿಂದ ಪರಿಮಾಣದಿಂದ ಹತ್ತು ಪಾಲು ಕಮ್ಮಿಯಾದ ಬುದ್ಧಿತತ್ತ್ವದಿಂದ ಪರಿಮಿತವಾದ ದೇಶದವರೆವಿಗೆ ಇರತಕ್ಕ ವಿಷ್ಣುವನ್ನು ನೋಡುತ್ತಾರೆ.

೭. ಚಂದ್ರನು ಸೂರ್ಯನು :- ಬುದ್ಧಿ ತತ್ತ್ವದ ದೆಶೆಯಿಂದ ಪರಿಮಾಣದಿಂದ ಹತ್ತು ಪಾಲು ಕಮ್ಮಿಯಾದ ಮನಸ್ತತ್ತ್ವದಿಂದ ಪರಿಮಿತವಾದ ದೇಶದವರೆವಿಗೆ ಇರತಕ್ಕ ವಿಷ್ಣುವನ್ನು ನೋಡುತ್ತಾರೆ.

೮. ವರುಣಾದಿಗಳು :- ಕ್ರಮವಾಗಿ ಪರಿಮಾಣದಿಂದ ಹತ್ತು ಪಾಲು ಕಮ್ಮಿ ಆದ ಆಕಾಶ, ವಾಯು ಮೊದಲಾದ ಭೂತಗಳಿಂದ ಪರಿಮಿತವಾದ ದೇಶದ ಪರ್ಯಂತವಾಗಿ ವ್ಯಾಪ್ತನಾದ ಶ್ರೀಹರಿಯನ್ನು ಯೋಗ್ಯತಾನುಸಾರವಾಗಿ ನೋಡುತ್ತಾರೆ.

೯. ಶ್ರೀಹರಿಯ ವ್ಯಾಪ್ತ್ಯಾದಿಗಳಂತೆಯೇ ಬೇರೆ ಬೇರೆ ಪರಮಾತ್ಮನ ಧರ್ಮಗಳನ್ನು ಲಕ್ಷ್ಮೀ ಮೊದಲಾದ ದೇವತೆಗಳು ತಾರತಮ್ಯದಿಂದಲೇ ನೋಡುವರು.

ಇದರಲ್ಲೂ ಸಹ ಶ್ರೀ ಮಹಾಲಕ್ಷ್ಮೀದೇವಿಯು ಎಷ್ಟೆಷ್ಟು ಶ್ರೀ ವಾಸುದೇವನ ಗುಣಗಳನ್ನು ನೋಡುತ್ತಾಳೆಯೋ ಅಷ್ಟರಲ್ಲಿ ಅನಂತಾನಂತ ಪ್ರಕಾರಗಳಾಗಿ ವಿಭಕ್ತಗಳಾದ ಗುಣಗಳಲ್ಲಿ ಒಂದೇ ಭಾಗವನ್ನು ಬ್ರಹ್ಮನು ನೋಡುತ್ತಾನೆ.

ಸರಸ್ವತಿಯು ಬ್ರಹ್ಮನು ನೋಡತಕ್ಕ ಅನಂತ ಪ್ರಕಾರವಾಗಿ ವಿಭಕ್ತವಾದ ಭಾಗದಲ್ಲಿ ಒಂದೇ ಭಾಗವನ್ನು ನೋಡುತ್ತಾಳೆ.

ಇದೇ ರೀತಿಯಾಗಿ ಗರುಡಶೇಷರುದ್ರರಿಗೂ ಶ್ರೀಹರಿಯ ಗುಣಗಳನ್ನು ನೋಡುವುದರಲ್ಲಿ ತಾರತಮ್ಯವು ಇರುತ್ತದೆ.

ಪಾರ್ವತಿಯೂ ಸಹ ಎಷ್ಟು ಶ್ರೀಹರಿಯ ಗುಣಗಳನ್ನು ನೋಡುವಳೋ ನೂರು ಪ್ರಕಾರವಾಗಿ ವಿಭಕ್ತವಾದ ಅಷ್ಟು ಗುಣಗಳ ಒಂದೇ ಭಾಗವನ್ನು ಇಂದ್ರನು ನೋಡುತ್ತಾನೆ.

ಅನಂತಧಾವಿಭಕ್ತವಾದ ಆ ಭಾಗದಲ್ಲೂ ಸಹ ಒಂದೇ ಭಾಗವನ್ನು ಅನ್ನಾಭಿಮಾನಿ ಅನಿರುದ್ಧನು ನೋಡುತ್ತಾನೆ.

ಹೀಗೆಯೇ ಪ್ರವಹನಿಗೂ, ಚಂದ್ರನಿಗೂ, ವರುಣನಿಗೂ ಅಗ್ನಿಗೂ, ಮಿತ್ರನಿಗೂ, ಪರ್ಜನ್ಯನಿಗೂ, ಸ್ವಾಹಾದೇವಿಗೂ, ಉಷಾದೇವಿಗೂ, ಪುಷ್ಕರನಿಗೂ ಶ್ರೀಹರಿಯ ಗುಣಗಳನ್ನು ನೋಡುವುದರಲ್ಲಿ ಹ್ರಾಸಕ್ರಮವನ್ನು ತಾರತಮ್ಯಾನುಸಾರವಾಗಿ ತಿಳಿಯಬೇಕು.

ಈ ವಿಧವಾದ ಸಾಧನ ತಾರತಮ್ಯದಿಂದ ಮೋಕ್ಷದಲ್ಲಿನ ತಾರತಮ್ಯವು ತಿಳಿದು ಬರುವುದು, ಮಾತ್ರವಲ್ಲದೆ ಆ ಶ್ರೀಹರಿಯ ಅಗಮ್ಯವಾದ ಮಹಾಮಹಿಮೆಯು ಎಷ್ಟು ಅಚಿಂತ್ಯವೆಂಬುದೂ ಸಹ ಗೊತ್ತಾಗುತ್ತದೆ. ಇವೆಲ್ಲಾ ಶ್ರೀಹರಿಯ ಸರ್ವೋತ್ತಮತ್ವಕ್ಕೆ ಪರಿಪೋಷಕಗಳೇ ಆಗಿವೆ.

**"ವೇದೈಶ್ಚ ಪಂಚರಾತ್ರೈಶ್ಚ ಧ್ಯೇಯೋ ನಾರಾಯಣಃ ಪರಃ ।**
**ಪಂಚರಾತ್ರಂ ಚ ವೇದಾಶ್ಚ ವಿದ್ಯೈಕೈವ ವಿಧೀಯತೇ" ॥ ಇತಿ ನಾರಾಯಣ ಶ್ರುತಿಃ ॥**

**ತಾತ್ಪರ್ಯ** :- ಸರ್ವೋತ್ತಮನಾದ ಶ್ರೀಮನ್ನಾರಾಯಣನು ಸಕಲ ವೇದಗಳಿಂದಲೂ ಅದರ ಅರ್ಥ ವಿವರಣ ರೂಪವಾದ ಪಂಚರಾತ್ರದಿಂದಲೂ ತಿಳಿಯಲ್ಪಟ್ಟು ಧ್ಯಾನ ಮಾಡಲ್ಪಡತಕ್ಕವನಾಗಿದ್ದಾನೆ. ವೇದಗಳೂ ಅದರ ವ್ಯಾಖ್ಯಾನ ರೂಪವಾದ ಪಂಚರಾತ್ರವೂ ಏಕಾರ್ಥ ಪ್ರತಿಪಾದಕವಾದ ಒಂದೇ ವಿದ್ಯೆಯಾಗಿದೆ.

**"ಸಾಂಗವೇದಾನ್ ಸೇತಿಹಾಸಾನ್ ಸಪುರಾಣಾನ್ ಸಯುಕ್ತಿಕಾನ್ ।**
**ಸಪಂಚರಾತ್ರಾನ್ವಿಜ್ಞಾಯ ವಿಷ್ಣುರ್ಜ್ಞೇಯಃ ನಚಾನ್ಯಥಾ ॥ ಇತಿ ಬೃಹತ್ತರ್ಕೇ ॥**

**ತಾತ್ಪರ್ಯ** :- ಇತಿಹಾಸಗಳ ಸಹಿತವಾಗಿ, ಪುರಾಣಗಳಲ್ಲಿನ ಉಪಾಖ್ಯಾನಗಳೊಡನೆ, ವೇದಾನುಸಾರಿಗಳಾದ ಯುಕ್ತಿಗಳಿಂದ, ಪಂಚರಾತ್ರಸಹಿತವಾಗಿ ಸಕಲ ವೇದಗಳಿಂದ ವಿಷ್ಣುವು ತಿಳಿಯಲ್ಪಡತಕ್ಕವನೇ ಹೊರತು ಆಪಾತತಃ ಕೇವಲ ವೇದವಾಕ್ಯದಿಂದ ವಿಷ್ಣುವಿನ ಜ್ಞಾನವು ಆಗುವುದಿಲ್ಲವೆಂದು ಬ್ರಹ್ಮತರ್ಕವು ಹೇಳುತ್ತಲಿದೆ.

ವಿಷ್ಣು ಸಂಹಿತಾವಚನದಿಂದ ವಿಷ್ಣುವೂ ಅವನ ಜ್ಯೇಷ್ಠಪುತ್ರನಾದ ಬ್ರಹ್ಮನೂ ಸಕಲ ಲೋಕಕ್ಕೂ ಆಪ್ತತಮರಾಗಿದ್ದಾರೆ. ಇತರ ದೇವತೆಗಳೂ ಮುನಿಗಳೂ ಆಪ್ತರೆನಿಸಿದ್ದಾರೆಂದು ತಿಳಿದು ಬರುತ್ತದೆ. ಆ ವಚನವು ಈ ರೀತಿ ಇದೆ.

**"ಬ್ರಹ್ಮ ವಿಷ್ಣೂ ಹಿ ಸರ್ವಸ್ಯಲೋಕಸ್ಯಾಪ್ತ ತಮೌಮತೌ ।**
**ಆಪ್ತಾಸ್ತದಿತರೇ ಜ್ಞೇಯಾ ದೇವಾ ಮುನಯ ಏವಚ ॥ ಇತಿ ವಿಷ್ಣು ಸಂಹಿತಾಯಾಮ್ ॥**

**ತಾತ್ಪರ್ಯ** :- ಶ್ರುತಿವಚನವೂ ಸಹ ಮುಕ್ತಿಯೋಗ್ಯನಾದ ಚೇತನನಿಗೆ ಈ ದುಃಖಮಯವಾದ ಕರ್ಮಪಾಶರೂಪವಾದ ಸಂಸಾರದಿಂದ ಬಿಡುಗಡೆಯಾಗಬೇಕಾದರೆ ಸರ್ವೋತ್ತಮನಾದ ಆ ನಾರಾಯಣನ ಪ್ರಸಾದದಿಂದಲೇ ಆಗಬೇಕಾಗಿದೆ. ಬೇರೆ ಉಪಾಯವೇ ಇಲ್ಲ. ಆದಕಾರಣ ಭಕ್ತಿಶ್ರದ್ಧಾಪೂರ್ವಕವಾಗಿ ಆ ಶ್ರೀಹರಿಯ ಶ್ರವಣಮನನ ಧ್ಯಾನಗಳನ್ನು ಮಾಡಬೇಕೆಂದು ಈ ಮುಂದಿನ ಶ್ರುತಿವಚನವು ಪ್ರತಿಪಾದಿಸುತ್ತಲಿದೆ.

**"ಯಸ್ಯಪ್ರಸಾದಾತ್ ಪರಮಾರ್ತಿರೂಪಾತ್ ಅಸ್ಮಾತ್ಸಂಸಾರಾತ್ ಮುಚ್ಯತೇ ನಾಪರೇಣ ।**
**ನಾರಾಯಣೋಽಸೌಪರಮೋ ವಿಚಿಂತ್ಯೋಮುಮುಕ್ಷುಭಿಃ ಕರ್ಮಪಾಶಾದಮುಷ್ಮಾತ್ ॥**
**ಇತಿ ಶ್ರುತಿಃ ॥**

**ತಾತ್ಪರ್ಯ** :- ಮೋಕ್ಷಫಲಪ್ರದನಾದ ಶ್ರೀಮನ್ನಾರಾಯಣನು, ಯಾರು ತನ್ನ ಗುಣೋತ್ಕರ್ಷವನ್ನು ಚೆನ್ನಾಗಿ ತಿಳಿದಿರುವನೋ ಅಂತಹ ಜ್ಞಾನಿಯ ವಿಷಯದಲ್ಲಿ ತುಂಬಾ ಪ್ರೀತಿಯುಳ್ಳವನಾಗಿರುತ್ತಾನೆ. ಪರಮಾತ್ಮನ ಗುಣೋತ್ಕರ್ಷ ಜ್ಞಾನವೇ ಅವನ ಪ್ರೀತಿಗೆ ಕಾರಣ ಅಂತಹ ಜ್ಞಾನಿಯ ವಿಷಯದಲ್ಲಿಯೇ ಸುಪ್ರಸನ್ನನಾಗುವನು. ಅವನ ಪ್ರೀತಿಪಾತ್ರನಾಗುವವನು ಮೋಕ್ಷ ಪಡೆಯುತ್ತಾನೆ. ಆದಕಾರಣ ಸಕಲ ವೇದಗಳೂ ಅಂತಹ ಸರ್ವೋತ್ತಮನಾದ ಪರಮಾತ್ಮನ ಮಹಿಮೆಯನ್ನು ಹೇಳುವುದರಲ್ಲೇ ಅವನ ಸರ್ವೋತ್ತಮತ್ವದಲ್ಲಿಯೇ ಮಹಾ ತಾತ್ಪರ್ಯವುಳ್ಳವುಗಳಾಗಿವೆ. ಇದನ್ನು ಈ ಕೆಳಗಿನ ಶ್ರುತಿವಚನವು ಹೇಳುತ್ತಲಿದೆ.

**"ನ ತಾದೃಶೀಪ್ರೀತಿರೀಶಸ್ಯ ವಿಷ್ಣೋಃ ಗುಣೋತ್ಕರ್ಷಜ್ಞಾತರಿ ಯಾದೃಶೀ ಸ್ಯಾತ್ ।**
**ತತ್ಪ್ರೀಣನಾನ್ಮೋಕ್ಷಮಾಪ್ನೋತಿ ಸರ್ವಃ ತತೋ ವೇದಾಃ ತತ್ಪರಾಸ್ಸರ್ವ ಏವ ॥**
**ಇತಿಶ್ರುತಿಃ ॥**

**ತಾತ್ಪರ್ಯ** :- ಪರಮಾತ್ಮನ ಮೂಲರೂಪ ಮತ್ತು ರಾಮಕೃಷ್ಣಾದಿ ಅವತಾರ ರೂಪಗಳ ವಿಷಯವಾಗಿ ವೇದವು ಈ ರೀತಿ ತಿಳಿಸುತ್ತಲಿದೆ.

**ಪೂರ್ಣಮದಃ, ಪೂರ್ಣಮಿದಂ, ಪೂರ್ಣಾತ್ ಪೂರ್ಣಂ ಉದಚ್ಯತೇ ।**
**ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ ॥**

**ಅರ್ಥ ಮತ್ತು ಅಭಿಪ್ರಾಯ** :- ಅದಃ = ಮೂಲರೂಪವು, ಪೂರ್ಣಂ = ಪೂರ್ಣವಾಗಿದೆ, ದೇಶದಿಂದಲೂ, ಕಾಲದಿಂದಲೂ ಗುಣದಿಂದಲೂ ಪೂರ್ಣವಾದುದು, ಇದಂ = ಈ ರಾಮ, ಕೃಷ್ಣಾದಿ ಅವತಾರರೂಪವೂ, ಮೂಲರೂಪದಂತೆಯೇ ಪೂರ್ಣಂ = ಪೂರ್ಣವಾಗಿದೆ. ಪೂರ್ಣಾತ್ = ಪೂರ್ಣವಾದ ಮೂಲನಾರಾಯಣ ರೂಪದಿಂದ, ಪೂರ್ಣಂ = ಪೂರ್ಣವಾದ ಈ ಅವತಾರ ರೂಪವು, ಸಂಖ್ಯಾ ಮಾತ್ರದಿಂದ, ಉದಚ್ಯತೆ = ಉದ್ರಿಚ್ಯತೇ = ಒಂದೇ ಆದಾಗ್ಯೂ ಬಹುಸಂಖ್ಯಾಕವಾಗುತ್ತದೆ. ವಿಶೇಷ ಮಹಿಮೆಯಿಂದ ದಶಾವತಾರಾದಿ ರೂಪಗಳಿಂದ ಪ್ರಾದುರ್ಭವಿಸುತ್ತದೆ. ಪೂರ್ಣಸ್ಯ = ಪೂರ್ಣನಾದ ಶ್ರೀಮನ್ನಾರಾಯಣನ, ಪೂರ್ಣಮಿದಮಾದಾಯ = ಪೂರ್ಣವಾದ ಈ ಅವತಾರರೂಪವನ್ನು ಹಿಂದೆಗೆದುಕೊಂಡು, ಆ ಪೂರ್ಣಮೇವಾವಶಿಷ್ಯತೇ = ಆ ಮೂಲರೂಪವೇ ಉಳಿದಿರುತ್ತದೆ. ತನ್ನದೇ ಆದ ಪೂರ್ಣವಾದ ಅವತಾರ ರೂಪಕ್ಕೆ ತನ್ನ ಪೂರ್ಣವಾದ ಮೂಲರೂಪದಲ್ಲೇ ಅಪ್ಯಯವನ್ನ (ವಿಲೀನತೆಯನ್ನ) ಪಡೆಯುತ್ತಾನೆ.

ಆನಂದಮಯಾದಿಕರಣದಲ್ಲಿ ತೈತ್ತರೀಯೋಪನಿಷತ್ತಿನ ಬ್ರಹ್ಮವಲ್ಲಿಯಲ್ಲಿ ಶ್ರುತವಾಗಿರುವ ಅನ್ನಮಯಾದಿ ಶಬ್ದಗಳಿಂದ ಶ್ರೀಹರಿಯೇ ಪ್ರತಿಪಾದ್ಯನೆಂಬ ಬಗ್ಗೆ ಯಜುಃಸಂಹಿತಾ ವಚನವು ಸಾಧಕವಾಗಿದೆ.

**"ಅತ್ತೃತ್ವಾತ್ ಸರ್ವಲೋಕಾನಾಂ ಅನ್ನಮಿತ್ಯುಚ್ಯತೇ ಹರಿಃ ।**
**ಉಪಜೀವ್ಯತ್ವಭೂತಾನಾಮಿತಿ ವಾನ್ನಂ ಜನಾರ್ದನಃ ॥ ಇತಿ ಯಜುಸ್ಸಂಹಿತಾಯಾಮ್ ॥**

**ತಾತ್ಪರ್ಯ** :- ಸಕಲ ಲೋಕಗಳನ್ನು ಮಹಾಪ್ರಳಯಕಾಲದಲ್ಲಿ ಸಂಹರಿಸುವವನಾದುದರಿಂದಲೂ ಸಕಲ ಪ್ರಾಣಿಗಳಿಗೂ ಉಪಜೀವ್ಯನಾದುದರಿಂದಲೂ ಪರಮಾತ್ಮನು "ಅನ್ನಂ" ಎಂಬ ಶಬ್ದದಿಂದ ಕರೆಯಲ್ಪಡುತ್ತಾನೆ. ಶ್ರುತಿಯೂ ಸಹ ಇದೇ ಅಭಿಪ್ರಾಯವನ್ನು ಉಳ್ಳದ್ದಾಗಿದೆ.

"ಅದ್ಯತೇ ಅತ್ತಿ ಚ ಭೂತಾನಿ ತಸ್ಮಾದನ್ನಂ ತದುಚ್ಯತೇ" ॥ ಇತಿ

"ಪರಮಾತ್ಮನು ಅನಂತ ನಾಮಕನಾದುದರಿಂದಲೇ ಅನಂತ ಕಲ್ಯಾಣಗುಣನೆಂದು ಹೇಳಲ್ಪಡುತ್ತಾನೆ. ಪ್ರತ್ಯೇಕ ಪ್ರತ್ಯೇಕವಾದ ನಾಮಗಳೆಲ್ಲಾ ಅವನ ಗುಣಗಳನ್ನೆ ಹೇಳುತ್ತವೆ" ಎಂದು ಬ್ರಹ್ಮಾಂಡಪುರಾಣವಚನವುಂಟು.

**"ಅನಂತನಾಮಕತ್ವಾಚ್ಚ ಸೋಽನಂತಗುಣ ಈರಿತಃ ।**
**ಪೃಥಕ್. ನಾಮಾನಿಯಸ್ಮಾತ್ತದ್ಗುಣಾನೇವ ಪ್ರಚಕ್ಷತೇ ॥ ಇತಿ ಬ್ರಹ್ಮಾಂಡೇ ॥**
**ವರ್ಜಿತಃ ಸರ್ವದೋಷೇಭ್ಯೋ ಗುಣಸರ್ವಸ್ವಮೂರ್ತಿಮಾನ್ ।**
**ಸ್ವತಂತ್ರೋ ಯದ್ವಶಾಸ್ಸರ್ವೇ ಸ ವಿಷ್ಣುಃ ಪರಮೋ ಮತಃ" ॥ ಇತಿ ಶ್ರುತಿಃ ॥**

**ತಾತ್ಪರ್ಯ** :- ಸಕಲ ದೋಷರಹಿತನೂ, ಅನಂತಕಲ್ಯಾಣಗುಣಾತ್ಮಕದೇಹನೂ, ಸರ್ವತಂತ್ರಸ್ವತಂತ್ರನೂ ಆದ ಯಾವ ವಿಷ್ಣುವಿನ ಅಧೀನವಾಗಿ ಸಕಲವೂ ಇರುತ್ತದೆಯೋ ಅಂತಹ ಹರಿಯು ಸರ್ವೋತ್ತಮನೆಂದು ಅಭಿಪ್ರಾಯ.

**ಸರ್ವೋತ್ತಮತ್ವೇ ದೇವಸ್ಯ ವಿಷ್ಣೋಃ ಮಹಾತಾತ್ಪರ್ಯಂ ಸ್ಥಿತಂ ಚಾಸ್ಯತ್ರ ಸತ್ಯಮ್ ।**
**ತತೋ ವೇದಾಃ ಶಾಸ್ತ್ರಾಣಿ ಸರ್ವ ಏವ ॥**

**ತಾತ್ಪರ್ಯ** :- ವೇದಶಾಸ್ತ್ರಂಗಳೆಲ್ಲಾ ಸ್ವಾಮಿಯಾದ ದೇವದೇವನಾದ ವಿಷ್ಣುವಿನ ಸರ್ವೋತ್ಕರ್ಷದಲ್ಲಿಯೇ ಸರ್ವಸದಾಗಮಗಳಿಗೂ ಮಹಾತಾತ್ಪರ್ಯವು, ಬೇರೆ ದೇವತೆಯ ವಿಷಯದಲ್ಲಿ ಇಲ್ಲವೆಂದು ಪ್ರಮಾಣ ವಚನವು ತಿಳಿಸುತ್ತಲಿದೆ.

**ಸರ್ವಜ್ಞಂ ಸರ್ವಕರ್ತಾರಂ ನಾರಾಯಣಮನಾಮಯವರ್ ।**
**ಸರ್ವೋತ್ತಮಂ ಜ್ಞಾಪಯಂತಿ ಮಹಾತಾತ್ಪರ್ಯಮತ್ರ ಹಿ ॥ ಇತಿ**

**ತಾತ್ಪರ್ಯ** :- ಸಕಲಪ್ರಮಾಣಗಳೂ ಸರ್ವಜ್ಞನಾದ, ಸರ್ವಕರ್ತನಾದ, ದೋಷರಹಿತನಾದ, ಸರ್ವೋತ್ತಮನಾದ ಪರಮಾತ್ಮನನ್ನು ತಿಳಿಸುತ್ತಲಿವೆ. ಇದರಲ್ಲೇ ಎಲ್ಲ ಸದಾಗಮಗಳಿಗೂ ಮಹಾತಾತ್ಪರ್ಯವು.

ಪರಮಾತ್ಮನ ಮಹಿಮಾತಿಶಯವನ್ನೂ ಇತರರ ಪರತಂತ್ರತೆಯನ್ನೂ, ಅಸಾಮರ್ಥ್ಯವನ್ನೂ ಶ್ರುತಿವಾಕ್ಯವು ಸ್ಪಷ್ಟಪಡಿಸುತ್ತಲಿದೆ.

**ನಿಷುಸೀದ ಗಣಪತೇ ಗಣೇಷು ತ್ವಾಂ ಆಹುರ್ವಿಪ್ರತಮಂ ಕವೀನಾಮ್ ।**
**ನ ಋತೇ ತ್ವತ್ಕ್ರಿಯತೇ ಕಿಂಚನಾರೇ ಮಹಾಮರ್ಕಂ ಮಘವನ್ ಚಿತ್ರಮರ್ಚ ।**
**(ಋಕ್ ಸಂ. ೮-೬-೨೩) ಇತಿ ಶ್ರುತಿ:**

**ಅರ್ಥ** :- ಹೇ ಗಣಪತೇ = ಎಲ್ಲ ಇಂದ್ರಿಯಗಳ ಸ್ತೋಮಕ್ಕೆ (ಗಣಕ್ಕೆ) ಸ್ವಾಮಿಯಾದ, ಮಘವನ್ = ಧನವಂತನಾದ, ಯಶೋವಂತನಾದ, ಯಜ್ಞಸ್ವಾಮಿಯಾದ, ಭಗವನ್ = ಭಗವಂತನೇ, ನಿರವಧಿಕ ಷಡ್ಗುಣೈಶ್ವರ್ಯಸಂಪನ್ನನಾದ ಪರಮಾತ್ಮನೇ; ತ್ವಂ = ನೀನು, ಗಣೇಷು = ನಿನ್ನನ್ನು ಪೂಜಿಸುವ ಅರ್ಚಕರ ಇಂದ್ರಿಯಗಣಗಳಲ್ಲಿ, ನಿಷುಸೀದ = ಚೆನ್ನಾಗಿ ಸನ್ನಿಹಿತನಾಗಿರು. ಅಲ್ಲಿ ಇದ್ದು, ಮಹಾಂ = ಮಹತ್ತ್ವದಿಂದ ಕೂಡಿದ, ಮಹಾತ್ಮನಾದ, ಅತ್ಯಂತ ಪೂಜ್ಯನಾದ, ಅರ್ಕಂ = ಅರಂ = ಅಲಂ ಕಂ = ಸುಖಂ ಯಸ್ಯ ಸಃ = ಪರಮಾನಂದದಿಂದಿರುವ, ಚಿತ್ರಂ = ಅದ್ಭುತನಾದ, ಆಶ್ಚರ್ಯ ತಮನಾದ, ತ್ವಾಂ = ನಿನ್ನನ್ನೇ, ಪೂಜಯ = ಪೂಜಿಸಿಕೋ. ನನಗೇನೇ (ಪರಮಾತ್ಮನಿಗೇನೇ) ಪೂಜ್ಯತ್ವ ವಿಕೆಂದು ಕೇಳಬೇಡ, ಯಾವ ಕಾರಣದಿಂದ, ತ್ವಾಮೇವ = ನಿನ್ನನ್ನೇ, ಕವೀನಾಂ = ಜ್ಞಾನಿಗಳಲ್ಲಾ. ವಿಪ್ರತಮಂ = ವಿಶೇಷವಾಗಿ ಪ್ರಕೃಷ್ಟತಮನೆಂದು (ಕವಯಃ = ಜ್ಞಾನಿಗಳು), ಆಹುಃ = ಹೇಳುತ್ತಾರೆ. ಅದಕಾರಣ ನಿನಗೇನೇ ಪೂಜ್ಯತ್ವವು, ಪೂಜಕತ್ವವೂ ನಿನಗೇನೇ ಮುಖ್ಯವಾಗಿದೆ. ಮತ್ತೂ ಬೇರೆ ಯಾವ ಕಾರಣದಿಂದ ತ್ವದೃತೇ = ನಿನ್ನ ಹೊರತಾಗಿ, ಆರೇ = ದೂರದಲ್ಲಾಗಲಿ, ಹತ್ತಿರದಲ್ಲಾಗಲಿ, ಯಾರಿಂದಲೂ, ಕಿಂಚನ ನ ಕ್ರಿಯತೆ = ಕಿಂಚಿತ್ತು ಚಲನವೂ ಮಾಡಲು ಸಾಧ್ಯವಿಲ್ಲ.

**ರುದ್ರ ಸಮಾಶ್ರಿತಾ ದೇವಾ: ರುದ್ರೋ ಬ್ರಹ್ಮಾಣಮಾಶ್ರಿತ: ।**
**ಬ್ರಹ್ಮಾ ಮಾಮಾಶ್ರಿತೋ ನಿತ್ಯಂ ನಾಹಂ ಕಂಚಿದುಪಾಶ್ರಿತ: ।। ಇತಿ ಭಗವದ್ವಚನಮ್ ।**

**ತಾತ್ಪರ್ಯ** :- ದೇವತೆಗಳೆಲ್ಲರೂ ರುದ್ರದೇವರನ್ನು ಆಶ್ರಯಿಸಿರುತ್ತಾರೆ. ಆ ರುದ್ರದೇವರು ಚತುರ್ಮುಖನನ್ನು ಆಶ್ರಯಿಸಿರುವವರು. ಆ ಬ್ರಹ್ಮನು ನಿತ್ಯವೂ ನನ್ನನ್ನು ಆಶ್ರಯಿಸಿರುತ್ತಾನೆ. ನಾನು ಯಾವ ಕಾಲದಲ್ಲೂ ದೇಶದಲ್ಲೂ ಯಾರನ್ನೂ ಆಶ್ರಯಿಸಿಲ್ಲ.

**ಬಲಮಿಂದ್ರಸ್ಯ ಗಿರಿಶ: ಗಿರಿಶಸ್ಯ ಬಲಂ ಮರುತ್ ।**
**ಬಲಂ ತಸ್ಯ ಹರಿ: ಸಾಕ್ಷಾತ್ ನ ಹರೇರ್ಬಲಮನ್ಯತ: ॥ ಇತಿಭಾರತೇ ॥**

**ತಾತ್ಪರ್ಯ** :- ಇಂದ್ರನಿಗೆ ಬಲರೂಪನಾಗಿ ಬಲಪ್ರದನಾಗಿ ರುದ್ರನೂ, ರುದ್ರನಿಗೆ ಮುಖ್ಯಪ್ರಾಣನೂ, ಆ ಮುಖ್ಯ ಪ್ರಾಣನಿಗೆ ಬಲದಾಯಕನಾಗಿ ಶ್ರೀಹರಿಯೂ ಇರುತ್ತಾರೆ. ಆದರೆ ಶ್ರೀಹರಿಗೆ ಅವನೇ ಸರ್ವೋತ್ತಮನಾಗಿ ಸರ್ವತಂತ್ರ ಸ್ವತಂತ್ರ ನಾಗಿರುವುದರಿಂದ ಅವನಿಗೆ ಬೇರೆ ಮತ್ತಾರೂ ಬಲಪ್ರದರಿಲ್ಲ.

**ಪಂಚರಾತ್ರಂ ಚ ವೇದಾಶ್ಚ ಮೂಲರಾಮಾಯಣಂ ತಥಾ ।**
**ಪುರಾಣಂ ಭಾಗವತಂ ಚೈವ ಭಾರತಂ ಚ ನ ಭಿದ್ಯತೇ ॥**
**ವಿಶೇಷ್ಯಾಪಿ ಯಥಾ ವಿಷ್ಣೋಃ ಆಧಿಕ್ಯಪ್ರತಿಪಾದನಮ್ ।**
**ತದ್ಭಕ್ತಾನಾಂ ಚ ಕ್ರಮಶಃ ನ ವಿಪಾರ್ಥೋ(?) ನ ಚಾಪರಃ ॥ ಇತಿ ಬ್ರಹ್ಮಾಂಡೇ ॥**

**ತಾತ್ಪರ್ಯ** :- ಪಂಚರಾತ್ರ, ವೇದಗಳು, ಮೂಲರಾಮಾಯಣ, ಭಾಗವತಪುರಾಣ, ಮಹಾಭಾರತ ಇವೆಲ್ಲವೂ ಶ್ರೀಹರಿಸರ್ವೋತ್ತಮತ್ವದಲ್ಲೇ ಮಹಾತಾತ್ಪರ್ಯವುಳ್ಳವುಗಳಾಗಿವೆ. ತಾರತಮ್ಯಕ್ರಮದಿಂದ ಆ ಶ್ರೀಹರಿಯ ಭಕ್ತರನ್ನೂ ಪ್ರತಿ ಪಾದಿಸುತ್ತಲಿವೆ. ಇದಕ್ಕೆ ವಿರುದ್ಧವಾಗಿ ಬೇರೆ ಅರ್ಥವು ಅವುಗಳಿಗೆ ಇರುವುದಿಲ್ಲ.

ಐತರೇಯಸಂಹಿತಾವಚವೂ ಸಹ ಸರ್ವತಂತ್ರಸ್ವತಂತ್ರನಾದ ಶ್ರೀಮನ್ನಾರಾಯಣನೇ ಸೃಷ್ಟಿಗೆ ಮುಂಚೆ ಮಹಾಪ್ರಳಯದಲ್ಲಿದ್ದನೆಂದೂ ರಮಾದಿಗಳೆಲ್ಲ ಅವನ ಅಧೀನರಾಗಿದ್ದಾರೆಂದೂ ಪ್ರತಿಪಾದಿಸುತ್ತಲಿದೆ.

**"ಏಕೋ ನಾರಾಯಣಸ್ತ್ವಾಸೀತ್ ಪ್ರಳಯೇ ರಮಯಾ ಸಹ ।**
**ನಿತ್ಯಾಶೇಷಗುಣತ್ವಾಚ್ಚ ಆತ್ಮೇತಿ ಶ್ರುತಿಚೋದಿತಃ ॥**
**ಇದಂ ಸರ್ವಮಪೇಕ್ಷ್ಯಾಸೌ ಕಾಲತೋ ಗುಣತಸ್ತಥಾ ।**
**ಅಗ್ರೇ. ಏಷಮಾಸ್ತ್ರೀಶಃ ತದ್ವಶತ್ವಾದ್ರಮಾಪಿ ಸಾ ॥**
**ವಿದ್ಯಮಾನಾಪಿ ನಾಗ್ರಸ್ಥಾಗುಣೈರೂನಾ ತತೋ ಯತಃ ॥**
**ಇತ್ಯೈತರೇಯಸಂಹಿತಾಯಾಮ್ ॥**

**ತಾತ್ಪರ್ಯ** :- ಸೃಷ್ಟಿಗೆ ಮುಂಚೆ ಮಹಾಪ್ರಳಯದಲ್ಲಿ ರಮಾದೇವಿಯ ಸಹಿತನಾಗಿ ಸ್ವತಂತ್ರನಾದ ಪರಮಾತ್ಮ ನೊಬ್ಬನೇ ಇದ್ದನು. ಅವನು ನಿತ್ಯವೂ ವ್ಯಾಪ್ತವಾದ ಪೂರ್ಣವಾದ ಗುಣಗಣಗಳಿಂದ ಭರಿತನಾದುದರಿಂದ "ಆತ್ಮಾ" ಎಂಬುದಾಗಿ ಶ್ರುತಿಗಳಲ್ಲಿ ಹೇಳಲ್ಪಟ್ಟಿರುತ್ತಾನೆ.

ಕಾಲದಿಂದಲೂ, ಗುಣದಿಂದಲೂ, ಸಕಲ ಪದಾರ್ಥಗಳಿಗಿಂತಲೂ ಭಿನ್ನನಾಗಿ ಎಲ್ಲಕ್ಕೂ ನಿಯಾಮಕನಾಗಿರುವುದರಿಂದ "ಇದಮಗ್ರ ಆಸೀತ್" ಎಂದು ವೇದವು ಪರಮಾತ್ಮನ ಸ್ವಾತಂತ್ರ್ಯಾದಿ ಗುಣಗಳನ್ನು ತಿಳಿಸುವ ದೃಷ್ಟಿಯಿಂದ ಸ್ವತಂತ್ರ ನಾದವನು ಒಬ್ಬನೇ ಇದ್ದನೆಂದು ಹೇಳುತ್ತಲಿದೆ. ಮಹಾಪ್ರಳಯದಲ್ಲಿ ಪರಮಾತ್ಮನ ಜೊತೆಯಲ್ಲಿ ನಿತ್ಯ ವಿಯೋಗಿನಿಯಾದ ರಮಾದೇವಿಯು ಇರುವವಳಾದಾಗ್ಯೂ, ಪರಮಾತ್ಮನ ಅಧೀನಳಾಗಿರುವುದರಿಂದ ಅವನಿಗಿಂತಲೂ ಗುಣಗಳಲ್ಲಿ ಊನ ಳಾಗಿರುವ ಪ್ರಯುಕ್ತ (ಕಮ್ಮಿ) ವೇದವು ಅವಳನ್ನು 'ಇದ್ದಳೆಂದು' ಪರಮಾತ್ಮನಂತೆ ಹೇಳಿಲ್ಲ. ಕೇವಲ ಪರಾಧೀನವಾಗಿರುವ

ಪದಾರ್ಥವನ್ನು ಇಲ್ಲವೆಂದು ಹೇಳುವ ವಾಡಿಕೆಯು ಉಂಟು. ಆದಕ್ಕೆ ಸ್ವತಂತ್ರವಾಗಿಲ್ಲವೆಂದೇ ಅಭಿಪ್ರಾಯ. ಮಹಾ ಪ್ರಳಯದಲ್ಲಿ ರಮಾದೇವಿಯು ಇದ್ದಳು. ನಿತ್ಯವಾದ ಜಡವಾದ ಸೂಕ್ಷ್ಮ ಪ್ರಕೃತಿಯೂ ಇತ್ತು. ಜೀವರೂ ಇದ್ದರು, ಕಾಲವೂ ಇತ್ತು. ದಿಕ್ಕು ಇತ್ತು. ಹೀಗೆ ಬೇರೆಲ್ಲ ಪದಾರ್ಥಗಳಿದ್ದಾಗ್ಯೂ ಸ್ವತಂತ್ರವಾಗಿಲ್ಲವೆಂದೇ ಅಭಿಪ್ರಾಯ.

ಮತ್ತು ಪರಮಾತ್ಮನಿಗೆ ಸಮರಿಲ್ಲ. ಅಧಿಕರೂ ಇಲ್ಲ. ಆದಕಾರಣ ವೇದವು "ಏಕಮೇವಾದ್ವಿತೀಯಂ" ಎಂದು ಹೇಳುತ್ತಲಿದೆ.

ಪರಮಾತ್ಮನಲ್ಲಿ ಸ್ವಗತವಾದ ಭೇದವೂ ಇಲ್ಲ. ಆದ್ದರಿಂದ ಬ್ರಹ್ಮವು ಶಾಶ್ವತವೆಂದೂ ಭಾವವೃತ್ತ ಎಂಬ ಪ್ರಮಾಣ ಗ್ರಂಥವು ಹೇಳುತ್ತಲಿದೆ.

"ಏಕಮೇವಾದ್ವಿತೀಯಂ ತತ್ಸಮಾಧಿಕವರ್ಜನಾತ್ ॥
ಸ್ವಗತಾನಾಂ ಚ ಭೇದಾನಾಂ ಅಭಾವಾತ್ ಬ್ರಹ್ಮ ಶಾಶ್ವತಮ್ ॥ ಇತಿಭಾವವೃತ್ತೇ ॥
ಅಥವಾ ಪ್ರವೃತ್ತೇ
ಭೇದಾಭೇದನಿವೃತ್ತ್ಯರ್ಥಂ ಏವಶಬ್ದೋಽವಧಾರಕಃ।
ಸಮಾಧಿಕನಿವೃತ್ತ್ಯರ್ಥಂ ಅದ್ವಿತೀಯಪದಂ ತಥಾ ॥
ಭೇದಾಭೇದೇಽಪಿ ಏಕಶಬ್ದೋ ಯತೋ ಅವಯವಿನಿ ಸ್ಮೃತಃ।
ಏಕಮೇವೇತ್ಯತಃ ಪ್ರಾಹ ನಾರಾಯಣಮಿಯಂ ಶ್ರುತಿಃ।
ಸಮೇ ದ್ವಿತೀಯಶಬ್ದಃ ಸ್ಯಾತ್ ಇತ್ಯಾಹ ಪರಮಾ ಶ್ರುತಿಃ ॥
ಇತಿಸಾಮಸಂಹಿತಾಯಾಮ್ ॥

ಈ ಮೇಲೆ ಕಂಡ ಸಾಮಸಂಹಿತಾವಚನವು "ಸದೇವ ಸೋಮ್ಯ ಇದಮಗ್ರ ಆಸೀತ್ ಏಕಮೇವಾ ದ್ವಿತೀಯಮ್" ಎಂಬ ಶ್ರುತಿಯಲ್ಲಿರುವ ಪ್ರತಿಪದಕ್ಕೆ ವ್ಯಾಖ್ಯಾನರೂಪವಾಗಿದೆ.

ಏಕಂ = ಅಭಿನ್ನಂ = ಸ್ವಾವಯವಾದಿನಾ, ಘಟಾದಿಗಳು ಒಂದೇ ಆದಾಗ್ಯೂ ಸ್ವಾವಯವಗಳಿಂದ ಭೇದವುಳ್ಳದ್ದಾಗಿ ಕಂಡುಬಂದಿರುವುದರಿಂದ ಅಂತಹ ಅವಯವಭೇದವಾಗಲಿ ಭೇದಾಭೇದವಾಗಲಿ ಇಲ್ಲವೆಂಬುದನ್ನು ಹೇಳಲು "ಏವ" ಎಂದು ಶಬ್ದವು ಇದೆ.

ರಮಾದಿಗಳು ಇರುವಾಗ ಸದೇವ ಎಂಬುದು ಹೇಗೆ ಕೂಡುತ್ತದೆಯೆಂಬುದಕ್ಕೆ ಉತ್ತರವಾಗಿ "ಅದ್ವಿತೀಯಂ" ಎಂದು ಹೇಳಿದೆ. ಸಮಾನವರ್ಜಿತ, ಅಧಿಕವರ್ಜಿತ, ಎಂಬ ಅಭಿಪ್ರಾಯದ ಅದ್ವಿತೀಯ ಎಂಬ ಪದವು ಕಂಡುಬಂದಿದೆ.

ಸಮರೇ ಇಲ್ಲವಾದಮೇಲೆ ಅಧಿಕರೆಲ್ಲಿಂದ ಬಂದಾರು ಎಂಬ ಅಭಿಪ್ರಾಯ. ಅಂದರೆ ಸ್ವಾವಯವಗುಣ ಕರ್ಮಾದಿಗಳಿಂದ ಪರಮಾತ್ಮನಿಗೆ ಭೇದವಿಲ್ಲವೆಂಬುವನ್ನು ಸ್ವಗತಭೇದವರ್ಜಿತತ್ವವನ್ನು ಏಕಪದವು ತಿಳಿಸುತ್ತಲಿದೆ.

ಸಮಾನವರ್ಜಿತತ್ವ (ಸಮರಿಲ್ಲ ಎಂಬುದನ್ನು) ವನ್ನು ಅದ್ವಿತೀಯಪದವು ಹೇಳುತ್ತಲಿದೆ.

ಸಮರಿಲ್ಲವೆಂದಮೇಲೆ ಅಧಿಕವಿರ್ಲವೆನ್ನುವುದು ಕೈಮುತಿಕ ನ್ಯಾಯಸಿದ್ಧವೆಂದು ಅಭಿಪ್ರಾಯ. ಏಕಂ ಎಂಬುದರಿಂದ ಅಭಿನ್ನ = ಸ್ವಾವಯವಗುಣಕರ್ಮಾದಿಗಳಿಂದ ಅಭಿನ್ನ ಎಂದು ಅರ್ಥವಾದಾಗ್ಯೂ, ಘಟವು ಒಂದೇ ಆದಾಗ್ಯೂ, ತನ್ನ ಅವಯವಾದಿಗಳಿಂದ ಭೇದಾಭೇದವು ಅದರಲ್ಲಿ ಕಂಡುಬರುವಂತೆ ಪರಮಾತ್ಮನಿಗೂ ಆತನ ಅವಯವಗುಣಕ್ರಿಯಾದಿಗಳಿಗೂ ಭೇದವಿಲ್ಲದಿದ್ದರೂ ಭೇದಾಭೇದವು ಉಂಟೋ ಎಂಬ ಶಂಕೆಗೆ ಪರಿಹಾರಕವಾಗಿ ಏಕಂ "ಏವ" ಎಂಬ ಅವಧಾರಣವು ಕಂಡುಬಂದಿದೆ. ಭೇದಾಭೇದನಿವೃತ್ತಿಗಾಗಿ ಅವಧಾರಣವು. ಸಮರಿಲ್ಲ ಎಂಬುದು ಅದ್ವಿತೀಯಪದದಿಂದ ಗೊತ್ತಾಗುತ್ತದೆ. ಅಧಿಕರಿಲ್ಲವೆಂಬುದು ಅರ್ಥಿಕಾರ್ಥವಾಗಿದೆ.

ಈ ಸಾಮಸಂಹಿತಾವಚನವನ್ನು "ಏಕಮೇವಾದ್ವಿತೀಯಂ" ಇತ್ಯಾದಿಛಾಂದೋಗ್ಯಮಂತ್ರವ್ಯಾಖ್ಯಾನ ಕಾಲದಲ್ಲಿ ಛಾಂದೋಗ್ಯಭಾಷ್ಯದಲ್ಲಿ ಶ್ರೀಮದಾಚಾರ್ಯರು ಉದಾಹರಿಸಿರುತ್ತಾರೆ. ಮಹಾಪ್ರಳಯಕಾಲದಲ್ಲಿ ಇಷ್ಟೇ ಪದಾರ್ಥಗಳಿದ್ದುವೆಂಬುವನ್ನು ಬ್ರಹ್ಮತರ್ಕವಚನವು ತೋರಿಸುತ್ತಲಿದೆ.

**"ಸರ್ವಸಂಹಾರಕಂ ವಿಷ್ಣುಂ, ದೇವೀಂ ಜೀವಾನ್ ತಥೈವ ಚ।**
**ಕಾಲಂ ತ್ರಿಗುಣಸಾಮ್ಯಂ ಚ ಕರ್ಮಾಣಿ ಪ್ರಾಣಮಿಂದ್ರಿಯಮ್ ॥**
**ಸಂಸ್ಕಾರಂ ಚೈವ ವೇದಾಂಶ್ಚ ಸರ್ಗೇ ಕಿಂಚಿಲ್ಲಯೇಽಪ್ಯಭೂತ್ ॥ಇತಿ ಬ್ರಹ್ಮತರ್ಕೇ ॥**

**ತಾತ್ಪರ್ಯ** :- ಮಹಾಪ್ರಳಯಕಾಲದಲ್ಲಿ ಸರ್ವಸಂಹಾರಕನಾದ ಸ್ವತಂತ್ರನಾದ ಶ್ರೀ ವಿಷ್ಣುವು ಇದ್ದನು. ಅಸ್ವತಂತ್ರಳಾದ ರಮಾದೇವಿಯೂ ಇದ್ದಳು. ಅಸ್ವತಂತ್ರರಾದ ಜೀವರೆಲ್ಲರೂ ಇದ್ದರು. ಅದೇ ರೀತಿ ಪರಮಾತ್ಮನ ಅಧೀನಗಳಾದ ಕಾಲ, ಸತ್ತ್ವ, ರಜಸ್ಸು ತಮೋಗುಣಗಳ ಸಾಮ್ಯಾವಸ್ಥಾರೂಪವಾದ ಜಡವಾದ ಮೂಲಪ್ರಕೃತಿ, ಕರ್ಮಗಳು, ಮುಖ್ಯಪ್ರಾಣ, ಇಂದ್ರಿಯಾಭಿಮಾನಿದೇವತೆಗಳು, ಸಂಸ್ಕಾರ, ವೇದಗಳು ಇವುಗಳು ಹೊರತು ಬೇರೆ ಏನೂ ಇರಲಿಲ್ಲವೆಂದು ಬ್ರಹ್ಮತರ್ಕವು ಹೇಳುತ್ತಿದೆ.

ಮಹಾವರಾಹಪುರಾಣವು ಪರಮಾತ್ಮನನ್ನು ಸರ್ವಸಂಪೂರ್ಣಸದ್ಗುಣಭರಿತನಾದುದರಿಂದ ಸರ್ವಸಂಹಾರಕನಾದುದರಿಂದಲೂ, ಕಾಲನಾಮಕನೆಂದು (ಕಾಲನೆಂದು) ಕರೆಯಲ್ಪಟ್ಟಿರುತ್ತಾನೆಂದು ತಿಳಿಸುತ್ತಲಿದೆ.

**ಕಾಲಃ ಕಲಿತಸಂಪೂರ್ಣಸದ್ಗುಣತ್ವಾತ್ ಜನಾರ್ದನಃ।**
**ಸಂಹಾರಾತ್ ಸರ್ವವಿತ್ತ್ವಾದ್ವಾ ಸರ್ವವಿದ್ಯಾವಶೇನ ವಾ ॥**
**(ಇತಿಮಹಾವರಾಹಪುರಾಣ)**

ಸರ್ವಜ್ಞನಾದ ಸ್ವತಂತ್ರನಾದ ಹಯಗ್ರೀವರೂಪಿಯಾದ ಪರಮಾತ್ಮನೇ ಸಕಲವೇದದ್ರಷ್ಟೃವು. ಆತನೇ ಪರಮರ್ಷಿಯು. ಸಕಲಮಂತ್ರಗಳಿಗೂ ಪ್ರಥಮದ್ರಷ್ಟೃವು. ಆತನ ಪ್ರಸಾದದಿಂದಲೇ ತಪಸ್ಸಿನಿಂದ ಪರಮಾತ್ಮನ ಪರಮಾನುಗ್ರಹ ಪಡೆದು ಬ್ರಹ್ಮಾದಿ ಇತರದೇವತೆಗಳು ಮಂತ್ರಗಳನ್ನು ಪಡೆದರು. ಪ್ರತ್ಯೇಕವಾಗಿ ಇತರ ಋಷಿಗಳೂ ಸಹ ಬ್ರಹ್ಮಾದಿ ದೇವತೆಗಳ ಅನುಗ್ರಹದಿಂದ ಮಂತ್ರಗಳನ್ನು ತಪಸ್ಸು ಮಾಡಿ ಪಡೆದರು. ತಪಸ್ಸೇ ಮೊದಲಾದ ಸಾಧನಗಳಿಲ್ಲದಂತೆ ಸ್ವತಂತ್ರನಾಗಿ ಸಕಲ ಮಂತ್ರದ್ರಷ್ಟಾರನಾದ ಹಯಾಸ್ಯನ ಹೊರತಾಗಿ ಬೇರೆ ಯಾರೂ ಇಲ್ಲವೆಂದು, ಆ ಹಯಗ್ರೀವನ ಅನುಗ್ರಹವಿಲ್ಲದೆ ಯಾರೂ ಅರಿಯಲಾರರೆಂದೂ ಪ್ರಮಾಣವಿಶೇಷವು ಪ್ರಮಾಣಗ್ರಂಥವು ಹೇಳುತ್ತಲಿದೆ.

ಇದನ್ನು ಶ್ರೀಮದೈತರೇಯೋಪನಿಷದ್ಭಾಷ್ಯದಲ್ಲಿ ಶ್ರೀಮದಾಚಾರ್ಯರು ಉದಾಹರಿಸಿರುತ್ತಾರೆ. ಆ ವಾಕ್ಯಗಳು ಈ ಕೆಳಗೆ ಕಂಡಂತಿವೆ.

**"ಋಷಜ್ಞಾನ ಇತಿಹ್ಯಸ್ಮಾದ್ಧಾತೋಃ ಸರ್ವಜ್ಞಏಕರಾಟ್ ।**
**ವೇದದೃಷ್ಟ್ಯಾಪರಮಋಷಿಃ ಹಯಾಸ್ಯಃ ಪುರುಷೋತ್ತಮಃ ।।**
**ಮಂತ್ರಾಣಾಂ ಪ್ರಥಮೋ ದ್ರಷ್ಟಾ ಸರ್ವೇಷಾಂ ಯತ ಏವ ತು ।**
**ಋಷಿಣೋಕ್ತಮಿತಿ ಪ್ರಾಹುಃ ಮಂತ್ರೋಕ್ತಂ ಬ್ರಾಹ್ಮಣಾನ್ಯತಃ ॥**

**ತತ್ಪ್ರಸಾದಾದ್ವಿತಪಸಾ ಪಶ್ಚಾತ್ತಂತ್ರಾನ್ಪ್ರಪೇದಿರೇ ।**
**ಬ್ರಹ್ಮಾದ್ಯಾ ಬ್ರಾಹ್ಮಣಾಂ ಪಶ್ಚಾತ್ ತೈಃ ದೃಷ್ಟಂ ಋಷಿಭಿಃ ಪೃಥಕ್ ॥**
**ಮಂತ್ರಾಶ್ಚೋಪನಿಷಚ್ಚೈವ ಸಾಕ್ಷಾತ್ಸ್ಯಾಸುಮತ್ತಮಃ ।**
**ಪ್ರಥಮಂ ತದ್ಧಯಾಸ್ಯೇನ ದೃಷ್ಟಂ ಕೇನಚಿದೀಕ್ಷ್ಯತೇ ॥**
**ವಿನಾ ಪೃಥಕ್ ತತೋ ದೃಶ್ಯೇತ್ ಬ್ರಾಹ್ಮಣಂ ಮುನಿಭಿರ್ಯತಃ ।**
**ಮಂತ್ರಾಶ್ಚೋಪನಿಷಚ್ಚೈವ ಬ್ರಾಹ್ಮಣಾದುತ್ತಮಾಸ್ತತಃ ॥**
**ತತ್ರಾಪ್ಯುಪನಿಷಚ್ಛ್ರೇಷ್ಠಾ ಯುಕ್ತಾವಸ್ಥಾಧಿಗಮ್ಯತೇ ॥**
**ಇತ್ಯಾದಿ ।। ಪ್ರಮಾಣವಿವೇಕೇ ॥**

ಆಪಾತತಃ ಅಭೇದ ಪರತ್ವೇನ ತೋರತಕ್ಕ ವೇದವಾಕ್ಯಗಳೆಲ್ಲವೂ

**"ಸ್ವಾತಂತ್ರ್ಯೇ ಚ ವಿಶಿಷ್ಟತ್ವೇ ಸ್ಥಾನಮತ್ಯೈಕ್ಯಯೋರಪಿ ।**
**ಸಾದೃಶ್ಯೇ ಚೈಕ್ಯವಾಕ್ ಸಮ್ಯಕ್ ಸಾವಕಾಶಾ ಯಥೇಷ್ಟತಃ" ॥**

ಎಂಬಂತೆ ಇವೆ.

(೧) ಸ್ವಾತಂತ್ರ್ಯದಿಂದ ಅಭೇದ ವ್ಯವಹಾರಕ್ಕೆ ಉದಾಹರಣೆ:
ಇಡೀ ಗ್ರಾಮವನ್ನು ತನ್ನ ಅಧೀನತೆಗೆ ತೆಗೆದುಕೊಂಡವನನ್ನು ಕುರಿತು "ಅಯಂ ಗ್ರಾಮೋ ಅಯಮೇವ" ಎಂಬುದಾಗಿ ಅಭೇದವ್ಯವಹಾರವು ಕಂಡುಬಂದಿದೆ.

(೨) ವಿದ್ಯಾದಿಗಳಿಂದ ವಿಶಿಷ್ಟನಾದ ಶ್ರೇಷ್ಠನಾದ ಬ್ರಾಹ್ಮಣನನ್ನು ಅಧಿಕರಿಸಿ "ಅಯಮೇವ ಬ್ರಾಹ್ಮಣೋ ಅಸ್ಮಿನ್ ಗ್ರಾಮೇ" (ಈ ಗ್ರಾಮದಲ್ಲಿ ಇವನೇ ಬ್ರಾಹ್ಮಣ ಎಂಬುದಾಗಿ ವೈಶಿಷ್ಟ್ಯವಿವಕ್ಷೆಯಿಂದ ವ್ಯವಹಾರವು ಕಂಡುಬಂದಿದೆ.)

(೩) ಸ್ಥಾನೈಕ್ಯದಿಂದ "ಸಾಯಂ ಗೋಷ್ಠೇ ಏಕೀಭೂತಾ ಗಾವಃ" (ಸಾಯಂಕಾಲದಲ್ಲಿ ಕೊಟ್ಟಿಗೆಯಲ್ಲಿ ಹಸುಗಳೆಲ್ಲಾ ಒಂದಾದವು) ಎಂಬುದಾಗಿ ಸ್ಥಾನೈಕ್ಯದ ವಿವಕ್ಷೆಯಿಂದ ವ್ಯವಹಾರವು ಕಂಡುಬಂದಿದೆ.

(೪) ಮತ್ಯೈಕ್ಯದ ವಿವಕ್ಷೆಯಿಂದ ಐಕ್ಯವ್ಯವಹಾರವು "ಪ್ರಾತಃ ಪರಸ್ಪರವಿರುದ್ಧಾ ಬ್ರಾಹ್ಮಣಾಃ ಇದಾನೀಂ ಏಕೀಭೂತಾಃ" ಎಂಬುದಾಗಿ ಐಕ್ಯವ್ಯವಹಾರವು ಸುಪ್ರಸಿದ್ಧವೇ ಆಗಿದೆ.

(೫) ಸಾದೃಶ್ಯನಿಮಿತ್ತದಿಂದ ಐಕ್ಯವ್ಯವಹಾರವು (ಅಭೇದ ವ್ಯವಹಾರವು) ಅಗ್ನಿರ್ಮಾಣವಕಃ । ಸಿಂಹೋ ದೇವದತ್ತಃ ಇತ್ಯಾದಿ ವ್ಯವಹಾರಗಳು ಹೇರಳವಾಗಿದೆ.

(೬) ವೇದದಲ್ಲಿರುವ ಐಕ್ಯಪರವಾಗಿ ಆಪಾತತಃ ತೋರತಕ್ಕ ಅಭೇದಪರವಾಗಿ ಐಕ್ಯವಾದಿಗಳು ಹೇಳತಕ್ಕ ವಾಕ್ಯಗಳಿಗೆಲ್ಲಾ ಈ ರೀತಿಯಾದ ಸಮಾಧಾನವಿದೆ.

ತತ್ತ್ವಮಸಿ ಎಂಬ ವಾಕ್ಯವು ಸಾದೃಶ್ಯನಿಮಿತ್ತಕವಾಗಿದೆ. ಇದನ್ನು ಬ್ರಹ್ಮಸೂತ್ರಕಾರರೇ ಬ್ರಹ್ಮಸೂತ್ರದಲ್ಲಿ "ತದ್ಗುಣಸಾರತ್ವಾತ್ತದ್ವ್ಯಪದೇಶಃ ಪ್ರಾಜ್ಞವತ್" (ಬ್ರ. ಸೂ. ೨-೩-೨೯) ಎಂಬ ಸೂತ್ರದಲ್ಲಿ ನಿರ್ಣಯಿಸಿರುತ್ತಾರೆ.

ಭಾಷ್ಯ :- ಜ್ಞಾನಾನಂದಾದಿ ಬ್ರಹ್ಮಗುಣಾ ಏವ ಅಸ್ಯ ಯತಃ ಸಾರಃ ಸ್ವರೂಪಂ ಅತೋ ಅಭೇದವ್ಯಪದೇಶಃ ॥

ತಂತ್ರದೀಪಿಕಾ:- ತದ್ಗುಣಸದೃಶಪರಃ ತದ್ಗುಣಶಬ್ದಃ = ಪರಮಾತ್ಮಗುಣಸದೃಶಾನಂದಾದಿಗುಣಸ್ವರೂಪ ಪರತ್ವಾದೇವ ನತ್ವಭೇದಾತ್ ॥

ಅಂದರೆ ಪರಮಾತ್ಮನ ಗುಣಸದೃಶಗುಣವುಳ್ಳವನಾದುದರಿಂದಲೇ ಅಭೇದವ್ಯಪದೇಶವು. "ಅಗ್ನಿರ್ಮಾಣವಕಃ" ಎಂಬಂತೆ ವ್ಯವಹಾರವು. ಸರ್ವಥಾ ಅಭೇದವು ಇರುವುದಿಲ್ಲ. ಸಾದೃಶ್ಯವಾದರೋ ಭೇದಘಟಿತವಾಗಿದೆ. ಎಂದು ಅಭಿಪ್ರಾಯ.

"ಸರ್ವಂ ಖಲ್ವಿದಂ ಬ್ರಹ್ಮ" ಎಂಬುದು ಸ್ವಾತಂತ್ರ್ಯನಿಮಿತ್ತಕವಾಗಿ ಐಕ್ಯವ್ಯಪದೇಶವು. ಮತ್ತು ವೈಶಿಷ್ಟ್ಯ ನಿಮಿತ್ತಕವಾದ ಅಭೇದ ವ್ಯವಹಾರವು.

"ಪರೇಽವ್ಯಯೇ ಸರ್ವ ಏಕೀಭವಂತೀತಿ" ಎಂಬ ಐಕ್ಯವ್ಯವಹಾರವು ಸ್ಥಾನೈಕ್ಯನಿಮಿತ್ತದಿಂದ ಕಂಡುಬಂದಿದೆ. ಆದಕಾರಣ ಇಡೀ ವೇದದಲ್ಲಿ ಯಾವ ವಾಕ್ಯವೂ ಸಹ ಜೀವಬ್ರಹ್ಮರಿಗೆ ಸಾಕ್ಷಾತ್ತಾಗಿ ಅಭೇದವನ್ನು ಹೇಳುವುದು ಸರ್ವಥಾ ಇರುವುದಿಲ್ಲ. ಎಲ್ಲವೂ ಭೇದಪರವೇ ಆಗಿದೆ ಎಂದು ಪರಮಾಭಿಪ್ರಾಯ.

ಆದ್ದರಿಂದ "ಸಯೋ ಹವೈ ತತ್ಪರಮಂ ಬ್ರಹ್ಮ ವೇದ ಬ್ರಹ್ಮೈವ ಭವತಿ" ಎಂಬಲ್ಲಿ ಸಾದೃಶ್ಯವೇ ವಿವಕ್ಷಿತವಾಗಿದೆ.

"ಸಂಪೂಜ್ಯ ಬ್ರಾಹ್ಮಣಂ ಭಕ್ತ್ಯಾ ಶೂದ್ರೋಽಪಿ ಬ್ರಾಹ್ಮಣೋ ಭವೇತ್"

ಎಂಬಲ್ಲಿ ಹೇಗೋ ಹಾಗೆ ಇಟ್ಟುಕೊಳ್ಳಬೇಕು. ಬ್ರಾಹ್ಮಣಪೂಜಕನಾದ ಮಾತ್ರದಿಂದ ಆ ಬ್ರಾಹ್ಮಣನೇ ಆಗಲಾರ. ಆದುದರಿಂದ ಯಾರು ಪರಬ್ರಹ್ಮನನ್ನು ತಿಳಿಯುತ್ತಾನೆಯೋ ಅಂತಹ ಜ್ಞಾನಿಯು ಸ್ವಯೋಗ್ಯತಾನು ಗುಣವಾಗಿ ಬೃಂಹಿತನಾಗುತ್ತಾನೆ. (ಪೂರ್ಣನಾಗುತ್ತಾನೆ) ಎಂದು ಅರ್ಥವನ್ನು ಹೇಳಬೇಕು. ಆ ಪರಬ್ರಹ್ಮನೇ ಎಂದಿಗೂ ಆಗಲಾರ.

ಹಾಗಿಲ್ಲದ ಪಕ್ಷದಲ್ಲಿ "ಪರಾತ್ಪರಂ ಪುರುಷಮುಪೈತಿ ದಿವ್ಯಂ" ಎಂಬ ಪೂರ್ವವಾಕ್ಯಕ್ಕೆ ವಿರೋಧವು ಬರುತ್ತದೆ.

"ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ"

ಇತ್ಯಾದಿ ಶ್ರುತಿಗಳಿಂದ ಮೋಕ್ಷದಶೆಯಲ್ಲಿ ಪಾರಮಾರ್ಥಿಕವಾದ ಭೇದವುಂಟೆಂಬುದಾಗಿ ನಿಸ್ಸಂದೇಹವಾಗಿ ಶ್ರುತಿಯು ಹೇಳುತ್ತಲಿದೆ.

ಇದೇ ರೀತಿ "ಸರ್ವಂ ಖಲ್ವಿದಂ ಬ್ರಹ್ಮ" ಎಂಬ ಶ್ರುತಿವಾಕ್ಯಕ್ಕೂ ಭೇದಪರವಾಗಿಯೇ ಅರ್ಥವನ್ನು ಹೇಳಬೇಕು.

ಸಕಲ ಜಗತ್ತು ಬ್ರಹ್ಮಾಧೀನವೆಂದಾಗಲಿ, ಸಕಲ ಜಗತ್ತಿನ ಗುಣಗಳೂ ಬ್ರಹ್ಮನಿಯಮ್ಯವೆಂದಾಗಲಿ ಅರ್ಥವನ್ನು ಹೇಳಬೇಕು. ಜಡವಾದ ಜಗತ್ತಿಗೆ ಚೇತನಾಭೇದವನ್ನು ಯಾವ ಪಂಡಿತನೂ ಹೇಳಲಾರ. ಜಡಕ್ಕೆ ಚೇತನಾಭೇದವೇ ಅಸಂಭಾವಿತವಾಗಿರುವಾಗ ಮತ್ತೆ ಬ್ರಹ್ಮಾಭೇದವಂತೂ ಅತ್ಯಂತಅಸಂಗತ. ಆದ್ದರಿಂದ ಅತ್ಯಂತ ಅಸಂಬದ್ಧವಾದ ಅಪ್ರಾಮಾಣಿಕವಾದ ಅಭೇದಾರ್ಥವನ್ನು ಸರ್ವಥಾ ಹೇಳಲು ಶಕ್ಯವಿಲ್ಲ.

ಭವಿಷ್ಯತ್ಪರ್ವವಚನವೂ ಸಹ ಇದಕ್ಕೆ ಸಂವಾದರೂಪವಾಗಿದೆ.

**ಭಿನ್ನಾ ಜೀವಾಃ ಪರೋ ಭಿನ್ನಃ ತಥಾಽಪಿ ಜ್ಞಾನರೂಪತಃ।**
**ಪ್ರೋಚ್ಯಂತೇ ಬ್ರಹ್ಮರೂಪೇಣ ವೇದವಾದೇಷು ಸರ್ವಶಃ ॥ ಇತಿ**
**॥ ಭವಿಷ್ಯತ್ಪರ್ವಣಿ ॥**

**ತಾತ್ಪರ್ಯ** :- ಸಮಸ್ತ ಜಗದ್ಗುಣಸದೃಶಗುಣಸ್ವರೂಪತ್ವದ ದೃಷ್ಟಿಯಿಂದ "ಸರ್ವಂ ಖಲ್ವಿದಂ ಬ್ರಹ್ಮ" ಎಂದು ಪ್ರಾಜ್ಞರೂಪಿ ಪರಮಾತ್ಮನಿಗೆ ಸರ್ವಾತ್ಮಕತ್ವವು, ಜಡಜಗದಭೇದವು ಉಕ್ತವಾಗಿದೆ.

ಛಾಂದೋಗ್ಯ ಭಾಷ್ಯದಲ್ಲಿರುವ "ಇದಂ ಬ್ರಹ್ಮಾತಿಸಾಮೀಪ್ಯಾತ್, ಸರ್ವಂ ಪೂರ್ಣಗುಣತ್ವತಃ" ಎಂಬ ವಚನಾನುಸಾರನಾಗಿ ಇದಂ ಪದಕ್ಕೂ ಸರ್ವಂ ಎಂಬ ಪದಕ್ಕೂ ಪರಮಾತ್ಮನಲ್ಲಿ ಮುಖ್ಯವೃತ್ತಿಯನ್ನೇ ಹೇಳಿರುತ್ತಾರೆ. ಅದು ಪದಸಮನ್ವಯಾಭಿಪ್ರಾಯದಿಂದ ಹೇಳಿರುವುದು. ವಾಕ್ಯಸಮನ್ವಯಾಭಿಪ್ರಾಯದಿಂದ ಗೌಣೀವೃತ್ತಿಯನ್ನು ಇಟ್ಟುಕೊಂಡು ಸಾದೃಶ್ಯಾದಿಅರ್ಥಪರವಾಗಿ ವ್ಯಾಖ್ಯಾನ ಮಾಡಲಾಗಿದೆ.

ಜೀವರೆಲ್ಲಾ ಪರಸ್ಪರ ಭಿನ್ನರು. ಪರಮಾತ್ಮನಿಗಿಂತಲೂ ಅತ್ಯಂತಭಿನ್ನರು. ಹೀಗಿದ್ದಾಗ್ಯೂ ಬ್ರಹ್ಮಗುಣ ಸದೃಶಗುಣಸ್ವರೂಪರಾದುದರಿಂದ "ತತ್ತ್ವಮಸಿ" ಇತ್ಯಾದಿ ವೇದವಾಕ್ಯಗಳು ಸಾದೃಶ್ಯ ದೃಷ್ಟಿಯಿಂದ ಅರ್ಥಪುಳ್ಳವುಗಳಾಗಿವೆ. ಸರ್ವಥಾ ಅಭೇದವು ವೇದಕ್ಕೆ ಅಭಿಪ್ರಾಯವಲ್ಲ. ವೈಲಕ್ಷಣ್ಯ ಎಂಬ ಪ್ರಮಾಣ ಗ್ರಂಥವು ಈ ಕೆಳಗೆ ಕಂಠೋಕ್ತ ತಿಳಿಸುತ್ತಲಿದೆ.

**ಭಿನ್ನಾಂಶಸ್ಯೈವ ಜೀವಸ್ಯ ಬಂಧಮೋಕ್ಷೌ ನ ಮೇ ಕ್ವಚಿತ್।**
**ಅಭಿನ್ನಾಂಶಾಸ್ತುಮತ್ಸ್ಯಾದ್ಯಾಃ ತೇಜಸಃ ಕಾಲವಹ್ನಿವತ್ ॥**
**ಜೀವಾಃ ಭಿನ್ನಾಂಶಕಾಸ್ತತ್ರ ತೇಜಸಃ ಪ್ರತಿಬಿಂಬವತ್ ॥ ಇತಿವೈಲಕ್ಷಣ್ಯೇ ॥**

**ತಾತ್ಪರ್ಯ** :- ಜೀವರೆಲ್ಲರೂ ಪರಮಾತ್ಮನ ಭಿನ್ನಾಂಶರು. ಮತ್ಸ್ಯಾದ್ಯವತಾರಗಳೆಲ್ಲಾ [illegible]ನ್ನಾಂಶರು. ತೇಜ[illegible] ಮಾನಿಯು ಅಭಿನ್ನಾಂಶವೇ ಕಾಲಾಗ್ನ್ಯಭಿಮಾನಿಯು ಪ್ರಳಯಕಾಲದ ಅಗ್ನಿಯು, ಅಭಿನ್ನಾಂಶವು, [illegible] ವಿಶೇಷದ ತೇಜಸ್ಸು ಭಿನ್ನಾಂಶವು.

ಜಲಾಭಿಮಾನಿಯಾದ ವರುಣನ ಅಭಿನ್ನಾಂಶನೇ ಅಮೃತ ಸಮುದ್ರದ ಅಭಿಮಾನಿ, ಜಲಾಭಿಮಾನಿವರುಣನ ಅಭಿನ್ನಾಂಶವೇ ಸಮುದ್ರಾಭಿಮಾನಿದೇವತೆ.

ಮೂತ್ರ, ಕಶ್ಮಲೋದಕ ಮೊದಲಾದವುಗಳಿಗೆ ಅಭಿಮಾನಿಯಾದ ಅಪಕೃಷ್ಟದೇವತೆ ಭಿನ್ನಾಂಶವು.

**ಅಂದರೆ** :-

ಪ್ರಕಾಶಾಭಿಮಾನಿಯ ಅಭಿನ್ನಾಂಶನೇ ಪ್ರಳಯ ಕಾಲಾಗ್ನಿಯ ಅಭಿಮಾನಿ. ಖದ್ಯೋತತೇಜೋಽಭಿಮಾನಿಯಾದ ಅಪಕೃಷ್ಟದೇವತೆ ಭಿನ್ನಾಂಶನು.

ಜಲಾಭಿಮಾನಿ ವರುಣನ ಅಭಿನ್ನಾಂಶನೇ ಅಮೃತಸಮುದ್ರಾಭಿಮಾನಿಯು. ಮೂತ್ರಾದ್ಯಭಿಮಾನಿಯಾದ ಅಪಕೃಷ್ಟದೇವತೆ ಭಿನ್ನಾಂಶನು.

ಪೃಥಿವ್ಯಭಿಮಾನಿಯಾದ ಧರಾದೇವಿಯ ಅಭಿನ್ನಾಂಶವೇ ಮೇರ್ವಭಿಮಾನಿದೇವತೆ ವಿಷ್ಠಾಭಿಮಾನಿನೀ (ಮಲಾಭಿಮಾನಿ) ಅಪಕೃಷ್ಟದೇವತೆ ಪೃಥಿವ್ಯಭಿಮಾನಿನಿಯ ಭಿನ್ನಾಂಶ.

ಪಾದ್ಮಪುರಾಣ ವಾಕ್ಯಗಳು ರಾಮಾವತಾರದ ರಹಸ್ಯವನ್ನು ತಿಳಿಸುತ್ತಲಿವೆ.

**"ಸ್ವಾತ್ಮಾನಂ ಪರಮಂ ವಿಷ್ಣುಂ ವಿದಿತ್ವಾಪಿ ಸ ರಾಘವಃ।**
**ದೈತ್ಯಾನಾಂ ಮೋಹನಾರ್ಥಾಯ ದರ್ಶಯಾಮಾಸ ಮೂಢತಾಮ್ ॥ ಇತಿಪಾದ್ಮೇ ॥**

**ತಾತ್ಪರ್ಯ** :- ಶ್ರೀರಾಮಚಂದ್ರನು ತಾನೇ ಸರ್ವೋತ್ತಮನಾದ ವಿಷ್ಣುವೆಂದು ತಿಳಿದ ಸರ್ವಜ್ಞಮೂರ್ತಿಯಾಗಿದ್ದರೂ ದೈತ್ಯರ ಮೋಹಕ್ಕಾಗಿಯೇ ಏನೂ ಅರಿಯದವನಂತೆ ಆಗಾಗ್ಗೆ ತನ್ನ ಅವತಾರ ಕಾಲದಲ್ಲಿ ಅಜ್ಞಾನವನ್ನು ನಟಿಸಿರುತ್ತಾನೆ.

ಸ್ಕಾಂದ ವಚನವೂ ಈ ರೀತಿ ಇದೆ :-

ನಿತ್ಯ ಪೂರ್ಣಸುಖಜ್ಞಪ್ತಿಸ್ವರೂಪೋಽಸೌ ಯತೋ ವಿಭುಃ।
ಅತೋಽಸ್ಯ ರಾಮ ಇತ್ಯಾಖ್ಯಾ ತಸ್ಯ ದುಃಖಂ ಕುತೋಽಣ್ವಪಿ ॥
ತಥಾಪಿ ಲೋಕಶಿಕ್ಷಾರ್ಥಂ ಅದುಃಖೋ ದುಃಖವರ್ತಿವತ್।
ಅಂತರ್ಹಿತಾಂ ಲೋಕದೃಷ್ಟ್ಯಾ ಸೀತಾಮಾಸೀತ್ಸ್ಮರನ್ನಿವ ॥
ಜ್ಞಾಪನಾರ್ಥಂ ಪುನರ್ನಿತ್ಯಸಂಬಂಧಃ ಸ್ವಾತ್ಮನಃ ಶ್ರಿಯಾ।
ಅಯೋಧ್ಯಾಯಾ ವಿನಿರ್ಗಚ್ಛನ್ ಸರ್ವಲೋಕಸ್ಯ ಚೇಶ್ವರಃ ॥
ಪ್ರತ್ಯಕ್ಷಂ ತು ತಯಾ ಸಾರ್ಧಂ ಜಗಾಮಾನಾದಿರವ್ಯಯಃ।
ನಾಕ್ಷತ್ರಮಾಸಗಣಿತಂ ತ್ರಯೋದಶಸಹಸ್ರಕಮ್ ॥
ಬ್ರಹ್ಮಲೋಕಸಮಂ ಚಕ್ರೇ ಸಮಸ್ತಂ ಕ್ಷಿತಿಮಂಡಲಮ್।
ರಾಮೋ ರಾಮೋ ರಾಮ ಇತಿ ಸರ್ವೇಷಾಮಭವತ್ತದಾ ॥
ಸರ್ವೋ ರಾಮಮಯೋ ಲೋಕೋ ಯದಾ ರಾಮಸ್ತ್ವಪಾಲಯತ್ ॥ ಇತಿಸ್ಕಾಂದೇ

**ತಾತ್ಪರ್ಯ** :- ಸರ್ವಸ್ವಾಮಿಯಾದ ಪರಮಾತ್ಮನು ಯಾವ ಕಾರಣದಿಂದ ನಿತ್ಯವಾದ ಪೂರ್ಣಸುಖ, ಪೂರ್ಣ ಜ್ಞಾನಸ್ವರೂಪನಾಗಿರುವನೋ ಅದರಿಂದ ಇವನಿಗೆ ರಾಮ ಎಂಬ ಹೆಸರು ಬಂದಿದೆ. ಆದುದರಿಂದ ಶ್ರೀರಾಮನಿಗೆ ಲೇಶಮಾತ್ರವೂ ದುಃಖವು ಇರುವುದಿಲ್ಲ.

ಆದರೂ ಸಹ ಲೋಕದ ಘಟನಾವಳಿಗೊಳಪಟ್ಟ ವ್ಯಕ್ತಿಗೆ ಸುಖದುಃಖಗಳೆಂಬುದನ್ನು ತೋರಿಸಲು, ಲೋಕ ಶಿಕ್ಷಾರ್ಥವಾಗಿ ತಾನು ದುಃಖವಿಲ್ಲದವನಾದಾಗ್ಯೂ ದುಃಖದಲ್ಲಿರುವವನಂತೆ ನಟನೆ ಮಾಡಿದ್ದಾನೆ.

ತನ್ನ ಸನ್ನಿಧಾನದಲ್ಲಿಯೇ ಮಹಾಲಕ್ಷ್ಮೀಸ್ವರೂಪಳಾದ ಸೀತಾದೇವಿಯು ಯಾವಾಗಲೂ ಇರುವವಳಾದಾಗ್ಯೂ ಅವಳು ಹತ್ತಿರವಿಲ್ಲವೆಂದು ಅವಳನ್ನು ಸ್ಮರಿಸುವವನಂತೆ ವಿಡಂಬಿಸಿದ್ದಾನೆ. ಮಹಾಲಕ್ಷ್ಮೀಸ್ವರೂಪಳೇ ಆದ ಸೀತಾದೇವಿಗೂ ತನಗೂ ನಿತ್ಯಸಂಬಂಧವೇ ಇರುವುದೆಂಬುದನ್ನು ತೋರಿಸಲಿಕ್ಕಾಗಿ ಅಯೋಧ್ಯಾದಿಂದ ವನಕ್ಕೆ ತೆರಳುವಾಗ ಸೀತಾದೇವಿಯಸಹಿತವಾಗಿಯೇ ಹೊರಟಿರುತ್ತಾನೆ.

ಶ್ರೀ ರಾಮನು ಹದಿಮೂರು ಸಹಸ್ರವರ್ಷಗಳ ಕಾಲ ರಾಜ್ಯವನ್ನಾಳಿದ ಸಮಯದಲ್ಲಿ ಈ ಭೂಭಾಗವನ್ನು (ಬ್ರಹ್ಮ ಲೋಕಕ್ಕೆ ಸಮನಾಗಿ) ಸತ್ಯಲೋಕಕ್ಕೆ ಸಮನಾಗಿ ಸಕಲ ವೈಭವೋಪೇತವಾದುದನ್ನಾಗಿ ಮಾಡಿದನು. ಆ ರಾಮ ರಾಜ್ಯದಲ್ಲಿ ಪ್ರತಿಯೊಬ್ಬರ ಮುಖದಲ್ಲಿಯೂ ರಾಮ, ರಾಮ, ರಾಮ ಎಂಬ ಭಗವನ್ನಾಮವು ನಲಿದಾಡುತ್ತಲಿತ್ತು. ಶ್ರೀರಾಮನಿಂದ ಆಳಲ್ಪಟ್ಟ ರಾಮರಾಜ್ಯವೆಲ್ಲಾ ರಾಮಮಯವಾದ ಲೋಕವೇ ಆಗಿತ್ತು ಎಂದು ಸ್ಕಾಂದಪುರಾಣವು ತಿಳಿಸುತ್ತಲಿದೆ.

ಮತ್ಸ್ಯಪುರಾಣ ವಚನವು ಶ್ರೀಹರಿಯು ಜ್ಞಾನಾನಂದಮಯ ಸ್ವರೂಪನೆಂದೂ ಅವನನ್ನು ಯತಿಯು ಚಿಂತಿಸಬೇಕಾದ ಪ್ರಕಾರವನ್ನು ತಿಳಿಸುತ್ತಲಿದೆ.

**ಶುದ್ಧಸ್ಫಟಿಕಸಂಕಾಶಂ ವಾಸುದೇವಂ ನಿರಂಜನಮ್ ।**
**ಚಿಂತಯೀತ ಯತಿರ್ನಿತ್ಯಂ ಜ್ಞಾನರೂಪಾದ್ಧತೇ ಹರೇಃ ॥ ಇತಿಮಾತ್ಸ್ಯೇ ॥**

**ಅಭಿಪ್ರಾಯ** :- ಯತಿಯಾದವನು ವಾಸುದೇವರೂಪಿಯಾದ ಶ್ರೀಹರಿಯನ್ನು ಶುದ್ಧವಾದ ಅತ್ಯಂತ ಸ್ವಚ್ಛವಾದ ಸ್ಫಟಿಕದಂತೆ ಶುಕ್ಲ ವರ್ಣವುಳ್ಳವನೆಂದೂ, ಸಕಲ ದೋಷರಹಿತನೆಂದೂ ಚಿಂತಿಸಬೇಕು, ಧ್ಯಾನ ಮಾಡಬೇಕು. ಸರ್ವೋತ್ತಮ ನಾದ ಜ್ಞಾನಾನಂದಾತ್ಮಕನಾದ ಶ್ರೀಹರಿಯನ್ನು ಹೊರತಾಗಿ ಬೇರೆಯವರನ್ನು ಸರ್ವೋತ್ತಮರೆಂಬುದಾಗಿ ಚಿಂತಿಸ ಬಾರದೆಂದು ಮತ್ಸ್ಯ ಪುರಾಣ ವಚನವು ಹೇಳುತ್ತಲಿದೆ.

ಚತುರ್ವೇದ ಶಿಖಾವಚನವೂ ಸಹ ಶ್ರೀಹರಿಯ ವಿಚಾರವಾಗಿ ಹೇಳುತ್ತಲಿದೆ.

**"ಆನಂದಮಾತ್ರಮಜರಂ ಪುರಾಣಂ ಏಕಂ ಸನ್ತಂ ಬಹುಧಾ ದೃಶ್ಯಮಾನಮ್ ।**
**ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾಃ ತೇಷಾಂ ಸುಖಂ ಶಾಶ್ವತಂ ನೇತರೇಷಾಮ್ ॥**
**ಇತಿ ಚತುರ್ವೇದಶಿಖಾಯಾಮ್ ॥**

**ಅಭಿಪ್ರಾಯ** :- ಅವ್ಯಾಕೃತನಾದ, ಆನಂದೈಕಸ್ವರೂಪನಾದ, ಸದಾದೃಢನಾದ, ಅನಾದ್ಯನಂತನಾದ, ಸರ್ವೋತ್ಕೃಷ್ಟನಾದ, ಸಕಲ ದೋಷರಹಿತನಾದ, ಮತ್ಸ್ಯಾದಿರೂಪಗಳಿಂದಲೂ, ವಿಶ್ವಾದಿರೂಪಗಳಿಂದಲೂ ನಾನಾ ರೂಪಗಳುಳ್ಳವನಾದ ಪರಮಾತ್ಮನನ್ನು ತಮ್ಮ ದೇಹದಲ್ಲಿ ಯಾವ ಜ್ಞಾನಿಗಳು ಸಾಕ್ಷಾತ್ಕರಿಸುವರೋ ಅವರಿಗೆ ಶಾಶ್ವತಸುಖರೂಪವಾದ ಮೋಕ್ಷವು ಲಭಿಸುತ್ತದೆ. ಎಂದು ಚತುರ್ವೇದ ಶಿಖಾವಚನದ ಅಭಿಪ್ರಾಯವಾಗಿದೆ.

ಮತ್ತೊಂದು ಶ್ರುತಿವಚನವೂ ಪರಮಾತ್ಮನ ಸ್ವರೂಪದ ಬಗ್ಗೆ ವಿವರಣೆಯನ್ನು ವ್ಯಕ್ತಪಡಿಸುತ್ತಲಿದೆ.

**ಸಜ್ಜ್ಞಾನಾನಂದಶೀರ್ಷೋಽಯಂ ಸಜ್ಜ್ಞಾನಾನಂದಬಾಹುಕಃ ।**
**ಸಜ್ಜ್ಞಾನಾನಂದದೇಹಸ್ತುಸಜ್ಜ್ಞಾನಾನಂದಪಾದವಾನ್ ॥ ಇತಿಶ್ರುತಿಃ ॥**

**ತಾತ್ಪರ್ಯ** :- ಪರಮಾತ್ಮನಾದ ಶ್ರೀಹರಿಯು ಜ್ಞಾನಾನಂದಾತ್ಮಕವಾದ ತಲೆಯುಳ್ಳವನು. ಜ್ಞಾನಾನಂದಾತ್ಮಕವಾದ ತೋಳುಗಳುಳ್ಳವನು. ಜ್ಞಾನಾನಂದಾತ್ಮಕವಾದ ದೇಹವುಳ್ಳವನು ಜ್ಞಾನಾನಂದಾತ್ಮಕವಾದ ಪಾದವುಳ್ಳವನು.

ಅಂದರೆ ಪರಮಾತ್ಮನ ಇಡೀ ದೇಹ, ಅವಯವಗಳು ಎಲ್ಲವೂ ಜ್ಞಾನಾನಂದಾತ್ಮಕಗಳೇ ಆಗಿವೆ ಎಂದು ಅಭಿಪ್ರಾಯ.

ಪೈಂಗಿ ಶ್ರುತಿವಚನಗಳು ಮತ್ತೂ ಸ್ಪಷ್ಟವಾಗಿ ಶ್ರೀಹರಿಯ ಸ್ವರೂಪವನ್ನು ಹೇಳುತ್ತಲಿವೆ.

**"ಬ್ರಹ್ಮಣಃ ತದ್ಗುಣಾನಾಂ ಚ ಭೇದದರ್ಶ್ಯಧರಂ ತಮಃ ।**
**ಭೇದಾಭೇದಪ್ರದರ್ಶೀ ಚ ತತ ಏವೋತ್ತರಂ ವಿಶೇತ್ ॥**
**ವಿಜಾನೀಯಾತ್ತತೋ ಬ್ರಹ್ಮ ಸದಾ ಸರ್ವಗುಣಾತ್ಮಕಮ್ ।**
**ಗುಣಾನಾಂ ಚ ವಿಶೇಷೋಽಸ್ತಿ ನ ವಿಭೇದಃ ಕಥಂಚನ ॥**
**ತೇಚ ಸರ್ವೇ ಗುಣಾಃ ಪೂರ್ಣಾಃ ತಚ್ಛರೀರಃ ಪರಃ ಸ್ಮೃತಃ ।**
**ಆನಂದಜ್ಞಾನಶಕ್ತ್ಯಾದಿದೇಹಂ ವಿಷ್ಣುಂ ತು ಯೋ ಜನಃ ॥**
**ಅದೇಹಂ ಭೂತದೇಹಂ ವಾ ವಿದುಸ್ತೇ ಯಾಧರಂತಮಃ ।**
**ತಥಾ ಪ್ರಕೃತಿದೇಹಜ್ಞಃ ಕರ್ಮದೇಹವಿದೋಽಪಿವಾ ॥**
**ತಸ್ಮಾದಾನಂದಚಿದ್ದೇಹಂ ಚಿದಾನಂದಶಿರೋಮುಖಮ್ ।**
**ಚಿದಾನಂದಭುಜಂ ಜ್ಞಾನಸುಖೈಕಕರಪದಾಂಗುಲಿಮ್ ॥**
**ಆಕೇಶಾದಾನಖಾಗ್ರೇಭ್ಯಃ ಪೂರ್ಣಚಿತ್ಸುಖಶಕ್ತಿಕಮ್ ।**
**ಪ್ರತ್ಯೇಕಂ ಚ ಗುಣಾಂಸ್ತಾಂಸ್ತು ಸದಾ ಸರ್ವಗುಣಾತ್ಮಕಾನ್ ।**
**ಜ್ಞಾತ್ವಾ ವಿಮುಚ್ಯತೇ ವಿಷ್ಣೋಃ ಪ್ರಸಾದಾನ್ನಾನುಷೋಽಪಿಸನ್ ॥ ಇತಿಪೈಂಗಿಶ್ರುತಿಃ ॥**

**ತಾತ್ಪರ್ಯ** :- ಪರಬ್ರಹ್ಮನಾದ ಶ್ರೀಹರಿಗೂ ಆತನ ಗುಣಕ್ರಿಯಾ ಅವಯವಾದಿಗಳಿಗೂ ಅಭೇದವೇ ಹೊರತು ಭೇದವಿಲ್ಲವೆಂಬುದನ್ನು "[illegible]" ಇತ್ಯಾದಿ ಹಲವು ಶ್ರುತಿವಾಕ್ಯಗಳು ಪ್ರತಿಪಾದಿಸುತ್ತಲಿವೆ.

ಆದುದರಿಂದ ಯಾರು ಪರಬ್ರಹ್ಮನಿಗೂ ಅವನ ಗುಣಗಳಿಗೂ ಭೇದವನ್ನು ತಿಳಿಯುತ್ತಾನೆಯೋ ಅವನಿಗೆ ಅಂಧತಮಸ್ಸು ಎಂಬ ನಿತ್ಯನರಕವಾಗುತ್ತದೆ. ಅದರಂತೆ ಪರಮಾತ್ಮನಿಗೂ ಅವನ ಗುಣಾದಿಗಳಿಗೂ ಭೇದಾಭೇದವನ್ನು ತಿಳಿಯುವವನಿಗೆ ನೀಚಗತಿಯಾದ ತಮಸ್ಸೇ ಆಗುತ್ತದೆ.

ಆದುದರಿಂದ ಪರಬ್ರಹ್ಮನನ್ನು ಸರ್ವದಾ ಸರ್ವಗುಣಾತ್ಮಕನೆಂದೇ ತಿಳಿಯಬೇಕು. ಆ ಪರಮಾತ್ಮನ ಗುಣಗಳಿಗೂ ಸಹ ಪರಸ್ಪರ ಭೇದವು ಇಲ್ಲವಾದಾಗ್ಯೂ ಸಹ ವಿಶೇಷದ ಮಹಿಮೆಯಿಂದ ಭೇದವ್ಯವಹಾರವು ಕಂಡುಬಂದಿದೆ. ಭೇದವ್ಯವಹಾರಕ್ಕೆ ನಿಜವಾದ ಭೇದವು ಇರಬೇಕು. ಘಟಪಟಗಳಿಗಿದ್ದಂತೆ. ಆದರೆ ಎಲ್ಲಿ ಭೇದವಿಲ್ಲವೆಂದು ವೇದವು ತಿಳಿಸುತ್ತಲಿದೆಯೋ ಅಂತಹ ಕಡೆ ಭೇದದ ಪ್ರತಿನಿಧಿಯಾದ ವಿಶೇಷವು ಭೇದದ ಕೆಲಸವಾದ ವ್ಯವಹಾರವನ್ನು ಉಂಟುಮಾಡುವುದು.

ಪರಮಾತ್ಮನು ಇತರರ ಮತದಲ್ಲಿ ಹೇಳುವಂತೆ ನಿರ್ವಿಶೇಷನಲ್ಲ. ಅವನು ಅನಂತಾನಂತವಿಶೇಷಸಂಪನ್ನನೇ ಆಗಿದ್ದಾನೆ. ಆದಕಾರಣ ನಿತ್ಯಗಳಾದ ಪೂರ್ಣಗಳಾದ ಅವನ ಗುಣಗಳೆಲ್ಲವೂ ಅವನ ಶರೀರಾತ್ಮಕಗಳೇ ಆಗಿವೆ. ಆದಕಾರಣ ಜ್ಞಾನಿಗಳು ಪರಮಾತ್ಮನನ್ನು ಆನಂದ, ಜ್ಞಾನ, ಶಕ್ತ್ಯಾದಿ ದೇಹಸ್ವರೂಪನೆಂದು ಹೇಳುತ್ತಾರೆ.

ಈ ರೀತಿ ಜ್ಞಾನಾನಂದಾತ್ಮಕ ದೇಹವನ್ನುಳ್ಳ ಶ್ರೀಹರಿಯನ್ನು ಯಾರು, ಪರಮಾತ್ಮನಿಗೆ ದೇಹವೇ ಇಲ್ಲವೆಂದು ಹೇಳುವರೋ ಅಥವಾ ನಮ್ಮಂತೆ ಪ್ರಾಕೃತವಾದ ನಶ್ವರವಾದ ದೇಹವನ್ನುಳ್ಳವನೆಂದು ತಿಳಿಯುವರೋ ಅವರಿಗೆಲ್ಲಾ ನಿತ್ಯನರಕವೇ ಗತಿ.

ಹಾಗೆಯೇ ಯಾರು (ದೇವರಿಗೆ) ಪರಮಾತ್ಮನಿಗೆ ಪ್ರಕೃತಿ ವಿಕಾರವಾದ ದೇಹವು ಉಂಟೆಂದು ತಿಳಿಯುವರೋ ನಮ್ಮಂತೆ ಕರ್ಮಾಧೀನವಾದ ಅಂದರೆ ಪ್ರಾರಬ್ಧಕರ್ಮಫಲರೂಪವಾದ ದೇಹವುಳ್ಳವನೆಂದು ಹೇಳುವರೋ ಅವರಿಗೂ ಸಹ ದುಃಖಮಯವಾದ ನಿತ್ಯನರಕವೇ ಆಗುತ್ತದೆ.

ಆದಕಾರಣ ಸರ್ವೋತ್ತಮನಾದ ಶ್ರೀಹರಿಯನ್ನು, ಜ್ಞಾನಾನಂದಾತ್ಮಕವಾದ ಶರೀರನೆಂದೂ, ಜ್ಞಾನಾನಂದಾತ್ಮಕವಾದ ಮುಖವುಳ್ಳವನೆಂದೂ, ಚಿದಾನಂದಾತ್ಮಕವಾದ ಭುಜವುಳ್ಳವನೆಂದೂ, ಜ್ಞಾನಾನಂದಾತ್ಮಕವಾದ ಕಾಲು ಮತ್ತು ಬೆರಳುಳ್ಳವನೆಂದೂ ತಲೆಕೂದಲು ಮೊದಲುಗೊಂಡು ಉಗುರಿನ ತುದಿಯವರೆವಿಗೆ ಪೂರ್ಣಸುಖ ಪೂರ್ಣಜ್ಞಾನ ಪೂರ್ಣಶಕ್ತ್ಯಾತ್ಮನೆಂದೂ ವಿಶೇಷಮಹಿಮೆಯಿಂದ ಪ್ರತ್ಯೇಕವಾಗಿ ತೋರತಕ್ಕ ಗುಣಗಳೆಲ್ಲವೂ ಸರ್ವಗುಣಾತ್ಮಕಗಳೆಂದೂ ತಿಳಿದ ಸಾತ್ವಿಕನಾದ ಮಾನವನು ವಿಷ್ಣುವಿನ ಪರಮಪ್ರಸಾದದಿಂದ ಈ ದುಃಖಮಯವಾದ ಸಂಸಾರದಿಂದ ಬಿಡುಗಡೆ ಪಡೆದು ಮೋಕ್ಷವನ್ನ ಹೊಂದುತ್ತಾನೆಂದು ಪೈಂಗಿಶ್ರುತಿಯು ಬಹಳ ಮನಮುಟ್ಟುವಂತೆ ವಿಶದವಾಗಿ ಪರಮಾತ್ಮನ ವಿಚಾರವನ್ನು ತಿಳಿಸುತ್ತಲಿದೆ.

ಋಗ್ವೇದ ಮಂತ್ರವು (೧೦-೩೧-೬,೯,೮) ಮಹಾಪ್ರಳಯಕಾಲದ ಪರಿಸ್ಥಿಯನ್ನು ಹೇಳುತ್ತಿರುವುದಲ್ಲದೇ ಸಕಲ ಭುವನಗಳೂ ಸಹ ಕಡೆಯದಾಗಿ ಒಂದು ಹುಲ್ಲುಕಡ್ಡಿ, ಗಿಡ, ಮರ ಮೊದಲಾದುವುಗಳಿಗೆಲ್ಲಾ ಸೃಷ್ಟಿಕರ್ತನು, ಮತ್ತು ರಕ್ಷಕನು ಶ್ರೀಹರಿಯೆಂದೇ ಹೇಳುತ್ತಾ ಪರಮಾತ್ಮನ ಸೃಷ್ಟಿಯ ಮಹಿಮೆಯನ್ನು ಘೋಷಣೆಮಾಡುತ್ತಲಿದೆ.

ಆ ಮಂತ್ರವು ಈ ರೀತಿ ಇದೆ.

**ಅಸ್ಯೇದೇಷಾಸುಮತಿಃ ಪಪ್ರಥಾನಾಽಭವತ್ಪೂರ್ವ್ಯಾಭೂಮನಾಗೌ।**
**ಅಸ್ಯಸನೀಳಾ ಅಸುರಸ್ಯಯೋನೌ ಸಮಾನ ಆಭರಣೇ ಬಿಭ್ರಮಾಣಾಃ॥**
**ಕಿಂಸ್ವಿದ್ವನಂ ಕ ಉ ಸ ವೃಕ್ಷಆಸ ಯತೋ ದ್ಯಾವಾಪೃಥಿವೀ ನಿಷ್ಟತಕ್ಷುಃ೧೦।**
**ಸನ್ತಸ್ಥಾನೇ ಅಜರೇ ಇತಊತೀ ಅಹಾನಿ ಪೂರ್ವೀರುಷಸೋಽಜರಂತ॥**

**ನೈತಾವದೇನಾ ಪರೋ ಅನ್ಯದಸ್ತ್ಯುಕ್ಷಾಸ ದ್ಯಾವಾಪೃಥಿವೀಬಿಭರ್ತಿ।**
**ತ್ವಚಂ ಪವಿತ್ರಂ ಕೃಣುತ ಸ್ವಧಾವಾನ್ ಯದೀಂ ಸೂರ್ಯಂ ನ ಹರಿತೋ ವಹಂತಿ॥**
**(ಋಗ್ವೇದ ಮಂ. ೧೦-೩೧-೬,೭,೮.)**

**ಅರ್ಥ** :-''ಅಸ್ಯೇತ್ = ವಿಷ್ಣುವಿನ ದೆಶೆಯಿಂದಲೇನೇ, ಏಷಾ, ಸುಮತಿಃ = ಬ್ರಹ್ಮಾದಿದೇವತೆಯ ಸುಬುದ್ಧಿಯು, ಪಪ್ರಥಾನ = ಅತಿಶಯವಾಗಿ ಪ್ರಥಮವಾಗಿ, ಅಭವತ್ = ಆಯಿತು.

**ತಾತ್ಪರ್ಯ** :-ಚತುರ್ಮುಖ ಮೊದಲಾದ ದೇವತೆಗಳಿಗೆ ಪ್ರಧಾನವಾಗಿ ಬುದ್ಧಿಪ್ರೇರಕನು ಪರಮಾತ್ಮನಾದ ಶ್ರೀವಿಷ್ಣುವೇ ಆಗಿದ್ದಾನೆ. ಚತುರ್ಮುಖನಿಗಂತೂ ಸಾಕ್ಷಾತ್ತಾಗಿ ಪ್ರಪ್ರಥಮ ಬುದ್ಧಿಪ್ರೇರಕನು ಸಾಕ್ಷಾತ್ ಶ್ರೀಹರಿಯೇ ಆಗಿದ್ದಾನೆ.

ಗಾಯತ್ರಿಯ ಅರ್ಥವು ಸಹ ಇದೇ ಆಗಿದೆ.

**"ಧಿಯೋ ಯೋ ನಃ ಪ್ರಚೋದಯಾತ್"**

**ಅರ್ಥ** :-ಯಾರು, ನಃ = ನಮ್ಮ, ಧಿಯಃ = ಬುದ್ಧಿಗಳನ್ನು, ಪ್ರಚೋದಯಾತ್ = ಪ್ರೇರಿಸುವನೋ ಅಂತಹ , ಸವಿತುಃ = ಜಗನ್ನಿಮಿತ್ತಕಾರಣನಾದ, ದೇವಸ್ಯ = ಕ್ರೀಡಾದಿಗುಣವಿಶಿಷ್ಟನಾದ ಪರಮಾತ್ಮನ, ಭರ್ಗಃ = ಜಗತ್ತಿನ ಭರಣ, ಗಮನ ಇವುಗಳಿಗೆ ಕಾರಣವಾದ, ವರೇಣ್ಯಂ = ಶ್ರೇಷ್ಠವಾದ ರೂಪವನ್ನು, ಧೀಮಹಿ = ಚಿಂತಯಾಮಃ ಚಿಂತಿಸುತ್ತೇವೆ.

ಸಕಲ ಚೇತನ ವರ್ಗಕ್ಕೂ ಬಿಂಬರೂಪನಾಗಿಯೂ, ಜಗತ್ತನ್ನು ಧರಿಸುವವನಾಗಿಯೂ, ಜಗತ್ತಿನ ಚಲನ ವಲನಾದಿಚೇಷ್ಟೆಗಳಿಗೆಲ್ಲ ಕಾರಣನಾಗಿಯಯೂ ಸಕಲಚೇತನರ ಬುದ್ಧಿಪ್ರೇರಕನಾಗಿಯೂ ಇರತಕ್ಕ ಜಗಜ್ಜನ್ಮಾದಿ ಕಾರಣನಾದ ಆ ಪರಮಾತ್ಮನ ರೂಪವನ್ನು ''ಧ್ಯೇಯಃ ಸದಾ ಸವಿತೃಮಂಡಲಮಧ್ಯವರ್ತೀ''ಇತ್ಯಾದಿ ಧ್ಯಾನ ಶ್ಲೋಕದಲ್ಲಿ ವರ್ಣಿತ ವಾಗಿರುವ ದಿವ್ಯರೂಪವನ್ನು ಧ್ಯಾನಮಾಡುತ್ತೇವೆ.

ಅನೇನ ''ಭೂಮನಾ = ಪೂರ್ಣನಾದ, ದೇಶದಿಂದ ಪೂರ್ಣನಾದ, ಕಾಲದಿಂದ ಪೂರ್ಣನಾದ ಗುಣದಿಂದ ಪೂರ್ಣನಾದ, ಈ ವಿಷ್ಣುವಿನಿಂದ, ಪೂರ್ವಾ = ಪೂರ್ವತನವಾದ ಹಿಂದಿನ, ಗೌ = ದ್ಯುಲೋಕವೂ ಮತ್ತು ಪೃಥಿವೀಲೋಕ ಪೃಥಿವೀಲೋಕವೂ, '' ಅಭವತ್ = ಆದವು.

ಅಸ್ಯ = ಈ ವಿಷ್ಣುವಿನ, ಭೂಮ್ನಾ = ಮಹಿಮೆಯಿಂದಲೇನೇ, (''ಸುಮತಿಃ ಗೌಶ್ಚ ಅಭವತ್''ಇತಿವಾ ಯೋಜನಾ.)

ಅಸುರಸ್ಯ = ಅಂತಹ ವಾಯುವಿನ , ಯೋನೌ = ಭಾರ್ಯೆಯಾದ ಭಾರತೀದೇವಿಯಲ್ಲಿ ''ಸಮಾನೇ'' = ಒಂದಾದ, ಆಭರಣೇ = ಆ ಸಮನ್ತಾತ್ ಭರಣಸ್ಥಾನೇ, ಗರ್ಭೇ = ಗರ್ಭವನ್ನು ಧರಿಸುವ ಸ್ಥಾನ(ಗರ್ಭದಲ್ಲಿ)

ಧ್ರಿಯಮಾಣಾಃ = ಧರಿಸಲ್ಪಟ್ಟವರಾದ ದೇವತೆಗಳು,ಅಸ್ಯ = ಈ ವಿಷ್ಣುವಿನ ದಶೆಯಿಂದಲೇನೇ "ಸನೀಲಾಃ = ಭವಂತಿ, ನೀಲೀಯಂತೆ, ಸಂಕ್ರಿಯಂತೆ , ಇತಿಯಾವತ್ = ಮಹಾಪ್ರಳಯದಲ್ಲಿ ಶ್ರೀಹರಿಯೇ ಎಲ್ಲ ದೇವತೆಗಳನ್ನು ಸಂಹರಿಸುತ್ತಾನೆ. ಸೃಷ್ಟಿಸ್ಥಿತಿ ಸಂಹಾರರೂಪ ವ್ಯಾಪಾರಗಳಿಗೆಲ್ಲ ನಿಮಿತ್ತ ಕಾರಣನು ಶ್ರೀಹರಿಯೇ ಆಗಿರುತ್ತಾನೆ.

ಪರಮಾತ್ಮನ ಮಹಿಮೆಯಿಂದಲೇ ದ್ಯುಲೋಕಪೃಥಿವಿಲೋಕಗಳು ಹುಟ್ಟಿವೆ. ಇವುಗಳಿಗೆಲ್ಲಾ ನಿರ್ಮಾಣವಾಗುವದಕ್ಕೆ ಮುಂಚೆ ಮಹಾಪ್ರಳಯದಲ್ಲಿ,ವ ನಂ = ಕಾಡು, ಕಿಂಮು ಆಸಿತ್ = ಏನು ಇತ್ತು , ಕ ಇವ ವೃಕ್ಷ ಆಸ = ಯಾವ ವೃಕ್ಷವು ತಾನೇ ಇತ್ತು, ಕಾಡೂ ಇದ್ದಿಲ್ಲ, ಗಿಡ ಮರ ಬಳ್ಳಿದಳಾವುವು ಇರಲೇ ಇಲ್ಲ.

ವನಂ ಕಿಂ ಸ್ವಿತ್ = ವನಂ = ಕಾಡು, ಕಿಂಸ್ವಿತ್ ಆಸ = ಯಾರಿಂದ ಹುಟ್ಟಿತು. ಕ ಏವ ವೃಕ್ಷಃ ಆಸ = ಯಾವ ವೃಕ್ಷವೂ ತಾನೇ ಯಾರಿಂದ ಹುಟ್ಟಿತು. ಸ ವೃಕ್ಷಃ = ವನಕ್ಕೆ ಬೇರೆ ಜಾಗದಲ್ಲಿರತಕ್ಕ ಒರದೊಂದು ವೃಕ್ಷವೂ ಸಹ (ಮರವು ಸಹ) ಕ ಆಸ =ಯಾರಿಂದ ಹುಟ್ಟಿದೆ.

ಕಿಂಕಾರಣಾಂ ವನಮಾಸ, ಕಿಂಕಾರಣಕಶ್ಚ ವೃಕ್ಷ ಆಸ = ಇತ್ಯಪಿಪ್ರಶ್ನಃ = ಮಹಾಪ್ರಳಯದಲ್ಲಿ ವನವಾಗಲಿ, ವೃಕ್ಷವಾಗಲಿ ಯಾವ ಕಾರಣವುಳ್ಳದುದಾಗಿತ್ತು. ಯಾವುದು ಇದ್ದಿಲ್ಲ. ಈ ರೀತಿಯಾದ ಪ್ರಶ್ನೆಗೆ ಉತ್ತರವನ್ನು ಮಂತ್ರವು ಹೇಳುತ್ತಲಿದೆ.

ಯತಃ = ಯವ ಹರಿಯ ದೆಶೆಯಿಂದಲೇ, ದ್ಯಾವಾಪೃಥಿವೀ =ದ್ಯುಲೋಕ, ಪೃಥಿವೀಲೋಕ, ಸರ್ವಲೋಕಗಳೂ, ಆ ಲೋಕಗಳಲ್ಲಿರುವ ಚೇತನಾಚೇತನಾತ್ಮಕಗಳಾದ ಸರ್ವಪದಾರ್ಥಗಳೂ, ನಿಷ್ಟ ತಕ್ಷುಃ =ಸಮುತ್ಪನ್ನವಾಗಿವೆ. (ಹುಟ್ಟಿವೆ.)

ಯತಃ = ಯಾವ ಶ್ರೀಹರಿಯಿಂದಲೇ, ಸನ್ತಸ್ಥಾನೇ = ಸ್ಥಾಯಿನ್ಯೌ, ತನ್ನ ಯೋಗ್ಯತೆಗೆ ತಕ್ಕಂತೆ ಸ್ಥಿರವಾಗಿಯೂ ಇವೆ. ಸ್ಥಿತಿಯನ್ನು ಹೊಂದಿವೆ.

ಅಜರೇ = ಮುಪ್ಪಡರದೇ ಇರುವ ಅಂದರೆ ಅತಿ ದೃಢವಾದ, ದ್ಯಾವಾಪೃಥಿವ್ಯೌ, ದ್ಯುಲೋಕಪೃಥಿವೀ ಲೋಕಗಳೂ, ಇತ ಊತೀ = ಇವನಿಂದಲೇ ಉಂಟಾಗಿವೆ. ಇವನಿಂದಲೇ ಹಿಂದೆ, ಇಹಾನಿ ಪೂರ್ವಿರುಷಸಶ್ಚ ಅಜರಂತ = ಹಗಲುಗಳು, ಸಂಧ್ಯಾಕಾಲಗಳು ಜೀರ್ಣವಾದವು.

ಅಥವಾ "ಪಾತಾಳಮೇತಸ್ಯ ಹಿ ಪಾದಮೂಲಂ ಲೋಮಾನಿ ವೃಕ್ಷೌಷಧಯಃ" ಎಂಬ ಸ್ಮೃತಿವಚನದಂತೆ, ಯತಃ = ಯಾವ ಶ್ರೀಹರಿಯ ಅವಯವಗಳಿಂದಲೇ, ದ್ಯುಪೃಥಿವೀ ಪದದಿಂದ ಉಪಲಕ್ಷಿತಗಳಾದ ಹದಿನಾಲ್ಕು ಭುವನಗಳೂ ನಿಷ್ಟತಕ್ಷುಃ = ನಿತಾರಾಂ ಕೃತಾನಿ, ಸರಿಯಾಗಿ ಸೃಷ್ಟಿಸಲ್ಪಟ್ಟವೋ, ಆ ಪೃಥಿವ್ಯಾದಿಗಳಲ್ಲಿ ವನಂ =ವೃಕ್ಷಾದಿಗಳ ಗುಂಪು ಉಂಟಾಗಿದೆ. ಇತಃ = ಈ ಭೂಮಿಗೆ ಮೇಲೆ ಇರತಕ್ಕ "ಅಜರೇ" = ನಾಶರಹಿತವಾದ ಸನ್ತಸ್ಥಾನೇ = ಸಮ್ಯಕ್ ತತವಾದ ವೈಕುಂಠಾದಿಸ್ಥಾನದಲ್ಲಿ, ಊತೀ = ಊತಯೋ ವ್ಯಾಪ್ತಯಃ ಯಸ್ಯ ಪರಮಾತ್ಮನಃ = ವೈಕುಂಠದಲ್ಲಿರುವ ಪರಮಾತ್ಮನ ದೆಶೆಯಿಂದ ಹಿಂದಿನ ಹಗಲುಸಂಧ್ಯಾಕಾಲಗಳೆಲ್ಲ ಜೀರ್ಣವಾದವು. ಅಂದರೆ ಪರಮಾತ್ಮನು ಹಿಂದಿನದನ್ನೆಲ್ಲಾ ಸಂಹರಿಸಿದನೆಂದು ತಾತ್ಪರ್ಯ.

ಈ ರೀತಿ ಪರಮಾತ್ಮನ ಸೃಷ್ಟಿಸಂಹಾರ ವ್ಯಾಪಾರವನ್ನು ಋಗ್ವೇದ ಮಂತ್ರವು ಹೇಳಿರುವುದಲ್ಲದೆ ಪರಮಾತ್ಮನಿಗೆ ಸ್ಥಿತಿಕರ್ತೃತ್ವವನ್ನು ಪ್ರತಿಪಾದಿಸುತ್ತಲಿದೆ. "ನೈತಾವದೇನಾ" ಎಂಬ ಮುಂದಿನ ಮಂತ್ರದಿಂದ, ನೈತಾವದೇನಾ ಪರಃ ಅನ್ಯದಸ್ತಿ = ಪರಮಾತ್ಮನ ವ್ಯಾಪಾರ ಇಷ್ಟೇ ಮಾತ್ರವಲ್ಲ. ಮತ್ತೊಂದು ವ್ಯಾಪಾರವೂ ಉಂಟು, ಅದೇನೆಂದರೆ ಸಃ ಹಿಂದೆ ಹೇಳಿದಂತೆ ಸೃಷ್ಟಿಸಂಹಾರಕರ್ತನಾದ ಆ ಪರಮಾತ್ಮನು, ಉಕ್ಷಾ =ಭಕ್ತರು ಅಪೇಕ್ಷಿಸಿದ ಯೋಗ್ಯವಾದುದನ್ನೆಲ್ಲಾ ಪೂರ್ತಿಗೊಳಿಸುವನಾಗಿರುವವನು, ದ್ಯಾವಾಪೃಥಿವೀ ಬಿಭರ್ತಿ = ದ್ಯುಪೃಥಿವಿಲೋಕಗಳನ್ನ ಧರಿಸಿ ಕಾಪಾಡುತ್ತಾನೆ.

ಯಃ = ಯಾವ, ಸ್ವಧಾವಾನ್ = ಪೂರ್ಣಸುಖರೂಪನಾದ ಪರಮಾತ್ಮನೋ, (ತಸ್ಯ =ಅವನ) ಸ್ಮೃತ್ವಾ = (ಸ್ಮರಣೆಯಿಂದ) ಅಂದರೆ ನಿರಂತರದಲ್ಲೂ ಆ ಪರಮಾತ್ಮನ ಶ್ರವಣಮನನಧ್ಯಾನಗಳಿಂದ, "ಹೇಸನ್ತಃ =ಎಲೈ ಮುಕ್ತಿಯೋಗ್ಯರಾದ ಸಾತ್ವಿಕಜನರೇ ! ತ್ವಚಂ = ನಿಮ್ಮ ಶರೀರವನ್ನು, ಪವಿತ್ರಂ = ಪವಿತ್ರವಾದುದನ್ನಾಗಿ, ಕುರುತ = ಮಾಡಿಕೊಳ್ಳಿರಿ. ಸರ್ವದಾ ಸದಾಚಾರಯುತರಾಗಿ ಸರ್ವದಾ ಧ್ಯಾನತತ್ಪರರಾಗಿ ನಿಮಗೆ ದೇವರು ಅನುಗ್ರಹಿಸಿರುವ ಮಾನವಜನ್ಮವನ್ನು ಸಾರ್ಥಕಮಾಡಿಕೊಳ್ಳಿರಿ. ಅಥವಾ ಸ್ವಧಾವಾನ್ = ಪೂರ್ಣಸುಖರೂಪನಾದ, ಸಃ = ಆ ಪರಮಾತ್ಮನು, ಧ್ಯಾತಶ್ಚೇತ್ = ಧ್ಯಾನ ಮಾಡಲ್ಪಟ್ಟವನಾದರೆ, ಶರೀರಂ ಪವಿತ್ರಂ ಕರೋತಿ = ಧ್ಯಾನ ಮಾಡುವ ಮಾನವನ ಶರೀರವನ್ನು ಶುದ್ಧಿಗೊಳಿಸುತ್ತಾನೆ. ಯತ್ = ಪವಿತ್ರೀಕರಣದಿಂದ, ಹರಿತಃ = ದಿಕ್ಕುಗಳು, ಸೂರ್ಯಂ ನ = ಸೂರ್ಯನನ್ನು ಧರಿಸುವಂತೆ, ಸದಾ ಭಾರ್ವಂತಂ ಅಕ್ಲೇಶೇನೈವ ಪ್ರಜಾ ವಹಂತಿ = ದಿಕ್ಕುಗಳು ಸೂರ್ಯನನ್ನು ಧರಿಸುವಂತೆ ಪ್ರಜೆಗಳು ಪರಮಾತ್ಮನನ್ನು ಕ್ಲೇಶವಿಲ್ಲದಂತೆ ಸದಾ ಧರಿಸುತ್ತಾರೆ. ನಿರಂತರ ಧ್ಯಾನ ಮಾಡುವ ಅಭ್ಯಾಸವುಳ್ಳವರಾಗುವರು.

**ತಾತ್ಪರ್ಯ** :- ಕಠೋಪನಿಷತ್ತಿನಲ್ಲಿ ವೇದವಾಣಿಯು ಹೇಗೆ ಮುಕ್ತಿಯೋಗ್ಯರಾದ ಸಾತ್ವಿಕಜನತೆಯನ್ನು ಎಚ್ಚರಿಸುತ್ತಲಿದೆಯೋ, ದಿವ್ಯಸಂದೇಶವನ್ನು ಅನುಗ್ರಹಿಸುತ್ತಲಿರುವುದೋ ಅದರಂತೆ ಈ ಋಗ್ವೇದವಾಣಿಯೂ ಸಹ ಸಜ್ಜನರಿಗೆ ತಕ್ಕ ಉಪದೇಶವನ್ನು ನೀಡುತ್ತಲಿದೆ ಅದರ ಪ್ರಕಾರವು ಈ ರೀತಿ ಇದೆ.

ಎಲೈ ಸಜ್ಜನರೇ ! ದೇವೋತ್ತಮನಾದ ಚತುರ್ಮುಖಬ್ರಹ್ಮನೇ ಮೊದಲಾದ ಸಕಲಜೀವರ ಬುದ್ಧಿಪ್ರೇರಕನು ಸರ್ವೋತ್ತಮನಾದ ಶ್ರೀಹರಿಯು ಹೊರತು ಮತ್ತಾರು ಅಲ್ಲ. ದೇಶದಿಂದಲೂ, ಕಾಲದಿಂದಲೂ, ಗುಣಗಳಿಂದಲೂ ಪರಿಪೂರ್ಣನಾದ ಆ ವಿಷ್ಣುವಿನಿಂದಲೇ ಪೂರ್ವದಲ್ಲಿ ದ್ಯುಲೋಕವೂ ಪೃಥಿವೀಲೋಕವೂ ಹುಟ್ಟಿರುವುದು. ಯಾವ ದೇವೋತ್ತಮನಾದ ಪ್ರಧಾನವಾಯುವಿನಿಂದ ಆತನ ಧರ್ಮಪತ್ನಿಯಲ್ಲಿ ಜನಿಸಿದ ದೇವತೆಗಳೆಲ್ಲಾ ಪ್ರಳಯಕಾಲದಲ್ಲಿ ಆ ಶ್ರೀಹರಿಯಿಂದಲೇ ಸಂಹರಿಸಲ್ಪಟ್ಟವರಾಗಿರುವರು.

ಮಹಾಪ್ರಳಯಕಾಲದಲ್ಲಿ ಅಂದರೆ ಸೃಷ್ಟಿಯ ವ್ಯಾಪಾರವನ್ನು ಶ್ರೀಹರಿಯು ನಡೆಸುವದಕ್ಕೆ ಮುಂಚೆ, ವೃಕ್ಷಗಳ ಸಮುದಾಯರೂಪವಾದ ವನವಲ್ಲಿತ್ತು ? ವೃಕ್ಷಗಳೆಲ್ಲಿದ್ದವು ? ಯಾವುದು ಇರಲೇ ಇಲ್ಲ . ವನವನ್ನು ಮತ್ತು ವೃಕ್ಷಗಳನ್ನು ನಿರ್ಮಿಸುವವನು ಸ್ವತಂತ್ರನಾದ ಪರಮಾತ್ಮನೇ ಹೊರತಾಗಿ ಬೇರೆ ಯಾರಿದ್ದರು ? ಪರಮಾತ್ಮನೊಬ್ಬನೇ ಮಹಾಪ್ರಳಯದಲ್ಲಿ ಸ್ವತಂತ್ರನಾಗಿದ್ದನು. ಮಿಕ್ಕವರೆಲ್ಲಾ ಪರಮಾತ್ಮನ ಅಧೀನರಾಗಿ ಅಸ್ವತಂತ್ರರಾಗಿದ್ದರು.

ಸರ್ವೋತ್ತಮನಾದ ಆ ಶ್ರೀಹರಿಯಿಂದಲೇ ಸಕಲ ಲೋಕಗಳೂ ನಿರ್ಮಿಸಲ್ಪಟ್ಟವು. ದ್ಯುಲೋಕವು, ಪೃಥಿವೀಲೋಕವು ಅವುಗಳಲ್ಲಿನ ವನಗಳೂ. ವೃಕ್ಷಗಳೂ ಎಲ್ಲವೂ ಶ್ರೀ ವಿಷ್ಣುವಿನಿಂದಲೇ ಜನ್ಯವಾಗಿವೆ. ಆ ಪರಮಾತ್ಮನಿಂದಲೇ ಸಂಹಾರಕಾಲದಲ್ಲಿ ಸಂಹರಿಸಲ್ಪಡುತ್ತವೆ. ಆ ಸರ್ವನಿಯಾಮಕನಾದ ಪೂರ್ಣ ಜ್ಞಾನಾನಂದಸ್ವರೂಪನಾದ ಸರ್ವೋತ್ತಮನಾದ ಭಕ್ತರ ಇಷ್ಟಾರ್ಥಗಳನ್ನು ಕರುಣಿಸುವ ಮಹಾನುಭಾವನೇ

(ದ್ಯಾವಾಪೃಥಿವೀಗಳನ್ನು) ದ್ಯುಲೋಕ ಭೂಲೋಕಗಳನ್ನು ಧರಿಸುತ್ತಾನೆ. ಮತ್ತು ಕಾಪಾಡುತ್ತಾನೆ. ಎಲೈ ಸಾಧುಜನರೇ ! ನೀವು ಯಾವಾಗಲೂ ಪೂರ್ಣಸುಖರೂಪನಾದ ಆ ಪರಮಾತ್ಮನನ್ನು ಯಾವಾಗಲೂ ಧ್ಯಾನ ಮಾಡಿರಿ. ನಿರಂತರ ಶ್ರೀಹರಿ ಧ್ಯಾನದಿಂದ ನಿಮ್ಮ ದೇಹವನ್ನು ಪವಿತ್ರಗೊಳಿಸಿಕೊಳ್ಳಿರಿ. ನೀವೂ ಸರ್ವದಾ ಶ್ರೀವಿಷ್ಣುವನ್ನು ಸ್ಮರಿಸುತ್ತಲಿದ್ದರೆ, ಪರಮದಯಾಳುವಾದ ಶ್ರೀಹರಿಯು ನಿಮ್ಮ ಈ ಮಾನವ ಶರೀರವನ್ನು ಪವಿತ್ರಗೊಳಿಸುತ್ತಾನೆ. ದಿಕ್ಕುಗಳು ಸೂರ್ಯನನ್ನು ಧರಿಸುವಂತೆ ನಿಮ್ಮ ಧ್ಯಾನದಿಂದ ಪವಿತ್ರವಾದ ಈ ಶರೀರದಲ್ಲಿ, ದೇಹಾಭಿಮಾನಿಗಳಾದ ಪ್ರದೇಗಳು ಯಾವ ಕ್ಲೇಶವು ಇಲ್ಲದಂತೆ ಅನಾಯಾಸವಾಗಿ ಪರಮಾತ್ಮನ ವಿಶೇಷಸನ್ನಿಧಾನವುಳ್ಳವರಾಗಿ ಮಾನವಜನ್ಮದ ಪರಮ ಸಾರ್ಥಕತೆಯನ್ನು ಪಡೆಯುತ್ತಾರೆ. ಆದ್ದರಿಂದ ಸಜ್ಜನರೇ ! ನೀವೂ ಸಹ ಸರ್ವದಾ ಶ್ರೀಹರಿಯ ಧ್ಯಾನತತ್ಪರರಾಗಿರಿ. ಎಂದು ದಿವ್ಯಸಂದೇಶವನ್ನು ಕೊಡುತ್ತಲಿದೆ.

ಇದೇ ವಿಷಯವಾಗಿ ಮತ್ತೊಂದು ಪ್ರಾಮಾಣಿಕವಾದ ಶ್ಲೋಕವನ್ನು ಶ್ರೀ ತಾತ್ಪರ್ಯಚಂದ್ರಿಕಾ ವ್ಯಾಖ್ಯಾಕಾರರಾದ ಶ್ರೀ ರಾಘವೇಂದ್ರ ಗುರುಸಾರ್ವಭೌಮರು, ಪ್ರಕಾಶವ್ಯಾಖ್ಯಾನದಲ್ಲಿ ಒಂದು ಸಂದರ್ಭದಲ್ಲಿ ಈ ಮುಂದೆ ತಿಳಿಸುವಂತೆ ಉದಾಹರಿಸುತ್ತಾರೆ.

**"ಯೇ ಮಾನವಾ ವಿಗತರಾಗಪರಾವರಜ್ಞಾಃ**
**ನಾರಾಯಣಂ ಸುರಗುರುಂ ಸತತಂ ಸ್ಮರಂತಿ ।**
**ಧ್ಯಾನೇನ ತೇನ ಹತಕಿಲ್ಬಿಷಚೇತನಾಸ್ತೇ**
**ಮಾತುಃ ಪಯೋಧರರಸಂ ನ ಪುನಃ ಪಿಬಂತಿ ।।೧೩ ।।**

**ಅಭಿಪ್ರಾಯ** :- ಸಾತ್ತ್ವಿಕರಾದ ಯಾವ ಸಜ್ಜನರು,ವೈರಾಗ್ಯಭಾಗ್ಯಸಂಪನ್ನರಾಗಿ, ಸ್ವತಂತ್ರ, ಅಸ್ವತಂತ್ರ ತತ್ತ್ವಗಳ ನಿಶ್ಚಯವನ್ನುಳ್ಳವರಾಗಿ, ಭಕ್ತಿಶ್ರದ್ಧೆಗಳ ಪೂರ್ವಕವಾಗಿ, ಸರ್ವೋತ್ತಮನಾದ, ಸಕಲದೇವತಾವರ್ಗಕ್ಕೆ ಗುರುವಾದ,ಯಾವ ಶ್ರೀಮನ್ನಾರಾಯಣನನ್ನು ಯಾವಾಗಲೂ ಸ್ಮರಿಸುತ್ತಿರುವರೋ, ಅಂತಹ ಶ್ರೀ ಹರಿಭಕ್ತರು, ನಿರಂತರವಾದ ಶ್ರೀಹರಿಯ ಸ್ಮರಣೆಯಿಂದ, ಸಕಲ ಪಾಪಗಳಿಂದಲೂ ಬಿಡುಗಡೆಯನ್ನು ಪಡೆಯುತ್ತಾರೆ. ಅಂದರೆ(ಪಾಪಗಳೆಲ್ಲ ನಾಶವಾಗಿ) ಅವಿದ್ಯಾದಿಬಂಧಗಳಿಂದ ಬಿಡಲ್ಪಟ್ಟವರಾಗಿ, ಕ್ರಮವಾಗಿ ಪುನರ್ಜನ್ಮವಿಲ್ಲದಂತೆ ಮತ್ತೆ ತಾಯಿಯ ಹಾಲನ್ನು ಕುಡಿಯುವದಿಲ್ಲ. ಅಂದರೆ ಅಂತಹ ಸಾಧನಾಸಂಪೂರ್ತಿಯಾದ ಪುಣ್ಯಾತ್ಮರಿಗೆ ಪುನರ್ಜನ್ಮವೇ ಇರುವುದಿಲ್ಲ. ಎಂದು ತಾತ್ಪರ್ಯ.

ಬೃಹದಾರಣ್ಯಕೋಪನಿಷತ್ತಿನ ವಾಕ್ಯವು ಸಹ ಸರ್ವದಾ ಧ್ಯಾನರೂಪವಾದ ಪರಮಾತ್ಮನ ಉಪಾಸನೆಯನ್ನು ಪ್ರವಚನರೂಪವಾದ ಉಪಾಸನೆಯನ್ನು ಮಾಡತಕ್ಕ ಜ್ಞಾನಿಯಾದ ಅಧಿಕಾರಿಗೆ ವೈಕುಂಠಪ್ರಾಪ್ತಿರೂಪವಾದ ಫಲವನ್ನು ಹೇಳುತ್ತಲಿದೆ.

**ಯಸ್ಯಾನುವಿತ್ತಃ ಪ್ರತಿಬುದ್ಧ ಆತ್ಮಾಸ್ಮಿನ್ ಸಂದೋಹೇ ಗಹನೇ ಪ್ರವಿಷ್ಟಃ ।**
**ಸ ವಿಶ್ವಕೃತ್ ಸ ಹಿ ಸರ್ವಸ್ಯ ಕರ್ತಾ ತಸ್ಯ ಲೋಕಃ ಸ ಉ ಲೋಕ ಏವ ।।**
**(ಬೃ. ಉ. ೬-೪-೧೩)**

**ಅರ್ಥ** :- ಯಸ್ಯ = ಉಪಾಸಕನಿಂದ, ಇಲ್ಲಿ ಷಷ್ಠಿ ವಿಭಕ್ತಿಯು ಇದ್ದಾಗ್ಯೂ ತೃತೀಯಾಂತವಾಗಿ ವಿಪರಿಣಾಮ ಮಾಡಿಕೊಂಡು ಅರ್ಥವನ್ನು ಹೇಳಲಾಗಿದೆ. ಹಿ = ಯವ ಕಾರಣದಿಂದ, ಸಃ ಆತ್ಮಾ = ಮುಖ್ಯವಾಗಿ ಆತ್ಮಶಬ್ದವಾಚ್ಯನಾದ ತ್ರಿವಿಧವಾದ ವ್ಯಾಪ್ತಿಯನ್ನುಳ್ಳ ಆ ವಿಷ್ಣುವು, ಸರ್ವಸ್ಯಕರ್ತಾ = ಎಲ್ಲಕ್ಕು ಕರ್ತನಾಗಿರುವನೋ, (ತಸ್ಮಾತ್ಏವ = ಆ ಕಾರಣದಿಂದಲೇ) ವಿಶ್ವಕೃತ್ = ವಿಶ್ವಸ್ಯಕರ್ತಾ = ವಾಯುದೇವರಿಗೂ ಜನಕನಾಗಿದ್ದಾನೆ. ಪ್ರತಿಬುದ್ಧಃ = ಸ್ವತಃ ತಾನೇ ಸರ್ವಜ್ಞನಾಗಿದ್ದಾನೆ. ಅಸ್ಮಿನ್ ಸಂದೋಹೇ = ಸಂದುಹ್ಯತೇ, ಪುರುಷಾರ್ಥೋಃ ಅನೇನೇತಿ ಎಂಬ ನಿರ್ವಚನದಿಂದಾಗಲಿ, ಕಾರ್ಯಕಾರಣಸಮುದಾಯರೂಪವಾಗಿರುವುದರಿಂದಾಗಲಿ, ಭೂತಸಮುದಾಯ ರೂಪವಾಗಿರುವುದರಿಂದಾಗಲಿ, ಸಂದೋಹವೆಂಬ ಹೆಸರುಳ್ಳ, ಈ ಮಾನವದೇಹದ ಮಧ್ಯಭಾಗದಲ್ಲಿ, (ಸ್ಥಿತೇ = ಇರತಕ್ಕ), ಗಹನೇ = ಗಂಭೀರವಾದ ಹೃದಯದ ಗುಹಾಸ್ಥಾನದಲ್ಲಿ, ಪ್ರವಿಷ್ಟಃ = ಪ್ರವೇಶಿಸಿರುವ, (ಸಃ ಆತ್ಮಾ) ಆ ವಿಷ್ಣುವು, ಯಸ್ಯ = ಯಾವ ಉಪಾಸಕನಿಂದ, ಅನುವಿತ್ತಃ = ಚೆನ್ನಾಗಿ ತಿಳಿಯಲ್ಪಟ್ಟಿರುವನೋ, ತಸ್ಯ = ಆ ರೀತಿ ತಿಳಿದ ಅಧಿಕಾರಿಯಾದ ಜ್ಞಾನಿಯಾದ ಜೀವನಿಗೆ, ಉ = ಪ್ರಧಾನವಾದ, ತಸ್ಯ = ಆ ವಿಷ್ಣುವಿನ (ಯಃ = ಯಾವ), ಲೋಕಃ = ಲೋಕಉಂಟೋ, ವೈಕುಂಠಲೋಕವೋ, ಸ ಏವ ಲೋಕಃ = ಅದೇ ಸ್ಥಾನವು ಲಭಿಸುತ್ತದೆ.

**ತಾತ್ಪರ್ಯ** :- ಸರ್ವಕರ್ತನಾದ ಶ್ರೀ ವಿಷ್ಣುವು ಇತರ ಎಲ್ಲ ದೇವರಿಗಿಂತಲೂ ಶ್ರೇಷ್ಠರಾದ ದೇವೋತ್ತಮರಾದ ವಾಯುದೇವನಿಗೂ ಕರ್ತನೇ ಆಗಿರುತ್ತಾನೆ. ಯಾವ ಉಪಾಸಕರು ಸರ್ವಕರ್ತನಾದ ಇಂತಹ ಮಹಿಮೆಯನ್ನುಳ್ಳ ಶ್ರೀಹರಿಯನ್ನು ತನ್ನ ಹೃದಯಾಂತರಾಳದಲ್ಲಿ ಸಾಕ್ಷಾತ್ಕರಿಸುವನೋ ಅಂತಹ ಅಪರೋಕ್ಷಜ್ಞಾನಿಗೆ ಕ್ರಮವಾಗಿ ಆ ವಿಷ್ಣುವಿನ ಸ್ಥಾನವಾದ ವೈಕುಂಠಲೋಕವೇ ದೊರಕುತ್ತದೆ. ಅಂದರೆ ಅಪರೋಕ್ಷಜ್ಞಾನಿಗೆ ಮೋಕ್ಷವು ದೊರಕುತ್ತದೆ ಎಂದು ಅಭಿಪ್ರಾಯ.

**ವೇದಪುರುಷನು ಕಠೋಪನಿಷತ್ತಿನಲ್ಲಿ ಯಮ ಮತ್ತು ನಚಿಕೇತರ ಸಂವಾದರೂಪವಾದ ಭಾಗವನ್ನು ಅನುವಾದ ಮಾಡಿ ಸ್ವಯಂ ತಾನೇ ಸಾಧುಗಳಿಗೆ "ಉತ್ತಿಷ್ಠತ, ಜಾಗ್ರತ, ಪ್ರಾಪ್ಯ ವರಾನ್ನಿಬೋಧತ, ಕ್ಷುರಸ್ಯ ಧಾರಾನಿಶಿತಾ ದುರತ್ಯಯಾ, ದುರ್ಗಂ ಪಥಃ ತತ್ಕವಯೋ ವದಂತಿ (ಇತಿಕಠಶ್ರುತಿಃ)" ಎಂದು ಹಿತವನ್ನು ಉಪದೇಶವಿತ್ತಿದ್ದಾನೆ. ಅದರ ಅಭಿಪ್ರಾಯವು ಹೀಗಿದೆ.**

ಎಲೈ ಸಾಧುಗಳಿರಾ ! ನಾನಾವಿಧಗಳಾದ ನಶ್ವರಗಳಾದ, ಅಸಾರಗಳಾದ ತಾರಕಗಳಲ್ಲದ, ಬಂಧಕಗಳಾದ, ಐಹಿಕಗಳಾದ ವಿಷಯಗಳನ್ನು ಯಾವಾಗಲೂ ಚಿಂತಿಸಿ, ವ್ಯರ್ಥವಾಗಿ ನಿಮ್ಮ ಜೀವಮಾನದ ಅಮೋಘವಾದ ಕಾಲವನ್ನು ಕಳೆಯಬೇಡಿರಿ. ಸೋಮಾರಿತನವನ್ನು ಸರ್ವಥಾ ಬಿಡಿರಿ. ಮಹಾತ್ಮರಾದ ತತ್ತ್ವೋಪದೇಶಕರಾದ ಗುರುಗಳನ್ನು ಸಂಪರ್ಕಿಸಿ ಪರಮಾತ್ಮನನ್ನು ಸರಿಯಾಗಿ ತಿಳಿಯಿರಿ. ಭಗವಂತನ ಜ್ಞಾನವನ್ನು ಪಡೆಯಬೇಕೆಂದು ಪ್ರಶ್ನೆ ಮಾಡುವಿರಾ ! ಕೇಳಿರಿ.

ವಿವಿಧ ದುಃಖಕ್ಕೆ ಅಂದರೆ ನಾನಾ ಬಗೆಯಾದ ದುಃಖಕ್ಕೆ ಕಾರಣವಾದ ಈ ಸಂಸಾರದ ಬಂಧದ ನಿವೃತ್ತಿಯು ಪರಮಾತ್ಮನ ತತ್ತ್ವಜ್ಞಾನದಿಂದಲೇ ಆಗುತ್ತದೆ. ಅದರ ಹೊರತು ಬೇರೆ ಯಾವುದರಿಂದಲೂ ಆಗುವದೇ ಇಲ್ಲ.

ಈ ಸಂಸಾರವಾದರೋ ಕ್ಷೌರದ ಕತ್ತಿಯ ಚೂಪಾದ ಅಲಗಿನಂತೆ ಅತಿತೀಕ್ಷ್ಣವಾಗಿದೆ. ಬಹಳ ದುಃಖಕ್ಕೆ ಕಾರಣವಾಗಿದೆ. ಬಹಳ ಕಷ್ಟಪಟ್ಟು ಇದರಿಂದ ದಾಟಬೇಕಾಗಿದೆ. ಪರಮಾತ್ಮನ ತತ್ವಜ್ಞಾನದಿಂದ ಬೇರೆಯಾದ ಯಾವುದಾದರೂ ಸುಲಭೋಪಾಯದಿಂದ ಈ ಸಂಸಾರಬಂಧದಿಂದ ಬಿಡುಗಡೆಯಾಗಬಹುದಲ್ಲಾ ಎಂದು ಶಂಕಿಸಬೇಡಿರಿ. ಈ ಸಂಸಾರಬಂಧದಿಂದ ಬಿಡುಗಡೆ ಮಾಡತಕ್ಕವನು ಆ ಬ್ರಹ್ಮನೇ ಆಗಿದ್ದಾನೆ.

"ಬಂಧಕೋ ಭವಪಾಶೇನ ಭವಪಾಶಾಚ್ಚ ಮೋಚಕಃ।
ಕೈವಲ್ಯದಃ ಪರಂ ಬ್ರಹ್ಮ ವಿಷ್ಣುರೇವ ನ ಸಂಶಯಃ ॥

ಎಂಬ ಪ್ರಮಾಣದಲ್ಲಿ ಉಕ್ತವಾಗಿರುವಂತೆ ಪರಮಾತ್ಮನ ಇಚ್ಛೆಯಿಂದಲೇ ಅನಾದಿಯಯಾದ ಈ ಸಂಸಾರಬಂಧವು ಇರುತ್ತದೆ. ಇದರಿಂದ ಬಿಡುಗಡೆ ಮಾಡುವವನೂ, ಮೋಕ್ಷದಾತನೂ ಆ ವಿಷ್ಣುವೇ ಹೊರತು ಬೇರೆಯವರಲ್ಲ. ಇದರಲ್ಲಿ ಸಂದೇಹವೇ ಬೇಡ. ಅಂತಹ ಸಂಸಾರಬಂಧನದಿಂದ ಪಾರು ಮಾಡುವ ಈ ಪರಬ್ರಹ್ಮನ ಜ್ಞಾನವಾದರೋ ಶ್ರವಣಮನನಧ್ಯಾನರೂಪವಾದ ವೈರಾಗ್ಯಶ್ರದ್ಧಾಭಕ್ತಿಪೂರ್ವಕವಾದ ಸಾಧನಸಂಪತ್ತಿನಿಂದ ಮಾತ್ರ ಸಾಧ್ಯವಾಗುವಂತಹುದು.

ಹಾಗೆಯೇ ಸಾಧನಸಂಪತ್ತು ಪೂರ್ತಿಯಾಗಿ ಅಪರೋಕ್ಷ ಜ್ಞಾನಿಯಾದ ಅಧಿಕಾರಿಗೆ ಮುಂದೆ ದೇಹಾಪಾದಕವಾದ ಪ್ರಾರಬ್ಧಕರ್ಮವೆಲ್ಲಾ ಕಳೆದ ತರುವಾಯ ಬ್ರಹ್ಮರಂಧ್ರ ಮೂಲಕವಾಗಿ ದೇಹತ್ಯಾಗ ಮಾಡಿದನಂತರ ಹೋಗಬೇಕಾದ ಅರ್ಚಿರಾದಿಯಾದ, ಪ್ರಧಾನಾಗ್ನಿಪುತ್ರರಾದ ಅಗ್ನಿಜ್ಯೋತಿಗಳ ಮಾರ್ಗವೂ, ಪ್ರಧಾನವಾಯುದೇವರ ಪುತ್ರರಾದ ಅತಿವಾಹಿಕರ ಲೋಕವೂ, ಅಲ್ಲಿಂದ ಮುಂದೆ ಹೋಗಬೇಕಾಗಿರುವ, ಅಹರಭಿಮಾನಿಲೋಕವೂ, ಶುಕ್ಲಪಕ್ಷಾಭಿಮಾನಿ ಲೋಕವೂ, ಉತ್ತರಾಯಣಾಭಿಮಾನಿಲೋಕವೂ, ಸಂವತ್ಸರಾಭಿಮಾನಿಲೋಕವೂ, ಆ ಮೇಲಿನ ತಟಿಲ್ಲೋಕವೂ, ವರುಣ ಲೋಕವೂ, ದಕ್ಷಪ್ರಜಾಪತಿಲೋಕವೂ, ಸೂರ್ಯಲೋಕವೂ, ಚಂದ್ರಲೋಕವೂ, ಪ್ರಧಾನಾಗ್ನಿದೇವತಾಲೋಕವೂ, ಇಂದ್ರಲೋಕವೂ, ಧ್ರುವಲೋಕವೂ, ಪ್ರಧಾನ ವಾಯುದೇವರ ಪತ್ನಿಯರಾದ ಭಾರತೀದೇವಿಯವರ ಲೋಕವೂ, ಪ್ರಧಾನ ವಾಯುದೇವರ ಲೋಕವೂ ಹೀಗೆ ಮುಂದೆ ಹೋಗಬೇಕಾಗಿರುವ ಹದಿನಾರು ಲೋಕಗಳು ಏನುಂಟೋ ಅವೆಲ್ಲಾ ಸುಲಭ ಸಾಧ್ಯಗಳಾಗಿಲ್ಲ. ಬಹಳ ಪ್ರಯತ್ನ ಸಾಧ್ಯಗಳಾಗಿವೆ. ಹೀಗೆಂದೂ ಜ್ಞಾನಿಗಳು ಹೇಳುತ್ತಾರೆ. ಆದಕಾರಣ ಆಲಸ್ಯವನ್ನು ಬಿಟ್ಟು ಅವಿದ್ಯಾ ಹಾಸಿಗೆಯಿಂದ ಎದ್ದೇಳಿ, ಎಚ್ಚರಗೊಳ್ಳಿ. ಶೀಘ್ರವಾಗಿ ಅತಿಕ್ಲೇಶಸಾಧ್ಯವಾದ ಬ್ರಹ್ಮಜ್ಞಾನಕ್ಕೆ ಪ್ರಯತ್ನ ಮಾಡಿ ಎಂದು ಸಾಧಕವರ್ಗಕ್ಕೆ ವೇದಪುರುಷನು ಎಚ್ಚರಿಕೆಯನ್ನು ಕೊಡುತ್ತಲಿರುತ್ತಾನೆ.

ಆ ಪರಬ್ರಹ್ಮನು ಸುಲಭ ಸಾಧ್ಯವಾಗಿಲ್ಲ. ಅವನ ಜ್ಞಾನವು ಬಹಳ ಪ್ರಯತ್ನಸಾಧ್ಯವಾಗಿದೆ. ಲೌಕಿಕಗಳಾದ ಪ್ರಾಕೃತಗಳಾದ ಯಾವ ಸಾಧನಗಳಿಂದಲೂ ಸುಲಭವಾಗಿ ತಿಳಿಯಲ್ಪಡತಕ್ಕವನಲ್ಲ. ಆದಕಾರಣ ಶ್ರದ್ಧಾಭಕ್ತಿಪೂರ್ವಕವಾದ ಶ್ರವಣಾದಿಗಳಿಂದಲೇ ಅವನ ಸಾಕ್ಷಾತ್ಕಾರವನ್ನು ಪಡೆದು ಈ ಮೃತ್ಯುಮುಖದಿಂದ ಪಾರಾಗಿರಿ ಎಂದು ಮುಂದಿನ ವಾಕ್ಯದಲ್ಲಿ ವೇದಪುರುಷನು ಸಂದೇಶವನ್ನು ಇತ್ತಿದ್ದಾನೆ.

**"ಅಶಬ್ದಂ ಅಸ್ಪರ್ಶಂ, ಅರೂಪಂ, ಅವ್ಯಯಂ, ತಥಾರಸಂ, ನಿತ್ಯಮಗಂಧವಚ್ಚ ಯತ್ ॥**
**ಅನಾದ್ಯನಂತಂ ಮಹತಃ ಪರಂ ಧ್ರುವಂ ನಿಚಾಯ್ಯ ತಂ ಮೃತ್ಯುಮುಖಾತ್ಪ್ರಮುಚ್ಯತೇ ॥**
**ಇತಿಕಠಶ್ರುತಿಃ ॥**

**ತಾತ್ಪರ್ಯ** :- ಆ ಪರಬ್ರಹ್ಮವಸ್ತುವು,

ಅಶಬ್ದಂ = ಪ್ರಾಕೃತವಾದ ಶಬ್ದಗುಣರಹಿತವಾದುದು. ಅಥವಾ ಇದಂ ಇತ್ಥಂ = ಇದು ಹೀಗೆಯೇ ಸರಿ ಎಂಬುದಾಗಿ ಶಬ್ದವೇದ್ಯವಾದ ಪರಿಮಿತಿರಹಿತವಾದುದದು, ಶಬ್ದಾವೇದ್ಯವಾದುದು ಅಂದರೆ ಅತ್ಯಾಶ್ಚರ್ಯಕರವಾದುದು. ಶಬ್ದಪ್ರಮಾಣಕ್ಕೆ ಸಮಗ್ರವಾಗಿ ವಿಷಯವಲ್ಲದುದು. ಶಬ್ದಭಿನ್ನವಾದುದು. ಅಸ್ಪರ್ಶಂ = ಪ್ರಾಕೃತವಾದ ಸ್ಪರ್ಶಗುಣ ಶೂನ್ಯವಾದುದು. ಆದಕಾರಣದಿಂದಲೇ ತ್ವಗಿಂದ್ರಿಯದಿಂದ ತಿಳಿಯಲಶಕ್ಯವಾದುದು. ಪ್ರಾಕೃತಸ್ಪರ್ಶಗುಣ ಭಿನ್ನವಾದುದು. ಅರೂಪಂ = ಪ್ರಾಕೃತರೂಪರಹಿತವಾದುದು.ಆದುದರಿಂದಲೇ ಲೌಕಿಕವಾದ ಚಕ್ಷುರಿಂದ್ರಿಯಕ್ಕೆ ಅಗೋಚರವಾದುದು. ಅವ್ಯಯಮ್ =ಭೌತಿಕವಾದ ರೂಪರಹಿತವಾದುದರಿಂದಲೇ ನಾಶರಹಿತವಾದುದು.ನಿತ್ಯವಾದುದು. ಭೌತಿಕರೂಪವುಳ್ಳದುದು ಅನಿತ್ಯವಾಗಿ ಕಂಡುಬಂದಿದೆ. ಈ ಬ್ರಹ್ಮವಸ್ತುವು ಅಂತಹುದಲ್ಲ.

ಅರಸಂ =ಲೌಕಿಕವಾದ ರಸಗುಣರಹಿತವಾದುದು ಆದಕಾರಣ ಪ್ರಾಕೃತವಾದದ ರಸನೇಂದ್ರಿಯಕ್ಕು ಅವಿಷಯವಾದುದು. ಅಗಂಧವತ್ = ಪ್ರಾಕೃತವಾದ ಗಂಧಗುಣರಹಿತವಾದುದು, ಆದುದರಿಂದಲೇ ಪೃಥಿವೀಗಿಂತಲೂ ಭಿನ್ನವಾದುದು. ಆದುದರಿಂದಲೇ ಪ್ರಾಕೃತವಾದ ಘ್ರಾಣೇಂದ್ರಿಯಕ್ಕು ವಿಷಯವಲ್ಲದುದು.

ಇದರಿಂದ ಪಂಚಮಹಾಭೂತಗಳಿಗೆ ವಿಲಕ್ಷಣವಾದುದೆಂದು ಹೇಳಿದಂತಾಯಿತು. ಅನಾದ್ಯನಂತಂ = ಆದಿ, ಅಂತವಿಲ್ಲದುದು. ಉತ್ಪತ್ತಿಯಾಗಲಿ, ನಾಶವಾಗಲಿ ಇಲ್ಲದುದು. ಮಹತಃ ಪರಂ = ಮಹತ್ತತ್ವಾಭಿಮಾನಿಯಾದ ಚತುರ್ಮುಖನಿಗಿಂತಲೂ ಭಿನ್ನವಾದುದು ಮತ್ತು ಉತ್ತಮವಾದುದು. ಧ್ರುವಂ = ಶಾಶ್ವತವಾದುದು. ಯಾವಾಗಲೂ ಏಕಪ್ರಕಾರವಾದುದು. ಈ ರೀತಿ ಇರತಕ್ಕ, ತಂ = ತಾರತಮ್ಯದ ಕಡೆಯಲ್ಲಿ ಅತ್ಯುನ್ನತಸ್ಥಾನದಲ್ಲಿರತಕ್ಕ ಪರಮಾತ್ಮನನ್ನು, ನಿಚಾಯ್ಯ = ಶ್ರವಣಮನನಾಗಳಿಂದ ನಿಶ್ಚಯಿಸಿ ಧ್ಯಾನ ಮಾಡಿ ಅವನ ಅಪರೋಕ್ಷವಾದನಂತರ ಅತಿಪರಿಪಕ್ವ ಭಕ್ತಿಯೋಗದ ಮೂಲಕವಾಗಿ ಆಗಲಿರುವ ಅತ್ಯರ್ಥಪ್ರಸಾದದ್ವಾರಾ ಮೃತ್ಯುಮುಖಾತ್ = ಸಂಸಾರಬಂಧನದಿಂದ, ಪ್ರಮುಚ್ಯತೇ = ಪ್ರಕರ್ಷದಿಂದ ಬಿಡುಗಡೆ ಪಡೆಯುತ್ತಾನೆ.

ಒಟ್ಟು ಅಭಿಪ್ರಾಯ. ಸರ್ವೋತ್ತಮನಾದ ಶ್ರೀಹರಿಯು ಪ್ರಾಕೃತಶಬ್ದಾದಿಗಳಿಂದ ಸಮಗ್ರವಾಗಿ ತಿಳಿಯಲ್ಪಡದೇ ಇರತಕ್ಕವನಾದಾಗ್ಯೂ ಸ್ವರೂಪೋದ್ಧಾರಕರಾದ ನಿಯತಗುರುಗಳ ಮೂಲಕವಾಗಿ ಶ್ರವಣಮನನಧ್ಯಾನಾದಿಗಳ ಅನುಷ್ಠಾನದಿಂದ, ಪ್ರಸನ್ನನಾಗಿ ತನ್ನ ಸಾಕ್ಷಾತ್ಕಾರವನ್ನು ಕರುಣಿಸಿ ಸಂಸಾರಬಂಧನದಿಂದ ಬಿಡುಗಡೆ ಮಾಡುತ್ತಾನೆಂದು ಪರಮಾಭಿಪ್ರಾಯ. ಅಥರ್ವಣಮಂತ್ರವು "ಸರ್ವಾಧಾರನಾದ ಪರಮಾತ್ಮನನ್ನೇ ಪ್ರಧಾನವಾಗಿ ತಿಳಿಯಿರಿ. ಬೇರೆ ಯಾವ ದೇವತೆಯನ್ನು ಸ್ವತಂತ್ರನೆಂದು ಸರ್ವೋತ್ತಮನೆಂದು ತಿಳಿಯಬೇಡಿರಿ. ಈ ಪರಮಾತ್ಮನು ಮುಕ್ತರಿಗೂ ಆಶ್ರಯನಾದುದರಿಂದ ಇತರಮಾತನ್ನು ಪ್ರಧಾನವಾಗಿ ಆಡಬೇಡಿರಿ." ಬಿಟ್ಟುಬಿಡಿರಿ ಎಂದು ಎಚ್ಚರಿಸುತ್ತಲಿದೆ.

**ಯಸ್ಮಿನ್ದ್ಯೌಃ, ಪೃಥಿವೀ ಚಾಂತರಿಕ್ಷಮೋತಂ ಮನಃ ಸಹ ಪ್ರಾಣೈಶ್ಚಸರ್ವೈಃ ।**
**ತಮೇವೈಕಂ ಜಾನಥ ಆತ್ಮಾನಂ ಅನ್ಯಾ ವಾಚೋ ವಿಮುಂಚಥ, ಅಮೃತಸ್ಯೈಷಸೇತುಃ ॥**
**(ಅಥರ್ವಣೋಪನಿಷತ್ ಮಂತ್ರ ೫)**

**ಅರ್ಥ** :- ಯಸ್ಮಿನ್ = ಯಾವ ಪರಮಾತ್ಮನಲ್ಲಿ, ದ್ಯೌಃ = ದ್ಯುಲೋಕವೂ, ಓತಾ = ಆಶ್ರಿತವಾಗಿದೆಯೋ, ಪೃಥಿವೀ = ಪೃಥಿವೀಲೋಕವೂ (ಭೂಲೋಕವೂ) ಓತಾ = ಆಶ್ರಿತವಾಗಿರುವುದೋ, ಅಂತರಿಕ್ಷಂ ಚ = ಅಂತರಿಕ್ಷವೂಸಹ, ಓತಂ = ಆಶ್ರಿತವಾಗಿರುವುದೋ, ಸರ್ವೈಃ ಪ್ರಾಣೈಃ ಸಹ = ಚಕ್ಷುಸ್ಸೇ ಮೊದಲಾದ ಎಲ್ಲಾ ಇಂದ್ರಿಯಗಳ ಸಹಿತ, ಮನಶ್ಚ = ಮನ ಇಂದ್ರಿಯವೂ ಸಹ, ಓತಂ = ಆಶ್ರಿತವಾಗಿದೆಯೋ, ಪಟದಲ್ಲಿ ದಾರಗಳು ಸೇರಿಕೊಂಡು ಇರುವಂತೆ ಯಾವ ಪರಮಾತ್ಮನನ್ನು ಆಶ್ರಯಿಸಿಕೊಂಡು ದ್ಯುಲೋಕಾದಿಗಳು ಇರುತ್ತವೆಯೋ ಮತ್ತು ಇಂದ್ರಿಯಾಭಿಮಾನಿಗಳಾದ ದೇವತೆಗಳೆಲ್ಲರೂ ಇರುತ್ತಾರೆಯೋ, ತಂ = ಅಂತಹ, ಸರ್ವಾಧಾರಮೇವೈಕಂ = ಆ = ಸರ್ವಕ್ಕು ಆಶ್ರಯನಾದ ಒಬ್ಬನೇ ಆದ, ಆತ್ಮಾನಂ = ಪರಮಾತ್ಮನನ್ನು, ಜಾನಥ = ಜಾನೀಧ್ವಂ = ತಿಳಿಯಿರಿ. ಮೋಕ್ಷದಾಯಕನಾದ, ಸಕಲಕ್ಕು ಆಧಾರನಾದ, ಪರಮಾತ್ಮನ ಜ್ಞಾನವು ಆಗಬೇಕಾದರೆ ಆಧೇಯವಾದ ಅಪ್ರಧಾನಗಳಾದ ದೇವತಾದಿಗಳ ಜಗತ್ತಿನ ಜ್ಞಾನವು ಸರ್ವಾಧಾರತ್ವ ಪ್ರಕಾರಕವಾದ ಪರಬ್ರಹ್ಮನ ಜ್ಞಾನಕ್ಕೆ ಉಪಯೋಗಿಯಾದುದರಿಂದ ವೇದವಾಣಿಯು ಅಂತಹ ಆಧೇಯವಾದುವುಗಳನ್ನು ಯಸ್ಮಿನ್ದ್ಯೌಃ ಎಂದು ಹೇಳಿದೆ.

ಪರಮಪ್ರಧಾನವಾಗಿ ಸರ್ವಾಧಾರನಾದ ಮೋಕ್ಷವನ್ನೂ ಕೊಡತಕ್ಕ ಮುಕ್ತರಿಗೂ ಮುಖ್ಯಾಶ್ರಯನಾದ ಪರಮಾತ್ಮನನ್ನೇ ತಿಳಿಯಿರಿ. ಇತರರನ್ನು ಪ್ರಧಾನವಾಗಿ ತಿಳಿಯಬೇಡಿರಿ. ಬೇರೆ ಬಗೆಯಾದ ಮಾತನ್ನೇ ಬಿಟ್ಟುಬಿಡಿ ಎಂದು ಖಡಾಖಂಡಿತವಾಗಿ ವೇದವಾಣಿಯು ಎಚ್ಚರಿಸುತ್ತಲಿದೆ.

ಜೀವನಿಗೂ ಪರಬ್ರಹ್ಮನಿಗೂ ಪಾರಮಾರ್ಥಿಕಭೇದವನ್ನು ಸಯುಕ್ತಿಕವಾಗಿ ವೇದದವಾಣಿಯು ಪ್ರತಿಪಾದಿಸುತ್ತಲಿದೆ.

ದ್ವಾ ಸುಪರ್ಣಾ ಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ ।
ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತಿ ಅನಶ್ನನ್ನನ್ಯೋ ಅಭಿಚಾಕಶೀತಿ ॥
(ಅಥರ್ವಣೋಪನಿಷತ್ ಖಂಡ- ೫ ಮಂತ್ರ ೧)

**ಅರ್ಥ** :- ಸಯುಜಾ = ಸಯುಜೌ = ಸಂಯುಕ್ತರಾದ = ಸದಾವಿಯೋಗರಹಿತರಾದ, ಸಖಾಯೌ = ಉಪಕಾರ್ಯ ಉಪಕಾರಕ ಭಾವದಿಂದದ (ಉಪಕಾರ ಮಾಡಿಸಿಕೊಳ್ಳುವವನು ಮತ್ತು ಉಪಕಾರ ಮಾಡತಕ್ಕವನು ಆದುದರಿಂದ) ಅನ್ಯೋನ್ಯವಾಗಿ ಒಬ್ಬರನ್ನೊಬ್ಬರು ಬಿಡದೇ ಇರತಕ್ಕ ಪ್ರೀತಿಯಿಂದ ಏಕದೇಶದಲ್ಲಿರತಕ್ಕ (ಒಂದೇ ದೇಹದಲ್ಲಿರತಕ್ಕ) ದ್ವಾ = ದ್ವಾ = ಇಬ್ಬರಾದ, ಸುಪರ್ಣಾ ಸಂಪರ್ಣೌ = ಒಳ್ಳೆ ರೆಕ್ಕೆಗಳುಳ್ಳ ಹಕ್ಕಿಗಳಂತಿರುವ, ಸುಜೀವ ವಿಷಯದಲ್ಲಿ ಸುಪ್ಮ ಪರಮಾನಂದಸ್ವರೂಪನಾದ ಜೀವ ಮತ್ತು ಈಶ್ವರ ಇವರಿಬ್ಬರು, ಸಮಾನಂ = ಒಂದು, ವೃಕ್ಷಂ = ದೇಹವೆಂಬ ಒಂದಾದ ಅಶ್ವತ್ಥ ವೃಕ್ಷವನ್ನು, ಪರಿಷಸ್ವಜಾತೆ = (ಆಲಿಲಿಂಗತುಃ) ಆಲಿಂಗಿಸಿರುವರು. ತಯೋರನ್ಯಃ = ಆ ಎರಡು ಹಕ್ಕಿಗಳ ಮಧ್ಯದಲ್ಲಿ ಈಶ್ವರನಿಗಿಂತಲೂ, ಅನ್ಯಃ = ಬೇರೆಯಾದವನಾದ = (ಭಿನ್ನನಾದ) ಜೀವನು, ಪಿಪ್ಪಲಂ = ಅಶ್ವತ್ಥ ಫಲರೂಪವಾದ, ದೇಹದಿಂದ ಉಂಟಾದ ಕರ್ಮಫಲವನ್ನು, ಅತ್ತಿ = ಅಸ್ವಾದ್ವೇವ ಸ್ವಾದುತ್ವೇನ, ಅತ್ತಿ (ಅಶ್ನಾತಿ) = ಅದು ಅಸ್ವಾದುವಾದುದಾದರೂ (ರುಚಿಕರವಲ್ಲವಾದರೂ) ರುಚಿಕರವಾದುದೆಂದು ತಿಳಿದು (ತಿನ್ನುತ್ತಾನೆ.) ಅನುಭವಿಸುತ್ತಾನೆ.

ಅನ್ಯಃ = ಜೀವನಿಗಿಂತಲೂ (ಕರ್ಮಫಲವನ್ನು ತಿನ್ನುತ್ತಲಿರುವ ಜೀವನಿಗಿಂತಲೂ) ಬೇರೆಯವನಾದ ಈಶ್ವರನಾದರೂ, ಅನಶ್ನನ್ = ಜೀವನಿಂದ ತಿನ್ನಲ್ಪಡತಕ್ಕ (ಅನುಭವಿಸಲ್ಪಡತಕ್ಕ) ಕರ್ಮಫಲವನ್ನು, ತಿನ್ನದೇ, ಅನುಭವಿಸದೇ (ಜೀವನಿಂದ ತಿನ್ನಲ್ಪಡತಕ್ಕದ್ದನ್ನೂ ಮಾತ್ರ ತಾನು ಅನುಭವಿಸದೇ) ಅಭಿ = ಅಭಿತಃ = ಎಲ್ಲ ಕಡೆಯಿಂದಲೂ, ಎಲ್ಲ ರೀತಿಯಿಂದಲೂ, ಚಾಕಶೀತಿ = ಪ್ರಕಾಶಮಾನನಾಗಿದ್ದಾನೆ. ತನ್ನ ಇರುವಿಕೆಗಾಗಿ ಜೀವನಂತೆ ಕರ್ಮಫಲವನ್ನು ಅಪೇಕ್ಷಿಸುವುದಿಲ್ಲ.

ಇದರಿಂದ ಒಂದೇ ದೇಹದಲ್ಲಿ ಜೀವ ಮತ್ತು ಪರಮಾತ್ಮ ಇವರಿಬ್ಬರೂ ಇರುವವರಾದಾಗ್ಯೂ, ಜೀವನು ಮಾತ್ರ ಸುಖದುಃಖರೂಪವಾದ ಕರ್ಮಫಲ ಭಾಗಿಯಾಗಿದ್ದಾನೆ. ಪರಮಾತ್ಮನು ಜೀವನು ಭೋಗಿಸುವುದನ್ನು ಭೋಗಿಸುವುದಿಲ್ಲವೆಂದು ಹೇಳಿರುವುದರಿಂದ ಜೀವನಿಗೂ ಈಶನಿಗೂ ಅತ್ಯಂತ ಸ್ಪಷ್ಟವಾಗಿ ಭೇದವನ್ನೇ ಈ ಮಂತ್ರವು ಪ್ರತಿಪಾದಿಸುತ್ತಲಿದೆ. ಭಾಗವತ ವಾಕ್ಯವು ಇದೇ ವಿಚಾರವನ್ನು ಅತ್ಯಂತ ಸ್ಪಷ್ಟವಾಗಿ ತಿಳಿಸುತ್ತಲಿದೆ.

**"ಸುಪರ್ಣಾವೇತೌ ಸಯುಜೌ ಸಖಾಯೌ ಯದೃಚ್ಛಯಾ ಕೃತನೀಡೌ ಚ ವೃಕ್ಷೇ।**
**ಏಕಸ್ತಯೋಃ ಖಾದತಿ ಪಿಪ್ಪಲಾನ್ನಂ ಅನ್ಯೋ ನಿರನ್ನೋಽಪಿ ಬಲೇನ ಭೂಯಾನ್॥**
**ಆತ್ಮಾನಮನ್ಯಂ ಚ ಸ ವೇದ ವಿದ್ವಾನ್ ಅಪಿಪ್ಪಲಾದೋ ನ ತು ಪಿಪ್ಪಲಾದಃ**
**ಯೋಽವಿದ್ಯಯಾ ಅಂಧಃ ಸತುನಿತ್ಯಬದ್ಧೋ ವಿದ್ಯಾಮಯೋ ಯಃ ಸತು ನಿತ್ಯಮುಕ್ತಃ**
**(ಇತಿಭಾಗವತೇ)**

**ಅಭಿಪ್ರಾಯ** :- ಪರಮಾತ್ಮನ ಸಂಕಲ್ಪದಂತೆ ಒಂದು ವೃಕ್ಷದಲ್ಲಿ ಒಂದನ್ನೊಂದು ಬಿಡದಿರುವ ಎರಡು ಪಕ್ಷಿಗಳು (ಜೀವ ಮತ್ತು ಈಶ್ವರರು) ಪರಸ್ಪರ ಉಪಕಾರ್ಯ ಉಪಕಾರಕಭಾವವನ್ನುಳ್ಳವುಗಳು ಗೂಡು ಮಾಡಿಕೊಂಡು ಇರುತ್ತವೆ. ಈ ಎರಡರ ಪೈಕಿ ಒಂದು ತನ್ನ ಕರ್ಮದಿಂದುಂಟಾದ ಫಲವನ್ನು ಅನುಭವಿಸುತ್ತಲಿದೆ. ಮತ್ತೊಂದು ಜೀವನಂತೆ ತಿನ್ನದೇ ಇದ್ದರೂ ಬಲಿಷ್ಠವಾಗಿದೆ. ಅದರಲ್ಲಿ ಜ್ಞಾನಿಯಾದ ಈಶ್ವರನು ತನ್ನನ್ನೂ ಬೇರೆ ಎಲ್ಲವನ್ನು ತಿಳಿದಿರುತ್ತಾನೆ. ಕರ್ಮಫಲವನ್ನನುಭವಿಸುತ್ತಿರುವವನಾದ ಜೀವನಾದರೋ ಅಜ್ಞಾನದಿಂದ ಕುರುಡನಾಗಿರುತ್ತಾನೆ. ಅವಿದ್ಯಾದಿಬಂಧನದಿಂದ ಬದ್ಧನಾಗಿರುತ್ತಾನೆ. ಮತ್ತೊಬ್ಬನಾದ ಜ್ಞಾನಾನಂದಾತ್ಮಕನಾದ ಈಶ್ವರನಾದರೋ ನಿತ್ಯ ಮುಕ್ತನಾಗಿರುವನು. ಇದೇ ವಿಷಯವಾಗಿರುವ ಭೋಗನಿರ್ಣಯಗ್ರಂಥದ ವಚನಗಳೂ ಈ ರೀತಿ ಇವೆ.

**ಅನಶ್ನತ್ವಂ ಹರೇಃ ದುಃಖಾನಶ್ನತ್ವಾದುಚ್ಯತೇ ಸದಾ।**
**ವಿಷಯಾನ್, ವಿನಾಪಿ, ಪೂರ್ಣತ್ವಾತ್ ಸ್ವರೂಪಾನಂದಭೋಗಿನಃ॥**
**ಶುಭಮತ್ತ್ಯೇವ ಹಿ ಸದಾ ಸರ್ವಗತ್ವಾತ್ಕೃತಂ ವಿಭುಃ।**
**ಸ್ವಾದೋರದನವದ್ವೃತ್ತಿರೇವೋಽಸ್ವಾದ್ವಪಿಯತ್ತದಾ॥**
**ಅನಾರತಂ ಪಾರವಶ್ಯಾತ್ಸ್ವಾದ್ವತ್ತೀತಿ ತತಃ ಶ್ರುತಃ॥ ಇತಿಭೋಗನಿರ್ಣಯೇ॥**

**ಅಭಿಪ್ರಾಯ** :- ಅನಶ್ನನ್ ಎಂಬ ಶ್ರುತಿಯಲ್ಲಿ ಶ್ರೀಹರಿಗೆ ಹೇಳಿರುವ ಅನಶನವೆಂದರೆ ಸದಾ ದುಃಖದ ಭೋಗಾಭಾವರೂಪವಾದುದು. ವಿಷಯಗಳ ಭೋಗವಿಲ್ಲದಿದ್ದರೂ ಶ್ರೀ ವಿಷ್ಣುವು ಸದಾಪೂರ್ಣನೇ ಆಗಿದ್ದಾನೆ. ಸ್ವರೂಪಾನಂದಭೋಗವುಳ್ಳವನೇ ಆಗಿರುತ್ತಾನೆ. ಸದಾ ಶುಭವನ್ನೇ ಭೋಗಿಸುವವನಾಗಿರುತ್ತಾನೆ. ಸರ್ವತ್ರ ಇರುವವನಾಗಿ ಸುಕೃತ ಫಲಭೋಗವುಳ್ಳವನಾಗಿರುವನು. ಪಾದ್ಮವಚನವೂ ಈ ವಿಷಯವನ್ನು ವಿವರಿಸುತ್ತಲಿದೆ.

**"ಶುಭಂ ಪಿಬತ್ಯಸೌ ನಿತ್ಯಂ ನಾಶುಭಂ ಸ ಹರಿಃ ಕ್ವಚಿತ್।**
**ಪೂರ್ಣಾನಂದಮಯಸ್ಯಾಸ್ಯ ಚೇಷ್ಟಾನ ಜ್ಞಾಯತೇ ಕ್ವಚಿತ್॥ ಇತಿ ಪಾದ್ಮೇ"॥**

**ತಾತ್ಪರ್ಯ** :- ಸರ್ವಶರೀರಗತನಾದ ಮುಖ್ಯಪ್ರಾಣನಲ್ಲಿ ಸನ್ನಿಹಿತನಾಗಿರುವ, ಯಜ್ಞದಲ್ಲಿ ಹವಿಸ್ಸನ್ನು ಸ್ವೀಕರಿಸುವವನಾಗಿಯೂ, ಪಾಪಪರಿಹಾರಕನಾಗಿಯೂ ಇರುವ ಶ್ರೀಹರಿಯು ನಿತ್ಯವೂ ನಿಯಮೇನ ಶುಭ ಕರ್ಮಗಳ ಫಲವನ್ನು ಮಾತ್ರ ಅನುಭವಿಸುತ್ತಾನೆ. ಹರಿಯು ಅಶುಭ ಕರ್ಮಫಲವನ್ನು ಭೋಗಿಸುವುದಿಲ್ಲ.

"ಪುಣ್ಯಮೇವಾಮುಂ ಗಚ್ಛತಿ (ಬೃಹದಾರಣ್ಯಕ ೩-೫-೨೦) ಪಾಪಮೇ ಪಾರ್ಥೇ (ಇತಿಶ್ರುತಿ)

ಪೂರ್ಣಾನಂದಸ್ವರೂಪನಾದ ಈ ವಿಷ್ಣುವಿನ ಐಶ್ವರ್ಯವು ಯಾವೊಂದು ದೇಶದಲ್ಲಿಯೂ, ಯಾವೊಂದು ಕಾಲದಲ್ಲಿಯೂ ಹೀಗೆಯೇ ಎಂದು ಸಮಗ್ರವಾಗಿ ತಿಳಿದು ಬರುವುದಿಲ್ಲ. ಐಶ್ವರ್ಯ ಬಲದಿಂದ ಪೂರ್ಣಾನಂದನಾದರೂ ಅವನಿಗೆ ಸುಖಭೋಗವು ಯುಕ್ತವೇ ಆಗಿದೆ.

ಪರಮ ಭೋಗವೆಂಬ ಗ್ರಂಥದ ವಚನವೂ ಸಹ ಪರಮಾತ್ಮನ ಭೋಗದ ವಿಷಯವನ್ನು ಸ್ಪಷ್ಟಪಡಿಸುತ್ತಿದೆ.

**ಅಸ್ವಾದು ಸ್ವಾದುವದ್ಭುಂಕ್ತೇ ಜೀವೋ ಜನಾರ್ದನಃ ।**
**ಅತೋಽನಾಶ್ನೀತಿ ವಚನಂ ಅಶ್ನತೋಽಪಿ ಶುಭಂ ಸದಾ ॥ ಇತಿ ಪರಮಭೋಗೇ ॥**

**ಅಭಿಪ್ರಾಯ** :- ರುಚಿಕರವಲ್ಲದಿದ್ದರೂ ತಮಗೆ ಹಿತವಾದುದೆಂದೂ ರುಚಿಕರವಾದುದೆಂದೂ ಜೀವನು ಕರ್ಮ ಫಲವನ್ನು ತಿನ್ನುತ್ತಾನೆ. (ಭೋಗಿಸುತ್ತಾನೆ) ಪರಮಾತ್ಮನು ಶುಭಕರ್ಮಫಲವನ್ನು ಭೋಗಿಸುವವನಾದರೂ ಜೀವನಂತೆ ಭೋಗಿಸುವವನಲ್ಲವಾದುದರಿಂದ ''ಅನಶ್ನನ್'' ಎಂದು ವೇದವು ಹೇಳುತ್ತಲಿದೆ.

ಸ್ವಾಭಾವ್ಯವೆಂಬ ಪ್ರಮಾಣ ಗ್ರಂಥವೂ ಸಹ ಪರಮಾತ್ಮನ ಭೋಗ ವಿಷಯವನ್ನು ಹೇಳುತ್ತಲಿದೆ.

ಸ್ವಾಭಾವ್ಯವೆಂಬ ಪ್ರಮಾಣ ಗ್ರಂಥವೂ ಸಹ ಪರಮಾತ್ಮನ ಭೋಗ ವಿಷಯವನ್ನು ಹೇಳುತ್ತಲಿದೆ.

**ಸಾಶನಾನಶನತ್ವೇನ ನರದೇವೌ ಯಥೋದಿತೌ ।**
**ಅತ್ತಿಂ ವಿನಾಽಕ್ಷದೌರ್ಬಲ್ಯಾತ್ತಥಾನತ್ತಿರ್ಹರೇರ್ಭುಜಃ ॥ ಇತಿ ಸ್ವಾಭಾವ್ಯೇ ॥**

**ತಂತ್ರದೀಪಿಕಾ** :-

**''ಬ್ರಹ್ಮಶಬ್ದಃ ಗುಣಪೂರ್ತ್ಯರ್ಥಃ ಸನ್ ಚಿದಚಿದ್ವಿಲಕ್ಷಣವಿಷ್ಣುವಾಚೀ ।ಸ ವಿಷ್ಣುರಾಹ ಹಿ ।**
**ತಂ ಬ್ರಹ್ಮೇತ್ಯಾಚಕ್ಷತೇ'' ॥ ಇತ್ಯುಕ್ತೇಃ ॥**

ಈ ತಂತ್ರದೀಪಿಕಾವಾಕ್ಯವು ಸೂತ್ರಪ್ರಾಯವಾಗಿದೆ. ಇದಕ್ಕೆ ಹಿಂದೆಯೇ ಪ್ರತಿಪದಗಳ ಅರ್ಥವನ್ನೂ, ವಿಶೇಷಾರ್ಥ ವನ್ನೂ ಬರೆಯಲಾಗಿದೆ. ಈ ವಾಕ್ಯವು ಬ್ರಹ್ಮಸೂತ್ರಭಾಷ್ಯದಲ್ಲಿನ ''ಬ್ರಹ್ಮಶಬ್ದಶ್ಚ ವಿಷ್ಣಾವೇವ'' ಎಂಬ ವಾಕ್ಯದ ಅಭಿಪ್ರಾಯ ವನ್ನೂ ''ಬ್ರಹ್ಮಶಬ್ದೋಽಪಿ ಹಿ ಗುಣಪೂರ್ತಿಮೇವ ವದತ್ಯಯಂ। ಅತೋ ನಾರಾಯಣಸ್ಯೈವ ಜಿಜ್ಞಾಸಾತ್ರ ವಿಧೀಯತೇ'' ಎಂಬ ಅನುವ್ಯಾಖ್ಯಾನದ ವಾಕ್ಯಕ್ಕೆ ನ್ಯಾಯಸುಧಾಗ್ರಂಥದಲ್ಲೂ ತಾತ್ಪರ್ಯಚಂದ್ರಿಕಾದಲ್ಲೂ ನಿರ್ಣೀತವಾಗಿರುವ ಅರ್ಥವನ್ನೇ ಸಂಗ್ರಹವಾಗಿ ನಿರೂಪಿಸುತ್ತಲಿದೆ.

''ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ'' ಎಂಬ ಬ್ರಹ್ಮಮೀಮಾಂಸಾ ಶಾಸ್ತ್ರದ ಮೊದಲನೆಯ ಸೂತ್ರದಲ್ಲಿರುವ ಬ್ರಹ್ಮಶಬ್ದವು ವಿಷ್ಣುವೆಂಬುವುದಾಗಿ ದೈವೀಮೀಮಾಂಸಾಶಾಸ್ತ್ರದ ಅಂತಿಮಸೂತ್ರಗಳಲ್ಲಿ ''ಸ ವಿಷ್ಣುರಾಹಹಿ, ತಂ ಬ್ರಹ್ಮೇತ್ಯಾಚಕ್ಷತೇ'' ಎಂದು ಸೂತ್ರಕಾರರಾದ ಶ್ರೀ ವೇದವ್ಯಾಸರೇ ನಿರ್ಣಯಿಸಿರುತ್ತಾರೆ. ಇದನ್ನೇ ಸೂತ್ರಭಾಷ್ಯಕಾರರಾದ ಶ್ರೀಮದಾನಂದತೀರ್ಥಭಗವತ್ಪಾದರು ಸೂತ್ರಭಾಷ್ಯದಲ್ಲಿ ''ಬ್ರಹ್ಮಶಬ್ದಶ್ಚ ವಿಷ್ಣಾವೇವ'' ಎಂದು ಹೇಳಿ ಅದಕ್ಕೆ ಸಾಧಕಗಳಾದ ಅನೇಕ ಪ್ರಮಾಣವಾಕ್ಯಗಳನ್ನು ಉದಾಹರಿಸಿ ಸೂತ್ರಕಾರರಿಗೆ ಅತ್ಯಂತ ಸಮ್ಮತವಾದ ಅರ್ಥವನ್ನೇ ಸಮರ್ಥಿಸಿರುವರು.

ಈ ಸಂದರ್ಭದಲ್ಲಿ ಶ್ರೀಮದಾನಂದತೀರ್ಥ ಭಗವತ್ಪಾದರು

೧. ಮಹಾನಾರಾಯಣೋಪನಿಷತ್ತಿನ ವಾಕ್ಯಗಳನ್ನೂ
೨. ಭಾಲ್ಲವೇಯಶ್ರುತಿವಚನವನ್ನೂ
೩. ಋಕ್ಸಂಹಿತೆಯ ಹತ್ತನೇ ಮಂಡಲದ ಐದು ವಚನಗಳನ್ನೂ ಉದಾಹರಿಸಿರುವರು.
೪. ಮತ್ತು "ಅಜಸ್ಯ ನಾಭಾವಧ್ಯೇಕಮರ್ಪಿತಂ ಯಸ್ಮಿನ್ ವಿಶ್ವಾನಿ ಭುವನಾನಿ ತಸ್ಥುಃ"

ಎಂಬ ಋಕ್ಸಂಹಿತೆಗೆ ಸಾಕ್ಷಾತ್ತಾಗಿ ವ್ಯಾಖ್ಯಾನವಾಗಿರುವ, ಅದರ ಅರ್ಥವನ್ನೇ ಪ್ರತಿಪಾದಿಸುತ್ತಲಿರುವ ಸ್ಕಾಂದವಚನವನ್ನೂ ಉದಾಹರಿಸಿರುತ್ತಾರೆ.

ಆ ಸ್ಕಾಂದಪುರಾಣ ವಾಕ್ಯವು ಈ ಕೆಳಗೆ ಕಂಡಂತಿದೆ.

**ಅಜಸ್ಯ ನಾಭಾವಿತಿ ಯಸ್ಯ ನಾಭೇಃ ಅಭೂತ್ ಶ್ರುತೇಃ ಪುಷ್ಕರಂ ಲೋಕಸಾರಮ್ ।**
**ತಸ್ಮೈ ನಮೋ ವ್ಯಸ್ತಸಮಸ್ತ ವಿಶ್ವವಿಭೂತಯೇ ವಿಷ್ಣವೇ ಲೋಕಕರ್ತ್ರೇ ।।ಇತಿ ಚ ಸ್ಕಾಂದೇ ।।**

**ಅರ್ಥ ಮತ್ತು ತಾತ್ಪರ್ಯ** :- ಅಜಸ್ಯ ನಾಭಾವಿತಿಶ್ರುತೇಃ (ಸಕಾಶಾತ್) = ಅಜಸ್ಯ ನಾಭಾವಧ್ಯೇಕಮರ್ಪಿತಂ ಯಸ್ಮಿನ್ ವಿಶ್ವಾನಿ ಭುವನಾನಿ ತಸ್ಥುಃ ಎಂಬ ಶ್ರುತಿಯ ದೆಸೆಯಿಂದ, ಲೋಕಸಾರಂ = ಲೋಕಾಧಾರಭೂತವಾದ, ಪುಷ್ಕರಂ = ಪದ್ಮವು, ಅಭೂತ್ = ಉಂಟಾಯಿತು, (ಇತಿ ಜ್ಞಾಯತೇ = ಎಂದು ತಿಳಿದುಬರುತ್ತದೆ.)

ವಿಶ್ವಾಧಾರಭೂತವಾದ ಪರಮಾತ್ಮನ ನಾಭ್ಯರ್ಪಿತವಾದ ಒಂದಾದ ಪದ್ಮಕ್ಕಿಂತಲೂ ಬೇರೆಯಾದುದು ಯಾವುದೂ ಇರುವುದಿಲ್ಲ. ನಾಭಿಯಲ್ಲಿ ಪದ್ಮವನ್ನು ಉಳ್ಳವನು ಪ್ರಸಿದ್ಧನಾದ ಶ್ರೀಮನ್ನಾರಾಯಣನಿಗಿಂತಲೂ ಬೇರೆಯಾದವರು ಯಾರೂ ಪ್ರಸಿದ್ಧರೂ ಅಲ್ಲ. ಇತರರಿಗೆ ಅದು ಕೂಡುವುದೂ ಇಲ್ಲ. ಎಂದು ತಾತ್ಪರ್ಯ.

ವ್ಯಸ್ತಸಮಸ್ತವಿಶ್ವವಿಭೂತಯೇ = ವಿಶ್ವಸ್ಯ ಜಗತಃ ವಿಭೂತಯಃ ಸೃಷ್ಟ್ಯಾದ್ಯಷ್ಟಕಂ ಜೀವಾದೌ ವ್ಯಸ್ತಾಃ ವಿಸ್ತೃತಾಃ, ಜಡಾದೌ ಸಮಸ್ತಾಃ = ಸಂಕ್ಷಿಪ್ತಾಃ (ವಿಶ್ವವಿಭೂತಯಃ) ಯೇನ, ಅಸೌ ವ್ಯಸ್ತಸಮಸ್ತವಿಶ್ವವಿಭೂತಿಃ, ತಸ್ಮೈ, ಅಥವಾ ಸಮಸ್ತವಿಶ್ವವಿಭೂತಯೋ ಯೇನ ವ್ಯಸ್ತಾಃ ಸಃ = ವ್ಯಸ್ತಸಮಸ್ತವಿಶ್ವವಿಭೂತಿಃ, ಅಥವಾ ವ್ಯಸ್ತಾಃ ಸಮಸ್ತಾಶ್ಚ ವಿಶ್ವವಿಭೂತಯೋ ಯೇನ ಎಂಬ ವಿವರಣೆಯಂತೆ ಕೆಲವು ಕಡೆ ಜಡದಲ್ಲಿ ಸೃಷ್ಟ್ಯಾದಿ ನಾಲ್ಕನ್ನೂ, ಜೀವರಲ್ಲಿ ಸೃಷ್ಟಿ, ಸ್ಥಿತಿ, ಸಂಹಾರ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮೋಕ್ಷಗಳೆಂಬ ಎಂಟನ್ನೂ ಇಟ್ಟುಕೊಳ್ಳಬೇಕು. ಈ ರೀತಿಯಾಗಿ ಯಥಾಯೋಗ್ಯವಾಗಿ ಸೃಷ್ಟ್ಯಾದ್ಯಷ್ಟಕರ್ತನಾದ, ಲೋಕಕರ್ತ್ರೇ = ಜಗತ್ತಿಗೆ ಕರ್ತೃವಾದ, ತಸ್ಮೈ = ವೇದಾದಿಗಳಲ್ಲಿ ಸುಪ್ರಸಿದ್ಧನಾದ, ವಿಷ್ಣವೇ = ಶ್ರೀ ವಿಷ್ಣುವಿಗೆ, ನಮಃ = ನಮಸ್ಕಾರವು ಎಂದು ಸ್ಕಾಂದ ಪುರಾಣದ ವಚನದ ಅಭಿಪ್ರಾಯವಾಗಿದೆ.

ಅಸಾಧಾರಣವಾದ ಪದ್ಮನಾಭತ್ವಲಿಂಗವು ಶ್ರೀಹರಿಗೆ ಹೊರತಾಗಿ ಬೇರೆಲ್ಲೂ ಇಲ್ಲದಿರುವುದರಿಂದ ಪ್ರಕೃತದಲ್ಲಿ ಬ್ರಹ್ಮಶಬ್ದದಿಂದ ವಾಚ್ಯನಾದವನು ಜ್ಞಾನಾನಂದಾದಿಗುಣಪರಿಪೂರ್ಣನಾದ ಶ್ರೀಹರಿಯೇ ಎಂದು ನಿರ್ಣಯಿಸಲಾಗಿದೆ.

ಸೂತ್ರಭಾಷ್ಯಕಾರರು ಉದಾಹರಿಸಿರುವ ಮಹಾನಾರಾಯಣೋಪನಿಷತ್ತಿನ ವಾಕ್ಯವೂ ಸಹ ಚಿದಚಿದ್ವಿಲಕ್ಷಣನಾದ ಗುಣಪರಿಪೂರ್ಣನಾದ ಪರಬ್ರಹ್ಮನಾದ ಶ್ರೀಮನ್ನಾರಾಯಣನನ್ನೇ ಪ್ರತಿಪಾದಿಸುತ್ತಲಿದೆ.

ಬ್ರಹ್ಮ ಎಂಬ ಶಬ್ದವು "ಬ್ರಹ್ಮ, ಜಾತಿ, ಜೀವ, ಕಮಲಾಸನ, ಶಬ್ದರಾಶಿಯು" ಎಂಬ ಧಾತ್ವರ್ಥ ಬಲದಿಂದ ಕಮಲಾಸನಾದಿಗಳಲ್ಲಿ ರೂಢವಾಗಿರುವುದರಿಂದ ರೂಢಿಗೇ ಮುಖ್ಯತ್ವವಿರುವ ಪ್ರಯುಕ್ತ, ಕೇವಲ ಅವಯವಶಕ್ತಿರೂಪವಾದ ಯೋಗಕ್ಕಿಂತಲೂ, ರೂಢಿಗೇ ಪ್ರಾಬಲ್ಯವಿರುವ ಪ್ರಯುಕ್ತ "ಬ್ರಹ್ಮಶಬ್ದಶ್ಚ ವಿಷ್ಣಾವೇವ" ಎಂಬ ಭಾಷ್ಯಕಾರರು ಹೇಗೆ ಹೇಳಿದ್ದಾರೆಂಬ ಶಂಕೆಗೆ ಸಮಾಧಾನವನ್ನು ಶ್ರುತಿವಾಕ್ಯದಿಂದಲೇ ಭಾಷ್ಯಕಾರರು ತೋರಿಸಿ, ಅಜ್ಞಜನಶಂಕೆಯನ್ನು ಪರಿಹರಿಸಿರುವರು.

ಯದ್ಯಪಿ ಬ್ರಹ್ಮಶಬ್ದವೇನೋ ಅನ್ಯತ್ರ ರೂಢವಾಗಿದೆ. ಆದರೆ "ಯಮಂತಃ ಸಮುದ್ರೇ ಕವಯೋ ವಯಂತಿ, ತದಕ್ಷರೇ ಪರಮೇ ಪ್ರಜಾಃ" ಯತಃ ಪ್ರಸೂತಾ ಜಗತಃ ಪ್ರಸೂತೀ ತೋಯೇನ ಜೀವಾನ್ ವ್ಯಸಸರ್ಜ ಭೂಮ್ಯಾಮ್ ಇತ್ಯಾದಿಯಾಗಿ ಹೇಳಿ "ತದೇವರ್ತಂ ತದು ಸತ್ಯಮಾಹುಃ ತದೇವ ಬ್ರಹ್ಮ ಪರಮಂ ಕವೀನಾಮ್" ಎಂಬ ಮಹಾ ನಾರಾಯಣೋಪನಿಷತ್ತಿನಲ್ಲಿ "ಯತಃ ಕವೀನಾಂ ಮತೇ" "ತದೇವ ಪರಮಂ ಬ್ರಹ್ಮ" ಇತ್ಯಾಹುಃ ಎಂದು ಕವಿಗಳ ಮತದಲ್ಲಿ = ಅಂದರೆ ಜ್ಞಾನಿಗಳ ಅಭಿಪ್ರಾಯದಲ್ಲಿ ಪ್ರಯೋಗ ಪ್ರಾಚುರ್ಯವು ಬ್ರಹ್ಮಶಬ್ದಕ್ಕೆ ವಿಷ್ಣುವಿನಲ್ಲೇ ಇರುತ್ತದೆಯೆಂದು ಶ್ರುತಿಯೇ ಹೇಳುತ್ತಿದೆ. ಆದಕಾರಣ ಬ್ರಹ್ಮಶಬ್ದವು ವಿಷ್ಣುವಿನಲ್ಲೇ ಪರಮ ಮುಖ್ಯ ಎಂದು ತಾತ್ಪರ್ಯ.

ಅನ್ಯತ್ರ ಅಜ್ಞರೂಢಿ ಇದ್ದಾಗ್ಯೂ, ವಿದ್ವದ್ರೂಢಿಯು ವಿಷ್ಣುವಿನಲ್ಲಿರುವುದನ್ನು ಶ್ರುತಿಯು ಹೇಳುತ್ತಿರುವುದರಿಂದ, ಅಜ್ಞರೂಢಿಗಿಂತಲೂ ಪ್ರಾಜ್ಞರೂಢಿಗೆ ಪ್ರಾಬಲ್ಯವಿರುವ ಪ್ರಯುಕ್ತ ಬ್ರಹ್ಮಶಬ್ದಕ್ಕೆ ವಿಷ್ಣುವೆಂದೇ ಅರ್ಥ ಮಾಡಬೇಕೆಂಬ ಶ್ರುತಿಯ ಅಭಿಪ್ರಾಯದಂತೆ "ಬ್ರಹ್ಮಜಿಜ್ಞಾಸಾ" ಎಂದರೆ ವಿಷ್ಣುವಿನ ಜಿಜ್ಞಾಸಾ ಎಂದೇ ಸೂತ್ರದ ನಿರ್ಣೀತಾರ್ಥವಾಗಿದೆ.

ಶ್ರೀಹರಿಯ ಮಹಿಮೆಯನ್ನೂ, ಚೇತನ ಅಚೇತನಾತ್ಮಕವಾದ ಪ್ರಪಂಚಕ್ಕಿಂತಲೂ ಅತ್ಯಂತ ಭೇದವನ್ನೂ, ಶ್ರೀಹರಿಯ ಸ್ವಾತಂತ್ರ್ಯಾದಿ ಗುಣಾದಿಗಳನ್ನೂ ಪ್ರತಿಪಾದಿಸುತ್ತಲಿರುವ ಪರಮಶ್ರುತಿಯ ವಾಕ್ಯಗಳು ಈ ರೀತಿ ಇವೆ.

"ಬ್ರಹ್ಮಾ ಶಿವಃ ಸುರಾದ್ಯಾಶ್ಚ ಶರೀರಕ್ಷರಣಾತ್ ಕ್ಷರಾಃ ।
ಲಕ್ಷ್ಮೀರಕ್ಷರದೇಹತ್ವಾತ್ ಅಕ್ಷರಾ ತತ್ಪರೋ ಹರಿಃ ॥
ಸ್ವಾತಂತ್ರ್ಯಶಕ್ತಿವಿಜ್ಞಾನಸುಖಾದ್ಯೈರಖಿಲೈರ್ಗುಣೈಃ ।
ನಿಸ್ಸೀಮತ್ವೇನ ತೇ ಸರ್ವೇ ತದ್ವಶಾಃ ಸರ್ವದೈವ ಚ ॥
ಸರ್ಗಸ್ಥಿತಿಕ್ಷಯಯತಿಪ್ರಕಾಶಾವೃತಿಬಂಧನಮ್ ।
ಸರ್ವಕ್ಷರಾಣಾಮೇಕಃ ಸ ಕುರ್ಯಾತ್ ಸಾತ್ತ್ವಿಕಮೋಕ್ಷಣಮ್ ॥
ಸರ್ಗಸ್ಥಿತಿಯತಿಜ್ಯೋತಿರ್ನಿತ್ಯಾನಂದಪ್ರದೋಽಕ್ಷರೇ ।
ಚೇಷ್ಟಾಪ್ರದಶ್ಚ ಸರ್ವೇಷಾಂ ಏಕ ಏವ ಪರೋ ಹರಿಃ ॥
ತಸ್ಯ ನಾನ್ಯೋಽಸ್ತಿ ಸರ್ವಾವಿಶೇಷಾ ನಿರ್ದೋಷಶ್ಚ ಸಃ ॥ ಇತಿ ಪರಮಶ್ರುತಿಃ ॥

**ಅರ್ಥ ಮತ್ತು ತಾತ್ಪರ್ಯ** :- ಬ್ರಹ್ಮಾ = ಚತುರ್ಮುಖ ಬ್ರಹ್ಮದೇವರು, ಶಿವಃ = ಪಾರ್ವತೀದೇವಿಯ ಪತಿಯಾದ ರುದ್ರನು, ಸುರಾದ್ಯಾಶ್ಚ = ದೇವತೆಗಳೇ ಮೊದಲಾದ ಸಕಲ ದೇವರೂ ಕೂಡ, ಶರೀರಕ್ಷರಣಾತ್ = ಪ್ರಾಕೃತಗಳಾದ ಅವರವರ ದೇಹಗಳು ನಾಶವಾಗುವಿಕೆಯಿಂದ, ಅಂದರೆ ನಶ್ವರವಾದ ಶರೀರವುಳ್ಳವರಾದುದರಿಂದ, ಕ್ಷರಾಃ = ಕ್ಷರರೆಂದು (ಅಂದರೆ ಕ್ಷರಚೇತನರೆಂದು) ಪ್ರಮಾಣಗಳಿಂದ ತಿಳಿಯಲ್ಪಡುತ್ತಾರೆ. ಲಕ್ಷ್ಮೀಃ = ಲಕ್ಷ್ಮೀದೇವಿಯು, (ಪರಮಾತ್ಮನಂತೆ ನಿತ್ಯಮುಕ್ತಳಾದ ರಮಾದೇವಿಯು) ಅಕ್ಷರದೇಹತ್ವಾತ್ = ನಾಶವಿಲ್ಲದ ದೇಹವನ್ನುಳ್ಳವಳಾದುದರಿಂದ, ಅಕ್ಷರಾ = ಅಕ್ಷರಚೇತನಳು (ಎಂದು ಹೇಳಲ್ಪಡುತ್ತಾಳೆ.)

ಹರಿಃ = ಶ್ರೀಮನ್ನಾರಾಯಣನು, ಸ್ವಾತಂತ್ರ್ಯ, ಶಕ್ತಿ, ವಿಜ್ಞಾನ, ಸುಖಾದ್ಯೈಃ, ಸ್ವಾತಂತ್ರ್ಯ = ಸ್ವರೂಪ ಸತ್ತಾ, ಪ್ರಮಿತಿಸತ್ತಾ, ಪ್ರವೃತ್ತಿಸತ್ತಾ ಎಂಬ ಸತ್ತಾತ್ರೈವಿಧ್ಯದಲ್ಲಿ ಮತ್ತು ಶಕ್ತಿ = ಅಚಿಂತ್ಯಾದ್ಭುತಶಕ್ತಿ, ವಿಜ್ಞಾನ = ವಿಶೇಷಾಕಾರವಾದ ಜ್ಞಾನ, ಸುಖ = ನಿರವಧಿಕವಾದ, ಪರಿಪೂರ್ಣವಾದ ಆನಂದ, ಆದ್ಯೈಃ = ಇವೇ ಮೊದಲಾದ, ದ್ಯುತಿ, ಬಲ, ವೀರ್ಯ, ಔದಾರ್ಯ, ಕಾರುಣ್ಯವೇ ಮೊದಲಾದ, ಅಖಿಲೈಃ = ಸಮಸ್ತಗಳಾದ, ಗುಣೈಃ = ಗುಣಗಳಿಂದ, ನಿಃಸೀಮತ್ವೇನ = ಪರಿಮಿತಿರಹಿತವಾಗಿರುವಿಕೆಯಿಂದ, (ನಿರವಧಿಗಳಾದ ಗುಣಗಳು ಇರುವುದರಿಂದ) ತತ್ಪರಃ = (ನಿರವಧಿಗಳಾದ ಗುಣಗಳು ಇರುವುದರಿಂದ) ತತ್ಪರಃ = ಹಿಂದೆ ತಿಳಿಸಿದ ಕ್ಷರಚೇತನರಿಗಿಂತಲೂ, ಅಕ್ಷರಚೇತನಗಳಾದ ಜಗಜ್ಜನನಿಯಾದ ರಮಾದೇವಿಗಿಂತಲೂ, ಉತ್ತಮನು. ಅಂದರೆ ಸರ್ವೋತ್ತಮನಾಗಿದ್ದಾನೆ. ತೇ ಸರ್ವೇ = ಆ ರಮಾದಿದೇವತೆಗಳೆಲ್ಲರೂ, ಸರ್ವದೈವ ಚ = ಯಾವಾಗಲೂ, (ನಿರಂತರದಲ್ಲೂ) ನಿತ್ಯಮುಕ್ತಳಾದ ರಮಾದೇವಿಯೂ ಸರ್ವೋತ್ತಮನಾದ ಶ್ರೀಹರಿಗೆ ಅಧೀನರಾಗಿರುವರು.

ಸಃ ಏಕಃ = ಸಃ = ಆ, ಏಕಃ = ಒಬ್ಬ ಶ್ರೀಮನ್ನಾರಾಯಣನೇ, ಸರ್ವಕ್ಷರಾಣಾಂ = ಎಲ್ಲಾ ಕ್ಷರಚೇತನರಿಗೆ, ಸರ್ಗ, ಸ್ಥಿತಿ, ಕ್ಷಯ, ಯತಿ, ಪ್ರಕಾಶ, ಆವೃತಿ, ಬಂಧನಂ = ಸರ್ಗ = ಸೃಷ್ಟಿಯೇನು, ದೇಹದ ಜನನವೇನು, ಸ್ಥಿತಿ = ದೇಹದಿಂದ ಇರುವಿಕೆಯೇನು, ಕ್ಷಯ = ಮರಣವೇನು (ದೇಹದ ನಾಶವೇನು) ಯತಿ = ನಿಯಮನವೇನು, (ವಿಧಿನಿಷೇಧಗಳಿಂದ ನಿಯಂತ್ರಿಸುವಿಕೆಯೇನು) ಪ್ರಕಾಶ = ಜ್ಞಾನವನ್ನು ಹುಟ್ಟಿಸುವಿಕೆಯೇನು (ಜ್ಞಾನವೇನು) ಆವೃತಿ = ಅಜ್ಞಾನವೇನು (ಅನಾದಿಯಾದ ಭಾವರೂಪವಾದ ಅವಿದ್ಯೆಯು ಸಹ ಪರಮಾತ್ಮನ ಅಧೀನ) ಬಂಧನಂ = ಲಿಂಗದೇಹಾದಿ ಬಂಧವೇನು ಇವೆಲ್ಲವುಗಳನ್ನೂ, ಕುರ್ಯಾತ್ = ಮಾಡುವನು, (ಅನಾದಿಯಾದ ಬಂಧವೂ ಅವನ ಅಧೀನವಾಗಿದೆ ಎಂದು ಅಭಿಪ್ರಾಯ) ಸಾತ್ವಿಕಮೋಕ್ಷಣಂ = ಮುಕ್ತಿಯೋಗ್ಯರಾದ ಸಾತ್ವಿಕಚೇತನರಿಗೆ ಮಾತ್ರ ಸಕಲಾನಿಷ್ಟನಿವೃತ್ತಿ ಪೂರ್ವಕವಾದ, ಸ್ವರೂಪಾನಂದಾಭಿವ್ಯಕ್ತಿರೂಪವಾದ ಮೋಕ್ಷವನ್ನು, ಕುರ್ಯಾತ್ = ಮಾಡುವನು. (ಇದೇ ರೀತಿ ಮಧ್ಯಮಜೀವರಿಗೆ ನಿತ್ಯಸಂಸಾರಿಗಳಿಗೆ ಸುಖದುಃಖ ಮಿಶ್ರವಾದ ಗತಿಯನ್ನೂ), ತಾಮಸಜೀವರಿಗೆ ಅಂದರೆ ದೈತ್ಯ, ರಾಕ್ಷಸ, ಪಿಶಾಚ, ಮರ್ತ್ಯಾಧಮರೆಂಬ ನಾಲ್ಕು ದರ್ಜೆಗೆ ಸೇರಿದ ತಮೋಯೋಗ್ಯಚೇತನರಿಗೆ ನಿತ್ಯ ನರಕದ ಪ್ರಾಪ್ತಿಯನ್ನೂ ಮಾಡುತ್ತಾನೆ.

ಅಕ್ಷರೇ = ಮಧ್ವಮಾಕ್ಷರಳು ಎನಿಸಿದ ಶ್ರೀ ಮಹಾಲಕ್ಷ್ಮೀದೇವಿಗೆ ಸರ್ಗಸ್ಥಿತಿ, ಜ್ಯೋತಿ, ನಿತ್ಯನಂದಪ್ರದಃ = ಸರ್ಗ = ಪ್ರಾದುರ್ಭಾವ, (ಸೃಷ್ಟಿ ಮಾಡಬೇಕೆಂಬ ಇಚ್ಛೆಯ ಅಭಿವ್ಯಕ್ತಿಯೇನು) ಸ್ಥಿತಿ = ಸರ್ವದಾ ಮರಣಾದಿಗಳಿಲ್ಲದಿರುವಿಕೆಯೇನು, ನಿ ಯತಿ = ಅವನಿಗೆ ಅನುಸಾರವಾಗಿ ಇರುವಿಕೆಯು, ಜ್ಯೋತಿಃ = ಮೂರೂಕಾಲಗಳಲ್ಲೂ ಆಲೋಚನೆ ಇಲ್ಲದೆ ಜಗತ್ತಿನ ವಿಷಯಕವಾದ ಸರ್ವವಸ್ತುಗಳ ಸಾಕ್ಷಾತ್ಕಾರವೇನು, ನಿತ್ಯನಂದ = ನಿತ್ಯವಾದ ಆನಂದ ಇವುಗಳನ್ನು, ಪ್ರದಃ = ಕೊಡುವವನಾಗಿರುತ್ತಾನೆ.

ಸರ್ವೇಷಾಂ = ಎಲ್ಲಾ ಚೇತನರಿಗೂ, ಮುಕ್ತವರ್ಗಕ್ಕೂ, ನಿತ್ಯಮುಕ್ತಳಾದ ರಮಾದೇವಿಗೂ, ಅಮುಕ್ತ ಸಕಲದೇವರಿಗೂ, ಚೇಷ್ಟಾಪ್ರದಶ್ಚ = ಚೇಷ್ಟೆಯನ್ನು ಕೊಡತಕ್ಕವನೂ ಸಹ (ಆಗಿರುವ), ಪರಃ = ಸರ್ವೋತ್ತಮನಾದ, ಹರಿಃ = ಶ್ರೀಮನ್ನಾರಾಯಣನು, ಏಕ ಏವ = ಒಬ್ಬನೇ ಆಗಿರುತ್ತಾನೆ. ತಸ್ಯ = ಆ ಶ್ರೀಮನ್ನಾರಾಯಣನಿಗೆ, ಅನ್ಯಃ = ಬೇರೆ ಯಾವನೊಬ್ಬನೂ, ಸರ್ಗವಿಧಾನೇ = ಸೃಷ್ಟಿ ಮೊದಲಾದವುಗಳನ್ನು ಮಾಡತಕ್ಕವನು, ನಾಸ್ತಿ = ಇಲ್ಲ. ಸಃ = ಅಂಥಹ ಶ್ರೀಹರಿಯು, ನಿರ್ದೋಷಶ್ಚ = ದೋಷಲೇಶರಹಿತನೂ ಸಹ ಆಗಿರುತ್ತಾನೆ.

(ಪರಮಾತ್ಮನ ಹೊರತಾಗಿ ಇತರ ಸಕಲಚೇತನರೂ ದೋಷವುಳ್ಳವರಾಗಿರುತ್ತಾರೆ ನಿತ್ಯಮುಕ್ತಳಾದ ರಮಾದೇವಿಗೂ ಸಹ ಇತರ ಚೇತನರಂತೆ ಅವಿದ್ಯಾದಿದೋಷಗಳಿಲ್ಲವಾದಾಗ್ಯೂ, ಪಾರತಂತ್ರ್ಯವೆಂಬ ದೋಷವು ಇದೆ.

"ಸರ್ವತಂತ್ರಸ್ವತಂತ್ರನಾದವನು ಸರ್ವೋತ್ತಮನಾದ ಶ್ರೀಹರಿಯು ಒಬ್ಬನೇ ಹೊರತು ಬೇರೊಬ್ಬರು ಇರುವುದಿಲ್ಲ. ಇತಿ = ಈ ರೀತಿಯಾಗಿ ಪ್ರತಿಪಾದಿಸುವ (ತಿಳಿಸುವ) ಪರಮಶ್ರುತಿಃ = ಪರಮಶ್ರುತಿ ಎಂಬ ವೇದವಾಕ್ಯವು ಇದೆ. ಪರಮಶ್ರುತಿ ವಾಕ್ಯಗಳ ತಾತ್ಪರ್ಯವು ಈ ರೀತಿ ಇದೆ.

**ತಾತ್ಪರ್ಯ** :- ಸರ್ವೋತ್ತಮನಾದ ಶ್ರೀಮನ್ನಾರಾಯಣನು ಮತ್ತು ಶ್ರೀಮನ್ನಾರಾಯಣನಂತೆಯೇ ನಿತ್ಯಮುಕ್ತಳಾದ ಶ್ರೀ ಮಹಾಲಕ್ಷ್ಮೀದೇವಿಯು ಈ ಇಬ್ಬರನ್ನು ಬಿಟ್ಟರೆ ಮಿಕ್ಕ ದೇವತೆಗಳಾದ, ಚತುರ್ಮುಖಬ್ರಹ್ಮ, ಶಿವ, ಇಂದ್ರ ಮೊದಲಾದ ಎಲ್ಲಾ ದೇವತೆಗಳೂ ಸಹ ಪ್ರಾಕೃತವಾದ ನಶ್ವರವಾದ ಶರೀರವುಳ್ಳವರಾಗಿದ್ದಾರೆ. ಆದಕಾರಣ ಇವರೆಲ್ಲರೂ ಕ್ಷರಚೇತನರೆಂದು ಪ್ರಮಾಣವು ತಿಳಿಸುತ್ತಲಿದೆ. ಅಸ್ವತಂತ್ರವರ್ಗದಲ್ಲಿ ರಮಾದೇವಿಗೆ ಮಾತ್ರ ನಶ್ವರವಾದ ದೇಹವಿಲ್ಲವಾದಕಾರಣ, ಅಕ್ಷರಚೇತನಳೆಂದು ಶ್ರುತಿಯು ಹೇಳುತ್ತಲಿದೆ. ಇವರಿಬ್ಬರಿಗಿಂತಲೂ ಉತ್ತಮನಾದವನು ಸ್ವತಂತ್ರನಾದ ಶ್ರೀಹರಿಯು.

ಪರಮಾತ್ಮನಾದ ಶ್ರೀಹರಿಯಾದರೋ ಸರ್ವತಂತ್ರಸ್ವತಂತ್ರನಾಗಿದ್ದಾನೆ. ಅಚಿಂತ್ಯಾದ್ಭುತಶಕ್ತಿಸಂಪನ್ನನಾಗಿರುವನು. ನಿತ್ಯನಿರವಧಿಕವಾದ ಪೂರ್ಣವಾದ ಜ್ಞಾನಾನಂದಸ್ವರೂಪನು. ಇತರರೆಲ್ಲರೂ ಆ ಶ್ರೀಹರಿಯ ಅಧೀನರಾಗಿರುವರು. ಎಲ್ಲ ಪದಾರ್ಥಗಳ ಸೃಷ್ಟ್ಯಾದಿಗಳಿಗೆ ಅಂದರೆ ಸೃಷ್ಟಿ, ಸ್ಥಿತಿ, ಸಂಹಾರ, ನಿಯಮನವೆಂಬ ಈ ನಾಲ್ಕು ಅವಸ್ಥೆಗಳಿಗೂ ಪರಮಾತ್ಮನೇ ಕಾರಣನು.

ಜೀವನ ಜನ್ಮಾದ್ಯಷ್ಟಕಗಳಿಗೂ ಕಾರಣನಾದವನೂ ಸಹ ಶ್ರೀಹರಿಯೇ ಹೊರತು ಇತರರು ಯಾರೂ ಅಲ್ಲ. ಈ ಎಂಟರ ಪೈಕಿ ಸಾತ್ವಿಕಜೀವರಿಗೆ ಮಾತ್ರ ಪರಮಾತ್ಮನು ನಿತ್ಯಸುಖರೂಪವಾದ ಮೋಕ್ಷವನ್ನು ಕರುಣಿಸುತ್ತಾನೆ.

ನಿತ್ಯಮುಕ್ತಳಾದ ಅಕ್ಷರಚೇತನಳಾದ ರಮಾದೇವಿಯ ಪಾರಿಭಾಷಿಕವಾದ ಸೃಷ್ಟಿ, ಸ್ಥಿತಿ, ನಿಯಮನ, ಪ್ರಕಾಶ, ನಿತ್ಯಾನಂದಾದಿಗಳಿಗೆ ನಿಯಾಮಕನಾದವನೂ ಸಹ ಶ್ರೀಹರಿಯೇ ಆಗಿದ್ದಾನೆ. ಸಕಲಚೇತನರ ಚೇಷ್ಟಾಪ್ರದನೂ ಕೂಡ ಶ್ರೀ ವಿಷ್ಣುವೇ ಆಗಿರುವನು. ಅವನಿಗೆ (ಶ್ರೀಹರಿಗೆ) ನಿಯಾಮಕರಾದವರು ಬೇರೊಬ್ಬರು ಯಾರೂ ಹಿಂದೆಯೂ ಇರಲಿಲ್ಲ. ಈಗಲೂ ಇಲ್ಲ ಮುಂದೆಯೂ ಇಲ್ಲ. ಇಂತಹ ಚಿದಚಿದ್ವಿಲಕ್ಷಣನಾದ ಶ್ರೀ ವಿಷ್ಣುವು ದೋಷಲೇಶರಹಿತನಾಗಿರುವುದರಿಂದ ಅವನನ್ನು ಸರ್ವೋತ್ತಮನೆಂದು ವೇದಾದಿಪ್ರಮಾಣಗಳು ಪ್ರತಿಪಾದಿಸುತ್ತಲಿದೆ. ಎಂದು ಪರಮಶ್ರುತಿ ವಾಕ್ಯಗಳ ಅಭಿಪ್ರಾಯವಾಗಿದೆ.

ಇದೇ ಅಭಿಪ್ರಾಯವನ್ನು ಸ್ಕಾಂದಪುರಾಣವಾಕ್ಯವೂ ಸಹ ವ್ಯಕ್ತಪಡಿಸುತ್ತಲಿದೆ.

**ಬ್ರಹ್ಮ, ಶೇಷ, ಸುಪರ್ಣೇಶ, ಶಕ್ರ, ಸೂರ್ಯ, ಗುಹಾದಯಃ ।**
**ಸರ್ವೇ ಕ್ಷರಾ, ಅಕ್ಷರಾತು ಶ್ರೀರೇಕಾ ತತ್ಪರೋ ಹರಿಃ ॥ (ಇತಿ ಸ್ಕಾಂದೇ)**

**ಅರ್ಥ** :- ಬ್ರಹ್ಮ = ಚತುರ್ಮುಖ ಬ್ರಹ್ಮನೂ, ಶೇಷ = ಶೇಷನೂ, ಸುಪರ್ಣ = ಗರುಡನೂ, ಈಶ = ರುದ್ರನೂ, ಶಕ್ರ = ಇಂದ್ರನೂ, ಸೂರ್ಯ = ಸೂರ್ಯನೂ, ಗುಹ = ಷಣ್ಮುಖನೂ, ಆದಯಃ = ಇವರೇ ಮೊದಲಾದ, ಸರ್ವೇ = ಎಲ್ಲ ಚೇತನರೂ, ಕ್ಷರಾಃ = ಕ್ಷರಚೇತನರೆನಿಸಿದ್ದಾರೆ. ಶರೀರ ನಾಶವುಳ್ಳವರಾಗಿರುತ್ತಾರೆ. ಏಕಾ

ಶ್ರೀಸ್ತು = ಶ್ರೀಮಹಾಲಕ್ಷ್ಮೀದೇವಿಯೊಬ್ಬಳೇನೇ, ಅಕ್ಷರಾ = ಅಕ್ಷರಶಬ್ದವಾಚ್ಯಳು ಅಸ್ವತಂತ್ರ ಚೇತನ ವರ್ಗದಲ್ಲಿ ದೇಹನಾಶವಿಲ್ಲದಿರುವ ಚೇತನಳು, ಹರಿಃ = ಶ್ರೀಮನ್ನಾರಾಯಣನು, ತತ್ಪರಃ = ಕ್ಷರ ಮತ್ತು ಅಕ್ಷರಚೇತನರಿಗಿಂತಲೂ ಉತ್ತಮನು (ಸರ್ವೋತ್ತಮನು) ಇತಿ = ಹೀಗೆ, ಸ್ಕಾಂದೇ = ಸ್ಕಾಂದಪುರಾಣದಲ್ಲಿ ಉಕ್ತವಾಗಿದೆ.

ಸಾಕ್ಷಾತ್ ಮಹಾಲಕ್ಷ್ಮೀದೇವಿಯೇ ಶ್ರೀಹರಿಯ ಸರ್ವೋತ್ತಮತ್ವವನ್ನು ಪ್ರಶಂಸೆ ಮಾಡಿದ್ದಾಳೆ.

**ಯಂ ಕಾಮಯೇ ತಂ ತಂ ಉಗ್ರಂ ಕೃಣೋಮಿ ತಂ ಬ್ರಹ್ಮಾಣಂ,**
**ತಮೃಷಿಂ ತಂ ಸುಮೇಧಾಂ**
**ಅಹಂ ರುದ್ರಾಯ ಧನುರಾತನೋಮಿ ಬ್ರಹ್ಮದ್ವಿಷೇ ಶರವೇ ಹಂತವಾ ಉ।**
**ಅಹಂ ಜನಾಯ ಸಮದಂ ಕೃಣೋಮ್ಯಹಂ ದ್ಯಾವಾ ಪೃಥಿವೀ ಆವಿವೇಶ।**
**ಅಹಂ ಸುವೇ ಪಿತರಮಸ್ಯ ಮೂರ್ಧನ್ಮಮ ಯೋನಿರಪ್ಸ್ವಂತಸ್ಸಮುದ್ರೇ॥**
**(ಋಗ್ವೇದ. ಮಂ. ೧೦.೧೨೫, ಋ. ೬.)**

**ಅರ್ಥ** :- ಋಗ್ವೇದದಲ್ಲಿನ ಈ ಸೂಕ್ತವು ಅಂಭೃಣೀ ವಾಕ್ಯವಾಗಿದೆ. "ಅಂಭೃಣೀಯಾದರೋ, ಶ್ರೀಃ, ಭೂಃ, ದುರ್ಗಾಂಭೃಣೀ ಹ್ರೀಶ್ಚ ಮಹಾಲಕ್ಷ್ಮೀಶ್ಚ ದಕ್ಷಿಣಾ " ಎಂಬ ಬೃಹದಾರಣ್ಯಕಭಾಷ್ಯದಲ್ಲಿ ಉಕ್ತವಾಗಿರುವ ಶ್ರುತಿಯಂತೆ ಶ್ರೀಮಹಾಲಕ್ಷ್ಮೀ ಮೂರ್ತಿಯೇ ಆಗಿರುವ ಪ್ರಯುಕ್ತ, ಈ ಮಂತ್ರದಲ್ಲಿ ಕಂಡುಬರುವ "ಅಹಂ" ಎಂದು ಶ್ರೀ ಮಹಾ ಲಕ್ಷ್ಮೀಯೇ ತನ್ನನ್ನು ಹೇಳಿಕೊಂಡಿರುವ ಪ್ರಯುಕ್ತ ಇದು ಸಾಕ್ಷಾತ್ತಾಗಿ ಶ್ರೀಮಹಾಲಕ್ಷ್ಮೀಯ ಮಾತಾಗಿದೆ.

**ಅರ್ಥ ವಿವರಣೆ** :- ಅಹಂ = ನಾನು (ಶ್ರೀಮಹಾಲಕ್ಷ್ಮೀಯಾದ ನಾನು). ಯಂ = ಯಾರನ್ನು (ರುದ್ರ ಪದವಿಗೆ ಬರುವಂತಹ ಗಣಕ್ಕೆ ಸೇರಿದ ಸಾಧನಪೂರ್ತಿಯಾಗಿರುವ ಉಗ್ರತಪನೆಂಬ ಯಾವ ಯಾವ ಜೀವವನ್ನು), ಉಗ್ರಂ (ರುದ್ರಂ) ಕಾಮಯೇ = ರುದ್ರನನ್ನಾಗಿ ಮಾಡಲಿಕ್ಕೆ ಅಪೇಕ್ಷಿಸುತ್ತೇನೆಯೋ, ತಂ ತಂ ಉಗ್ರಂ ಕೃಣೋಮಿ = ಅವರವರನ್ನು ಅಂತಹ ಜೀವರನ್ನು ರುದ್ರರನ್ನಾಗಿ ಮಾಡುತ್ತೇನೆ. (ಇದೇ ರೀತಿ ತನ್ನ ಇಚ್ಛಾನುಗುಣವಾಗಿ ಯಂಬ್ರಹ್ಮಾಣಂ ಕಾಮಯೇ = ಚತುರ್ಮುಖಬ್ರಹ್ಮಪದವಿಗೆ ಬರಲು ಅರ್ಹತೆಯುಳ್ಳ, ಸಾಧನಸಂಪೂರ್ತಿಯಾಗಿರುವ ಯಾವ ಋಜುವರೇಣ್ಯನನ್ನು ) ಚತುರ್ಮುಖ ಪದವಿಗೆ ಬರುವ ಬ್ರಹ್ಮನನ್ನಾಗಿ ಮಾಡಲು ಅಪೇಕ್ಷಿಸುತ್ತೇನೆಯೋ, ತಂ ಬ್ರಹ್ಮಾಣಂ = ಅವನನ್ನು ಚತುರ್ಮುಖಬ್ರಹ್ಮನನ್ನಾಗಿಯೂ, (ಮಾಡುತ್ತೇನೆ.) ಹೀಗೆಯೇ "ಯಂ ಋಷಿಂ ಕಾಮಯೇ" ಯಾವ ಯೋಗ್ಯಚೇತನನು ಋಷಿ ಪದವಿಗೆ ಬರಲು ತಕ್ಕ ಸಾಧನವನ್ನು ಪೂರ್ತಿಗೊಳಿಸಿರುವನೋ ಅವನು ಋಷಿ ಪದವಿಗೆ ಬರಬೇಕೆಂದು ಇಚ್ಛಿಸುತ್ತೇನೆಯೋ, ತಂ ಋಷಿಂ = ಅವನನ್ನು ಋಷಿಯನ್ನಾಗಿ(ಕೃಣೋಮಿ = ಮಾಡುತ್ತೇನೆ.)

ಇದೇ ರೀತಿ ಯಾರು ಒಳ್ಳೆ ಜ್ಞಾನಿಯಾಗುವ ಯೋಗ್ಯತೆಯುಳ್ಳ ಚೇತನನು ತಕ್ಕ ಸಾಧನ ಪೂರ್ತಿಗೊಳಿಸಿರುವನೋ, ಅಂತಹವನನ್ನು ನಾನು ಜ್ಞಾನಿಯನ್ನಾಗಿ ಮಾಡಲು ಅಪೇಕ್ಷಿಸುವನೋ, ತಂ ಸುಮೇಧಾಂ = ಅವನನ್ನು ಒಳ್ಳೆ ಜ್ಞಾನಿಯನ್ನಾಗಿ ಕೃಣೋಮಿ = ಮಾಡುತ್ತೇನೆ.

ಅಹಂ = ನಾನು, ಶರವೇ = (ಬ್ರಹ್ಮನ ಐದನೇ ಮುಖವನ್ನು ಛೇದಿಸುವದರಿಂದ) ಹಿಂಸಕನಾದ, ಬ್ರಹ್ಮದ್ವಿಷೇ = (ಚತುರ್ಮುಖದ್ವೇಷಿಯಾದ) ಸಂಹಾರ ಕಾಲದಲ್ಲಿ ಬ್ರಹ್ಮಾದಿ ಸರ್ವಪ್ರಾಣಿದ್ವೇಷಿಯಾದ(ಪ್ರಮೇಯದೀಪಿಕಾ)

ಸುಧಾರೀತ್ಯಾ = ಬ್ರಹ್ಮದ್ವಿಷಾಂ, ದೈತ್ಯಾನಾಂ, ಶರವೇ ಹಿಂಸಾಯೇತಿವಾ = ಬ್ರಹ್ಮದ್ವೇಷಿಗಳಾದ ದೈತ್ಯರನ್ನು ಹಿಂಸಿಸುವಂತಹ, ಚಂದ್ರಿಕಾರೀತ್ಯಾ = ದಕ್ಷ ಪ್ರಜಾಪತಿದ್ವೇಷಿಯಾದ, ರುದ್ರಾಯ = ರುದ್ರನನ್ನು(ದ್ವಿತೀಯಾರ್ಥೇ ಚತುರ್ಥಿ) ಹಂತವಾಉ = ಪ್ರಳಯಕಾಲದಲ್ಲಿ ದುರ್ಗಾರೂಪದಿಂದ ಕೊಲ್ಲುವದಕ್ಕಾಗಯೇ (ಕೇವಲ ಹೆದರಿಸುವದಕ್ಕಲ್ಲ ) ಧನುಃ = ಧನುಸ್ಸನ್ನು, ಆತನೋಮಿ = ವಿಸ್ತಾರಗೊಳಿಸುತ್ತೇನೆ.

ಅಹಂ = ನಾನು, ಜನಾಯ = ಜನರಿಗೆ, ಸಮದಂ = ಸಂತೋಷವನ್ನು, ಕೃಣೋಮಿ = ಉಂಟು ಮಾಡುತ್ತೇನೆ.

(ಶ್ರೀ ಮಹಾಲಕ್ಷ್ಮೀಯ ಪರಮಾನುಗ್ರಹವಾದರೆ ದಿವ್ಯಸಂಪತ್ತು ಲಭಿಸಿದರೆ ಯಾರಿಗೆ ತಾನೇ ಹರ್ಷವಾಗುವದಿಲ್ಲಾ.)

ಅಹಂ = ನಾನು (ಶ್ರೀ ಮಹಾಲಕ್ಷ್ಮೀಯಾದ ನಾನು) ದ್ಯಾವಾಪೃಥಿವೀ = ಸ್ವರ್ಗಲೋಕವೇನು, ಭೂಲೋಕವೇನು, ಈ ರೀತಿ ಇರುವ ಎಲ್ಲಾ ಮೇಲಿನ ಮಧ್ಯದ ಅಧೋಭಾಗದಲ್ಲಿನ ಎಲ್ಲಾ ಲೋಕಗಳನ್ನೂ ಧರಿಸುವದಕ್ಕಾಗಿ, ಆವಿವೇಶ ಪ್ರವೇಶ ಮಾಡಿದ್ದೇನೆ.(ಛಂದಸಿಪರೋಕ್ಷೇಲಿಟ್).

ಅಹಂ ನಾನು, ಅಸ್ಯ = ಈ ಜಗತ್ತಿಗೆ, ಪಿತರಂ = ಪಾಲಕನಾಗಿರುವ ಚತುರ್ಮುಖ ಬ್ರಹ್ಮನನ್ನು, ಮೂರ್ಧನ್ =ಮೂರ್ಧನಿ = ಸರ್ವಜೀವೋತ್ಕೃಷ್ಟತೆಯಿಂದ ಜೀವೋತ್ತಮತನದಿಂದ ; ಸುವೇ = ಹುಟ್ಟಿಸುತ್ತೇನೆ. (ಕೇವಲ ಪದವೀದಾನವಲ್ಲ. ಅವನಿಗೆ ಜನನಿಯೂ ಆಗಿರುತ್ತಾನೆ.) (ಇಂತಹ ಮಹಿಮಾತಿಶಯವನ್ನುಳ್ಳವಳಾದ), ಮಮ = ನನಗೆ, ಯೋನಿಃ = ಕಾರಣಭೂತನಾದವನು, ಸಮುದ್ರೇ = ಸಮುದ್ರದಲ್ಲಿ, ಅಂತಃ = ನೀರೊಳಗೆ (ತಿಷ್ಠತಿ) ಇರುತ್ತಾನೆ.

"ಗುರೋರ್ನಾಮ ನ ಗೃಹ್ಣೀಯಾತ್ ಶಿಷ್ಯಃ ಭಾರ್ಯಾ ಪತೇರಪಿ " ಎಂಬ ಶಾಸ್ತ್ರ ನಿಯಮದಂತೆ, ಸಂಪ್ರದಾಯದಂತೆ "ಹೆಂಗಸು ತಮ್ಮ ಗಂಡಂದಿರ ಹೆಸರನ್ನು ಹಿಡಿದು ಹೇಳಬಾರದೆಂಬ" ಸಂಪ್ರದಾಯವನ್ನು ಶಿಕ್ಷಿಸುವುದಕ್ಕಾಗಿ ರಮಾದೇವಿಯು "ನನಗೂ ಕಾರಣನಾದವನು "ನಾರಾಯಣನು" ಎಂದು ಹೇಳದೇ "ಆಪೋನಾರಾ ಇತಿಪ್ರೋಕ್ತಾಃ ಆಪೋ ವೈ ನರಸೂನವಃ। ಅಯನಂ ತಸ್ಯ ತಾಃ ಪೂರ್ವಂ ತೇನ ನಾರಾಯಣಃ ಸ್ಮೃತಃ" ಎಂದು ಶ್ರೀಮಹಾಲಕ್ಷ್ಮೀಯು ಹೇಳಿರುತ್ತಾಳೆ.

ಈ ಶ್ರುತಿಯಲ್ಲಿ ಸಾಕ್ಷಾತ್ ಮಹಾಲಕ್ಷ್ಮೀಯು ತನ್ನ ಅಧೀನದಲ್ಲಿ ಚತುರ್ಮುಖಾದಿಸಕಲದೇವತೆಗಳೂ ಇರುತ್ತಾರೆಂದೂ, ಇಂತಹ ತನಗೂ ನಿಯಾಮಕನಾದವನನ್ನು ಶ್ರೀಮನ್ನಾರಾಯಣನೆಂದೂ ತಾನು ಆ ನಾರಾಯಣನ ಅಧೀನದಲ್ಲಿರತಕ್ಕವಳೆಂದೂ ಸ್ಪಷ್ಟವಾಗಿ ಶ್ರೀಹರಿಯ ಸರ್ವೋತ್ತಮತ್ವವನ್ನು ಪ್ರತಿಪಾದಿರುತ್ತಾಳೆ.

ಮಹಾನಾರಾಯಣೋಪನಿಷತ್ತು ಪರಮಾತ್ಮನ ಮಹಿಮಾತಿಶಯವನ್ನೂ ಸರ್ವೋತ್ತಮತ್ವವನ್ನೂ ಹೊಗಳುತ್ತಲಿದೆ.

ಹಿಂದೆ ಈ ವಾಕ್ಯಗಳಿಗೆ ಕೇವಲ ತಾತ್ಪರ್ಯಾರ್ಥವನ್ನು ಮಾತ್ರ ವಿವರಿಸಲಾಗಿದೆ. ಈಗ ಮಂತ್ರವನ್ನು ಸಮಗ್ರವಾಗಿ ಬರೆದು ಅರ್ಥ ಸಹಿತವಾಗಿ ನಿರೂಪಿಸಿರುತ್ತೇವೆ.

"ಯಂ ಅಂತಃ ಸಮುದ್ರೇ ಕವಯೋಽವಯಂತಿ ಯದಕ್ಷರೇ ಪರಮೇ ಪ್ರಜಾಃ ।
ಯತಃ ಪ್ರಸೂತಾ ಜಗತಃ ಪ್ರಸೂತೀ-ತೋಯೇನ, ಜೀವಾನ್ ವ್ಯಸಸರ್ಜ
ಭೂಮ್ಯಾಮ್ ॥
ಯದೋಷಧೀಭಿಃ ಪುರುಷಾನ್ ಪಶೂಂಶ್ಚ ವಿವೇಶ ಭೂತಾನಿ ಚರಾಚರಾಣಿ ।
ಅತಃ ಪರಂ ನಾನ್ಯದಣೀಯಸಂ ಹಿ ಪರಾತ್ಪರಂ ಯನ್ಮಹತೋ ಮಹಾಂತಂ
ಯದೇಕಮವ್ಯಕ್ತಂ
ಅನಂತರೂಪಂ ವಿಶ್ವಂ ಪುರಾಣಂ ತಮಸಃ ಪರಸ್ತಾತ್ ।
ತದೇವರ್ತಂ ತದುಸತ್ಯಮಾಹುಃ ತದೇವ ಬ್ರಹ್ಮ ಪರಮಂ ಕವೀನಾಮ್ ॥

**ಶ್ರುತಿಪದಾರ್ಥ** :- ಯಂ = ಯಾರನ್ನು (ಯಾವಶ್ರೀಮನ್ನಾರಾಯಣನನ್ನು) ಸಮುದ್ರೇ ಅಂತಃ = ಸಮುದ್ರದ ಒಳಗೆ ಇರುವವನ್ನಾಗಿ ಕವಯೋಽಪಿ = ಜ್ಞಾನಿಗಳು ಕೂಡ, ಅವಯಂತಿ = ಸ್ವಲ್ಪವೇ ತಿಳಿಯುತ್ತಾರೋ, (ಸಾಕ್ಷಾತ್ ನಾರಾಯಣನ ಧರ್ಮಪತ್ನಿಯಾದ ರಮಾದೇವಿಗೇನೇ ತನ್ನ ಪತಿಯ ಇತಿಮಿತಿಯನ್ನು ಪೂರ್ತಿಯಾಗಿ ತಿಳಿಯಲು ಆಗದಿರುವಾಗ ತದಿತರಾದ ಜ್ಞಾನಿಗಳು ಸಮಗ್ರವಾಗಿ ಪರಮಾತ್ಮನನ್ನ ಹೇಗೆ ತಾನೇ ತಿಳಿದಾರು ? ಸ್ವಲ್ಪವಾಗಿಯೇ ತಿಳಿದಿರುತ್ತಾರೆಂದು ಅಭಿಪ್ರಾಯ.)

ಯದಕ್ಷರೇ = ಯಾವ ಪರಮಾಕ್ಷರಶಬ್ದ ವಾಚ್ಯನಾದ ಅನಿತ್ಯತ್ವಂ, ದೇಹಹಾನಿಃ, ದುಃಖಪ್ರಾಪ್ತಿಃ, ಅಪೂರ್ಣತಾ
ನಾಶಶ್ಚತುರ್ವಿಧಃ ಪ್ರೋಕ್ತಃ ತದಭಾವೋ ಹರೇಃ ಸದಾ ॥

ಎಂಬ ಪ್ರಮಾಣದಂತೆ ನಾಲ್ಕು ಬಗೆಯಾದ ನಾಶರಹಿತನಾದ ಪರಮೇ = ಸರ್ವೋತ್ತಮನಾದ ಶ್ರೀಹರಿಯಲ್ಲಿ, ಪ್ರಜಾಃ = ಬ್ರಹ್ಮಾದಿ ಸಕಲಚೇತನರೂ ಅಧೀನರಾಗಿರುತ್ತಾರೆಯೋ, (ಮತ್ತು) ಜಗತಃ = ಸಮಸ್ತ ಪ್ರಪಂಚಕ್ಕು, ಪ್ರಸೂತೀ = ಜನನಿಯಾದ ಶ್ರೀಮಹಾಲಕ್ಷ್ಮೀಯು, ಯತಃ = ಯಾವ ಶ್ರೀಹರಿಯ ದೆಸೆಯಿಂದ, ಪ್ರಸೂತಾ = ಹುಟ್ಟಿರುವಳೋ, (ಸೃಷ್ಟಿಕಾರ್ಯದಲ್ಲಿ ಅಭಿವ್ಯಕ್ತವಾದ ಇಚ್ಛೆಯುಳ್ಳವಳಾಗಿದ್ದಾಳೆಯೋ, ಯಾವ ಪರಮಾತ್ಮನಿಂದ ಪ್ರೇರಿತಳಾಗಿ ಸೃಷ್ಟಿಸುವ ಇಚ್ಛಾಭಿವ್ಯಕ್ತಿಯುಳ್ಳವಳಾಗಿರುತ್ತಾಳೋ) (ಯಾವ ಪರಮಾತ್ಮನು) ತೋಯೇನ = ಆಯಾಜೀವರಿಗೆ ಸಂಬಂಧಿಸಿದ ಕರ್ಮದಿಂದ (ಅಥವಾ ತನ್ನ ವೀರ್ಯದಿಂದಲಾಗಲಿ) ತನ್ನ ಸಾಮರ್ಥ್ಯದಿಂದ ಜಲ ಮೊದಲಾದ ಭೂತಗಳಿಂದ, ಭೂಮ್ಯಾಂ = ಭೂಲೋಕ ಮೊದಲಾದ ಲೋಕಗಳಲ್ಲಿ, ಜೀವಾನ್ = ಜೀವರುಗಳನ್ನು, ವ್ಯಸರ್ಜ = ನಾನಾ ಬಗೆಯಾಗಿ ಸೃಷ್ಟಿಸಿದನು.

ಯತ್ = ಯಾವ, ಪರಮಾತ್ಮನಾದ ಪರಬ್ರಹ್ಮನೆನಿಸಿದ ಶ್ರೀಮನ್ನಾರಾಯಣನು, ಓಷಧೀಭಿಃ = ಸೋಮಲತೆಯೇ ಮೊದಲಾದ ಲತಾವಿಶೇಷಗಳಿಂದ ಕೂಡಿದ, ಪುರುಷಾನ್ = ಪುರುಷರನ್ನೂ, ಜೀವವರ್ಗವನ್ನೂ, ಪಶೂಂಶ್ಚ = ಗೋವು ಮೊದಲಾದ ಪಶುವರ್ಗವನ್ನೂ, ಚರಾಚರಣಿ ಭೂತಾನಿ = ಚೇತನ ಅಚೇತನಾತ್ಮಕಗಳಾದ ಭೂತಗಳನ್ನೂ (ಪ್ರಾಣಿವರ್ಗವನ್ನೂ, ಜಡವರ್ಗವನ್ನೂ) ಪ್ರೇರಿಸುವದಕ್ಕಾಗಿ ನಿಯಂತ್ರಿಸುವುದಕ್ಕಾಗಿ, ವಿವೇಶ = ಪ್ರವೇಶ ಮಾಡಿದ್ದಾನೆಯೋ, ಅತಃ = ಅಂತಹ ಆ ಪರಬ್ರಹ್ಮನಾದ ಶ್ರೀಮನ್ನಾರಾಯಣನಿಗಿಂತಲೂ ಪರಂ. ಅನ್ಯತ್ = ಅತಿಶಯವಾದ ಉತ್ತಮವಾದ ಬೇರೊಂದು ವಸ್ತುವು, ಅಣೀಯಸಂ = ಅತ್ಯಂತಅಣುವಾದದ್ದು, ಸೂಕ್ಷ್ಮವಾದುದು, ನ = ಇಲ್ಲವು, ಹಿ = ಇದು ಪ್ರಸಿದ್ಧವಾಗಿದೆ.

ಪರಾತ್ಪರಂ = ಜೀವೋತ್ತಮರಾದ ಬ್ರಹ್ಮದೇವರು ಮತ್ತು ಇತರ ಎಲ್ಲ ಚೇತನರಿಗಿಂತಲೂ ಉತ್ತಮನಾಗಿರುತ್ತಾನೆ‌ಯೋ ಉತ್ಕೃಷ್ಟೋತ್ಕೃಷ್ಟನೋ ಯತ್ = ಯಾವ ಪರಬ್ರಹ್ಮನಾದ ಶ್ರೀಮನ್ನಾರಾಣನು, ಮಹತಃ = ಮಹಾಪರಿಣಾಮಕ್ಕಿಂತಲೂ, ಮಹಾಂತಂ ಅಧಿಕವಾದ ಪರಿಮಾಣವುಳ್ಳವನಾಗಿರುವನೋ, ಯತ್ ಏಕಂ = ಯಾವ ಪರಬ್ರಹ್ಮವಸ್ತುವು ಒಂದೇ ಕೇವಲವಾದುದು, ಅವ್ಯಕ್ತಂ = ಅವ್ಯಕ್ತವಾದುದೋ, ಅತೀಂದ್ರಿಯವಾದುದೋ, ತನ್ನ ಪ್ರಸಾದವಿಲ್ಲದೆ ತಾನು ವ್ಯಕ್ತವಲ್ಲವೋ, ಅನಂತರೂಪಂ = ಅಪರಿಮಿತಗಳಾದ ಅನಂತರೂಪಗಳುಳ್ಳದ್ದೋ, ವಿಶ್ವಂ = ಪೂರ್ಣವಾದುದೋ, ಪುರಾಣಂ = ಪುರಾತನವಾದುದೋ, ತಮಸಃ = ಪ್ರಕೃತಿಗಿಂತಲೂ, ಅಜ್ಞಾನಕ್ಕಿಂತಲೂ, ಪರಸ್ತಾತ್ = ಅತಿಕ್ರಮಿಸಿರುತ್ತದೆ. ಯೋ ತದೇವ = ಅದೇನೇ, ಋತಂ = ಯಥಾರ್ಥಜ್ಞಾನಸ್ವರೂಪವಾದುದು, ತದು = ಆ ಪರಬ್ರಹ್ಮನಾದ ಶ್ರೀಮನ್ನಾರಾಯಣನನ್ನೇ, ಸತ್ಯಂ = ಜ್ಞಾನಪೂರ್ವಕವಾದ ಕ್ರಿಯಯುಳ್ಳವನನ್ನಾಗಿಯೂ, ತದೇವ = ಆ ಪರಬ್ರಹ್ಮನನ್ನೇ, ಕವೀನಾಂ = ಜ್ಞಾನಿಗಳ ಮತದಲ್ಲಿ, ಪರಮಂ ಬ್ರಹ್ಮ = ಸರ್ವೋತ್ತಮನಾದಸ ಪರಬ್ರಹ್ಮನನ್ನಾಗಿ, ಆಹುಃ ಹೇಳುತ್ತಾರೆ.

ಋಗ್ವೇದದಲ್ಲಿ ಮತ್ತೊಂದು ಮಂತ್ರದಿಂದಲೂ ಸಹ ಶ್ರೀಹರಿಯ ಸರ್ವೋತ್ತಮತ್ವವು ಗೊತ್ತಾಗುತ್ತದೆ

**''ಅಸ್ಯ ದೇವಸ್ಯ ಮೀಳ್ಹುಷೋ ವಯಾ ವಿಷ್ಣೋರೇಷಸ್ಯ ಪ್ರಭೃತೇ ಹವಿರ್ಭಿಃ ।**
**ವಿದೇಹಿ ರುದ್ರೋ ರುದ್ರಿಯಂ ಮಹಿತ್ವಂ ಯಾಸಿಷ್ಟಂ ವರ್ತಿರಶ್ವಿನಾವಿರಾವತ್ ।।**
**(ಋಗ್ವೇದಮಂತ್ರ)**

**ಅರ್ಥ** :- ಅಸ್ಯ = ಪ್ರಸಿದ್ಧನಾದ ಈ, ದೇವಸ್ಯ = ದ್ಯೋತನಾದಿಗುಣಗಣಪರಿಪೂರ್ಣನಾದ, ಮೀಳ್ಹುಷಃ = (ಮೀಢವಾನ್, ಮೀಢ್ವಾನ್ = ಸಮರ್ಥ ಎಂಬ ತತ್ವದೀಪದಂತೆ), ಭಕ್ತಾಭಿಲಷಿತವನ್ನು ಮಳೆಗರೆಯುವವನಾದ, (ಭಕ್ತರ ಸಕಲಾಭೀಷ್ಟಗಳನ್ನೂ ಕರುಣಿಸುವವನಾದ), ಏಷಸ್ಯ = ಎಲ್ಲಕ್ಕೂ ಒಡೆಯನಾದ ಸುಧಾವಿಷ್ಣುತತ್ವವಿನಿರ್ಣಯ ಟೀಕಾರೀತ್ಯಾ, ಇಚ್ಛಾರೂಪನಾದ, ಸತ್ಯಕಾಮನಾದ, ವಿಷ್ಣೋಃ = ಶ್ರೀಮನ್ನಾರಾಯಣನಿಗೆ, ಪ್ರಭೃತೇ = ಕರ್ಮದಿಂದಲೂ, ಧ್ಯಾನದಿಂದಲೂ, ಪ್ರವೃದ್ಧವಾದ ಪೂಜೆಯು, ಹವಿರ್ಭಿಃ = ಹವಿಸ್ಸುಗಳಿಂದ ಮಾಡಲ್ಪಡಲಾಗಿ, (ಅಂತಹ ಪೂಜೆಯಿಂದ, ವಯಾಃ ಅಹಂ ತತ್ವಾಭಿಮಾನಿಯಾಗಿ ಜೀವರಿಗೆ ಬಂಧಕನಾದ, ರುದ್ರಃ = ರುದ್ರನು, ರುದ್ರಿಯಂ ಮಹತ್ವಂ = ರುದ್ರನ ಪದವಿಯನ್ನು, ವಿದೇ = ಹೊಂದಿದನು, ಹಿ = ಇದು ಪ್ರಸಿದ್ಧವು,ಹೇಅಶ್ವಿನೌ = ಎಲೈ ಅಶ್ವಿನೀ ದೇವತೆಗಳಿರಾ, (ನೀವು ಇಬ್ಬರೂ ಕೂಡಾ ಶ್ರೀಹರಿಯ ಪೂಜೆ ಮತ್ತು ಶ್ರೀಹರಿಯ ಪ್ರಸಾದದಿಂದಲೇ)ಇರಾವತ್ ವರ್ತಿಃ = ಅನ್ನವನ್ನುಳ್ಳ ಸ್ಥಿತಿಯನ್ನು, ಅಂದರೆ ಸಮಸ್ತ ಭೋಗವನ್ನುಳ್ಳ ಪದವಿಯನ್ನು, ಯಾಸಿಷ್ಟಂ = ಹೊಂದಿರುವಿರಿ.

(ಈ ರೀತಿ ರುದ್ರನೇ ಮೊದಲಾದ ದೇವತೆಗಳಿಗೂ, ಅಶ್ವಿನೀ ಮೊದಲಾದವುಗಳಿಗೂ ಶ್ರೀಹರಿಯ ಪೂಜಾ ವಿಶೇಷದಿಂದ ಲಭಿಸಿದ ಶ್ರೀಹರಿಯ ಪ್ರಸಾದದಿಂದ ಆಯಾ ಪದಪ್ರಾಪ್ತಿ ಮತ್ತು ಭೋಗಾದಿಗಳನ್ನು ವೇದವು ತಿಳಿಸುತ್ತಲಿದೆ).

ಸೂರ್ಯಚಂದ್ರಾದಿ ದೇವತೆಗಳೂ ಸಹ ಪರಮಾತ್ಮನ ಅಂಗಗಳಿಂದ ಹುಟ್ಟಿರುವರೆಂದು ವೇದವಾಣಿಯು ಹೇಳುತ್ತಲಿದೆ.

**ಚಂದ್ರಮಾ ಮನಸೋ ಜಾತಃ ಚಕ್ಷೋಃ ಸೂರ್ಯೋಽಜಾಯತ ।**
**ಮುಖಾದಿಂದ್ರಶ್ಚಾಗ್ನಿಶ್ಚ ಪ್ರಾಣಾದ್ವಾಯುರಜಾಯತ ॥**

**ಅರ್ಥ** :- ಚಂದ್ರಮಾಃ = ಚಂದ್ರನು, ಮನಸಃ = ಪರಮಪುರುಷನಾದ ಶ್ರೀಮನ್ನಾರಾಯಣನ ಮನಸ್ಸಿನಿಂದ, ಜಾತಃ = ಹುಟ್ಟಿದನು, ಹುಟ್ಟಿದ್ದಾನೆ. ಚಕ್ಷೋಃ = (ಪರಮಪುರುಷನಾದ ಶ್ರೀಮನ್ನಾರಾಯಣನ) ಕಣ್ಣಿನ ದೆಶೆಯಿಂದ, ಸೂರ್ಯಃ = ಸೂರ್ಯನ , ಅಜಾಯತ = ಹುಟ್ಟಿದನು, ಮುಖಾತ್ = (ಪರಮಪುರುಷನಾದ ಶ್ರೀಹರಿಯ) ಮುಖದಿಂದ, ಇಂದ್ರಶ್ಚ = ಇಂದ್ರನೂ, ಅಗ್ನಿಶ್ಚ = ಅಗ್ನಿಯೂ, (ಹುಟ್ಟಿದ್ದಾರೆ) ಪ್ರಾಣಾತ್ = (ಪರಮಪುರುಷನಾದ ಶ್ರೀಮನ್ನಾರಾಯಣನ) ಪ್ರಾಣದಿಂದ, ವಾಯುಃ = ಮುಖ್ಯಪ್ರಾಣನು, ಪ್ರಧಾನವಾಯುದೇವನು, ಅಜಾಯತ = ಹುಟ್ಟಿದನು.

ಮಹೋಪನಿಷತ್ತಿನ ವಚನವೂ ಕೂಡ, ಮಹಾಪ್ರಳಯದಲ್ಲಿ ಸರ್ವಸ್ವತಂತ್ರನಾದ ಶ್ರೀಮನ್ನಾರಾಯಣನು ಪ್ರಧಾನವಾಗಿ ಒಬ್ಬನೇ ಇದ್ದನೆಂದೂ, ಸ್ವತಂತ್ರವಾಗಿ ಚತುರ್ಮುಖನೂ ಇರಲಿಲ್ಲವೆಂದೂ ಪಾರ್ವತೀಪತಿಯಾದ ಶಂಕರನೂ ಇರಲಿಲ್ಲವೆಂದೂ ಹೇಳುತ್ತಲಿದೆ.

**ಏಕೋ ನಾರಾಯಣ ಆಸೀತ್ ನ ಬ್ರಹ್ಮಾ ನೇಶಾನೋ ।**
**ನಾಗ್ನೀಷೋಮೌ ನೇಮೇ ದ್ಯಾವಾಪೃಥಿವೀ ॥ (ಮಹೋಪನಿಷತ್)**

**ಅರ್ಥ** :- (ಮಹಾ ಪ್ರಳಯದಲ್ಲಿ) ಏಕಃ ನಾರಾಯಣಃ = ಒಬ್ಬ ನಾರಾಯಣನೇ, ಆಸೀತ್ = ಇದ್ದನು, ಬ್ರಹ್ಮಾನ = ಚತುರ್ಮುಖ ಬ್ರಹ್ಮನು ಇರಲಿಲ್ಲ. ಈಶಾನಃ ನ ರುದ್ರನು ಇರಲಿಲ್ಲ. ಅಗ್ನೀಷೋಮೌ = ಅಗ್ನಿಯಾಗಲಿ ಸೋಮ ದೇವತೆಗಳಾಗಲಿ, ನ = ಇರಲಿಲ್ಲ. ಇಮೇ ದ್ಯಾವಾಪೃಥಿವೀ = ಈ ಸ್ವರ್ಗಲೋಕವಾಗಲಿ, ಈ ಭೂಮಿಯಾಗಲಿ, (ಈ ಪೃಥಿವೀ ಲೋಕವಾಗಲಿ, ಭೂಲೋಕವಾಗಲಿ), ನ = ಇರಲಿಲ್ಲ.

ಮತ್ತೊಂದು ಶ್ರುತಿಯೂ ಇದೇ ಅರ್ಥವನ್ನು ತಿಳಿಸುತ್ತಲಿದೆ.

**ಏಕೋ ನಾರಾಯಣ ಆಸೀತ್ ನ ಬ್ರಹ್ಮಾ ನ ಚ ಶಂಕರಃ ॥ ಇತಿಶ್ರುತಿಃ ॥**

**ಅರ್ಥ** :- ಮಹಾಪ್ರಳಯದಲ್ಲಿ ಏಕಃ ನಾರಾಯಣಃ = ನಾರಾಯಣನು ಒಬ್ಬನು, ಆಸೀತ್ = ಇದ್ದನು. ನ ಬ್ರಹ್ಮಾ = ಚತುರ್ಮುಖನು ಇರಲಿಲ್ಲ. ಶಂಕರಃ ನ ಚ = ರುದ್ರನೂ ಸಹ ಇರಲಿಲ್ಲ.

ಮಹಾಪ್ರಳಯದಲ್ಲಿದ್ದ ಸರ್ವೋತ್ತಮನಾದ ಶ್ರೀಮನ್ನಾರಾಯಣನ ದೆಶೆಯಿಂದಲೇ ಬ್ರಹ್ಮಾದಿದೇವತೆಗಳು ಹುಟ್ಟಿದರೆಂದು ಈ ಕೆಳಗಿನ ಶ್ರುತಿವಾಕ್ಯವು ಹೇಳುತ್ತಲಿದೆ.

**ಸ ಮುನಿರ್ಭೂತ್ವಾ ಸಮಚಿಂತಯತ್ ತತ ಏತೇ ವ್ಯಜಾಯಂತ ।**
**ವಿಶ್ವೋ ಹಿರಣ್ಯಗರ್ಭೋಽಗ್ನಿರ್ಯಮೋ ವರುಣರುದ್ರೇಂದ್ರಾ ಇತಿ ॥ ಶ್ರುತಿಃ ॥**

**ಅರ್ಥ** :- ಮಹಾಪ್ರಳಯಕಾಲದಲ್ಲಿ, ಅಂದರೆ ಜಗತ್ತಿನ ಸೃಷ್ಟಿಗಾಗಿ, ಸಃ = ಆ ಶ್ರೀಹರಿಯು, ಮುನಿಃ ಭೂತ್ವಾ = ಮೌನಿಯಾಗಿ, ಸಮಚಿಂತಯತ್ = ಸಮಾಲೋಚಿಸಿದನು. ತತಃ = ಅವನ ಆಲೋಚನೆಯಿಂದ, (ಇಚ್ಛಾ ವಿಶೇಷದಿಂದ) ಏತೇ = ಇವರು, ವಿಶ್ವಃ = ವಾಯುದೇವನು (ಮುಖ್ಯಪ್ರಾಣನು), ಹಿರಣ್ಯಗರ್ಭಃ = ಚತುರ್ಮುಖನು, ಅಗ್ನಿಃ = ಅಗ್ನಿದೇವನು, ಯಮಃ = ಯಮನು, ವರುಣರುದ್ರೇಂದ್ರಾಃ ಇತಿ = ವರುಣನು, ರುದ್ರನು, ಇಂದ್ರನೆಂಬ ದೇವತೆಗಳು, ಪ್ರಜಾಯಂತ = ಹುಟ್ಟಿದರು.

ಮತ್ತೊಂದು ಶ್ರುತಿಯೂ ಸಹ ಮಹಾಪ್ರಳಯದಲ್ಲಿ ಶ್ರೀ ವಾಸುದೇವನೇ ಸ್ವತಂತ್ರನಾದವನು ಇದ್ದನೆಂದೂ ಇತರರು ಇರಲಿಲ್ಲವೆಂದೂ ಹೇಳುತ್ತಲಿದೆ.

**ವಾಸುದೇವೋ ವಾ ಇದಮಗ್ರ ಆಸೀತ್ ನ ಬ್ರಹ್ಮಾ ನ ಚ ಶಂಕರಃ,**
**ನೇಂದ್ರಸೂರ್ಯೌ ನ ಚ ಗುಹೋ, ನ ಸೋಮೋ ನ ವಿನಾಯಕಃ ॥**
**ಇತ್ಯಾದಿ ಶ್ರುತಿಭ್ಯಃ ॥**

**ಅರ್ಥ** :- ಇದಮಗ್ರೇ = ಈ ಜಗತ್ತು ಹುಟ್ಟುವುದಕ್ಕೆ ಮುಂಚೆ ಮಹಾಪ್ರಳಯದಲ್ಲಿ, ವಾಸುದೇವೋ ವಾ = ವಾಸುದೇವನೇ, ಆಸೀತ್ = ಇದ್ದನು. ನ ಬ್ರಹ್ಮಾ = ಚತುರ್ಮುಖಬ್ರಹ್ಮನು ಇರಲಿಲ್ಲ. ನ ಚ ಶಂಕರಃ = ರುದ್ರನೂ ಇರಲಿಲ್ಲ. ನೇಂದ್ರಸೂರ್ಯೌ = ಇಂದ್ರನೂ ಇರಲಿಲ್ಲ, ಸೂರ್ಯನೂ ಇರಲಿಲ್ಲ. ನ ಚ ಗುಹಃ = ಸ್ಕಂದನೂ ಇರಲಿಲ್ಲ. ನ ಸೋಮಃ = ಚಂದ್ರನು ಇರಲಿಲ್ಲ. ನ ವಿನಾಯಕಃ = ವಿನಾಯಕನೂ ಇರಲಿಲ್ಲ, (ಗಣೇಶನೂ ಇರಲಿಲ್ಲ). ಇದೇ ಮೊದಲಾದ ಶ್ರುತಿವಾಕ್ಯಗಳಿಂದ ಚಿದಚಿದ್ವಿಲಕ್ಷಣನಾದ ಗುಣಪರಿಪೂರ್ಣನಾದ ಶ್ರೀಹರಿಯು ಪ್ರತಿಪಾದ್ಯನಾಗಿದ್ದಾನೆ. ವೇದದಲ್ಲಿ ಕಂಡುಬರುವ, ಹಿರಣ್ಯಗರ್ಭ, ಶಿವ, ರುದ್ರ, ಇಂದ್ರ ಮೊದಲಾದ ಸಕಲ ನಾಮಗಳೂ, ಪರಮಮುಖ್ಯ ವೃತ್ತಿಯಿಂದ ಶ್ರೀಮನ್ನಾರಾಯಣನನ್ನೇ ಹೇಳುತ್ತಿವೆಯೆಂದು ಋಕ್ಸಂಹಿತಾವಚನವೂ ಭಾಲ್ಲವೇಯಶ್ರುತಿವಚನಗಳೂ ತಿಳಿಸುತ್ತಲಿವೆ.

**ಯೋ ದೇವಾನಾಂ ನಾಮಧಾ ಏಕ ಏವ ತಂ ಸಂಪ್ರಶ್ನಂ ಭುವನಾ ಯಂತ್ಯನ್ಯಾ**
**(ಋಕ್ಸಂಹಿತಾ)**

**ಅರ್ಥ** :- ಯಃ = ಯಾವ ಭಗವಂತನು, ಏಕಏವ = ಒಬ್ಬನೇ, ದೇವಾನಾಂ = ದೇವತೆಗಳ, ನಾಮಧಾ = ಮುಖ್ಯವಾಗಿ ನಾಮಧಾರಕನು, ಇತರರು ಯಾರೂ ಅಲ್ಲ ತಂ ಪ್ರಶ್ನಂ = ಪ್ರಷ್ಟಾರಂ = ಅಂತಹ ಸರ್ವನಾಮಧಾರಕನಾದ ಪರಮಾತ್ಮನನ್ನು, ಅನ್ಯಾ = ಅನ್ಯಾನಿ = ಬೇರೆಯಾದ, ಭುವನಾ = ಭುವನಾನಿ = ಲೋಕಗಳು, ಸಂಯಂತಿ = ಸಂಯಾಂತಿ = ಮೋಕ್ಷದಲ್ಲೂ, ಪ್ರಳಯದಲ್ಲೂ, ಸೇರುತ್ತವೆ.

ಮುಂದಿನ ಭಾಲ್ಲವೇಯ ಶ್ರುತಿವಚನವೂ ಈ ವಿಷಯವನ್ನು ಸ್ಪಷ್ಟಪಡಿಸುತ್ತಲಿದೆ.

**ನಾಮಾನಿ ವಿಶ್ವಾನಿ ನ ಸಂತಿ ಲೋಕೇ ಯದಾವಿರಾಸೀತ್ ಅನೃತಸ್ಯ ಸರ್ವಮ್ ।**
**ನಾಮಾನಿ ಸರ್ವಾಣಿ ಯಮಾವಿಶಂತಿ ತಂ ವೈವಿಷ್ಣುಂ ಪರಮಮುದಾಹರಂತಿ ॥**
**ಇತಿ ಭಾಲ್ಲವೇಯಶ್ರುತಿಃ ॥**

**ಅರ್ಥ** :- ವಿಶ್ವಾ = ವಿಶ್ವಾನಿ, ನಾಮಾನಿ = ಸಕಲ ನಾಮಗಳೂ, ಲೋಕೇ = ರುದ್ರಾದಿ ಜಗತ್ತಿನಲ್ಲಿ, ಅಭಿ = ಮುಖ್ಯವಾಗಿ ವಾಚಕತ್ವೇನ, ನ ಸಂತಿ = ಇರುವುದಿಲ್ಲ. ಇದಕ್ಕೆ ಯದಾವಿರಾಸೀತ್ ಎಂಬುದರಿಂದ ತೋರಿಸಲಾಗಿದೆ.

ಯತ್ = ಯಾರ ದೆಶೆಯಿಂದ, ಅನ್ಯತಸ್ಯ = ಅತ್ಯಂತಭಿನ್ನವಾದ ವಿಷ್ಣುವಿಗಿಂತಲೂ ಬೇರೆಯಾದ ಲೋಕದ (ಜಗತ್ತಿನ), ಸರ್ವಂ = ನಾಮಪ್ರವೃತ್ತಿನಿಮಿತ್ತವಾದುದು, ಆವಿರಾಸೀತ್ = ಉಂಟಾಯಿತೋ ಆದಕಾರಣ ಉತ್ಪತ್ತಿ ಮತ್ತಾದ ಪ್ರವೃತ್ತಿನಿಮಿತ್ತವುಳ್ಳತನದಿಂದ, ರುದ್ರಾದಿ ಜಗತ್ತಿನಲ್ಲಿ ಎಲ್ಲಾ ನಾಮಗಳೂ ಮುಖ್ಯವಾಗಿ ವಾಚಕವಾಗಿ ಇರುವುದಿಲ್ಲ.

ತತ್ತ್ವಪ್ರದೀಪಟೀಕಾ - ವಿಶ್ವಾ = ವಿಶ್ವಾನಿ ನಾಮಾನಿ, ಲೋಕೇ = ಸಕಲ ನಾಮಗಳೂ ಲೋಕದಲ್ಲಿ ಅಭಿತೋ ನ ಸಂತಿ = ಮುಖ್ಯವಾಗಿಲ್ಲ. ಮುಖ್ಯವಾಗಿ ಲೋಕವಾಚಕಗಳಾಗಿಲ್ಲ. ಏತಕ್ಕೆಂದರೆ, ಯತ್ = ಯಸ್ಮಾತ್ = ಯಾವ ಪುರುಷನಿಂದ, ಅನ್ಯತಸ್ಯ = ವಿಷ್ಣುವ್ಯತಿರಿಕ್ತವಾದ ಜಗತ್ತಿನ, ಜನ್ಮಲಯಾದಿಗಳು, ಸರ್ವಂ = ಸಮಸ್ತವೂ, ಆವಿರಾಸೀತ್ = ಉಂಟಾದುವೋ, ಯಾರನ್ನು ಸಕಲನಾಮಗಳೂ ಮುಖ್ಯವೃತ್ತಿಯಿಂದ ಮುಖ್ಯವಾಗಿ ವಾಚಕತ್ವೇನ ಹೇಳುತ್ತಲಿವೆಯೋ, ತಂ ತ = ಅಂತಹ ವಿಷ್ಣುವನ್ನು, ಪರಮಂ = ಉತ್ತಮನನ್ನಾಗಿ (ಶ್ರೀಹರಿಯನ್ನೇ), ಉದಾಹರಂತಿ = ಜ್ಞಾನಿಗಳು ಉದಾಹರಿಸುತ್ತಾರೆ = ಹೇಳುತ್ತಾರೆ.

**ಅಸ್ಯೈವ ಸರ್ವನಾಮಾನಿ ವ್ಯತಿರಿಕ್ತಸ್ಯ ಸರ್ವತಃ ।**
**ಯಃ ಸ್ವತಂತ್ರಃ ಸದೈವೈಕಃ ಸ ವಿಷ್ಣುಃ ಪರಮೋ ಮತಃ ।। ಇತಿಶ್ರುತಿಃ ।।**

**ಅರ್ಥ** :- ಸರ್ವತಃ = ಎಲ್ಲಾ ವಸ್ತುಗಳಿಗಿಂತಲೂ, ವ್ಯತಿರಿಕ್ತಸ್ಯ = ಅತ್ಯಂತ ಭಿನ್ನನಾದ, ಅಸ್ಯೈವ = ಈ ಶ್ರೀಮನ್ನಾರಾಯಣನಿಗೇನೇ, ಸರ್ವನಾಮಾನಿ = ಎಲ್ಲಾ ನಾಮಗಳೂ (ಇರುತ್ತವೆಯೋ), ಯಃ = ಯಾರು, ಏಕಏವ = ಒಬ್ಬನೇ, ಸದಾ = ಯಾವಾಗಲೂ, ಸ್ವತಂತ್ರಃ = ಸ್ವತಂತ್ರನೋ, ಸಃ = ಆ, ವಿಷ್ಣುವು, ಪರಮಃ = ಸರ್ವೋತ್ತಮನೆಂದು, ಮತಃ = ಸಮ್ಮತನು ಎಂಬುದಾಗಿ ಶ್ರುತಿಯು ಹೇಳುತ್ತಲಿದೆ.

ಪರಮಶ್ರುತಿ ವಾಕ್ಯವು ಪರಮಾತ್ಮನ ವಿಚಾರವಾಗಿ ಅತ್ಯಂತ ಸ್ಪಷ್ಟವಾಗಿದೆ.

**ಉತ್ಪತ್ತಿರ್ವಾಸುದೇವಸ್ಯ ಪ್ರಾದುರ್ಭಾವೋ ನ ಚಾಪರಃ ।**
**ದೇಹೋತ್ಪತ್ತಿಸ್ತ್ವನ್ಯೇಷಾಂ ಬ್ರಹ್ಮಾದೀನಾಂ ತದೀರಣಾತ್ ।।**
**ದೇಹೋಽಣ್ವಾದಿಃ ಹರೇರ್ನಿತ್ಯೋ ಬ್ರಹ್ಮಾದೀನಾಮನಿತ್ಯಕಃ ।**
**ಮುಖ್ಯೋತ್ಪತ್ತಿಸ್ತ್ವನ್ಯೇಷಾಂ ಪ್ರಾದುರ್ಭಾವೋ ಹರೇರ್ಜನಿಃ ।। ಇತಿಪರಮಶ್ರುತೇಶ್ಚ ।।**

**ಅರ್ಥ** :- ವಾಸುದೇವಸ್ಯ = ಶ್ರೀಕೃಷ್ಣಪರಮಾತ್ಮನ, ಉತ್ಪತ್ತಿಃ = ಉತ್ಪತ್ತಿ ಎಂಬುದು, ಪ್ರಾದುರ್ಭಾವಃ = ಅಭಿವ್ಯಕ್ತಿರೂಪವಾದುದು. (ಇತರ ಪದಾರ್ಥಗಳಿಗಿರುವಂತಹುದಲ್ಲ.) ಅಪರಃ = ಸ್ವರೂಪದಿಂದ ಜನನ ರೂಪವಾದುದಾಗಲಿ, ದೇಹಯೋಗರೂಪವಾದುದಾಗಲಿ, ಅನ್ಯಪದಾರ್ಥ ಸಂಬಂಧರೂಪವಾದುದಾಗಲಿ, ವಿಕಾರರೂಪವಾದುದಾಗಲಿ, ಪರಿಣಾಮರೂಪವಾದುದಾಗಲಿ, ಆಕೃತಿರೂಪವಾದುದಾಗಲಿ ಬೇರೆ ಬಗೆಯಾದುದು ಯಾವುದೂ ನ ಚ = ಇಲ್ಲವು.

ತದನ್ಯೇಷಾಂ = ಪರಮಾತ್ಮನಿಗಿಂತಲೂ ಬೇರೆಯವರಾದ, ಬ್ರಹ್ಮಾದೀನಾಂ = ಚತುರ್ಮುಖಾದಿಗಳಿಗೆ, ತದೀರಣಾತ್ = ಆ ವಾಸುದೇವನ ಶ್ರೀಕೃಷ್ಣನ ಪ್ರೇರಣೆಯಿಂದ, ದೇಹೋತ್ಪತ್ತಿಃ = ಪ್ರಾಕೃತವಾದ ಶರೀರದ ಉತ್ಪತ್ತಿಯು - ಉತ್ಪತ್ತಿ ಶ್ರುತಿಗೆ ಅರ್ಥವು. ಹರೇಃ = ಶ್ರೀಹರಿಯ, ದೇಹಃ = ಶರೀರವು, ಅನಾದಿಃ = ಅನಾದಿಯಾದುದು ಜ್ಞಾನಾನಂದಾತ್ಮಕವಾದ ಶ್ರೀ ವಿಷ್ಣುವಿನ ದೇಹವು ಅಪ್ರಾಕೃತವಾದುದು. ಅನಾದಿಯಾದುದು. ನಿತ್ಯಃ = ಚತುರ್ವಿಧ ನಾಶವಿಲ್ಲದುದು ನಿತ್ಯವಾದುದು. ಬ್ರಹ್ಮಾದೀನಾಂ = ಚತುರ್ಮುಖಾದಿಗಳ (ಶರೀರಗಳು), ಅನಿತ್ಯಾಃ = ಉತ್ಪತ್ತಿಯುಳ್ಳದುದೂ, ನಾಶವುಳ್ಳದುದೂ ಆಗಿವೆ. ಆದರೆ ಅನಿತ್ಯಗಳಾಗಿವೆ. ತದನ್ಯೇಷಾಂ = ಶ್ರೀಹರಿಯಿಂದ ಇತರರಾದ ಬ್ರಹ್ಮಾದಿಗಳಿಗೆ ಮುಖ್ಯೋತ್ಪತ್ತಿಃ = ದೇಹೋತ್ಪತ್ತಿರೂಪವಾದ ಮುಖ್ಯವಾದ ಉತ್ಪತ್ತಿಯು, ಹರೇಃ = ಶ್ರೀಹರಿಗೆ, ಪ್ರಾದುರ್ಭಾವಃ = ಪ್ರಾದುರ್ಭಾವವು (ಅಭಿವ್ಯಕ್ತಿರೂಪವಾದುದು), ಜನಿಃ = ಜನನಶ್ರುತಿಗೆ ಅರ್ಥವು, ಇತಿ = ಹೀಗೆ, ಪರಮಶ್ರುತೇಶ್ಚ = ಪರಮಶ್ರುತಿಯು (ಹೇಳುತ್ತಲಿದೆ.)

ಪರಮೋಪನಿಷತ್ತಿನ ವಚನವೂ ಸಹ ಪರಮಾತ್ಮನು ಅನಂತಕಲ್ಯಾಣಗುಣಪರಿಪೂರ್ಣನೆಂದೂ, ಸಕಲ ದೋಷ ದೂರನೆಂದೂ ತಿಳಿಸುತ್ತಲಿದೆ.

''ವರ್ಜಿತಃ ಸರ್ವದೋಷೈರ್ಯೋ ಗುಣಸರ್ವಸ್ವಮೂರ್ತಿಮಾನ್ ।
ಸ್ವತಂತ್ರೋ ಯದ್ವಶಾಃ ಸರ್ವೇ ಸ ವಿಷ್ಣುಃ ಪರಮೋ ಮತಃ ॥
ಇತಿ ಪರಮೋಪನಿಷದಿ ॥

**ಅರ್ಥ** :- ಯಃ = ಯಾರು, ಸರ್ವದೋಷೈಃ = ಎಲ್ಲ ಬಗೆಗಳಾದ ದೋಷಗಳಿಂದಲೂ, ವರ್ಜಿತಃ = ಸರ್ವಥಾ ರಹಿತನೋ, ಗುಣಸರ್ವಸ್ವಮೂರ್ತಿಮಾನ್ = ಸಕಲ ಕಲ್ಯಾಣ ಗುಣಗಳೇ ಆಕಾರವಾಗಿ ಉಳ್ಳವನೋ, ಜ್ಞಾನಾನಂದಾತ್ಮಕವಾದ ಶರೀರವುಳ್ಳವನೋ ಮತ್ತು ಸ್ವತಂತ್ರಃ = ಸ್ವರೂಪ, ಪ್ರಮಿತಿ, ಪ್ರಮಿತಿ, ಪ್ರವೃತ್ತಿಗಳಲ್ಲಿ ಇತರರ ಅಧೀನನಲ್ಲದಿರುವನೋ, ಸರ್ವೇ = ಅವನಿಗಿಂತಲೂ ಭಿನ್ನರಾದ ರಮಾಬ್ರಹ್ಮಾದಿದೇವತೆಗಳೆಲ್ಲರೂ ಕೂಡ, ಯದ್ವಶಾಃ = ಯಾವ ಶ್ರೀಹರಿಗೆ ಅಧೀನರಾಗಿರುತ್ತಾರೆಯೋ, ಸಃ = ಆತನೇ, ವಿಷ್ಣುಃ = ಶ್ರೀಹರಿಯು, ಪರಮಃ = ಸರ್ವೋತ್ತಮನು, ಮತಃ = ಸಮ್ಮತನು, ಇತಿ = ಹೀಗೆಂದು, ಪರಮೋಪನಿಷದಿ = ಪರಮೋಪನಿಷತ್ತಿನಲ್ಲಿರುತ್ತದೆ.

ಬ್ರಹ್ಮಾಂಡ ಪುರಾಣದಲ್ಲಿನ ಬ್ರಹ್ಮನಾರದ ಸಂವಾದದಿಂದಲೂ ಕೂಡ ಪರಮಾತ್ಮನ ಬಗ್ಗೆ ಅನೇಕ ಸಂದೇಹಗಳು ಪರಿಹಾರವಾಗುತ್ತವೆ.

ನಾರದ ಉವಾಚ :-

ನಿರ್ದೋಷಶ್ಚೇತ್ ಕಥಂ ವಿಷ್ಣುಃ ಮಾನುಷೇಷೂದಪದ್ಯತ ।
ಚಿಂತಾಶ್ರಮವ್ರಣಾಜ್ಞಾನದುಃಖಯುಗ್ದೃಶ್ಯತೇ ಕಥಮ್ ॥
ಏಷ ಮೇ ಸಂಶಯೋ ಬ್ರಹ್ಮನ್ ಹೃದಿಶಲ್ಯ ಇವಾರ್ಪಿತಃ ।
ಅನುದ್ಧಾರ್ಯೋಽಪರೈಃ ಮರ್ತ್ಯೈಃ ಸೂಕ್ತಿಶಸ್ತ್ರ್ಯಾ ಸಮುದ್ಧರ ॥

**ಅರ್ಥ** :- ನಾರದರು ಚತುರ್ಮುಖನನ್ನು ಕುರಿತು ಈ ಕೆಳಗೆ ಕಂಡಂತೆ ಪ್ರಶ್ನಿಸುತ್ತಾರೆ.

ನಾರದ ಉವಾಚ = ನಾರದರು ಪ್ರಶ್ನೆ ಮಾಡಿದರು. ಎಲೈ ಚತುರ್ಮುಖನೇ ! ವಿಷ್ಣುಃ = ಶ್ರೀಮನ್ನಾರಾಯಣನು, ನಿರ್ದೋಷಶ್ಚೇತ್ = ದೋಷಲೇಶರಹಿತನಾಗಿರುವುದಾದರೆ, ಮಾನುಷೇಷು = ಮನುಷ್ಯರಲ್ಲಿ, ಕಥಂ = ಹೇಗೆ, ಉದಪದ್ಯತ = ಹುಟ್ಟಿದನು ? ಚಿಂತಾ, ಶ್ರಮ, ವ್ರಣಾಜ್ಞಾನದುಃಖಯುಕ್ = ಚಿಂತಾ = ಮಾನಸಿಕವಾದ ವ್ಯಥೆಯೇನು, ಶ್ರಮ = ದೇಹಾಯಾಸವೇನು, ವ್ರಣ = ಘಾಯವೇನು, ಅಜ್ಞಾನ = ಅಜ್ಞಾನವೇನು, ದುಃಖ = ದುಃಖವೇನು, ಇವುಗಳಿಂದ, ಯುಕ್ = ಕೂಡಿದವನಾಗಿ, ಕಥಂ = ಹೇಗೆ, ದೃಶ್ಯತೇ = ಕಾಣಲ್ಪಡುತ್ತಾನೆ. ಏಷಃ ಸಂಶಯಃ = ಈ ಸಂದೇಹವು, ಹೇ ಬ್ರಹ್ಮನ್ = ಎಲೈ ಚತುರ್ಮುಖನೇ, ಮೇ = ನನಗೆ, ಹೃದಿ = ಹೃದಯದಲ್ಲಿ, ಶಲ್ಯ ಇವ = ಬಾಣದಂತೆ, ಅರ್ಪಿತಃ = ಅತಿ ದೃಢವಾಗಿದೆ. ಹೃದಯದಲ್ಲಿ ನಾಟಿರುವ ಬಾಣದಂತೆ ಬಾಧಿಸುತ್ತಲಿದೆ. ಅಪರೈಃ = ಇತರರಾದ, ಮರ್ತ್ಯೈಃ = ನಿಮ್ಮನ್ನು ಬಿಟ್ಟು, ಈ ಸಂದೇಹವನ್ನು ಪರಿಹರಿಸಲು, ಇತರ ದೇವತೆಗಳಾಗಲಿ, ಋಷಿಗಳಾಗಲಿ ಇತರ ಮಾನವರಿಂದಾಗಲಿ ಯಾರಿಂದಲೂ, ಅನುದ್ಧಾರ್ಯಃ = ಪರಿಹರಿಸಲು ಸಾಧ್ಯವೇ ಇಲ್ಲ. ತಂ = ಅಂತಹ ಪ್ರಬಲವಾದ ನನ್ನ ಸಂದೇಹವನ್ನು, ಸೂಕ್ತಿಶಸ್ತ್ರ್ಯಾ = ಪ್ರಮಾಣಪೂರ್ವಕವಾದ ಸಮೀಚೀನವಾದ ಮಾತಿನ ಶಕ್ತಿಯಿಂದ, ಉದ್ಧರ = ಪರಿಹರಿಸು. ಎಂದು ನಾರದರು ಪ್ರಶ್ನೆ ಮಾಡಿದರು. ಅದಕ್ಕೆ ಬ್ರಹ್ಮದೇವರು ಉತ್ತರವನ್ನು ಹೇಳುತ್ತಿದ್ದಾರೆ.

**ಬ್ರಹ್ಮೋವಾಚ :-** ಬ್ರಹ್ಮದೇವರು ಉತ್ತರವನ್ನು ಹೇಳಿದರು.

**ಸ್ತ್ರೀಪುಂರತಾಭಿಯೋಗಾತ್ಮಾ ದೇಹೋ ವಿಷ್ಣೋರ್ನ ಜಾಯತೇ ।**
**ಕಿಂತು ನಿರ್ದೋಷಜ್ಞಪ್ತಿತನ್ಮಸುಖಾಂ ನಿತ್ಯಾಂ ಸ್ವಕಾಂ ತನುಮ್ ॥**
**ಪ್ರಕಾಶಯತಿ ಸೈವೇಯಂ ಜನಿರ್ವಿಷ್ಣೋಃ ನ ಚಾಪರಾ ।**
**ತಥಾಪ್ಯಸುರಮೋಹಾಯ ಪರೇಷಾಂ ಚ ಕ್ವಚಿತ್ ಕ್ವಚಿತ್ ।**
**ದುಃಖಾಜ್ಞಾನಶ್ರಮಾದೀನ್ ಸ ದರ್ಶಯೇತ್ ಶುದ್ಧಸದ್ಗುಣಃ ॥**

**ಕ್ವ ವ್ರಣಾದಿಶ್ಚ ಕ್ವಚಾಜ್ಞಾನಂ ಸ್ವಾತಂತ್ರ್ಯಾನ್ನಿತ್ಯಸದ್ಗುಣೇ ।**
**ದೌರ್ಭಾಗ್ಯಾಯೈವ ಮೋಕ್ಷಸ್ಯ ದರ್ಶಯೇತ್ಪರಮೋ ಹರಿಃ ॥**
**(ದರ್ಶಯೇತ್ತಾನ್ಯಜೋ ಹರಿಃ)**
**ಮಿಥ್ಯಾದರ್ಶನದೋಷೇಣ ತೇನ ಮುಕ್ತಿಂ ನ ಯಾಂತಿ ಚ ।**
**ತಮೋ ಯಾಂತಿ ಚ ತೇನೈವ ತಸ್ಮಾದ್ದೋಷವಿವರ್ಜಿತಮ್ ॥**

**ಪ್ರಾದುರ್ಭಾವಗತಂ ಚೈವ ಜಾನೀಯಾತ್ ವಿಷ್ಣುಮಂಜಸಾ ॥ ಇತಿ ಬ್ರಹ್ಮಾಂಡೇ ॥**

**ಅರ್ಥ :-** ಬ್ರಹ್ಮೋವಾಚ = ಚತುರ್ಮುಖನು ನಾರದರ ಪ್ರಶ್ನೆಗೆ ತಕ್ಕ ಉತ್ತರವನ್ನು ಹೇಳುತ್ತಾನೆ.

ವಿಷ್ಣೋಃ = ಶ್ರೀಮನ್ನಾರಾಯಣನಿಗೆ, ಸ್ತ್ರೀಪುಂರತಾಭಿಯೋಗಾತ್ಮಾ ದೇಹಃ = ಸ್ತ್ರೀ ಪುರುಷರ (ಹೆಂಗಸಿನ ಮತ್ತು ಗಂಡಸಿನ) ಶುಕ್ಲಶೋಣಿತದ ಸಂಬಂಧನಿಮಿತ್ತವಾಗಿ ಉಂಟಾಗುವ ಪ್ರಾಕೃತವಾದ ಶರೀರವು, ನ ಜಾಯತೇ = ಹುಟ್ಟುವುದಿಲ್ಲ. (ಉಂಟಾಗುವುದಿಲ್ಲ.) ಕಿಂತು = ಮತ್ತೇನೆಂದರೆ, ನಿರ್ದೋಷಜ್ಞಪ್ತಿತನ್ಮಸುಖಾಂ = ದೋಷಲೇಶರಹಿತವಾಗಿರುವ ಜ್ಞಾನಾನಂದರೂಪವಾದ, ನಿತ್ಯಾಂ = ನಿತ್ಯವಾದ ಉತ್ಪತ್ತಿನಾಶರಹಿತವಾದ, ಸ್ವಕಾಂ ತನುಂ = ತನ್ನ ಶರೀರವನ್ನು, ಪ್ರಕಾಶಯತಿ = ಪ್ರಕಟಿಸುತ್ತಾನೆ.

ನೈವ ಇಯಂ ಜನಿಃ = ಅದೇನೇ ಈ ಬಗೆಯಾದ ಜನಿಯು, (ಪ್ರಾದುರ್ಭಾವರೂಪವಾದುದು), ಅಪರಾ = ಬೇರೆ ವಿಧವಾದುದು, ನಚ = ಅಲ್ಲವು, ತಥಾಪಿ = ಹಾಗಾದಾಗ್ಯೂ, ಅಸುರಮೋಹಾಯ = ದೈತ್ಯರನ್ನು ಮೋಹಗೊಳಿಸುವುದಕ್ಕಾಗಿ, ದೈತ್ಯರೇನು, ರಾಕ್ಷಸರೇನು, ಪಿಶಾಚಗಳೇನು, ನೀಚಮನುಷ್ಯರೇನು ಈ ರೀತಿಯಾಗಿರುವ ತಾಮಸರಿಗೆ ಅನ್ಯಥಾ ಜ್ಞಾನವು, ಅವರವರ ಸ್ವರೂಪಕ್ಕೆ ತಕ್ಕಂತಹ ಜ್ಞಾನವು ಉಂಟಾಗಲೆಂಬ ಅಭಿಪ್ರಾಯದಿಂದ, ಪರೇಷಾಂ ಚ = ಸಜ್ಜನರನ್ನೂ ಸಹ ಮೋಹಿಸುವುದಕ್ಕಾಗಿಯೂ (ಪರೇಷಾಂ = ಸಜ್ಜನಾನಾಂಚ ಮೋಹಾಯ ಎಂದು ಟೀಕಾ ವ್ಯಾಖ್ಯಾನವಿದೆ.)

ಕ್ವಚಿತ್ ಕ್ವಚಿತ್ = ಕೆಲವು, ಕೆಲವು ಕಡೆ, ಕೆಲವು ಕೆಲವು ಸಂದರ್ಭಗಳಲ್ಲಿ, ಶುದ್ಧಸದ್ಗುಣಃ = ದೋಷರಹಿತನಾದ ಸದ್ಗುಣಗಳನ್ನುಳ್ಳವನಾದ, ಸಃ = ಆ ಶ್ರೀಹರಿಯು, ದುಃಖಾಜ್ಞಾನಭ್ರಮಾದೀನ್ = ದುಃಖ, ಅಜ್ಞಾನ, ಭ್ರಮ, ಮೊದಲಾದವುಗಳನ್ನು, ದರ್ಶಯೇತ್ = ತೋರಿಸುವನು, ಸ್ವತಂತ್ರಾಚಿಂತ್ಯಸದ್ಗುಣೇ = ಸರ್ವತಂತ್ರ ಸ್ವತಂತ್ರನೂ, ಅಚಿಂತ್ಯಗಳಾದ ಸದ್ಗುಣಗಳನ್ನುಳ್ಳವನೂ ಆದ ಶ್ರೀಮನ್ನಾರಾಯಣನಲ್ಲಿ, ವ್ರಣಾದಿ ಕ್ವ = ವ್ರಣ ಮೊದಲಾದುದು (ಹುಣ್ಣು ಮೊದಲಾದುವು) ಎಲ್ಲಿಂದ ಬಂದೀತು, ಅಜ್ಞಾನಂ ಕ್ವಚ = ಅಜ್ಞಾನವು ಎಲ್ಲಿ, ಅಜಃ = ಉತ್ಪತ್ತಿಯಿಲ್ಲದಿರುವ, ಹರಿಃ = ಶ್ರೀಹರಿಯು, ಮೋಕ್ಷಸ್ಯ ದೌರ್ಲಭ್ಯಾಯೈವ = ಮೋಕ್ಷವು, ಅಸುರರಿಗೆ ಸರ್ವಥಾಪ್ರಾಪ್ತಿಯಾಗದೇ ಇರುವುದಕ್ಕಾಗಿಯೇ, ಇತರ ಸಜ್ಜನರಿಗೆ ಮೋಕ್ಷದ ವಿಲಂಬಕ್ಕಾಗಿಯೂ ಸಹ, (ಸ್ವರೂಪ ಯೋಗ್ಯತೆಗೆ ಮೀರಿ ಸಾಧನ ಮಾಡುವ ಸಜ್ಜನರಿಗೆ), ತಾನಿ = ಆ ದುಃಖ ಅಜ್ಞಾನಾದಿಗಳನ್ನು, ದರ್ಶಯೇತ್ = ತೋರಿಸುವನು, ತೇನ = ಅಂತಹ, ಮಿಥ್ಯಾದರ್ಶನದೋಷೇಣ = ಮಿಥ್ಯಾಜ್ಞಾನದ ಅನ್ಯಥಾ ಜ್ಞಾನದ ದೋಷದಿಂದ, ಮುಕ್ತಿಂ = ಮೋಕ್ಷವನ್ನು (ಆ ದೈತ್ಯರು), ನ ಯಾಂತಿ ಚ = ಹೊಂದುವುದಿಲ್ಲ, ತೇನೈವ = ಅಂತಹ ಮಿಥ್ಯಾ ಜ್ಞಾನದಿಂದ, ಅತ್ಯಂತ ಶೀಘ್ರವಾಗಿಯೇ, ತಮಃ = ನಿತ್ಯನರಕವಾದ ತಮಸ್ಸನ್ನು, (ಆ ದೈತ್ಯರು), ಯಾಂತಿ ಚ = ಹೊಂದುತ್ತಾರೆ. ತಸ್ಮಾತ್ = ಆದ ಕಾರಣದಿಂದ, ಪ್ರಾದುರ್ಭಾವಗತಂ ಚೈವ = ಪ್ರಾದುರ್ಭಾವದಲ್ಲಿರುವ, ವಿಷ್ಣುಂ = ಶ್ರೀಹರಿಯನ್ನು, ಅಂಜಸಾ = ಚೆನ್ನಾಗಿ, ದೋಷವರ್ಜಿತಂ ಚೈವ = ದೋಷಲೇಶದಿಂದ ರಹಿತನನ್ನಾಗಿಯೇ, ಜಾನೀಯಾತ್ = ತಿಳಿಯಬೇಕು. ಇತಿ = ಹೀಗೆಂದು, ಬ್ರಹ್ಮಾಂಡೇ = ಬ್ರಹ್ಮಾಂಡಪುರಾಣದಲ್ಲಿದೆ. ಪರಮಾತ್ಮನು ಸರ್ವತಂತ್ರ ಸ್ವತಂತ್ರನಾದುದರಿಂದ ಸಕಲಕಲ್ಯಾಣಗುಣಗಳೂ, ದೋಷಗಳೂ ಅವನ ಅಧೀನಗಳೇ ಆಗಿರುವುದರಿಂದ, ಆತನಿಗೆ ಸಕಲ ಗುಣಗಳೂ ಏತಕ್ಕೆ ಇಲ್ಲ? ಹೇಯವಾದ ದೋಷಗಳಿಗೂ ಸ್ವಾಮಿಯಾದುದರಿಂದ ಹೇಗೆ ತಾನೇ ದೋಷಗಳು ಆತನಿಗೆ ಉಂಟಾದಾವು? ಈ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಲಿರುವ ಅನುವ್ಯಾಖ್ಯಾನವಾಕ್ಯವು ಈ ರೀತಿ ಇದೆ.

> "ಯದಧೀನಾ ಗುಣಾಶ್ಚೈವ ದೋಷಾ ಅಪಿ ಹಿ ಸರ್ವಶಃ।
> ಗುಣಾಸ್ತಸ್ಯ ಕಥಂ ನಸ್ಯುಃ ಸ್ಯುರ್ದೋಷಾಶ್ಚ ಕಥಂ ಪುನಃ॥ ಇತಿ॥

ಯುಕ್ತಿಯುಕ್ತವಾಗಿ ಪರಮಾತ್ಮನಿಗೆ ಅನಂತಕಲ್ಯಾಣ ಗುಣಪರಿಪೂರ್ಣತೆಯನ್ನು ದೋಷರಾಹಿತ್ಯವನ್ನೂ ಅನುವ್ಯಾಖ್ಯಾನವಾಕ್ಯವು ತಿಳಿಸುತ್ತಲಿದೆ.

ಲೋಕದಲ್ಲಿ ನಮ್ಮ ನಿತ್ಯದ ನಡವಳಿಕೆಯಲ್ಲಿ ನಮಗೆ ಬೇಕಾದುದನ್ನೆಲ್ಲಾ ನಾವು ಎಷ್ಟೇ ಪ್ರಯತ್ನ ಮಾಡಿ ಅಪೇಕ್ಷಿಸಿದರೂ ಅದು ನಮಗೆ ಸಿಗುತ್ತಿಲ್ಲ. ನಾವು ಅದನ್ನು ಪಡೆಯುತ್ತಿಲ್ಲ. ಇದಕ್ಕೆ ಕಾರಣ ನಮಗೆ ನಾವು ಇಚ್ಛಿಸಿದ ವಸ್ತುವಿನ ವಿಷಯದಲ್ಲಿ ಸ್ವಾತಂತ್ರ್ಯವಿಲ್ಲದಿರುವುದು ಹೊರತು ಬೇರೆ ಏನನ್ನೂ ಹೇಳಲಾಗುವುದಿಲ್ಲ.

ಮತ್ತು ಹೊಂದಬೇಕು, ಪಡೆಯಬೇಕು ಎಂಬ ವಿಶೇಷಾಕಾರವಾದ ಅಪೇಕ್ಷೆ ಇಲ್ಲದಿರುವಾಗ ಕೂಡ ನಾವು ವಸ್ತುವನ್ನು ಹೊಂದುವುದಿಲ್ಲ. ಅಪೇಕ್ಷಿಸುವುದಿಲ್ಲ. ನಮಗೆ ಬೇಕಿಲ್ಲದಿದ್ದರೂ ಕೆಲವು ಸಂದರ್ಭದಲ್ಲಿ ನಮಗೆ ದುಃಖಕಾರಕ ವಾದುವುಗಳು ಬಂದೊದಗಿ ನಮ್ಮನ್ನು ದುಃಖಕ್ಕೆ ಈಡುಮಾಡುತ್ತಲಿವೆ. ಇದಕ್ಕೆ ಏನು ಕಾರಣ ಎಂದು ವಿಮರ್ಶಿಸಿದರೆ ನಮ್ಮನ್ನು ಕಾಡಿಸುತ್ತಲಿರುವ ವಸ್ತುವಿನಮೇಲೆ ನಮ್ಮ ಸ್ವಾತಂತ್ರ್ಯವಿಲ್ಲದಿರುವುದರಿಂದ ಎಂದು ಒಪ್ಪಲೇಬೇಕು.

ಮತ್ತು ತ್ಯಾಗ ಮಾಡಬೇಕೆಂಬ ಇಚ್ಛೆಯು ಇಲ್ಲದಿರುವಾಗಲೂ ಸಹ ನಾವು ಆ ವಸ್ತುವನ್ನು ಬಿಡುವುದಿಲ್ಲ. ಇದು ಲೋಕಾನುಭವಸಿದ್ಧವಾದ ಸಂಗತಿಯಾಗಿದೆ.

ಪ್ರಕೃತದಲ್ಲಿ ಪರಮಾತ್ಮನಿಗೆ ಸರ್ವಕಾಲದಲ್ಲೂ, ಸರ್ವವಸ್ತುಗಳಮೇಲೆಯೂ, ಸರ್ವವಿಧವಾದ ಸ್ವಾತಂತ್ರ್ಯವು ಇರುತ್ತದೆ.

ಸ್ವತಂತ್ರನಾದ ಪರಮಾತ್ಮನಿಗೆ "ನಾನು ಯಾವಾಗಲೂ ಆನಂದಾದಿಗುಣಭರಿತನಾಗಿಯೇ ಇರುತ್ತೇನೆ. ದುಃಖಾದಿ ದೋಷರಹಿತನಾಗಿಯೂ ಇರುತ್ತೇನೆಂಬ ಇಚ್ಛೆಯು ನಿತ್ಯವಾಗಿದೆ. ಗುಣಗಳನ್ನು ಹೊಂದಿರಬೇಕು. ದೋಷ ದೂರನಾಗಿರ ಬೇಕೆಂಬ ಅಪೇಕ್ಷೆಯು ಇರುವುದರಿಂದ ಅವೆಲ್ಲಕ್ಕೂ ಸ್ವತಂತ್ರನಾಗಿರುವ ಪ್ರಯುಕ್ತ ಪರಮಾತ್ಮನು ಸಕಲಗುಣ ಪೂರ್ಣನೂ ಸರ್ವದೋಷಲೇಶರಹಿತನೂ ಆಗಿಯೇ ಇದ್ದಾನೆ.

ಇಲ್ಲಿ ಈ ರೀತಿ ಅನುಮಾನವನ್ನು ಪ್ರಯೋಗಿಸಬಹುದಾಗಿದೆ.

**ಈಶ್ವರಃ - ಗುಣಪರಿಪೂರ್ಣಃ - ಸ್ವತಂತ್ರತ್ವಾತ್ - ವ್ಯತಿರೇಕೇಣ ಚೈತ್ರವತ್ ।। ೧೩ ।।**

ಈಶ್ವರನು - ಸಕಲಗುಣ ಪರಿಪೂರ್ಣನಾಗಿದ್ದಾನೆ - ಸರ್ವದೋಷದೂರನೂ ಆಗಿರುತ್ತಾನೆ - ಸ್ವತಂತ್ರ ನಾಗಿರುವುದರಿಂದ - ವ್ಯತಿರೇಕೇಣ ಯಜ್ಞದತ್ತನಂತೆ. (ಎಂದು ಅನುಮಾನ ಪ್ರಯೋಗ) ಮತ್ತು ಈಶ್ವರಃ-ವಿಪ್ರತಿಪನ್ನ ಗುಣ ವಾನ್ ತತ್ಪ್ರೇಪ್ಸಾವತ್ತ್ವೇ ಸತಿ ಸ್ವತಂತ್ರತ್ವಾತ್ - ಹೊಂದಬೇಕೆಂಬ ಇಚ್ಛೆಯೂ ಇದ್ದು ಸ್ವತಂತ್ರನಾಗಿರುವುದರಿಂದವ) ಯಾರು ಯಾವುದನ್ನು ಹೊಂದಲು ಅಪೇಕ್ಷಿಸುವನೋ ಮತ್ತು ಆ ವಸ್ತುವಿನ ವಿಷಯದಲ್ಲಿ ಸ್ವತಂತ್ರನೋ ಅವನು ಅದನ್ನು ಹೊಂದುತ್ತಾನೆ. ಪಡೆದೇ ಇರುತ್ತಾನೆ.

ಮತ್ತು ಈಶ್ವರನು-ದೋಷರಹಿತನು-ದೋಷತ್ಯಾಗದಲ್ಲಿ ಇಚ್ಛೆಯುಳ್ಳವನಾಗಿದ್ದಾನೆ. ಮತ್ತು ಸ್ವತಂತ್ರನಾಗಿದ್ದಾನೆ. ಈ ಕಾರಣದಿಂದ ಪರಮಾತ್ಮನು ನಿರ್ದೋಷನು.

ಯಾರು ಯಾವುದನ್ನು ಬಿಡಲು ಇಚ್ಛಿಸುವನೋ ಮತ್ತು ಸ್ವತಂತ್ರನೋ ಅವನು ಅದನ್ನು ದೂರಮಾಡುವನು. ಅದನ್ನು ಹೊಂದುವುದೇ ಇಲ್ಲ. ಇತ್ಯಾದಿಯಾಗಿ ಅನುಮಾನಗಳನ್ನೂ ಸಹ ಪರಮಾತ್ಮನ ಗುಣ ಪರಿಪೂರ್ಣತೆಯಲ್ಲಿಯೂ, ನಿರ್ದೋಷತ್ವದ ವಿಷಯವಾಗಿಯೂ ಪ್ರಯೋಗಿಸಲು ಬರುತ್ತದೆಯೆಂಬುದು ಪ್ರಮಾಣದ ಅಭಿಪ್ರಾಯವಾಗಿದೆ.

## ವಿಶೇಷದ ಸಮರ್ಥನೆ

ಪರಮೋಪನಿಷತ್ತಿನ ವಾಕ್ಯವೂ ಸಹ ಪರಮಾತ್ಮನಿಗೂ ಅವನ ಗುಣಕ್ರಿಯಾದಿಗಳಿಗೂ ಭೇದವಾಗಲಿ, ಭೇದಾ ಭೇದವಾಗಲಿ ಇಲ್ಲವೆಂದು ತಿಳಿಸುತ್ತಲಿದೆ. ಸವಿಶೇಷಾತ್ಯಂತಾಭೇದವನ್ನು ನಿರೂಪಿಸುತ್ತಲಿದೆ.

-

**ಗುಣಕ್ರಿಯಾದಯೋ ವಿಷ್ಣೋಃ ಸ್ವರೂಪಂ ನಾನ್ಯದಿಷ್ಯತೇ ।**
**ಅತೋ ಮಿಥೋಽಪಿ ಭೇದೋ ನ ತೇಷಾಂ ಕಶ್ಚಿತ್ಕದಾಚನ ।।**

**ಸ್ವರೂಪೇಽಪಿ ವಿಶೇಷೋಽಸ್ತಿ ಸ್ವರೂಪತ್ವವದೇವ ತು ।**
**ಭೇದಾಭಾವೇಽಪಿ ತೇನೈವ ವ್ಯವಹಾರಶ್ಚ ಸರ್ವಶಃ ।। ಇತಿ ಪರಮೋಪನಿಷದಿ ।।**

**ಅರ್ಥ** :- ಈ ಪರಮೋಪನಿಷತ್ತಿನ ವಚನವು ಬಹಳ ಗಹನವಾದ ಪ್ರಮೇಯವನ್ನು ವ್ಯಕ್ತಪಡಿಸುತ್ತಿದೆ.

೧. ಕೆಲವರು ಪರಮಾತ್ಮನು ನಿರ್ಗುಣನೆಂದು ಹೇಳುವರು (ಮಾಯಾವಾದಿಗಳು.)

೨. (ನೈಯಾಯಿಕರು) ಮತ್ತೆ ಕೆಲವರು ಪರಮಾತ್ಮನಲ್ಲಿ ಎಂಟೇ ಗುಣಗಳೆಂದೂ ಆ ಗುಣಗಳಿಗೂ ಪರಮಾತ್ಮನಿಗೂ ಅತ್ಯಂತ ಭೇದವೆಂದೂ ತಿಳಿಯುತ್ತಾರೆ. ಪ್ರತಿಪಾದಿಸುತ್ತಾರೆ.

೩. ಪರಮಾತ್ಮನಿಗೂ ಅವನ ಗುಣಗಳಿಗೂ ಭೇದಾಭೇದವನ್ನು ಕೆಲವರು ಹೇಳುತ್ತಾರೆ. ಈ ಪಕ್ಷದಲ್ಲಿ ಒಂದೇ ಆನಂದಕ್ಕೆ ಪರಮಾತ್ಮನಿಂದ ಭೇದಾಭೇದವು ಅಂಗೀಕೃತವಾಗಿದೆ.

೪. ಇನ್ನೂ ಕೆಲವರು ಪರಮಾತ್ಮನಲ್ಲಿ ಗುಣಗಳನ್ನು ಒಪ್ಪಿದರೂ ಕೂಡ ಅವನ ಗುಣಗಳಾದ ಆನಂದಾದಿಗಳು ಸ್ವರೂಪಭೂತವಾದವುಗಳು ಮತ್ತು ಅವನಿಗಿಂತ ಭಿನ್ನವಾದವುಗಳು ಎಂಬುದಾಗಿ ಹೀಗೆ ಎರಡು ವಿಧಗಳೆಂದು ಹೇಳುತ್ತಾರೆ. ಅವನ ಸ್ವರೂಪಭೂತವಾದವುಗಳಿಗೂ ಅವನಿಗೂ ಅಭೇದವು. ವೈಷಯಿಕಾನಂದಾದಿಗಳಿಗೂ ಅವನಿಗೂ ಭೇದವೆಂದು ಹೇಳುವರು.

ಈ ನಾಲ್ಕು ಪಕ್ಷಗಳನ್ನೂ ಪರಮೋಪನಿಷತ್ತಿನ ವಚನವು ನಿರಾಕರಿಸುತ್ತಲಿದೆ.

ಅದರ ಅರ್ಥವು :-

ಶ್ರೀಹರಿಗೆ ಸಂಬಂಧಪಟ್ಟ, ಗುಣಕ್ರಿಯಾದಯಃ = ಆನಂದ, ಜ್ಞಾನ, ದ್ಯುತಿ, ಬಲ, ಔದಾರ್ಯ, ವೀರ್ಯಾದಿ ಗುಣಗಳು, ಸೃಷ್ಟಿ, ಸಂಹಾರ, ನಿಯಮನ ಮೊದಲಾದ ಕ್ರಿಯೆಗಳೂ, ಆತನ ಅಚಿಂತ್ಯಾದ್ಭುತಶಕ್ತಿ ಮೊದಲಾದ ಧರ್ಮಗಳೂ, ಅವನ ಹಸ್ತಪಾದಾದ್ಯವಯವಗಳೂ ವಿಷ್ಣೋಃ = ಶ್ರೀಹರಿಯ, ಸ್ವರೂಪಂ = ಸ್ವರೂಪವು, ಅನ್ಯತ್ = ಅವನಿಗಿಂತಲೂ ಬೇರೆಯಾಗಿ, ನ ಇಷ್ಯತೆ = ಇಚ್ಛಿಸಲ್ಪಡುವುದಿಲ್ಲ. (ಅವನಿಗಿಂದಲೂ ಬೇರೆ ಇಲ್ಲ.) ಅಂಗೀಕರಿಸಲ್ಪಡುವುದಿಲ್ಲ. ಅತಃ = ಆ ಪರಮಾತ್ಮನಿಂದ ಅವನ ಗುಣ, ಕ್ರಿಯಾ, ಅವಯವಾದಿಗಳಿಗೆ ಸವಿಶೇಷಾತ್ಯಂತಾಭೇದವೇ ಇರುವುದರಿಂದ, ತೇಷಾಂ = ಆ ಗುಣಕ್ರಿಯಾದಿಗಳಿಗೆ, ಕದಾಚನ = ಯಾವ ಕಾಲದಲ್ಲೂ, ಮಿಥೋಽಪಿ = ಪರಸ್ಪರವಾಗಿಯೂ, ಅಂದರೆ ಪರಮಾತ್ಮನ ಜ್ಞಾನಕ್ಕೂ ಆನಂದಕ್ಕೂ, ಆನಂದಕ್ಕೂ ಔದಾರ್ಯಕ್ಕೂ, ಔದಾರ್ಯಕ್ಕೂ ವೀರ್ಯಕ್ಕೂ ವೀರ್ಯಕ್ಕೂ, ಆನಂದಕ್ಕೂ ಈ ರೀತಿ ಗುಣಗಳಿಗೂ ಕೂಡ ಪರಸ್ಪರವಾಗಿಯೂ ಸಹ, ಕಶ್ಚಿತ್ = ಯಾವುದೊಂದು. ಭೇದಃ = ಭೇದವು, ನ = ಇಲ್ಲ. ಸ್ವರೂಪೇಽಪಿ = ಸ್ವರೂಪದಲ್ಲಿಯೂ, ಸ್ವರೂಪತ್ವವದೇವ = ಸ್ವರೂಪತ್ವವೆಂಬುದು ಭಿನ್ನವಾದ ಧರ್ಮವಲ್ಲ, ವಿಶೇಷಃ = ವಿಶೇಷವಾದರೋ ಪದಾರ್ಥ ಶಕ್ತಿರೂಪವಾದುದು, ಅಸ್ತಿ = ಇರುತ್ತದೆ. ಭೇದಾಭಾವೇಽಪಿ = ಸ್ವರೂಪಕ್ಕೂ,

ಸ್ವರೂಪತ್ವವೆಂಬ ಧರ್ಮಕ್ಕೂ ಭೇದವಿಲ್ಲದಿದ್ದರೂ, ತೇನೈವ = ವಿಶೇಷದಿಂದಲೇ, ಸರ್ವತಃ ವ್ಯವಹಾರಶ್ಚ = ಸಂಬಂಧಾದಿವಿಷಯಕವಾದ, ಆಧಾರಾಧೇಯರೂಪಗಳಾದ ಸರ್ವ ವ್ಯವಹಾರಗಳೂ ಕೂಡುತ್ತವೆ. ಯುಕ್ತವಾಗುತ್ತವೆ. ಭೇದವ್ಯವಹಾರಕ್ಕೆ (ಭೂತಲದಲ್ಲಿ ಘಟವೆಂಬ ಆಧಾರಾಧೇಯ ಭಾವರೂಪವಾದ ಭೇದ ವ್ಯವಹಾರಕ್ಕೆ) ಸಾಕ್ಷಾತ್ತಾಗಿ, ಪ್ರತ್ಯೇಕವಾಗಿ ಪ್ರತ್ಯಕ್ಷಾದಿಪ್ರಮಾಣಗಳಿಂದ ಭೂತಲವೂ, ಘಟವೂ ತಿಳಿದು ಬರುತ್ತಿರುವುದರಿಂದ ಅಂತಹ ಕಡೆ ಸಾಕ್ಷಾತ್ತಾಗಿ ಭೇದವೇ ನಿಯಾಮಕವು. ಎಲ್ಲಿ ಗುಣಗುಣಿಗಳಿಗೆ, ಗುಣಿ ಅದರ ಧರ್ಮಗಳಿಗೆ, ಅಂದರೆ ಪರಮಾತ್ಮನಿಗೂ, ಅವನ ಗುಣಗಳಿಗೂ ಪರಸ್ಪರವಾಗಿ ಪರಮಾತ್ಮನ ಗುಣಗಳಿಗೂ, ಅವನ ಅವಯವಗಳಿಗೂ ಭೇದವಾಗಲಿ, ಭೇದಾಭೇದವಾಗಲಿ ಪ್ರಮಾಣಗಳಿಂದ ಪ್ರಮಿತವಾಗಿಲ್ಲವೋ, ವೇದಾದಿ ಪ್ರಮಾಣಗಳು ಸವಿಶೇಷಾಭೇದವನ್ನೇ ಪ್ರತಿಪಾದಿಸುತ್ತಲಿವೆಯೋ ಅಂತಹ ಕಡೆ ಭೇದವ್ಯವಹಾರಕ್ಕೆ ಭೇದಕ್ಕೆ ಪ್ರತಿನಿಧಿಯಾದ ವಿಶೇಷವೇ (ಧರ್ಮಿಯಾದ ಪದಾರ್ಥದ ಶಕ್ತಿವಿಶೇಷವೇ) ಕಾರಣವೆಂದು ಅವಶ್ಯವಾಗಿ ಒಪ್ಪಿಯೇ ತೀರಬೇಕೆಂದು ಅಭಿಪ್ರಾಯ.

ಪರಮಾಭಿಪ್ರಾಯವು ಈ ರೀತಿ ಇದೆ.

ಸರ್ವೋತ್ತಮನಾದ ಪರಮಾತ್ಮನಲ್ಲಿ ಅನಂತಾನಂತಗುಣಗಳಿವೆ. ಅವುಗಳಿಗೂ ಪರಮಾತ್ಮನಿಗೂ ಅತ್ಯಂತಾ ಭೇದವಿದೆ. ಅಂದರೆ ಅವು (ಪರಮಾತ್ಮನ ಗುಣಗಳು) ಪರಮಾತ್ಮನಿಂದ ಅತ್ಯಂತಾಭಿನ್ನಗಳೇ ಆಗಿವೆ. ಆದರೆ ಪರಮಾತ್ಮನ ಗುಣಗಳು ಎಂದೂ, ಪರಮಾತ್ಮನಲ್ಲಿ ಗುಣಗಳಿವೆಯೆಂದೂಬ, ಭೇದವ್ಯವಹಾರವು ಸಹ ಪ್ರಾಮಾಣಿಕವಾಗಿ ಕಂಡು ಬಂದಿದೆ. ಭೇದವಿಲ್ಲ. ಆದರೆ ಭೇದದ ವ್ಯವಹಾರವಿದೆ. ಇದನ್ನು ಹೇಗೆ ಕೂಡಿಸುವುದು ಎಂಬುದಕ್ಕೆ ಪರಮೋಪನಿಷತ್ತಿನಲ್ಲಿ ಸಮಾಧಾನವನ್ನು ಹೇಳಲಾಗಿದೆ.

"ಸ್ವರೂಪದಲ್ಲಿ ಸ್ವರೂಪತ್ವಂ" "ಸ್ವರೂಪೇ ಸ್ವರೂಪತ್ವಂ" ಎಂಬ ಭೇದ ವ್ಯವಹಾರವು ಇದೆ. ಆದರೆ ಸ್ವರೂಪದಲ್ಲಿ ಸ್ವರೂಪತ್ವಂ ಎಂಬುದು ಭಿನ್ನಧರ್ಮವಲ್ಲ. "ಸ್ವರೂಪತ್ವಂ" ಎಂಬಲ್ಲಿ "ತ್ವ" ಎಂಬ ಪ್ರತ್ಯಯವು ಕಂಡು ಬಂದಿದೆ. ಇದನ್ನು ನಿರ್ವಿಷಯಕವೆಂದು ನಿರಾಕರಿಸುವಂತಿಲ್ಲ. ಇದಕ್ಕೆ ನಿಯಾಮಕವೇ ಇಲ್ಲದಿರುವುದಾದರೆ "ಸ್ವರೂಪೇ ಸ್ವರೂಪತ್ವಂ" ಎಂಬ ಪ್ರಯೋಗವೇ ಇಲ್ಲದಾಗಬೇಕು. ಅಪ್ರಾಮಾಣಿಕವಾಗಬೇಕಾದೀತು. ಪ್ರಾಮಾಣಿಕರೂ ಸಹ "ಸ್ವರೂಪೇ ಸ್ವರೂಪತ್ವಂ" ಎಂದು ಪ್ರಯೋಗಿಸುತ್ತಾರೆ.

ಆದಕಾರಣ "ತ್ವಂ" ಪ್ರತ್ಯಯದ ಪ್ರವೃತ್ತಿಯಲ್ಲಿ ಯಾವುದೋ ಒಂದು ನಿಮಿತ್ತವಿದೆಯೆಂದು ಒಪ್ಪಲೇಬೇಕು. ಅದನ್ನೇ ವಿಶೇಷವೆಂದು ಕರೆಯುತ್ತಾರೆ. ಪದಾರ್ಥದ ಶಕ್ತಿಯೇ ವಿಶೇಷ ಎಂಬ ವ್ಯವಹಾರಕ್ಕೆ ವಿಷಯವೆಂದು ಪ್ರಮಾಣದಿಂದ ತಿಳಿದು ಬರುತ್ತದೆ.

ವಿಶೇಷೋ ನಾಮ ಕಶ್ಚನ ವಸ್ತುನಃ ಶಕ್ತಿಃ (ತತ್ವನಿರ್ಣಯಟೀಕಾ)

**ವಿಶೇಷವಿಚಾರ** :- ಪರಮಾತ್ಮನಿಗೂ ಅವನ ಗುಣಗಳಿಗೂ ಸವಿಶೇಷ, ಅತ್ಯಂತಾಭೇದವಿದೆ. ಹೀಗಿರುವಲ್ಲಿ ಆನಂದಂ ಬ್ರಹ್ಮಣಃ, ಎಂಬ ಭೇದ ವ್ಯವಹಾರಕ್ಕೆ ಕಾರಣವೇನು ? ಸಂಬಂಧವ್ಯವಹಾರವಾದರೂ ಹೇಗೆ ? ಭೂತಲೇ ಘಟಃ ಎಂಬಲ್ಲಿ ಅತ್ಯಂತ ಭಿನ್ನಗಳಾದ ಭೂತಲಕ್ಕೂ ಘಟಕ್ಕೂ ಸಂಯೋಗಸಂಬಂಧವ್ಯವಹಾರವಿರುವುದರಿಂದ, ಆನಂದಂ ಬ್ರಹ್ಮಣಃ ಎಂಬುದಾಗಿ ಸಂಬಂಧ ವ್ಯವಹಾರವು ಹೇಗೆ ?

ಮತ್ತು ಪರಮಾತ್ಮನು ಒಬ್ಬನಾಗಿದ್ದಾನೆ. ಗುಣಗಳಾದರೋ ಅನೇಕಗಳಾಗಿವೆ. ಅವನಿಗಿಂತ ಅಭಿನ್ನವಾದ ಗುಣಗಳಲ್ಲಿ ಬಹುವಚನವ್ಯವಹಾರವು ಹೇಗೆ? ಅಥವಾ ಪರಮಾತ್ಮನು ಗುಣಿ. ಗುಣಿಯಾದವನಲ್ಲಿ ಏಕವಚನ, ಗುಣಗಳಲ್ಲಿ ಬಹುವಚನವ್ಯವಹಾರವು ಹೇಗೆ ?

ನಾರಾಯಣನೂ ಅವನ ಗುಣಗಳೂ ಅತ್ಯಂತಾಭಿನ್ನವಾದುದರಿಂದ ಧರ್ಮಿಧರ್ಮವಾಚಕ ಶಬ್ದಗಳಿಗೆ ಅಪರ್ಯಾಯತ್ವವೂ ಹೇಗೆ ? ಇತ್ಯಾದಿ ಶಂಕೆಗಳಿಗೆಲ್ಲಾ ಪರಮೋಪನಿಷತ್ತು ತಕ್ಕ ಸಮಾಧಾನವನ್ನು ತಿಳಿಸುತ್ತಲಿದೆ.

ಸಮಾಧಾನದ ಪ್ರಕಾರ :-

ವಿಶೇಷವೆಂಬುದು ವಸ್ತುವಿನ ಒಂದು ಶಕ್ತಿಯು. ವಿಶೇಷೋ ನಾಮ ಕಶ್ಚನ ವಸ್ತುನಃ ಶಕ್ತಿಃ (ಟೀಕಾವಾಕ್ಯ) ಅದಕ್ಕೆ ಉದಾಹರಣೆ :-

"ಸ್ವರೂಪೇऽಪಿ ವಿಶೇಷೋऽಸ್ತಿ ಸ್ವರೂಪತ್ವವದೇವ ತು" ।। ಇತಿ ।।

ಸ್ವರೂಪದಲ್ಲಿ ಸ್ವರೂಪತ್ವವೆಂಬುದು ಭಿನ್ನವಾದ ಅಂದರೆ ಸ್ವರೂಪಕ್ಕಿಂತಲೂ ಪ್ರತ್ಯೇಕವಾದ ಧರ್ಮವು ಇರುವುದಿಲ್ಲ. ಆದರೆ "ಸ್ವರೂಪತ್ವಂ" ಎಂಬಲ್ಲಿ "ತ್ವ" ಪ್ರತ್ಯಯವು ಇದೆ. ಇದು ನಿರ್ವಿಷಯವಲ್ಲ. ಹಾಗಿಲ್ಲ ಪಕ್ಷದಲ್ಲಿ ಪ್ರಯೋಗವೇ ಇಲ್ಲವಾದ ಪ್ರಸಂಗ ಒದಗೀತು. ಪ್ರಯೋಗವು ಇರುವ ಕಾರಣ, ಅಂತಹ ಪ್ರಯೋಗಕ್ಕೆ ಏನೋ ಒಂದು ನಿಮಿತ್ತವು ಇರಲೇಬೇಕು. ಅದನ್ನೇ ವಿಶೇಷವೆಂದು ಹೇಳುತ್ತೇವೆ. ಈ ವಿಶೇಷವು ವೈಶೇಷಿಕರಿಂದ ಅಂಗೀಕೃತವಾದ ವಿಶೇಷದಂತಲ್ಲ. ಭೇದವಿಲ್ಲದಿರುವುದಾದರೂ, ಆ ವಿಶೇಷಪ್ರಭಾವದಿಂದಲೇ ಸಂಬಂಧಾದಿಭೇದವ್ಯವಹಾರವು ಕೂಡುತ್ತದೆ. ಭೇದದ ಪ್ರತಿನಿಧಿಯಾದುದೇ ವಿಶೇಷವು. ಭೇದದ ಕಾರ್ಯಕಾರಿಯಾಗಿದೆ.

ವಸ್ತುವಿನ ಧರ್ಮಭೂತವಾದ ಅಭೇದದಲ್ಲಿ ಭೇದಕಾರ್ಯಕಾರಿತ್ವಶಕ್ತಿಮಾನ್ ಪದಾರ್ಥೋ ವಿಶೇಷಃ ಎಂದು ಹೇಳಬೇಕಾಗಿದೆ.

"ಸ್ವರೂಪಸ್ಯ ಭಾವಃ ಸ್ವರೂಪತ್ವಂ" ಎಂಬಲ್ಲಿ ಸ್ವರೂಪತ್ವವೆಂಬುದು ಸ್ವರೂಪವೆಂಬ ಧರ್ಮಿಗಿಂತಲೂ ಅತ್ಯಂತಭಿನ್ನವಾದುದಾದರೆ ಅದಕ್ಕೆ ದ್ರವ್ಯಾದಿಗಳಲ್ಲಿ ಅಂತರ್ಭಾವವನ್ನು ಹೇಳಬೇಕು.

೧. ಸ್ವರೂಪತ್ವಂ ಎಂಬುದು ದ್ರವ್ಯವಲ್ಲ, ಗುಣಸ್ವರೂಪದಲ್ಲಿಯೂ ಸ್ವರೂಪತ್ವಂ ಎಂಬುದಿದೆ. ಗುಣದಲ್ಲಿ ದ್ರವ್ಯವೆಂಬುದು ಇರುವುದಿಲ್ಲ.

೨. "ಸ್ವರೂಪತ್ವಂ" ಎಂಬುದು ಗುಣವೂ ಅಲ್ಲ. ಕರ್ಮಸ್ವರೂಪದಲ್ಲಿಯೂ ಇರುತ್ತದೆ. ಕರ್ಮದಲ್ಲಿ ಗುಣವನ್ನೂ ಒಪ್ಪಿಲ್ಲ.

೩. "ಸ್ವರೂಪತ್ವಂ" ಎಂಬುದು ಕರ್ಮವೂ ಅಲ್ಲ. ಸಾಮಾನ್ಯದ ಸ್ವರೂಪದಲ್ಲೂ ಇರುತ್ತದೆ. ಸಾಮಾನ್ಯದಲ್ಲಿ ಕರ್ಮವಿಲ್ಲ.

೪. ''ಸ್ವರೂಪತ್ವಂ'' ಎಂಬುದು ಸಾಮಾನ್ಯವೂ ಅಲ್ಲ. ವಿಶೇಷಸ್ವರೂಪದಲ್ಲೂ ಇರುವುದರಿಂದ ಎಂಬುದಾಗಿ, ದ್ರವ್ಯದಲ್ಲಾಗಲಿ, ಗುಣದಲ್ಲಾಗಲಿ, ಕರ್ಮದಲ್ಲಾಗಲಿ, ಸಾಮಾನ್ಯದಲ್ಲಾಗಲಿ, ವಿಶೇಷದಲ್ಲಾಗಲಿ, ಅಂತರ್ಭಾವವನ್ನು ಹೊಂದುವುದಿಲ್ಲವಾದ ಕಾರಣ ಸ್ವರೂಪಕ್ಕಿಂತಲೂ ಬೇರೆಯಾದ ''ಸ್ವರೂಪತ್ವಂ'' ಎಂಬುವ ಧರ್ಮವೇ ಇರುವುದಿಲ್ಲವೆಂದೇ ಹೇಳಬೇಕು.

ಆದರೆ ''ಸ್ವರೂಪಸ್ಯಭಾವಃ ಸ್ವರೂಪತ್ವಂ'' ಎಂಬುದಾಗಿ ಧರ್ಮಧರ್ಮಿಭಾವವ್ಯವಹಾರವಿದೆ. ಇದಕ್ಕೆ ಕಾರಣವಾದ ''ತ್ವ'' ಎಂಬ ಪ್ರತ್ಯಯದ ಸಂಬಂಧವಿದೆ. ನಿರರ್ಥಕವಾಗಿ, ನಿರ್ನಿಮಿತ್ತಕವಾದ ಶಬ್ದವನ್ನು ಪ್ರಯೋಗಿಸುವಂತಿಲ್ಲ. ಹೀಗೆಯೇ ಸತ್ತ್ವಪದಾರ್ಥದ ವಿಷಯದಲ್ಲೂ ಕಂಡುಬಂದಿದೆ. ಅಭಿನ್ನವಾದರೂ ಭೇದವ್ಯವಹಾರಕ್ಕೆ ಕಾರಣವಾದುದು ಏನೋ ಒಂದು ನಿಮಿತ್ತವು ಇರಲೇಬೇಕು. ಅದನ್ನೇನೇ ವಿಶೇಷವೆನ್ನುತ್ತೇವೆ.

ಇಂತಹ ವಿಶೇಷವೆಂಬುದು, ನಿತ್ಯದಲ್ಲೂ ಇದೆ. ಅನಿತ್ಯಪದಾರ್ಥಸಾಧಾರಣವೂ ಆಗಿದೆ. ಸಕಲನಿತ್ಯಾನಿತ್ಯ ಪದಾರ್ಥಗಳಲ್ಲೂ ಇದೆ.

ಭೇದಕಾರ್ಯಮಾತ್ರಕಾರಿಯಾಗಿರುವುದರಿಂದ ಭೇದಕ್ಕೆ ಪ್ರತಿನಿಧಿಯೆನಿಸಿದೆ.

**''ಭೇದಹೀನೇ ತ್ವಪರ್ಯಾಯಶಬ್ದಾಂತರನಿಯಾಮಕಃ ।**
**ವಿಶೇಷೋ ನಾಮ ಕಥಿತಃ ಸೋಽಸ್ತಿ ವಸ್ತುಷ್ವಶೇಷತಃ'' ।।**
**(ಅನುವ್ಯಾಖ್ಯಾನ)**

ಎಂಬುದಾಗಿ ಶ್ರೀಮದಾಚಾರ್ಯರು ವಿಶೇಷದ ವಿಚಾರವಾಗಿ ನುಡಿದಿದ್ದಾರೆ.

೧. ಜೀವಬ್ರಹ್ಮರಿಗೆ ಐಕ್ಯವನ್ನು ಹೇಳುವ ಅದ್ವೈತಮತದಲ್ಲೂ ವಿಶೇಷವನ್ನು ಒಪ್ಪದಿದ್ದರೆ ಗತಿಯೇ ಇಲ್ಲ.

ವಿಶೇಷಸಾಧಕವಾದ ಬ್ರಹ್ಮತರ್ಕವಚನವನ್ನು ಶ್ರೀಮದಾಚಾರ್ಯರು ಉದಾಹರಿಸಿ ಅದಕ್ಕೆ ಪ್ರಮಾಣ ಪ್ರಮಿತತ್ವವನ್ನು ಸಾಧಿಸಿರುತ್ತಾರೆ.

**''ಅಭಿನ್ನತ್ವಂ ಅಭೇದಸ್ಯ ಯಥಾ ಭೇದವಿವರ್ಜಿತಮ್ ।**
**ವ್ಯವಹಾರ್ಯಂ ಪೃಥಕ್ ಚ ಸ್ಯಾತ್ ಏವಂ ಸರ್ವೇ ಗುಣಾ ಹರೇಃ ।।**
**ಅಭೇದಾಭಿನ್ನಯೋರ್ಭೇದೋ ಯದಿ ವಾ ಭೇದಭಿನ್ನಯೋಃ ।**
**ಅನವಸ್ಥಿತಿರೇವ ಸ್ಯಾತ್ ನ ವಿಶೇಷಗಣಾಮತಿಃ ।।**
**ಮೂಲಸಂಬಂಧಮುತ್ಸೃಜ್ಯ ತಸ್ಮಾದೇಕಮನಂತಧಾ ।**
**ವ್ಯವಹಾರ್ಯಂ ವಿಶೇಷೇಣ ದುಸ್ತರ್ಕಬಲತೋ ಹರೇಃ ।।**
**ಸ್ವರೂಪಂಚ ಸ್ವನಿರ್ವಾಹಕತಾಸ್ಯ'' ।। ಇತಿಬ್ರಹ್ಮತರ್ಕೇ ।।**

**ಅರ್ಥ** :- ಯಥಾ = ಹೇಗೆ ಜೀವರಿಗೂ, ಬ್ರಹ್ಮನಿಗೂ ಐಕ್ಯವನ್ನು ಹೇಳತಕ್ಕವರಾದ ಮಾಯಾವಾದಿಗಳ ಮತದಲ್ಲಿ, ಅಭಿನ್ನತ್ವಂ = ಅಭಿನ್ನತ್ವವು, ಅಭೇದಃ = ಎಂಬ ಪರ್ಯಾಯಶಬ್ದದಿಂದ ವಾಚ್ಯವಾದ ವಸ್ತುವು, ಭೇದವಿವರ್ಜಿತಂ = ಬ್ರಹ್ಮನಿಂದ ಭೇದರಹಿತವಾದುದಾಗಿದೆಯೋ,

ಅಂದರೆ:ಜೀವನಿಗೂ ಬ್ರಹ್ಮನಿಗೂ ಅಭಿನ್ನತ್ವವು, ಜೀವಬ್ರಹ್ಮರು ಅಭಿನ್ನರು, ಜೀವಬ್ರಹ್ಮಣೋರಭಿನ್ನತ್ವಂ, ಜೀವಬ್ರಹ್ಮಣೀ ಅಭಿನ್ನೇ, ಎಂಬುದಾಗಿ ಅಪರ್ಯಾಯಶಬ್ದವಾಚ್ಯವಾದ ವಸ್ತುವು ಬ್ರಹ್ಮನಿಂದ ಭೇದರಹಿತವಾದುದಾಗ್ಯೂ ಅಪರ್ಯಾಯಶಬ್ದವಾಚ್ಯವಾಗಿ ವ್ಯವಹಾರವು ಕಂಡುಬಂದಿದೆ. ವಿಶೇಷವನ್ನು ಒಪ್ಪದಿದ್ದರೆ ಇಂತಹ ವ್ಯವಹಾರವು ಎಂದಿಗೂ ಬರಲಾರದು. (ವಿಶೇಷಶಕ್ತಿಯಿಂದಲೇ ಪ್ರತ್ಯೇಕವಾಗಿ ವ್ಯವಹರಿಸಲಿಕ್ಕೆ ಯೋಗ್ಯವಾಗುತ್ತದೆಯೋ, ಚ = ಮತ್ತು, ಪೃಥಕ್ ವ್ಯವಹಾರ್ಯಂ ಸ್ಯಾತ್ = ವಿಶೇಷದಿಂದಲೇ ಪ್ರತ್ಯೇಕವಾಗಿ ವ್ಯವಹರಿಸಲ್ಪಡುತ್ತದೆಯೋ,

ಹೀಗೆಯೇ ಗುಣಕ್ಕೂ ಗುಣಿಗೂ ಭೇದವನ್ನು ಹೇಳುವವರ ಮತದಲ್ಲಿ (ನೈಯ್ಯಾಯಿಕರ ಮತದಲ್ಲಿ) ಭೇದಕ್ಕೂ ಭೇದದ ಧರ್ಮಿಗೂ ಭೇದವಿಲ್ಲವೋ, ಅಂದರೆ ಭೇದವು ಭೇದಿಗಳ ದೆಸೆಯಿಂದ ಭೇದರಹಿತವಾದುದೋ, ಆದಾಗ್ಯೂ ಗುಣಗುಣಿಗಳೂ ಭಿನ್ನಗಳು ಎಂಬ ಭೇದವ್ಯವಹಾರವು ಕಂಡುಬಂದಿದೆ.

ಅದೇ ರೀತಿ ಗುಣಗುಣಿಗಳಿಗೆ ಭೇದಾಭೇದವನ್ನು ಹೇಳತಕ್ಕ ವಾದಿಗಳ ಮತದಲ್ಲಿ ಗುಣಗುಣಿಗಳು ಭಿನ್ನಾಭಿನ್ನಗಳು ಎಂಬ ವ್ಯವಹಾರಗಳು ಕಂಡುಬರುತ್ತವೆಯೋ.

ಏವಂ = ಹೀಗೆಯೇ, ಸರ್ವೇ ಗುಣಾಃ = ಎಲ್ಲಾ ಗುಣಗಳೂ, ಹರೇಃ = ಪರಮಾತ್ಮನಿಂದ, ಪರಮಾತ್ಮನ ಸ್ವರೂಪಭೂತಗಳೇ ಆಗಿದ್ದಾಗ್ಯೂ, ಅಭಿನ್ನಗಳೇ ಆಗಿದ್ದಾಗ್ಯೂ ವಿಶೇಷಶಕ್ತಿಯಿಂದಲೇ ಸಂಬಂಧವುಳ್ಳವುಗಳು ಎಂಬುದಾಗಿ ವ್ಯವಹರಿಸಲ್ಪಡುತ್ತವೆ.

ಅಭೇದಾಭಿನ್ನಯೋಃ ಭೇದಃ ಯದಿ = ಅಭೇದಕ್ಕೂ, ಜೀವನಿಗೂ ಬ್ರಹ್ಮನಿಗೂ ಅಭೇದವು ಜೀವ ಮತ್ತು ಬ್ರಹ್ಮರಿಗೆ ಅಭಿನ್ನತ್ವವು ಎಂಬ ವ್ಯವಹಾರದಲ್ಲಿನ, ಅಭೇದಕ್ಕೂ ಅಭಿನ್ನತ್ವಕ್ಕೂ, [illegible]ಹ್ಮನಿಗೂ ಭೇದವನ್ನು ಹೇಳುವುದಾದರೆ,

ಇದೇ ರೀತಿ ಗುಣಗುಣಿಗಳಿಗೆ ಭೇದವನ್ನು ಹೇಳತಕ್ಕ ನೈಯಾಯಿಕರ ಮತದಲ್ಲೂ, ಗುಣಗುಣಿನೌ ಭಿನ್ನೌ ಅಥವಾ ಗುಣಗುಣಿನೋಃಭೇದಃ ಎಂದಾಗಲಿ, ಭೇದಭಿನ್ನಯೋರ್ವಾ ಭೇದಃ = ಭೇದಕ್ಕೂ, ಭಿನ್ನಗಳಾದ ಗುಣವೇನು, ಗುಣಿಯೇನು ಇವುಗಳಿಗೂ ಭೇದವನ್ನು ಹೇಳುವುದಾದರೆ, ಅನವಸ್ಥಿತಿರೇವ ಸ್ಯಾತ್ = ಪರಿಹರಿಸಲು ಸಾಧ್ಯವಿಲ್ಲದ ಅನವಸ್ಥಾದೋಷವೇ ಬರುತ್ತದೆ.

ಇದೇ ರೀತಿ ಗುಣಗಳಿಗೂ ಗುಣಿಗಳಿಗೂ ಭೇದಾಭೇದವನ್ನೂ ಹೇಳತಕ್ಕವರಮತದಲ್ಲಿ [illegible]ಗುಣಿನೋರ್ಭೇದಾ ಭೇದೌ, ಗುಣಗುಣಿನೌಭಿನ್ನಾ ಭಿನ್ನೌ ಎಂಬುದಾಗಿ ಆ ಭೇದಾಭೇದಕ್ಕೂ ಗುಣಗುಣಿಗಳಿಗೂ ಭೇದವನ್ನು ಹೇಳಿದರೆ ಅನವಸ್ಥಾದೋಷವು ಬಂದೇ ಬರುತ್ತದೆ. ಇದು ಅಪರಿಹಾರ್ಯವಾದ ಅನವಸ್ಥಾದೋಷವು. ಐಕ್ಯವಾದಿಗಳ ಮತದಲ್ಲಿಯೂ ಜೀವ ಬ್ರಹ್ಮನಿಗೂ, ಜೀವಾಭೇದಕ್ಕೂ ಭೇದವನ್ನು ಹೇಳಿದರೆ, ಆ ಭೇದಕ್ಕೂ ಮತ್ತೊಂದು ಭೇದ, ಆ ಅಭೇದಭೇದ ಭೇದಕ್ಕೂ ಬ್ರಹ್ಮನಿಗೂ ಮತ್ತೊಂದು ಭೇದ, ಆ ಅಭೇದಭೇದಭೇದಭೇದಕ್ಕೂ, ಬ್ರಹ್ಮನಿಗೂ ಮತ್ತೊಂದು ಭೇದವೆಂದು ಅನವಸ್ಥಾ ದೋಷವೇ ಬರುತ್ತದೆ.

ನೈಯಾಯಿಕರ ಮತದಲ್ಲಿ ಗುಣಕ್ಕೂ ಗುಣಿಗೂ ಭೇದ, ಆ ಭೇದಕ್ಕೂ ಗುಣಿಗೂ ಮತ್ತೊಂದು ಭೇದ, ಆ ಭೇದ ಭೇದಕ್ಕೂ ಗುಣಿಗೂ ಮತ್ತೊಂದು ಭೇದ ಎಂಬುದಾಗಿ ಅನವಸ್ಥಾದೋಷಕ್ಕೆ ಪರಿಹಾರವೇ ಇಲ್ಲ.

ಮೂರನೇ ಪಕ್ಷದ ಪ್ರಕಾರ ಗುಣಕ್ಕೂ ಗುಣಿಗೂ ಭೇದಾಭೇದವನ್ನು ಹೇಳಿದರೆ ಗುಣಗುಣಿಗಳು ಭಿನ್ನಾಭಿನ್ನಗಳು ಎಂಬ ಮತದಲ್ಲಿ ಭೇದವನ್ನು ಒಪ್ಪಿದರೆ ಆ ಗುಣಗುಣಿಗಳಿಗೂ ಭೇದಾಭೇದಕ್ಕೂ ಮತ್ತೊಂದು ಭೇದ ಅದಕ್ಕೂ ಮತ್ತೊಂದು ಭೇದ ಎಂದು ಅನವಸ್ಥಾದೋಷಕ್ಕೆ ಅವಕಾಶವಾಗುತ್ತದೆ. ಆದ್ದರಿಂದ ಜೀವಬ್ರಹ್ಮರಿಗೆ ಅಭೇದವು ಎಂಬ ಐಕ್ಯವಾದಿಗಳ ಮತದಲ್ಲಿ ಬ್ರಹ್ಮನಿಗೂ ಅಭೇದಕ್ಕೂ ಭೇದವಿಲ್ಲದೇ ಇದ್ದಾಗ್ಯೂ ವಿಶೇಷಶಕ್ತ್ಯಾ ವ್ಯವಹಾರವನ್ನು ಹೇಳಬೇಕಾಗಿದೆ. ವಿಶೇಷವನ್ನು ಒಪ್ಪದೇ ಇದ್ದರೆ ಅಂತಹ ವ್ಯವಹಾರವೇ ಜೀವಬ್ರಹ್ಮಣೋರಭಿನ್ನತ್ವಂ, ಜೀವಬ್ರಹ್ಮಣೀ ಅಭಿನ್ನೇ ಎಂಬ ವ್ಯವಹಾರವೇ ಕೂಡುವುದಿಲ್ಲ. ಇದೇ ರೀತಿ ನೈಯಾಯಿಕಾದಿಗಳೂ ಹೇಳಲೇಬೇಕು. ವಿಶೇಷವನ್ನು ಅಂಗೀಕರಿಸಿ ವ್ಯವಹಾರವನ್ನು ಕೂಡಿಸಬೇಕು.

ಮತ್ತು ವಿಶೇಷಣತಾಮತಿಃ ನ = ಗುಣಕ್ಕೂ ಗುಣಿಗೂ ಅತ್ಯಂತಭೇದವನ್ನು ಹೇಳಿದರೆ, ಗುಣವು ಗುಣಿಯಲ್ಲಿ ವಿಶೇಷಣವಾಗಿ ತೋರಲಿಕ್ಕೆ ಅವಕಾಶವೇ ಇಲ್ಲ.

ಒಂದು ವೇಳೆ ಆ ವಿಶೇಷಣವಾದ ಗುಣವು ಸಂಬಂಧವಿಶೇಷದಿಂದ ಗುಣಿಯಲ್ಲಿ ವಿಶೇಷಣವಾಗಿದೆಯೆಂದರೆ, ಆ ಸಂಬಂಧಕ್ಕೂ ಮತ್ತೊಂದು ಸಂಬಂಧಕ್ಕೂ ಮತ್ತು ಬೇರೊಂದು ಸಂಬಂಧವನ್ನು ಹೇಳಬೇಕಾಗಿರುವದರಿಂದ ಅನವಸ್ಥಾ ದೋಷವು ಬರುತ್ತದೆ. ಗುಣಿಗಿಂತಲೂ ಭಿನ್ನವಾದ ಗುಣವು ಅತ್ಯಂತ ಭಿನ್ನವಾದುದು ಸಂಬಂಧ ಪ್ರತೀತಿಯಿಂದ ಗುಣಿಯಲ್ಲಿ ವಿಶೇಷಣತಾಜ್ಞಾನಕ್ಕೆ ವಿಷಯವಾಗಿದೆಯೆಂದರೆ ವಿಶೇಷಣತಾ ಪ್ರತೀತಿಗೆ ಅಲ್ಲಿಯೂ (ಸಂಬಂಧದಲ್ಲಿಯೂ) ಸಂಬಂಧಾಂತರ ಪ್ರತೀತಿಯ ಅಪೇಕ್ಷೆಯಿದ್ದರೆ ಗುಣಕ್ಕೆ ಗುಣಿಯಲ್ಲಿ ವಿಶೇಷಣತಾಕ್ಕೆ ನಿಯಾಮಕವಾದ ಸಂಬಂಧಕ್ಕೂ ವಿಶೇಷಣತಾಕ್ಕೆ ನಿಯಾಮಕವಾದ ಸಂಬಂಧಾಂತರ ಪ್ರತೀತಿಯ ಆವಶ್ಯಕತೆಯಿರುವ ಪ್ರಯುಕ್ತ ಅನವಸ್ಥಾ ದೋಷವು ಅಪರಿಹಾರ್ಯವಾಗುತ್ತದೆ.

ಗುಣಿಗಿಂತಲೂ ಭಿನ್ನವಾದ ಗುಣದ ವಿಶೇಷಣತಾಕ್ಕೆ ನಿಯಾಮಕವಾದ ಸಂಬಂಧವು ಸತ್ತಾಮಾತ್ರದಿಂದಲೇ ಅಂದರೆ ಆ ಸಂಬಂಧದ ಜ್ಞಾನವಿಲ್ಲದಾಗ್ಯೂ, ಸ್ವರೂಪಸತ್ತಾಗಿ ಆ ಸಂಬಂಧವು ಗುಣದ ವಿಶೇಷಣತಾಕ್ಕೆ ನಿಯಾಮಕ ವಾಗುವುದಾದರೆ, ಅಂದರೆ ವಿಶಿಷ್ಟಪ್ರತೀತಿ ನಿಯಾಮಕವಾಗುವದಾದರೆ, ಅತಿಪ್ರಸಂಗಕ್ಕೆ ಅವಕಾಶವಾಗುತ್ತದೆ.

ಹೇಗೆಂದರೆ, ಸಂಯೋಗಾದಿಗಳು ಜ್ಞಾತವಾಗಿಯೇನೇ ವಿಶಿಷ್ಟಪ್ರತೀತಿಗೆ ಕಾರಣಗಳು. ಇದು ಸುಪ್ರಸಿದ್ಧವಾದ ನಿರ್ವಿವಾದವಾದ ಸಂಗತಿಯಾಗಿದೆ. ಕೇವಲಸತ್ತಾಮಾತ್ರದಿಂದ ಸಂಬಂಧವು ವಿಶಿಷ್ಟ ಪ್ರತೀತಿಗೆ ಕಾರಣವಾಗುವುದಿಲ್ಲ. ಸಂಬಂಧದ ಜ್ಞಾನವೇ ಇಲ್ಲದಿದ್ದಾಗ್ಯೂ, ಸತ್ತಾಮಾತ್ರದಿಂದಲೇ ಸಂಬಂಧವು ವಿಶಿಷ್ಟಪ್ರತೀತಿಗೆ ಕಾರಣವೆಂದು ಹೇಳಿದರೆ, ಅಂದರೆ ಗುಣ ಗುಣಿಗಳಿಗೆ ಅತ್ಯಂತಭೇದವನ್ನು ಹೇಳುವವರ ಮತದಲ್ಲಿ, ಗುಣಗುಣಿಗಳಿಗೆ ವಿಶೇಷಣವಿಶೇಷ್ಯಭಾವ ಪ್ರತೀತಿಗೆ ಮೂಲಭೂತವಾದ ಸಂಬಂಧವು ಸ್ವತಂತ್ರವಾಗಿಯೇ ಗುಣಗುಣಿಸಂಬಂಧಿವಿಶೇಷತ್ವೇನ ಅಪ್ರತೀತವಾಗಿಯೇ (ತೋರದೇನೇ) ಗುಣದ ವಿಶೇಷಣತಾಬುದ್ಧಿಗೆ ಕಾರಣವೆಂದು ಹೇಳಿದರೆ, ಆಗ, ಯಾವುದು ಅದಕ್ಕೆ ಸಂಬಂಧವಾದದ್ದರೂ ಅದು ಅದರ ವಿಶೇಷಣತಾಬುದ್ಧಿಗೆ ಕಾರಣವೆಂದು ಒಪ್ಪಿದಂತಾಗುತ್ತದೆ. ಹಾಗೆ ಹೇಳಿದರೆ ಮೇರುವಿಗೂ ಮಂದರಕ್ಕೂ ಸಂಬಂಧಿಯಾಗಿ ತೋರದಿರುವ ಘಟಕ್ಕೂ ಸಹ, ಮೇರುವಿಗೆ ಮಂದರ ವಿಶೇಷಣತಾಮತಿಗೆ ಮೂಲವಾಗಬೇಕಾದೀತು ಎಂಬ ಅತಿಪ್ರಸಂಗಕ್ಕೆ ಕಾರಣವಾಗುವುದು.

**ಅರ್ಥ** :- ಮೂಲಸಂಬಂಧಮಜ್ಞಾತ್ವಾ (ನ ವಿಶೇಷಣತಾಮತಿಃ) = ಮೊದಲನೆಯ ಆರಂಭದ ಪ್ರಾಥಮಿಕವಾದ (ಬುಡದ) ಸಂಬಂಧವನ್ನು ತಿಳಿಯದೇ ವಿಶೇಷಣತ್ವವು ತಿಳಿಯಲ್ಪಡುವುದೇ ಇಲ್ಲ. ಆದ್ದರಿಂದಲೇನೇ ಸಂಯೋಗಾದಿ

ಸಂಬಂಧಗಳು ತಿಳಿಯಲ್ಪಟ್ಟುದಾಯೇ ವಿಶಿಷ್ಟಜ್ಞಾನಕ್ಕೆ ಕಾರಣವೆಂದು ಹೇಳಲೇಬೇಕು. ಕೇವಲ ಸಂಯೋಗವು ಇರುವಿಕೆ ಮಾತ್ರದಿಂದ (ಸತ್ತಾಮಾತ್ರದಿಂದ) ವಿಶಿಷ್ಟಪ್ರತೀತಿಗೆ ಕಾರಣವಾಗಲಾರದು. ಸತ್ತಾಮತ್ರದಿಂದ ಸಂಬಂಧವು ವಿಶಿಷ್ಟಪ್ರತೀತಿಗೆ ಕಾರಣವೆಂದು ಹೇಳಿದರೆ, ''ಮೈತ್ರನು, ತನ್ನಮೇಲುಹೊದ್ದಿಕೆಯಿಂದ ದಂಡವನ್ನು ಮುಚ್ಚಿಕೊಂಡು ನಿಂತಿದ್ದಾನೆ. ಅಥವಾ ಇನ್ನೊಬ್ಬರಿಗೆ ಕಾಣದಂತೆದೊಣ್ಣೆಯನ್ನು ಅಡಗಿಸಿಕೊಂಡು ಹೋಗುತ್ತಾನೆ. ಆಗಲೂ ಸಹ ಅವನಲ್ಲಿರುವ ದಂಡವು ಸತ್ತಾಮಾತ್ರದಿಂದ ಕಾರಣವಾಗಿ ''ದಂಡೀ'' (ಎಂಬ ವ್ಯವಹಾರವು) ಎಂಬ ವಿಶಿಷ್ಟಪ್ರತೀತಿಯೂ, ಅದಕ್ಕೆ ತಕ್ಕ ವ್ಯವಹಾರವೂ ಇತರರಿಗೆ ಬರಬೇಕಾದೀತು, ಸ್ವರೂಪದಿಂದ ದಂಡಸಂಯೋಗವು ಅಲ್ಲಿ ಇದ್ದೇ ಇರುವದರಿಂದ ವಿಶಿಷ್ಟವ್ಯವಹಾರವು ಬರಬೇಕಾದೀತು. ಆದರೆ ಆ ರೀತಿ ಬರುತ್ತಿಲ್ಲ. ಆದ್ದರಿಂದ ಸ್ವರೂಪಸತ್ತಾಗಿ ಸಂಯೋಗಾದಿ ಸಂಬಂಧಗಳು ವಿಶಿಷ್ಟ ಪ್ರತೀತಿಯನ್ನು ಹುಟ್ಟಿಸಲಾರವು ಎಂದೇ ಹೇಳಬೇಕು.

ಏವಂಚ ವಿಶಿಷ್ಟಪ್ರತ್ಯಯಕ್ಕೆ ಮೂಲಭೂತವಾದ ಸಂಬಂಧಜ್ಞಾನವನ್ನು ಅಂಗೀಕರಿಸಬೇಕಾಗಿರುವ ಪ್ರಯುಕ್ತ ಹಿಂದೆ ವಿವರಿಸಿದಂತೆ ಅನವಸ್ಥಾದೋಷವು ಪ್ರಸಕ್ತವಾಗುತ್ತದೆ.

ತಸ್ಮಾತ್ = ಆದಕಾರಣದಿಂದ, ಏಕಂ = ಗುಣ, ಕ್ರಿಯಾ, ಧರ್ಮ, ಅವಯವ ಮೊದಲಾದವುಗಳಿಂದ ಅಭಿನ್ನವಾದ, ಒಂದಾದ ಭಗವಂತನ ಸ್ವರೂಪವು, ವಿಶೇಷೇಣ = ವಿಶೇಷದಿಂದಲೂ, ದುಸ್ತರ್ಕಬಲತಃ = ತರ್ಕಕ್ಕೆ ಗೋಚರವಾಗದಿರುವ ಶಕ್ತಿಯಿಂದಲೂ, ಅನಂತಧಾ = ನಾನಾ ಬಗೆಯಾಗಿ, ಆನಂದಂ ಬ್ರಹ್ಮಣಃ, ''ಬ್ರಹ್ಮನ ಆನಂದ'' ಎಂಬ (ಬ್ರಹ್ಮನು ಆನಂದ ಸ್ವರೂಪನಾದಾಗ್ಯೂ) ಸಂಬಂಧ ವ್ಯವಹಾರವೂ ಗುಣಗಳಲ್ಲಿ ಬಹುವಚನ ವ್ಯವಹಾರವೂ,ಗುಣಿಯಲ್ಲಿ ಏಕವಚನ ವ್ಯವಹಾರವೂ, ಶಬ್ದಗಳಿಗೆ ಅಪರ್ಯಾಯತ್ವವೂ, ಇತ್ಯಾದಿಯಾಗಿ (ನಾನಾ ವಿಧಗಳಾದ ವ್ಯವಹಾರಗಳು), ವ್ಯವಹಾರ್ಯಂ = ವ್ಯವಹರಿಸಿಕೊಳ್ಳಲೂ ಯೋಗ್ಯವಾಗಿವೆ. ಸಃ = ಆ, ವಿಶೇಷೋಽಪಿ = ವಿಶೇಷವೂ ಸಹ, ಸ್ವರೂಪಂ = ವಿಶೇಷಿಯ (ಧರ್ಮಿಯ) ಸ್ವರೂಪವೇ ಆಗಿದೆ. ಅಸ್ಯ ಚ = ಈ ವಿಶೇಷಕ್ಕೆ, ಸ್ವನಿರ್ವಾಹಕತಾ ಚ = ತನ್ನಲ್ಲಿರತಕ್ಕ ಭೇದಕಾರ್ಯವನ್ನು ನಿರ್ವಹಿಸುವ ಶಕ್ತಿಯೂ ಸಹ ಇರುತ್ತದೆ. ಇತಿ = ಹೀಗೆಂದು, ಬ್ರಹ್ಮತರ್ಕೇ = ಬ್ರಹ್ಮತರ್ಕವೆಂಬ ಪ್ರಮಾಣವು ತಿಳಿಸುತ್ತದೆ.

ಆ ವಿಶೇಷವು ವಿಶೇಷಿಗಿಂತಲೂ ಅಂದರೆ ಧರ್ಮಿಗಿಂತಲೂ, ಭಿನ್ನವೋ ಅಥವಾ ಅಭಿನ್ನವೋ ಎಂದು ವಿಕಲ್ಪಿಸಿದಾಗ ಮೊದಲನೆಯ ಪಕ್ಷದಲ್ಲಿ, ವಿಶೇಷಿಗಿಂತಲೂ ಭಿನ್ನವಾದರೆ, ಭೇದದ ಅನವಸ್ಥಾದೋಷವು ಇತರ ಮತಗಳಂತೆ ಬರುತ್ತದೆ.

ಆ ವಿಶೇಷವು ವಿಶೇಷಿಗಿಂತಲೂ ಅಭಿನ್ನವೆಂದರೆ, ವಿಶೇಷವಿಶೇಷಿಭಾವವೇ ಕೂಡುವುದಿಲ್ಲ ಎಂಬ ಶಂಕೆಗೆ ಉತ್ತರವಾಗಿಯೇ ಬ್ರಹ್ಮತರ್ಕದಲ್ಲಿ ''ವಿಶೇಷೋಽಪಿ ಸ್ವರೂಪಂ ಸ ಸ್ವನಿರ್ವಾಹಕತಾಽಸ್ಯ ಚ = ಎಂಬ ವಾಕ್ಯವು ಉಕ್ತವಾಗಿದೆ. ಇದರ ಅರ್ಥವನ್ನು ಹಿಂದೆಯೇ ವಿವರಿಸಿದ್ದೇವೆ. ಪ್ರಾಚೀನನ್ಯಾಯಿಕರ ಅಭಿಪ್ರಾಯವು ಹೀಗಿದೆ.

೧. ವಿಶಿಷ್ಟಜ್ಞಾನವನ್ನು ಕುರಿತು ವಿಶೇಷಣಜ್ಞಾನವು ಕಾರಣವಾಗಿದೆ.

೨. ವಿಶೇಷ್ಯದಲ್ಲಿ ಇಂದ್ರಿಯಸನ್ನಿಕರ್ಷವೂ ಬೇಕು.

೩. ಆ ವಿಶೇಷಣಕ್ಕೂ ವಿಶೇಷ್ಯಕ್ಕೂ ಅಸಂಸರ್ಗಾಗ್ರಹ ಮಾತ್ರವಿದ್ದರೆ ಸಾಕು.

(ಆ ವಿಶೇಷಣಕ್ಕೂ ವಿಶೇಷ್ಯಕ್ಕೂ ಸಂಬಂಧ ಇಲ್ಲ ಎಂಬ ಜ್ಞಾನದ ಇಲ್ಲದಿರುವಿಕೆಯು)

ಈ ಮೂರು ಕಾರಣಗಳಿಂದಲೇ ವಿಶಿಷ್ಟಪ್ರತ್ಯಯವು (ವಿಶಿಷ್ಟಬುದ್ಧಿಯು) ಹುಟ್ಟುತ್ತದೆಯೆಂದು ಪ್ರಾಚೀನ ನೈಯಾಯಿಕರು ಹೇಳುತ್ತಾರೆ.

ಈ ರೀತಿ ೧. ವಿಶೇಷಣಜ್ಞಾನ, ೨. ವಿಶೇಷ್ಯದ ಇಂದ್ರಿಯಸನ್ನಿಕರ್ಷ, ೩. ವಿಶೇಷ್ಯ ವಿಶೇಷಣಗಳ ಅಸಂಸರ್ಗಾಗ್ರಹಗಳೆಂಬ ಮೂರು ಕಾರಣಗಳಿಂದಲೇ ವಿಶಿಷ್ಟಬುದ್ಧಿಯು ಹುಟ್ಟುವದರಿಂದ ವಿಶಿಷ್ಟಬುದ್ಧಿಯನ್ನು ಕುರಿತು ವಿಶೇಷಣವಿಶೇಷ್ಯಗಳ ಸಂಸರ್ಗಜ್ಞಾನವೂ ಸಹ ಕಾರಣ ಎಂದು ಪ್ರತ್ಯೇಕ ಹೇಳಬೇಕು ಎಂದು ಪ್ರಾಚೀನತಾರ್ಕಿಕರ ಅಭಿಪ್ರಾಯವಾಗಿದೆ. ಇದು ಯುಕ್ತಿಯುಕ್ತವಾದ ಕ್ರಮವಲ್ಲ. ವಿಶಿಷ್ಟಪ್ರತ್ಯಯದಲ್ಲಿ ವಿಶೇಷಣ ಮತ್ತು ವಿಶೇಷ್ಯಗಳಿಗೆ ಸ್ವರೂಪೇಣಭಾನವನ್ನು ಒಪ್ಪಲು ಸಾಧ್ಯವಲ್ಲ. ಹಾಗೆ ಹೇಳಿದರೆ ಅವನ ಮತದಲ್ಲಿ ಅಂತಹ ಸ್ವರೂಪದಿಂದ ಭಾಸಮಾನವಾದ ವಿಶಿಷ್ಟ ಪ್ರತ್ಯಯಕ್ಕೂ ಅವನು (ನೈಯಾಯಿಕನು) ಹೇಳತಕ್ಕ ನಿರ್ವಿಕಲ್ಪಕಕ್ಕೂ ವ್ಯತ್ಯಾಸವೇ ಇಲ್ಲವಾದೀತು.

ದಂಡೀ ಪುರುಷ ಎಂಬಂತೆ "ಪುರುಷಃ ದಂಡಃ" ಎಂಬ ಪ್ರತ್ಯಯವೂ ಬರಬೇಕಾಗುತ್ತದೆ. ಅದರ ಹಾಗೆ ಬರುತ್ತಿಲ್ಲ. ಆದಕಾರಣ ವಿಶೇಷಣತಾ, ವಿಶೇಷ್ಯತಾವಗಾಹಿಯಾದ ವಿಶಿಷ್ಟಪ್ರತ್ಯಯಕ್ಕೆ ಸಂಸರ್ಗಗ್ರಹಕಾರಣತ್ವವನ್ನು ಪ್ರಾಚೀನ ನೈಯ್ಯಾಯಿಕರು ಅಂಗೀಕರಿಸಬೇಕಾಗುತ್ತದೆ.

ಅವರು ಹೇಳತಕ್ಕ ಮೂರು ಅಂಶಗಳೂ ಅಂದರೆ ವಿಶಿಷ್ಟಜ್ಞಾನಕ್ಕೆ ಕಾರಣಗಳಾದ ಮೂರೂ ಅಂಶಗಳೂ "ದಂಡ, ಪುರುಷ, ಸಂಬಂಧಾಃ " ಎಂಬ ಸಮೂಹಾಲಂಬನಜ್ಞಾನದಲ್ಲಿ ತೋರುವುದರಿಂದ ಅದಕ್ಕೂ ವಿಶಿಷ್ಟಬುದ್ಧಿಗೂ ವ್ಯತ್ಯಾಸವೇ ಇಲ್ಲದಾಗಬೇಕಾದೀತು.

ಸಮೂಹಾಲಂಬನಜ್ಞಾನದಲ್ಲಿ ಸಂಬಂಧವು ಸ್ವತಂತ್ರವಾಗಿ ತೋರುತ್ತದೆ. ವಿಶಿಷ್ಟಬುದ್ಧಿಯಲ್ಲಾದರೋ ದಂಡಾದಿ ವಿಶೇಷಣ ನಿರೂಪಿತತಯಾ ತೋರುತ್ತದೆಯೆಂದು ವ್ಯತ್ಯಾಸವನ್ನು ಹೇಳಿ ಹಿಂದೆ ಹೇಳಿದ ದೋಷವನ್ನು ಪರಿಹರಿಸುವುದಾದರೆ, ಈ ಬಗೆಯಾದ ಪರಿಹಾರ ಕ್ರಮದಿಂದಲೇನೇ ವಿಶಿಷ್ಟಬುದ್ಧಿಯಲ್ಲಿ ಸಂಬಂಧನಿರೂಪಕತಯಾ ವಿಶೇಷಣದ ಜ್ಞಾನವನ್ನು ಒಪ್ಪಿಕೊಂಡಂತಾಗಿ ವಿಶೇಷಣತಾಮತಿಗೆ ಕಾರಣವಾಗಿ ಸಂಬಂಧಜ್ಞಾನವನ್ನು ಹೇಳಲೇ ಬೇಕಾಗುವದರಿಂದ ಪ್ರಾಚೀನನೈಯ್ಯಾಯಿಕರ ಪ್ರಕ್ರಿಯೆಯು ಸುಸಂಗತವಾದುದಲ್ಲ. ಆದಕಾರಣ ವಿಶಿಷ್ಟಬುದ್ಧಿಯಲ್ಲಿ ಸಂಬಂಧವು ಸ್ವರೂಪದಿಂದ ಭಾಸವಾಗುತ್ತದೆಯೆಂಬ ಪ್ರಾಚೀನ ಮತವು ನಿರಾಕೃತವಾಯಿತು. ಅದ್ದರಿಂದಲೇ ನವೀನ ನೈಯಾಯಿಕರು "ಪ್ರಕಾರತ್ವದ ಪರಿಷ್ಕಾರದಲ್ಲಿ" "ಭಾಸಮಾನವೈಶಿಷ್ಟ್ಯಪ್ರತಿಯೋಗಿತ್ವಂ ಪ್ರಕಾರತ್ವಂ" ಎಂಬುದಾಗಿ ಹೇಳಿ ಭಾಸಮಾನತ್ವವನ್ನು ಪ್ರತಿಯೋಗಿತ್ವಕ್ಕೆ ವಿಶೇಷಣವಾಗಿ ಹೇಳಿರುವರು. ಶಾಬ್ದವಾದ ವಿಶಿಷ್ಟಬುದ್ಧಿಯಲ್ಲಿಯೂ ಸಹ ಶಬ್ದಶಕ್ತಿಯಿಂದಲೇ ಸಂಸರ್ಗವು ತೋರುತ್ತದೆ. ಪಾಣಿನ್ಯಾಚಾರ್ಯರೂ ಸಹ "ಸಮರ್ಥಃ ಪದವಿಧಿಃ" ಎಂಬಲ್ಲಿ ಇತಿಕರಣದಿಂದ ಸ್ಪಷ್ಟಪಡಿಸುತ್ತಾರೆ. ಶ್ರೀಮದಾನಂದ ತೀರ್ಥಭಗವತ್ಪಾದರು "ಸ್ವಾತಂತ್ರ್ಯಂ ತದ್ವಿಶಿಷ್ಟತ್ವಂ ಶಬ್ದವೃತ್ತೇರ್ಹಿಕಾರಣಾತ್ " (ಅನುವ್ಯಾಖ್ಯಾನ) ಎಂದು ಅನುವ್ಯಾಖ್ಯಾನದಲ್ಲಿ ಹೇಳಿರುವರು.

-

ಹಿಂದೆ ತಿಳಿಸಿದಂತೆ ಗುಣಗುಣಿಗಳಿಗೂ, ಅತ್ಯಂತಭೇದವನ್ನು ಹೇಳತಕ್ಕ ನೈಯಾಯಿಕರೂ, ಭೇದಾಭೇದವನ್ನು ಹೇಳತಕ್ಕ ವಾದಿಗಳೂ, ಐಕ್ಯವಾದಿಗಳೂ ಸಹ ಅನವಸ್ಥಾದೋಷವನ್ನು ಒಪ್ಪಲೇಬೇಕೆಂದು ಪರಮಾಭಿಪ್ರಾಯ.

ಆದಕಾರಣ ಭಗವಂತನಿಗೂ ಆತನ ಗುಣಾದಿಗಳಿಗೂ ಸವಿಶೇಷಾಭೇದವನ್ನು ಅಂಗೀಕರಿಸುವುದೇ ಉಚಿತವಾದ ಮಾರ್ಗವೆಂದೂ, ಆ ವಿಶೇಷವು ವಿಶೇಷಿಗಿಂತಲೂ ಬೇರೆ ಅಲ್ಲದೆ ವಿಶೇಷಿಯ ಸ್ವರೂಪವೇ ಆದಾಗ್ಯೂ, ಅದಕ್ಕೆ ಸ್ವನಿರ್ವಾಹಕತೆಯ ಅಂದರೆ ಅಭಿನ್ನವಾದುವುಗಳಿಗೆ ಭೇದವ್ಯವಹಾರವನ್ನು ನಿರ್ವಹಿಸುವ ಶಕ್ತಿಯೂ ಇರುವದರಿಂದ ಇಂತಹ ಸ್ವನಿರ್ವಾಹಕತಾಶಕ್ತಿಯುತವಾದ ವಿಶೇಷವನ್ನು ಒಪ್ಪುವುದೇ ಋಜುಮಾರ್ಗವೆಂದು ಬ್ರಹ್ಮತರ್ಕ ವಚನವು ತಿಳಿಸುತ್ತಲಿದೆ.

ಪರಮಾತ್ಮನಲ್ಲಿ ಅವನಿಗಿಂತಲೂ, (ಪರಮಾತ್ಮನಿಗಿಂತಲೂ ಭಿನ್ನವಾದ) ಗುಣವಾಗಲೀ, ಕ್ರಿಯೆಯಾಗಲೀ, ಯಾವುದೇ ಧರ್ಮವಾಗಲಿ, ಕೈ, ಕಾಲು ಮೊದಲಾದ ಅವಯವವಾಗಲಿ, ಭಿನ್ನವಾದುದು ಇಲ್ಲವೆಂದು ಶ್ರುತಿವಾಕ್ಯವು ಘಂಟಾಘೋಷವಾಗಿ ಹೇಳುತ್ತಿದೆ.

**"ಏಕಮೇವಾದ್ವಿತೀಯಂ ತತ್"**

**ಅರ್ಥ** :- ತತ್ = ಆ ಪರಬ್ರಹ್ಮನು(ವಸ್ತುವು), ಏಕಮೇವ = ಸ್ವಗತವಾದ ಅವಯವಾದಿಗಳಿಂದ ಭೇದವಿಲ್ಲದಿರುವವನು ಹೇಗೋ ಹಾಗೆಯೇ ಭೇದಾಭೇದವನ್ನೂ ಇಲ್ಲದಿರುವವನಾಗಿದ್ದಾನೆ.

ಅದ್ವಿತೀಯ = (ಅವನಿಗೆ) ಸಮರಾಗಲೀ, ಅಧಿಕರಾಗಲೀ ಇಲ್ಲದಿರುವವನು, ಅವನಿಗೆ ಸಮರೂ ಇಲ್ಲ. ಅಧಿಕರಂತೂ ಇಲ್ಲವೇ ಇಲ್ಲ ಎಂದು ಅಭಿಪ್ರಾಯ.

ಪರಮಾತ್ಮನಲ್ಲಿ ನಾನಾಗುಣಗಳಿವೆ, ಕ್ರಿಯೆಗಳೂ ಇವೆ, ಅವಯವಗಳೂ ಇವೆ. ಅವನಿಗೆ ಅನಂತಾನಂತ ರೂಪಗಳೂ ಇವೆ. ಆದರೆ ಅವನಿಗೂ ಅವನ ಗುಣಾದಿಗಳಿಗೂ ಭೇದವಾಗಲಿ, ಭೇದಾಭೇದವಾಗಲಿ ಇರುವುದಿಲ್ಲ. ಸವಿಶೇಷಾಭೇದವು ಉಂಟೆಂದು ಈ ಶ್ರುತಿವಾಕ್ಯವು ತಿಳಿಸುತ್ತಲಿದೆ.

**ನೇಹನಾನಾಸ್ತಿಕಿಂಚನ ।**
**ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ ।ಇತಿಕಾಠಕೇ ॥**

**ಅರ್ಥ** :- ಇಹ = ಈ ಬ್ರಹ್ಮನಲ್ಲಿ, ಕಿಂಚನ = ಯಾವದೊಂದು ಗುಣಾದಿಗಳು, (ಗುಣ, ಕ್ರಿಯಾ, ಅವಯವಾದಿಗಳು ಉಂಟೆಂದು ಶ್ರುತಿವಾಕ್ಯಗಳಲ್ಲಿ ಪ್ರತಿಪಾದಿಸಲ್ಪಟ್ಟವೆಯೋ ಅವನಿಗೆ ಸಂಬಂಧಿಸಿದ ಅವುಗಳೆಲ್ಲವೂ). ನಾನಾ = ಭಿನ್ನವಾದುದು (ಅವನಿಗಿಂತಲೂ ಭಿನ್ನವಾದುದು), ನಾಸ್ತಿ = ಇಲ್ಲವು.

ಇಷ್ಟು ಮಾತ್ರ ಹೇಳದೇ ಈ ಶ್ರುತಿವಾಕ್ಯವು ಯಾವನು ಪರಮಾತ್ಮನಿಗೂ ಅವನ ಗುಣ, ಕ್ರಿಯಾದಿಗಳಿಗೂ ಭೇದವನ್ನಾಗಲಿ, ಭೇದಾಭೇದವನ್ನಾಗಲಿ ತಿಳಿಯುತ್ತಾನೋ (ನೋಡುತ್ತಾನೆಯೋ) ಅವನಿಗೆ ನಿತ್ಯನರಕವೆಂಬ ಅನರ್ಥವನ್ನು ಅಧಿಕವಾಗಿ ತಿಳಿಸುತ್ತಲಿದೆ. ಆ ವಾಕ್ಯವು ಈ ರೀತಿ ಇದೆ.

**"ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ" ॥ (ಕಾಠಕಶ್ರುತಿಃ)**

**ಅರ್ಥ** :- ಯಃ = ಯಾವ ಚೇತನನು, ಇಹ = ಈ ಬ್ರಹ್ಮನಲ್ಲಿ (ಗುಣಕ್ರಿಯಾದಿಗಳಿಂದ ಸವಿಶೇಷಾ ಭಿನ್ನನಾದ ಬ್ರಹ್ಮನಲ್ಲಿ), ನಾನೇವ = ಭಿನ್ನಾಭಿನ್ನವಾದ ಗುಣಾದಿಗಳನ್ನು, ಪಶ್ಯತಿ = ನೋಡುತ್ತಾನೆಯೋ, ಸಃ = ಅಂತಹವನು. (ಆತನು) ಮೃತ್ಯೋಃ = ಮರಣಾನಂತರದಲ್ಲಿ, ಮೃತ್ಯುಂ = ನಿತ್ಯವಾದ ನರಕವನ್ನು, ಆಪ್ನೋತಿ = ಹೊಂದುತ್ತಾನೆ.

ಪರಮಾತ್ಮನಿಗಿಂತಲೂ ಪ್ರತ್ಯೇಕವಾಗಿ (ಭಿನ್ನವಾಗಿ)ಆ ಭಗವಂತನ ಧರ್ಮಗಳನ್ನು ಕಾಣತಕ್ಕ ಪುರುಷನಿಗೂ, ಅಧರ್ಮ ಗಳಿಗೂ ಭೇದವನ್ನು ಕಾಣತಕ್ಕ ಪುರುಷನಿಗೂ ಲೌಕಿಕದೃಷ್ಟಾಂತವನ್ನು ತೋರಿಸಿ ಕಾಠಕ ಶ್ರುತಿವಾಕ್ಯವು ಎಚ್ಚರಿಸುತ್ತಲಿದೆ.

**"ಯಥೋದಕಂ ದುರ್ಗೇ ವೃಷ್ಟಂ ಪರ್ವತೇಷು ವಿಧಾವತಿ ।**
**ಏವಂ ಧರ್ಮಾನ್ ಪೃಥಕ್ ಪಶ್ಯನ್ ತಾನೇವಾನುವಿಧಾವತಿ" ॥ (ಇತಿ ಕಾಠಕಶ್ರುತಿಃ)**

**ಅರ್ಥ** :-ಯಥಾ = ಹೇಗೆ, ಪರ್ವತೇಷು = ಪರ್ವತಗಳಲ್ಲಿ (ಅತ್ಯುನ್ನತವಾದ ಜಾಗದಲ್ಲಿ), ದುರ್ಗೇ = ಶಿಖರ ಸ್ಥಾನದಲ್ಲಿ, ವೃಷ್ಟಂ = ಸುರಿಸಲ್ಪಟ್ಟ (ಮಳೆಯಿಂದ ಸುರಿಸಲ್ಪಟ್ಟ) ಉದಕಂ = ನೀರು, ವಿಧಾವತಿ = ಕೆಳಗಡೆಗೆ ನಾನಾ ಬಗೆಯಾಗಿ ಓಡಿಹೋಗುತ್ತದೆಯೋ (ಕೆಳಗಡೆ ಹರಿದುಹೋಗುತ್ತದೆಯೋ), ಏವಂ = ಹೀಗೆ, ಧರ್ಮಾನ್= ಭಗವಂತ ನಾದ (ಶ್ರೀಮನ್ನಾರಾಯಣನ ಅನಂತ ಧರ್ಮಗಳನ್ನು), ಪೃಥಕ್ ಅವನಿಗಿಂತಲೂ ಭಿನ್ನವಾಗಿ ಪ್ರತ್ಯೇಕವಾಗಿ, ಪರಮಾತ್ಮ ನಿಂದಲೂ ಪರಸ್ಪರವಾಗಿಯೂ ಭಿನ್ನಭಿನ್ನವಾಗಿ ಬೇರೆಬೇರೆಯಾಗಿ, ಪಶ್ಯನ್ = ಕಾಣತಕ್ಕ ಪುರುಷನು, ತಾನ್ ಅನು ಏವ = ಅವುಗಳನ್ನು ನೋಡಿದ ಅನಂತರದಲ್ಲಿಯೇ, ವಿಧಾವತಿ = ನಿತ್ಯವಾದ, ತಾಮಿಸ್ರ, ಅಂಧತಾಮಿಸ್ರಗಳೆಂಬ ನರಕಕ್ಕೆ ಹೋಗುತ್ತಾನೆ. ಎಂದು ಕಾಠಶ್ರುತಿ ವಚನವು ಎಚ್ಚರಿಸುತ್ತಲಿದೆ.

ಮೊದಲನೆಯ ವಾಕ್ಯದಲ್ಲಿ "ಪರಮಾತ್ಮನು ನಿರ್ಗುಣನಾಗಿ ಅವನಲ್ಲಿ ಯಾವುದು ಇಲ್ಲವಾಗಿದ್ದರೆ " "ನೇಹಾನ್ಸ್ತಿ ಕಿಂಚನ " ಎಂದೇ ಶ್ರುತಿವಾಕ್ಯವು ಇರಬೇಕಾದೀತು. ಆದರೆ ಹಾಗಿಲ್ಲ. ಆಗ ನಾನಾಪದವು ವ್ಯರ್ಥವೇ ಆಗುವದು

ಆ ಪಕ್ಷದಲ್ಲಿ ಅಂದರೆ ಪರಮಾತ್ಮನಲ್ಲಿ ಧರ್ಮವೇ ಇಲ್ಲವೆಂಬ ಪಕ್ಷದಲ್ಲಿ ಎರಡನೇ ವಾಕ್ಯದಲ್ಲಿ "ಪೃಥಕ್" ಎಂಬ ಪದವೂ ವ್ಯರ್ಥವಾದೀತು.

ಆದಕಾರಣ ಭಗವಂತನಲ್ಲಿ ಗುಣಗಳಿವೆ. ಅವಯವಗಳೂ, ಕ್ರಿಯಾದಿಗಳೂ ಅನಂತರೂಪಗಳೂ, ಧರ್ಮಗಳೂ ಅನಂತಾನಂತಗಳಿವೆ.

ಆದರೆ ಅವೆಲ್ಲವೂ ಭಿನ್ನಗಳೂ ಅಲ್ಲ. ಭಿನ್ನಾಭಿನ್ನಗಳೂ ಅಲ್ಲ ಎಂಬುದೇ ಶ್ರುತಿಯ ಪರಮ ತಾತ್ಪರ್ಯವಾಗಿದೆ. ಈ ಶ್ರುತಿಯಿಂದಲೂ ಸಹ ವಿಶೇಷವು ಉಂಟೆಂದು ತಿಳಿಯಲ್ಪಡುತ್ತದೆ.

ಭಗವಂತನ ಗುಣಾದಿಗಳಿಗೆ ಭಗವಂತನಿಂದ ಭೇದವು ಇಲ್ಲದೇ ಇದ್ದಾಗ್ಯೂ, ವಿಶೇಷ ಶಕ್ತಿಯಿಂದ ಸಂಬಂಧಿತ್ವ ಮೊದಲಾದ ವ್ಯವಹಾರವು ಯುಕ್ತವಾಗಿರುತ್ತದೆಯೆಂಬ ವಿಶೇಷಾಂಶವನ್ನು ದೃಷ್ಟಾಂತವಾಗಿ (ಉದಾಹರಣೆಯ ಮೂಲಕ ವಾಗಿ) ಪರಮಾತ್ಮನಿಗೆ ಗುಣಿತ್ವವನ್ನೂ ಗುಣಭೋಕ್ತೃತ್ವವನ್ನೂ ಸಮರ್ಥಿಸುವ ಬ್ರಹ್ಮತರ್ಕವಚನವನ್ನು ಶ್ರೀಮದಾ ಚಾರ್ಯರು ಉದಾಹರಿಸಿ ಅನೇಕ ಶಂಕೆಗಳನ್ನು ಪರಿಹರಿಸುತ್ತಾರೆ.

-

"ದೇಶಃ ಸರ್ವತ್ರ, ಪುರುಷಃ ಸ್ವತಂತ್ರಃ ಕಾಲನಿತ್ಯತಾ ।
ಇತ್ಯಾದಿಷು ಸ್ವಸಂಬಂಧಾತ್ ಯಥೈವ ಗುಣರೂಪಿಣಃ ॥
ಗುಣಿತ್ವಂ ಗುಣಭೋಕ್ತೃತ್ವಂ ಸ್ಯಾತ್ ವಿಷ್ಣೋಃ ತಚ್ಚ ಸ ಸ್ವಯಮ್ ॥
॥ಇತಿ ಬ್ರಹ್ಮತರ್ಕೇ ॥

ಅರ್ಥ:- ಪಕ್ಷಿಯು ಸರ್ವತ್ರ ಆಕಾಶದಲ್ಲಿ ಹಾರುತ್ತದೆ ಎಂದು ಹೇಳುವುದರಿಂದ ಪಕ್ಷಿಗೆ ಎಲ್ಲಾ ಆಕಾಶದ ಸಂಬಂಧವು ತೋರುತ್ತದೆ ಹೇಗೋ ಹಾಗೋಯೇ, ದೇಶಃ = ಆಕಾಶವು, ಸರ್ವತ್ರ = ಎಲ್ಲಾ ಕಡೆಗಳಲ್ಲಿ ಅವಕಾಶವಿದೆ ಎಂಬುದಾಗಿ ಆಕಾಶಕ್ಕೆ ಸರ್ವಾಕಾಶಸಂಬಂಧವು ತೋರುತ್ತದೆ. ಸ್ವಸ್ವಸ್ವಸಂಬಂಧದಲ್ಲಿ = ತನಗೆ ತನ್ನಲ್ಲಿಯೇ ಸಂಬಂಧವಿರುವಿಕೆಯಲ್ಲಿ ದೇಶಃ (ಆಕಾಶವು) ಸರ್ವತ್ರಾಸ್ತಿ = ಸರ್ವಾಕಾಶ ಸಂಬಂಧವುಳ್ಳದುದಾಗಿದ ಎಂಬುದು ಒಂದು ಉದಾಹರಣೆ.

ಹೇಗೆ ಶಿಷ್ಯನು ಗುರುತಂತ್ರನು ಎಂದು ಹೇಳಿದರೆ, ಶಿಷ್ಯನಿಗೆ ಗುರುವಿನಿಂದ ಸಂಬಂಧವು ತೋರುತ್ತದೆಯೋ, ಅದರಂತೆ ಪರಮಪುರುಷನಾದ ಭಗವಂತನು ಸ್ವತಂತ್ರನು ಅಂದರೆ ಸ್ವ = ತನಗೆ, ತಂತ್ರನು = ಅಧೀನನು ಎಂದು ಶ್ರೀಹರಿಗೆ ತನ್ನ ಸಂಬಂಧವೇ ತೋರುವುದು.

ಆಕಾಶಕ್ಕೆ ಹೇಗೆ ಸರ್ವಕಾಲ ಸಂಬಂಧವುಳ್ಳತನವೆಂಬ ನಿತ್ಯತ್ವವು "ಆಕಾಶಃ ಸದಾ ಅಸ್ತಿ" ಎಂಬುದರಿಂದ ತೋರುತ್ತದೆಯೋ, ಅದರಂತೆ "ಕಾಲಃ ಸದಾ ಅಸ್ತಿ", "ಕಾಲಃ ಸರ್ವದಾ ಅಸ್ತಿ" ಎಂಬ ಪ್ರತೀತಿಯ ಬಲದಿಂದ ಕಾಲಕ್ಕೂ ನಿತ್ಯತ್ವವು, ಸರ್ವಕಾಲಸಂಬಂಧಿತ್ವರೂಪವಾದುದು ತೋರುತ್ತದೆಯೋ ಹಾಗೆಯೇ, ಅದರಂತೆ ವಿಶೇಷಬಲಾತ್ ವಿಶೇಷದ ನಿಮಿತ್ತದಿಂದ ಗುಣರೂಪಿಯಾದ ಪರಮಾತ್ಮನಿಗೆ "ಆನಂದಭುಕ್" ಇತ್ಯಾದಿ ಶ್ರುತಿಗಳಲ್ಲಿ ಗುಣ ಭೋಕ್ತೃತ್ವವೂ ಶ್ರುತವಾಗಿದೆ.

ಅದಕ್ಕೆ ನಿಮಿತ್ತವೇನೆಂದರೆ ಆ ವಿಷ್ಣುವು ಸ್ವಯಮೇವ ನಿಮಿತ್ತವೆಂದೇ ಸಮಾಧಾನ "ತಚ್ಚ ನಿಮಿತ್ತಂ ಸ ವಿಷ್ಣುಃ ಸ್ವಯಮೇವ" (ಎಂದು ಟೀಕಾವಾಕ್ಯವಿದೆ.) ಈ ರೀತಿ ಬ್ರಹ್ಮತರ್ಕವಚನವು ಭಗವಂತನಿಗೆ ಆಕಾಶ ದೃಷ್ಟಾಂತದಿಂದ, ಕಾಲದೃಷ್ಟಾಂತದಿಂದ ಸ್ವಗತತ್ವಸರ್ವಗತತ್ವವನ್ನೂ ಗುಣರೂಪತ್ವ, ಗುಣಭೋಕ್ತೃತ್ವವನ್ನೂ ವಿವರಿಸುತ್ತಲಿದೆ.

ಪರಮಶ್ರುತಿವಚನವೂ ಸಹ ಭಗವಂತನಾದ ಶ್ರೀಹರಿಯು ಸರ್ವಗುಣಪರಿಪೂರ್ಣನು ಎಂದು ತಿಳಿದರೇನೇ ಸಂಸಾರದಿಂದ ಬಿಡುಗಡೆಯನ್ನು ಪಡೆದು ಮೋಕ್ಷವನ್ನು ಅಧಿಕಾರಿಚೇತನನು ಪಡೆಯುತ್ತಾನೆಂದೂ ಸಕಲಮುಕ್ತರಿಗೂ ಆಶ್ರಯನೆಂದೂ ಸರ್ವರಿಗೂ ನಿಯಾಮಕನೆಂದೂ, ಬ್ರಹ್ಮಾದಿ ಸಕಲಚೇತನರೂ ಯಾವಾಗಲೂ ಸಹ ಆ ಭಗವಂತನಿಗೆ ಅಧೀನರೇ ಆಗಿರುವರೆಂದೂ ಇಂತಹ ಪರಮಾತ್ಮನು ಯಾವಾಗಲೂ ಅನಂತಕಲ್ಯಾಣಗುಣಪರಿಪೂರ್ಣನೆಂದೂ, ಸಕಲ ದೋಷರಹಿತನೆಂದೂ ಪ್ರತಿಪಾದಿಸುತ್ತಲಿದೆ.

"ವಿಷ್ಣುಂ ಸರ್ವಗುಣೈಃ ಪೂರ್ಣಂ ಜ್ಞಾತ್ವಾ ಸಂಸಾರವರ್ಜಿತಃ ।
ನಿರ್ದುಃಖಾನಂದಭುಕ್ ನಿತ್ಯಂ ತತ್ಸಮೀಪೇ ಸ ಮೋದತೇ ।।
ಮುಕ್ತಾನಾಂ ಚಾಶ್ರಯೋ ವಿಷ್ಣುಃ ಅಧಿಕೋಽಧಿಪತಿಸ್ತಥಾ ।
ತದ್ವಶಾ ಏವ ತೇ ಸರ್ವೇ ಸರ್ವದೈವ ಸ ಈಶ್ವರಃ ।। (ಇತಿಪರಮಶ್ರುತಿಃ)

**ಅರ್ಥ** :- ಸಃ = ಆ ಜ್ಞಾನಿಯು, ವಿಷ್ಣುಂ = ಶ್ರೀಹರಿಯನ್ನು, ಸರ್ವಗುಣೈಃ = ಸಕಲ ಗುಣಗಳಿಂದಲೂ, ಪೂರ್ಣಂ = ಪರಿಪೂರ್ಣನೆಂಬುದಾಗಿ, ಜ್ಞಾತ್ವಾ = ತಿಳಿದು, ಸಂಸಾರವರ್ಜಿತಃ = (ಹಿಂದೆ ತಿಳಿಸಿದ ಜ್ಞಾನದಿಂದ ಪ್ರಸನ್ನನಾದ ಪರಮಾತ್ಮನ ಪರಮಾನುಗ್ರಹದಿಂದ) ಜನನ ಮರಣ ಪರಂಪರೆಯಿಂದ ದುಃಖಮಯವಾದ ಸಂಸಾರದಿಂದ ರಹಿತನಾಗಿ, ನಿರ್ದುಃಖಾನಂದಭುಕ್ = ದುಃಖದ ಲೇಶದಿಂದ ರಹಿತವಾದ ತನ್ನ ಸ್ವರೂಪಾನಂದವನ್ನು ಅನುಭವಿಸುತ್ತಾ, ನಿತ್ಯಂ = ಯಾವಾಗಲೂ, ತತ್ಸಮೀಪೇ = ಆ ಪರಬ್ರಹ್ಮನಾದ ಶ್ರೀಹರಿಯ ಸಮೀಪದಲ್ಲಿಯೇ, ಮೋದತೇ = ಸಂತೋಷದಿಂದಿರುತ್ತಾನೆ. ಆನಂದಾನುಭವವುಳ್ಳವನಾಗಿರುತ್ತಾನೆ. ವಿಷ್ಣುವು = ದೇಶ, ಕಾಲ, ಗುಣಗಳಿಂದ ಪರಿಪೂರ್ಣನಾದ, ಸಕಲ ಚೇಷ್ಟಕನಾದ ಶ್ರೀಹರಿಯು, ಮುಕ್ತಾನಾಂ ಚ = ಮುಕ್ತರಿಗೂ ಕೂಡ, ಆಶ್ರಯಃ = ಆಶ್ರಯನು, ಅಧಿಕಃ = ಸರ್ವೋತ್ತಮನು, ತಥಾ = ಹಾಗೆಯೇ, ಅಧಿಪಃ = ಸರ್ವರಿಗೂ ನಿಯಾಮಕನು, ತೇ = ಆ, ಸರ್ವೇ = ಬ್ರಹ್ಮಾದಿಗಳೆಲ್ಲರೂ, ಸರ್ವದೈವ = ಯಾವಾಗಲೂ, ಅಮುಕ್ತ ದಶೆಯಲ್ಲಿಯೂ, ಮುಕ್ತಿಯಲ್ಲೂ ಕೂಡ, ತದ್ವಶಾ ಏವ = ಆ ಸರ್ವೋತ್ತಮನಾದ ಸರ್ವನಿಯಾಮಕನಾದ ಪರಮಾತ್ಮನಿಗೆ ಅಧೀನರೇ ಆಗಿರುತ್ತಾರೆ. ಆದಕಾರಣ, ಸ ಏವ = ಆ ಪರಮಾತ್ಮನೇ, ಸರ್ವದಾ = ಯಾವಾಗಲೂ, ಈಶ್ವರಃ = ದೋಷರಹಿತನಾದ ಅನಂತಕಲ್ಯಾಣಗುಣಪರಿಪೂರ್ಣನಾದ ಸ್ವಾಮಿಯಾಗಿದ್ದಾನೆ ಎಂಬುದಾಗಿ ಮತ್ತೊಂದು ಪರಮಶ್ರುತಿ ವಚನವು ಹೇಳುತ್ತಲಿದೆ.

ಪಾದ್ಮಪುರಾಣದಲ್ಲಿ ಉದಾಹೃತವಾಗಿರುವ ಶ್ರುತಿಯು ಮೋಕ್ಷದಲ್ಲಿಯೂ ಸಹ ತಾರತಮ್ಯವುಂಟೆಂಬುದಾಗಿ ತಿಳಿಸುತ್ತಲಿದೆ.

**"ನೃಪಾದ್ಯಾಃ ಶತಧೃತ್ಯಂತಾ ಮುಕ್ತಾಃ ಉತ್ತರೋತ್ತರಂ ।**
**ಗುಣೈಃ ಸರ್ವೈಃ ಶತಗುಣಾಃ, ಮೋದಂತ ಇತಿ ಹಿ ಶ್ರುತಿಃ ॥ ಇತಿ ಪಾದ್ಮೇ ॥**

**ಅರ್ಥ** :- ನೃಪಾದ್ಯಾಃ = ಮನುಷ್ಯರು ಚಕ್ರವರ್ತಿಗಳು ಮೊದಲಾದ, ಅಂದರೆ "ದೇವರ್ಷಿಪಿತೃಪನರಾಃ" ಎಂಬ ಮುಕ್ತಿ ಯೋಗ್ಯ ವರ್ಗಕ್ಕೆ ಸೇರಿದ, ಶತಧೃತ್ಯಂತಾಃ = ಚತುರ್ಮುಖಬ್ರಹ್ಮಪರ್ಯಂತವಾಗಿರುವ, ಮುಕ್ತಾಃ = ಮುಕ್ತಿಯಲ್ಲಿರುವವರು, ಉತ್ತರೋತ್ತರಂ = ಮೇಲುಮೇಲೆ, ತಾರತಮ್ಯಕ್ರಮದಿಂದ ಮೇಲುಮೇಲು ಮಟ್ಟಕ್ಕೆ ಸೇರಿದವರು, ಸರ್ವೈಃ = ಎಲ್ಲಾ, ಗುಣೈಃ = ಗುಣಗಳಿಂದ, ಶತಗುಣಾಃ = ನೂರು ಮಡಿ ಆನಂದವುಳ್ಳವರಾಗಿ, ಮೋದಂತೆ = ಸಂತೋಷಪಡುತ್ತಾರೆ. ಇತಿ ಹಿ ಶ್ರುತಿಃ = ಈ ರೀತಿಯಾಗಿ ಶ್ರುತಿಯು ಇರುತ್ತದೆ. ಇತಿ = ಹೀಗೆ, ಪಾದ್ಮೇ = ಪಾದ್ಮ ಪುರಾಣದಲ್ಲಿ ಉಕ್ತವಾಗಿದೆ.

ಗುಣಾಗುಣಗಳಿಗೆ ಸವಿಶೇಷಾಭೇದವನ್ನು ಹಿಂದಿನ ಬ್ರಹ್ಮತರ್ಕ ವಚನಗಳಿಂದ ನಿರೂಪಿಸಲಾಗಿದೆ.

ಈ ವಿಷಯದಲ್ಲಿ ನೈಯ್ಯಾಯಿಕರ ಆಕ್ಷೇಪವನ್ನು ತೋರಿಸಿ ಅನುವ್ಯಾಖ್ಯಾನದಲ್ಲಿ ಆ ತಾರ್ಕಿಕರ ಪ್ರಕ್ರಿಯೆಯನ್ನು ನಿರಾಕರಿಸಿದ್ದಾರೆ.

ತಾರ್ಕಿಕರ ಪ್ರಕ್ರಿಯೆಯು ಈ ರೀತಿ ಇದೆ.

**ಕಾರ್ಯಕಾರಣಯೋಶ್ಚೈವ ಗುಣಾದೇಃ ಜಾತಕಸ್ಯ ಚ ।**
**ಭಿನ್ನಸ್ಯೈವ ತು ಸಂಬಂಧಃ ಸಮವಾಯೋಽಸ್ಯ ಕಥ್ಯತೇ ॥ ಇತಿ ಅನುವ್ಯಾಖ್ಯಾನೇ ॥**

-

**ಅರ್ಥ** :- ಕಾರ್ಯಕಾರಣಯೋಶ್ಚೈವ = ಕಾರ್ಯಕಾರಣಗಳಿಗೂ, ಗುಣಾದೇಃ ಪಂಚಕಸ್ಯ ಚ = ಗುಣಕ್ಕೂ, ಕರ್ಮಕ್ಕೂ, ಸಾಮಾನ್ಯಕ್ಕೂ, ವಿಶೇಷಕ್ಕೂ, ಅವಯವಿಗೂ, (ಅಂದರೆ ಗುಣಕ್ಕೂ ಗುಣಿಗೂ, ದ್ರವ್ಯಕ್ಕೂ ಕರ್ಮಕ್ಕೂ ದ್ರವ್ಯಕ್ಕೂ ಜಾತಿಗೂ, ನಿತ್ಯದ್ರವ್ಯಕ್ಕೂ ವಿಶೇಷಕ್ಕೂ, ಅವಯವಕ್ಕೂ ಅವಯವಿಗೂ), ಭಿನ್ನಸ್ಯೈವತು = ಅತ್ಯಂತ ಭಿನ್ನವಾದುದಕ್ಕೇನೇ, ಸಂಬಂಧಃ = ಸಂಬಂಧವು, ಸಮವಾಯಃ = ಸಮವಾಯವು, ಅನ್ಯಃ = ಭಿನ್ನವಾದುದೆಂದು, ಈರ್ಯತೇ = ವೈಶೇಷಿಕಾದಿಗಳಿಂದ ಹೇಳಲ್ಪಡುತ್ತದೆ.

**ತಾತ್ಪರ್ಯ** :- ತಾರ್ಕಿಕರು, ಅವಯವಕ್ಕೂ ಅವಯವಿಗಳಿಗೂ, ಗುಣಗುಣಿಗಳಿಗೂ, ಕ್ರಿಯಾಕ್ರಿಯೆಯುಳ್ಳವುಗಳಿಗೂ, ಜಾತಿಗೂ ವ್ಯಕ್ತಿಗಳಿಗೂ, ವಿಶೇಷಕ್ಕೂ ನಿತ್ಯದ್ರವ್ಯಗಳಿಗೂ, ಅತ್ಯಂತ ಭೇದವನ್ನೇ ಅಂಗೀಕಾರ ಮಾಡಿ, ಆ ಅತ್ಯಂತ ಭಿನ್ನವಾದವುಗಳಿಗೆ ''ಸಮವಾಯ'' ವೆಂಬ ಭಿನ್ನವಾದ ಸಂಬಂಧವನ್ನು ಹೇಳುತ್ತಾರೆ. ಅವರ ಅಭಿಪ್ರಾಯವು ಈ ರೀತಿ ಇದೆ.

ಗುಣಗುಣಿಗಳಿಗೆ ಅತ್ಯಂತ ಭೇದವೇ ಇದೆ. ಗುಣವುಳ್ಳದ್ದು ಗುಣಿ, ಗುಣಿಯಲ್ಲಿ ಗುಣವಿದೆ ಎಂಬುದಾಗಿ ಆಧಾರಾಧೇಯಭಾವವು ಕಂಡುಬಂದಿದೆ. ಗುಣಿ ಅಂದರೆ ದ್ರವ್ಯ, ಆಧಾರ, ಆಧೇಯ ಗುಣ. ಈ ಆಧಾರ ಆಧೇಯ ಭಾವವು ಭೇದವ್ಯಾಪ್ತ. ಪರಸ್ಪರ ಭಿನ್ನವಾಗಿದ್ದರೇನೇ ಒಂದರಲ್ಲಿ ಮತ್ತೊಂದು ಇದೆ ಎಂಬ ವ್ಯವಹಾರವು ಸಂಗತವಾಗುತ್ತದೆ. ಈ ರೀತಿ ವ್ಯಪದೇಶಭೇದಾದಿಪ್ರಮಾಣವಿದ್ದರೂ ಕೂಡ ಅವುಗಳಿಗೆ ಭೇದವೇ ಇಲ್ಲವೆಂದರೆ, ಸ್ತಂಭ, ಕುಂಭಾದಿಗಳಿಗೂ (ಕಂಬಕ್ಕೂ ಘಟಕ್ಕೂ) ಭೇದವೇ ಇಲ್ಲದೇ ಹೋದೀತು.

ಈ ತಂತುಗಳಲ್ಲಿ (ಅವಯದಲ್ಲಿ) ಪಟ (ಅವಯವಿ). ಈ ಪಟದಲ್ಲಿ ರೂಪ.

ಈ ಮೂರ್ತದ್ರವ್ಯಗಳಲ್ಲಿ ಅಂದರೆ ಪೃಥಿವೀ - ಜಲ - ತೇಜಸ್ಸು - ವಾಯು - ಮನಸ್ಸು ಎಂಬ ''ಮೂರ್ತದ್ರವ್ಯಗಳಲ್ಲಿ ಕ್ರಿಯೆ, ಈ ಗೋವಿನಲ್ಲಿ ಗೋತ್ವರೂಪವಾದ ಜಾತಿ, ಈ ನಿತ್ಯದ್ರವ್ಯದಲ್ಲಿ ವಿಶೇಷ'' ಎಂಬುದಾಗಿ ಅಬಾಧಿತವಾಗಿರುವ ಭೇದಪ್ರತೀತಿಯು ಆ ಬಾಲವೃದ್ಧಪರ್ಯಂತವಾಗಿ ಕಂಡುಬಂದಿದೆ.ಇದಕ್ಕೆ ಯಾವ ತರಹೆಯ ಬಾಧಕವೂ ಕಂಡುಬಂದಿಲ್ಲ. ಮತ್ತು ''ಈ ಜಾಗದಲ್ಲಿ ಈ ಪದಾರ್ಥವಿದೆ'' ಎಂಬುದಾಗಿ ಬರತಕ್ಕ ಪ್ರತೀತಿಯಾದರೋ ಪ್ರತ್ಯೇಕವಾಗಿರುವ ಸಂಬಂಧವನ್ನೇ ಆ ಪಿಪತಕ್ಕೆ ವಿಷಯೀಕರಿಸುತ್ತದೆ. ಭಿನ್ನವಾದ ಸಂಬಂಧವನ್ನು ಒಪ್ಪದಿದ್ದರೆ ಅದನ್ನು ಕೂಡಿಸಲು ಶಕ್ಯವೇ ಇಲ್ಲ. ಲೋಕದಲ್ಲಿ ''ಈ ಕುಂಡದಲ್ಲಿ ಬದರಗಳಿವೆ'' ಎಂಬಲ್ಲಿ ಈ ಕುಂಡಕ್ಕೂ ಬದರಗಳಿಗೂ ಭಿನ್ನವಾದ ಸಂಯೋಗಸಂಬಂಧವು ಅನುಭವಸಿದ್ಧವಾಗಿದೆ.

ಪದಾರ್ಥಗಳಲ್ಲಿ ಯುತಸಿದ್ಧ ಎಂದೂ, ಅಯುತಸಿದ್ಧವೆಂದೂ ಎರಡು ಬಗೆಯುಂಟು. ಯುತಸಿದ್ಧಗಳ ಸಂಬಂಧವೇ ಸಂಯೋಗವು. ಅದು ಪರಸ್ಪರದ್ರವ್ಯಗಳಿಗೆ ಮಾತ್ರ ಇರತಕ್ಕದ್ದು. ಸಂಯೋಗಸಂಬಂಧವು ದ್ರವ್ಯ ಮಾತ್ರವೃತ್ತಿ ಎಂದು ತಾರ್ಕಿಕರ ಮತ. ಯಾವುದು (ರೂಪವು) ಯಾವುದನ್ನು (ದ್ರವ್ಯವನ್ನು) ಬಿಟ್ಟು ಬೇರೆಯಾಗಿ ಇರುವುದೇ ಇಲ್ಲವೋ, ಅದನ್ನು (ದ್ರವ್ಯವನ್ನು) ಆಶ್ರಯಿಸಿಕೊಂಡೇ ಇರುತ್ತದೆಯೋ ಅದನ್ನು ಅಯುತಸಿದ್ಧವೆಂದು ಕರೆಯುತ್ತಾರೆ. ಅಂತಹವುಗಳು,

ದ್ರವ್ಯವನ್ನು ಬಿಟ್ಟು ಗುಣವಾಗಲಿ, ಕ್ರಿಯೆಯಾಗಲಿ, ಜಾತಿಯಾಗಲಿ ಪ್ರತ್ಯೇಕವಾಗಿ ಇರುವುದಿಲ್ಲ. ಆದಕಾರಣ ಇಂತಹ ಅಯುತಸಿದ್ಧಪದಾರ್ಥಗಳಿಗೆ ಸಮವಾಯವೆಂಬ ಸಂಬಂಧವನ್ನು ಹೇಳುತ್ತೇವೆ. ಇಂತಹ ಅಬಾಧಿತವ್ಯವಹಾರಸಿದ್ಧವಾದ ನಿತ್ಯ ಸಂಬಂಧರೂಪವಾದ ಸಮವಾಯವನ್ನು ಗುಣಗುಣಿಗಳಿಗೆ ಹೇಳಿರುವುದರಿಂದ ಯಾವ ಬಾಧಕವೂ ಇರುವುದಿಲ್ಲ.

ಆದ್ದರಿಂದ ಗುಣಗಳಿಗೂ ಗುಣಿಗಳಿಗೂ ಅತ್ಯಂತ ಭೇದವನ್ನೇ ಹೇಳಬೇಕು. ಈ ವಿಷಯದಲ್ಲಿ ಅಬಾಧಿತವಾದ ಭೇದ ವ್ಯವಹಾರವೇ ಪ್ರಮಾಣವಾಗಿದೆ. ಹೀಗಿರುವಲ್ಲಿ ಪರಮಾತ್ಮನಿಗೂ ಅವನ ಜ್ಞಾನಾನಂದಾದಿಗುಣಗಳಿಗೂ ಸ ವಿಶೇಷಾ ತ್ಯಂತಾಭೇದವು ಹೇಗೆ ? ಅಭೇದವನ್ನು ಹೇಳಿದರೆ ಗುಣಗುಣಿಭಾವ, ಆಧಾರಾಧೇಯಭಾವವು ಹೇಗೆ ? ಇತ್ಯಾದಿಯಾಗಿ ತಾರ್ಕಿಕರು ಆಕ್ಷೇಪಿಸುವರು. ತಾರ್ಕಿಕರ ಆಕ್ಷೇಪಕ್ಕೆ ಸಮಾಧಾನವನ್ನು ಅನುವ್ಯಾಖ್ಯಾನದಲ್ಲಿ ವಿವರಿಸಿದ್ದಾರೆ. ತಾರ್ಕಿಕರ ಪ್ರಕ್ರಿಯೆಯ ನಿರಾಕರಣೆ ಮತ್ತು ಸಮವಾಯ ಸಂಬಂಧದ ನಿರಾಕರಣೆಯ ಪ್ರಕಾರವು ಈ ರೀತಿ ಇದೆ.

ಅನುವ್ಯಾಖ್ಯಾನದಲ್ಲಿ ಭಾಷ್ಯಕಾರರು ಬಹಳ ಯುಕ್ತಿಯುಕ್ತವಾಗಿ ತಾರ್ಕಿಕರ ಪ್ರಕ್ರಿಯೆಯನ್ನು ಖಂಡಿಸಿರುತ್ತಾರೆ. ಮತ್ತು ವಿಶೇಷವನ್ನು ಸಮರ್ಥಿಸಿರುವರು.

**"ಭಿನ್ನತ್ವಸಾಮ್ಯತಸ್ತಸ್ಯ ತಾಭ್ಯಾಂ ಯೋಗೋ ಭವೇದ್ಧ್ರುವಮ್ ।**
**ಸ ಸ್ವನಿರ್ವಾಹಕಶ್ಚೇತ್ಸ್ಯಾದ್ದ್ರವ್ಯಮೇವ ತಥಾ ನ ಕಿಮ್ ॥ (ಅನುವ್ಯಾಖ್ಯಾನ)**

**ಅರ್ಥ** :- ಭಿನ್ನತ್ವಸಾಮ್ಯತಃ = ಭಿನ್ನತ್ವವು ಸಮಾನವಾಗಿರುವುದರಿಂದ, "ಇಲ್ಲಿ ಸಮಯವಾಯವು ಇದೆ," ಈ ದ್ರವ್ಯ ದಲ್ಲಿ ಸಮವಾಯಸಂಬಂಧವು ಇದೆ. ಇತ್ಯಾದಿಯಾಗಿ "ಇಹ ಸಮವಾಯಃ" ಎಂಬ ಪ್ರತ್ಯಯವು ಸಮಾನವಾಗಿರು ವುದರಿಂದ, ತಸ್ಯ = ಭಿನ್ನವಾದ ಆಸಮವಾಯಕ್ಕೆ, ತಾಭ್ಯಾಂ = ಅವಯವ, ಅವಯವಿ ಮೊದಲಾದ ಸಂಬಂಧಿಗಳೊಡನೆ, ಯೋಗಃ = ಬೇರೆ ಸಂಬಂಧವು, ಧ್ರುವಂ = ನಿಶ್ಚಯವಾಗಿ, ಭವೇತ್ = ಇರಬೇಕಾಗುತ್ತದೆ.

ಸಃ = ಆ ಅವಯವ ಮತ್ತು ಅವಯವಿಗಳಿಗೆ ಹೇಳತಕ್ಕ ಸಮವಾಯವು, ಸ್ವನಿರ್ವಾಹಕಶ್ಚೇತ್ = ಸ್ವ ನಿರ್ವಾಹಕ ವಾದರೆ, ಯಾವ ಸಮವಾಯವು ಅವಯವ ಅವಯವಿಗಳಿಗೆ ಸಂಬಂಧವಾಗಿಯೋ, ಅದೇ ಆ ಅವಯವ ಅವಯವ ಗಳಲ್ಲಿರುವ ಸಮವಾಯವೇ, ತಾನೇನೇ ತನಗೂ ಸಂಬಂಧವಾಗುವುದು. ತನ್ನ ಇರುವಿಕೆಗೆ ಮತ್ತೊಂದು ಸಂಬಂಧವನ್ನು ಅಪೇಕ್ಷಿಸುವುದಿಲ್ಲ. ತನ್ನ ಇರುವಿಕೆಗೆ ತಾನೇ ನಿರ್ವಾಹಕವೆಂದು ಹೇಳಿ, ಸಮವಾಯಪರಂಪರೆ ಇಲ್ಲವಾದ್ದರಿಂದ ಅನವಸ್ಥಾ ದೋಷಕ್ಕೆ ಅವಕಾಶವೇ ಇಲ್ಲವೆಂದು ತಾರ್ಕಿಕರು ಹೇಳಿದರೆ, ದ್ರವ್ಯಮೇವ = ಆಧಾರವಾದ ದ್ರವ್ಯವೇನೇ, ತಥಾ = ಸ್ವ ನಿರ್ವಾಹಕವಾದುದಾಗಿ, ಕಿಂ ನ ಸ್ಯಾತ್ = ಏಕಾಗಬಾರದು ?

ಮತ್ತು ತಾರ್ಕಿಕರು ಸಮವಾಯವನ್ನು ಸಾಧಿಸಲಿಕ್ಕಾಗಿ ಅನುಮಾನವನ್ನು ಈ ರೀತಿ ಪ್ರಯೋಗಿಸುವರು.

"ಇಹ ತಂತುಷು ಪಟಃ ಇತ್ಯಾದಿಪ್ರತ್ಯಯಃ - ಸಂಬಂಧಪೂರ್ವಕಃ - ಅಬಾಧಿತೇಹ ಪ್ರತ್ಯಯತ್ವಾತ್ - ಇಹ ಕುಂಡೇ ಬದರಾಣೀತಿ ಪ್ರತ್ಯಯವತ್" ಎಂಬ ಅನುಮಾನದಿಂದ ಸಮವಾಯಸಂಬಂಧವನ್ನು ಸಾಧಿಸುವರು.

ಅಂದರೆ "ಯಾವುದು ಅಬಾಧಿತವಾದ ಇಹ ಎಂಬ ಪ್ರತ್ಯಯವು ಉಂಟೋ ಅದು ಸಂಬಂಧಪೂರ್ವಕವಾಗಿದೆ" ಎಂಬ ವ್ಯಾಪ್ತಿಯನ್ನು ಅಗತ್ಯವಾಗಿಟ್ಟುಕೊಂಡು ಸಮವಾಯವನ್ನು ಸಾಧಿಸಬೇಕು.

ಹೀಗೆ ವ್ಯಾಪ್ತಿಯನ್ನು ತಾರ್ಕಿಕರು ಅಂಗೀಕರಿಸಿದರೆ "ಇಹ ತಂತುಪಟಯೋಃ ಸಮವಾಯಃ" ಎಂಬುದಾಗಿ ಅಬಾಧಿತವಾದ ಇಹ ಎಂಬ ಪ್ರತ್ಯಯವೂ ಇರುವುದರಿಂದ ಸಮವಾಯಕ್ಕೂ ಸಹ ತಂತುಪಟಗಳಿಂದ ಮತ್ತೊಂದು ಸಮವಾಯವನ್ನು ಅಂಗೀಕರಿಸಬೇಕಾಗುತ್ತದೆ. ಪುನಃ "ಇಹ ತಂತುಪಟಸಮವಾಯೇ ಸಮವಾಯಃ" ಇಹ ತಂತುಪಟ ಸಮವಾಯೇ ಸಮವಾಯೇ ಸಮವಾಯಃ" ಇತ್ಯಾದಿಯಾಗಿ ಹಿಂದಿನ ಯುಕ್ತಿಯಿಂದಲೇ ಸಮವಾಯಪರಂಪರೆಗೆ ಅವಕಾಶವಾಗುವ ಪ್ರಯುಕ್ತ ಅನವಸ್ಥಾದೋಷವು ಅಪರಿಹಾರ್ಯವಾಗುವುದು.

ಆದ್ದರಿಂದ ತಾರ್ಕಿಕರು ಯಾವ ತಂತುಪಟಗಳ ಸಮವಾಯವು ಇದೆಯೋ ಅದರ ಇರುವಿಕೆಗೆ ತನಗೆ ತಾನೇ ನಿಯಾಮಕ ಮತ್ತೊಂದು ತನ್ನ ಇರುವಿಕೆಗೆ ಬೇಕಿಲ್ಲ. ಅದು ಸ್ವನಿರ್ವಾಹಕ ಎಂದು ಹೇಳಲೇಬೇಕು. ಬೇರೆ ಉಪಾಯವೇ ಇಲ್ಲ. ಹೀಗೆ ಹೇಳಿ ಸಮವಾಯಕ್ಕೆ ಸ್ವನಿರ್ವಾಹಕತ್ವವನ್ನು ಒಪ್ಪಿ ಅನವಸ್ಥಾದೋಷವನ್ನು ಪರಿಹರಿಸುವುದಾದರೆ ಅಂತಹ ಸ್ವನಿರ್ವಾಹಕತ್ವವನ್ನು ದ್ರವ್ಯಕ್ಕೇನೇ ಯಾತಕ್ಕೆ ಹೇಳಬಾರದು. ಎಂದು ಸಿದ್ಧಾಂತಿಗಳ ಅಭಿಪ್ರಾಯ.

ಪ್ರಕೃತದಲ್ಲಿ ತಾರ್ಕಿಕರ ಅನುಮಾನಕ್ಕೆ ಸಂಬಂಧಪೂರ್ವಕತ್ವರೂಪವಾದ ಸಾಧ್ಯವಿಲ್ಲದಿರುವ ಸಮವಾಯದ ಪ್ರತ್ಯಯದಲ್ಲಿ ("ಇಹತಂತುಪಟಯೋಃ ಸಮವಾಯಃ" ಎಂಬ ಪ್ರತ್ಯಯದಲ್ಲಿ) ಅಬಾಧಿತೇಹ ಪ್ರತ್ಯಯತ್ವರೂಪವಾದ ಹೇತುವು ಇರುವುದರಿಂದ ಅವರ ಅನುಮಾನಕ್ಕೆ ವ್ಯಭಿಚಾರದೋಷವು ಬಿಟ್ಟಿದ್ದಲ್ಲ. ಅವರ ಅನುಮಾನವು ವ್ಯಭಿಚಾರದೋಷ ದುಷ್ಟವಾದ್ದರಿಂದ ಅದರಿಂದ ಸಮವಾಯವು ಸಿದ್ಧಿಸುವುದಿಲ್ಲ.

**"ವಿಶೇಷಸ್ತದ್ಗತತ್ವಾದಿರ್ಯದ್ಯಭಿನ್ನೇಽಪಮೀಯತೇ।**
**ಗುಣಕ್ರಿಯಾದಿರೂಪಸ್ಯ ನಿಷೇಧಃ ಕೇನಹೇತುನಾ ।। (ಅನುವ್ಯಾಖ್ಯಾನ)**

**ಅರ್ಥ** :- ಯದಿ = ಯಾವ ಪಕ್ಷದಲ್ಲಿ (ಯಾವ ತಾರ್ಕಿಕರ ಪಕ್ಷದಲ್ಲಿ) ಅಭಿನ್ನೇ = ಅಭಿನ್ನವಾದ, ಸಮವಾಯೇ = ಸಮವಾಯದಲ್ಲಿ, ತದ್ಗತತ್ವಾದಿಃ = ಅವಯವಗತತ್ವ, ಅವಯವಿಗತತ್ವಾದಿರೂಪವಾದ ವಿಶೇಷ = ವಿಶೇಷವು, ಅಪಮೀಯತೇ =ಅಂಗೀಕರಿಸಲ್ಪಡುತ್ತದೆಯೋ, "ತದಾ =ಆಗ," ಗುಣಕ್ರಿಯಾದಿರೂಪಸ್ಯ = ಗುಣಕ್ರಿಯಾ ಮೊದಲಾದ ಸ್ವರೂಪವುಳ್ಳ ವಿಶೇಷಕ್ಕೆ. ನಿಷೇಧಃ = ನಿಷೇಧವು, ಕೇನ ಹೇತುನಾ = ಯಾವ ಕಾರಣದಿಂದ ? ಯಾವ ಕಾರಣದಿಂದಲೂ ವಿಶೇಷವನ್ನು ನಿರಾಕರಿಸಲು ಸಾಧ್ಯವಿಲ್ಲ.

**ತಾತ್ಪರ್ಯ** :- ಸಮವಾಯವನ್ನು ಅವಯವ ಅವಯವಿ, ಗುಣ, ಗುಣಿ ಜಾತಿ ವ್ಯಕ್ತಿ ಮೊದಲಾದವುಗಳಲ್ಲಿರತಕ್ಕ ಸಂಬಂಧವೆಂದು ತಾರ್ಕಿಕರು ಒಪ್ಪಿದ್ದಾರೆ. ಅಂದರೆ ಸಮವಾಯಕ್ಕೆ ಅವಯವಗತತ್ವ, ಅವಯವಿಗತತ್ವ ಇರುವುದರಿಂದ, ಈ ಬಗೆಯಾದ ತದ್ಗತತ್ವವು, ಸಮವಾಯಕ್ಕೆ ಮತ್ತೊಂದು ಸಮವಾಯದಿಂದ ಇರುವಿಕೆಯು ಕೂಡುವುದೇ ಇಲ್ಲ. ಅವರ ಮತದ ಪ್ರಕ್ರಿಯೆಯಂತೆ ಸಮವಾಯವು ಒಂದೇ ಆಗಿದೆ. ಆದಕಾರಣ ಸಮವಾಯದಲ್ಲಿರುವ ತದ್ಗತತ್ವವು ಸಮವಾಯದ ಸ್ವರೂಪವೆಂದೇ ಹೇಳಬೇಕು.

ಹೀಗೆಯೇ ಸಮವಾಯದಲ್ಲಿ, ಅಸ್ತಿತ್ವವು ಇದೆ. ಜ್ಞೇಯತ್ವವು ಇದೆ. ಅಭಿಧೇಯತ್ವವು ಇದೆ, ಸಂಬಂಧತ್ವವೆಂಬುದೂ ಇದೆ. ಇವೆಲ್ಲವುಗಳನ್ನೂ ಸಮವಾಯದ ಸ್ವರೂಪವೆಂದೇ ಹೇಳಬೇಕು.

ಅಸ್ತಿತ್ವ ಮೊದಲಾದ ಧರ್ಮಗಳಿಗೂ ಸಮವಾಯಕ್ಕೂ ಭೇದವನ್ನು ಹೇಳಿದರೆ, ಆ ಧರ್ಮವು ಸಮವಾಯವು ಒಂದೇ ಎಂದು ಹೇಳಿರುವುದರಿಂದ ಬೇರೆ ಸಮವಾಯಸಂಬಂಧವನ್ನು ಹೇಳಲು ಬರುವಂತಿಲ್ಲ. ಅಸ್ತಿತ್ವಕ್ಕೂ ಸಮವಾಯಕ್ಕೂ ಸಂಯೋಗಸಂಬಂಧವನ್ನೂ ಹೇಳಲಾಗುವುದಿಲ್ಲ. ದ್ರವ್ಯಮಾತ್ರವೃತ್ತಿಯಾದ ಸಂಯೋಗವು ಸಮವಾಯದಲ್ಲಿ ಹೇಗೆ ಬಂದೀತು.

ಈ ರೀತಿ ಬಾಧಕಗಳಿರುವ ಪ್ರಯುಕ್ತ ಸಮವಾಯಕ್ಕೂ ತದ್ಗತತ್ವಾದಿಧರ್ಮಗಳಿಗೂ, ಅಸ್ತಿತ್ವಾದಿಧರ್ಮಗಳಿಗೂ ಬೇರೆ ಯಾವ ಸಂಬಂಧವನ್ನೂ ಹೇಳಲು ಬಾರದಿರುವುದರಿಂದ ಅವೆಲ್ಲವೂ ಸಮವಾಯದ ಸ್ವರೂಪಗಳೇ ಎಂದು ಅವುಗಳಿಗೂ ಸಮವಾಯಕ್ಕೂ ಅಭೇದವನ್ನೇ ತಾರ್ಕಿಕರು ಒಪ್ಪಬೇಕು.

ಅಪರ್ಯಾಯಶಬ್ದವಾಚ್ಯತ್ವವೂ, ಧರ್ಮಧರ್ಮಿಭಾವವೂ, ಸಮವಾಯಸ್ಯ ತತ್ತ್ವಂ ಎಂಬಲ್ಲಿ ಷಷ್ಠೀ ಪ್ರಯೋಗವೂ, ಜ್ಞಾತತ್ವ, ಅಜ್ಞಾತತಾದಿಗೂ, ಏಕತ್ವ ಅನೇಕತ್ವಾದಿಗೂ ಹೊಂದಿಕೆಯಾಗಬೇಕಾದರೆ ಆ ಧರ್ಮಗಳಿಗೂ ಸಮವಾಯಕ್ಕು ಸವಿಶೇಷಾಭೇದವನ್ನೇ ಹೇಳಿ ನಿರ್ವಾಹ ಮಾಡಬೇಕು. ಅಭೇದವಿದ್ದರೂ ಭೇದಕಾರ್ಯನಿರ್ವಾಹಕವಾದ ವಿಶೇಷವನ್ನು ಒಪ್ಪಿಯೇ ತಕ್ಕ ಸಮಾಧಾನವನ್ನು ಹೇಳಬೇಕು.

ಏವಂ ಚ ಅಭಿನ್ನವಾದ ಸಮವಾಯದಲ್ಲಿ, ತದ್ಗತತ್ವವೇ ಮೊದಲಾದ ವಿಶೇಷವನ್ನು ತಾರ್ಕಿಕರು ಅಂಗೀಕರಿಸಿದರೆ, ಕಲ್ಪನಾಗೌರವ ದೋಷವು ಬರುವುದರಿಂದ ಸಿದ್ಧಾಂತಿಗಳು, ಗುಣಕ್ರಿಯಾದಿಗಳೆಲ್ಲವೂ ದ್ರವ್ಯದ ಸ್ವರೂಪವೇ ಎಂದು ಒಪ್ಪಿ, ಸವಿಶೇಷಾಭೇದವನ್ನು ಅಂಗೀಕರಿಸಿ ಭೇದವ್ಯವಹಾರಾದಿಗಳನ್ನು ನಿರ್ವಹಿಸುವುದರಿಂದ ಎಲ್ಲವೂ ಸುಸಂಗತವಾಗುವ ಪ್ರಯುಕ್ತ ಗುಣಗುಣಿಗಳಿಗೆ ಅತ್ಯಂತ ಭೇದವನ್ನು ಹೇಳುವುದು, ಕಲ್ಪನಾಗೌರವ ದೋಷದುಷ್ಟವಾದುದರಿಂದ ಅಯುಕ್ತವೆಂದು ಸಿದ್ಧಾಂತಿಗಳ ಅಭಿಪ್ರಾಯ.

ಸಮವಾಯದ ಧರ್ಮಗಳಾದ, ಅಸ್ತಿತ್ವ, ಜ್ಞೇಯತ್ವ, ತದ್ಗತತ್ವಾದಿಗಳಿಗೆ ಸವಿಶೇಷಾಭೇದವನ್ನು ಹೇಳದಿದ್ದರೆ ಬೇರೆ ರೀತಿ ನಿರ್ವಾಹವೇ ಇಲ್ಲ. ಅದರಂತೆ ದ್ರವ್ಯವೇ ಅನಂತಾನಂತವಿಶೇಷಾತ್ಮಕವಾಗಿ ನಾನಾ ವ್ಯವಹಾರಕ್ಕೆ ಕಾರಣವಾಗುವುದೆಂಬ ಸಿದ್ಧಾಂತಿಗಳ ಅಭಿಪ್ರಾಯವನ್ನು ಮುಂದಿನ ಅನುವ್ಯಾಖ್ಯಾನವಾಕ್ಯವು ವಿವರವಾಗಿ ತಿಳಿಸುತ್ತಲಿದೆ.

**''ದ್ರವ್ಯಮೇವ ತತೋಽನಂತವಿಶೇಷಾತ್ಮತಯಾ ಸದಾ ।**
**ನಾನಾವ್ಯವಹೃತೇರ್ಹೇತುಃ ಅನಂತತ್ವಂ ವಿಶೇಷತಃ ॥ (ಅನುವ್ಯಾಖ್ಯಾನಮ್)**

**ಅರ್ಥ** :- ತತಃ = ಸಮವಾಯದ ಧರ್ಮಗಳಂತೆ, ಗುಣಾದಿಗಳಿಗೆ ದ್ರವ್ಯದ ವಿಶೇಷತ್ವವು ಇರುವ ಪ್ರಯುಕ್ತ, ದ್ರವ್ಯಮೇವ = ದ್ರವ್ಯವೇನೇ, ಸದಾ = ಯಾವಾಗಲೂ, ಅನಂತವಿಶೇಷಾತ್ಮತಯಾ = ಲೋಕದಲ್ಲಿ ಎಷ್ಟು ಎಷ್ಟು ವ್ಯವಹಾರಗಳಿರುತ್ತವೆಯೋ ಅಷ್ಟು ವಿಶೇಷವುಳ್ಳದ್ದಾಗಿರುವುದರಿಂದ, ನಾನಾವ್ಯವಹೃತೇಃ = ಅನೇಕ ವಿಧಗಳಾದ ವ್ಯವಹಾರಗಳಿಗೆ (ವ್ಯಪದೇಶಭೇದಾದಿಗಳಿಗೆ) ಹೇತುಃ = ಕಾರಣವಾಗುತ್ತದೆ.

ಅಂದರೆ, ಸಮವಾಯವು ಹೇಗೆ ಅನಂತವಿಶೇಷಾತ್ಮತಯಾ ತದ್ಗತತ್ವವೇ ಮೊದಲಾದ ವಿಶೇಷಾಕಾರದಿಂದ ನಾನಾ ವ್ಯವಹಾರಗಳಿಗೆ ಕಾರಣವಾಗುತ್ತದೆಯೋ ಹಾಗೆಯೇ ಘಟ, ಪಟ ಮೊದಲಾದ ದ್ರವ್ಯವೇನೇ, ಗುಣ, ಕ್ರಿಯೆ ಮೊದಲಾದ ರೂಪಗಳಿಂದ ಯಾವಾಗಲೂ ವ್ಯಪದೇಶಭೇದ ಮೊದಲಾದವುಗಳಿಗೆ (ವಿಭಿನ್ನ ವ್ಯವಹಾರಕ್ಕೆ) ಕಾರಣವಾಗುತ್ತದೆಯೆಂದು ಅಭಿಪ್ರಾಯ.

ಅನಂತತ್ವಂ ವಿಶೇಷಾಃ = ವಿಶೇಷಾಃ = ಈಶ್ವರನೇ ಮೊದಲಾದ-ದ್ರವ್ಯವಿಶೇಷಗಳಿಗೆ, ಅನಂತತ್ವಂ = ಅನೇಕತ್ವವು ವಿಶೇಷ ಬಲದಿಂದ ಕೂಡುತ್ತದೆ. ಎಲ್ಲಿ ಅನೇಕತ್ವವು ಇರುವುದೋ ಅಗತ್ಯವಾಗಿ ಅಲ್ಲಿ ಭೇದವೇ ಇರಬೇಕೆಂಬ ಪ್ರಬಲವಾದ ವ್ಯಾಪ್ತಿಯು ಇದ್ದುದಾದರೆ, ವಿರೋಧವು ಬರುತ್ತಿತ್ತು. ಆದರೆ ಅಂತಹ ವ್ಯಾಪ್ತಿಯೇ ಇಲ್ಲ. ಎಲ್ಲಿ ಭೇದವೇ ಇಲ್ಲವೋ ಭೇದದ ಕಾರ್ಯವಾದ ವ್ಯವಹಾರವು ಕಂಡುಬರುತ್ತದೆಯೋ ಅಂತಹ ಕಡೆ ಭೇದಕ್ಕೆ ಪ್ರತಿನಿಧಿಯಾದ ವಿಶೇಷದಿಂದಲೇ ವ್ಯವಹಾರದ ನಿರ್ವಾಹವು ಆಗುತ್ತದೆ. ಅನೇಕತ್ವಸಂಖ್ಯೆಯೂ ಸಹ ಸಂಗತವಾಗುತ್ತದೆ.

ಗುಣಕ್ಕೂ ಗುಣಿಗೂ ಅತ್ಯಂತ ಭೇದವು ಉಂಟೆಂಬ ವಿಷಯದಲ್ಲಿ ಯಾವ ಪ್ರಮಾಣವೂ ಇರುವುದಿಲ್ಲ. ಹಾಗೆ ಇದ್ದಪಕ್ಷದಲ್ಲಿ ಅವುಗಳಿಗೆ ಸಮವಾಯವೆಂಬ ಸಂಬಂಧವನ್ನು ಹೇಳಿ ಅದಕ್ಕೆ ಸಾಧಕವಾದ ಪ್ರಮಾಣವನ್ನು ಉದಾಹರಿಸಬಹುದು. ವಿಚಾರ ಮಾಡಲಾಗಿ ಗುಣಕ್ಕೂ ಗುಣಿಗೂ ಅತ್ಯಂತಭೇದವೇ ಅಪ್ರಾಮಾಣಿಕ. ಪ್ರಮಾಣಗಳಲ್ಲಿ ಪ್ರತ್ಯಕ್ಷ ಪ್ರಮಾಣವನ್ನಂತೂ ಹೇಳಲು ಸಾಧ್ಯವಿಲ್ಲ. ಹಸು, ಕುದುರೆಗಳು ಪ್ರತ್ಯಕ್ಷ ಪ್ರಮಾಣದಿಂದ ಬೇರೆ ಬೇರೆಯಾಗಿ ತೋರುವಂತೆ ಗುಣವು ಗುಣಿಯನ್ನು ಬಿಟ್ಟು ಪ್ರತ್ಯೇಕವಾಗಿ ಸಮವಾಯವು ಪ್ರತ್ಯಕ್ಷಕ್ಕೆ ವಿಷಯವಾಗುತ್ತಿಲ್ಲ. ಆದಕಾರಣ ಅನುಮಾನವನ್ನೇ ತಾರ್ಕಿಕರು ಉದಾಹರಿಸಬೇಕು. ಆ ಅನುಮಾನವೂ ಸಹ ವ್ಯಭಿಚಾರಾದಿದೋಷದುಷ್ಟವಾಗಿರುವ ಪ್ರಯುಕ್ತ ಗುಣಕ್ಕೂ ಗುಣಿಗೂ ಅಭೇದವನ್ನೇ ಹೇಳಬೇಕು. ಆ ತಾರ್ಕಿಕರ ಭೇದಸಾಧಕವಾದ ಅನುಮಾನವನ್ನು ಹಿಂದೆಯೇ ತೋರಿಸಿ ನಿರಾಕರಿಸಲಾಗಿದೆ.

ಮತ್ತು ಗುಣಗುಣಿನೌ, ಅತ್ಯಂತಭಿನ್ನೌ, ಅಪರ್ಯಾಯಶಬ್ದವಾಚ್ಯತ್ವಾತ್ - ಘಟಪಟವತ್ - ಎಂಬುದೇ ಮೊದಲಾದ ಅನುಮಾನವನ್ನು ತಾರ್ಕಿಕರು ಹೇಳುತ್ತಾರೆ. ಆದರೆ ಈ ಅನುಮಾನವು ವ್ಯಭಿಚಾರ ದೋಷದಿಂದ ದುಷ್ಟವಾಗಿದೆ.

ಹೇಗೆಂದರೆ ತಾರ್ಕಿಕರು ಸಮವಾಯಕ್ಕೆ ಅವಯವ ಮತ್ತು ಅವಯವಿಯಲ್ಲಿ ಇರುವಿಕೆಯನ್ನು (ತದ್ಗತತ್ವವನ್ನು) ಅಂಗೀಕರಿಸಿದ್ದಾರೆ. ''ಆಶ್ರಿತತ್ವಂ ಚಾನ್ಯತ್ರನಿತ್ಯದ್ರವ್ಯೇಭ್ಯಃ'' ಎಂದು ಅವರ ವಚನವು ಉಂಟು. ಈ ಅವಯವ ಮತ್ತು ಅವಯವಿತ್ವರೂಪವಾದ ತದ್ಗತತ್ವವು ಸಮವಾಯದಲ್ಲಿರತಕ್ಕ ಅಸ್ತಿತ್ವದಂತೆ, ಅಭಿಧೇಯತ್ವದಂತೆ, ಜ್ಞೇಯತ್ವದಂತೆ, ಸಂಬಂಧತ್ವದಂತೆ ಎಲ್ಲವೂ ಸಮವಾಯದ ಸ್ವರೂಪವೇ ಆಗಿದೆ. ಆ ಧರ್ಮಗಳಿಗೂ ಸಮವಾಯಕ್ಕೂ ಭೇದವನ್ನು ಹೇಳಿದರೆ, ಆ ಧರ್ಮಗಳಿಗೂ, ಧರ್ಮಿಯೆನಿಸಿದ ಸಮವಾಯಕ್ಕೂ ಬೇರೊಂದು ಸಂಬಂಧವನ್ನೇ ಹೇಳಬೇಕು. ದ್ರವ್ಯ ಮಾತ್ರದಲ್ಲಿರತಕ್ಕ ಗುಣರೂಪವಾದ ಸಂಯೋಗವನ್ನಂತೂ ಹೇಳುವಂತೆಯೇ ಇಲ್ಲ.

ಆದಕಾರಣ ಸಮವಾಯಕ್ಕೂ ಅದರ ಧರ್ಮಗಳಾದ ತದ್ಗತತ್ವಾದಿಗಳಿಗೂ ಸತ್ತ್ವಾದಿಗಳಿಗೂ ನಿರ್ವಿಶೇಷಾಭೇದವನ್ನು ಹೇಳಿದರೆ, ಧರ್ಮಧರ್ಮಿಭಾವವಾಗಲಿ, ಅಪರ್ಯಾಯಶಬ್ದ ವಾಚ್ಯತ್ವವಾಗಲಿ. ಷಷ್ಠೀಪ್ರಯೋಗವೇ ಆಗಲಿ, ಹೇಗೆ ತಾನೇ ಸಂಗತವಾಗುತ್ತದೆ ? ಆದರೆ ಈ ಪ್ರಯೋಗಗಳಿಗೆ ಔಪಚಾರಿಕತ್ವ ವನ್ನು (ಗೌಣತ್ವವನ್ನು) ಹೇಳಲು ಸಾಧ್ಯವಿಲ್ಲ. ಮುಖ್ಯವಾದ ಪ್ರಯೋಗವೇ ಲೋಕದಲ್ಲಿ ಕಂಡಿದೆ. ಆದಕಾರಣ ಸತ್ತ್ವಾದಿ ಧರ್ಮಗಳು ಸಮವಾಯಕ್ಕಿಂತಲೂ ಅಭಿನ್ನವಾದಾಗ್ಯೂ, ಆ ಸಮವಾಯದ ವಿಶೇಷವಾದರೋ ಭೇದದ ಪ್ರತಿನಿಧಿಯಾಗಿದೆ ಯೆಂಬ ಸಮಾಧಾನವನ್ನೇ ತಾರ್ಕಿಕರು ಬೇರೆ ಗತಿಯಿಲ್ಲವಾದುದರಿಂದ ಅಂಗೀಕರಿಸಬೇಕು. ಅಭಿನ್ನವಾದ ಸಮವಾಯದಲ್ಲಿ, ತದ್ಗತತ್ವ, ಸತ್ತ್ವಾದಿ ವಿಶೇಷಗಳನ್ನು ಹೇಳುವಂತೆ ದ್ರವ್ಯಕ್ಕೂ, ಗುಣಾದಿಗಳಿಗೂ ಅಭೇದವೇ ಇದ್ದಾಗ್ಯೂ ಗುಣಕ್ರಿಯಾದಿಗಳು ದ್ರವ್ಯದ ಸ್ವರೂಪವಾದುದೇ ಆ ದ್ರವ್ಯದ ವಿಶೇಷಾತ್ಮಕವಾದುದಾಗಿದೆ. ಅಂದರೆ ಸವಿಶೇಷಾಭೇದವೇ ಹೊರತು ಅವುಗಳಿಗೆ ನಿರ್ವಿಶೇಷಾಭೇದವಲ್ಲ. ಸಮವಾಯದ ಧರ್ಮಗಳು ಸಮವಾಯದ ವಿಶೇಷಗಳಾಗಿರುವಂತೆ ಗುಣಾದಿಗಳೂ ದ್ರವ್ಯದ ವಿಶೇಷಗಳೇ ಆಗಿವೆ. ಹಿಂದೆ ಹೇಳಿದಂತೆ ಸಮವಾಯಕ್ಕೂ ಅದರ ಧರ್ಮಗಳಾದ ಸತ್ತ್ವಾದಿಗಳಿಗೂ ಸವಿಶೇಷಾಭೇದವನ್ನು ಅಗತ್ಯವಾಗಿ ಒಪ್ಪಬೇಕಾಗಿರುವ ಪ್ರಯುಕ್ತ ಅದರಲ್ಲಿ ಹಿಂದೆ ಹೇಳಿದ ಅನುಮಾನದಲ್ಲಿನ ಅತ್ಯಂತ ಭಿನ್ನೌ ಎಂಬ ಸಾಧ್ಯವಿಲ್ಲ. ಅಪರ್ಯಾಯಶಬ್ದವಾಚ್ಯತ್ವರೂಪವಾದ ಹೇತುವು ಇರುವ ಪ್ರಯುಕ್ತ ಆ ಹೇತುವು ವ್ಯಭಿಚಾರಿಯಾಗಿ ದುಷ್ಟವಾಗಿದೆ ಎಂದು ಅಭಿಪ್ರಾಯ.

ಗುಣಗುಣ್ಯಾದಿಗಳಿಗೆ ಅತ್ಯಂತಾಭೇದವು ಇದ್ದಾಗ್ಯೂ ಗುಣಕ್ರಿಯಾದಿಗಳು ದ್ರವ್ಯದ ವಿಶೇಷವೇ ಆಗಿರುವುದರಿಂದ ಸ್ವಭಾವವಿಶೇಷದಿಂದ ದ್ರವ್ಯವೇನೇ ವಿಶೇಷಶಕ್ತಿಯಿಂದ ಅಪರ್ಯಾಯಶಬ್ದವಾಚ್ಯತ್ವಾದಿವ್ಯವಹಾರಕ್ಕೆ ಕಾರಣವಾಗಿದೆ ಎಂದು ಪರಮಾಭಿಪ್ರಾಯವಾಗಿದೆ. ಗುಣಗುಣಿಗಳಿಗೆ ಅಭೇದಪಕ್ಷದಲ್ಲಿ ಕಲ್ಪನಾಲಾಘವವು ಉಂಟು ಭೇದಪಕ್ಷದಲ್ಲಿ ಕಲ್ಪನಾಗೌರವವು ಕಂಡುಬರುತ್ತದೆ.

**ಹೇಗೆಂದರೆ** :- ಘಟಃ ಶುಕ್ಲಃ ಎಂಬ ಪ್ರತೀತಿಯು ಎಲ್ಲರಿಗೂ ಬರುತ್ತಿದೆ. ಇದರಲ್ಲಿ ವಿವಾದವು ಇಲ್ಲ. ಇದು ''ಕುಂಡೇ ಬದರಂ'' ಎಂಬ ಪ್ರತೀತಿಗಿಂತಲೂ ವಿಲಕ್ಷಣವಾಗಿ ಕಂಡುಬಂದಿದೆ. ಆದರೆ ''ಘಟಸ್ವರೂಪಂ ಅಂದರೆ ಘಟದ ರೂಪವು'' ಎಂಬ ವ್ಯವಹಾರವು ಸರ್ವಸಾಧಾರಣವಾದರೂ ಆ ಘಟಕ್ಕೂ ರೂಪಕ್ಕೂ ಅಭೇದವಿದ್ದರೂ, ಭೇದ ವ್ಯವಹಾರವು ವಿಶೇಷದ ಪ್ರಭಾವದಿಂದ ನಿರ್ವಾಹವಾಗುತ್ತಿದೆ.

ನಾನಾ ಬಗೆಗಳಾದ ವ್ಯವಹಾರಗಳಿಗೆ ಕಾರಣವಾದ ವಿಶೇಷವು ದ್ರವ್ಯದ ಸ್ವರೂಪವೇ ಎಂದು ಹೇಳಲಾಯಿತು ಹೀಗೆ ಹೇಳಿದರೆ ''ದ್ರವ್ಯದ ವಿಶೇಷ'' ಎಂದು ಹೇಳಿದಂತಾಯಿತು. ಅಂದರೆ ದ್ರವ್ಯದ ಸಂಬಂಧಿತ್ವವನ್ನು ವಿಶೇಷಕ್ಕೆ ಒಪ್ಪಿಕೊಂಡರೆ ಸಂಬಂಧಿತ್ವವು ಭೇದವ್ಯಾಪ್ತವಾದುದರಿಂದ ವಿಶೇಷವು ದ್ರವ್ಯಸ್ವರೂಪವಿಶೇಷವೆಂದು ಹೇಗೆಹೇಳುತ್ತೀರಿ ? ಎಂದು ಪ್ರತಿ ವಾದಿಗಳು ಶಂಕಿಸಬಹುದು. ಅದಕ್ಕೆ ಸಮಾಧಾನವು ಈ ರೀತಿ ಇದೆ.

ದ್ರವ್ಯಕ್ಕೂ ವಿಶೇಷಕ್ಕೂ ಭೇದವು ಇಲ್ಲದಿದ್ದಾಗ್ಯೂ ಭೇದಕ್ಕೆ ಪ್ರತಿನಿಧಿಯಾದ ವಿಶೇಷದಿಂದಲೇ ದ್ರವ್ಯ ಸಂಬಂಧಿತ್ವವು ಸಂಗತವಾಗುತ್ತದೆ.

**"ವಿಶೇಷಸ್ಯವಿಶೇಷೀ ಸ ಸ್ವೇನೈವ ಸಮವಾಯವತ್ ।**
**ಕಲ್ಪನಾಗುರುತಾದೋಷಾತ್ಪದಾರ್ಥಾಂತರತಾ ನಹಿ ।। (ಅನುವ್ಯಾಖ್ಯಾನ)**

**ಅರ್ಥ** :- ಸಮವಾಯವತ್ = (ತಾರ್ಕಿಕರ ಮತದಲ್ಲಿ ಹೇಗೆ ಸಮವಾಯವು ಬೇರೆ ಸಂಬಂಧದ ಅಪೇಕ್ಷೆಯಿಲ್ಲದೆ ತನ್ನ ಇರುವಿಕೆಗೆ ತಾನೇ ನಿರ್ವಾಹಕವು (ಸ್ವನಿರ್ವಾಹಕಸ್ವ) ಎಂದು ಅಂಗೀಕರಿಸಿ ಅನವಸ್ಥಾದೋಷವನ್ನು ಪರಿಹರಿಸುವರೋ) ಸಮವಾಯದಂತೆ, ವಿಶೇಷಸ್ಯ = ವಿಶೇಷವೂ ಕೂಡ, ಸ್ವೇನೈವ = ತನ್ನಿಂದಲೇ, ವಿಶೇಷೀ = ವಿಶೇಷವುಳ್ಳದುದು. ಅದಕ್ಕೆ ಬೇರೆ ವಿಶೇಷಾಂತರದ ಅಪೇಕ್ಷೆಯು ಬೇಕಿಲ್ಲ. ಆದಕಾರಣ ಯಾವ ಬಾಧಕಕ್ಕೂ ಅವಕಾಶವಿಲ್ಲ. ಕಲ್ಪನಾಗುರುತಾದೋಷಾತ್ = ಭೇದವಿದೆಯೆಂಬ ಪಕ್ಷದಲ್ಲಿ ಕಲ್ಪನಾಗೌರವದೋಷವಿರುವ ಪ್ರಯುಕ್ತ ಗುಣಗುಣಿ ಮೊದಲಾದವುಗಳಿಗೆ, ಪದಾರ್ಥಾಂತರತಾ = ಪದಾರ್ಥಾಂತರತ್ವವು, ವಿಭಿನ್ನವಾದ ಪದಾರ್ಥತ್ವವು ಗುಣವೇ ಬೇರೆ, ಗುಣಿಯೇ ಬೇರೆ, ಎರಡಕ್ಕು ಅತ್ಯಂತ ಭೇದವಿದೆ ಎಂಬುದು, ನ ಹಿ = ಅಂಗೀಕಾರಕ್ಕೆ ಅರ್ಹವಲ್ಲ. ಕಲ್ಪನಾಲಾಘವವಿರುವುದರಿಂದ ಗುಣಗುಣಿಗಳಿಗೆ ಸವಿಶೇಷಾಭೇದವೇ ಯುಕ್ತವಾಗಿದೆ. ಗುಣಗುಣ್ಯಾದಿಗಳಿಗೆ ಭೇದವನ್ನು ಹೇಳಿದರೆ ಕಲ್ಪನಾಗೌರವ ದೋಷವನ್ನೇ ಅನುವ್ಯಾಖ್ಯಾನಕಾರರಾದ ಶ್ರೀಮದಾನಂದತೀರ್ಥಭಗವತ್ಪಾದರು ವಿವರಿಸುತ್ತಾರೆ.

**"ಕಲ್ಪಯಿತ್ವಾ ಷಟ್ಪದಾರ್ಥಾನ್ ಸಾಭಾವಾನಪಿ ಕೇವಲಂ ।**
**ಏಕಸ್ಮಿನ್ನ ವಿಶೇಷಶ್ಚೇತ್ ಕಿಂ ಪೂರ್ವಂ ತಸ್ಯ ವಿಸ್ಮೃತಿಃ ।। (ಅನುವ್ಯಾಖ್ಯಾನಮ್)**

**ಅರ್ಥ** :- ಸಾಭಾವಾನಪಿ = ಅಭಾವದಿಂದ ಸಹಿತಗಳಾದ, ಕೇವಲಂ = ಷಟ್ಪದಾರ್ಥಾನ್ = ಮುಖ್ಯವಾಗಿ ಆರೇ ಪದಾರ್ಥಗಳನ್ನು, ಕಲ್ಪಯಿತ್ವಾ = ಕಲ್ಪಿಸಿಕೊಂಡವರಾಗಿ, ಕೇವಲಂ ಏಕಸ್ಮಿನ್ = ಆ ಆರರ ಪೈಕಿ ಒಂದೇ ಸಮವಾಯದಲ್ಲಿ, ಸ ವಿಶೇಷಶ್ಚೇತ್ = ವಿವಿಧ ವ್ಯವಹಾರಗಳಿಗೆ ಕಾರಣವಾದ ವಿಶೇಷವನ್ನು ಅಂಗೀಕರಿಸುವುದಾದರೆ, ಕಿಂ = ಯಾವ ಕಾರಣದಿಂದ, ಪೂರ್ವಂ = ಮೊದಲನೆಯ ಪದಾರ್ಥವಾಗಿ ಪರಿಗಣಿಸಲ್ಪಟ್ಟಿರುವ ದ್ರವ್ಯದಲ್ಲಿ, ತಸ್ಯ = ಆ ವಿಶೇಷಕ್ಕೆ, ವಿಸ್ಮೃತಿಃ = ವಿಸ್ಮರಣವು (ಉಂಟಾಯಿತು ?)

**ಅಭಿಪ್ರಾಯ** :- ವೈಶೇಷಿಕರು ಆರು ಪದಾರ್ಥಗಳನ್ನೂ, ಅಂದರೆ ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ, ಸಮವಾಯಗಳೆಂದು ಆರು ಭಾವಪದಾರ್ಥಗಳನ್ನೂ ಏಳನೆಯದಾಗಿ ಅಭಾವ ಎಂಬ ಪದಾರ್ಥವನ್ನೂ ಒಪ್ಪಿ, ಒಟ್ಟಿನಲ್ಲಿ ಪದಾರ್ಥಗಳು ಏಳೇ ಎಂದು ಪ್ರತಿಪಾದಿಸಿರುತ್ತಾರೆ.

ಆದರೆ ಸಮವಾಯದಲ್ಲಿ ಕೋರತ್ವ, ತದ್ಧರ್ಮತ್ವ, ಸತ್ತ್ವ, ಜ್ಞೇಯತ್ವಾದಿಗಳು ಸಮವಾಯಕ್ಕಿಂತಲೂ ಬೇರೆ ಅಲ್ಲವೆಂದು ಹೇಳಿ ಸ್ವಭಾವವಿಶೇಷವೆಂದು ಕರೆಯಲ್ಪಡತಕ್ಕ ವಿಶೇಷದಿಂದಲೇ ಸಮವಾಯದ ವಿಷಯದಲ್ಲಿ (ಸಮವಾಯ

ಷಾ), ಸಮವಾಯೇ ಸತ್ತ್ವಂ ಇತ್ಯಾದಿ ಭೇದ ವ್ಯವಹಾರಗಳು ಸಂಗತವಾಗುತ್ತವೆಯೆಂದು ಹೇಳುವರು. ಸಮವಾಯಕ್ಕೂ ಅದರ ಧರ್ಮಗಳಿಗೂ ಭೇದವು ಇಲ್ಲದಿದ್ದರೂ, ಅಭೇದವಿದ್ದರೂ, ವ್ಯಪದೇಶಭೇದಾದಿಗಳಿಗೆ ನಿರ್ವಾಹಕವಾದ ವಿಶೇಷವನ್ನೇ ಹಾಗಿದ್ದರೂ ಒಪ್ಪಿ ಭೇದವ್ಯವಹಾರವನ್ನು ನಿರ್ವಾಹ ಮಾಡಿ ಅನವಸ್ಥಾದೋಷದಿಂದ ಬಿಡುಗಡೆ ಪಡೆದಿರುತ್ತಾರೆ. ಅಂತೂ ಅವರಿಗೆ ಸಮವಾಯದ ವಿಷಯದಲ್ಲಿ ಸ್ವಭಾವವಿಶೇಷಾಪರನಾಮಕವಾದ ವಿಶೇಷವೇ ಗತಿಯಾಗಿದೆ.

ತಾರ್ಕಿಕರ ಮತದಲ್ಲಿ ೧. ಘಟಕ್ಕೂ ಅದರ ರೂಪಕ್ಕೂ ಭೇದವನ್ನು ಹೇಳಬೇಕು.

೨. ಆ ಘಟಕ್ಕೂ ಅದರ ರೂಪಕ್ಕೂ, ನೀಲೋ ಘಟಃ ಘಟಃ ಶುಕ್ಲಃ.

ಇತ್ಯಾದಿ ಸಾಮಾನಾಧಿಕರಣ್ಯಘಟಕವಾಗಿ ಘಟ ಮತ್ತು ಅದರ ರೂಪಕ್ಕೂ ಬೇರೆಯಾದ ಸಮವಾಯ ಎಂಬ ಸಂಬಂಧವನ್ನು ಕಲ್ಪಿಸಬೇಕು. ಅನವಸ್ಥಾದೋಷದ ಪರಿಹಾರಕ್ಕಾಗಿ ಸಮವಾಯಕ್ಕೆ ಸ್ವನಿರ್ವಾಹಕತ್ವವನ್ನು ಕಲ್ಪಿಸಬೇಕು.

ಈ ರೀತಿ ೧. ಗುಣಗುಣಿ ಭೇದಕಲ್ಪನಾ

೨. ಸಂಬಂಧರೂಪಸಮವಾಯಕಲ್ಪನಾ

೩. ಸಮವಾಯಕ್ಕೆ ಸ್ವನಿರ್ವಾಹಕತ್ವಕಲ್ಪನಾ

ಈ ರೀತಿ ತಾರ್ಕಿಕರ ಮತದಲ್ಲಿ ಮಹಾಗೌರವವು ಅಪರಿಹಾರ್ಯವಾಗಿದೆ. ಸಮವಾಯದಲ್ಲಿರುವ ತದ್ವತ್ತ್ವಾದಿಗಳು ಸಮವಾಯಕ್ಕಿಂತ ಬೇರೆ ಎಂದು ತಾರ್ಕಿಕರು ಹೇಳಿದರೆ ಅದಕ್ಕೆ ದ್ರವ್ಯಾದಿಗಳಲ್ಲಿ ಅಂತರ್ಭಾವವನ್ನು ಹೇಳಬೇಕು. ಅದು ಶಕ್ಯವಿಲ್ಲ. ಸಮವಾಯದಲ್ಲಿನ ತದ್ವತ್ತ್ವಾದಿಗಳು, ದ್ರವ್ಯವಲ್ಲ, ಗುಣವೂ ಅಲ್ಲ. ಕರ್ಮಾದಿಗಳೂ ಅಲ್ಲ. ಏವಂಚ ಏಳು ಪದಾರ್ಥಗಳಲ್ಲೂ ಅಂತರ್ಭಾವವಿಲ್ಲದ ಮೇಲೆ ಬೇರೆ ಪದಾರ್ಥವೆಂದು ಹೇಳಿದರೆ ಏಳೇ ಪದಾರ್ಥಗಳೆಂಬ ಅವರ ವಿಭಾಗಕ್ಕೇನೇ ಚ್ಯುತಿ ಬಂದಂತಾಯಿತು. ಆದಕಾರಣ ಸಮವಾಯದ ಸ್ವರೂಪವೆಂದೇ ಹೇಳಬೇಕು.

ಸಿದ್ಧಾಂತಿಗಳ ಪಕ್ಷದಲ್ಲಿ ಮೇಲೆ ಹೇಳಿದಂತಹ ಮೂರು ಬಗೆಯಾದ ಕಲ್ಪನೆಗಳಿಲ್ಲ. ವಸ್ತುಸ್ವರೂಪವೇ ತನ್ನಲ್ಲಿರುವ ಸಕಲ ವಿಧಗಳಾದ ಭೇದಕಾರ್ಯಗಳಿಗೂ ನಿರ್ವಾಹಕವಾದ ವಿಶೇಷಸ್ವಭಾವರೂಪವಾಗಿರುವುದರಿಂದ ಒಂದರಲ್ಲಿಯೇ ಗುಣ, ಗುಣಿ ಎಂಬ ವ್ಯವಹಾರವೂ, ಅನೇಕತ್ವಾದಿ ವ್ಯವಹಾರಗಳೂ ಬರುತ್ತವೆ.

ಒಂದೇ ವಸ್ತುವು (ದ್ರವ್ಯವು) ರೂಪವತ್ತ್ವಂ ಎಂಬ ವಿಶೇಷಾಕಾರವಾದ ವೇಷದಿಂದ ಧರ್ಮರೂಪವಾಗಿಯೂ, ಆ ಬಗೆಯಾದ ಧರ್ಮಕ್ಕೆ ಆಶ್ರಯರೂಪವಾದ ವಿಶೇಷಾಕಾರವಾದ ವೇಷದಿಂದ ಧರ್ಮಿ ಎಂದೂ ವ್ಯವಹರಿಸಲ್ಪಡುತ್ತದೆ. ವಸ್ತುವಿನ ಸ್ವಭಾವವೇ ರೂಪವೆಂಬುದಾಗಿಯೂ, ರೂಪಿ ಎಂಬುದಾಗಿಯೂ ವಿಶೇಷದಿಂದ ವ್ಯವಹರಿಸಲ್ಪಡುತ್ತದೆ.

ಧರ್ಮಿಗೂ ಧರ್ಮಕ್ಕೂ ಅಭೇದವೇ ಇದ್ದಾಗ್ಯೂ, ಸ್ವನಿರ್ವಾಹಕವಿಶೇಷದ ಬಲದಿಂದ ರೂಪಕ್ಕೆ ಧರ್ಮತ್ವವೂ ರೂಪಿಗೆ ಧರ್ಮಿತ್ವವೂ, ರೂಪಕ್ಕೆ ಆಧೇಯತ್ವವೂ, ಘಟಾದಿಗಳಿಗೆ ಆಧಾರತ್ವವೂ, ವಿಶೇಷಕ್ಕೆ ವಿಶೇಷಿತ್ವವೂ ಧರ್ಮಕ್ಕೂ ಧರ್ಮಿಗೂ ಭೇದತ್ವವೂ, ವಿಶೇಷಕ್ಕೇನೇ ನಿರ್ವಾಹಕತ್ವವೂ, ನಿರ್ವಾಹ್ಯತ್ವವೂ, ಇದೇ ಬಗೆಯಾದ ಎಲ್ಲ ವಿಧವಾದ ವ್ಯವಹಾರಗಳೂ ಬರುತ್ತವೆ. ವಿಶೇಷವು ಪ್ರತ್ಯಕ್ಷಪ್ರಮಾಣದಿಂದಲೂ, ವ್ಯವಹಾರಾನ್ಯಥಾನುಪಪತ್ತಿರೂಪವಾದ ಅರ್ಥಾಪತ್ತಿಯಿಂದಲೂ ಸಿದ್ಧವಾಗಿರುವ ವಿಷಯವನ್ನು ಅನುವ್ಯಾಖ್ಯಾನದಲ್ಲಿ ಪ್ರತಿಪಾದಿಸಿರುತ್ತಾರೆ.

"ಯೇನ ಪ್ರತ್ಯಕ್ಷಸಿದ್ಧೇನ ವ್ಯವಹಾರೋಽಖಿಲೋ ಭವೇತ್ ।
ಭಾವಾಭಾವವಿಭಾಗೇನ ಯಂ ವಿನಾ ನ ಕಥಂಚನ ॥
ಏತಾದೃಶೇ ವಿಶೇಷೇಽಸ್ಮಿನ್ ಕೋ ದ್ವೇಷೋ ವಾದಿನಾಂ ಭವೇತ್ ।
ಅಭೇದೇನ ಪ್ರತೀತಿಶ್ಚ ಕಾರ್ಯಕಾರಣಪೂರ್ವಕೇ ॥
ಅಭಾವಾಂತೇ ಪದಾರ್ಥೇಽಸ್ಮಿನ್ ಸ ವಿಶೇಷಾವಸೀಯತೇ ॥

**ಅರ್ಥ** :- ಪ್ರತ್ಯಕ್ಷಸಿದ್ಧೇನ = ಪ್ರತ್ಯಕ್ಷ ಪ್ರಮಾಣದಿಂದ ಸಿದ್ಧವಾದ, ಯೇನ = ಯಾವುದರಿಂದ (ಯಾವ ವಿಶೇಷದಿಂದ ಅಖಿಲಃ = ಸಮಸ್ತವಾದ, (ಎಲ್ಲ ವಿಧವಾದ) ಭಾವಾಭಾವವಿಭಾಗೇನ = (ಭಾವ = ವಿಧಿರೂಪವಾದ) (ಅಭಾವ = ನಿಷೇಧರೂಪವಾದ) ಮತ್ತು ಗುಣವಿಶಿಷ್ಟರೂಪವಾದ ಮತ್ತು ಕ್ರಿಯಾವಿಶಿಷ್ಟರೂಪವಾದ, ವ್ಯವಹಾರಃ = ವ್ಯವಹಾರವು, ಕಥಂಚನ = ಬೇರೆ ಯಾವುದೇ ರೀತಿಯಿಂದಲೂ, ಭವೇತ್ = ಕೂಡುತ್ತದೆಯೋ, ಯಂ ವಿನಾ = ಯಾವುದು ಇಲ್ಲದೇ ಇದ್ದರೆ ಅಂದರೆ ಯಾವ ವಿಶೇಷವು ಇಲ್ಲದೇ ಇದ್ದರೆ (ವಿಶೇಷವನ್ನು ಅಂಗೀಕರಿಸದೇ ಇದ್ದರೆ), ನ = ಎಲ್ಲಾ ಬಗೆಗಳಾದ ವ್ಯವಹಾರಗಳು ಆಗುವುದಿಲ್ಲವೋ, ಕೂಡುವುದಿಲ್ಲವರೋ, (ಧರ್ಮಧರ್ಮಿ ವ್ಯವಹಾರ, ಆಧಾರ ಆಧೇಯಭಾವ ವ್ಯವಹಾರ, ಗುಣಗುಣಿಭಾವ ವ್ಯವಹಾರ, ಕ್ರಿಯಾಕ್ರಿಯೆಯುಳ್ಳದ್ದು ಎಂಬ ವ್ಯವಹಾರ, ಸಮವಾಯದಲ್ಲಿ, ತದ್ವತ್ತ್ವ, ಸತ್ತ್ವ, ಅಭಿಧೇಯತ್ವ, ಜ್ಞಾತತ್ವ, ಇತ್ಯಾದಿ ವ್ಯವಹಾರಗಳು ವಿಶೇಷವನ್ನು ಒಪ್ಪದಿರುವವರ ಮತದಲ್ಲಿ ಕೂಡುವುದೇ ಇಲ್ಲವೋ, (ಅವುಗಳು ಭೇದವನ್ನು ಒಪ್ಪಿದರೆ ಅನವಸ್ಥಾ ಎಂಬ ಪ್ರಬಲವಾದ ದೋಷವು ಅಪರಿಹಾರ್ಯವಾಗಿ ಉಂಟಾಗುವುದೋ) ಏತಾದೃಶೇ = ಇಂತಹ ಸರ್ವವ್ಯವಹಾರಗಳಿಗೂ ನಿರ್ವಾಹಕವಾದ, ತನಗೂ ನಿರ್ವಾಹಕವಾದ (ಸ್ವನಿರ್ವಾಹಕವಾದ), ಅಸ್ಮಿನ್ = ಈ, ವಿಶೇಷೇ = ವಿಶೇಷದಲ್ಲಿ, ವಾದಿನಾಂ = ವಾದಿಗಳಿಗೆ, ಅದನ್ನು ತಿಳಿಯುವವರಿಗೂ ಸಹ, ದ್ವೇಷಃ = ದ್ವೇಷಭಾವವು, ಕಃ = ಯಾವುದು ? (ಏತಕ್ಕೆ ಅವರು ಸರ್ವನಿರ್ವಾಹಕವಾದ ವಿಶೇಷವನ್ನು ದ್ವೇಷಿಸುತ್ತಾರೆ ?) ಭವೇತ್ = ಆಗುವುದು, ಇತರ ವಾದಿಗಳು ಇಂತಹ ವಿಶೇಷವನ್ನು ಒಪ್ಪದೇ ಇರುವುದಕ್ಕೆ ಏನು ಕಾರಣವು ? ಮಾನಾ ಧೀನಾ ಮೇಯಸಿದ್ಧಿಃ = ಪ್ರಮಾಣದಿಂದಲೇ ಪ್ರಮೇಯವು ಸಿದ್ಧಿಸುತ್ತದೆ. ಪ್ರಮೇಯಸಿದ್ಧಿಗಾಗಿ ಪ್ರಮಾಣವು ಬೇಕು.

ವಿಶೇಷದ ವಿಷಯದಲ್ಲಿ ಪ್ರತ್ಯಕ್ಷಪ್ರಮಾಣವಿದೆ. ವ್ಯವಹಾರಾನ್ಯಥಾನುಪಪತ್ತಿ ಎಂಬ ಅರ್ಥಾಪತ್ತಿ ಪ್ರಮಾಣವೂ ಇರುವಾಗ ಅದನ್ನು (ವಿಶೇಷವನ್ನು) ಏತಕ್ಕೆ ಅಂಗೀಕರಿಸುವುದಿಲ್ಲ ? ಕಾರ್ಯಕಾರಣ ಪೂರ್ವಕೇ = ಕಾರ್ಯಕಾರಣಪೂರ್ವಕವಾದ, ಅಂದರೆ ಅವಯವ ಅವಯವಿಗಳೇ ಮೊದಲಾದ ಗುಣಗುಣಿ ಮೊದಲಾದ, ಅಭಾವಾಂತೇ = ಅನ್ಯೋನ್ಯಾಭಾವವೇ (ಭೇದವೇ) ಕೊನೆಯಾಗಿ ಉಳ್ಳ, ಅಸ್ಮಿನ್ = ಈ, ಪದಾರ್ಥೇ = ಪದಾರ್ಥದಲ್ಲಿ, ಅಭೇದೇನ = ಅಭೇದದಿಂದ, ಪ್ರತೀತಿಶ್ಚ = ಪ್ರತೀತಿಯೂ ಸಹ, ಸವಿಶೇಷಾ = ವಿಶೇಷವೆಂಬ ವಿಷಯ ದಿಂದ ಕೂಡಿರುವುದಾಗಿ, ಅವಸೀಯತೇ = ಸಾಕ್ಷಿರೂಪವಾದ ಅಬಾಧಿತ ಪ್ರಮಾಣದಿಂದ ನಿಶ್ಚಯಿಸಲ್ಪಡುತ್ತದೆ.

**ತಾತ್ಪರ್ಯ** :- ಮೇಲಿನ ಅನುವ್ಯಾಖ್ಯಾನ ವಾಕ್ಯದಲ್ಲಿ ಯೇನ ಪ್ರತ್ಯಕ್ಷಸಿದ್ಧೇನ ಎಂದು ಹೇಳಿರುವುದರಿಂದ ವಿಶೇಷವನ್ನು ಅಂಗೀಕರಿಸುವ ವಿಷಯದಲ್ಲಿ ಪ್ರತ್ಯಕ್ಷವೂ ಸಹ ಪ್ರಮಾಣವೆಂದು ಹೇಳಲಾಗಿದೆ.

"ಯೇನ ಅಖಿಲವ್ಯವಹಾರೋ ಭವೇತ್, ಯಂ (ವಿಶೇಷಂ) ವಿನಾ ನ ಭವೇತ್" ಎಂದು ಅನ್ವಯವನ್ನೂ, ವ್ಯತಿರೇಕವನ್ನೂ ತೋರಿಸಿ, ಸಕಲ ವಿಧಗಳಾದ ವ್ಯವಹಾರಗಳಿಗೂ ವಿಶೇಷಕಾರ್ಯಕತ್ವವನ್ನು ಹೇಳಿರುವುದರಿಂದ, ವಿಶೇಷದ ವಿಷಯದಲ್ಲಿ ವ್ಯವಹಾರದ ಅನ್ಯಥಾನುಪಪತ್ತಿಯೆಂಬ ಅರ್ಥಾಪತ್ತಿ ಪ್ರಮಾಣವನ್ನೂ ತೋರಿಸಿದಂತಾಗಿದೆ.

ವಿಶೇಷವನ್ನು ಅಂಗೀಕರಿಸದಿದ್ದರೆ ವ್ಯವಹಾರದ ಉಚ್ಛೇದವೇ ಆಗಬೇಕಾದೀತು ಎಂದು ಬಾಧಕವನ್ನು ಹೇಳಿದ್ದಾರೆ.

ಗುಣಾಗುಣಿಗಳಿಗೂ, ಅವಯವ ಅವಯವಿಗೂ, ಕ್ರಿಯಾಕ್ರಿಯಾವದ್ವ್ಯಕ್ತಿಗಳಿಗೂ ಪ್ರತೀತಿಯು ವಿಶೇಷ ಸಹಿತವಾಗಿಯೇ ಸಾಕ್ಷಿ ಪ್ರತ್ಯಕ್ಷದಿಂದ ನಿಶ್ಚಿತವಾಗಿದೆ.

ತಂತುಪಟಾದಿ ವಿಷಯಕವಾದ ಪ್ರತೀತಿಯು, ಕುಂಡ - ಬದರವಿಷಯಕವಾದ ಪ್ರತೀತಿಗಿಂತಲೂ ವಿಲಕ್ಷಣವಾಗಿದೆ ಯೆಂಬುದು ಅನುಭವಸಿದ್ಧವೇ ಆಗಿದೆ. ಕುಂಡಬದರ ಪ್ರತೀತಿಯು ಹೇಗೆ ಕುಂಡಕ್ಕೂ ಬದರಕ್ಕೂ ಅತ್ಯಂತ ಭೇದವನ್ನೇ ವಿಷಯೀಕರಿಸುತ್ತಲಿದೆಯೋ ಹಾಗೆಯೇ ತಂತುಪಟಪ್ರತೀತಿಯು ಅಲ್ಲವೆಂಬುದು ಸುಪ್ರಸಿದ್ಧ. ಅಂದರೆ ತಂತುಪಟ ಪ್ರತೀತಿಯು ಅಭೇದವನ್ನೇ ವಿಷಯೀಕರಿಸುವುದರಿಂದ ಅಭೇದವಿಷಯಕವೆಂದೇ ಹೇಳಬೇಕು.

ತಂತುಪಟಗಳಿಗೆ ಅಭೇದವು ಉಂಟೆಂಬ ಬಗ್ಗೆ ಮತ್ತೊಂದು ಯುಕ್ತಿಯೂ ಉಂಟು. ಯಾವ ತಂತು ಸಮುದಾಯ ದಿಂದ ಪಟವು ಹುಟ್ಟುವುದೋ, ಅಂತಹ ಪಟವು ಹುಟ್ಟುವುದಕ್ಕೆ ಮುಂಚೆ ಎಷ್ಟು ಜಾಗವನ್ನು (ಪ್ರದೇಶವನ್ನು) ಆಕ್ರಮಿಸಿ ತಂತುಗಳಿವೆಯೋ ಪಟವೂ ಸಹ ಅಷ್ಟೇ ಜಾಗವನ್ನು ಆಕ್ರಮಿಸಿರುವುದು ಕಂಡುಬಂದಿದೆ. ತಂತುಪಟಗಳು ಅತ್ಯಂತ ಭಿನ್ನ ಗಳಾದರೆ ಮೂರ್ತಪದಾರ್ಥಗಳಿಗೆ ಸಮಾನದೇಶತ್ವವು ಕೂಡಲಾರದು. ಈ ಕಾರಣದಿಂದಲೂ ಪಟವು ತಂತುಗಳಿಂದ ಅಭಿನ್ನವೆಂದು ತಿಳಿಯಲ್ಪಡುತ್ತದೆ.

ಮತ್ತು ಅವಯವದಲ್ಲಿ ಯಾವ ರೂಪ, ಯಾವ ರಸಾದಿಗಳಿವೆಯೋ ಅದೇ ರೂಪರಸಾದಿಗಳು ಅವಯವಿಯಲ್ಲಿ ಕಂಡುಬರುತ್ತಿರುವುದೂ ಸಹ ಅವಯವ ಅವಯವಿಗಳು ಅಭಿನ್ನವೆಂಬಲ್ಲಿ ಪ್ರಮಾಣವಾಗಿದೆ.

ಇಲ್ಲಿ ಮತ್ತೊಂದು ಶಂಕೆಗೂ ಉತ್ತರವನ್ನು ಹೇಳಲಾಗಿದೆ.

ಗುಣಗುಣಿಗಳಿಗೆ, ದ್ರವ್ಯಕ್ರಿಯೆಗಳಿಗೆ ಅಭೇದವೇ ಇರುವುದಾದರೆ "ಶುಕ್ಲಃ ಪಟಃ, ಪಟಃಚಲತಿ" ಇತ್ಯಾದಿ ಸಾಮಾನಾ ಧಿಕರಣ್ಯ ವ್ಯವಹಾರವು ಹೇಗೆ ಕೂಡುವುದು ?

ದಂಡೀ, ಕುಂಡಲೀ ಎಂಬ ವ್ಯವಹಾರದಲ್ಲಿ ದಂಡಕ್ಕೂ ಪುರುಷನಿಗೂ, ಕುಂಡಲಕ್ಕೂ ಅದನ್ನು ಧರಿಸಿರುವವನಿಗೂ, ಅತ್ಯಂತಭೇದವೇ ಇರುವಂತೆ ಗುಣಗುಣಿಗಳ ವಿಷಯದಲ್ಲಿಯೂ ಶುಕ್ಲಃ ಪಟಃ ಎಂಬಲ್ಲಿಯೂ ಭೇದವನ್ನೇ ಹೇಳ ಬೇಕಲ್ಲವೇ ? ಎಂಬ ಶಂಕೆಗೆ ಈ ರೀತಿ ಸಮಾಧಾನವನ್ನು ತೋರಿಸಿದ್ದಾರೆ.

ಎಲ್ಲಿ ಕೇವಲ ಅತ್ಯಂತ ಅಭೇದವೇ ಇರುತ್ತದೆಯೋ ಅಂದರೆ ನಿರ್ವಿಶೇಷಾಭೇದವು ಇರುತ್ತದೆಯೋ ಅಂತಹಕಡೆ ಸಾಮಾನಾಧಿಕರಣ್ಯವ್ಯವಹಾರವು ಇರುವುದಿಲ್ಲ. ಅದಕ್ಕೆ ಉದಾಹರಣೆ = ಘಟಃ ಕಲಶಃ ಎಂದು ಯಾರೂ ಒಟ್ಟಿಗೆ ಪ್ರಯೋಗಿಸುವುದಿಲ್ಲ.

ಇದು ನ್ಯಾಯಸುಧಾಕಾರರ ವಾಕ್ಯದ ಅಭಿಪ್ರಾಯವೇ ಆಗಿದೆ. ನ್ಯಾಯಸುಧಾವಾಕ್ಯವು ಈ ರೀತಿ ಇದೆ.

**"ಯತ್ರ ಕೇವಲಂ ಅಭೇದಃ ಪ್ರತೀಯತೇ, ನ ತತ್ರ ಸಾಮಾನಾಧಿಕರಣ್ಯ ವ್ಯವಹಾರೋಽಸ್ತಿ।**
**ಯಥಾಘಟಃ ಕಲಶಃ ಇತಿ।।**
**ಯತ್ರತು, ಅಭೇದಃ ಪ್ರತೀಯಮಾನಃ, ವಿಶೇಷೇಣಸಹಿತ ಏವ ಪ್ರತೀಯತೇ (ತತ್ರ) ವಿಶೇಷಸ್ಯ ಭೇದಪ್ರತಿನಿಧಿಃ ಸಾಮಾನಾಧಿಕರಣ್ಯವ್ಯವಹಾರಂ ಪ್ರಸೂತ ಇತಿ।। "**

**ಅಭಿಪ್ರಾಯ** :- ಎಲ್ಲಿ ಅಭೇದವು ವಿಶೇಷದಿಂದ ಸಹಿತವಾಗಿಯೇ ಅಂದರೆ ಸವಿಶೇಷಾಭೇದವೇ ತೋರುತ್ತದೆಯೋ ಅಲ್ಲಿ ಅಭೇದವು ಇದ್ದಾಗ್ಯೂ (ಭೇದದ ಜಾಗದಲ್ಲಿ) ಅದಕ್ಕೆ ಪ್ರತಿನಿಧಿಯಾದ ವಿಶೇಷವು ಸಾಮಾನಾಧಿಕರಣ್ಯ ವ್ಯವಹಾರವನ್ನ ಉಂಟುಮಾಡುತ್ತದೆ. ಉದಾಹರಣೆ: ಶುಕ್ಲಃ ಪಟಃ ಎಂಬು ಪ್ರಸಿದ್ಧವಾದ ವ್ಯವಹಾರವು ಇರುತ್ತದೆ.

ಪಟಸ್ಯ ಶೌಕ್ಲ್ಯಂ ಇತ್ಯಾದಿ ವ್ಯವಹಾರವು (ನಿಷ್ಪರ್ಯಾರ್ಥವು) ಸ್ವರೂಪತ್ವಂ ಎಂಬುದರಂತೆ ನಿಷ್ಪರ್ಯಾರ್ಥವು.

"ಪಟಸ್ಯ ಶೌಕ್ಲ್ಯಂ" ಎಂಬುದು ಪಟಸ್ಯಭೇದಃ ಎಂಬ ವಿಶೇಷಪ್ರತೀತಿಯಂತೆ ಪ್ರತೀತಿಯಾಗಿದೆ. ಪಟಸ್ಯ ಭೇದಃ ಎಂಬಲ್ಲಿ ಪಟಕ್ಕೂ ಭೇದಕ್ಕೂ ಮತ್ತೊಂದು ಭೇದವಿರುವುದಿಲ್ಲ. ಹಾಗೆ ಹೇಳಿದರೆ ಅನವಸ್ಥಾದೋಷವು ಬಟ್ಟದ್ದಲ್ಲ. ಸಮವಾಯಸ್ಯ ಸತ್ತ್ವಂ ಎಂಬಲ್ಲಿ ಸ್ವರೂಪಭೂತವಾದ ಸತ್ತ್ವವೇ ವಿಶೇಷವಾಗಿದೆ. ಸಮವಾಯಕ್ಕಿಂತಲೂ ಬೇರೆಯಾದ ಸತ್ತ್ವವನ್ನು ವೈಶೇಷಿಕರು ಆ ಜಾಗದಲ್ಲಿ ಅಂಗೀಕರಿಸಿಲ್ಲ.

ಪ್ರಕೃತದಲ್ಲಿ ಘಟಃ ಕಲಶಃ ಎಂದು ವ್ಯವಹಾರವು ಇರುವುದಿಲ್ಲ. ಯಾರೂ ಆ ರೀತಿ ಪ್ರಯೋಗಿಸುವುದಿಲ್ಲ. ಆದರೆ ಶುಕ್ಲಃ ಪಟಃ ಎಂದೂ, ಪಟಸ್ಯ ಶೌಕ್ಲ್ಯಂ ಎಂದೂ ಪ್ರಯೋಗಗಳಿವೆ. ಇದು ಘಟಃ ಕಲಶಃ ಎಂಬ ಪ್ರತೀತಿಗಿಂತಲೂ ಅಧಿಕವಾದ ವಿಷಯವನ್ನು ಒಳಗೊಂಡಿದೆಯೆಂಬುದು ತಾನಾಗಿಯೇ ಗೊತ್ತಾಗುತ್ತದೆ. ಇದು ವಿಶೇಷಾಖ್ಯ ವಿಷಯದಿಂದ ಯುಕ್ತವಾಗಿರುವುದನ್ನು ಗಮನಿಸಬೇಕು. ಇದರಂತೆ ಅವಯವ ಅವಯವಿಗಳಿಗೂ, ಗುಣಗುಣಿಗಳಿಗೂ, ಕ್ರಿಯಾ ಕ್ರಿಯಾವುಳ್ಳವುಗಳಿಗೂ, ಜಾತಿವ್ಯಕ್ತಿಗಳಿಗೂ, ಹಾರ್ಕಿಕರೀತ್ಯಾ ಸಮವಾಯತದ್ಧರ್ಮಿಗಳಿಗೂ ಅಭೇದದಿಂದ ಪ್ರತೀತಿಯು ಇರುವುದು ಮಾತ್ರವಲ್ಲದೆ ಈ ಪ್ರತೀತಿಯು ಕುಂಭಕಲಶಾದಿಪ್ರತೀತಿಗಿಂತಲೂ ವಿಲಕ್ಷಣವೆಂದು ನಿರ್ಣೀತವಾಗಿದೆ. ಸಾಕ್ಷಾತ್ತಾಗಿ ಭೇದವುಳ್ಳ ಘಟಪಟಾದಿ ಪ್ರತೀತಿಗಿಂತಲೂ ವಿಲಕ್ಷಣವಾದ ಈ ಪ್ರತೀತಿಯು ಅಭೇದದಲ್ಲಿ ವಿಶ್ರಾಂತಿಯನ್ನು ಹೊಂದುವುದು.

ಸಾಮಾನಾಧಿಕರಣ್ಯವ್ಯವಹಾರವೂ ಇದೆ.

ಅತ್ಯಂತ ಅಭೇದಮಾತ್ರವೇ ವಿಷಯವಾಗಿದ್ದರೆ ಘಟಃ ಕಲಶಃ ಎಂಬಂತೆ ಸಾಮಾನಾಧಿಕರಣ್ಯ ವ್ಯವಹಾರವೇ ಬರುತ್ತಿರಲಿಲ್ಲ. ಪ್ರಕೃತದಲ್ಲಿ "ನೀಲೋ ಘಟಃ" ಎಂದೂ ನೀಲಘಟಃ ಎಂದೂ ಸಾಮಾನಾಧಿಕರಣ್ಯ ವ್ಯವಹಾರವೂ ಬರುತ್ತಿದೆ. ಇದರಿಂದ ಈ ಪ್ರತೀತಿಯಲ್ಲಿ ಕೇವಲ ಅಭೇದವು ವಿಷಯವಾಗಿಲ್ಲ. ಅದರ ಜೊತೆಗೆ ಅಧಿಕಾಂಶವೂ ಭಾಸವಾಗುತ್ತಿದೆಯೆಂದೇ ತೀರ್ಮಾನಿಸಬೇಕು. ಆ ಅಧಿಕಾಂಶವೇ ವಿಶೇಷವು. ಆದಕಾರಣ ಸವಿಶೇಷಾಭೇದಗೋಚರವಾದ ಈ ಪ್ರತೀತಿಯು ಇಂದ್ರಿಯಜನ್ಯವಾಗಿದೆ. ಸವಿಶೇಷವಾದುದರಿಂದ ವಿಶೇಷದ ವಿಷಯದಲ್ಲಿ ಪ್ರತ್ಯಕ್ಷವು ಪ್ರಮಾಣವಾಗಿದೆ.

ದ್ರವ್ಯ (ವಸ್ತು) ಸ್ವಭಾವವಿಶೇಷರೂಪವಾದ ಸ್ವನಿರ್ವಾಹಕವಾದ ವಿಶೇಷದ ವಿಷಯದಲ್ಲಿ ಪ್ರತ್ಯಕ್ಷಪ್ರಮಾಣವನ್ನು ತಿಳಿಸಿ, ವ್ಯವಹಾರಾನ್ಯಥಾನುಪಪತ್ತಿಯಿಂದಲೂ ಸಿದ್ಧವಾಗಿರುವ ಸಂಗತಿಯನ್ನು ವಿವರಿಸಿದ್ದಾಗಿದೆ.

ತಾರ್ಕಿಕರ ಮತದಲ್ಲಿ ವಿಶೇಷವನ್ನು ನಿತ್ಯದ್ರವ್ಯಮಾತ್ರವೃತ್ತಿಯೆಂದು ಹೇಳಿದ್ದಾರೆ. ಅದು ಸರಿಯಿಲ್ಲ. ವಿಶೇಷವು ನಿತ್ಯ ವಸ್ತುವಿನಲ್ಲೂ ಇದೆ. ಅನಿತ್ಯಗಳಾದ ಘಟಪಟಾದಿಗಳಲ್ಲೂ ಉಂಟೆಂಬ ಅಂಶವನ್ನು ಅನುವ್ಯಾಖ್ಯಾನದಲ್ಲಿ ಪ್ರತಿಪಾದಿಸಿದ್ದಾರೆ.

**ಸಾಮಾನ್ಯಾದಿ ಪದಾರ್ಥೇಷು ತನ್ನಿಷ್ಠತ್ವಾದಯೋಽಖಿಲಾಃ ।**
**ಕಥಂ ಧರ್ಮಾ ನಿವಾರ್ಯಂತೇ ವ್ಯಕ್ತ್ಯೈಕ್ಯೇಽಪಿ ಹಿ ವಾದಿಭಿಃ ॥**
**ಕಾರ್ಯಸ್ಯ ತತ್ರನಿಷ್ಠತ್ವಂ ಗುಣಾದೇರ್ವ್ಯಾಪಿತಾದಿಕಃ ।**
**ಕಥಂ ವಿಶೇಷೋ ನೈವಾಸ್ತಿ ಸಚ ಧರ್ಮೋಽಪರೋ ಯದಿ ॥**
**ಷಟ್ಪದಾರ್ಥಾತಿರೇಕಃ ಸ್ಯಾತ್ ಪದಾರ್ಥನಿಯಮೋಽಪಿ ಹಿ ।**
**ಧರ್ಮಸ್ಯ ಧರ್ಮಸಂತಾನಾದನವಸ್ಥಾಕರೋ ಭವೇತ್ ॥ (ಅನುವ್ಯಾಖ್ಯಾನಮ್)**

**ಅರ್ಥ** :- ಸಾಮಾನ್ಯಾದಿಪದಾರ್ಥೇಷು = ಸಾಮಾನ್ಯ (ಜಾತಿ) ಮೊದಲಾದ ಪದಾರ್ಥಗಳಲ್ಲಿ, ತನ್ನಿಷ್ಠತ್ವಾದಯಃ = ವ್ಯಕ್ತಿನಿಷ್ಠತ್ವವೇ ಮೊದಲಾದ (ದ್ರವ್ಯಾದಿನಿಷ್ಠತ್ವವೇ ಮೊದಲಾದ), ಅಖಿಲಾಃ = ಎಲ್ಲಾ, ಧರ್ಮಾಃ = ಧರ್ಮಗಳು, ವ್ಯಕ್ತ್ಯೈಕ್ಯೇಽಪಿ = ವ್ಯಕ್ತಿಯಿಂದ ಅಥವಾ ಧರ್ಮಿಯಿಂದ ತನ್ನಿಷ್ಠತ್ವ ಮೊದಲಾದ ಧರ್ಮಗಳಿಗೆ ಐಕ್ಯವಿದ್ದರೂ (ಅಭೇದವು ಇದ್ದರೂ) ವಾದಿಭಿಃ = ವಾದಿಗಳಿಂದ (ನಿರ್ವಿವಾದವಾದ ವ್ಯವಹಾರವಿರುವುದರಿಂದ) ಕಥಂ = ಹೇಗೆ, ನಿವಾರ್ಯಂತೇ = ನಿವಾರಿಸಲ್ಪಡುತ್ತವೆ.

ಅದರ ವಿವರಣೆಯು ಮುಂದೆ ತಿಳಿಸುವಂತಿದೆ.

ಕಾರ್ಯಸ್ಯ = ಕಾರ್ಯವಾದ ಅವಯವಿಗೆ, ತತ್ರನಿಷ್ಠತ್ವಂ = ಅದರ ಅವಯವದಲ್ಲಿರುವಿಕೆ ಎಂಬ ಧರ್ಮವು, ಗುಣಾದೇಃ = ಗುಣವೇ ಮೊದಲಾದವುಗಳಿಗೆ, ವ್ಯಾಪಿತಾದಿಕಃ = ತನ್ನ ಆಶ್ರಯದಲ್ಲಿ ವ್ಯಾಪಿತ್ವವೇ ಮೊದಲಾದ, ವಿಶೇಷಃ = ವಿಶೇಷವು ಎಲ್ಲಾ ಬಗೆಯಾದ ಪದಾರ್ಥಗಳಲ್ಲಿಯೂ, ಕಥಂ = ಹೇಗೆತಾನೇ, ನೈವಾಸ್ತಿ = ಇಲ್ಲದೇ ಹೋಗುತ್ತದೆ ? ಸ ಚ ಧರ್ಮಃ = ಆ ಧರ್ಮವು, ಆಯಾ ಅವಯವದಲ್ಲಿ ಇರುವಿಕೆಯೇ ಮೊದಲಾದ ಧರ್ಮವು, ಅಪರಃ = ತನ್ನಿಷ್ಠತ್ವವೇ ಮೊದಲಾದ ಧರ್ಮವು ತನ್ನ ಆಶ್ರಯಕ್ಕಿಂತಲೂ, (ಧರ್ಮಿಗಿಂತಲೂ), ಭಿನ್ನವೆಂದು, (ಪ್ರತ್ಯೇಕವೆಂದು) ಅಂಗೀಕರಿಸುವುದಾದರೆ (ಯದಿ ಅಂಗೀಕ್ರಿಯತೇ) ಷಟ್ಪದಾರ್ಥಾತಿರೇಕಃ ಸ್ಯಾತ್ = ವೈಶೇಷಿಕರ ಮತದಲ್ಲಿ, ಭಾವ ಪದಾರ್ಥಗಳೆಂದು ಪರಿಗಣಿಸಲ್ಪಟ್ಟಿರುವ ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ, ಸಮವಾಯಗಳೆಂಬ ಆರು ಪದಾರ್ಥಗಳಿಗಿಂತಲೂ, ಪ್ರತ್ಯೇಕವಾಗಿ ಪರಿಗಣಿಸಲ್ಪಡಬೇಕಾದೀತು, ಆರು ಪದಾರ್ಥಗಳಿಗಿಂತಲೂ ಭಿನ್ನವಾಗಿರಬೇಕಾದೀತು. ಹಾಗೆ ಹೇಳಿದರೆ ಆರೇ ಭಾವ ಪದಾರ್ಥಗಳು ಎಂಬ ನಿಯಮಕ್ಕೆ ಭಂಗ ಬಂದಂತಾಯಿತು. ಆರು ಎಂಬ ನಿಯಮವೇ ಇಲ್ಲವಾಯಿತು. ಹಿ = ಯಾವ ಕಾರಣದ ದೆಸೆಯಿಂದ, ಪದಾರ್ಥನಿಯಮೋಽಪಿ = ಪದಾರ್ಥಗಳು ಆರೇ ಎಂಬ ನಿಯಮವು ಇರುವುದಿಲ್ಲ ಎಂಬ ಪಕ್ಷದಲ್ಲಿಯೂ ಸಹ. ಧರ್ಮಸ್ಯ = ಧರ್ಮಗಳಿಗೆ, ಧರ್ಮ ಸಂತಾನಾತ್ = ಧರ್ಮಗಳ ಸಮುದಾಯ ದೆಸೆಯಿಂದ, ಅನವಸ್ಥಾಕರಃ = ಈ ರೀತಿ ಅಂಗೀಕರಿಸುವ ಪಕ್ಷವು ಅನವಸ್ಥಾ ಎಂಬ ದೋಷಕ್ಕೆ

ಆಕರವಾದುದಾಗಿ (ಆಶ್ರಯವಾದುದಾಗಿ) ಭವೇತ್ = (ಆದೀತು) ಆಗುತ್ತದೆಯೋ, ಆದುದರಿಂದ ಧರ್ಮಧರ್ಮಿಗಳಿಗೆ, ಆಶ್ರಯದಿಂದ ಅಭೇದವನ್ನು ಅತ್ಯವಶ್ಯವಾಗಿ ಅಂಗೀಕರಿಸಲೇಬೇಕಾಗಿರುವ ಪ್ರಯುಕ್ತ, ಇಂತಹ ಧರ್ಮಧರ್ಮಿಭಾವ ವ್ಯವಹಾರಾನ್ಯಥಾನುಪಪತ್ತಿ ಪ್ರಮಾಣದಿಂದ, ಅಂತಹ ವ್ಯವಹಾರದ ನಿರ್ವಹಣೆಗಾಗಿ ವಿಶೇಷವನ್ನು ಅಂಗೀಕಾರ ಮಾಡಲೇ ಬೇಕೆಂದು ಹೇಳುತ್ತಾರೆ.

**ಅಭಿಪ್ರಾಯ** :- ಧರ್ಮವೆಂಬ ಪದಾರ್ಥವನ್ನು ದ್ರವ್ಯ ಮೊದಲಾದವುಗಳಿಗಿಂತಲೂ ಭಿನ್ನವಾದುದು (ಪ್ರತ್ಯೇಕ ವಾಗಿರುವುದು) ಎಂದು ಹೇಳತಕ್ಕವನನ್ನು (ತಾರ್ಕಿಕನನ್ನು) ಕುರಿತು ಅವನ ಪ್ರಕ್ರಿಯೆಗೆ ದೋಷವನ್ನು ಹೇಳುತ್ತಾರೆ.

ಅವಯವಿಗೆ ಅವಯವನಿಷ್ಠತ್ವವು (ಅವಯವದಲ್ಲಿರುವಿಕೆಯು) ಇರುತ್ತದೆ. ರೂಪವೇ ಮೊದಲಾದ ಗುಣಗಳಿಗೆ ಆಶ್ರಯದಲ್ಲಿ ವ್ಯಾಪಿತ್ವವು ಕಂಡುಬಂದಿದೆ. ಸಂಯೋಗ ಮೊದಲಾದ ಗುಣಗಳಿಗೆ ಏಕದೇಶ ವೃತ್ತಿತ್ವವು ಇದೆ. ರೂಪಾದಿಗಳಿಗೆ ಉದ್ಭೂತತ್ವವು ಇದೆ. ತಾರ್ಕಿಕರೀತ್ಯಾ ಇಪ್ಪತ್ತನಾಲ್ಕು ಗುಣಗಳಿಗೂ ಚತುರ್ವಿಂಶತಿತ್ವವು ಇದೆ. ಕರ್ಮಕ್ಕೂ ಆಶ್ರಯ ವ್ಯಾಪಿತ್ವವು ಇದೆ. ಅನಿತ್ಯತ್ವವು ಇದೆ. ಪಂಚತ್ವವು ಇದೆ. ಮೂರ್ತದ್ರವ್ಯನಿಷ್ಠತ್ವವು ಇದೆ. ಸಾಮಾನ್ಯಕ್ಕೂ, ದ್ರವ್ಯನಿಷ್ಠತ್ವ, ಗುಣ ನಿಷ್ಠತ್ವ, ಕರ್ಮನಿಷ್ಠತ್ವವು ಇದೆ. ನಿತ್ಯತ್ವವೂ ಇದೆ. ಅನುಗತತ್ವವೂ ಇದೆ.

ಹೀಗೆ ತಾರ್ಕಿಕಪ್ರಕ್ರಿಯಾರೀತ್ಯಾ, ಪದಾರ್ಥಗಳ ಧರ್ಮಗಳ ಸಮುದಾಯವು ಅನೇಕವಾಗಿದೆ. ಈ ಧರ್ಮಗಳೆಲ್ಲಾ ತನ್ನ ಆಶ್ರಯಕ್ಕಿಂತಲೂ ಭಿನ್ನವಾದವುಗಳು ಎಂದು ಹೇಳಲಾಗುವುದಿಲ್ಲ. ಅವುಗಳಿಗೆ ಆಶ್ರಯದಿಂದ ಅಭೇದವಿದ್ದಾಗ್ಯೂ ಧರ್ಮ ಧರ್ಮ್ಯಾದಿವ್ಯವಹಾರವು ಕಂಡುಬಂದಿದೆ. ತಾರ್ಕಿಕರೀತ್ಯಾ ತಂತುಷು ಪಟಃ ಎಂಬಲ್ಲಿ ಪಟಕ್ಕೆ ತಂತುನಿಷ್ಠತ್ವವು (ಕಂಡುಬಂದಿದೆ) ತೋರುತ್ತದೆ.

ಪಟಕ್ಕೂ ಘಟಕ್ಕೂ ಅತ್ಯಂತ ಭೇದವನ್ನಂತೂ ಎಲ್ಲರೂ ಒಪ್ಪಿಯೇ ಇದ್ದಾರೆ. ಆದರೆ ಹಿಂದೆ ತಿಳಿಸಿದ ಧರ್ಮಗಳಿಗೂ ಅವುಗಳ ಧರ್ಮಿಗಳಿಗೂ ಅತ್ಯಂತ ಅಭೇದವಿದ್ದರೆ ಘಟಃ ಕಲಶಃ ಎಂಬಂತೆ ವ್ಯವಹಾರವೇ ಸಂಗತವಾಗುವುದಿಲ್ಲ. ಆದಕಾರಣ ಅವಯವನಿಷ್ಠತ್ವಾದಿ ಧರ್ಮಗಳ ವ್ಯವಹಾರಕ್ಕೆ ಉಪಪಾದಕವಾದ ವಿಶೇಷವನ್ನು ಆ ವ್ಯವಹಾರವೇ ತಿಳಿಸಿ ಕೊಡುತ್ತಿರುವಾಗ ಎಲ್ಲಾ ಪದಾರ್ಥಗಳಲ್ಲಿಯೂ ವಿಶೇಷವನ್ನು ಒಪ್ಪದಿದ್ದರೆ ಗತಿಯೇ ಇಲ್ಲ.

ಪ್ರಕೃತದಲ್ಲಿ ತನ್ನಿಷ್ಠತ್ವಾದಿಧರ್ಮಗಳಿಗೆ ಆರು ಭಾವಪದಾರ್ಥಗಳಲ್ಲೂ ಅಂತರ್ಭಾವವನ್ನು ಹೇಳಲಿಕ್ಕೆ ಬಾರದಿರು ವುದರಿಂದ, ದ್ರವ್ಯಾದಿಧರ್ಮಗಳು ದ್ರವ್ಯಾದಿಗಳ ಸ್ವರೂಪಗಳೆಂದೇ ಅಂಗೀಕರಿಸಬೇಕು.

ಮತ್ತು ಘಟದಲ್ಲಿ ಅಸ್ತಿತ್ವವೆಂಬ ಧರ್ಮವಿದೆ. ಆ ಅಸ್ತಿತ್ವದಲ್ಲಿ ಅಸ್ತಿತ್ವಾದಿ ಇದೆಯೋ ಇಲ್ಲವೋ ಎಂದು ಪ್ರಶ್ನಿಸಿದರೆ, ಇಲ್ಲವೆಂದು ಉತ್ತರವನ್ನು ಹೇಳಿದರೆ ಅನುಭವ ವಿರೋಧವು ಬರುತ್ತದೆ.

ಇಲ್ಲವಾದರೆ ಅಂತಹ ಅಸ್ತಿತ್ವವು ದ್ರವ್ಯಾದಿಗಳಲ್ಲೂ ಇಲ್ಲದೇ ಹೋಗಬೇಕಾಗುತ್ತದೆ. ಅಂತಹ ಅಸ್ತಿತ್ವವು ಆಶ್ರಯ ಕ್ಕಿಂತಲೂ ಭಿನ್ನವೋ ಅಭಿನ್ನವೋ ಎಂದು ಕೇಳಬೇಕು. ಭಿನ್ನವಾದರೆ ಅಲ್ಲಿಯೂ ಬೇರೊಂದು ಅಸ್ತಿತ್ವ, ಅದಕ್ಕೂ ಬೇರೊಂದು ಮತ್ತೊಂದು ಅಸ್ತಿತ್ವ, ಈ ರೀತಿ ಧರ್ಮಪರಂಪರೆಯ ಅಂಗೀಕಾರ ಪ್ರಯುಕ್ತವಾದ ಅನವಸ್ಥಾದೋಷವು ಬರುತ್ತದೆ. ಅಭಿನ್ನವೆಂದರೆ ಘಟಕ್ಕೂ ಘಟಗತವಾದ ಅಸ್ತಿತ್ವಕ್ಕೂ ಅಭೇದವೆಂಬ ಪಕ್ಷದಲ್ಲಿ ಅಲ್ಲಿಯೂ ಸಹ ಧರ್ಮ ಧರ್ಮ್ಯಾದಿ ವ್ಯವಹಾರವನ್ನು ನಿರ್ವಹಿಸತಕ್ಕ ವಿಶೇಷವನ್ನೇ ಆಶ್ರಯಿಸಬೇಕು.

ದ್ರವ್ಯಾದಿಗಳ ಧರ್ಮಗಳ ಧರ್ಮಕ್ಕೆ ಆಶ್ರಯದಿಂದ ಅಭೇದವನ್ನು ಹೇಳಿದರೆ ದ್ರವ್ಯದ ಧರ್ಮವಾದ ಅಸ್ತಿತ್ವಕ್ಕೆ ಆಶ್ರಯಾಭೇದವು ಏತಕ್ಕೆ ಇಲ್ಲ ?

ಆದಕಾರಣ ದ್ರವ್ಯಾದಿಗಳಿಗೆ ತನ್ನ ಧರ್ಮಗಳಿಂದ ಅಭೇದವಿರುವುದರಿಂದ ಅಲ್ಲಿ ಬರುತ್ತಿರುವ ಭೇದ ವ್ಯವಹಾರಕ್ಕೆ, ಧರ್ಮಧರ್ಮಿಭಾವ, ಆಧಾರಾಧೇಯಭಾವಾದಿವ್ಯವಹಾರಗಳಿಗೆ ನಿರ್ವಾಹಕವಾದ ಸ್ವನಿರ್ವಾಹಕವಾದ ವಿಶೇಷವನ್ನೇ ಅಂಗೀಕರಿಸಬೇಕೆಂದು ವಿಶೇಷವು ಸಿದ್ಧಿಸುತ್ತಿರುವುದಾಗಿದೆ.

ಕೂಲಂಕಷವಾಗಿ ವಿಶೇಚಿಸಿದರೆ ಧರ್ಮಧರ್ಮಿಗಳಿಗೆ ಭೇದವನ್ನು ಹೇಳಿದರೆ, ಧರ್ಮಪರಂಪರೆಯ ಅಂಗೀಕಾರವೂ ಸಹ ಅನವಸ್ಥಾದೋಷಗ್ರಸ್ತವಾಗುವುದರಿಂದ ಅಭೇದವನ್ನೇ ಅಂಗೀಕರಿಸಬೇಕು. ಮತ್ತು ವ್ಯವಹಾರಾನ್ಯಥಾನುಪಪತ್ತಿಯಿಂದಲೂ ಕೂಡ ವಿಶೇಷವು ಸಿದ್ಧಿಸುತ್ತದೆ.

ಯಾರು ಆಗ್ರಹದಿಂದ, ದ್ರವ್ಯವೇ ಮೊದಲಾದವುಗಳ ಧರ್ಮಗಳು ಎಂದೆನಿಸಿರುವ ಅಸ್ತಿತ್ವಾದಿಗಳಲ್ಲಿಯೂ ಮತ್ತೆ ಬೇರೆ ಅಸ್ತಿತ್ವ ಮೊದಲಾದವುಗಳನ್ನು ಹೇಳುತ್ತಾರೋ ಮತ್ತು ಅವು ಆಶ್ರಯಗಳಿಗಿಂತಲೂ ಭಿನ್ನಗಳೇ ಎಂದೂ ಪ್ರತಿಪಾದಿಸುವರೋ ಹೀಗೆ ಹೇಳಿ ನಿರವಧಿಕಗಳಾದ ಧರ್ಮಗಳ ಸಂತಾನದಿಂದ ಅನವಸ್ಥಾದೋಷವು ಬರುವುದಿಲ್ಲವೆಂದು ಹೇಳುವರೋ ಮತ್ತು ಈ ರೀತಿ ಹೇಳುವುದರಿಂದ ಉತ್ಪತ್ತಿ ಪ್ರತಿಬಂಧಕತ್ವವಾಗಲಿ, ಜ್ಞಪ್ತಿಪ್ರತಿಬಂಧಕತ್ವವಾಗಲಿ ಬಾರದಿರುವುದರಿಂದ ದೋಷವೇ ಇಲ್ಲವೆಂದು ವಾದಿಸುವರೋ ಅವರ ಮತದಲ್ಲಿ ಎಲ್ಲಿಯೂ ಅನವಸ್ಥಾದೋಷವೇ ಇಲ್ಲದೇ ಹೋದೀತು. ಅನವಸ್ಥಾ ಎಂದರೆ, ಅಪ್ರಾಮಾಣಿಕ ಅನಂತಪದಾರ್ಥಕಲ್ಪನಾಧಾರಾವಿಶ್ರಾಂತ್ಯಭಾವಃ ಅಥವಾ ಕ್ಲೃಪ್ತ ವಸ್ತು ಸಜಾತೀಯ ವಸ್ತು ಪರಂಪರಾಕಲ್ಪನಾವಿಶ್ರಾಂತ್ಯಭಾವಃ = ಉದಾಹರಣೆ:- ಜಾತಿಯಲ್ಲಿ ಮತ್ತೊಂದು ಜಾತಿ ಅದರಲ್ಲೂ ಮತ್ತೊಂದು ಜಾತ್ಯಂತರ ಈ ರೀತಿ ಅಲ್ಲಿ ಅಲ್ಲಿ ಜಾತ್ಯಂತರವನ್ನು ಸ್ವೀಕರಿಸಿದರೆ ಅನವಸ್ಥಾ - ಅವ್ಯವಸ್ಥಿತ ಪರಂಪರಾಧೀನವಾದ ಅನಿಷ್ಟ ಪ್ರಸಂಗವು ಉಂಟಾಗುವುದು.

"ಯಾವುದಕ್ಕಾಗಿ ಉತ್ತರೋತ್ತರವನ್ನು ಅನುಸರಿಸುವಿಕೆಯೋ ಅದು ಮೂಲವು, ಉತ್ಪತ್ತಿಯು ಅಥವಾ ಜ್ಞಪ್ತಿಯು. ಅನವಸ್ಥಾದೋಷವು ಇಂತಹ ಮೂಲಕ್ಷಯಕರವಾಗದಿರುವುದರಿಂದ ಧರ್ಮಗಳಿಗೆ ಆಶ್ರಯದ ದೆಶೆಯಿಂದ ಭೇದವಿದ್ದರೂ ವ್ಯವಹಾರಕ್ಕೆ ಬಾಧಕವಿಲ್ಲವಾದುದರಿಂದ ವಿಶೇಷಕ್ಕೆ ಆಕ್ಷೇಪವಲ್ಲವೆಂದು ತಾರ್ಕಿಕರು ವಾದಿಸಿದರೆ ಅನವಸ್ಥಾಕ್ಕೆ ದೋಷತ್ವವೇ ಕೂಡಲಾರದೆಂಬುದನ್ನು ವಿವರಿಸುತ್ತಾರೆ.

**"ಸಾಮಾನ್ಯಸ್ಯಾಪಿ ಸಾಮಾನ್ಯಂ ಗುಣಸ್ಯಾಪಿ ಗುಣೋ ಹ್ಯತಃ ।**
**ನಾಂಗೀಕೃತಃ ಸ ಚ ಯದಿ ನಾನವಸ್ಥಾಕ್ಷತಿರ್ಭವೇತ್ ॥**

**ಅರ್ಥ** :- ಸಾಮಾನ್ಯಸ್ಯಾಪಿ = ಗೋತ್ವವೇ ಮೊದಲಾದ ಜಾತಿಗೂ (ಸಾಮಾನ್ಯಕ್ಕೂ) ಸಾಮಾನ್ಯಂ = ಸತ್ತಾಲಕ್ಷಣವಾದ ಸಾಮಾನ್ಯವು, ಗುಣಸ್ಯಾಪಿ = ಗುಣಕ್ಕೂ ಕೂಡ, ಗುಣಃ = ಸಂಖ್ಯಾ, ಪೃಥಕ್ತ್ವಾದಿಗುಣವು, ಅತೋಹಿ = ಅನವಸ್ಥಾದೋಷ ಭಯದಿಂದಲೇ (ತಾರ್ಕಿಕರಿಂದ) ನಾಂಗೀಕೃತಃ = ಅಂಗೀಕರಿಸಲ್ಪಟ್ಟಿಲ್ಲ.

ಅಭಿಪ್ರಾಯವು ಈ ರೀತಿ ಇದೆ.

ಉತ್ಪತ್ತಿ ಮತ್ತು ಜ್ಞಪ್ತಿಗಳಿಗೆ ಪ್ರತಿಬಂಧಕವಲ್ಲದ ಅನವಸ್ಥೆಗೆ ದೋಷತ್ವವು ಬಾರದಿರುವುದರಿಂದ ಅನವಸ್ಥಾ ಭಯದಿಂದ ಸಾಮಾನ್ಯಕ್ಕೂ ಸಾಮಾನ್ಯವನ್ನೂ, ಗುಣಕ್ಕು ಗುಣವನ್ನು ಅಂಗೀಕರಿಸುವುದಾದರೆ ಅನವಸ್ಥಾ ಎಂಬ ದೋಷವೇ ಎಲ್ಲಿಯೂ ಆಗಲಾರದು ಎಂದು ಅಭಿಪ್ರಾಯ.

ಸಚ = ಗುಣಕ್ಕು ಗುಣವು, ಸಾಮಾನ್ಯಕ್ಕೂ ಸಾಮಾನ್ಯವು, ಯದಿ = ಅಂಗೀಕರಿಸುವುದಾದರೆ, ಅನವಸ್ಥಾ = ಅನವಸ್ಥಾದೋಷವು, ಕ್ವಚಿತ್ = ಎಲ್ಲಿಯೂ ನ ಭವೇತ್ = ಆಗಲಾರದು.

**ತಾತ್ಪರ್ಯ** :- ತಾರ್ಕಿಕರು ಸಾಮಾನ್ಯಕ್ಕೆ (ಜಾತಿಗೆ) ಮತ್ತೊಂದು ಜಾತಿಯನ್ನು ಒಪ್ಪಲ್ಲಿ. ಗುಣದಲ್ಲಿ ಮತ್ತೊಂದು ಗುಣವನ್ನು ಅಂಗೀಕರಿಸಿಲ್ಲ. ಗುಣೇ ಗುಣಾನಂಗೀಕಾರಾತ್ ಎಂಬುದಾಗಿ ಹೇಳುವರು. ಇದಕ್ಕೆ ಕಾರಣವು ಏನೆಂದು ಕೇಳಿದರೆ, ಆ ರೀತಿ ಪ್ರತೀತಿಯೇ ಇಲ್ಲವೆಂಬುದು ಉತ್ತರವಾಗಲಾರದು. ಗೋತ್ವೇ ಗೋತ್ವಂ ಎಂದು ಪ್ರತೀತಿಯು ಇಲ್ಲದೇ ಇದ್ದಾಗ್ಯೂ, ಗೋತ್ವಂ ಸತ್, ಗುಣಾಃ ಚತುರ್ವಿಂಶತಿಃ, ರಸಃ ರೂಪಾತ್ಪೃಥಕ್, ಎಂಬುದಾಗಿ ಪ್ರತೀತಿಯು ಕಂಡುಬಂದಿದೆ.

ಗೋತ್ವಂಸತ್ ನ ಎಂಬುದಾಗಿ ಬಾಧಕಜ್ಞಾನವೂ ಇರುವುದಿಲ್ಲ. ಜಾತಿಯಲ್ಲಿ ಮತ್ತೊಂದು ಜಾತಿ ಅಂದರೆ ಸಾಮಾನ್ಯದಲ್ಲಿ ಮತ್ತೊಂದು ಸಾಮಾನ್ಯವನ್ನು ಒಪ್ಪಿದರೆ ಅನವಸ್ಥಾದೋಷವು ಬರುತ್ತದೆಯೆಂಬ ಭಯದಿಂದಲೇ ಜಾತಿಯಲ್ಲಿ ಜಾತಿ ಯಿಲ್ಲವೆಂದು ಹೇಳುತ್ತಾರೆ. ಅಂತೂ ಅನವಸ್ಥಾ ಎಂಬುದನ್ನು ದೋಷವೆಂದೇ ಪರಿಗಣಿಸಿರುತ್ತಾರೆ. ಇದನ್ನು ಅಪಲಾಪ ಮಾಡುವಂತಿಲ್ಲ. ದೋಷವನ್ನು ದೋಷವೇ ಅಲ್ಲವೆಂದು ಆಗ್ರಹ ಮಾಡಿದರೆ, ಅಂತಹವನು ವಾದ ಕಥೆಗೆ ಅಧಿಕಾರಿಯೇ ಆಗಲಾರನು. ಧರ್ಮಾನವಸ್ಥಾ, ಸಾಮಾನ್ಯಾನವಸ್ಥಾ, ಗುಣಾನವಸ್ಥಾ, ಇತ್ಯಾದಿಗಳು ದೋಷಗಳೇ ಆಗಿರುವುದರಿಂದ, ಧರ್ಮ ಪರಂಪರೆಯೂ ಸಹ ಅನವಸ್ಥಾದೋಷರೂಪವಾಗಿರುವ ಪ್ರಯುಕ್ತ ಧರ್ಮಕ್ಕೂ ಧರ್ಮಿಗೂ ಅಭೇದವನ್ನೇ ಅಂಗೀ ಕರಿಸಬೇಕು.

ಯಾರು ಧರ್ಮಧರ್ಮಿಗಳಿಗೆ ಭೇದವನ್ನು ಹೇಳುವನೋ ಮತ್ತು ಗುಣಗುಣಿಗಳಿಗೆ ಭೇದವನ್ನು ಅಂಗೀಕರಿಸು ತ್ತಾನೆಯೋ ಅವನು ಅವುಗಳಿಗೆ ''ಸಮವಾಯ'' ಎಂಬ ಸಂಬಂಧವನ್ನು ಕಲ್ಪಿಸಬೇಕು. ಆ ಸಮವಾಯಕ್ಕೆ ಧರ್ಮಗಳಾದ ತದ್ಗತತ್ವಾದಿಗಳಿಗೂ, ಅಸ್ತಿತ್ವಾದಿಗಳಿಗೂ ಮತ್ತೆ ಭೇದವನ್ನು ಹೇಳಿದರೆ ಅನವಸ್ಥಾದೋಷವು ವಜ್ರಲೇಪವಾಗುತ್ತದೆ. ಮತ್ತು ಗುಣಸಾಮಾನ್ಯದಲ್ಲಿನ ಗುಣಸಾಮಾನ್ಯಪ್ರತೀತಿಯನ್ನೇ ಅಪಲಾಪ ಮಾಡಬೇಕು, ಅದಕ್ಕೆ ಯಾವ ಬಾಧಕವೂ ಇಲ್ಲದಿದ್ದಾಗ್ಯೂ ಭ್ರಾಂತಿಯೆನ್ನಬೇಕು.

ಭೇದದ ಪಕ್ಷದಲ್ಲಿ ಅನವಸ್ಥಾದೋಷವು ಇದ್ದೇ ಇದೆ. ಆದಕಾರಣ ಅಭೇದವನ್ನೂ, ವಿಶೇಷವನ್ನೂ ಅಂಗೀಕರಿಸು ವವರಿಗೆ ಯಾವ ದೋಷವೂ ಇರುವುದಿಲ್ಲವೆಂದು ಪ್ರತಿಪಾದಿಸುತ್ತಾರೆ.

**ಅಸ್ತ್ಯತ್ರೈ ಗುಣಾದ್ಯಾಕ್ಷ ತದ್ವಂತೋ ಽಪಿ ವಿಶೇಷತಃ ।**
**ಅನವಸ್ಥಾನ್ಯಥಾನವಸ್ಥಾಭೇದೋ ನಾಶೇ ಭವೇತ್ತಥಾ ।। (ಅನುವ್ಯಾಖ್ಯಾನಮ್)**

**ಅರ್ಥ** :- ಅಸ್ಮತ್ಪಕ್ಷೇ = ಧರ್ಮಕ್ಕೂ, ಧರ್ಮಿಗೂ, ಸವಿಶೇಷಾಭೇದವನ್ನು ಹೇಳತಕ್ಕ ನಮ್ಮ ಪಕ್ಷದಲ್ಲಿ (ಸಿದ್ಧಾಂತಿ ಗಳ ಪಕ್ಷದಲ್ಲಿ) ಗುಣಾದ್ಯಾಶ್ಚ = ಗುಣಗಳೂ, ಸಾಮಾನ್ಯಗಳೂ, ತದ್ವಂತಃ = ಗುಣವುಳ್ಳವುಗಳಾಗಿವೆ. ಸಾಮಾನ್ಯ ವುಳ್ಳವು ಗಳಾಗಿವೆ. (ಸಾಮಾನ್ಯ = ಸತ್ತಾ = ಇರುವಿಕೆಪ) ಆದುದರಿಂದಲೇ ಗುಣಾಃ ಚತುರ್ವಿಂಶತಿಃ, ಗೋತ್ವಂ ಸತ್,) ಇವೇ ಮೊದಲಾದ ಪ್ರತೀತಿಗಳಿಗೆ ವಿರೋಧವು ಯಾವುದೂ ಇಲ್ಲ. ಅನನ್ಯತ್ವಾತ್ = ಧರ್ಮಧರ್ಮಿಗಳಿಗೆ ಅಭೇದವು ಇರುವ ಪ್ರಯುಕ್ತ ವಿರೋಧವು ಯಾವುದೂ ಇಲ್ಲ. ಅನನ್ಯತ್ವಾತ್ = ಧರ್ಮಧರ್ಮಿಗಳಿಗೆ ಅಭೇದವು ಇರುವ ಪ್ರಯುಕ್ತ ವಿರೋಧವು ಯಾವುದೂ ಇಲ್ಲ. ಅನವಸ್ಥಾನ = ಅಪ್ರಾಮಾಣಿಕವಾದ ಅಪರ್ಯವಸಿತವಾದ ಪರಂಪರಾರೂಪವಾದ ಅನ ವಸ್ಥೆಯು ಇರುವುದಿಲ್ಲ. ಅಭೇದವು ಇದ್ದರೆ, ತದ್ವಂತಃ = ಅದನ್ನು ಉಳ್ಳವುಗಳು, ಎಂಬುದಾಗಿ ಆಧಾರಾಧೇಯ ಭಾವವು ಭೇದವ್ಯಾಪ್ತವಾಗಿರುವಾಗ ಇಂತಹ ಪ್ರತೀತಿಯು ಹೇಗೆ ಬರುತ್ತದೆಯೆಂದರೆ, ''ತದ್ವಂತೋ ಹಿ ವಿಶೇಷತಃ'' ಎಂದು ಹೇಳಿ ದ್ದಾರೆ. ವಿಶೇಷತಃ ಹಿ = ಭೇದಸಂಬಂಧರ ಕಾರ್ಯವಾದ ಭೇದ ವ್ಯವಹಾರವೆಂಬ ಕಾರ್ಯವನ್ನು ನಿರ್ವಹಿಸುವ ಭೇದಕ್ಕೆ ಪ್ರತಿನಿಧಿ ಎನಿಸಿದ ವಿಶೇಷದಿಂದಲೇ, ತದ್ವಂತಃ = ಗುಣ ಮತ್ತುಸಾಮಾನ್ಯಗಳನ್ನು, ಧರ್ಮಗಳನ್ನುಳ್ಳದ್ದು ಎಂಬ ವ್ಯವಹಾರ ವು ಕೂಡುತ್ತದೆ ಎಂದು ಅರ್ಥ.

ನಾಶೇ = ಅವಯವು ಇರುವ ಕಾಲದಲ್ಲೇ ಅವಯವಿಯು ನಾಶವಾದರೆ, ಭೇದಃ ತಥಾ = ಭೇದವೂ ಅಭೇದವೂ, ಭವೇತ್ = ಆಗುವುದು.

ಎಲ್ಲಿ ಅವಯವವು ಇದ್ದಾಗ್ಯೂ, ಅವಯವಿಯು ನಾಶವನ್ನು ಹೊಂದುವುದೋ ಗುಣಿಯು ಇದ್ದಾಗ್ಯೂ, ದ್ರವ್ಯವು ಇದ್ದಾಗ್ಯೂ ಗುಣವು ನಾಶವನ್ನೈದುವುದೋ ಅಲ್ಲಿ ಮಾತ್ರ ಭೇದಾಭೇದವು.

ಮತ್ತು ಆಶ್ರಯವು ಇದ್ದಾಗ್ಯೂ, ಜಾತಿಯು ಇಲ್ಲವೋ ಅಲ್ಲೆಲ್ಲಾ ಭೇದಾಭೇದವು. ಉಪಾದಾನಕಾರಣವಾದ ತಂತುಗಳಿದ್ದಾಗ್ಯೂ, ಕೆಲವು ವೇಳೆ ಉಪಾದೇಯವಾದ ಪಟವು ಇರುವುದಿಲ್ಲ. ಮತ್ತೆ ಕೆಲವು ಕಡೆ ದ್ರವ್ಯವು ಇದ್ದಾಗ್ಯೂ, ಪಾಕಜರೂಪಾದಿಗುಣಗಳಿರುವುದಿಲ್ಲ. ಕೆಲವು ಕಡೆ ಆಶ್ರಯವಾದ ಪಟವಿದ್ದಾಗ್ಯೂ, ಗಾಳಿ ಇಲ್ಲದಿದ್ದರೆ ಪಟದ ಚಲನೆಯು ಕಂಡುಬಂದಿಲ್ಲ. ಜಾತಿಯು ಕೆಲವು ಕಡೆ ವ್ಯಕ್ತಿಯು ಇದ್ದಾಗ್ಯೂ, ಇರುವುದಿಲ್ಲ. ಹೆಂಡ ಕುಡಿದಾಗ ಬ್ರಾಹ್ಮಣ್ಯ ಜಾತಿಯು ಇರುವುದಿಲ್ಲ. ಅಲ್ಲೆಲ್ಲಾ ಭೇದಾಭೇದವು ಅಂಗೀಕೃತವಾಗಿದೆ. ತಪಸ್ಸಿನಿಂದ ವಿಶ್ವಾಮಿತ್ರರಿಗೆ ಹಿಂದೆ ಇಲ್ಲದೇ ಇದ್ದ ಬ್ರಾಹ್ಮಣ್ಯವು ಉಂಟಾಯಿತು. ಮಹಾಪಾಪದಿಂದ ಬ್ರಾಹ್ಮಣ್ಯವು ನಾಶವಾಗುತ್ತದೆ.

**ತಾತ್ಪರ್ಯ** :- ಭೇದಾಭೇದವನ್ನು ಒಪ್ಪತಕ್ಕ ಸ್ಥಳವನ್ನು ಉದಾಹರಿಸುತ್ತಾರೆ. ಅವಯವಿಯೂ, ಅವಯವವು ಅಭಿನ್ನವಾದರೆ, ಗುಣಿಯೂ ಗುಣವೂ ಅಭಿನ್ನವಾದರೆ, ಅಂದರೆ ಅವುಗಳಿಗೆ ಅಭೇದವನ್ನು ಒಪ್ಪಿದರೆ, ಅವಯವವು ಇದ್ದಾಗ ಅವಯವಿಯು ನಾಶವಾಗುವುದೆಂಬುದು ಹೇಗೆ? ಗುಣಿಯು ಇರುವಾಗ ಗುಣದ ನಾಶವೆಂಬುದೂ ಹೇಗೆ? ಎಂಬ ಶಂಕೆಗೂ ಮತ್ತು ಒಂದೇ ಕಡೆ ಭೇದಾಭೇದಗಳು ವಿರುದ್ಧಗಳಾಗಿವೆ. ಆಶ್ರಯವು ಇರುವವರೆಗೆ ಇಲ್ಲದಿರುವ ಗುಣ, ಕರ್ಮ, ಸಾಮಾನ್ಯಗಳಿಗೆ ಅವಯವಾದಿಗಳಿಂದ ಭೇದಾಭೇದಗಳು ಹೇಗೆ ಎಂಬ ಶಂಕೆಗೂ ಅನುವ್ಯಾಖ್ಯಾನದಲ್ಲಿ ಉತ್ತರವನ್ನು ಹೇಳುತ್ತಾರೆ. ಮತ್ತು ಸಕಲ ಭೇದಕಾರ್ಯಗಳನ್ನು ವಿಶೇಷವೇ ಮಾಡುತ್ತಿರುವಾಗ ವಿಶೇಷವೂ ಭೇದವೇ ಎಂದು ಹೇಳಿದಂತಾಯಿತು. ಭೇದದ ಪ್ರತಿನಿಧಿ ಎಂಬುದು ಹೇಗೆ ?ಎಂಬ ಶಂಕೆಗೂ ಉತ್ತರವನ್ನು ಹೇಳುತ್ತಾರೆ.

**ವಿಶೇಷಮೇವ ಸಂಕ್ಷಿಪ್ತವಿಶೇಷೋ ಬಲವಾನ್ಯತಃ ।**
**ದೃಷ್ಟಪ್ರಮಾಣತಶ್ಚೈವ ವಿರೋಧೋ ದರ್ಶನೇ ಕಥಮ್ ॥**

**ವಿರೋಧೋ ಹ್ಯವಿರೋಧಶ್ಚ ಯತೋ ದರ್ಶನಮಾನಗಃ ।**
**ತತೋ ದೃಷ್ಟೇ ವಿರೋಧಸ್ತು ಸದ್ವಿರಾಹಾದ್ಯತೇ ಕಥಮ್ ।।**

**ಅರ್ಥ** :- ಯತಃ = ಯಾವ ಕಾರಣದ ದೆಸೆಯಿಂದ, ವಿಶೇಷಃ = ವಿಶೇಷವು, ಬಲವಾನ್ = ಭೇದಕಾರ್ಯ ನಿರ್ವಾಹಕವಾಗಿಯೂ ಸ್ವನಿರ್ವಾಹಕವಾಗಿಯೂ ಪ್ರಬಲವಾದುದಾಗಿದೆಯೋ, ಆದ್ದರಿಂದಲೇ, ವಿಶೇಷಮೇವ = ವಿಶೇಷವನ್ನೇ, ಸಂಶ್ರಿತ್ಯ = ಆಶ್ರಯಿಸಿಕೊಂಡು, ಭೇದಾಭೇದವಾದಿಗಳು ಒಂದೇ ಕಡೆ ಕೂಡುತ್ತವೆ. ಭೇದಕ್ಕೆ ಪ್ರತಿನಿಧಿಯಾದುದು ವಿಶೇಷವೆಂದು ಅನೇಕಾವರ್ತಿ ಹೇಳಲಾಗಿದೆ.

ವಿಶೇಷವು ಭೇದಾಭೇದಗಳನ್ನು ಏಕಕಾಲದಲ್ಲಿಯೇ ಒಂದೇ ಕಡೆ ಕೂಡಿಸಲು ಸಮರ್ಥವಾಗಿದೆ.

ವಿಶೇಷವನ್ನು ಆಶ್ರಯಿಸಿ ಏಕತ್ರ ಒಂದೇ ಕಡೆ ಭೇದಾಭೇದಗಳು ಇರುತ್ತವೆ. ಅಭಿಪ್ರಾಯವು ಈ ರೀತಿ ಇದೆ. ಭೇದವು ವಿರೋಧವನ್ನು ಪರಿಹರಿಸಲು ಕಾರಣವಾಗುತ್ತದೆ.

(೧) ಕೆಲವು ಕಡೆ ಆಶ್ರಯದ ಭೇದ. ಅಂದರೆ ತಾನಿರುವ ಜಾಗದ ಭೇದ.

ಅದಕ್ಕೆ ಉದಾಹರಣೆ :- ದೇವದತ್ತನು ಮಧುರಾಪಟ್ಟಣದಲ್ಲಿದ್ದಾನೆ.
ಕಂಚೀಪಟ್ಟಣದಲ್ಲಿ ಅವನು ಇಲ್ಲ.

ಇಲ್ಲಿ, ಇದ್ದಾನೆ, ಇಲ್ಲ ಎಂಬುದಕ್ಕೆ ಪರಸ್ಪರ ವಿರೋಧವಿದ್ದಾಗ್ಯೂ ಅವನಿಗೆ ಆಶ್ರಯವಾದ ಜಾಗಗಳು ಬೇರೆ ಬೇರೆ ಹೇಳಿರುವುದರಿಂದ ಆಶ್ರಯಭೇದವು ಅವೆರಡರ ವಿರೋಧವನ್ನು ಪರಿಹರಿಸುತ್ತಲಿದೆ.

(೨) ಕೆಲವು ಕಡೆ ಕಾಲಭೇಧದಿಂದ ವಿರೋಧವು ಶಾಂತಿಗೊಳ್ಳುತ್ತದೆ.

ಉದಾಹರಣೆ :- ಮಧುರಾಪಟ್ಟಣದಲ್ಲಿಯೇ ಇರುವುದು, ಇಲ್ಲದಿರುವುದು ಎಂಬುದಕ್ಕೆ, ಕಾಲ
ಭೇದವು ವಿರೋಧವನ್ನು ಪರಿಹರಿಸುತ್ತಲಿದೆ.

ಮಧುರಾಪಟ್ಟಣದಲ್ಲಿ ಇವತ್ತು ಇದ್ದಾನೆ. ನಾಳೆ ಕಾಶೀಗೆ ಹೋಗಿರುವುದರಿಂದ ಅದೇ ಮಧುರೆಯಲ್ಲಿ ಇಲ್ಲ.

ಅಂದರೆ ಒಂದೇ ಜಾಗದಲ್ಲಿ ಕಾಲಭೇದದಿಂದ ಉಂಟು, ಇಲ್ಲ ಎಂಬ ವಿರುದ್ಧ ವ್ಯವಹಾರವು ಕೂಡುತ್ತದೆ. ಇಲ್ಲಿ ಕಾಲಭೇದವೇ ವಿರೋಧಪರಿಹಾರಕ.

(೩) ಮತ್ತ ಕೆಲವು ಕಡೆ ಪ್ರತಿಯೋಗಿಯ ಭೇದ.
ಗವಯವವು ಗೋವಿನಿಂದ ಸದೃಶ ಘಟದಿಂದ ವಿಸದೃಶ

ಅವಯವ ಅವಯವಿಗಳಿಗೆ ಅಭೇದವನ್ನು ವಿಷಯೀಕರಿಸತಕ್ಕ ಪ್ರತ್ಯಕ್ಷಪ್ರಮಾಣವು ಇದೆ. ಇದು ಘಟಪಟಗಳೆಂಬ ಸಂಯುಕ್ತವಸ್ತುದ್ವಯವಿಲಕ್ಷಣವಾದ ಬುದ್ಧಿಯಾಗಿದೆ. ಧರ್ಮಿ ಇದ್ದರೂ ಧರ್ಮವಿಲ್ಲದಿರುವ ಭೇದಗ್ರಾಹಿಯಾದ ಹೇತುಜನಿತವಾದ ಬುದ್ಧಿಯೂ ಇದೆ. ಈ ಅಭೇದಭೇದಬುದ್ಧಿಗಳಿಗೆ ಬಾಧ್ಯಬಾಧಕಭಾವವು ಇರುವುದಿಲ್ಲ. ಅಭೇದಬುದ್ಧಿಯು ಪ್ರತ್ಯಕ್ಷಪ್ರಮಾಣವನ್ನ - ಭೇದಬುದ್ಧಿಯು ಹೇತುವನ್ನ ಎರಡೂ ಪ್ರಮಾಣಗಳೇ ಆಗಿವೆ.

ಆದಕಾರಣ ಭೇದಾಭೇದವಿಷಯಕಗಳಾದ ಎರಡೂ ಪ್ರತೀತಿಗಳೂ ಪ್ರಮಾಣಗಳೇ ಆಗಿವೆ. ಪ್ರತ್ಯಕ್ಷ ಮೊದಲಾದ ಪ್ರಮಾಣಗಳಿಂದಲೇ ಅಭೇದಬುದ್ಧಿಯೂ ಹೇತುವಿನಿಂದ-ಭೇದಬುದ್ಧಿಯೂ ಬರುತ್ತಿರುವುದರಿಂದ ವಿರೋಧವಿಲ್ಲ. ಎರಡು ಬುದ್ಧಿಗಳೂ ಪ್ರಮಾಣಜನ್ಯಗಳಾಗಿರುವುದರಿಂದ ಪರಸ್ಪರ ವಿರೋಧವಿಲ್ಲ.

ಒಂದೇ ವಸ್ತುವಿನಲ್ಲಿ ಒಂದೇ ಕಾಲದಲ್ಲಿ ಒಟ್ಟಿಗೇನೇ ಎರಡು ಬುದ್ಧಿಗಳಿಂದ ತೋರತಕ್ಕ ಭೇದಾಭೇದಗಳಿಗೆ ವಿರೋಧ ವೆಲ್ಲಿಂದ ಬರಬೇಕು. ಸಹದೃಷ್ಟೌ ವಿರುದ್ಧೌ ಎಂಬುದೇ ವ್ಯಾಹತ ನುಡಿಯಾಗಿದೆ.

ಎಲ್ಲಾ ಕಡೆಗಳಲ್ಲಿಯೂ ಪರಸ್ಪರ ಪರಿಹಾರದಿಂದ ಇರುವಿಕೆಯು ಕಾಣುವುದರಿಂದ ಒಟ್ಟಿಗೆ ಇಲ್ಲದಿರುವುದೇ ವಿರೋಧದಲ್ಲಿ ಪ್ರಮಾಣವು. ಕೆಲವು ಕಡೆ ಒಟ್ಟಿಗಿರುವುದೂ ಸಹ ಅವಿರೋಧಕ್ಕೆ ಸಾಧಕವಾಗಿದೆ.

ಆದಕಾರಣ ಸಹ ದೃಷ್ಟವಾದ ಒಟ್ಟಿಗೆ ಒಂದೇ ಕಡೆ ಇರುವಿಕೆಯು ಕಂಡುಬಂದಿರುವಾಗ ಎರಡು ವಸ್ತುಗಳಲ್ಲಿ ವಿರೋಧವನ್ನು ಹೇಗೆ ಹೇಳಲು ಸಾಧ್ಯವಾದೀತು.

ಒಟ್ಟಿಗೆ ಇದ್ದಮೇಲೆ ವಿರೋಧವೇ ಇಲ್ಲದಿರುವಾಗ ಮತ್ತೆ ವಿರೋಧವನ್ನು ಹೇಳಿದರೆ ವ್ಯಾಘಾತದೋಷಕ್ಕೆ ಅವಕಾಶ ವಾಗುತ್ತದೆ.

ಶೀತೋಷ್ಣಗಳಿಗೆ ಪರಸ್ಪರ ವಿರೋಧವಿದೆ. ರೂಪರಸಗಳಿಗೆ ಅಂತಹ ವಿರೋಧವಿಲ್ಲವೆಂಬಲ್ಲಿ ಪ್ರತ್ಯಕ್ಷವೇ ಪ್ರಮಾಣ.

ಈ ಸಂದರ್ಭದಲ್ಲಿ ವೈಶೇಷಿಕಾದಿಗಳೂ ಸಹ ಕೆಲವು ಕಡೆ ಒಂದೇ ಕಾಲದಲ್ಲಿ ಕೆಲವು ಪದಾರ್ಥಗಳಿಗೆ ಭಾವಾಭಾವ ಗಳನ್ನು ಒಪ್ಪಿಕೊಂಡಿರುವುದು ಕಂಡುಬಂದಿದೆ. ವೈಶೇಷಿಕರು, ಸಂಯೋಗಕ್ಕೂ, ಶಬ್ದಕ್ಕೂ, ಆತ್ಮವಿಶೇಷಗುಣಗಳಿಗೂ ಅಲ್ಲಿಯೇ (ತತ್ಸ್ವಾದೃಶ್ಯವ) ಅಲ್ಲಿಯೇ ಆವಾಗಲೇ ಭಾವ - ಅಭಾವಗಳನ್ನು, (ಇರುವಿಕೆ ಇಲ್ಲದಿರುವಿಕೆಯನ್ನು) ಒಪ್ಪಿದ್ದಾರೆ.

ಹೀಗೆ ಒಪ್ಪಿ ಒಟ್ಟಿಗೆ ಕಾಣುವುದರಿಂದ ವಿರೋಧವಿಲ್ಲವೆಂದು ಹೇಳಿದ್ದಾರೆ. ಅಂದರೆ ಒಟ್ಟಿಗೆ ಒಂದೇ ಕಡೆ ಯಾವ ಎರಡಕ್ಕೆ ಇರುವಿಕೆಯು ಕಂಡುಬಂದಿದೆಯೋ ಅವುಗಳಿಗೆ ಪರಸ್ಪರ ವಿರೋಧವಿಲ್ಲವೆಂಬುದನ್ನು ವೈಶೇಷಿಕರು ಸಂಯೋಗಾದಿ ಗಳಲ್ಲಿ ಅಂಗೀಕರಿಸಿ ನಾವು ತಿಳಿಸಿದ ಸ್ಥಳದಲ್ಲಿ ಅಂಗೀಕರಿಸದೇ ಇರುವುದನ್ನು ನೋಡಿದರೆ ಅವರು ತನ್ನ ದೃಷ್ಟಿಯಲ್ಲಿ ಪಕ್ಷ ಪಾತಿಗಳು ಎಂದು ತೀರ್ಮಾನಿಸಬೇಕಾಗಿದೆ.

ಧರ್ಮಗಳಿಗೂ ಧರ್ಮಿಗಳಿಗೂ ಕೆಲವು ಕಡೆ ಮಾತ್ರ ಭೇದಾಭೇದಗಳು ಮತ್ತೆ ಕೆಲವು ಕಡೆ ಅಭೇದವುಂಟೆಂಬ ವಿವೇಚನೆಯನ್ನು ಮಾಡಿ ತೋರಿಸುತ್ತಾರೆ.

ಶ್ರೀಹರಿಗೂ ಅವನ ಜ್ಞಾನಾನಂದಾದಿಧರ್ಮಗಳಿಗೂ ಸಂಬಂಧಪಟ್ಟ ಪ್ರಮೇಯ ವಿಶೇಷವನ್ನು ನಿಶ್ಚಯಿಸುವುದಕ್ಕಾಗಿ, ಪ್ರಸಂಗಾನುಗತಿಯಿಂದ ಇದುವರೆಗೆ ಅವಶ್ಯ ನಿರೂಪಣೀಯವಾದ ಸರ್ವಸಾಧಾರಣವಾದ "ವಿಶೇಷಾಂಗೀಕಾರದ" ವಾಕ್ಯಾರ್ಥದ ಸಂಗ್ರಹವನ್ನು ಶ್ರೀಮದನುವ್ಯಾಖ್ಯಾನವಾಕ್ಯಗಳಿಂದಲೇ ತಿಳಿಸಿ, ಪ್ರಕೃತವಾದಮಾತ್ಮನ ವಿಚಾರವಾಗಿ

ವಿವರಣೆಯನ್ನು ತಿಳಿಸುತ್ತೇವೆ. ಈ ಎಲ್ಲಾ ವಿವರಣೆಗಳೂ ಚಿದಚಿದ್ವಿಲಕ್ಷಣವಿಷ್ಣುವಿನ ಸ್ವರೂಪದ ನಿರ್ಣಯಕ್ಕೆ ಪಂಪೋಷಕಗಳಾದುದರಿಂದ ಮೊದಲನೆಯ ಸೂತ್ರದ ಸಂದರ್ಭದಲ್ಲೇ ಅತಿದೃಢವಾದ ವಿಷ್ಣುಸರ್ವೋತ್ತಮದ ನಿಶ್ಚಯಕ್ಕಾಗಿ ಬರೆಯಲಾಗಿದೆ. ಆದಕಾರಣ ಇದನ್ನು ಅಪ್ರಕೃತವೆಂದು ಯಾರೂ ಭಾವಿಸಬಾರದೆಂಬುದಾಗಿ ವಿನಂತಿಸುತ್ತೇವೆ.

**ಅಭಿನ್ನೋ ಭಗವಾನ್ಸ್ವೇನ ತದನ್ಯೇನ ವಿಭೇದವಾನ್ ।**
**ನಿತ್ಯಾಧರ್ಮಾಸ್ತದೀಯಾತಸ್ತು ಸರ್ವೇಽಸ್ಮಾನ್ನೈವಭೇದಿನಃ ।।**
**ಸಾಮಸ್ತ್ಯೋಚ್ಛೇದಿನೋಽನ್ಯತ್ರ ಧರ್ಮಾಃ ಉಭಯರೂಪಕಾಃ ।**
**ಭಾವೇತವಿವಚೋಚ್ಛೇದಾತ್ತದನ್ಯೇ ಚ ಸಮಸ್ತಶಃ ।।**
**(ಉಭಯರೂಪಿಣಃ)**

**ಅರ್ಥ** :- ಭಗವಾನ್ = ಶ್ರೀಹರಿಯು ಮತ್ತು (ಸಮಸ್ತಚೇತನರೂ), ಸ್ವೇನ = ತಮ್ಮ ತಮ್ಮ ಅವಯವಗಳಿಂದ, ಗುಣಗಳಿಂದ, ಕ್ರಿಯೆಗಳಿಂದ, ಇವುಗಳಿಂದ, ಅಭಿನ್ನ = ಅಭಿನ್ನನು (ಅಭಿನ್ನರು = ಭೇದವಿಲ್ಲದವನು, ಭೇದವಿಲ್ಲದವರು), ತದನ್ಯೇನ = ತನಗಿಂತಲೂ ಬೇರೆಯವರಾದ, ಚೇತನಪ್ರಕೃತಿ (ಶ್ರೀ ಮಹಾಲಕ್ಷ್ಮೀದೇವಿ), ಜೀವರುಗಳು, ಜಡಾತ್ಮಕಪ್ರಪಂಚ ಇವುಗಳಿಂದ, ವಿಭೇದವಾನ್ = ಭೇದವುಳ್ಳವನು (ಭೇದವುಳ್ಳವರು) ಹೀಗೆ ಒಂದೇ ಕಡೆ ಒಂದೇ ಕಾಲದಲ್ಲಿ ತನ್ನ ಗುಣಗಳಿಂದ ಅಭೇದ, ಇತರರಿಂದ ಭೇದವೆಂದು ಭೇದಾಭೇದಗಳಿಲ್ಲವೆಂಬುದನ್ನು ಗಮನಿಸಬೇಕು.) ತದೀಯಾಃ = ಶ್ರೀಹರಿಗೆ ಸಂಬಂಧಿಸಿದವುಗಳಾದ, ಸರ್ವೇ = ಎಲ್ಲಾ, (ದ್ವಿತ್ವಾದಿಸಂಖ್ಯೆಯಿಂದ ಬೇರೆಯಾದ) ಧರ್ಮಾಃ = ಜ್ಞಾನಾನಂದವೀರ್ಯಶೌರ್ಯಾದಿ ಗುಣಗಳು (ಧರ್ಮಗಳು) ಅಸ್ಮಾತ್ = ಶ್ರೀಹರಿಯಿಂದ (ಶ್ರೀಹರಿಯ ದೆಶೆಯಿಂದ,) ಭೇದಿನಃ = ಭೇದವುಳ್ಳವುಗಳು (ಭಿನ್ನಗಳು) ನೈವ = ಅಲ್ಲವೇ ಅಲ್ಲ. ಅಂದರೆ ಪರಮಾತ್ಮನಾದ ಶ್ರೀಹರಿಗೂ ಅವನ ಗುಣ, ಕ್ರಿಯಾ, ಅವಯವ, ಧರ್ಮಗಳೆಲ್ಲಕ್ಕೂ ಸವಿಶೇಷಾಭೇದವೆಂದು ಅಭಿಪ್ರಾಯ.

ಭೇದಾಭೇದಗಳ ಸ್ಥಳಗಳನ್ನು ತೋರಿಸುತ್ತಾರೆ.

ಅನ್ಯತ್ರ = ಪರಮಾತ್ಮನಿಂದ ಭಿನ್ನವಾದ ಜಡವಸ್ತುಗಳಲ್ಲಿ, ಸಾಮಸ್ತ್ಯೋಚ್ಛೇದಿನಃ = ಧರ್ಮಿಯಾದ ಘಟವು ಇರುವಾಗಲೇ ಪಾಕಾದಿಗಳಿಂದ ಸಂಪೂರ್ಣವಾಗಿ ನಾಶವುಳ್ಳವುಗಳಾದ ರೂಪಾದಿಗಳು. ಅಥವಾ ಧರ್ಮಿಯಾದ ದ್ರವ್ಯವು ನಾಶವಾಗದೇ ಇದ್ದಾಗ್ಯೂ ನಾಶವನ್ನು ಹೊಂದುವ, ಧರ್ಮಾಃ = ಧರ್ಮಗಳು, ತೇ = ಅವು, ಭಾವೇ = ತಾನು ಇರುವ ಕಾಲದಲ್ಲಿಯೇ, ಉಭಯರೂಪಿಣಃ (ರೂಪಕಾಃ) ಭಿನ್ನಾಭಿನ್ನಗಳು (ಅದು ಹೇಗೆಂದರೆ) ತ ಏವ = ಪ್ರತ್ಯಕ್ಷಪ್ರಮಾಣ ಬಲದಿಂದ, ಧರ್ಮಿಯ ವಿಶೇಷ ಸ್ವರೂಪಭೂತವಾದವುಗಳೇ, ಉಚ್ಛೇದಾತ್ = ಧರ್ಮಿಯು ಇರುವಾಗಲೇ ಇಲ್ಲವಾಗುತ್ತವೆಯೆಂಬ ಹೇತುವಿನಿಂದ (ಕಾರಣದಿಂದ), ಸಮಸ್ತಶಃ = ಯಾವದ್ದ್ರವ್ಯಭಾವಿಗಳಾಗದೆ ಇರುವ, ತದನ್ಯೇ ಚ = ಅಯಾವದ್ದ್ರವ್ಯಭಾವಿಗಳಾದ ಎಲ್ಲಾ ಧರ್ಮಗಳೂ ಸಹ, ಭಿನ್ನಾಭಿನ್ನಗಳೇ ಆಗಿವೆ.

ಇದರಿಂದ ಬಗೆದಾದ ಪ್ರಕ್ರಿಯೆಯಾಗಿರುವುದರಿಂದ ಈ ಸಂದರ್ಭದ ಸುಧಾವಾಕ್ಯಗಳನ್ನೇ ಉದಾಹರಿಸುತ್ತೇವೆ.

ನ್ಯಾಯ ಸಾಮಸ್ತ್ಯೇತಿ।।ಅನ್ಯತ್ರ = ಪರಮೇಶ್ವರಾತ್, ಜಡೇ ವಸ್ತುನೀತಿಯಾವತ್।
ಸುಧಾ:- ಸರ್ವೇಷಧರ್ಮಿಣಿ ಸಾಮಸ್ತ್ಯೇನ ಉಚ್ಛೇದವಂತೋ ಯೇ ಧರ್ಮಾ:, ತೇ
ಉಭಯರೂಪಿಣ:, ಭಿನ್ನಾಭಿನ್ನಾ: ಇತ್ಯರ್ಥ:।
ಅಭಿಭವವ್ಯಾವೃತ್ತ್ಯರ್ಥಂ ಸಾಮಸ್ತ್ಯೇತ್ಯುಕ್ತಂ।।
ಯದ್ವಾ ಸಾಮಸ್ತ್ಯೇ = ದ್ರವ್ಯಸ್ಯ ಅವಿಕಲತ್ವೇ।
ನಾಶಾಭಾವೇಽಪಿ ಯೇ ಉಚ್ಛೇದಿನ ಇತಿ ವ್ಯಾಖ್ಯೇಯಂ।
ಕಿಂ ಸ್ವಸದ್ಭಾವವೇಲಾಯಾಂ ಅಭೇದಿನ:, ಅಸದ್ಭಾವವೇಲಾಯಾಂ ಭೇದಿನ:, ಇತ್ಯೇವಂ
ಕಾಲಭೇದೇನ, ಭೇದಾಭೇದೌ ಇತ್ಯತ ಉಕ್ತಂ, ಭಾವೇ, ಇತಿ।।
ಸ್ವಸದ್ಭಾವದಶಾಯಮೇವ, ಉಭಯರೂಪಕಾ:, ಇತ್ಯರ್ಥ: ವಿನಷ್ಟಸ್ಯ ಅಸತ್ತ್ವೇನ
ಭೇದಚಿಂತಾನವಕಾಶಾತ್।
ಪ್ರಾಗತ್ಯಂತಾಭೇದೇ ವಿನಾಶಾಸಂಭವಾಚ್ಚ।
ಕುತೋ ಭಿನ್ನಾಭಿನ್ನಾ ಇತ್ಯತ ಆಹ।।
ತ ಏವೇತಿ।।
ಪ್ರತ್ಯಕ್ಷಬಲೇನ ತ, ಏವ, ಧರ್ಮಿಸ್ವರೂಪಭೂತಾ, ಏವ, ಉಚ್ಛೇದಾತ್ ಸತ್ಯೇವ
ಧರ್ಮಿಣಿ, ಅಸತ್ತ್ವಾತ್, ಹೇತೋ:, ತದನ್ಯೇ।
ಚಶಬ್ದೋ ಮಿಥ:ಸಮುಚ್ಚಯಾರ್ಥ:।
ಸಮಸ್ತತ: ಇತಿ ಅಯಾವದ್ದ್ರವ್ಯಭಾವಿವಿವಕ್ಷಯಾ, ಉಕ್ತಂ।।
ಯದುಕ್ತಂ, ಯಾವದವಯವಭಾವಿನ:, ಅವಯವಿನ:, ಅವಯವೈ: ಅತ್ಯಂತಾಭೇದ:,
ಅಯಾವದ್ದ್ರವ್ಯಭಾವಿನಸ್ತು ಭೇದಾಭೇದಾವಿತಿ।।
ತೇನ, ಅನ್ಯದಪಿ ಚೋದ್ಯಂ ಪರಿಹೃತಮಿತ್ಯಾಹ।।
ಅಂಶಾಂಶಿನೋರಿತಿ।।

ಮೇಲೆ ಕಂಡ ಸುಧಾವಾಕ್ಯಗಳ ಅಭಿಪ್ರಾಯವನ್ನು ಹಿಂದೆಯೇ ವಿವರಿಸಲಾಗಿದೆ. ಈ ಸಂದರ್ಭದಲ್ಲಿ ಪ್ರಾಚೀನ ಟೀಕಾಕಾರರಾದ ಶ್ರೀತ್ರಿವಿಕ್ರಮ ಪಂಡಿತಾಚಾರ್ಯರ ಪ್ರತಿಪಾದನೆಯನ್ನು ತೋರಿಸುವುದು ಉಚಿತವಾದುದರಿಂದ ಅದನ್ನು ಉದಾಹರಿಸುತ್ತೇವೆ.

"ಸೂತ್ರಭಾಷ್ಯದಲ್ಲಿ ಭಗವಾನ್ ನಾರಾಯಣೋ ವ್ಯಾಸತ್ವೇನ ಅವತತಾರ" ಇತಿ ವಕ್ತೃಸ್ವರೂಪಮಾಹ

ಜ್ಞಾನಶಕ್ತಿಬಲೈಶ್ವರ್ಯವೀರ್ಯತೇಜಾಂಸ್ಯಶೇಷತ:।
ಭಗವಚ್ಛಬ್ದವಾಚ್ಯಾನಿ ವಿನಾ ಹೇಯೈ: ಗುಣಾದಿಭಿ:।।

ಇತ್ಯಾದೌ, "ಅಶೇಷತ:" ಇತಿ ವಿಶೇಷಣಾತ್

**ನಿರತಿಶಯಜ್ಞಾನಾದಿಗುಣವಾನ್ ಭಗವಚ್ಛಬ್ದಾರ್ಥ ಉಕ್ತಃಸ್ಯಾತ್ ।**
**ಗುಣಗುಣ್ಯಭೇದಾಭಿಪ್ರಾಯಾತ್ ।**
**ನ ಚ ಗುಣಾನಾಂ ಪರಸ್ಪರಂ ಭೇದಃ ।**
**ವಿಶೇಷಾಂಗೀಕಾರೇಣೈವ ಬಹುವಚನಾವಿರೋಧಾತ್ ।**
**ನನು ಕಥಂ ಏಕಸ್ಯೈವ ಗುಣಗುಣಿಭಾವಃ ।**
**ಗುಣವ್ಯತಿರಿಕ್ತೋ ಹಿ ಗುಣಸಂಬಂಧೇನ ಗುಣವಾನ್ ।**
**ದಂಡವ್ಯತಿರಿಕ್ತೋ ದಂಡೀತಿವತ್ ।**
**ಭಿನ್ನಯೋರೇವ ತದನುಭವಾದಿತಿಚೇನ್ನ ।**
**ಪ್ರತ್ಯಕ್ಷತ ಏವ ದುಂಡದಂಡಿನೋರ್ಭೇದಾನುಭವಾತ್ ಸಂಬಂಧಾಪೇಕ್ಷಯಾ ದಂಡೀತಿ ಯುದ್ಯತೇ ।**
**ನ ಚ ಗುಣಗುಣಿನೋರ್ಭೇದೋಽನುಭೂಯತೇ ।**

**ಅಭಿಪ್ರಾಯ** :- ಅನಂತ ಕಲ್ಯಾಣ ಗುಣಾತ್ಮಕನಾದ ನಾರಾಯಣನನ್ನು "ಭಗವಾನ್ ನಾರಾಯಣಃ" ಎಂದು ಹೇಳಿದುದು ನಾರಾಯಣನು ನಿರತಿಶಯ ಜ್ಞಾನಾದಿಗುಣವುಳ್ಳವನೆಂದು ಗುಣಗುಣಿಗಳ ಅಭೇದದ ಅಭಿಪ್ರಾಯದಿಂದ ಎಂದು ತಿಳಿಯಬೇಕು.

ನಾರಾಯಣನಿಗೂ ಅವನ ಗುಣಗಳಿಗೂ ಸವಿಶೇಷಾಭೇದವು ಇರುವಂತೆ ಅವನ ಗುಣಗಳಿಗೂ ಪರಸ್ಪರವಾಗಿ ಸವಿಶೇಷಾಭೇದವೇ ಹೊರತು ಭೇದವು ಇರುವುದಿಲ್ಲ. ವಿಶೇಷವನ್ನು ಅಂಗೀಕರಿಸಿರುವ ಪ್ರಯುಕ್ತ ನಾರಾಯಣನು ಒಬ್ಬನೇ ಆದಾಗ್ಯೂ ಬಹುವಚನಕ್ಕೂ ಯಾವ ವಿರೋಧವೂ ಬರುವುದಿಲ್ಲ.

**ಶಂಕಾ** :- ಒಬ್ಬನಿಗೇನೇ ಗುಣಗುಣಿಭಾವವು ಹೇಗೆ ಕೂಡುತ್ತದೆ. ಗುಣಕ್ಕಿಂತಲೂ ಗುಣಿಯು ಬೇರೆಯಾಗಿಯೇ ಇದ್ದಾನಷ್ಟೆ. ಗುಣದ ಸಂಬಂಧದಿಂದ ಗುಣೀ ಎಂದು ಕರೆಯಲ್ಪಡುತ್ತಾನೆ. ದಂಡೀ ಎಂಬಲ್ಲಿ ದಂಡವೇ ಬೇರೆ ದಂಡಿಯಾದ ದೇವದತ್ತನೇ ಬೇರೆ. ಭಿನ್ನವಾದವುಗಳೇ ಇಲ್ಲಿ ಅನುಭವ ಸಿದ್ಧವಾಗಿವೆಯಲ್ಲಾ! ಪ್ರತ್ಯಕ್ಷದಿಂದಲೇ ದಂಡಕ್ಕೂ ದಂಡಿಗೂ ಭೇದವು ಕಂಡುಬಂದಿದೆ. ದಂಡದ ಸಂಬಂಧದಿಂದಲೇ ದಂಡೀ ಎಂಬುದು ಕೂಡುತ್ತದೆ ಎಂದು ಶಂಕಾಭಿಪ್ರಾಯ. ಹಿಂದಿನ ಶಂಕೆಗೆ ಉತ್ತರವು ಈ ರೀತಿ ಇದೆ.

**ತತ್ತ್ವಪ್ರದೀಪ ವಾಕ್ಯಗಳು** :-

**ನ ಚ ಗುಣಗುಣಿನೋರ್ಭೇದೋಽನುಭೂಯತೇ ।।**
**"ವಿಜ್ಞಾನಮಾನಂದಂ ಬ್ರಹ್ಮ" ಇತ್ಯಾದಿಸಾಮಾನಾಧಿಕರಣ್ಯೇನಾಭೇದಪ್ರತೀತೇಃ ।**
**ಲೋಕೇ ಚ "ಶುಕ್ಲಃಪಟಃ" ಇತ್ಯಾದೌ ।**
**ತತ್ರ ಶೌಕ್ಲ್ಯಸಂಬಂಧಾಪೇಕ್ಷಯಾ ಶುಕ್ಲತ್ವಂ "ಇತಿಚೇನ್ನ ।**
**ಶುಕ್ಲೋ ವರ್ಣಃ ಇತಿಪ್ರಯೋಗದರ್ಶನಾತ್ ।**

**ತಥಾ ಚ ಶ್ರುತಿಃ "ಶ್ವೇತಂ ರೂಪಮ್" ಇತಿ।**
**ತಸ್ಯ ವಾ ಏತಸ್ಯ ಪರಮಸ್ಯ ನಾರಾಯಣಸ್ಯ ಚತ್ವಾರಿ ರೂಪಾಣಿ, ಶುಕ್ಲಂ, ರಕ್ತಂ, ರೌಕ್ಮಂ, ಕೃಷ್ಣಮಿತಿ।**
**ಶೌಕ್ಲ್ಯಮಿತ್ಯಾದಿವ್ಯವಹಾರೋ ನಿಷ್ಪ್ರಮಾಣಕಃ।**
**ಸ್ವರೂಪತ್ವಮಿತಿವತ್।**
**ಸಾಮಾನಾಧಿಕರಣ್ಯಂ ಹಿ ಸರ್ವೇಷಾಮಭೇದೇ ಪ್ರಮಾಣಮ್।**
**ಮೃದ್ಘಟ ಇತ್ಯಾದಿಸಾಮಾನಾಧಿಕರಣ್ಯೇಽಪಿ ಕಾರಣೇನಾಭೇದಪ್ರತೀತೇಃ ವಿನಾಶಾಚ್ಚ ಕಾರ್ಯಸ್ಯ ಭೇದಾಭೇದೋಪಪತ್ತಿಃ।**
**ತಸ್ಮಾತ್ ದ್ರವ್ಯೇ ಸತ್ಯಪಿ, ಅಪಾಯಿನಾಂ ಗುಣಾದೀನಾಂ ಭೇದಾಭೇದೌ।**
**ಯಾವದ್ದ್ರವ್ಯಭಾವಿನಾಂ ಅಭೇದಃ॥**

**ಅಭಿಪ್ರಾಯ** :- ಗುಣಕ್ಕೂ ಗುಣಿಗೂ ಭೇದವು ಅನುಭವ ಸಿದ್ಧವಾಗಿಲ್ಲ. ವೇದದಲ್ಲಿ "ವಿಜ್ಞಾನಂ, ಆನಂದಂ ಬ್ರಹ್ಮ" (ಇತಿಶ್ರುತಿಃ) ಎಂಬುದಾಗಿ ಪರಬ್ರಹ್ಮನನ್ನು ವಿಜ್ಞಾನರೂಪನೆಂದೂ, ಆನಂದರೂಪನೆಂದೂ ಸಾಮಾನಾಧಿಕರಣ್ಯೇನ ತೋರಿಸಲಾಗಿದೆ. ಇದರಿಂದ ಅಭೇದವನ್ನೇ ಹೇಳಲಾಗಿದೆ. ಈ ವೇದಪ್ರತೀತಿಯು ವಿಜ್ಞಾನಾನಂದಾದಿಗಳಿಗೂ ಬ್ರಹ್ಮನಿಗೂ ಅಭೇದವನ್ನೇ ಅವಗಾಹಿಸುತ್ತಿದೆ.

ಮತ್ತು ಲೋಕದಲ್ಲಿ ಶುಕ್ಲಃ ಪಟಃ ಇತ್ಯಾದಿಗಳಲ್ಲಿ ಶುಕ್ಲವರ್ಣಕ್ಕು (ಗುಣಕ್ಕೂ) ಪಟಕ್ಕೂ ಅಭೇದವೇ ತೋರುತ್ತಿದೆ.

ಶೌಕ್ಲ್ಯದ ಸಂಬಂಧದಿಂದ ಹೀಗೆ ಪ್ರತೀತಿಯು ಬರುತ್ತಿದೆಯೆಂಬುದು ಸರಿಯಲ್ಲ, "ಶುಕ್ಲೋ ವರ್ಣಃ" ಎಂಬುದಾಗಿ ಪ್ರಯೋಗವು ಪ್ರಸಿದ್ಧವಾಗಿದೆ. ಇಲ್ಲಿ ಅಭೇದವನ್ನೇ ಹೇಳದೇ ಬೇರೆ ಉಪಾಯವೇ ಇಲ್ಲ. ವೇದದಲ್ಲೂ ಈ ಬಗೆಯಾದ ನಿರ್ದೇಶವು ಕಂಡುಬಂದಿದೆ. "ಶ್ವೇತಂ ರೂಪಂ" (ಇತಿಶ್ರುತಿಃ) 'ಬಿಳಿಯಾದ ಬಣ್ಣವು' ಎಂದು ವೇದವಿದೆ. ಶೌಕ್ಲ್ಯಂ ಎಂಬ ವ್ಯವಹಾರವು ಸ್ವರೂಪತ್ವಂ ಎಂಬಂತೆ ನಿಷ್ಪ್ರಮಾಣಕವಾಗಿದೆ. ಸಾಮಾನಾಧಿಕರಣ್ಯವು ಅಭೇದದಲ್ಲಿ ಪ್ರಮಾಣವೆಂಬುದು ಸುಪ್ರಸಿದ್ಧ.

"ಮೃದ್ಘಟಃ" ಎಂಬಲ್ಲಿ ಸಾಮಾನಾಧಿಕರಣ್ಯವು ತೋರಿದರೂ ಕಾರಣದಿಂದ (ಮೃತ್ತಿನಿಂದ) ಘಟಕ್ಕೆ ಅಭೇದವು ತೋರಿದರೂ ಘಟವು ನಶ್ವರವಾದುದರಿಂದ ಎಲ್ಲಿ ಕಾರಣವು ಇದ್ದಾಗ್ಯೂ, ಕಾರ್ಯವು ನಾಶವಾಗುತ್ತದೆಯೋ ಅಲ್ಲಿ ಭೇದಾಭೇದವನ್ನೇ ಒಪ್ಪಬೇಕಾಗಿದೆ. "ಪಟಸ್ಯ ಶೌಕ್ಲ್ಯಂ" ಎಂಬ ಪ್ರತೀತಿಯು ಪಟದ ವಿಶೇಷಪ್ರತೀತಿಯೇ ಆಗಿದೆ. "ಪಟಸ್ಯ ಭೇದಃ" ಎಂಬ ಪ್ರತೀತಿಯಂತೆ ವಿಶೇಷಪ್ರತೀತಿಯೆಂದೇ ಹೇಳಬೇಕಾಗಿದೆ. ಪಟಕ್ಕೂ ಭೇದಕ್ಕೂ ಮತ್ತೊಂದು ಭೇದವಿಲ್ಲ. ಹಾಗೆ ಬೇರೊಂದು ಭೇದವನ್ನು ಹೇಳಿದರೆ ಅನವಸ್ಥಾದೋಷವು ಬರುತ್ತದೆ.

ವೈಶೇಷಿಕರ ಮತದಲ್ಲಿ "ಸಮವಾಯಸ್ಯ ಸತ್ವಂ" ಎಂಬಲ್ಲಿ ಸ್ವರೂಪಭೂತವಾದ ಸತ್ವವೇ ವಿಶೇಷವಾಗಿ ತೋರುತ್ತದೆ. ವೈಶೇಷಿಕರೂ ಸಹ ಸಮವಾಯಕ್ಕೆ ಭಿನ್ನವಾದ ಸತ್ತೆಯನ್ನು ಅಂಗೀಕರಿಸಿಲ್ಲ. ಸತ್ತಾಜಾತಿಯನ್ನು ದ್ರವ್ಯಗುಣಕರ್ಮಗಳಲ್ಲಿ

ಮಾತ್ರ ಸ್ವೀಕರಿಸಿರುತ್ತಾರೆ. ಮತ್ತು "ಸಮವಾಯಃ ಸನ್" ಎಂಬ ಪ್ರಯೋಗವಿಶೇಷವೂ ಕಂಡುಬಂದಿದೆ. ಸಮವಾಯಸತ್ವವು ಗೌಣವಾದುದೂ ಸಹ ಅಲ್ಲ. ಹಾಗೆ ಹೇಳಿದರೆ ಮುಖ್ಯವಾಗಿ ಅಂತಹ ವ್ಯವಹಾರವೇ ಇಲ್ಲದೇ ಹೋಗಬೇಕಾಗುವುದು. ಆದಕಾರಣ ದ್ರವ್ಯದಲ್ಲಿ ಅದು ಇದ್ದಾಗ್ಯೂ ಅದರ ಗುಣಾದಿಗಳು ಎಲ್ಲಿ ನಾಶವಾಗುತ್ತವೆಯೋ ಇರುವುದಿಲ್ಲವೋ ಅಂತಹ ಕಡೆ ಭೇದಾಭೇದವನ್ನೇ ಹೇಳಬೇಕು.

**ತತ್ವಪ್ರದೀಪ** :- ಮಾಯಾವಾದಿಗಳ ಮತದಲ್ಲೂ ಸಹ ವಿಶೇಷವನ್ನು ಒಪ್ಪಲೇಬೇಕೆಂಬುದನ್ನು ತತ್ವಪ್ರದೀಪಕಾರರು ಪ್ರತಿಪಾದಿಸಿರುತ್ತಾರೆ.

> **"ನ ಚೈತಸ್ಮಿನ್ಬ್ರಹ್ಮಣಿ, ವಿಶೇಷಮಂತರೇಣ, ಸತ್ಯಜ್ಞಾನಾದಿಶಬ್ದಪ್ರವೃತ್ತಿಃ, ತೇಷಾಂ ಪರ್ಯಾಯತ್ವಪ್ರಸಂಗಾತ್ ।**
> **ನಿರ್ವಿಶೇಷೇಽಪಿ ವಸ್ತುನಿ, ಅನೃತಾದಿವ್ಯಾವರ್ತ್ಯಭೇದಾತ್ ಶಬ್ದಾಂತರಪ್ರವೃತ್ತಿ ರಿತಿಚೇತ್**
> **ಅನೃತಾದಿವ್ಯಾವೃತ್ತ್ಯಾ ಬ್ರಹ್ಮಣಿ ವಿಶೇಷೋಽಸ್ತಿ ವಾ ನ ವಾ ।**
> **ನಚೈಕಪದೇನೈವ ಅಖಂಡಾರ್ಥಸಿದ್ಧೇಃ ಪದಾಂತರವೈಯರ್ಥ್ಯಂ ಪರ್ಯಾಯತ್ವಂ ಚ ಸತ್ಯಾದಿಪದಾನಾಂಸ್ಯಾತ್ ।**
> **ವಿಶೇಷಾಭ್ಯುಪಗಮೇನ ಅನಂತವೇದಪದೋದಿತಸ್ಯ ಬ್ರಹ್ಮಣಃ ಅನಂತಗುಣತ್ವಂ, ಇತಿ.**
> **ಅಸ್ಮನ್ಮತಮೇವ ಅವಿಸ್ಮೃತವಿಮಲವಿಬುಧಮಹಾಜನಮಾನಸಮಾನನೀಯಂ ಅಖಿಲ ಪಾಪ್ಮರ್ಭಿಃ ಅಸ್ಮೃತಮಪಿತೈರಂಗೀಕೃತಂ ಸ್ಯಾತ್ ॥**

**ಅಭಿಪ್ರಾಯ** :- ಮಾಯಾವಾದಿಗಳ ಮತದಲ್ಲಿ ಬ್ರಹ್ಮನು, ನಿರ್ವಿಶೇಷ, ಏಕ, ಅಖಂಡ, ನಿರ್ಧರ್ಮಕ, ನಿತ್ಯ, ಶುದ್ಧ, ಜ್ಞಾನ, ಚೈತನ್ಯೈಕರಸ, ಅವಾಚ್ಯ, ಅಜ್ಞೇಯ, ಅದ್ವಿತೀಯ ಎಂದು ಒಪ್ಪಿದ್ದಾರೆ.

ಹೀಗಿರುವಾಗ, ಅವನಲ್ಲಿ ವಿಶೇಷವನ್ನು ಒಪ್ಪದಿದ್ದರೆ, ಅಂತಹ ಒಬ್ಬ ಬ್ರಹ್ಮನಲ್ಲಿ, ಸತ್ಯಂ, ಜ್ಞಾನಂ, ಅನಂತಂ, ಬ್ರಹ್ಮ ಎಂದು ವೇದದಲ್ಲಿ ಉಕ್ತವಾಗಿರುವ ಸತ್ಯ, ಜ್ಞಾನ, ಅನಂತ ಮೊದಲಾದ ಶಬ್ದಗಳ ಪ್ರವೃತ್ತಿಯು ಹೇಗೆ? ಚಿನ್ಮಾತ್ರಸ್ವರೂಪನಾದ ಬ್ರಹ್ಮನಲ್ಲೇ ಸತ್ಯಾದಿ ಶಬ್ದಗಳ ಪ್ರವೃತ್ತಿಯು ಇರುವುದಾದರೆ, ಸತ್ಯಾದಿಪದಗಳು ಪರ್ಯಾಯ ಶಬ್ದಗಳೇ ಆಗಬೇಕಾದೀತು.

ಬ್ರಹ್ಮನೇನೋ ನಿರ್ವಿಶೇಷ, ಅಂತಹ ನಿರ್ವಿಶೇಷ ಬ್ರಹ್ಮನಲ್ಲಿ, ಅಸತ್ಯವ್ಯಾವೃತ್ತಿಗಾಗಿ ಸತ್ಯನೆಂದೂ, ಅಜ್ಞಾನವ್ಯಾವೃತ್ತಿಗಾಗಿ ಜ್ಞಾನಸ್ವರೂಪನೆಂದೂ, ಅಂತವ್ಯಾವೃತ್ತಿಗಾಗಿ ಅನಂತನೆಂದೂ ಹೇಳುವುದರಿಂದ, ಶಬ್ದಾಂತರಕ್ಕೆ ಸಾರ್ಥಕ್ಯವು ಉಂಟೆಂದು ಹೇಳಿದರೆ, ಶಬ್ದಾಂತರಕ್ಕೆ ಪ್ರವೃತ್ತಿಯು ಎಂದು ಹೇಳಿದರೆ, ಅಂದರೆ ನಿರ್ವಿಶೇಷನಲ್ಲಿ ಸತ್ಯನೆಂಬ ಪದದಿಂದ ಅಸತ್ಯವ್ಯಾವೃತ್ತಿಯಾಯಿತು, (ಅನೃತವ್ಯಾವೃತ್ತಿ) ಜ್ಞಾನಪದದಿಂದ ಅಜ್ಞಾನನಲ್ಲವೆಂದು ಅಜ್ಞಾನವ್ಯಾವೃತ್ತಿಯು ಆದಂತಾಯಿತು.

ಅನಂತಪದದಿಂದ ಅಂತವ್ಯಾವೃತ್ತಿಯು ಆಗುವುದರಿಂದ ಪದಾಂತರಕ್ಕೆ ವೈಯರ್ಥ್ಯವಿಲ್ಲವೆಂದು ಅವರು ಸಮಾಧಾನವನ್ನು ಹೇಳುವಂತಿಲ್ಲ. ಅನೃತಾದಿವ್ಯಾವೃತ್ತಿಯಿಂದ ಬ್ರಹ್ಮನಲ್ಲಿ ವಿಶೇಷವು ಉಂಟೋ ಇಲ್ಲವೋ ? ವಿಶೇಷವಿಲ್ಲವಾದರೆ, ಒಂದೇಪದದಿಂದ ಅಖಂಡಾರ್ಥರೂಪಬ್ರಹ್ಮವು ಸಿದ್ಧವಾಗುವುದರಿಂದ ಪದಾಂತರವು ವ್ಯರ್ಥವಾಗಬೇಕು. ಅಥವಾ ಸತ್ಯಾದಿ ಪದಗಳಿಗೆ ಪರ್ಯಾಯತ್ವವಾದರೂ ಬರಬೇಕಾದೀತು.

"ಸತ್ಯಂ ಜ್ಞಾನಂ ಅನಂತಂ ಬ್ರಹ್ಮ" ಎಂಬ ವೇದವಾಕ್ಯದಲ್ಲಿನ ಪದಗಳಿಗೆ ಪರ್ಯಾಯತ್ವವನ್ನು ನಿವಾರಿಸುವುದಕ್ಕಾಗಿ ವಿಶೇಷವನ್ನೇ ಕಡೆಗಾದರೂ ಐಕ್ಯವಾದಿಗಳು ಒಪ್ಪಲೇಬೇಕು. ಸಕಲಸಜ್ಜನರಿಗೂ ಒಪ್ಪಿಗೆಯಾಗಿರುವ ವಿಶೇಷವನ್ನೇ ಅವರು ಎಂದೆಂದಿಗೂ ಚಿಂತಿಸದವರು ಗತ್ಯಂತರವಿಲ್ಲದಿರುವುದರಿಂದ ಅದಕ್ಕೆ ಶರಣು ಹೋಗಬೇಕಾಯಿತು.

**ತತ್ತ್ವಪ್ರದೀಪಃ -**

**ಅನೃತಾದಿವ್ಯಾವೃತ್ತೇರನ್ಯೋ ವಿಶೇಷೋ ನಾಭ್ಯುಪಗಮ್ಯತೇ ।**
**ಅಧ್ಯಸ್ತಾತದ್ರೂಪವ್ಯಾವೃತ್ತೇರೇವ ವಿವಕ್ಷಿತತ್ವಾತ್ ।**
**ನ ಚ ಪರಮಾऽದ್ವೈತಹಾನಿಃ ।**
**ಭಾವರೂಪವಿಶೇಷಾಭಾವಾತ್ ।**
**ಅಭಾವಾದ್ವೈತಂಹಿ ಸ್ವೈರಭ್ಯುಪಗಮ್ಯತೇ ।**
**ಅತೋ ನಾಭಾವೇನ ಸವಿಶೇಷತ್ವಪ್ರಸಂಗ ಇತಿಯದಿಬ್ರೂಯಾತ್ ಸ ಪ್ರಷ್ಟವ್ಯಃ ।**
**ಸೋऽಭಾವೋ ಬ್ರಹ್ಮಣೋ ಭಿನ್ನಃ ಕಿಮುತಾಭಿನ್ನ ಇತಿ ।**
**ಭಿನ್ನಶ್ಚೇತ್ ಭೇದಧರ್ಮಿತ್ವಾತ್, ಅಭಾವವಿಶಿಷ್ಟತ್ವಾದ್ಬ್ರಹ್ಮಣಃ ಸ ವಿಶೇಷತ್ವಮ್ ।**
**ಅಭಿನ್ನಶ್ಚೇತ್, ಅಭಾವ ಏವ ವಾ ಬ್ರಹ್ಮೈವ ವಾ ಸ್ಯಾತ್ ।**
**ಅಭಾವತ್ವೇ ಶೂನ್ಯವಾದಪ್ರಸಂಗಃ ।**
**ಬ್ರಹ್ಮಮಾತ್ರತ್ವೇ ಬ್ರಹ್ಮಪದೇನೈವ ತಸ್ಯ ಸಿದ್ಧೇಃ ಪದಾಂತರವೈಯರ್ಥ್ಯಂ. ಅನೃತಾದ್ಯ**
**ಭಾವೋಪಲಕ್ಷಿತಸ್ವರೂಪತ್ವಾತ್. ನಾಭಾವವಿಶಿಷ್ಟೋ ವಾಕ್ಯಾರ್ಥ ಇತಿಚೇತ್.**
**ಉಪಲಕ್ಷಿತತ್ವವಿಶೇಷಃ ಕೇನ ವಾರ್ಯತೇ ಸ್ವರೂಪತ್ವಂ, ವಾಕ್ಯಾರ್ಥತ್ವಂ.**
**ಅಖಂಡಾರ್ಥತ್ವಂ ಚ ।**
**ತಸ್ಮಾತ್ ಸರ್ವಥಾ ಸರ್ವವಾದಿಭಿಃ ಅಭ್ಯುಪೇಯೋ ವಿಶೇಷಃ ।**

**ಅಭಿಪ್ರಾಯ** :- ಅನೃತಾದಿವ್ಯಾವೃತ್ತಿಗಿಂತಲೂ ಬೇರೆಯಾದ ವಿಶೇಷವನ್ನು ನಾವು ಒಪ್ಪುವುದಿಲ್ಲ. ಆರೋಪಿತವಾದ ಅತದ್ರೂಪವ್ಯಾವೃತ್ತಿಯೇ ವಿವಕ್ಷಿತವಾಗಿರುವುದರಿಂದ ಅಂದರೆ ಅನೃತನಲ್ಲ, ಅಜ್ಞಾನನಲ್ಲ, ಅಂತವಲ್ಲವೆಂದು ಹೇಳಿದರೆ ಬ್ರಹ್ಮನಿಗಿಂತಲೂ ಬೇರೆಯಾದ ಅನೃತಾಭಾವರೂಪವಾದ ಅಭಾವವನ್ನು ಒಪ್ಪಿದಂತಾಗಿ, ಅದ್ವೈತಹಾನಿಯಾಗುವುದಲ್ಲವೇ ಎಂದು ಪ್ರಶ್ನಿಸಕೂಡದು. ಅದ್ವೈತಿಗಳ ಮತದಲ್ಲಿ ಬ್ರಹ್ಮನಿಗಿಂತಲೂ ಬೇರೆಯಾದ ಭಾವರೂಪವಾದ ವಿಶೇಷವು ಇಲ್ಲವೆಂದು ಅಭಿಪ್ರಾಯ.

ಎರಡನೇದಾದ ಅಭಾವವನ್ನು ಒಪ್ಪುತ್ತೇವೆ. "ಅಭಾವಾದ್ವೈತಮಂಗೀಕ್ರಿಯತೆ" "ಅಭಾವರೂಪಾಃ ಧರ್ಮಾಃ ನಾದ್ವೈತಂ ಘ್ನಂತಿ" ಅಂದರೆ ಬ್ರಹ್ಮನಿಗಿಂತಲೂ ಬೇರೆಯಾದ ಭಾವಪದಾರ್ಥವನ್ನು ಒಪ್ಪದಿದ್ದರೂ, ಅಭಾವ ರೂಪವಾದ ಧರ್ಮಗಳು "ಸದದ್ವೈತಕ್ಕೆ ಬಾಧಕವಲ್ಲವೆಂದು ಅವರ ಅಭಿಪ್ರಾಯ. ಆದರೂ ಅಭಾವದಿಂದ ಸವಿಶೇಷತ್ವವು ಬಂದಂತಾಗುವುದಿಲ್ಲವೆಂದು ಅವರು ಹೇಳಿದರೆ ಆಗ ಈ ರೀತಿ ಪ್ರಶ್ನಿಸಬೇಕಾಗಿದೆ.

ಬ್ರಹ್ಮನಿಗಿಂತಲೂ ಬೇರೆಯಾಗಿ ಒಪ್ಪಲ್ಪಟ್ಟ ಅಭಾವವು ಬ್ರಹ್ಮಭಿನ್ನವೋ ಅಭಿನ್ನವೋ ಎಂದು ಕೇಳಬೇಕು.

ಬ್ರಹ್ಮಭಿನ್ನವೆಂದು ಹೇಳಿದರೆ ಆಗಲು ಅಭಾವಭಿನ್ನನಾದ ಬ್ರಹ್ಮನಿಗೆ ಅಭಾವಭೇದಧರ್ಮಕತ್ವವು ಬಂದಂತಾಗಿ ಅಭಾವವಿಶಿಷ್ಟತ್ವರೂಪವಾದ ಸವಿಶೇಷತ್ವವೇ ಬಂದಂತಾಯಿತು. ಎರಡನೇ ಪಕ್ಷದಲ್ಲಿ ಅಭಾವವೆಂದರೆ ಬ್ರಹ್ಮನೆಂತಾಗಿ ಅಭಾವಾಭಿನ್ನನಾದ ಬ್ರಹ್ಮನಿಗೆ ಅಭಾವತ್ವವು ಅಂಗೀಕೃತವಾದಂತಾಗಿ ಶೂನ್ಯವಾದವನ್ನೇ ಅಂಗೀಕರಿಸಿದಂತಾಗಿ, ಅದ್ವೈತವಾದ ಎಂದರೆ ಶೂನ್ಯವಾದ ಎಂದೇ ಹೇಳಿದಂತಾಯಿತು.

ನಿರ್ವಿಶೇಷ ಬ್ರಹ್ಮಮಾತ್ರವೇ ಎಂದರೆ ಪದಾಂತರಕ್ಕೆ ವೈಯರ್ಥ್ಯವು ಬರುವುದು. ಸತ್ಯಂ ಎಂಬ ಪದದಿಂದ ಅನೃತವ್ಯಾವೃತ್ತಿಯೆಂದು ಹೇಳಿ, ಅನೃತಾದ್ಯಭಾವೋಪಲಕ್ಷಿತಸ್ವರೂಪವನು ಬ್ರಹ್ಮನು ಎಂದು ಹೇಳುತ್ತೇವೆ. ಅಭಾವ ವಿಶಿಷ್ಟನು ಎಂದು ವಾಕ್ಯಾರ್ಥವಲ್ಲ ಎಂದು ಅವರು ಹೇಳಿದರೂ ಉಪಲಕ್ಷಿತತ್ವವಿಶೇಷವನ್ನೇ ಒಪ್ಪಿಕೊಂಡಂತಾಯಿತು. ಬ್ರಹ್ಮನಿಗೆ ಸ್ವರೂಪತ್ವಂ, ವಾಕ್ಯಾರ್ಥತ್ವಂ, ಅಖಂಡಾರ್ಥತ್ವಂ ಇತ್ಯಾದಿಯಾದ ವಿಶೇಷವನ್ನು ಒಪ್ಪಿದಂತಾಯಿತು.

ಆದಕಾರಣ ಸರ್ವಪ್ರಕಾರಗಳಿಂದಲೂ, ಎಲ್ಲಾ ವಾದಿಗಳೂ ಕೂಡ ವಿಶೇಷವನ್ನು ಒಪ್ಪಲೇಬೇಕು.

**ತತ್ತ್ವಪ್ರದೀಪಃ** :- ಇಂತಹ ವಿಶೇಷದ ಕಾರ್ಯವೈಖರಿಯನ್ನು ವಿವರಿಸುವ ತತ್ತ್ವಪ್ರದೀಪಕಾರರ ವಾಕ್ಯಗಳು ಬಹಳ ಮಾರ್ಮಿಕವಾಗಿವೆ.

**"ಯೋಽಯಂ ಏಕತ್ರ ಅಪರ್ಯಾಯ ನಾನಾಶಬ್ದಪ್ರವೃತ್ತಿಹೇತುಃ।**
**ತೇನ ಏಕಮೇವ, ಅನೇಕಧಾ, ದ್ರವ್ಯ, ಗುಣ, ಕ್ರಿಯಾ, ಸಾಮಾನ್ಯಾದಿಸ್ವರೂಪೇಣ**
**ಪ್ರಮಾಣವ್ಯವಹಾರಪದವೀಮಧ್ಯಾಸ್ತೆ।**
**ಸ ಚ ವಿಶೇಷೋ ವಸ್ತುಸ್ವರೂಪಂ ಸ್ವನಿರ್ವಾಹಕಶ್ಚ।**
**ನಚೇದೃಶಂ ವಿಶೇಷಮಂತರೇಣ ಸರ್ವೇಷಾಂ ವ್ಯವಹಾರನಿರ್ವಾಹಃ।**
**ನ ಚ ಗುಣಗುಣ್ಯಾದಿಭೇದೇ ಸಂಬಂಧಃ ಸಂಭವೀ।**
**ತಸ್ಯಸಂಬಂಧಸ್ಯ ತತೋ ಭಿನ್ನತ್ವೇ ಗುಣವದೇವ ಸಂಬಂಧಾಂತರಾಪೇಕ್ಷತ್ವಾತ್,**
**ಅನವಸ್ಥಾನಾತ್।**
**ಅಭಿನ್ನತ್ವೇವಸ್ತುಮಾತ್ರಮಿತಿ ನ ಸಂಬಂಧಃಸ್ಯಾತ್।**
**ತಸ್ಮಾತ್ ಗುಣಗುಣಿನೋರ್ಭೇದಂ, ಭೇದಾಭೇದೌ ವಾ ಕಲ್ಪಯಿತ್ವಾ, ತಯೋಃ**
**ಸಂಬಂಧಂ ಸಮವಾಯಮನ್ಯಂ ವಾ ಕಲ್ಪಯಿತ್ವಾ, ತದನವಸ್ಥಾಪರಿಹಾರಾರ್ಥಂ**
**ತಸ್ಯ ಸ್ವನಿರ್ವಾಹಕತ್ವಕಲ್ಪನಾತ್, ವರಮೇಕಸ್ಯ ದ್ರವ್ಯಸ್ಯ ಗುಣಾದಿವಿಶೇಷರೂಪೇಣ**

ಸ್ವನಿರ್ವಾಹಕತ್ವಮ್ ।
ತದೇಷಾಂ ಏಕ ಏವ ನಾರಾಯಣೋ ಜ್ಞಾನೈಶ್ವರ್ಯಾದಿಸವಿಶೇಷಾನಂತಗುಣ
ಗುಣಾತ್ಮಕೋ ಭಗವಾನ್ವ್ಯಾಸತ್ವೇನಾವತತಾರೇತಿ ಸೂಕ್ತ ಮುಕ್ತಮ್ ॥
(ಇತಿ ತತ್ತ್ವಪ್ರದೀಪವ್ಯಾಖ್ಯಾ)

**ಅಭಿಪ್ರಾಯ** :- ಹಿಂದೆ ತಿಳಿಸಿದ ವಿವರಿಸಿದ ಅನುವ್ಯಾಖ್ಯಾನದಲ್ಲಿನ "ವಿಶೇಷಪದಾರ್ಥ" ಸಾಧಕವಾದ ಗ್ರಂಥದ ಸಾರಸರ್ವಸ್ವವೆಂಬಂತಿರುವ, ಪ್ರಾಚೀನ ಟೀಕಾಕಾರರೆಂದು ವಿಖ್ಯಾತರಾದ, ಸಾಕ್ಷಾತ್ ಶ್ರೀಮನ್ಮಧ್ವಾಚಾರ್ಯರಲ್ಲಿಯೇ ಗುರುವಾದ ತರ್ಕೋಪದೇಶವನ್ನು ಪಡೆದಿರುವ, ಶ್ರೀಮನ್ಮೂಲವಾಯುದೇವರ ಅವತಾರತ್ರಯಮೂರ್ತಿಗಳನ್ನು ಸಾಕ್ಷಾತ್ಕರಿಸಿ ದಿವ್ಯಸ್ಫೂರ್ತಿಯಿಂದ ಶ್ರೀಹರಿವಾಯುಸ್ತುತಿಯೆಂಬ, ಮಹೋನ್ನತ ಸ್ತೋತ್ರರತ್ನವನ್ನು ರಚಿಸಿದ ಕೀರ್ತಿಯಿಂದ ವಿಜೃಂಭಿತರಾದ, ವೇದಾಂತವಾಙ್ಮಯದಲ್ಲಿ ಸಿದ್ಧಪುರುಷರಾದ, ಶ್ರೀಮದಾನಂದತೀರ್ಥಭಗವತ್ಪಾದರ ಪರಮಾನುಗ್ರಹಕ್ಕೆ ಪಾತ್ರರಾದ, ರುದ್ರಾಂಶಸಂಭೂತರೆಂದು ಹಿರಿಯರಿಂದ ಸೂಚಿತರಾಗಿರುವ ಶ್ರೀ ತ್ರಿವಿಕ್ರಮ ಪಂಡಿತಾಚಾರ್ಯರ ವಾಕ್ಯಗಳನ್ನೇ ಹಿಂದೆ ಉದಾಹರಿಸಿದ್ದೇವೆ.

ಅದರ ಅಭಿಪ್ರಾಯವು ಈ ರೀತಿ ಇದೆ.

ಅಂತಹ "ವಿಶೇಷವು" ಒಂದೇ ಕಡೆ ಅಪರ್ಯಾಯವಾದ ನಾನಾ ಶಬ್ದಗಳ ಪ್ರವೃತ್ತಿಗೆ ಕಾರಣವಾಗಿದೆ. ಅದರಿಂದ (ಅಂತಹ ವಿಶೇಷದಿಂದ) ಒಂದೇ ವಸ್ತುವು ಅನೇಕ ಬಗೆಯಾಗಿ,ದ್ರವ್ಯವೆಂದೂ, ಗುಣವೆಂದೂ, ಕ್ರಿಯೆಯೆಂದೂ, ಸಾಮಾನ್ಯವೆಂದೂ, (ಜಾತಿಯೆಂದೂ) ಇದೇ ಮೊದಲಾದ ಸ್ವರೂಪದಿಂದ ಪ್ರಮಾಣವ್ಯವಹಾರಪದವಿಯನ್ನು ಪಡೆದಿರುತ್ತದೆ.

ಅಂತಹ ವಿಶೇಷವಾದರೋ, ವಸ್ತುವಿನ ಸ್ವರೂಪವೇ ಆಗಿದೆ. ತನ್ನ ಇರುವಿಕೆಗೂ ತನ್ನ ವ್ಯವಹಾರಕ್ಕೂ ತಾನೇ ನಿಯಾಮಕವಾಗಿ "ಸ್ವನಿರ್ವಾಹಕನೆಂದೆನಿಸಿದ" ಇಂತಹ ವಿಶೇಷವು ಇಲ್ಲವಾದರೆ ಎಲ್ಲ ಪದಾರ್ಥಗಳ ವ್ಯವಹಾರವೇ ಇಲ್ಲದೆ ಹೋದೀತು. ಎಲ್ಲಾ ಪದಾರ್ಥಗಳ ವ್ಯವಹಾರವನ್ನೂ ಇಂತಹ ವಿಶೇಷವೇ ನಿರ್ವಹಿಸಿರುವುದಾಗಿದೆ.

ಗುಣಕ್ಕೂ ಗುಣಿಗೂ ಭೇದವನ್ನು ಹೇಳಿದರೆ ಅವೆರಡಕ್ಕೂ ಸಂಬಂಧವನ್ನು ಹೇಳಬೇಕು. ಆದರೆ ಅವೆರಡಕ್ಕು ಸಂಬಂಧವೇ ಕೂಡುವುದಿಲ್ಲ. ಒಂದುವೇಳೆ ಗುಣಕ್ಕು ಗುಣಿಗೂ ಭೇದವನ್ನು ಹೇಳಿದರೆ, ಅವೆರಡಕ್ಕು ಸಂಬಂಧವನ್ನು ಹೇಳಲೇಬೇಕು. ಆ ಸಂಬಂಧವು ಗುಣಕ್ಕು, ಗುಣಿಗೂ, ಭಿನ್ನವೆಂದರೆ (ಬೇರೆಯಾಗಿರುವುದೆಂದರೆ) ಅದಕ್ಕೂ ಮತ್ತೊಂದು ಸಂಬಂಧವನ್ನು ಹೇಳಬೇಕು. ಆ ಸಂಬಂಧವೂ ಸಹ ಭಿನ್ನವಾದುದರಿಂದ ಆ ಸಂಬಂಧ ಸಂಬಂಧಕ್ಕು ಬೇರೊಂದು, ಅದಕ್ಕು ಮಗದೊಂದು, ಅದಕ್ಕು ಇನ್ನೊಂದು ಹೀಗೆ ಸಂಬಂಧ ಪರಂಪರೆಯನ್ನು ಹೇಳಿದರೆ ಅನವಸ್ಥಾದೋಷವು ಬರುತ್ತದೆ.

ಗುಣವು ಗುಣಿಯ ಸ್ವರೂಪವೇ ಹೊರತು ಭಿನ್ನವಾದುದಲ್ಲ ಎಂದು ಒಪ್ಪಿದರೆ ಅದು ದ್ರವ್ಯಸ್ವರೂಪವೇ ಆಗಿರುವುದರಿಂದ ಸಂಬಂಧದ ಅಪೇಕ್ಷೆಯೇ ಇರುವುದಿಲ್ಲ. ಆದರಿಂದ ವೈಶೇಷಿಕಾದಿಮತಗಳಲ್ಲಿ, ಇತರ ಮತದಲ್ಲಿ

೧. ಗುಣಕ್ಕೂ ಗುಣಿಗೂ ಭೇದಕಲ್ಪನಾ ಅಥವಾ ಭೇದಾಭೇದಕಲ್ಪನಾ.

೨. ಆ ಗುಣಕ್ಕೂ ಗುಣಿಗೂ ಸಂಬಂಧಕಲ್ಪನಾ (ಸಮವಾಯಸಂಬಂಧಕಲ್ಪನಾ) ಅಥವಾ (ಬೇರೊಂದು ಸಂಬಂಧಕಲ್ಪನಾ).

೩. ಆ ಸಮವಾಯಕ್ಕೆ ಮತ್ತೊಂದು ಸಂಬಂಧವನ್ನು ಹೇಳಿದರೆ, ಆ ಸಮವಾಯಸಂಬಂಧಸಂಬಂಧಕ್ಕೆ ಮಗದೊಂದು ಸಂಬಂಧವೆಂದು ಅನವಸ್ಥಾದೋಷಬರುವುದರಿಂದ ಆ ಸಮವಾಯಾದಿಸಂಬಂಧಕ್ಕೆ ಸ್ವನಿರ್ವಾಹಕತ್ವಕಲ್ಪನಾ,

ಈ ರೀತಿಯಾಗಿ ಕಲ್ಪನಾಗೌರವದೋಷದುಷ್ಟವಾಗಿರುವ ವೈಶೇಷಿಕಮತದಲ್ಲಿ ದೋಷಗಳನ್ನು ವಿವರಿಸಿ ಸಿದ್ಧಾಂತಸಿದ್ಧವಾದ ಪ್ರಕ್ರಿಯೆಯನ್ನು ತೋರಿಸಿರುತ್ತಾರೆ.

ಆದಕಾರಣ, ಒಂದೇ ದ್ರವ್ಯಕ್ಕೆ ಗುಣಾದಿ ವಿಶೇಷರೂಪದಿಂದ ಸ್ವನಿರ್ವಾಹಕತ್ವವನ್ನು ಹೇಳುವುದೇ ಶ್ರೇಷ್ಠವಾದ ದೋಷರಹಿತವಾದ ಮಾರ್ಗವಾಗಿದೆ.

ಆದುದರಿಂದ, ಈ ಹಿಂದೆ ತಿಳಿಸಿದಂತೆ ಒಬ್ಬನೇ ಆದ ಸರ್ವೋತ್ತಮನಾದ ಭಗವಂತನಾದ ಶ್ರೀನಾರಾಯಣನು ಜ್ಞಾನೈಶ್ವರ್ಯಾದಿಸವಿಶೇಷಾನಂತಗುಣಗುಣಾತ್ಮಕನಾದವನು ವೇದವ್ಯಾಸರೂಪದಿಂದ ಅಭಿವ್ಯಕ್ತನಾದನು ಎಂದು ಭಾಷ್ಯಕಾರರು ಹೇಳಿದುದು ಅತ್ಯಂತ ಯೋಗ್ಯವಾದುದಾಗಿದೆ.

ಮಹೋಪನಿಷತ್ತು ಸಹ ಇದೇ ಅಭಿಪ್ರಾಯವನ್ನು ತಿಳಿಸುತ್ತಲಿದೆ.

**ಗುಣಕ್ರಿಯಾದಯೋ ವಿಷ್ಣೋಃ ಸ್ವರೂಪಂ ನಾನ್ಯದಿಷ್ಯತೇ ।**
**ಅತೋ ಮಿಥೋऽಪಿ ಭೇದೋ ನ ತೇಷಾಂ ಕಶ್ಚಿತ್ಕದಾಚನ ॥**

**ಸ್ವರೂಪೇऽಪಿ ವಿಶೇಷೋऽಸ್ತಿ ಸ್ವರೂಪತ್ವವದೇವತು ।**
**ಭೇದಾಭಾವೇऽಪಿ ತೇನೈವ ವ್ಯವಹಾರಶ್ಚ ವರ್ತತೇ ॥ (ಇತಿ ಮಹೋಪನಿಷದಿ) ॥**

**ತಾತ್ಪರ್ಯ** :- ಆನಂದ, ಜ್ಞಾನ, ಪ್ರಕಾಶ, ಬಲ, ಔದಾರ್ಯ, ವೀರ್ಯ, ಮೊದಲಾದ ಗುಣಗಳೂ ಸೃಷ್ಟಿ, ಸಂಹಾರಾದಿಕ್ರಿಯೆಗಳೂ ಎಲ್ಲವೂ ಶ್ರೀಹರಿಗೆ ಸಂಬಂಧಪಟ್ಟ ಧರ್ಮಗಳೆಲ್ಲವೂ ಸಹ ಶ್ರೀ ವಿಷ್ಣುವಿನ ಸ್ವರೂಪಗಳೇ ಆಗಿವೆ. ಅವುಗಳಿಗೂ ಕೂಡ, ಅಂದರೆ ಪರಮಾತ್ಮಜ್ಞಾನಕ್ಕು, ಆನಂದಕ್ಕು, ಆನಂದಕ್ಕು, ದ್ಯುತಿಗೂ, ದ್ಯುತಿಗೂ, ಬಲಕ್ಕು, [illegible] ಔದಾರ್ಯವೀರ್ಯಾದಿಗಳಿಗೂ ಪರಸ್ಪರವಾಗಿ ಭೇದವು ಎಂದಿಗೂ ಇರುವುದಿಲ್ಲ. ಸ್ವರೂಪದಲ್ಲಿಯೂ ಸಹ ಸ್ವರೂಪತ್ವವಿರುವಂತೆ ವಿಶೇಷವು ಇದೆ. ಸ್ವರೂಪದಲ್ಲಿ ಅಭಿನ್ನವಾದ ಸ್ವರೂಪತ್ವದಂತೆ ಅಭಿನ್ನವಾಗಿಯೇ ವಿಶೇಷವು ಇದೆ. ಧರ್ಮಿಯಾದ ಪರಮಾತ್ಮನಿಗೂ ಧರ್ಮವಾದ ವಿಶೇಷಕ್ಕು ಭೇದವು ಇಲ್ಲದೇ ಇದ್ದಾಗ್ಯೂ ವಿಶಿಷ್ಟ ಶಕ್ತಿರೂಪವಾದ ವಿಶೇಷದಿಂದಲೇ ಸ್ವನಿರ್ವಾಹಕವಾದ ವಿಶೇಷದಿಂದ ಸಕಲವಿಧವಾದ ವ್ಯವಹಾರವೂ ಪರಮಾತ್ಮನಲ್ಲಿ [illegible].

ಪರಮಾತ್ಮನ ಗುಣಾದಿಗಳ ವಿಷಯದಲ್ಲಿ ತಾರ್ಕಿಕರು ಹೇಳುವ ಎಂಟೇ ಗುಣಗಳೆಂಬುದನ್ನು ಅನುವ್ಯಾಖ್ಯಾನದಲ್ಲಿ ನಿರಾಕರಿಸಿರುತ್ತಾರೆ.

**"ನ ಚಾಮಂದ ಸದಾನಂದಸ್ಯಂದ್ಯನಂತಗುಣಾರ್ಣವಃ ।**
**ಈಶ್ವರೋಽಷ್ಟಗುಣತ್ವೇನ ಪ್ರಮೇಯೋಽಪ್ಯಮಿತತ್ವತಃ ।।**

**ಮಯ್ಯನಂತಗುಣೇಽನಂತೇ ಗುಣತೋಽನಂತವಿಗ್ರಹೇ ।**
**ಅನಂತಗುಣಮಾಹಾತ್ಮ್ಯ ಶಕ್ತಿಜ್ಞಾನಮಹಾರ್ಣವಃ ।।**

**ನಾರಾಯಣಃ ಪರೋಽಪೇತಪೇತನೇಭ್ಯಃ ಪರಂ ಪದಮ್ ।**
**ಇತ್ಯಾದಿ ವೇದವಾಕ್ಯೈಃ ಅನಂತತ್ವಾವಸೀಯತೇ ।**
**ಅನಂತಗುಣತಾ ವಿಷ್ಣೋಃ ಕಥಮೇವ ವ್ಯಪೋದ್ಯತೇ ।। (ಅನುವ್ಯಾಖ್ಯಾನಮ್) ।**

**ಅರ್ಥ** :- ಈಶ್ವರಃ = ಶ್ರೀಮನ್ನಾರಾಯಣನು, ಅಷ್ಟಗುಣತ್ವೇನ = ಸಂಖ್ಯಾ, ಪರಿಮಾಣ, ಪೃಥಕ್ತ್ವ, ಸಂಯೋಗ, ವಿಭಾಗ, ಜ್ಞಾನ, ಇಚ್ಛಾ, ಕೃತಿ, (ಪ್ರಯತ್ನ) ಗಳೆಂಬ ಎಂಟೇ ಗುಣಗಳನ್ನುಳ್ಳವನೆಂದು ತಾರ್ಕಿಕರು ಹೇಳುತ್ತಾರೆ.

ಅವರ ಪ್ರಕ್ರಿಯೆಯು ಈ ರೀತಿ ಇದೆ.

**ವಾಯೋರ್ನವ, ಏಕಾದಶ ತೇಜಸೋಗುಣಾಃ ಜಲ, ಕ್ಷಿತಿ, ಪ್ರಾಣಭೃತಾಂ ಚತುರ್ದಶ ।**
**ದಿಕ್ಕಾಲಯೋಃ ಪಂಚ ಷಡೇವ ಚಾಂಬರೇ ಮಹೇಶ್ವರೇಽಷ್ಟೌ ಮನಸಸ್ತಥೈವಚ ।।**

ಎಂದು ಹೇಳುವರು.

ವಾಯುವಿನಲ್ಲಿ ಒಂಭತ್ತು ಗುಣಗಳು, ತೇಜಸ್ಸಿನಲ್ಲಿ ಹನ್ನೊಂದು ಗುಣಗಳು, ಜಲ, ಪೃಥಿವೀ, ಜೀವರುಗಳು ಇವರಲ್ಲಿ ಹದಿನಾಲ್ಕು ಗುಣಗಳು, ದಿಕ್ಕಿನಲ್ಲೂ ಕಾಲದಲ್ಲೂ ಐದು ಗುಣಗಳು, ಆಕಾಶದಲ್ಲಿ ಶಬ್ದವೆಂಬ ವಿಶೇಷ ಗುಣಸಹಿತವಾಗಿ ಆರು ಗುಣಗಳು, ಈಶ್ವರನಲ್ಲಿ ಎಂಟೇ ಗುಣಗಳು, ಮನಸ್ಸಿನಲ್ಲೂ ಎಂಟು ಎಂಬುದಾಗಿ ತಾರ್ಕಿಕರು ಹೇಳುವರು.

ಪರಮಾತ್ಮನ ವಿಷಯದಲ್ಲಿ ಅವರು ಹೇಳತಕ್ಕ ಗುಣಗಳ ವಿಷಯದಲ್ಲಿ ವೇದದ ವಿರೋಧವಿದೆ. ಭಾಗವತದಲ್ಲಿನ ಪರಮಾತ್ಮನ ವಚನಕ್ಕೂ ವಿರೋಧವಿರುವುದರಿಂದ ನೈಯ್ಯಾಯಿಕಾದಿಗಳ ನಿರೂಪಣೆಯು ಅಪ್ರಾಮಾಣಿಕವೆಂಬುದನ್ನು ತೋರಿಸಿರುತ್ತಾರೆ. ಎಂಟೇ ಗುಣವುಳ್ಳವನೆಂಬಲ್ಲಿ ಯಾವ ಪ್ರಮಾಣವೂ ಇಲ್ಲ.

ಪರಮಾತ್ಮನು ಎಂಟೇ ಗುಣವುಳ್ಳವನೆಂಬುದು, ನ ಪ್ರಮೇಯಃ = ತಿಳಿಯಲು ಅರ್ಹನಲ್ಲ. ಹಾಗಾದರೆ ಪರಮಾತ್ಮನಲ್ಲಿ ಎಷ್ಟು ಗುಣಗಳೆಂದರೆ, ಅಮಂದಾನಂದಸ್ಯಂದ್ಯನಂತಗುಣಾರ್ಣವಃ = ಅಪರಿಮಿತಗಳಾದ, ದೋಷರಹಿತಗಳಾದ, ಆನಂದಾದಿಗುಣಪರಿಪೂರ್ಣನು. ಕ್ಷೀರಸಮುದ್ರವು ಅಮೃತಾಪ್ಸರವಾಗಿದೆ, ಕಲ್ಪವೃಕ್ಷ, ಕಾಮಧೇನು, ಚಿಂತಾಮಣಿ ಮೊದಲಾದ ಅನುತ್ತಮಂಗಳಾದ ಪದಾರ್ಥಗಳನ್ನುಳ್ಳುದಾಗಿದೆ.

ಪರಮಾತ್ಮನು ಕ್ಷೀರಸಮುದ್ರಕ್ಕಿಂತಲೂ ಮೀರಿ ಭಕ್ತರಿಗೆ ಅಮೃತವನ್ನು (ಮೋಕ್ಷವನ್ನು) ಕೊಡತಕ್ಕವನಾಗಿದ್ದಾನೆ. ಪರಮಾತ್ಮನು ಅನೇಕ ನಿರವಧಿಗಳಾದ ಆನಂದಾದಿಗುಣಗಳಾಭರಿತನಾಗಿರುತ್ತಾನೆ.

ಮಯ್ಯನಂತಗುಣೇತ್ಯಾದಿವಾಕ್ಯವು ಪರಮಾತ್ಮನ ವಾಕ್ಯವೇ ಆಗಿದೆ.

ಅನಂತಗುಣೇ = ಅಸಂಖ್ಯಾಕಗಳಾದ ಗುಣಗಳನ್ನುಳ್ಳ, ಗುಣತಃ ಅನಂತೇ = ಪ್ರತ್ಯೇಕವಾಗಿ, ನಿರವಧಿಕಗಳಾದ ಗುಣಗಳನ್ನುಳ್ಳ ಮತ್ತು ಅಪರಿಮಿತಗಳಾದ ಅವಾಂತರ ವಿಶೇಷಗಳನ್ನುಳ್ಳ, ಅನಂತವಿಗ್ರಹೇ = ಅಸಂಖ್ಯಾಕಗಳಾದ, ಅಪರಿಮಿತಗಳಾದ ಶರೀರಗಳನ್ನುಳ್ಳ, ಮಯಿ = ನನ್ನಲ್ಲಿ, (ಯದಾಸೀತ್ತತ ಏವಾದ್ಯಃ ಸ್ವಯಂಭೂಃ ಸಮಭೂದಜಃ ಎಂಬುದು ಮಯ್ಯನಂತಗುಣೇ ಇತ್ಯಾದಿ ಪೂರ್ವಾರ್ಧಕ್ಕೆ ಉತ್ತರಾರ್ಧದ ವಾಕ್ಯವಾಗಿದೆ.)

**ಅರ್ಥ** :- (ನನ್ನಲ್ಲಿ) ಯತ್ = ಯಾವ ಕಮಲವು, ಆಸೀತ್ = ಆಯಿತೋ, (ಪರಮಾತ್ಮನು ಪದ್ಮನಾಭನೆಂಬುದು ಶ್ರುತ್ಯಾದಿ ಪ್ರಮಾಣಗಳಿಂದ ಪ್ರಮಿತವಾಗಿದೆ.) ತತ ಏವ = ಆ ನನ್ನ ನಾಭಿಯಲ್ಲಿನ ಕಮಲದಿಂದಲೇ, ಆದ್ಯಃ = ಪ್ರಾಥಮಿಕನಾದ, ಸ್ವಯಂಭೂಃ ಅಜಃ = ಚತುರ್ಮುಖ ಬ್ರಹ್ಮನು, ಆಸೀತ್ = ಆದನು, (ಹುಟ್ಟಿದನು) ಎಂಬುದಾಗಿ ಶ್ರೀಮದ್ಭಾಗವತದಲ್ಲಿ ಪರಮಾತ್ಮನ ವಚನವು ಇರುತ್ತದೆ.) ಅನಂತಗುಣಮಾಹಾತ್ಮ್ಯ ಇತ್ಯಾದಿ ವಾಕ್ಯವು ವೇದವಾಕ್ಯವಾಗಿದೆ. ಅನಂತಗುಣಮಾಹಾತ್ಮ್ಯಶಕ್ತಿಜ್ಞಾನಮಹಾರ್ಣವಃ = ಅನಂತ ಅಪರಿಮಿತಗಳಾದ, ಗುಣ = ಗುಣಗಳೇನು, ಮಾಹಾತ್ಮ್ಯ = ಮಹಿಮೆಗಳೇನು, (ಪರಿಮಾಣಾತಿಶಯಗಳೇನು) ಶಕ್ತಿ = ಅಚಿಂತ್ಯಗಳಾದ ಶಕ್ತಿಗಳೇನು, ಜ್ಞಾನ = ನಿರವಧಿಕವಾದ, ನಿತ್ಯವಾದ ಜ್ಞಾನವೇನು, ಇವೆಲ್ಲವುಗಳಿಗೂ, ಮಹಾರ್ಣವಃ = ಮಹತ್ತಾದ ಸಮುದ್ರದಂತಿರುವವನಾಗಿರುವನು. ಪರಂ ಪದಂ = ಮುಖ್ಯವಾಗಿ ಪ್ರಾಪ್ಯನಾದವನು, ನಾರಾಯಣಃ = ಶ್ರೀಮನ್ನಾರಾಯಣನು, (ಶ್ರೀಹರಿಯು) ಅಶೇಷಚೇತನೇಭ್ಯಃ = ರಮಾಬ್ರಹ್ಮಾದಿಸಕಲಚೇತನರ ದೆಸೆಯಿಂದ, ಪರಃ ಉತ್ತಮನು (ಸರ್ವೋತ್ತಮನು) ಎಂದು ವೇದವಾಕ್ಯದ ಅರ್ಥವು.

ಇತ್ಯಾದಿ ವೇದವಾಕ್ಯೈಃ ಅನಂತೈಶ್ಚ = ಇದೇ ಮೊದಲಾದ ಅನಂತವೇದವಾಕ್ಯಗಳಿಂದಲೂ, ಪರಮಾತ್ಮನ ವಚನಗಳಿಂದಲೂ, ಅವಸೀಯತೇ = ಶ್ರೀಹರಿಯ ಅನಂತಕಲ್ಯಾಣಗುಣಪರಿಪೂರ್ಣನು ಎಂಬುದು ನಿಶ್ಚಿತವಾಗಿರುತ್ತದೆ.

ಈ ರೀತಿ ವೇದವಾಕ್ಯಗಳಿಂದಲೂ, ಭಗವಂತನ ವಚನಗಳಿಂದಲೂ ತಿಳಿದುಬರತಕ್ಕ ಪರಮಾತ್ಮನ ಮಹಿಮಾತಿಶಯವನ್ನು ಅಲ್ಲಗಳೆಯಲು ಸಾಧ್ಯವೇ ಇಲ್ಲವೆನ್ನುತ್ತಾರೆ.

ಆದುದರಿಂದ ವಿಷ್ಣೋಃ = ಶ್ರೀಹರಿಗೆ, ಅನಂತಗುಣತಾ = ಅಪರಿಮಿತಗಳಾದ ಗುಣಗಳ ಇರುವಿಕೆಯು, ಕಥಮೇವ = ಹೇಗೆತಾನೇ, ಅಪೋದ್ಯತೆ = ನಿರಾಕರಿಸಲ್ಪಡುತ್ತದೆ. ವೇದಾದಿಪ್ರಮಾಣವೃಂದದಿಂದ ವೇದ್ಯವಾದ ಪರಮಾತ್ಮನ ಗುಣಪರಿಪೂರ್ಣತೆಯನ್ನು ಅಲ್ಲಗಳೆಯಲು ಶಕ್ಯವೇ ಇಲ್ಲವೆಂದು ಪರಮಾಭಿಪ್ರಾಯ.

ವೈಶೇಷಿಕಾದಿಗಳು ಪರಮಾತ್ಮನ, ಜ್ಞಾನ, ಇಚ್ಛಾ, ಪ್ರಯತ್ನಗಳನ್ನು ಅಖಂಡಗಳೆಂದು ಹೇಳುತ್ತಾರೆ. ಅದನ್ನು ನಿರಾಕರಿಸುವುದಕ್ಕೋಸ್ಕರ ಭಾಗವತದ ಪರಮಾತ್ಮನ ವಚನದಲ್ಲಿ "ಗುಣತೋ ಅನಂತೇ" ಎಂಬುದಾಗಿ ಉಕ್ತವಾಗಿದೆ. ಇದು ಪ್ರತ್ಯೇಕವಾಗಿ ಪರಮಾತ್ಮನ ಗುಣಗಳಿಗೆ ಅನಂತವಿಶೇಷವತ್ತ್ವವನ್ನು ಹೇಳುತ್ತಲಿದೆ. ಅದನ್ನು ಒಪ್ಪದೇ ಇದ್ದರೆ ಬಾಧಕವನ್ನು ಅನುವ್ಯಾಖ್ಯಾನದಲ್ಲಿ ತೋರಿಸುತ್ತಾರೆ.

ಶಂಕಾಪರಿಹಾರ: ಅಂದರೆ ಈಶ್ವರನ ಜ್ಞಾನಾದಿಗಳಿಗೆ ಸ್ವತಃ ವಿಶೇಷವು ಇಲ್ಲದಿದ್ದಾಗ್ಯೂ ಔಪಾಧಿಕವಾದ ವಿಶೇಷದ ದೆಶೆಯಿಂದ, ಆಯಾ ವಿಷಯಕತ್ವವು ಬಂದು ಅವನಿಗೆ ಸರ್ವಜ್ಞತ್ವವು ಉಂಟಾಗುತ್ತದೆಯೆಂದು ಹೇಳಿದರೆ ಅಂತಹ ಔಪಾಧಿಕವಾದ ವಿಶೇಷವನ್ನು ಒಪ್ಪಿದ ನಂತರ ಸವಿಶೇಷತ್ವವನ್ನೇ ಹೇಳಿದಂತಾಗುವುದರಿಂದ ನಿರ್ವಿಶೇಷತ್ವವೆಂಬುದೇ ಇಲ್ಲವಾಯಿತು. ಆದಕಾರಣ ಪರಮಾತ್ಮನ ಜ್ಞಾನಾದಿಗಳಿಗೆ ಸ್ವತಃ ಅನಂತಾನಂತ ವಿಶೇಷಗಳನ್ನೇ ಪ್ರಮಾಣಬಲದಿಂದ ಒಪ್ಪಿ. ಅವನಿಗೆ ಸರ್ವಜ್ಞತ್ವವನ್ನು ಅಂಗೀಕರಿಸಬೇಕೆಂದು ಪರಮಾಭಿಪ್ರಾಯ.

ಇದೇ ರೀತಿ ಪರಮಾತ್ಮನ ಜ್ಞಾನಕ್ಕೆ ಸ್ವಪ್ರಕಾಶತ್ವವನ್ನೂ ಸಹ ಒಪ್ಪಬೇಕು. ಇಲ್ಲವಾದರೆ ಈಶ್ವರನಿಗೆ ಸರ್ವಜ್ಞತ್ವವೇ ಬಾರದೇ ಹೋದೀತು ಎಂದು ಎಂಬ ಮತ್ತೊಂದು ವಿಚಾರವೂ ಇಲ್ಲಿ ಅಂಗೀಕರಿಸಲ್ಪಟ್ಟಂತಾಯಿತು.

**ಶಂಕಾ** :- ವೈಶೇಷಿಕರ ಪೈಕಿ ಕೆಲವರು ಈಶ್ವರನ ಜ್ಞಾನಕ್ಕೆ ಸ್ವಪ್ರಕಾಶತ್ವವನ್ನು ಅಂಗೀಕರಿಸುವುದಿಲ್ಲ. ಅವರಲ್ಲೇ ಕೆಲವರು ಸ್ವಪ್ರಕಾಶತ್ವವನ್ನು ಪರಮಾತ್ಮನ ಜ್ಞಾನಕ್ಕೆ ಒಪ್ಪುತ್ತಾರೆ. ಈ ರೀತಿ ಅವರಲ್ಲೇ ಮತಭೇದವು ಇದೆ. ಆ ಪೈಕಿ ಯಾರು ಈಶ್ವರನ ಜ್ಞಾನಕ್ಕೆ ಸ್ವಪ್ರಕಾಶತ್ವವನ್ನು ಅಂಗೀಕರಿಸಿಲ್ಲವೋ ಅವರ ಮತದ ಪ್ರಕಾರ ಈಶ್ವರನಿಗೆ ಸರ್ವಜ್ಞತ್ವವೇ ಇಲ್ಲದೆಹೋದೀತು. ಅವರು ಈಶ್ವರನ ಜ್ಞಾನವು ಒಂದೇ ಎಂದು ಒಪ್ಪಿರುವುದರಿಂದ ತನಗಿಂತಲೂ ಬೇರೆಯಾದುದನ್ನು ಅದು ವಿಷಯೀಕರಿಸಿದರೂ ಅದಕ್ಕೆ ಸ್ವಪ್ರಕಾಶತ್ವವು ಇಲ್ಲವಾದರೆ ತನ್ನ ಜ್ಞಾನವೇ ತನಗೆ ಇಲ್ಲದೇಹೋಗಬೇಕಾಗಿರುವುದರಿಂದ ಅದಕ್ಕೆ ಸ್ವಪ್ರಕಾಶತ್ವವನ್ನು ಒಪ್ಪಲೇಬೇಕು.

**ಮತ್ತೊಂದು ಶಂಕಾ** :- ಲೋಕದಲ್ಲಿ ಯಾರು "ಸುಖಿಯೋ ಅವನು ದುಃಖಿಯೂ" ಆಗಿರುವುದು ಕಂಡು ಬಂದಿದೆ. ಆದಕಾರಣ ಈಶ್ವರನು ಸುಖೀ ಆದರೆ ದುಃಖಿಯೂ ಆಗಬೇಕಾದೀತು. ಇದರಿಂದ ಪರಮಾತ್ಮನು ದುಃಖಿಯಾದರೆ ನಿರ್ದೋಷನೆಂಬುದು ಹೇಗೆ ಎಂದು ಕೆಲವರು ಶಂಕಿಸುತ್ತಾರೆ.

**ಸಮಾಧಾನ** :- ಸುಖಿತ್ವವು ದುಃಖಿತ್ವದಿಂದ ವ್ಯಾಪ್ತವಾಗಿ ಅನೇಕ ಕಡೆ ದೇವದತ್ತಾದಿಗಳಲ್ಲಿ ಅನುಭವ ಸಿದ್ಧವಾಗಿದೆ. ಇದಕ್ಕೆ ಮೂಲಭೂತವಾದ ವ್ಯಾಪ್ತಿಯನ್ನು "ಯಃ ಸುಖವಾನ್ ಸಃ ದುಃಖವಾಂಶ್ಚ" ಎಂದು ಹೇಳಬೇಕು. ಆದರೆ ಅಂತಹವ್ಯಾಪ್ತಿಯೇ ಕಂಡುಬರುವುದಿಲ್ಲ. ಈ ವ್ಯಾಪ್ತಿಯು ಈಶ್ವರನಲ್ಲಿವ್ಯಭಿಚರಿತವಾಗಿದೆ. ಶ್ರುತಿಯು ಪರಮಾತ್ಮನಿಗೆ ನಿರವಧಿಕ ಸುಖವನ್ನೂ, ಶೋಕಾದಿರಾಹಿತ್ಯವನ್ನೂ ಹೇಳುತ್ತಲಿದೆ.

"ಆನಂದಂ ಬ್ರಹ್ಮಣೋ ವಿದ್ವಾನ್, ಯ ಆತ್ಮಾ ಅಪಹತಪಾಪ್ಮಾ" ಇತ್ಯಾದಿ ಶ್ರುತಿಗಳಿಂದ ಈಶ್ವರನಿಗೆ ದುಃಖಾಭಾವವೂ ಪರಾನಂದವೂ ಪ್ರತಿಪಾದಿತವಾಗಿದೆ.

ಈಶ್ವರನಿಗೆ ಸೃಷ್ಟ್ಯಾದಿವ್ಯಾಪಾರಗಳನ್ನು ಹೇಳತಕ್ಕ ಪರಮಶ್ರುತಿ ವಚನವೂ ಇರುತ್ತದೆ.

"ಸೃಷ್ಟಿ. ಸ್ಥಿತಿ. ಲಯ. ಯತಿ. ಪ್ರಕಾಶಾವೃತಿಬಂಧನಂ ।
ಸರ್ವಾಕ್ಷರಾಣಾಮೇವೈಕಃ ಕುರ್ಯಾತ್ಯಾಕ್ಷಿಕಮೋಕ್ಷಣಂ ॥

**ಸರ್ಗಸ್ಥಿತಿಲಯೋತ್ಕ್ರಾಂತಿ ವಿಜ್ಞಾನಂದಪ್ರದೋಽಕ್ಷರೇ।**
**ಚೇತ್ಯಾಪ್ತಿದಸ್ಯ ಸರ್ವೇಷಾಂ ಏಕ ಏವ ಪರೋ ಹರಿಃ॥ ಇತಿ ಪರಮಶ್ರುತಿಃ॥**

ಲೋಕದಲ್ಲಿ ಎಲ್ಲಿ ಸುಖವಿದೆಯೋ ಅಲ್ಲಿ ದುಃಖವೂ ಇರುವುದನ್ನು ಕಾಣುತ್ತಲಿರುತ್ತೇವೆ. ಹುಟ್ಟಿನಿಂದ ಮೊದಲುಗೊಂಡು ಸಾಯುವವರೆಗೂ ಏಕಪ್ರಕಾರವಾಗಿ ಸುಖದಿಂದ ಮಾತ್ರ ಇರುವ (ಸಾಧಾರಣ ಪುರುಷನನ್ನು) ವ್ಯಕ್ತಿಯನ್ನು ನಾವು ಕಂಡೇ ಇಲ್ಲ. ಈ ಅಭಿಪ್ರಾಯದಿಂದಲೇ ಸುಖದುಃಖಗಳು ಚಕ್ರದಂತೆ ಒಂದಾದಮೇಲೊಂದು ಅನುಭವ ಸಿದ್ಧವಾಗಿರುವ ವಿಚಾರವನ್ನು ತಿಳಿಸುವ ಪ್ರಮಾಣವಾಕ್ಯವು ಪ್ರಸಿದ್ಧವಾಗಿದೆ.

**ಸುಖಸ್ಯಾನಂತರಂ ದುಃಖಂ ದುಃಖಸ್ಯಾನಂತರಂ ಸುಖಂ।**
**ಚಕ್ರವತ್ ಪರಿವರ್ತಂತೇ ದುಃಖಾನಿ ಚ ಸುಖಾನಿ ಚ॥ ಇತಿ॥**

ಹೀಗಿರುವಾಗ ಪರಮಾತ್ಮನಿಗೆ ಸುಖವನ್ನು ಒಪ್ಪಿದ ಮೇಲೆ ದುಃಖವೂ ಸಹ ನಮ್ಮಂತೆ ಏತಕ್ಕೆ ಇರುವುದಿಲ್ಲವೆಂಬ ಶಂಕೆಯು ಅಜ್ಞರ ದೃಷ್ಟಿಯಿಂದ ಉಂಟಾಗಬಹುದು. ಆದರೆ ಹಾಗಿಲ್ಲ. ಎಲ್ಲಿ ಪ್ರಾಕೃತವಾದ ಸುಖವಿರುವುದೋ ಅಲ್ಲಿ ದುಃಖವೂ ಸಹ ಉಂಟಾಗಬಹುದೆಂದು ವ್ಯಾಪ್ತಿಯು ಇರುವುದಾದರೂ ಇಂತಹ ವ್ಯಾಪ್ತಿಯ ಬಲದಿಂದ ಪರಮಾತ್ಮನಲ್ಲಿ ದುಃಖವನ್ನು ಹೇಳಲು ಅವಕಾಶವೇ ಇಲ್ಲ. ಏಕೆಂದರೆ ಪರಮಾತ್ಮನು ಅಪ್ರಾಕೃತಸುಖಮಯನಾಗಿದ್ದಾನೆ. ಅಷ್ಟುಮಾತ್ರವಲ್ಲ, ಅಪ್ರಾಕೃತನಿರವಧಿಕ (ನಿರತಿಶಯ) ಸುಖರೂಪನಾಗಿರುವುದರಿಂದ ಅಂತಹ ನಿರವಧಿಕ ಸುಖಕ್ಕೂ ದುಃಖಾಭಾವಕ್ಕೂ ವ್ಯಾಪ್ತಿಯನ್ನು ಹೇಳುವುದರಿಂದ ಅದಕ್ಕೆ ವ್ಯತಿರೇಕ ದೃಷ್ಟಾಂತವನ್ನೇ ತೋರಿಸಬಹುದಾಗಿದೆ.

**"ಯಃ ಪೂರ್ಣಾನಂದಃ ಸ ದುಃಖಲೇಶಾಭಾವವಾನ್ ವ್ಯತಿರೇಕೇಣ ಚೈತ್ರವತ್"**

ಎಂಬ ವ್ಯಾಪ್ತಿಗೆ ಯಾವ ಬಾಧಕವೂ ಇರುವುದಿಲ್ಲವೆಂಬುದು ಪರಮಾಭಿಪ್ರಾಯ.

ಮತ್ತು ಮುಂದಿನ ಶ್ರುತಿವಚನವೂ ಸಹ ಪರಮಾತ್ಮನಲ್ಲಿ ಧರ್ಮಗಳು ಲೋಕದ ದೃಷ್ಟಿಯಿಂದ ವಿರುದ್ಧಗಳಾಗಿ ತೋರುವುದಾದರೂ, ರಮಾದೇವಿಯಿಂದಲೂ ಸಹ ಚಿಂತ್ಯಗಳಾಗಿಯೂ, ಅಚಿಂತ್ಯಗಳಾಗಿಯೂ, ಶ್ರುತಗಳಾಗಿರತಕ್ಕ ಧರ್ಮಗಳು ಇರುತ್ತವೆ ಎಂದು ಹೇಳುತ್ತಲಿದೆ. ಪರಸ್ಪರ ವಿರುದ್ಧಗಳಾಗಿ ಬೇರೆ ಕಡೆ ತೋರತಕ್ಕ ಅನುತ್ತಮಪಾತ್ರಗಳೆಂಬ ಧರ್ಮಗಳು ಪರಮಾತ್ಮನಲ್ಲಿ ಮಾತ್ರ ವಿಶೇಷದ ಪ್ರಭಾವದಿಂದ ಇರುತ್ತವೆಯೆಂದು ವೇದವೇ ಹೇಳುತ್ತಲಿದೆ. ಇದರಲ್ಲಿ ಯಾವ ಶಂಕೆಗೂ ಅವಕಾಶವೇ ಇಲ್ಲ. ಅಜ್ಞರ ಅಲ್ಪದೃಷ್ಟಿಗೆ ಪರಮಾತ್ಮನ ಕೆಲವು ಧರ್ಮಗಳು ದೋಷಗಳಾಗಿ ಕಂಡು ಬಂದರೂ ಪ್ರಾಜ್ಞರ ದೃಷ್ಟಿಯಿಂದ ಅವೆಲ್ಲವೂ ಗುಣಗಳಾಗಿಯೇ ಪ್ರಸಿದ್ಧಗಳಾಗಿವೆ. ವೇದದಲ್ಲಿ ಉಕ್ತವಾಗಿವೆ. ಆದಕಾರಣ ಪರಮಾತ್ಮನಲ್ಲಿ ಯಾವ ಸಂದರ್ಭದಲ್ಲೂ ಯಾವುದೇ ಕಾರಣದಿಂದಲೂ ದೋಷವನ್ನು ಸರ್ವಥಾ ಚಿಂತಿಸಬಾರದೆಂದು ವೇದವಾಣಿಯೂ ಎಚ್ಚರಿಸುತ್ತಲಿದೆ. ಆ ವೇದವಾಕ್ಯವು ಈ ರೀತಿ ಇದೆ.

**"ಗುಣಾಃ ಶ್ರುತಾಃ ಸುವಿರುದ್ಧಾಶ್ಚ ದೇವೇ ಸಂತ್ಯಶ್ರುತಾ ಅಪಿ ನೈವಾತ್ರ ಶಂಕಾ।**
**ಚಿಂತ್ಯಾ ಅಚಿಂತ್ಯಾಶ್ಚ ತಥೈವ ದೋಷಾಃ ಶ್ರುತಾಶ್ಚ ಪಾಶ್ಚ ಹರ್ತಾ**
**ಕ್ವಚಿತ್ಕಾಃ॥ ಇತಿಶ್ರುತಿಃ॥**

ಇದೀ ವೇದರಾಶಿಯಲ್ಲಿರತಕ್ಕ ಯಾವ ಒಂದು ವಾಕ್ಯವೂ ಸಹ ಪರಮಾತ್ಮನಲ್ಲಿ ದೋಷವನ್ನು ಹೇಳುತ್ತಿಲ್ಲ. ಸಜ್ಜೀವರ ಮೋಕ್ಷಕ್ಕಾಗಿ ಪರಮಾತ್ಮನ ಪ್ರೀತಿಗಾಗಿ ಪರಮಾತ್ಮನ ಗುಣಗಳನ್ನೇ ಹೊಗಳುತ್ತಲಿವೆ. ಆದಕಾರಣ ವೇದಕ್ಕೆ ಪರಮಾತ್ಮನ ಗುಣಪೂರ್ಣದಲ್ಲಿಯೂ ಗುಣೋತ್ಕರ್ಷದಲ್ಲಿಯೂ ಸರ್ವೋತ್ತಮತ್ವದಲ್ಲಿಯೂ ತಾತ್ಪರ್ಯವೇ ಹೊರತು, ದೋಷದಲ್ಲಿ ತಾತ್ಪರ್ಯವು ಸರ್ವಥಾ ಇರುವುದಿಲ್ಲ.

ಇದೇ ವಿಷಯವನ್ನು ಸಯುಕ್ತಿಕವಾಗಿ ಶ್ರುತಿಯು ತಿಳಿಸುತ್ತಲಿದೆ.

ಅನಾದಿಯಾದ ಭಾವರೂಪವಾದ ಅಜ್ಞಾನವೇ ಮೊದಲಾದ ದುಃಖಮಯವಾದ ಈ ಸಂಸಾರಬಂಧವು ಸತ್ಯವಾದುದು. ಇದು ಶ್ರೀಹರಿಯ ಪ್ರಸಾದವಿಲ್ಲದೇ  ನಾಶವಾಗುವಂತಿಲ್ಲ. ಅವನಗುಣೋತ್ಕರ್ಷವನ್ನು ಅರಿಯುವನಲ್ಲೇ ಸುಪ್ರೀತನಾಗಿ ಶ್ರೀಹರಿಯು ಪ್ರಸನ್ನನಾಗಿ ಬಂಧವನ್ನು ನಾಶಗೊಳಿಸಿ ಮೋಕ್ಷವನ್ನು ಕರುಣಿಸುತ್ತಾನೆ. ಆದಕಾರಣ ಸಕಲ ವೇದಗಳೂ ಭಗವಂತನ ಗುಣೋತ್ಕರ್ಷದಲ್ಲೇ ಸರ್ವೋತ್ತಮದಲ್ಲೇ ಮಹಾತಾತ್ಪರ್ಯವುಳ್ಳವುಗಳಾಗಿವೆಯೆಂಬ ಪ್ರಮೇಯವನ್ನು ವೇದವಾಣಿಯೇ ಘೋಷಿಸುತ್ತಲಿದೆ. ಈ ವಿಷಯವನ್ನು ಈ ಶ್ರುತಿವಾಕ್ಯಗಳು ತಿಳಿಸುತ್ತಲಿವೆ.

**"ಯಸ್ಯ ಪ್ರಸಾದಾತ್ ಪರಮಾರ್ತಿರೂಪಾತ್ ಅಸ್ಮಾತ್ಸಂಸಾರಾನ್ಮುಚ್ಯತೇನಾಪರೇಣ।**
**ನಾರಾಯಣೋಽಸೌ ಪರಮೋ ವಿಚಿಂತ್ಯೋ ಮುಮುಕ್ಷುಭಿಃ**
**ಕರ್ಮಪಾಶಾದಮುಷ್ಮಾತ್ ।। ಇತಿಶ್ರುತಿಃ।।**

**ನತಾದೃಶೀ ಪ್ರೀತಿರೀಡ್ಯಸ್ಯವಿಷ್ಣೋಃ ಗುಣೋತ್ಕರ್ಷಜ್ಞಾತರಿ ಯಾದೃಶೀಸ್ಯಾತ್।**
**ತಸ್ಮಿನ್ಗಾನಾನ್ಮೋಕ್ಷಮಾಪ್ನೋತಿ ಸರ್ವಸ್ತತೋವೇದಾ ತತ್ಪರಾಸ್ಸರ್ವಏವ।।**
**ಇತಿ ಚ ಶ್ರುತಿಃ।।**

ದುಃಖರಹಿತವಾದ ವರ್ಗವು ಎರಡು ಬಗೆಯಾಗಿದೆ. ಮೊದಲನೆಯದಾಗಿ ಪರಮಾತ್ಮನಿಗೆ ದುಃಖವಿಲ್ಲ. ಎರಡನೆಯದಾಗಿ ಜಡಪದಾರ್ಥಗಳಿಗೂ ದುಃಖವಿಲ್ಲ. ಸಂಸಾರಿಜೀವರು ಮಾತ್ರ ದುಃಖಿಗಳು ಇವರ (ಸಜ್ಜೀವರ) ದುಃಖದ ನಾಶಕ್ಕಾಗಿಯೇ (ಶ್ರುತಿಯು ಪರಮಾತ್ಮನನ್ನು ಪ್ರತಿಪಾದಿಸುತ್ತಲಿದೆಯೆಂದು ಮತ್ತೊಂದು ಶ್ರುತಿವಾಕ್ಯವು ಹೇಳುತ್ತಲಿದೆ) ಅದು ಈ ರೀತಿಯ ಇದೆ.

**"ಅದುಃಖಂ ಇತರತ್ ಸರ್ವಂ ಜೀವಾ ಏವತು ದುಃಖಿನಃ।**
**ತೇಷಾಂ ದುಃಖಪ್ರಹಾಣಾಯ ಶ್ರುತಿರೇಷಾ ಪ್ರವರ್ತತೇ।। " ಇತಿಶ್ರುತಿಃ।।**

ಬ್ರಹ್ಮಮೀಮಾಂಸಾ ಶಾಸ್ತ್ರದಲ್ಲಿನ ಸಕಲ ಸೂತ್ರಗಳೂ ಸಹ ಸಿದ್ಧಾಂತ ಸೂತ್ರಗಳೆಂಬುದನ್ನು ಹಿಂದೆಯೇ ವಿವರಿಸಲಾಗಿದೆ.

ಇನ್ನು ಮುಂದೆ ಬ್ರಹ್ಮಸೂತ್ರಗಳಲ್ಲಿ ಕೇವಲ ಪರಮಾತ್ಮನಿಗೆ ಸಂಬಂಧಿಸಿದ ಕೆಲವು ವಿಷಯಗಳನ್ನು ಜಿಜ್ಞಾಸು ಜನರ ಸಂದೇಹ ಪರಿಹಾರಕ್ಕಾಗಿ ನಿರೂಪಿಸುತ್ತೇವೆ.

ಬ್ರಹ್ಮಸೂತ್ರಗಳಲ್ಲಿ ಮೊಟ್ಟಮೊದಲನೆಯದು "ಓಂ ಅಥಾತೋಬ್ರಹ್ಮಜಿಜ್ಞಾಸಾ ಓಂ" ಎಂಬುದೇ ಮೊದಲನೆಯ ಸೂತ್ರ. ಜಿಜ್ಞಾಸಾಧಿಕರಣಕ್ಕೆ ಇದು ಒಂದೇ ಸೂತ್ರವಾಗಿದೆ.

ಎಂದು ಪ್ರಮಾಣವಾಕ್ಯವು ಜೀವನ ಇತಿಮಿತಿಯನ್ನು ತಿಳಿಸುತ್ತಲಿದೆ. ಮಹಾವಿಷ್ಣುಪುರಾಣವೂ ಸಹ ಜೀವರುಗಳ ಸ್ವಾಭಾವಿಕವಾದ ಪರಿಸ್ಥಿತಿಯನ್ನ ವಿವರಿಸುತ್ತಲಿದೆ.

**"ಅಲ್ಪಶಕ್ತಿ: ಅಸಾರ್ವಜ್ಞಂ ಪಾರತಂತ್ರ್ಯಂ ಅಪೂರ್ಣತಾ।**
**ಉಪಜೀವಕತ್ವಂ ಜೀವತ್ವಂ ಚ ಶಕ್ವಂ ತದ್ವಿಪರ್ಯಯ:॥**
**ಸ್ವಾಭಾವಿಕಂ ತಯೋರೇತತನ್ನಾನ್ಯಥಾತು ಕಥಂ ಚ ನ॥ ಇತಿ ಮಹಾವಿಷ್ಣುಪುರಾಣೇ॥**

ಜೀವರಿಗೂ ಪರಮಾತ್ಮನಿಗೂ ಇರತಕ್ಕ ಪಾರಮಾರ್ಥಿಕಭೇದಸಾಧಕಗಳಾದ ಧರ್ಮಗಳು. ಕೆಲವನ್ನು ಮಾತ್ರ ಇಲ್ಲಿ ಹೇಳಲಾಗಿದೆ.

| ಜೀವ | ಪರಮಾತ್ಮ |
|---|---|
| ಅಲ್ಪಶಕ್ತಿ। | ಅಚಿಂತ್ಯಶಕ್ತಿ "ಪರಾಸ್ಯಶಕ್ತಿರ್ವಿವಿಧೈವಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾಚ" (ಶ್ವೇತಾಶ್ವತರೋಪನಿಷತ್ತು) "ವಿಚಿತ್ರ ಶಕ್ತಿ: ಪುರುಷ: ಪುರಾಣ:" ಇತ್ಯಾದಿ |
| ಅಸಾರ್ವಜ್ಞಂ | ಸರ್ವಜ್ಞನು "ಯ: ಸರ್ವಜ್ಞ: ಸರ್ವವಿತ್ಯಸ್ಯ ಜ್ಞಾನಮ ಯಂತಪ: ಇತಿಶ್ರುತಿ: |
| ಅಸ್ವತಂತ್ರತ್ವಂ | ಸರ್ವತಂತ್ರಸ್ವತಂತ್ರನು. "ಸ್ವತಂತ್ರೋ ಭಗವಾನ್ ವಿಷ್ಣು:"ಇತ್ಯಾದಿ. |
| ಅಪೂರ್ಣತಾ | ಪರಿಪೂರ್ಣತಾ "ಪೂರ್ಣಮದ: ಪೂರ್ಣಮಿದಂ ಪೂರ್ಣಾತ್ಪೂರ್ಣ ಮುದಚ್ಯತೇ ಪೂರ್ಣಸ್ಯಪೂರ್ಣಮಾದಾಯ ಪೂರ್ಣಮೇವಾವ ಶಿಷ್ಯತೇ॥ ಇತಿಶ್ರುತಿ:" |
| ಉಪಜೀವಕತ್ವಂ | "ಉಪಜೀವ್ಯತ್ವಂ" |
| ಜೀವತ್ವಂ | ಈಶತ್ವಂ"ರೂಪಂ ರೂಪಂ ಪ್ರತಿರೂಪೋಬಭೂವ" ಇತ್ಯಾದಿಶ್ರುತಿ:" |
| ಪ್ರತಿಬಿಂಬತ್ವಂ | ಬಿಂಬತ್ವಂ |

="ರೂಪಂ ರೂಪಂ ಪ್ರತಿರೂಪೋಬಭೂವ" ಇತ್ಯಾದಿ ಶ್ರುತಿಯ ಅರ್ಥನಿರೂಪಣೆ:-

**"ರೂಪಂ ರೂಪಂ ಪ್ರತಿರೂಪೋಬಭೂವ, ತದಸ್ಯರೂಪಂ ಪ್ರತಿಚಕ್ಷಣಾಯ।**
**ಇಂದ್ರೋಮಾಯಾಭಿ: ಪುರುರೂಪ ಈಯತೇ ಯುಕ್ತಾಹ್ಯಸ್ಯಹರಯ:ಶತಾದಶ"॥**
**(೬-೪-೭-೧೮) (ಇತಿಋಗ್ವೇದಮಂತ್ರ)**

ಪ್ರತ್ಯೇಪಿರ: (ಋಗ್ವೇದ ೬-೪೭-೧೮) ಎಂಬುದಾಗಿ ಪ್ರಕೃತವಾದ ತ್ರಿವಿಧವಾದ ಜೀವ ಸಮುದಾಯವು (ತ್ರಿವಿಧಜೀವರ ಸಮುದಾಯವು) ಜೀವನು - ಅಸ್ಯ = ಪರಮೇಶ್ವರನ, ರೂಪಂ ರೂಪಂ ಪ್ರತಿ = ಪ್ರತಿರೂಪ

ಪ್ರತಿಬಿಂಬನಾಗಿ ಇರುತ್ತಾನೆ. ತತ್ = ಆ ಬಿಂಬರೂಪವು, ಅಸ್ಯ = ಪ್ರತಿಬಿಂಬವೆಂದು ಹೇಳಲ್ಪಟ್ಟ ಜೀವರ ಗುಂಪಿನಲ್ಲಿ (ಯೋಗ್ಯವಾದ) ಮುಕ್ತಿಯೋಗ್ಯನಾದ ಜೀವಕ್ಕೆ ಮುಕ್ತನಾಗಿ, ಪ್ರತಿಚಕ್ಷಣಾಯ = ಸಾಕ್ಷಾತ್ಕಾರಕ್ಕಾಗಿ ಆಗುತ್ತದೆ. ಅಂದರೆ ಯೋಗ್ಯ ಜೀವನ ಸಾಕ್ಷಾತ್ಕಾರಕ್ಕೆ ವಿಷಯವಾಗುತ್ತದೆ. ಸ ಚ ಇಂದ್ರಃ = ಪರಮೈಶ್ವರ್ಯಸಂಪನ್ನನಾದ ಇಂದ್ರ ಶಬ್ದ ವಾಚ್ಯನಾದ ಬಿಂಬರೂಪಿಯಾದ ಪರಮೇಶ್ವರನು, ಮಾಯಾಭಿಃ = ತನ್ನ ಸಾಮರ್ಥ್ಯಗಳಿಂದ ಅಥವಾ ಇಚ್ಛೆಗಳಿಂದ, ಪುರು ರೂಪಃ = ಅನಂತಜೀವರುಗಳಿಗೆ ಬಿಂಬರೂಪನಾಗಿ, ಈಯತೇ = ತಿಳಿಯಲ್ಪಡುತ್ತಾನೆ. ಅಸ್ಯ = ಈ ಈಶ್ವರನಿಗೆ = ಬಿಂಬರೂಪಿಯಾದ ಪರಮಾತ್ಮನಿಗೆ "ಶತಮನಂತಂ ಭವತಿ" ಎಂಬ ವಚನದಿಂದ, ಶತಾನಿ = ಅಜಿತಾದಿ ಅನಂತ ರೂಪ ಗಳೂ, ಹೀಗೆಯೇ ದಶಶತಾನಿ = ವಿಶ್ವಾದಿ ಸಹಸ್ರರೂಪಗಳೂ, ಹೀಗೆಯೇ ಶತಾನಿ = ನಾರಾಯಣೋ ನರಃ ಶೌರಿಃ" ಎಂಬುವೇ ಮೊದಲಾದ, ದಶ = ಮತ್ಸ್ಯಾದಿಗಳೂ, ಹೀಗೆಯೇ ದಶಬಹೂನಿ = ವರಾದಿ ರೂಪಗಳೂ, ಹರಯಃ = ಹರಿ ನಾಮಕಗಳಾದ ರೂಪಗಳು ಯುಕ್ತಾಃ = ವ್ಯಾಪ್ತಗಳಾಗಿ, ಸಂತಿ = ಪ್ರಸಿದ್ಧಗಳೇ ಆಗಿವೆ.

ಈ ಮಂತ್ರದಿಂದ ಬಿಂಬರೂಪಿಯಾದ ಪರಮಾತ್ಮನಿಗೂ ಪ್ರತಿಬಿಂಬಭೂತರಾದ ಜೀವರಿಗೂ ಅತ್ಯಂತ ಭೇದವೇ ಹೇಳಲ್ಪಟ್ಟಿದೆ.

ಇಂತಹ ಸುಪ್ರಸಿದ್ಧವಾದ ಭೇದವು ಅತಿಪ್ರಬಲವಾದ ಸಾಕ್ಷಿಪ್ರಮಾಣಸಿದ್ಧವೂ ಆಗಿದೆ.

ಪ್ರತಿಯೊಬ್ಬ ಜೀವನಿಗೂ, ನಾನು ಅಲ್ಪಜ್ಞನು, ಅಸ್ವತಂತ್ರನು, ಅಲ್ಪಶಕ್ತಿಯುಳ್ಳವನು, ಅಪೂರ್ಣನು, ಇತ್ಯಾದಿಯಾದ ಅನುಭವವು ಪ್ರತಿಕ್ಷಣದಲ್ಲೂ ಸಾಕ್ಷಿಯ ಅನುಭವಕ್ಕೆ ಬರುತ್ತಲೇ ಇದೆ. ಇದನ್ನು ಅಪಲಾಪ ಮಾಡುವಂತೆಯೇ ಇಲ್ಲ. ಅನು ಪ್ರಮಾಣವಾದ ಅನುಮಾನದಿಂದಲೂ ಜೀವರಿಗೂ ಪರಮಾತ್ಮನಿಗೂ ಭೇದವನ್ನು ಸಾಧಿಸಲಾಗಿದೆ.

**ಜೀವೇಶೌ-ಭಿನ್ನೌ-ವಿರುದ್ಧಧರ್ಮವತ್ತ್ವಾತ್-ಜಲಾನಲವತ್ ಇತ್ಯಾದಿ.**

ಅದರ ಅರ್ಥವು ಈ ರೀತಿ ಇದೆ.

ಜೀವ ಮತ್ತು ಪರಮಾತ್ಮ ಇವರಿಬ್ಬರು - ಪರಸ್ಪರಭಿನ್ನರೇ ಆಗಿರುತ್ತಾರೆ.

> ಅಲ್ಪಜ್ಞತ್ವ ಸರ್ವಜ್ಞತ್ವ, ಅಲ್ಪಶಕ್ತಿಮತ್ತ್ವ ಸರ್ವಶಕ್ತಿಮತ್ತ್ವ, ಪಾರತಂತ್ರ್ಯ ಸ್ವಾತಂತ್ರ್ಯ ಮೊದಲಾದ ಪರಸ್ಪರ ವಿರುದ್ಧ ಗಳಾದ ಧರ್ಮಗಳಿಗೆ ಆಧಿಕರಣರಾಗಿರುವುದರಿಂದ - ದೃಷ್ಟಾಂತ ಜಲ (ನೀರು) ಅನಲ (ಬೆಂಕಿ) ಇದರಂತೆ.

ಈ ರೀತಿ ಜೀವರಿಗೂ ಗುಣಪರಿಪೂರ್ಣನಾದ ಪರಮಾತ್ಮನಿಗೂ ಅತ್ಯಂತ ಭೇದವೇ ಇರುವುದರಿಂದ ಗುಣ ಪರಿ ಪೂರ್ಣನಾದ ಬ್ರಹ್ಮಶಬ್ದವಾಚ್ಯನಾದ ವಿಷ್ಣುವೇ ಜಿಜ್ಞಾಸ್ಯನೆಂಬುದಾಗಿ ಸಿದ್ಧಾಂತ ಮಾಡಿ ಭಾಷ್ಯಕಾರರಾದ ಶ್ರೀಮದಾ ಚಾರ್ಯರು ನಿಶ್ಚಯಿಸಿದ್ದಾರೆ.

ವೇದವಾಣಿಯು ಎಲ್ಲ ಸಂದರ್ಭಗಳಲ್ಲೂ ಜೀವರಿಗೂ ಪರಮಾತ್ಮನಿಗೂ ಭೇದವನ್ನೇ ಹೇಳುತ್ತಿರುವಾಗ ಭೇದವನ್ನು ಕಲ್ಪಿತವೆಂದು ಹೇಳುವ ಇತರ ವಾದಿಗಳ ಮಾತು ವೇದವಿರುದ್ಧವಾದ ಅಸಂಬದ್ಧ ಪ್ರಲಾಪವಾಗಿದೆ.

ವೇದದಲ್ಲಿನ ಯಾವ ಒಂದು ಪದವೂ ಸಹ ಸುಳ್ಳಾದ, ಅಸತ್ಯವಾದ ಅವಿದ್ಯಮಾನವಾದುದನ್ನು ಹೇಳುತ್ತಿಲ್ಲ. ಸತ್ಯವಾದುದನ್ನೇ ಹೇಳುತ್ತಿದೆಯೆಂದು "ನಾವಿದ್ಯಮಾನಂಬ್ರುವತೇವೇದಾಧ್ಯಾತುಂನವೈದಿಕಃ" ಎಂಬ ಪ್ರಮಾಣ ವಾಕ್ಯವು ಪ್ರತಿಪಾದಿಸುತ್ತಲಿದೆ.

ಜೀವನಿಗೂ (ಜೀವರಿಗೂ) ಪರಮಾತ್ಮನಿಗೂ ಭೇದವನ್ನು ತಿಳಿಸುವ ವಾಕ್ಯಗಳು ಹೇರಳವಾಗಿವೆ. ಲೇಖನ ವಿಸ್ತಾರ ಭಯದಿಂದ ಅವೆಲ್ಲವನ್ನು ಬರೆಯಲಿಲ್ಲ. ಮೊದಲನೆಯದಾದ ಜಿಜ್ಞಾಸಾವಿಧಾಯಕವಾದ ಸೂತ್ರದಲ್ಲಿ ಜಿಜ್ಞಾಸ್ಯನಾದವನು ಗುಣಪರಿಪೂರ್ಣನಾದ ಬ್ರಹ್ಮನೆಂದು ಹೇಳಲಾಗಿದೆ. ಆದರೆ ಆ ಜಿಜ್ಞಾಸ್ಯನಾದ ಬ್ರಹ್ಮನ ಸ್ವರೂಪ ನಿರ್ಣಯವು ಲಕ್ಷಣದಿಂದಲೂ ಪ್ರಮಾಣದಿಂದಲೂ ಆಗಬೇಕು. "ಲಕ್ಷಣ ಪ್ರಮಾಣಾಭ್ಯಾಂ ಹಿ ವಸ್ತುಸ್ವರೂಪ ನಿರ್ಣಯಃ" ಎಂದು ಆದಕಾರಣ ಅವೆರಡರ ಪೈಕಿ ಮೊದಲೂ ಬ್ರಹ್ಮನ ಲಕ್ಷಣವನ್ನೇ ಎರಡನೇ ಸೂತ್ರದಲ್ಲಿ ಶ್ರೀಬಾದರಾಯಣರು ಹೇಳಿರುತ್ತಾರೆ.

ಮತ್ತು ಬ್ರಹ್ಮನ ಸ್ವರೂಪ, ಬ್ರಹ್ಮನ ಜ್ಞಾನದ ಸಾಧನ, ಬ್ರಹ್ಮಜ್ಞಾನದ ಫಲ ಇವುಗಳೆಲ್ಲದರ ಜಿಜ್ಞಾಸೆಯೇ ಬ್ರಹ್ಮಜಿಜ್ಞಾಸೆಯು. ಎಲ್ಲಕ್ಕೂ ಪ್ರಧಾನವಾದುದು ಬ್ರಹ್ಮಸ್ವರೂಪವಾದುದರಿಂದ ಮೊಟ್ಟಮೊದಲು ಪರಬ್ರಹ್ಮನ ಸ್ವರೂಪ ಲಕ್ಷಣವನ್ನೇ ಹೇಳಲಾಗಿದೆ.

ಎರಡನೆಯದಾದ ಈ ಜನ್ಮಾಧಿಕರಣಕ್ಕೆ ತದ್ವೃಹ್ಮ ಎಂಬುದೇ ವಿಷಯ ವಾಕ್ಯವಾಗಿದೆ.

ಜಿಜ್ಞಾಸಾಧಿಕರಣದಲ್ಲಿ ಹೇಳಿರುವಂತೆ "ಅಂಭಸ್ಯಪಾರೇ" ಇತ್ಯಾದಿಶ್ರುತಿ ವಾಕ್ಯಗಳಲ್ಲಿ ಪ್ರತಿಪಾದಿಸಲ್ಪಟ್ಟ ಸಮುದ್ರಾಂತರ್ಗತತ್ವಾದಿ ಧರ್ಮಯುಕ್ತನಾಗಿ ಶ್ರುತಿವಾಕ್ಯಗಳಲ್ಲಿ ಪ್ರಸಿದ್ಧವಾದ ಪರಬ್ರಹ್ಮವಸ್ತುವಿಗೇನೇ ಜಗಜ್ಜನ್ಮಾದಿ ಕರ್ತೃತ್ವರೂಪವಾದ ಲಕ್ಷಣವು ಹೇಳಲ್ಪಟ್ಟಿದೆ.

ಹಿಂದೆ ಬ್ರಹ್ಮಶಬ್ದದಿಂದಲೇ ಸಮಸ್ತ ಗುಣಪೂರ್ಣತ್ವವೆಂಬುದು ತಿಳಿಯಲ್ಪಟ್ಟಿದ್ದಾದರೂ ಅಂತಹ ಗುಣಪೂರ್ಣತ್ವವುಳ್ಳದುದು ಲೋಕದಲ್ಲಿ ಅಪ್ರಸಿದ್ಧವೆಂದು ಶಂಕಿಸಿದರೆ, ಅಂತಹ ಪ್ರಧಾನಲಕ್ಷಣವಾದ ಗುಣಪೂರ್ಣತ್ವವೆಂಬ ಪ್ರಧಾನ ಲಕ್ಷಣಕ್ಕೆ ಉಪಪಾದಕವಾದ ಶ್ರುತಿಯಲ್ಲಿ ಉಕ್ತವಾದ ಜಗಜ್ಜನ್ಮಾದಿಕರ್ತೃತ್ವವೆಂಬ ಲಕ್ಷಣವನ್ನು ಸೂತ್ರಕಾರರು ಲಕ್ಷಣ ಸೂತ್ರದಲ್ಲಿ ತಿಳಿಸುತ್ತಿರುತ್ತಾರೆ.

ಜಗಜ್ಜನ್ಮಾದಿಕಾರಣತ್ವವೇ ಲಕ್ಷಣವು. ಶ್ರುತಿಯು ಯಥಾಯೋಗ್ಯವಾಗಿ ಸಮಸ್ತ ಪ್ರಪಂಚದ ಸೃಷ್ಟಿ, ಸ್ಥಿತಿ, ಸಂಹಾರ, ನಿಯಮನ, ಜ್ಞಾನ, ಅಜ್ಞಾನ, ಬಂಧ ಮೋಕ್ಷಗಳೆಂಬ ಎಂಟಕ್ಕೂ ಕಾರಣನಾದವನು ಬ್ರಹ್ಮನೆಂದು ಹೇಳುತ್ತಲಿದೆ.

ಆದಕಾರಣ ಜಗತ್ತಿನ ಸೃಷ್ಟ್ಯಾದ್ಯಷ್ಟಕರ್ತೃತ್ವವೇ ಬ್ರಹ್ಮನ ಲಕ್ಷಣವಾಗಿದೆ. ಪ್ರತ್ಯೇಕವಾಗಿ ಸೃಷ್ಟಿಕರ್ತೃತ್ವಾದಿಗಳೂ ಸಹ ಪ್ರತ್ಯೇಕ ಲಕ್ಷಣಗಳೆಂಬುದರಲ್ಲಿಯೂ ಯಾವ ವಿಧವಾದ ಲಕ್ಷಣದೋಷಗಳಿಲ್ಲವಾಗಿರುವ ಪ್ರಯುಕ್ತ ಯಥಾ ಯೋಗ್ಯವಾಗಿ

ಸಮಸ್ತಪ್ರಪಂಚದ ಸೃಷ್ಟಿಕರ್ತೃತ್ವ, ಸಮಸ್ತ ಪ್ರಪಂಚದ ಸ್ಥಿತಿಕರ್ತೃತ್ವ, ಯಥಾಯೋಗ್ಯವಾಗಿ ಸಮಸ್ತ ಪ್ರಪಂಚದ ಸಂಹಾರಕರ್ತೃತ್ವ, ಸಮಸ್ತಪ್ರಪಂಚದ ನಿಯಮನಕರ್ತೃತ್ವ, ಮತ್ತು ಸಕಲಜೀವರ ಜ್ಞಾನ, ಅಜ್ಞಾನ, ಬಂಧ, ಮೋಕ್ಷಕರ್ತೃತ್ವಾದಿಗಳು ಪರಬ್ರಹ್ಮನ ಲಕ್ಷಣಗಳೇ ಆಗಿದೆ. ಆದಕಾರಣ ಇತರ ವಾದಿಗಳು ಹೇಳುವಂತೆ ಕೇವಲ ಜನ್ಮಸ್ಥಿತಿಭಂಗಗಳೆಂಬ ಮೂರನ್ನು ಮಾತ್ರ ತೆಗೆದುಕೊಳ್ಳಬಾರದೆಂಬುದು ಉಚಿತವಾದ ಅಭಿಪ್ರಾಯ.

ಈ ವಿಷಯದಲ್ಲಿ ಪ್ರಮಾಣಭೂತಗಳಾದ ಶ್ರುತಿವಾಕ್ಯಗಳು ಈ ರೀತಿ ಇವೆ.

ಜನ್ಮಾದ್ಯಸ್ಯ ಯತಃ ಎಂಬ ಸೂತ್ರದಲ್ಲಿ ಜನ್ಮಾದಿ ಎಂಬ ಪದದಿಂದ ಉತ್ಪತ್ತಿ, ಸ್ಥಿತಿ, ನಾಶಗಳೆಂಬ ಮೂರನ್ನು ಮಾತ್ರ ತೆಗೆದುಕೊಳ್ಳಬಾರದು. ಆದಿಪದದಿಂದ, ಜನ್ಮಹೊರತಾಗಿ ಮಿಕ್ಕ ಏಳನ್ನೂ ಇಟ್ಟುಕೊಳ್ಳಬೇಕು. ಶ್ರುತಿಯೇ ಇದನ್ನು ತಿಳಿಸುತ್ತಲಿದೆ.

**"ಯತೋ ವಾ ಇಮಾನಿ ಭೂತಾನಿ ಜಾಯಂತೆ. ಯೇನ ಜಾತಾನಿ ಜೀವಂತಿ,**
**ಯತ್ಪ್ರಯಂತಿ, ಅಭಿಸಂ ವಿಶಂತಿ"**

ಎಂಬ (ತೈತ್ತಿರೀಯ) ಶ್ರುತಿಯಲ್ಲಿ ಉತ್ಪತ್ತಿ, ಸ್ಥಿತಿ, ನಾಶ, ಮೋಕ್ಷಗಳೆಂಬ ನಾಲ್ಕನ್ನು ಹೇಳಲಾಗಿದೆ.

**ಯಸ್ಮಿನ್ ದ್ಯೌಃ ಪೃಥಿವೀ ಚಾಂತರಿಕ್ಷಂ ಓತಂ ಮನಃ ಸಹ ಪ್ರಾಣೈಶ್ಚ ಸರ್ವೈಃ ತಮೇವೈಕಂ**
**ಜಾನಥ ಆತ್ಮಾನಂ ಅನ್ಯಾವಾಚೋ ವಿಮುಂಚಥ**

ಎಂಬ (ಮು. ೨-೨-೫) ಸರ್ವಜಗದಾಧಾರತ್ವವನ್ನು ಹೇಳತಕ್ಕ ಶ್ರುತಿಯ ಅರ್ಥವು ಈ ರೀತಿ ಇದೆ.

**ಅರ್ಥ** :- ಯಸ್ಮಿನ್ = ಯಾವ ಪರಮಾತ್ಮನಲ್ಲಿ, ದ್ಯೌಃ = ದ್ಯುಲೋಕವೂ, ಪೃಥಿವೀಲೋಕವೂ, ಚ ಮತ್ತು = ಅಂತರಿಕ್ಷಂ = ಅಂತರಿಕ್ಷವೂ, ಓತಃ = ಆಶ್ರಿತವಾಗಿರುವವೋ, ಮನಃ = ಮನೋಭಿಮಾನಿಯೂ, ಸರ್ವೈಃ ಪ್ರಾಣೈಃ ಸಹ = ಎಲ್ಲಾ ಇಂದ್ರಿಯಾಭಿಮಾನಿಗಳೊಡನೆ ಯಾರಲ್ಲಿ ಆಶ್ರಿತರಾಗಿರುವವೋ, ತಂ = ಅಂತಹ ಪ್ರವಿಷ್ಟನಾದ, ಪರಮಾತ್ಮಾನಂ, ಎಲ್ಲದರಲ್ಲೂ ನಿಯಾಮಕನಾಗಿ ಪ್ರವೇಶ ಮಾಡಿರುವ, ಪರಮಾತ್ಮನನ್ನು, ಏಕಂ = ಪ್ರಧಾನನ್ನಾಗಿ, ಜಾನಥ = ತಿಳಿಯಿರಿ, ಅನ್ಯಾವಾಚಃ = ಇತರರಾದ ಅಸ್ವತಂತ್ರರಾದ ದೇವತೆಗಳನ್ನು ತಿಳಿಸುವ ಮಾತುಗಳನ್ನು, ವಿಮುಂಚಥ = ಬಿಡಿರಿ, ಇತರ ದೇವತೆಗಳನ್ನು ಪ್ರಧಾನರನ್ನಾಗಿ ತಿಳಿಯಬೇಡಿರಿ. ಈ ಶ್ರುತಿಯು ಪರಮಮುಖ್ಯ ವೃತ್ತಿಯಿಂದ ಆತ್ಮಶಬ್ದವಾಚ್ಯನಾದ ಪರಮಾತ್ಮನಿಗೆ ಸರ್ವಜಗದಾಧಾರತ್ವವನ್ನು ತಿಳಿಸುತ್ತಲಿದೆ.

ಅಮೃತಸ್ಯೈಷ ಸೇತುಃ (ಮು. ೨-೨-೫) ಎಂಬ ಶ್ರುತಿಯು ಪರಮಾತ್ಮನಿಗೆ ಮುಕ್ತಾಶ್ರಯತ್ವವನ್ನು ಹೇಳುತ್ತಲಿದೆ.

**ಅರ್ಥ** :- ಅಮೃತಸ್ಯ = ಮುಕ್ತರಿಗೆಲ್ಲ, ಏಷಃ = ಈ ಪರಮಾತ್ಮನು, ಸೇತುಃ = ಸೇತುವಿನಂತೆ ಸೇತುವು, ಮುಕ್ತಾಶ್ರಯನು..

**ಬ್ರಹ್ಮವಿದಾಪ್ನೋತಿ ಪರಂ** (ತೈತ್ತಿರೀಯ ೨-೧) ಎಂಬ ಶ್ರುತಿಯು ವಿಷ್ಣುಜ್ಞಾನಿಯು ಮುಕ್ತನಾಗಿ ವಿಷ್ಣುವನ್ನೇ ಸೇರುತ್ತಾನೆಂದು ಹೇಳುತ್ತಲಿದೆ.

**ಅರ್ಥ** :- ಬ್ರಹ್ಮವಿತ್ = ಪರಬ್ರಹ್ಮನಾದ ವಿಷ್ಣುವಿನ ಜ್ಞಾನಿಯು, ಮುಕ್ತನಾಗಿ, ಪರಂ = ಸರ್ವೋತ್ತಮನಾದ ವಿಷ್ಣುವನ್ನು, ಆಪ್ನೋತಿ = ಹೊಂದುತ್ತಾನೆ.

ಮಹಾನಾರಾಯಣೋಪನಿಷತ್ತು (ಪರಮಾತ್ಮನಿಗೆ) ನಾರಾಯಣನಿಗೆ ಸಕಲಸ್ವಾಮಿತ್ವವನ್ನೂ, ಪ್ರಧಾನವಾಗಿ ಜ್ಞೇಯತ್ವವನ್ನು, ಮುಕ್ತರಿಗೂ ಆಶ್ರಯನೆಂಬುದನ್ನು ಹೇಳುತ್ತಲಿದೆ.

ನಾರಾಯಣಂ ಮಹಾಜ್ಞೇಯಂ, ವಿಶ್ವಾತ್ಮಾನಂ, ಪರಾಯಣಂ (ಮಹಾನಾರಾಯಣೋಪನಿಷತ್ತು) "ಮುಕ್ತಾನಾಂ ಪರಮಾಗತಿಃ" ಎಂದು ಪರಮಾತ್ಮನಿಗೆ ಮುಕ್ತಪ್ರಾಪ್ಯತ್ವವನ್ನು ಹೇಳಲಾಗಿದೆ.

ಏತಮನ್ನಮಯಮಾತ್ಮಾನಂ ಉಪಸಂಕ್ರಾಮತಿ (ತೈತ್ತರೀಯ ೨-೮) ಇತ್ಯಾದಿಗಳಲ್ಲಿ ಪರಮಾತ್ಮನಿಗೆ ಮುಕ್ತ ಪ್ರಾಪ್ಯತ್ವವು ಉಕ್ತವಾಗಿದೆ.

ಸ್ಕಾಂದವಚನವಂತೂ ಪರಬ್ರಹ್ಮನಾದ ಶ್ರೀಹರಿಗೆ ಜಗತ್ತಿನ ಸೃಷ್ಟ್ಯಾದಿ ಅಷ್ಟಕರ್ತೃತ್ವವನ್ನು ಸ್ಪಷ್ಟವಾಗಿಯೇ ಹೇಳು ತ್ತಲಿದೆ.

**"ಉತ್ಪತ್ತಿಸ್ಥಿತಿಸಂಹಾರಾ ನಿಯತಿರ್ಜ್ಞಾನಮಾವೃತಿಃ ।**
**ಬಂಧಮೋಕ್ಷೌ ಚ ಪುರುಷಾತ್ ಯಸ್ಮಾತ್ ಸ ಹರಿರೇಕರಾಟ್ ।। (ಇತಿಸ್ಕಾಂದೇ)**

**ಅರ್ಥ** :- ಈ ಜಗತ್ತಿಗೆ:- ಯಸ್ಮಾತ್ = ಯಾವ ಪುರುಷನಿಂದ, ಉತ್ಪತ್ತಿಸ್ಥಿತಿ ಸಂಹಾರಾಃ = ಜನನ, ಸ್ಥಿತಿ, ನಾಶಗಳು, ಆಗುತ್ತಿವೆಯೋ, ನಿಯತಿಃ = ನಿಯಮನವು, ಜ್ಞಾನಂ = ಜ್ಞಾನವು, ಆವೃತಿಃ = ಅಜ್ಞಾನವು, ಯಾರಿಂದ ಆಗುತ್ತಲಿವೆಯೋ ಬಂಧಮೋಕ್ಷೌ ಚ = ಬಂಧ ಮತ್ತು ಮೋಕ್ಷಗಳು, ಯಾರಿಂದ ಆಗುತ್ತಿವೆಯೋ, ಸಃ ಏಕರಾಟ್ = ಅಂತಹ ಸ್ವತಂತ್ರನಾದವನು "ಹರಿಃ = ಶ್ರೀಹರಿಯು (ಶ್ರೀಹರಿಯೇನೇ)" ಎಂದು ಅರ್ಥವು.

ಸ್ಥಿತಿಕರ್ತೃವೂ ಸಹ ವಿಷ್ಣುವಿನಲ್ಲಿ ಮಾತ್ರವೇ ಇರುವುದನ್ನು ಋಗ್ವೇದ ವಾಕ್ಯವು ತಿಳಿಸುತ್ತಲಿದೆ.

**ಯ ಉತ್ರಿಧಾತು ಪೃಥಿವೀಂ ಉತ ದ್ಯಾಂ ಏಕೋದಾಧಾರ, ಭುವನಾನಿ ವಿಶ್ವಾ**
**(ಋಗ್ವೇದ ಸಂ. ೧-೧೫೪-೪)**

**ಅರ್ಥ** :- ಯಃ = ಯಾವ ವಿಷ್ಣುವು, ಏಕಃ = ಒಬ್ಬನೇನೇ, ತ್ರಿಧಾತು = ಪ್ರಕೃತಿಯೇನನು, ಪುರುಷರೇನು, ಕಾಲವೇನು ಇವೆಲ್ಲಕ್ಕೂ ಧಾರಕನಾಗಿ, ಪೃಥಿವೀಂ = ಭೂಮಿಯನ್ನು, ದ್ಯಾಂ = ಶ್ರೀದೇವಿಯನ್ನು (ದ್ಯುಲೋಕವನ್ನು) ವಿಶ್ವಾ(ವಿಶ್ವಾನಿ) = ಸಮಸ್ತವಾದ, ಭುವನಾನಿ = ಲೋಕಗಳನ್ನು, ದಾಧಾರ = ಧರಿಸಿರುವವನೋ, ಎಂದು ಸರ್ವ ಲೋಕಗಳ ಧಾರಕತ್ವವನ್ನು ತಿಳಿಸುತ್ತಲಿದೆ. ಸರ್ವ ಪದಾರ್ಥಗಳ ನಿಯಮನವೂ ಸಹ ಸ್ವತಂತ್ರನಾದ ಶ್ರೀವಿಷ್ಣುವಿಗೆ ಮಾತ್ರವೇ ಇರುವುದೆಂಬುದೂ ಸಹ ಶ್ರುತಿಯಿಂದಲೇ ತಿಳಿಯುತ್ತಲಿದೆ.

**ಚತುರ್ಭಿಃ ಸಾಕಂ ನವತಿಂ ಚ ನಾಮಭಿಃ ಚಕ್ರಂ ನವೃತ್ತಂ ವ್ಯತೀರವೀವಿಪತ್**
**(ಋಗ್ವೇದ ಸಂ. ೧-೧೫೫-೬)**

ಮತ್ತು ಹಿಂದೆ ಉದಾಹರಿಸಿದ ವೇದವಾಕ್ಯಗಳಿಂದ ಸೃಷ್ಟಿಕರ್ತೃತ್ವವೂ, ಸ್ಥಿತಿಕರ್ತೃತ್ವವೂ, ನಿಯಮನ ಕರ್ತೃತ್ವವೂ ಹೇಗೆ ಶ್ರೀಹರಿಗೆ ಉಂಟೆಂಬುದು ತಿಳಿದುಬರುತ್ತದೆಯೋ ಅದರಂತೆ ಬಂಧಾದಿಕರ್ತೃತ್ವವೂ ಉಂಟೆಂಬುದನ್ನು ಶ್ರುತಿಯು ಹೇಳುತ್ತಲಿದೆ.

**ಯಃ ಆತ್ಮಾನಂ ಅಂತರೋ ಯಮಯತಿ (ಇತಿಶ್ರುತಿಃ)**

**ಅರ್ಥ** :- ಯಃ = ಯಾವ, ಅಂತರಃ = ಅಂತಃ ಸ್ಥಿತ್ವಾರಮಮಾಣನಾದ ಪರಬ್ರಹ್ಮನೇನೇ, ಚಕ್ಷುರಾದಿ ಇಂದ್ರಿಯ ಗಳಲ್ಲಿಯೂ ರಮಿಸುವವನಾದ ಶ್ರೀಹರಿಯು, ಆತ್ಮಾನಂ = ಜೀವನನ್ನು, ಜೀವಾಭಿಮಾನಿಯಾದ ಚತುರ್ಮುಖ ಬ್ರಹ್ಮನನ್ನು, ಯಮಯತಿ = ನಿಯಮನ ಮಾಡುತ್ತಾನೆಯೋ, ಎಂಬುದಾಗಿ ಸಕಲಜೀವ ನಿಯಮನ ಕರ್ತೃತ್ವವು ಶ್ರೀಹರಿಗೆ ಶ್ರುತಿಯಲ್ಲಿ ಉಕ್ತವಾಗಿದೆ.

ಶ್ರೀಹರಿಗೆ ಬಂಧಮೋಕ್ಷಾದಿಕರ್ತೃತ್ವವನ್ನು ಶ್ರುತಿಯು ತಿಳಿಸುತ್ತಲಿದೆ.

**"ತ್ವಂ ಮುಕ್ತಿದೋ, ಬಂಧದೋ, ಅತೋಽಮುತೋ ನಸ್ತ್ವಂ ಜ್ಞಾನದೋ,**
**ಅಜ್ಞಾನದತ್ವಾಸಿವಿಷ್ಣೋ (ಇತಿಶ್ರುತಿಃ)**

**ಅರ್ಥ** :- ಹೇ ವಿಷ್ಣೋ = ಎಲೈ ವಿಷ್ಣುವೇ, ತ್ವಂ = ನೀನು, ಅತಃ = ಆದುದರಿಂದ, ನಃ = ನಮಗೆ, ಮುಕ್ತಿದಃ = ಮೋಕ್ಷವನ್ನು ಕೊಡತಕ್ಕವನೂ, ಬಂಧದಃ = ಅನಾದಿಯಾದ ಭಾವರೂಪವಾದ ಅಜ್ಞಾನವೇ ಮೊದಲಾದ ಬಂಧಕ್ಕೆ ನಿಯಾಮಕನೂ, ಜ್ಞಾನದಃ = ಜ್ಞಾನವನ್ನು ಅನುಗ್ರಹಿಸುವವನೂ, ಅಜ್ಞಾನದಃ = ಅಜ್ಞಾನದಾತನೂ, ಅಸಿ = ಆಗಿರುತ್ತೀಯೆಂದು ಶ್ರುತಿವಾಕ್ಯವು ಪರಮಾತ್ಮನಿಗೆ ಜ್ಞಾನಾಜ್ಞಾನಾದಿದಾತೃತ್ವವನ್ನು ತಿಳಿಸುತ್ತಲಿದೆ.

ವೇದದ ಅರ್ಥವನ್ನು ಸರಿಯಾಗಿ ತಿಳಿಯದವನೂ, ಅಂದರೆ, ಸದಾಗಮಗಳ ಅರ್ಥವನ್ನು ಅರಿಯದವನೂ, ಅಥವಾ ವೇದಕ್ಕೆ ವಿರುದ್ಧವಾದ ಜ್ಞಾನವನ್ನುಳ್ಳವನೂ ಸಹ ಪರಮಾತ್ಮನನ್ನು ತಿಳಿಯಲಾರನೆಂಬ ಅಭಿಪ್ರಾಯವನ್ನು ತೈತ್ತಿರೀಯ ಬ್ರಾಹ್ಮಣ ವಾಕ್ಯವು ವ್ಯಕ್ತಪಡಿಸುತ್ತಲಿದೆ.

**"ನಾವೇದವಿತ್ ಮನುತೇ ತಂ ಬೃಹಂತಮ್ ।**
**ಸರ್ವಾನುಭುಂ ಆತ್ಮಾನಗುಂ ಸಾಂಪರಾಯೇ" ।।**
**(ತೈತ್ತಿರೀಯಬ್ರಾಹ್ಮಣ ೩-೧೨-೯)**

**ಅರ್ಥ** :- ತಂ = ಪೂರ್ವದಲ್ಲಿ ಪ್ರಕೃತನಾದ ಅಂತಹ, ಬೃಹಂತಂ = ಪೂರ್ಣನಾದ, ಸರ್ವಾನುಭುಂ = ಸರ್ವವನ್ನೂ ಅನುಭವಿಸುವವನಾದುದರಿಂದ, ಸರ್ವಜ್ಞನಾದ ಅಥವಾ ಸರ್ವಂ ಅನುಭಾವಯತೀತಿ ಸರ್ವಾನುಭೂಃ ತಂ ಆತ್ಮಾನಂ, ಸರ್ವಜಗತ್ಕರ್ತಾರಂ ಸರ್ವಸ್ವಾಮಿನಂ ವಾ = ಸರ್ವ ಜಗತ್ತಿಗೂ ಕರ್ತನಾದ, ಸರ್ವರಿಗೂ ಸ್ವಾಮಿಯಾದ, (ಪರಮಾತ್ಮನನ್ನು), ಸಾಂಪರಾಯೇ = ಸಮ್ಯಕ್, ಪರಸ್ಯ, ಆಯಃ = ಪ್ರಾಪ್ತಿಃ ಸಂಪರಾಯಃ ಸ ಏವ ಸಾಂಪರಾಯಃ ತಾದರ್ಥ್ಯೇಸಪ್ತಮೀ = ಮೋಕ್ಷಕ್ಕಾಗಿ, ಅವೇದವಿತ್ = ವಿಷ್ಣುತತ್ತ್ವ ನಿರ್ಣಾಯಕ ಆಗಮದಲ್ಲಿ ಉಕ್ತವಾಗಿರುವುದರಿಂದ ವೇದ ಶಬ್ದದಿಂದ "ಸದಾಗಮಗಳು" ಎಂಬ ಅರ್ಥವನ್ನು ತಿಳ್ಳುಕೊಳ್ಳಬೇಕು. ಸದಾಗಮಗಳ ಅರ್ಥವನ್ನು ತಿಳಿಯದವನು, ನಮನುತೇ = ತಿಳಿಯುವುದಿಲ್ಲ.

ಪರಮಾತ್ಮನು ಸರ್ವಸದಾಗಮಗಳಿಂದ ಮಾತ್ರ ಚೆನ್ನಾಗಿ ತಿಳಿಯಲ್ಪಡತಕ್ಕವನಾಗಿದ್ದಾನೆಂದು ಅಭಿಪ್ರಾಯ.

ಪರಮಾತ್ಮನು ಯಥಾಯೋಗ್ಯವಾಗಿ ಚೇತನ ಮತ್ತು ಅಚೇತನರೂಪವಾದ ಜಗತ್ತಿನ ಸೃಷ್ಟಿ, ಸ್ಥಿತಿ, ಸಂಹಾರ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮೋಕ್ಷಾದಿಗಳಿಗೆ ಕರ್ತನೆಂಬ ಜ್ಞಾನವು ಮೋಕ್ಷಕ್ಕೆ ಸಾಧನವೆಂದು ಪ್ರಮಾಣ ವಾಕ್ಯವು ತಿಳಿಸುತ್ತಲಿದೆ. ಮತ್ತು ಪರಮಾತ್ಮನೊಬ್ಬನೇ ಸರ್ವತಂತ್ರಸ್ವತಂತ್ರನು, ಮಿಕ್ಕ ಎಲ್ಲವೂ ಪರತಂತ್ರವು. ಪರತಂತ್ರವಾದ ಸಕಲವೂ ಸದಾ ಶ್ರೀಹರಿಯ ಅಧೀನವಾಗಿದೆಯೆಂಬುದಾಗಿ ಯಾರು ತಿಳಿಯುತ್ತಾನೆಯೋ ಅವನು ಈ ಸಂಸಾರದಿಂದ ಮುಕ್ತನಾಗುತ್ತಾನೆಂದು ತತ್ವವಿವೇಕವಾಕ್ಯವು ಹೇಳುತ್ತಲಿದೆ.

"ಯ ಏತತ್ ಪರತಂತ್ರಂತು ಸರ್ವಮೇವ ಹರೇಃ ಸದಾ ।
ವಶಮಿತ್ಯೇವ ಜಾನಾತಿ ಸಂಸಾರಾನ್ಮುಚ್ಯತೇ ಹಿ ಸಃ ॥ ಇತಿತತ್ವವಿವೇಕೇ ॥

ಇದೇ ಅಭಿಪ್ರಾಯವನ್ನು ಮತ್ತೊಂದು ಟೀಕಾವಾಕ್ಯವು ವ್ಯಕ್ತಪಡಿಸುತ್ತಲಿದೆ.

"ಮುಮುಕ್ಷುಣಾ ಹಿ ಪರಮಾತ್ಮಾ ಜಗದುದಯಾದಿನಿಮಿತ್ತತ್ವೇನ ಅವಶ್ಯಂ
ಅವಗಂತವ್ಯ ಇತಿ ಸಕಲ ಸಚ್ಛಾಸ್ತ್ರಾಣಾಮವಿಪ್ರತಿಪನ್ನೋಽರ್ಥಃ"
। ಇತಿತತ್ವಸಂಖ್ಯಾನಟೀಕಾ ॥

"ಸೃಷ್ಟಿರಕ್ಷಾಹೃತಿಜ್ಞಾನನಿಯತ್ಯಜ್ಞಾನಬಂಧನಾನ್ ।
ಮೋಕ್ಷಂಚ ವಿಷ್ಣುತಶ್ಚೈವ ಜ್ಞಾತ್ವಾ ಮುಕ್ತಿರ್ನಚಾನ್ಯಥಾ" ॥ ಇತಿ ॥
(ಅನುವ್ಯಾಖ್ಯಾನ)

**ಅಭಿಪ್ರಾಯ** :- ಮೋಕ್ಷವನ್ನು ಅಪೇಕ್ಷಿಸುವವನಾದ ಯೋಗ್ಯನಾದ ಜೀವನು "ಈ ಜಗತ್ತಿನ ಉತ್ಪತ್ತ್ಯಾದಿಗಳಿಗೆಲ್ಲ (ಯಥಾಯೋಗ್ಯವಾಗಿ ) ಪರಮಾತ್ಮನು ನಿಮಿತ್ತಕಾರಣನೆಂದು" ಅವಶ್ಯವಾಗಿ ತಿಳಿಯಬೇಕೆಂಬುದೇ ಸಕಲ ಸಚ್ಛಾಸ್ತ್ರಗಳಿಗೂ ನಿರ್ವಿವಾದವಾದ ಅರ್ಥವಾಗಿದೆ.

"ವಿಷ್ಣುವಿನಿಂದಲೇ ಜಗತ್ತಿನ ಸೃಷ್ಟ್ಯಾದಿಗಳಾಗುತ್ತವೆ ಎಂದು ತಿಳಿದರೇನೇ ಮೋಕ್ಷವು ದೊರಕುವುದು. ಇಲ್ಲವಾದರೆ ಇಲ್ಲ."

ಪರಮಾತ್ಮನ ವಿಷಯದಲ್ಲಿ ವಿಪರೀತವಾಗಿ ತಿಳಿದಿರುವವನ್ನು ವೇದವಾಣಿಯು ನಿಂದಿಸುತ್ತಲಿದೆ.

ಅನಂತಕಲ್ಯಾಣ ಗುಣಗಣಪೂರ್ಣನೂ, ಸಕಲದೋಷರಹಿತನೂ, ಜಗಜ್ಜನ್ಮಾದಿಗಳಿಗೆ ನಿಮಿತ್ತಕಾರಣನೂ, ಸರ್ವತಂತ್ರಸ್ವತಂತ್ರನೂ, ರಮಾಬ್ರಹ್ಮಾದಿಗಳಿಂದಲೂ ನಿತ್ಯವಂದ್ಯನೂ ಸಕಲಮುಕ್ತರಿಗೂ ಅಮುಕ್ತರಿಗೂ ನಿಯಾಮಕನೂ ಆದ ಶ್ರೀಹರಿಯನ್ನು ಸರಿಯಾಗಿ ತಿಳಿಯದೆ ಅದಕ್ಕೆ ವಿಪರೀತವಾಗಿ ಯಾರು ತಿಳಿಯುತ್ತಾರೆಯೋ ಅಂತಹವರನ್ನು ಆತ್ಮಹನು ಎಂದು ಹೆಸರು. ಅಂತಹ ಶ್ರೀಹರಿದ್ವೇಷಿಗಳಿಗೆ ನಿತ್ಯನರಕವೇ ಗತಿಯೆಂದು ವೇದವಾಣಿಯು ಘೋಷಿಸುತ್ತಿದೆ. ಆ ವೇದವಾಕ್ಯವು ಈ ಕೆಳಗೆ ಇರುತ್ತದೆ.

''ಅಸೂರ್ಯಾ ನಾಮ ತೇಲೋಕಾಃ ಅಂಧೇನ ತಮಸಾಽಽವೃತಾಃ।
ತಾನ್ ತೇ ಪ್ರೇತ್ಯಾಭಿಗಚ್ಛಂತಿ ಯೇಕೇಚಾತ್ಮಹನೋ ಜನಾಃ ॥ಇತಿಶ್ರುತಿಃ॥

**ತಾತ್ಪರ್ಯ** :- ನಿಬಿಡಾಂಧಕಾರದಿಂದ ಪ್ರಸಿದ್ಧವಾದ, ಮಹಾದುಃಖಕರವಾದ, ದೈತ್ಯರಿಂದ ಹೊಂದಲ್ಪಡತಕ್ಕ ತಾಮಿಸ್ರ, ಅಂಧತಾಮಿಸ್ರಗಳೆಂಬ ನಿತ್ಯನರಕಗಳು ಪ್ರಮಾಣಪ್ರಸಿದ್ಧಗಳಾಗಿವೆ. ಯಾರು ಶ್ರೀಹರಿಯನ್ನು ವಿಪರೀತವಾಗಿ ತಿಳಿಯುತ್ತಾರೆಯೋ ಅಂತಹ ಹರಿದ್ವೇಷಿಗಳಿಗೆ ನಿತ್ಯ ನರಕವು ಉಂಟಾಗುತ್ತದೆ ಎಂದು ಅಭಿಪ್ರಾಯ. ಮತ್ತೊಂದು ಶ್ರುತಿವಾಕ್ಯವೂ ಈ ಅಭಿಪ್ರಾಯವನ್ನೇ ಸ್ಪಷ್ಟಪಡಿಸುತ್ತಲಿದೆ.

''ಅನಂದಾ ನಾಮ ತೇ ಲೋಕಾಃ ಅಂಧೇನ ತಮಸಾವೃತಾಃ ।
ತಾನ್ ತೇಪ್ರೇತ್ಯಾಭಿಗಚ್ಛಂತಿ ಯೇ ಅವಿದ್ವಾಂಸೋ ಅಬುಧೋ ಜನಾಃ॥ ಇತಿಶ್ರುತಿಃ॥

**ತಾತ್ಪರ್ಯ** :- ವೇದವಾಚ್ಯನಾದ ಪರಮಾತ್ಮನನ್ನು ಬಿಟ್ಟು, ಅಂದರೆ ವೇದದಿಂದ ಪರಮ ಮುಖ್ಯವೃತ್ತಿಯಿಂದ ಪ್ರತಿಪಾದಿತನಾದ ಪರಮಾತ್ಮನ ಸ್ವರೂಪವನ್ನು ಅಪಲಾಪ ಮಾಡುವ ತಮೋಯೋಗ್ಯ ಜನರು ಅಂಧಕಾರವೃತವಾದ ನಿತ್ಯ ನರಕಕ್ಕೆ ಭಾಗಿಗಳಾಗುವರು. ಶ್ರೀಹರಿಯಲ್ಲಿ ವಿಮುಖರಾದವರು ಅಸುರರಿಂದ ಹೊಂದಲ್ಪಡತಕ್ಕ ಅಸುರ್ಯ ಎಂಬ ನಿತ್ಯ ದುಃಖಕ್ಕೆ ಕಾರಣವಾದ ನಿತ್ಯನರಕವನ್ನು ಹೊಂದುವರೆಂದು ಹಿಂದಿನ ಶ್ರುತಿಯ ಅರ್ಥವನ್ನೇ ಭಾಷ್ಯಕಾರರು ಮುಂದಿನ ವಾಕ್ಯದಲ್ಲಿ ವಿವರಿಸಿ ಹೇಳಿರುತ್ತಾರೆ.

''ಮಹಾದುಃಖೈಕಹೇತುತ್ವಾತ್, ಧ್ರುವತ್ವಾತ್, ಅಸುರೈಸ್ತಥಾ।
ಅಸುರ್ಯಾನಾಮತೇಲೋಕಾಃ ತಾನ್ ಯಾಂತಿ ವಿಮುಖಾಹರೌ ॥ ಇತಿ ॥

ಇಂತಹ ಶ್ರುತಿವಾಕ್ಯಗಳು ನೂರಾರು ಈ ವಿಚಾರವನ್ನೇ ಪ್ರತಿಪಾದಿಸುತ್ತಲಿವೆ. ಪರಮಾತ್ಮನ ಸ್ವರೂಪವು ಅಲೌಕಿಕವಾದುದು. ಅಪ್ರಾಕೃತ ಅತ್ಯಾಶ್ಚರ್ಯಕರ, ಕುತರ್ಕಗಳಿಗೆ ಅಲ್ಲಿ ಅವಕಾಶವಿಲ್ಲ.

ಲೋಕದಲ್ಲಿ ಅವಯವಿಯಾದುದು - ಅವಯವವಲ್ಲ - ಅವಯವೋವಾ - ನಾವಯವೀ - ಅವಯವತ್ವಾತ್ ಎಂಬುದಾಗಿ ಅನುಮಾನದಿಂದ ಅವಯವಕ್ಕೂ ಅವಯವಿಗೂ ಭೇದವು ಸುಪ್ರಸಿದ್ಧವಾಗಿದೆ. ಅವಯವಕ್ಕೆ ಅವಯವಿತ್ವವೂ, ಅವಯವಿಗೆ - ಅವಯವತ್ವವು ವಿರುದ್ಧವಾಗಿದೆ.

ಆದರೆ ಇಂತಹ ಅನುಮಾನದ (ತರ್ಕದ) ವಿರೋಧವು ಪರಮಾತ್ಮನ ವಿಷಯದಲ್ಲಿ ಬಾಧಕವಾಗಿರುವುದಿಲ್ಲ.

ಅಪರಿಮಿತವಾದ ಅಚಿಂತ್ಯಾದ್ಭುತವಾದ ಶಕ್ತಿಸಂಪನ್ನನಾದ ಪರಮಾತ್ಮನ ಸ್ವರೂಪವನ್ನು ಬೃಹತ್ಸಂಹಿತಾ ವಚನವೆಂಬ ಪ್ರಮಾಣ ವಾಕ್ಯವು ಲೋಕವಿಲಕ್ಷಣವಾದ ಪರಮಾತ್ಮತತ್ವವನ್ನಾಗಿ ನಿರೂಪಿಸುತ್ತಲಿದೆ.

ಚಿತ್ರದಲ್ಲಿ ಬರೆಯಲ್ಪಟ್ಟ ನವನಾರೀರೂಪದಲ್ಲಿ ಅವಯವಿಗಳಾದ ಅನೇಕ ಸ್ತ್ರೀಯರಿಗೆ ಏಕದೇಹಾವಯವತ್ವವು ಕಂಡುಬರುವಂತೆ ನಾರಾಯಣಾದಿ ಪಂಚರೂಪಗಳಿಗೂ, ಒಬ್ಬನೇ ಪರಮಾತ್ಮನಿಗೆ ಅವಯವತ್ವವೂ ಅವಯವಿತ್ವವೂ ಪ್ರಮಾಣವಾಕ್ಯದಿಂದ ಪ್ರಮಿತವಾಗಿದೆ. ಈ ವಿಷಯವನ್ನು ತಿಳಿಸತಕ್ಕ ಬೃಹತ್ಸಂಹಿತಾ ವಾಕ್ಯವು ಈ ರೀತಿ ಇದೆ.

**"ಶಿರೋ ನಾರಾಯಣಃ ಪಕ್ಷೋ ದಕ್ಷಿಣಃ ಸವ್ಯ ಏವ ಚ ।**
**ಪ್ರದ್ಯುಮ್ನಶ್ಚಾನಿರುದ್ಧಶ್ಚ ಸಂದೋಹೋ ವಾಸುದೇವಕಃ ॥**
**ನಾರಾಯಣೋಽಥ ಸಂದೋಹೋ ವಾಸುದೇವಃ ಶಿರೋಽಪಿ ವಾ ।**
**ಪುಚ್ಛಂ ಸಂಕರ್ಷಣಃ ಪ್ರೋಕ್ತಃ ಏಕ ಏವ ತು ಪಂಚಧಾ ॥**
**ಅಂಗಾಂಗಿತ್ವೇನ ಭಗವಾನ್ ಕ್ರೀಡತೇ ಪುರುಷೋತ್ತಮಃ" ॥(ಬೃಹತ್ಸಂಹಿತಾ)**

**ತಾತ್ಪರ್ಯ** :- ಕ್ಷರಚೇತನರಿಗಿಂತಲೂ, ಅಕ್ಷರಚೇತನಳಾದ ರಮಾದೇವಿಗಿಂತಲೂ ಉತ್ತಮನಾದ ಭಗವಂತನಾದ ಶ್ರೀಕೃಷ್ಣನು ಒಬ್ಬನೇ ಆದಾಗ್ಯೂ, ಐದು ಬಗೆಯಾಗಿ ಒಬ್ಬನೇ ಅವಯವ ಅವಯವಿಭಾವದಿಂದ, ಅಂಗತ್ವೇನ, ಅಂಗಿತ್ವೇನ ಕ್ರೀಡಿಸುತ್ತಾನೆ.

**"ಐಶ್ವರ್ಯಾಚ್ಚ ವಿರೋಧಶ್ಚಾಚಿಂತ್ಯಸ್ತಸ್ಮಿನ್ ಜನಾರ್ದನೇ ।**
**ಅತರ್ಕ್ಯೇ ಹಿ ಕುತಸ್ತರ್ಕಾಃ ಅಪ್ರಮೇಯೇ ಕುತಃ ಪ್ರಮಾ ॥**
**(ಇತಿಬೃಹತ್ಸಂಹಿತಾಯಾಮ್) ॥**

**ಅಭಿಪ್ರಾಯ** :- ಮೊದಲನೆಯ ಪಕ್ಷದಲ್ಲಿ -

ಅವಯವಿಯಾಗಿರುವ ನಾರಾಯಣನೇ ಶಿರಸ್ಸು.
ಅವಯವಿಭೂತನಾದ ಪ್ರದ್ಯುಮ್ನನೇ ದಕ್ಷಿಣಬಾಹು - ಬಲತೋಳು.
ಅವಯವಿಭೂತನಾದ ಅನಿರುದ್ಧನೇ ಎಡತೋಳು.
ಅವಯವಿಯಾದ ವಾಸುದೇವನೇ ಮಧ್ಯದೇಹ.
ಅವಯವಿಯಾದ ಸಂಕರ್ಷಣನೇ ಪಾದವೆಂಬ ಅವಯವನಾಗಿದ್ದಾನೆ.

ಎರಡನೇ ಪಕ್ಷದಲ್ಲಿ -

ನಾರಾಯಣನು ಮಧ್ಯದೇಹ
ವಾಸುದೇವನು ತಲೆ
ಸಂಕರ್ಷಣನೇ ಪಾದ

ಈ ರೀತಿ ಪರಮಾತ್ಮನು ಒಬ್ಬನೇ ಆದಾಗ್ಯೂ ವಿಶೇಷಬಲಾತ್ ಅವಯವ ಮತ್ತು ಅವಯವಿಭಾವದಿಂದ (ಅಂಗಾಂಗಿಭಾವದಿಂದ) ಕ್ರೀಡಿಸುತ್ತಾನೆ.

ಅಘಟಿತಘಟಕವಾದ ಅಚಿಂತ್ಯವಾದ, ಅದ್ಭುತವಾದ, ಆಶ್ಚರ್ಯಕರವಾದ (ಈಶ್ವರನ) ಸಾಮರ್ಥ್ಯದಿಂದ ಪರಮಾತ್ಮನ ವಿಷಯದಲ್ಲಿ ಲೌಕಿಕವಾದ ಯಾವ ವಿರೋಧಕ್ಕೂ ಅವಕಾಶವಿಲ್ಲ. ತರ್ಕಕ್ಕೆ ಅಗೋಚರನಾದ ಪರಮಾತ್ಮನ ಬಗ್ಗೆ ತರ್ಕವು ಬಾಧಕವಾಗಲಾರದು.

ಲೋಕದಲ್ಲಿ ಪರಿಮಿತಶಕ್ತಿಯುಳ್ಳ ವ್ಯಕ್ತಿಯ ವಿಷಯದಲ್ಲಿ ವಿರೋಧವು ಕಂಡುಬರುವುದಾದರೂ, ವಿರೋಧಾಪಾದಕವಾದ ಪರಿಮಿತಶಕ್ತಿಯಿಂದ ರಹಿತನಾದ ಪರಮಾತ್ಮನ ವಿಷಯದಲ್ಲಿ ಯಾವ ವಿರೋಧವೂ ಇರುವುದಿಲ್ಲ ಎಂದು ಪರಮಾಭಿಪ್ರಾಯ.

ಸಕಲ ವೇದವಾಕ್ಯಗಳೂ ಅಸಂಖ್ಯೇಯಗಳಾದ ಕಲ್ಯಾಣ ಗುಣಗಳಿಗೂ ನಿಧಿಯನ್ನಾಗಿಯೂ, ಸಕಲ ದೋಷರಹಿತನನ್ನಾಗಿಯೂ, ಪರಬ್ರಹ್ಮನಾದ ನಾರಾಯಣನನ್ನೇ ಪರಮಮುಖ್ಯವೃತ್ತಿಯಿಂದ ಪ್ರತಿಪಾದಿಸುತ್ತಲಿವೆ.

ಅಘಟಿತಘಟಕವಾದ, ಸರ್ವತ್ರಾಪ್ರತಿಬದ್ಧವಾದ ಅಚಿಂತ್ಯವಾದ ಅದ್ಭುತವಾದ ಶಕ್ತಿಯಿಂದ, ಬೇರೆ ಎಲ್ಲೂ ಕಾಣದಿರುವಂತಹುದು ಪರಮಾತ್ಮನಲ್ಲಿ ಕಂಡುಬರುತ್ತದೆಯೆಂದು ವೇದವಾಣಿಯೇ ತಿಳಿಸುತ್ತದೆ.

ಪರಮಾತ್ಮನ ವ್ಯಾಪ್ತತ್ವ ವಿಷಯದಲ್ಲಿ ಅರ್ಜುನನ ಪ್ರತ್ಯಕ್ಷವೇ ಪ್ರಮಾಣವಾಗಿದೆ.

**"ದ್ಯಾವಾ ಪೃಥಿವ್ಯೋರಿದಮಂತರಂ ಹಿ, ವ್ಯಾಪ್ತಂ ತ್ವಯೈಕೇನ ದಿಶಶ್ಚಸರ್ವಾಃ"**

ಎಂಬ ಭಗವದ್ಗೀತೆಯ ಹನ್ನೊಂದನೆಯ ಅಧ್ಯಾಯದಲ್ಲಿನ ವಾಕ್ಯದಿಂದ ಪ್ರಮಾಣವಾಗಿ ಅರ್ಜುನನ ಪ್ರತ್ಯಕ್ಷವು ತಿಳಿಯಲ್ಪಡುತ್ತದೆ.

ಪರಮಾತ್ಮನ ಸಿತಕೃಷ್ಣಕೇಶಗಳು (ಬಿಳಿಕಪ್ಪು ಕೂದಲುಗಳೇ) ಭೂಲೋಕದಲ್ಲಿ ರಾಮಾವತಾರ ಕೃಷ್ಣಾವತಾರವಾಗಿ ಭೂಭಾರವನ್ನು ಪರಿಹರಿಸುತ್ತವೆಯೆಂಬ ಪರಮಾತ್ಮನ ವಚನವು ವಿಷ್ಣುಪುರಾಣದ ಪಂಚಮಾಂಶದಲ್ಲಿ ಪ್ರಸಿದ್ಧವಾಗಿದೆ.

**"ಉಜ್ಜಹಾರಾತ್ಮನಃ ಕೇಶೌ ಸಿತಕೃಷ್ಣೌಮಹಾಮುನೇ।**
**ಉವಾಚ ಚ ಸುರಾನೇತೌ ಮತ್ಕೇಶೌವಸುಧಾತಲೇ**
**ಅವತೀರ್ಯ ಭುವೋ ಭಾರಕ್ಲೇಶಹಾನಿಂ ಕರಿಷ್ಯತಃ ।ಇತಿ ವಿಷ್ಣುಪುರಾಣೇ ॥**

ಮಹಾಪ್ರಳಯದಲ್ಲೂ ವಿಷ್ಣುವು ಸರ್ವತಂತ್ರನಾಗಿಯೇ ಇದ್ದನು. ಅಸ್ವತಂತ್ರರಾದ ಹಿರಣ್ಯಗರ್ಭ (ಚತುರ್ಮುಖ ಬ್ರಹ್ಮ), ರುದ್ರಾದಿಗಳಿಗೆ ಪರಮಾತ್ಮನಾದ ಅಂತಹ ಶ್ರೀಹರಿಯಿಂದ ಉತ್ಪತ್ತಿಯನ್ನು ಹೇಳುತ್ತಲಿದೆ.

**"ಸ ಮುನಿರ್ಭೂತ್ವಾ ಸಮಚಿಂತಯತ್, ತತ ಏತೇ ವ್ಯಜಾಯಂತ।**
**ವಿಶ್ವೋ, ಹಿರಣ್ಯಗರ್ಭೋ, ಅಗ್ನಿರ್ಯಮೋವರುಣರುದ್ರೇಂದ್ರಾ।" ॥ಇತಿಶ್ರುತಿಃ ॥**

**ಏಕೋ ನಾರಾಯಣ ಆಸೀತ್ ನ ಬ್ರಹ್ಮಾ ನ ಚ ಶಂಕರಃ ।**
**ವಾಸುದೇವೋಽಗ್ರ ಆಸೀತ್ ನ ಬ್ರಹ್ಮಾನ ಚ ಶಂಕರಃ ।**
**ನೇಂದ್ರಸೂರ್ಯೌ ನ ಚ ಗುಹೋಽಸೋಮೋ, ನ ವಿನಾಯಕಃ ॥ ಇತಿ ॥**

ಪರಮಾತ್ಮನು ಪೂರ್ಣಾನಂದನಾಗಿರುವುದರಿಂದಲೇ ಲೋಕಚೇಷ್ಟಕನಾಗಿರುವ ವಿಷಯವನ್ನು

**"ಕೋಹ್ಯೇವಾನ್ಯಾತ್ ; ಕಃ ಪ್ರಾಣ್ಯಾತ್, ಯದೇಷ ಆಕಾಶ ಆನಂದೋ ನಸ್ಯಾತ್" ॥(ತೈತ್ತಿರೀಯ)**

ಎಂಬ ಶ್ರುತಿವಾಕ್ಯವು ಹೇಳುತ್ತಲಿದೆ.

**ತಾತ್ಪರ್ಯ** :- ಸರ್ವತ್ರ ಪ್ರಕಾಶಮಾನನಾದುದರಿಂದ ಆಕಾಶ ಶಬ್ದವಾಚ್ಯನಾದ ಶ್ರೀಹರಿಯು ಪೂರ್ಣಾನಂದ ನಲ್ಲದಿದ್ದರೆ ಲೋಕಕ್ಕೆ ಪ್ರವರ್ತಕನಲ್ಲವಿದ್ದರೆ, ಬೇರೆ ಯವ್ವೋನುತಾನೇ ಲೋಕಚೇಷ್ಟಕನಾದಾನು ? ಯರುತಾನೇ ಧರ್ಮಾದಿಗಳಲ್ಲಿ ಪ್ರವೃತ್ತಿಯನ್ನುಂಟುಮಾಡಿಯಾನು ? ಬೇರೆ ಯಾರೂ ಲೌಕಿಕವಾದ ಮತ್ತು ವೈದಿಕವಾದ ಪ್ರವೃತ್ತಿಯನ್ನು ಉಂಟುಮಾಡಲಾ ರರಾದುದರಿಂದ ಪೂರ್ಣಾನಂದನಾದುದರಿಂದಲೇ ಶ್ರೀಹರಿಯು ಆನಂದೋದ್ರೇಕದಿಂದ ಜಗಚ್ಚೇಷ್ಟಕನಾಗಿಯೂ ಪ್ರವರ್ತಕ ನಾಗಿಯೂ ಇದ್ದಾನೆ.

ಈ ಅಭಿಪ್ರಾಯವನ್ನೇ ವಿಮರ್ಶಾಪೂರ್ವಕವಾಗಿ ಅನುವ್ಯಾಖ್ಯಾನದಲ್ಲಿ ಶ್ರೀಮದಾಚಾರ್ಯರು ರಂಜಕವಾಗಿ ತಿಳಿಸಿದ್ದಾರೆ.

**"ಯತ್ಪ್ರವೃತ್ತಿಸ್ತತ್ರಾಣಾದಿಕಾ ಸುಖಾತ್ ।**
**ದುಃಖೋದ್ರೇಕಾದಿಕಾಚ್ಚೈವ ಸ್ವಕರ್ತೃತ್ವಕೋಽಸ್ಯ ಚ ॥**
**ಸರ್ವಾಶಕ್ತೇಃ ನ ದುಃಖಂ ಸ್ಯಾತ್, ಅತಃ ಕೇವಲಲೀಲಯಾಪ್ರವರ್ತಕಃ ॥**
**(ಅನುವ್ಯಾಖ್ಯಾನ)**

**ಅಭಿಪ್ರಾಯ** :- ಲೋಕದಲ್ಲಿ ಪ್ರವೃತ್ತಿಯು ನಾಲ್ಕು ಸಂದರ್ಭಗಳಲ್ಲಿ ಕಂಡುಬಂದಿದೆ. ಸುಖದ ಉದ್ರೇಕದಿಂದಲೂ, ದುಃಖದ ಉದ್ರೇಕದಿಂದಲೂ, ಸುಖದಲ್ಲಿನ ಆಸೆಯಿಂದಲೂ, ದುಃಖ ಮತ್ತು ಅದಕ್ಕೆ ಸಾಧನವಾದುವರ ಮೇಲಿನ ದ್ವೇಷದಿಂದಲೂ ಮಾನವನು ಪ್ರವೃತ್ತಿಸುತ್ತಾನೆ.

ಮೊದಲನೆಯದಾಗಿ ಸುಖೋದ್ರೇಕದಿಂದ ನರ್ತನದಲ್ಲೂ, ಗಾನದಲ್ಲೂ ಪ್ರವೃತ್ತಿಯೂ ಆನಂದಭರಿತನಿಗೆ (ಉನ್ಮತ್ತನಿಗೆ) ಕಂಡುಬಂದಿದೆ. ಅವನ ಪ್ರವೃತ್ತಿಯಲ್ಲಿ ಉದ್ರಿಕ್ತವಾದ ಸುಖವೇ ಕಾರಣವಾಗಿದೆ.

ದುಃಖದ ಉದ್ರೇಕದಿಂದಲೂ ಆತ್ಮಹತ್ಯಾದಿಗಳಲ್ಲಿ ಪ್ರವೃತ್ತಿಸುವವರಿರುತ್ತಾರೆ.(ಸುಖದ ಆಸೆಯಿಂದ), ಸುಖದಲ್ಲಿನ ರಾಗದಿಂದ ಭೋಜನಾದಿಗಳಲ್ಲಿ ಪ್ರವೃತ್ತಿಯು ಸುಪ್ರಸಿದ್ಧವೇ ಆಗಿದೆ. ದುಃಖದ ಮೇಲಿನ ದ್ವೇಷದಿಂದಲೇ ದುಃಖಕ್ಕೆ ಕಾರಣವಾದ ಕಂಟಕದ ನಿವೃತ್ತಿಯಲ್ಲಿ ಪ್ರವೃತ್ತಿಯ (ಮುಳ್ಳನ್ನ ತೆಗೆಯುವಿಕೆಯಲ್ಲಿ) ಪ್ರಸಿದ್ಧವೇ ಆಗಿದೆ.

ಲೋಕದಲ್ಲಿ ಚೇತನನಿಗೆ ಸಂಬಂಧಿಸಿದ ಪ್ರವೃತ್ತಿಯು ನಾಲ್ಕು ಬಗೆಯಾಗಿ ಕಂಡುಬಂದರೂ ಸ್ವ ಪರಮ ಚೇತನನಾದ ಪರಮಾತ್ಮನಿಗೆ ಜಗತ್ಸೃಷ್ಟ್ಯಾದಿ ವ್ಯಾಪಾರದಲ್ಲಿನ ಪ್ರವೃತ್ತಿಗೆ ದುಃಖೋದ್ರೇಕವಾಗಲಿ, ದುಃಖದ ನಿವೃತ್ತಿಯಾಗಲಿ, ಹಿಂದೆ ಇಲ್ಲದ ಸುಖದ ಪ್ರಾಪ್ತಿಗಾಗಿಯಾಗಲಿ ಕಾರಣವಾ ಆಗುವುದಿಲ್ಲ.

ಜಗತ್ತಿನ ಸೃಷ್ಟ್ಯಾದಿವ್ಯಾಪಾರವು ಕೇವಲ ಲೀಲಾರೂಪವಾಗಿರುವುದರಿಂದ ಆನಂದೋದ್ರೇಕದಿಂದಲೇ ಎಂದು ಹೇಳಬೇಕು. ಆದರೆ ಪರಮಾತ್ಮನು ಪೂರ್ಣಾನಂದವಾಗಿರುವುದರಿಂದಲೇ ಪ್ರವೃತ್ತಿಯುಳ್ಳವನಾಗಿದ್ದಾನೆಂಬುದು ನಿರ್ಗಳಿತ ವಾದ ಅಭಿಪ್ರಾಯ.

ವೇದಾನುಗುಣವಾಗಿರುವ ಅನುಮಾನದಿಂದಲೂ ಪರಮಾತ್ಮನಿಗೆ ಕೇವಲ ಸುಖರೂಪತ್ವವನ್ನು ಸಾಧಿಸಬಹುದಾಗಿದೆ.

ಈಶ್ವರನು - ಕೇವಲ ಪೂರ್ಣಸುಖರೂಪನಾಗಿದ್ದಾನೆ. ಪ್ರವೃತ್ತಿಕಾರಣತ್ರಯರಹಿತನಾಗಿ ಪ್ರವೃತ್ತಿಯುಳ್ಳವನಾಗಿರು ವದರಿಂದ ಎಂದು ಅನುಮಾನವು.

ಸಾಮಾನ್ಯವಾಗಿ ಕಾರಣವು ಕಾರ್ಯಾನುಗುಣವಾಗಿರಬೇಕಾಗಿರುವ ಪ್ರಯುಕ್ತ ಮಹಾಪ್ರವೃತ್ತಿಯುಳ್ಳ ಪರಮಾತ್ಮನು ಮಹಾನಂದನೇ ಆಗಿದ್ದಾನೆಂದು ಅಭಿಪ್ರಾಯ.

ಇಂದ್ರಚಂದ್ರಾದಿಶಬ್ದಗಳಂತೆ ಆಯಾ ಶಬ್ದಗಳ ಪ್ರವೃತ್ತಿ ನಿಮಿತ್ತಧರ್ಮವು ನಿರವಧಿಕವಾಗಿರುವುದರಿಂದ ಪರಮಮುಖ್ಯವೃತ್ತಿಯಿಂದ ಇಡೀ ವೇದರಾಶಿಯಲ್ಲಿ ಕಂಡುಬರುವ ಸಕಲ ದೇವತಾವಾಚಕ ಶಬ್ದಗಳೂ ಸಹ ಭಗವಂತನನ್ನೇ ಹೇಳುತ್ತಿವೆಯೆಂದು ''ಯೋ ದೇವಾನಾಂ ನಾಮಧಾ ಏಕ ಏವ '' ಎಂಬ ವೇದವಾಣಿಯು ತಿಳಿಸುತ್ತಲಿದೆ. ಅಂತಸ್ತ್ವಾಧಿ ಕರಣದ ಸಾರಾಂಶವೂ ಇದೇ ಆಗಿದೆ.

ಇದೇ ರೀತಿ ಆಕಾಶಬ್ದದಂತೆ ವೇದದಲ್ಲಿನ ಸಕಲ ಭೂತವಾಚಕಗಳಾದ ವಾಯುತೇಜಸ್ಸು, ಅಪ್ ಇತ್ಯಾದಿ ಶಬ್ದಗಳಿ ಲ್ಲದರಿಂದಲೂ ಪರಮಮುಖ್ಯ ವೃತ್ತಿಯಿಂದ ನಾರಾಯಣನೇಪ್ರತಿಪಾದ್ಯನಾಗಿದ್ದಾನೆ.

ಇಷ್ಟು ಮಾತ್ರವೇ ಅಲ್ಲ. ದೇಶದಿಂದಲೂ ಕಾಲದಿಂದಲೂ ಭೂತಾಕಾಶವು ಪರಿಮಿತವಾಗಿದೆ. ಅಂತಹ ಆಕಾಶಕ್ಕೆ ನಿರವಧಿಕವಾಗಿ ಅವಕಾಶದಾತೃತ್ವವೆಂಬ ಆಕಾಶಪದಪ್ರವೃತ್ತಿನಿಮಿತ್ತವಾದ ಧರ್ಮವು ಸರ್ವಥಾ ಕೂಡುವುದಿಲ್ಲ.

ಆದ್ದರಿಂದ ಪರಮಾತ್ಮನೇ ಆಕಾಶಾದಿ ಶಬ್ದವಾಚ್ಯನಾಗಿರುತ್ತಾನೆ. ಸಕಲ ಜಡ ಪದಾರ್ಥಗಳ ಸ್ವಭಾವವೂ ಪರಮಾತ್ಮನ ಅಧೀನವೇ ಆಗಿದೆ.

**''ನಭೋ ದದಾತಿ ಶ್ವಸತಾಂ ಮಾರ್ಗಂ ಯನ್ನಿಯಮಾದದಃ''**

ಎಂಬ ಭಾಗವತದ ಪ್ರಮಾಣವಾಕ್ಯವು ಜಡಾಕಾಶವು ಸಹ ಪರಮಾತ್ಮನ ನಿಯಮನಕ್ಕೆ ಒಳಪಟ್ಟಿರುವ ಅಂಶವನ್ನು ಹೇಳುತ್ತಲಿದೆ.

ಅದಃನಭಃ = ಈ ಆಕಾಶವು, ಯನ್ನಿಯಮಾತ್ = ಯಾವ ಪರಮಾತ್ಮನ ಪ್ರೇರಣೆಯಿಂದ, ಶ್ವಸತಾಂ = ಶ್ವಾಸೋ ಛ್ವಾಸವನ್ನು ಮಾಡುವ ಪ್ರಾಣಿಗಳಿಗೆ, ಮಾರ್ಗಂ = ಅವಕಾಶವನ್ನು , ದದಾತಿ = ಕೊಡುತ್ತದೆ.

ಪರಮಾತ್ಮನ ಪ್ರಸಾದದಿಂದ ಚೇತನವರ್ಗದಲ್ಲಿ ಚೇಷ್ಟಾದಿಗಳು ಉಂಟಾಗುವಂತೆ ಸಕಲ ಅಚೇತನ ವಸ್ತುಗಳ ಸ್ವಭಾವವು ಭಗವಂತನ ಅಧೀನವೇ ಆಗಿರುವ ವಿಶೇಷಾಂಶವನ್ನು ಆಕಾಶಾಧಿಕರಣದಲ್ಲಿ ಕಾಣಬಹುದಾಗಿದೆ.

ಪ್ರಾಣಶಬ್ದಪ್ರವೃತ್ತಿನಿಮಿತ್ತವಾದ ಜೀವನ ಚೇಷ್ಟಾಹೇತುತ್ವವೆಂಬ ಧರ್ಮವು ಪ್ರಧಾನವಾಗಿ, ಅನ್ವಯವ್ಯತಿರೇಕಗಳಿಂದ ಮುಖ್ಯಪ್ರಾಣದೇವರಲ್ಲಿ ಕಂಡುಬರುವುದಾದರೂ ಆ ಮುಖ್ಯಪ್ರಾಣನಿಗೂ ಪ್ರೇರಕನಾದ ಶ್ರೀಹರಿಯಲ್ಲಿಯೇ ಮುಖ್ಯವಾಗಿದೆಯೆಂದು ಶ್ರುತಿವಾಕ್ಯವು ಘೋಷಿಸುತ್ತಲಿದೆ.

"ನ ಪ್ರಾಣೇನ ನಾಪಾನೇನ ಮರ್ತ್ಯೋ ಜೀವತಿ ಕಶ್ಚನ ।
ಇತರೇಣತು ಜೀವಂತಿ ಯಸ್ಮಿನ್ನೇತಾವುಪಾಶ್ರಿತೌ ॥ ಇತಿಶ್ರುತಿಃ ॥

**ಅಭಿಪ್ರಾಯ** :- ಜಗತ್ತಿಗೆ ಜೀವನವನ್ನು ಕೊಡತಕ್ಕ ಪ್ರಾಣ ಮತ್ತು ಅಪಾನರೆಂಬ ಮುಖ್ಯಪ್ರಾಣನರೂಪಗಳು ಸ್ವತಂತ್ರರಾಗಿ ಮುಖ್ಯವಾಗಿ ಜಗತ್ತಿಗೆ ಜೀವನವನ್ನು ಉಂಟುಮಾಡಲಾರರು. ಆ ಎರಡು ರೂಪಗಳಿಗೂ ಸತ್ತಾಪ್ರದನಾದ ಶ್ರೀಹರಿಯಲ್ಲಿ ಆ ಎರಡು ರೂಪಗಳೂ ಆಶ್ರಿತರಾಗಿರುವರು. ಆ ಶ್ರೀಹರಿಯ ಪ್ರೇರಣೆಯಿಂದಲೇ ಜಗತ್ತಿಗೆ ಜೀವನವನ್ನು ಉಂಟುಮಾಡುವರು.

"ಸರ್ವಜೀವನಪ್ರದನಾದ ಮುಖ್ಯಪ್ರಾಣನಿಗೂ ಪ್ರೇರಕನಾದವನು ಶ್ರೀಹರಿಯು"

ಎಂದು ಪರಮಾಭಿಪ್ರಾಯ. ಆದ್ದರಿಂದ ಮುಖ್ಯವಾಗಿ ಪ್ರಾಣಶಬ್ದವಾಚ್ಯನಾದವನು ಭಗವಂತನೇ ಆಗಿರುವ ವಿಷಯವನ್ನು ಪ್ರಾಣಾಧಿಕರಣದಲ್ಲಿ ನಿರ್ಣಯಿಸಲಾಗಿದೆ.

ವೇದದಲ್ಲಿನ ಅನ್ಯತ್ರಪ್ರಸಿದ್ಧವಾದ ಸಕಲನಾಮಗಳೂ ಪರಮಮುಖ್ಯವೃತ್ತಿಯಿಂದ ಭಗವಂತನ ಗುಣಗಳನ್ನೇ ಹೇಳುತ್ತಲಿವೆಯೆಂಬ ಅಭಿಪ್ರಾಯದಿಂದ ಪ್ರಧಾನವಾಗಿ ಗಾಯತ್ರ್ಯಧಿಕರಣದಲ್ಲಿ ಗಾಯತ್ರೀ ಎಂಬ ಶಬ್ದದ ಸಮನ್ವಯವನ್ನು ತೋರಿಸಲಾಗಿದೆ.

ಮತ್ತು ಅನಾದಿನಿತ್ಯಗಳಾದ ಪದಾರ್ಥಗಳ ಸ್ವಭಾವವೂ ಸಹ ಪರಮಾತ್ಮನ ಅಧೀನವೆಂಬ ವಿಶೇಷಾಂಶವನ್ನು ಸಹ ಗಾಯತ್ರ್ಯಧಿಕರಣದಲ್ಲಿ ಸಮರ್ಥಿಸಲಾಗಿದೆ. ಮುಂದಿನ ಪ್ರಮಾಣ ವಾಕ್ಯದಿಂದಲೂ ಈ ವಿಷಯವು ತಿಳಿಯಲ್ಪಡುತ್ತದೆ.

"ದ್ರವ್ಯಂ ಕರ್ಮ ಚ ಕಾಲಶ್ಚ ಸ್ವಭಾವೋ ಜೀವ ಏವ ಚ ।
ಯದನುಗ್ರಹತಃ ಸಂತಿ ನ ಸಂತಿ ಯದುಪೇಕ್ಷಯಾ ॥ ಇತಿಸ್ಮೃತಿ ॥

**ಅರ್ಥ** :- ದ್ರವ್ಯಂ = ಪ್ರಕೃತ್ಯಾದಿದ್ರವ್ಯಗಳು, ಕರ್ಮ = ಧರ್ಮಾಧರ್ಮಗಳು, (ಪುಣ್ಯಪಾಪಗಳು) ಕಾಲವೂ, ಸ್ವಭಾವ = ಪದಾರ್ಥಸ್ವಭಾವಗಳ ಪರಿಣಾಮವು, ಜೀವ = ಅಭಿಮಾನಿಗಳು, ಇವಿಷ್ಟು ಯಾರ ಅನುಗ್ರಹ ಮಾತ್ರದಿಂದಲೇ ಇರುವುವೋ. ಯಾರ ಅನುಗ್ರಹವಿಲ್ಲವಾದರೆ ಇಲ್ಲವೋ ಅಂತಹ ಸಕಲ ಪದಾರ್ಥಗಳ ಉಪಾದಾನ ಕಾರಣಗಳ, ನಿಮಿತ್ತಕಾರಣಗಳ ಸತ್ತೆಯೂ ಸಹ ಅಂದರೆ ಇರುವಿಕೆಯೂ ಸಹ, ಸ್ವರೂಪಸತ್ತೆಯೂ ಸಹ ಪರಮೇಶ್ವರನ ಅಧೀನವೇ ಆಗಿರುತ್ತದೆಯೆಂದು ಶ್ರುತಿಯು ತಿಳಿಸುತ್ತಲಿದೆ.

ಬ್ರಹ್ಮಸೂತ್ರಗಳು ಮತ್ತು ಅದಕ್ಕೆ ವ್ಯಾಖ್ಯಾನರೂಪವಾಗಿರುವ ಶ್ರೀಮದಾನಂದತೀರ್ಥ ಭಗವತ್ಪಾದರಿಂದ ರಚಿತಗಳಾಗಿರುವ "ಬ್ರಹ್ಮಸೂತ್ರಭಾಷ್ಯ ಮತ್ತು ಯುಕ್ತಿತರ್ಕತತಿರೂಪವಾದ ಅನುವ್ಯಾಖ್ಯಾನಗಳ ವೈಶಿಷ್ಟ್ಯವನ್ನು ಹಿರಿಮೆಯನ್ನು" ಹಿಂದೆಯೇ ವಿವರಿಸಿರುತ್ತೇವೆ.

## ಸಾರಾಂಶ ನಿರೂಪಣೆ

ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿನ ಸಕಲಸೂತ್ರಗಳೂ ಸಿದ್ಧಾಂತಸೂತ್ರಗಳೇ ಆಗಿವೆ. ಮೊದಲನೆಯದಾದ ಜಿಜ್ಞಾಸಾಧಿಕರಣದಲ್ಲಿ ಗುಣಪರಿಪೂರ್ಣನಾದ ವಿಷ್ಣುವಿನ ಜಿಜ್ಞಾಸೆಯು (ಶ್ರವಣ, ಮನನ, ಧ್ಯಾನಗಳು) ಕರ್ತವ್ಯವೆಂದು ವಿಧಿಸಲ್ಪಟ್ಟಿದೆ. ಎರಡನೇ ಅಧಿಕರಣವಾದ ಜನ್ಮಾಧಿಕರಣದಲ್ಲಿ ಜಿಜ್ಞಾಸ್ಯನಾದ ಬ್ರಹ್ಮನ ಸ್ವರೂಪಲಕ್ಷಣವನ್ನು ಹೇಳಲಾಗಿದೆ.

ಮೂರನೆಯದಾದ ಶಾಸ್ತ್ರಯೋನಿತ್ವಾಧಿಕರಣದಲ್ಲಿ ಯಥಾಯೋಗ್ಯವಾಗಿ ಜಗಜ್ಜನ್ಮಾದಿಕಾರಣತ್ವವೆಂಬ ಸ್ವರೂಪ ಲಕ್ಷಣದಿಂದ ಲಕ್ಷಿತನಾದ ಪರಮಾತ್ಮನ ವಿಷಯದಲ್ಲಿ ಋಗಾದಿಸಚ್ಛಾಸ್ತ್ರಗಳೇ ಪ್ರಮಾಣಗಳೆಂದು ಸೂತ್ರಕಾರರು ನಿರ್ಣಯಿಸಿರುತ್ತಾರೆ.

ನಾಲ್ಕನೆಯದಾದ ಸಮನ್ವಯಾಧಿಕರಣದಲ್ಲಿ ವಿಮರ್ಶಿತಗಳಾದ ಉಪಕ್ರಮಾದಿ ತಾತ್ಪರ್ಯಲಿಂಗಗಳಿಂದ ಪರಮ ಮುಖ್ಯವೃತ್ತಿಯಿಂದ ಸಕಲವೇದವೇದ್ಯನಾದವನು ಶ್ರೀಹರಿಯೇ ಎಂಬುದನ್ನು ನಿರ್ಣಯಿಸಲಾಗಿದೆ.

"ಏಕೋರುದ್ರೋ ನ ದ್ವಿತೀಯಾಯ ತಸ್ಥೇ" ಎಂಬ ವೇದವಾಕ್ಯದಲ್ಲಿರುವ ರುದ್ರಪದವು ಮಹಾಪ್ರಳಯದಲ್ಲಿರುವ ವ್ಯಕ್ತಿಯ ವಿಷಯದಲ್ಲಿ ಕಂಡುಬರುವುದಾದರೂ, ಇದರಿಂದ ಆಪಾತತಃ ಕೈಲಾಸನಾಥನನ್ನು ಈ ಪದವು ಹೇಳುತ್ತಿರುವುದಾದರೂ, ಪಾರ್ವತೀಪತಿಯಾದ ಶಿವನಿಗೆ ಈ ವಾಕ್ಯವು ಸರ್ವೋತ್ತಮತ್ವವನ್ನಾಗಲಿ, ಜಗತ್ಕಾರಣತ್ವವನ್ನಾಗಲಿ ಹೇಳುತ್ತಿಲ್ಲ. ಆದರೆ ಶ್ರೀಹರಿಯ ಸರ್ವೋತ್ಕರ್ಷವನ್ನೇ ಪ್ರತಿಪಾದಿಸುತ್ತಲಿದೆ ಎಂಬ ಗಹನವಾದ ಆ ವೇದವಾಣಿಯ ಅರ್ಥವನ್ನು ಪ್ರಾಚೀನಾಚಾರ್ಯರು ವಿವರಿಸಿರುತ್ತಾರೆ. ಈ ಸಂದರ್ಭದಲ್ಲಿ ಕೆಲವು ಐತರೇಯ ವಾಕ್ಯಗಳ ಅರ್ಥವನ್ನು ವಿವರಿಸಿ ಅದರ ಅರ್ಥವಿಶೇಷಗಳನ್ನು ನಿರೂಪಿಸುತ್ತೇವೆ.

> **"ತಾವಾ ಏತಾಃ ಸರ್ವಾಃ ಋಚಃ, ಸರ್ವೇ ವೇದಾಃ, ಸರ್ವೇ ಘೋಷಾಃ,**
> **ಏಕೈವ ವ್ಯಾಹೃತಿಃ, ಪ್ರಾಣ ಏವ, ಪ್ರಾಣಋಚ ಇತ್ಯೇವ ವಿದ್ಯಾತ್ ಇತಿ**
> **ಹ್ಯಧೀಯತೆ. ಏಕೇ" ॥ ಇತಿ ॥**

**ಅರ್ಥ ಮತ್ತು ಅಭಿಪ್ರಾಯ** :- ಐತರೇಯೋಪನಿಷತ್ತಿನಲ್ಲಿರುವ ಕೆಲವು ವಾಕ್ಯಗಳ ಅರ್ಥವಿವರಣೆ (ಐತರೇಯ ಶ್ರುತಿ) ತಂದೇವಾಃ ಪ್ರಾಣಯಂತ (ಐತರೇಯ ೮-೨-೧-೫)

ತಂ = ಆ ನಾರಾಯಣನನ್ನೂ, ಪ್ರಧಾನವಾಯುದೇವನನ್ನೂ, ದೇವಾಃ = ದೇವತೆಗಳು, ಪ್ರಾಣಯಂತ = ಪ್ರಕರ್ಷೇಣ ಶಿಷ್ಯಪ್ರಶಿಷ್ಯಾದಿಷು ನೀತವಂತಃ, ಉಪದಿದಿಶುರಿತ್ಯರ್ಥಃ = ಶಿಷ್ಯಪ್ರಶಿಷ್ಯರಲ್ಲಿ ಉಪದೇಶ ಮಾಡಿದರು. ಇದರಿಂದ ಶ್ರೀಹರಿಗೆ ಸರ್ವದೇವೋಪಾಸ್ಯತ್ವವು ಉಕ್ತವಾಗಿದೆ.

ಮತ್ತೊಂದು ವಾಕ್ಯವು

**"ಸ ಏಷೋಽಸುಃ, ಸ ಏಷಪ್ರಾಣಃ, ಸ ಏಷಭೂತಿಃ" (ಐ. ಆ. ೨-೧-೮)**

ಸ ಏಷ ಭಗವಾನ್ = ಅಂತಹ ಈ ಭಗವಂತನು, ಅಸುಃ = ದುಷ್ಟನಿರಸನಾತ್, ಅಸುಃ, ಪ್ರಕೃಷ್ಟಾನಂದ ರೂಪತ್ವಾತ್ಪ್ರಾಣಃ, ದೇವಾನಾಂ ಭೂತಿ ಶಬ್ದಿತಜ್ಞಾನಾದ್ಯೈಶ್ವರ್ಯಪ್ರದತ್ವಾತ್, ಅಸುರಾಣಾಂ ಅಜ್ಞಾನಾದ್ಯ ನೈಶ್ವರ್ಯ ಹೇತುತ್ವಾಚ್ಚಭೂತ್ಯಭೂತಿ ಶಬ್ದವಾಚ್ಯ ಇತ್ಯರ್ಥಃ.

**ಅಭಿಪ್ರಾಯ** :- ಅಂತಹ ಭಗವಂತನು, ದುಷ್ಟಸಂಹಾರಕನೂ, ಪ್ರಕೃಷ್ಟವಾದ ಆನಂದರೂಪನೂ, ದೇವತೆಗಳಿಗೆ ಜ್ಞಾನಭಕ್ತಿವೈರಾಗ್ಯಾದಿ ಐಶ್ವರ್ಯಪ್ರದನೂ, ದೈತ್ಯರಿಗೆ ಅವರ ಸ್ವರೂಪಕ್ಕೆ ತಕ್ಕಂತೆ ಅಜ್ಞಾನ ದುಃಖಾದಿ ಅನೈಶ್ವರ್ಯ ಪ್ರದನೂ ಆಗಿರುತ್ತಾನೆ.

ಇಷ್ಟನ್ನು ಹೇಳಿದನಂತರ

**"ತಾವಾ ಏತಾಃ ಸರ್ವಾಋಚಃ ಸರ್ವೇವೇದಾಃ, ಸರ್ವೇಘೋಷಾಃ ಏಕೈವವ್ಯಾಹೃತಿಃ**
**ಪ್ರಾಣಏವ ಪ್ರಾಣಋಚ ಇತ್ಯೇವ ವಿದ್ಯಾತ್"**

ಎಂಬ ವೇದವಾಕ್ಯವು ಕಂಡುಬಂದಿದೆ.

**ಅಭಿಪ್ರಾಯ** :- ಈ ಮಂತ್ರದಿಂದ ಪ್ರಾಣಶಬ್ದವಾಚ್ಯನಾದ ಶ್ರೀಹರಿಗೆ ಸರ್ವವೇದ ಪ್ರತಿಪಾದ್ಯತ್ವವು ಉಕ್ತವಾಗಿದೆ.

ಅರ್ಥ **ಯಾಸ್ತಾ ಏತಾಃ ಸರ್ವಾಋಚಃ ತಾಸಾಂ ಏಕೈವ ವ್ಯಾಹೃತಿಃ-**
ವಿವರಣೆ :-

**"ಏಕಮೇವ ವ್ಯಾಹರಣೀಯಂ ಪ್ರತಿಪಾದ್ಯಮ್ ।**
**ತತ್ಕಿಂ ? ಪ್ರಾಣೋ ವಿಷ್ಣುರೇವ ।**
**ಕಿಂಚ ಯೇ ಸರ್ವೇವೇದಾಃ ತೇಷಾಮಪಿ ಪ್ರಾಣ ಏವ ಪ್ರತಿಪಾದ್ಯಃ ।**
**ಅಪಿಚ ಯೇ ಸಮುದ್ರಾದಿಘೋಷಾಃ ತೇಷಾಮಪಿ, ಕಿಮುವೇದಾನಾಮ್ ।**
**ತತ್ರಋಚಸ್ತುವಿಶೇಷತಃ ಇಂದ್ರಾದಿನಾಮವತೋ ವಿಶೇಷಗುಣಾನ್**
**ಅಭಿಧಾನನಾಮಪಿ ಪ್ರತಿಪಾದಯಂತೀತಿ ಪ್ರಾಣೇ ನಾರಾಯಣೇ ಶಕ್ತಿತಯಾ ಏವ**
**"ವಿದ್ಯಾತ್" ತತ್ಪ್ರತಿಪಾದಿತಾ ವಿವೇತಿ ಜಾನೀಯಾತ್" ಇತ್ಯರ್ಥಃ ।**
**ಏಕಮೇವ ವ್ಯಾಹರಣಂ ವಿಶೇಷಗುಣಪೂರ್ತಿವಾಚಕತ್ವಾದೇಕಪ್ರಕಾರಮೇವ**
**ನಾಮೇತ್ಯರ್ಥ ಉಕ್ತಃ ।**

**ತಾತ್ಪರ್ಯ** :- ತಾವಾ ಏತಾ ಎಂಬುದೂ ಸಹ ಐತರೇಯದ ಮತ್ತೊಂದು ವಾಕ್ಯವಾಗಿದೆ. ಇದರಲ್ಲಿ ಪ್ರಾಣನಿಗೇನೇ, ಪ್ರಾಣಶಬ್ದವಾಚ್ಯನಾದ ಪರಮಾತ್ಮನಿಗೆ, ಸರ್ವವೇದೋಕ್ತತ್ವವು ಹೇಳಲ್ಪಟ್ಟಿದೆ. ಯಾವ ಎಲ್ಲಾ ಋಕ್ಕುಗಳಿವೆಯೋ ಅವೆಲ್ಲಕ್ಕೂ ಕೂಡ ಸರ್ವೋತ್ತಮವಾದ ವಸ್ತುವು ಒಂದೇ ಪ್ರತಿಪಾದ್ಯವು. ಅದಾವುದೆಂದರೆ ಪ್ರಾಣಶಬ್ದದಿಂದ ಕರೆಯಲ್ಪಡತಕ್ಕ ವಿಷ್ಣುವೇನೇ. ಮತ್ತು ಯಾವ ಎಲ್ಲಾ ವೇದಗಳುಂಟೋ ಅವೆಲ್ಲಕ್ಕೂ ಪ್ರಾಣಶಬ್ದ ವಾಚ್ಯನಾದ ಶ್ರೀಹರಿಯೇ ಪರಮಮುಖ್ಯವೃತ್ತಿಯಿಂದ ಪ್ರತಿಪಾದ್ಯನು ಮತ್ತು ಯಾವ ಸಮುದ್ರಾದಿ ಘೋಷಗಳುಂಟೋ ಅವೆಲ್ಲಕ್ಕೂ ಪರಮಾತ್ಮನೇ ವಿಷಯನಾಗಿರುವಾಗ ಅದಕ್ಕೂ ಮಿಗಿಲಾದ ವೇದಗಳಿಗೆ ವೇದಗಳಿಗೆ ಪರಮಾತ್ಮನೇ ಪ್ರತಿಪಾದ್ಯನೆಂದು ಪ್ರತ್ಯೇಕವಾಗಿ ಹೇಳಬೇಕಾಗಿಯೇ ಇಲ್ಲ.

ಅದರಲ್ಲೂ ಇಂದ್ರಾದಿದೇವತಾವಾಚಕಗಳಾದ ಋಕ್ಕುಗಳು ನಿರವಧಿಕ ಪರಮೈಶ್ವರ್ಯಸಂಪನ್ನನಾದ ವಿಷ್ಣುವಿನ ಗುಣಗಳನ್ನೇ ಅಲ್ಪಜ್ಞರಿಗೂ ಕೂಡ ಪ್ರಕಾಶಪಡಿಸುತ್ತಲಿವೆ. ಆದಕಾರಣ ಅವೆಲ್ಲಕ್ಕೂ ಪ್ರಾಣನೇ (ಶ್ರೀಹರಿಯೇ) ಪ್ರತಿಪಾದ್ಯನೆಂದು ತಿಳಿಯಬೇಕು.

"ಏಕೋ ರುದ್ರೋ ನ ದ್ವಿತೀಯಾಯ ತಸ್ಥೆ" ಎಂಬ ವೇದವಾಕ್ಯಕ್ಕೆ ಎಂಟು ಅರ್ಥಗಳನ್ನು ಶ್ರೀವಾದಿರಾಜ ಗುರುವರೇಣ್ಯರು ವಿವರಿಸಿರುತ್ತಾರೆ.

"ಏಕಃ ರುದ್ರಾಣಾಂ ಮಧ್ಯೆ ಪ್ರಧಾನಃ ರುದ್ರಃ"
"ಸೋಽರೋದೀತ್ ಯದರೋದೀತ್ ತದ್ರುದ್ರಸ್ಯ ರುದ್ರತ್ವ" ಮಿತಿಶ್ರುತೇಃ
"ಯದರೋದೀಃ ಸುರಶ್ರೇಷ್ಠ ಸೋದ್ವೇಗ ಇವಬಾಲಕಃ ।
ಅತಸ್ತ್ವಾಮಭಿಧಾಸ್ಯಂತಿ ನಾಮ್ನಾರುದ್ರ ಇತಿಪ್ರಜಾಃ" ಇತಿಸ್ಮೃತಿಃ ।।

ರೋದನಾದ್ರುದ್ರಃ, ದ್ವಿತೀಯಾಯ = ಜಗತೇ "ಜಗದುದ್ದಿಶ್ಯೇತ್ಯರ್ಥಃ" "ನತಸ್ಥೆ"
ವೈರಾಗ್ಯಾಧಿಪತಿತ್ವಾತ್ ಜಗನ್ನಗಣಯತೀತ್ಯರ್ಥಃ ।।
ಜಗತಿನ ಗಣಯೇಯಂ ತ್ವತ್ಕರಾನುಗ್ರಹೇಣ "ಇತಿ ರುದ್ರೇಣೋಕ್ತತ್ವಾತ್" ।। ಇತಿ ।।

**ಅಭಿಪ್ರಾಯ** :- ಏಕಾದಶರುದ್ರರು ಎಂಬುದು ಗಣದೇವತೆಗಳ ಒಂದು ಗುಂಪು. ಇವರಲ್ಲಿ ಪಾರ್ವತೀಪತಿಯಾದ ಶಿವನು ಪ್ರಧಾನನು.೧.ಅಜೈಕಪಾತ್

೧. ಅಜೈಕಪಾತ್
೨. ಅಹಿರ್ಬುಧ್ನ್ಯಃ
೩. ವಿರೂಪಾಕ್ಷಃ
೪. ಸುರೇಶ್ವರಃ
೫. ಜಯಂತಃ
೬. ಬಹುರೂಪಃ
೭. ತ್ರ್ಯಂಬಕಃ
೮. ಅಪರಾಜಿತಃ
೯. ವೈವಸ್ವತಃ
೧೦. ಸಾವಿತ್ರಃ ಮತ್ತು
೧೧. ಹರಃ (ಶಿವ, ಪಾರ್ವತೀಪತಿಃ)

ಶಿವನು ಬ್ರಹ್ಮದೇವರ ಪುತ್ರನಾಗಿ ಹುಟ್ಟಿದಕೂಡಲೇ ರೋದನ ಮಾಡಿದುದರಿಂದ ಈತನಿಗೆ ರುದ್ರನೆಂಬ ಹೆಸರು ಪ್ರಸಿದ್ಧವಾಯಿತು.

ಸ್ಮೃತಿವಚನವು ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಲಿದೆ.

''ಸುರಶ್ರೇಷ್ಠನಾದ ಎಲೈ ಶಿವನೇ, ಯಾವ ಕಾರಣದಿಂದ ಆತಂಕಗೊಂಡ ಬಾಲಕನಂತೆ ನೀನು ರೋದನವನ್ನು ಮಾಡಿರುವೆಯೋ, ಅದರಿಂದ ನಿನ್ನನ್ನು ಹೆಸರಿನಿಂದಲೂ ರುದ್ರನೆಂದು ಹೇಳುತ್ತಾರೆ. ಇಂತಹ ರುದ್ರನಾದ ನೀನು ದ್ವಿತೀಯಾಯ = ಎರಡನೆಯದಾದ ಜಗತ್ತಿಗಾಗಿ ಅಂದರೆ ಜಗತ್ತನ್ನು ಉದ್ದೇಶಿಸಿ, ನ ತಸ್ಥೆ = ವೈರಾಗ್ಯಾಧಿಪತಿಯಾದುದರಿಂದ ಜಗತ್ತನ್ನು ಪರಿಗಣಿಸುವುದಿಲ್ಲ,

ವೈರಾಗ್ಯಭಾಗ್ಯಸಂಪನ್ನನಾದ ವ್ಯಕ್ತಿಯು, ನಿಸ್ಪೃಹನಾಗಿರುವುದರಿಂದ ಜಗತ್ತನ್ನು ತೃಣವನ್ನಾಗಿ ಪರಿಗಣಿಸುತ್ತಾನೆ. ''ನಿಸ್ಪೃಹಸ್ಯ ತೃಣಂ ಜಗತ್'' ನಾಣ್ನುಡಿಯೂ ಇರುತ್ತದೆ.

ಇದರಿಂದ ಪಾರ್ವತೀಪತಿಯಾದ ಶಿವನು ಮಹಾವೈರಾಗ್ಯಶಾಲಿಯೆಂದೂ ಶಿವನ ಪ್ರಶಂಸಾಪರವಾದ ಅರ್ಥವು ಹೇಳಿದಂತಾಗಿದೆ.

ಮತ್ತು ಇಂತಹ ವೈರಾಗ್ಯದಿಂದ ಕೂಡಿರುವ ಪ್ರಯುಕ್ತ ಶಿವನು ಸರ್ವೋತ್ತಮನಾದ ನಾರಾಯಣನ ತಪಸ್ಸಿನಲ್ಲಿ ಸ್ಥಿರನಾಗಿದ್ದಾನೆಂಬ ಅರ್ಥವೂ ಸಹ ಇದೇ ವಾಕ್ಯದಿಂದ ಉಕ್ತವಾಗಿದೆ. ನಿನ್ನ ಅನುಗ್ರಹದಿಂದ ರುದ್ರನಾದ ನಾನು ಅಸಾರವಾದ ಈ ಜಗತ್ತನ್ನು ಪರಿಗಣಿಸುವುದಿಲ್ಲವೆಂದು ಶ್ರೀವಿಷ್ಣುವನ್ನು ಕುರಿತು ರುದ್ರನೇ ''ಜಗತಿ ನ ಗಣಯೇಯಂ ತ್ವತ್ಪರಾನುಗ್ರಹೇಣ'' ಎಂದು ಹೇಳಿಕೊಂಡಿರುತ್ತಾನೆ.

> **''ಕಿಂತು ರುದ್ರಃ ಸರ್ವೇಭ್ಯಃ ಪ್ರಥಮಂ ನಾರಾಯಣಮುದ್ದಿಶ್ಯೈವ, ತಸ್ಥೇ = ತಪಸಿ ಸ್ಥಿರೋಽಭವತ್''।**
> **''ಯಮುದ್ದಿಶ್ಯ ಸದಾ ಮಹೇಶೋಽಪಿ, ದಿಗಂಬರಃ ಜಟೀ ಭಸ್ಮಾನುಲಿಪ್ತಾಂಗಃ ತಪಸ್ಯೇ ನಿಕ್ಷತೇ ಚಕ್ಷುಃ'' ''ಇತಿ ವಾಸುದೇವ ಸಹಸ್ರನಾಮ್ನೋಪಕ್ರಮೇ ಪಾರ್ವತ್ಯೈವೋಕ್ತತ್ವಾತ್''॥ ಇತಿ॥**

**ಅಭಿಪ್ರಾಯ** :- ವಾಸುದೇವಸಹಸ್ರನಾಮದ ಮೊದಲ ಭಾಗದಲ್ಲಿ ಪಾರ್ವತಿಯು, ವಿಷ್ಣುವನ್ನು ಕುರಿತು ರುದ್ರದೇವನ ತಪಸ್ಸಿನ ಚರ್ಯೆಯನ್ನು ವರ್ಣಿಸಿದ್ದಾಳೆ.

**ಅಭಿಪ್ರಾಯ** :- ಯಾವ ವಿಷ್ಣುವನ್ನು ಕುರಿತು ರುದ್ರನು ತಪಸ್ಸು ಮಾಡುತ್ತಿದ್ದಾನೆಯೋ ತಪಸ್ಸನ್ನು ಮಾಡುವಾಗ, ಮಹೇಶನಾದಾಗ್ಯೂ ಸಹ ರುದ್ರನು, ವಿರಕ್ತಿಶಾಲಿಯಾಗಿರುವುದರಿಂದ ದಿಗಂಬರನಾಗಿದ್ದಾನೆ. ಜಟಾಧಾರಿಯಾಗಿದ್ದಾನೆ, ಶರೀರಕ್ಕೆಲ್ಲಾ ಭಸ್ಮವನ್ನು ಲೇಪಿಸಿದ್ದಾನೆ. ಘೋರವಾದ ತಪಸ್ಸಿನಲ್ಲಿರುವವನಾಗಿ ಊರ್ಧ್ವ ದೃಷ್ಟಿಗೆ ಗೋಚರನಾಗಿರುವನು'' ಎಂದು ಸಾಕ್ಷಾತ್ ಪಾರ್ವತೀದೇವಿಯು ತನ್ನ ಪತಿಯ ವೈರಾಗ್ಯವನ್ನೂ ಅವನ ತಪಸ್ಸಿನ ಆಚರಣೆಯನ್ನು ವಿವರಿಸುತ್ತಾಳೆ.

ಇದರಿಂದ ಶ್ರೀಹರಿಗೆ ಶಿವನಿಗಿಂತಲೂ ಉತ್ತಮತ್ವವೂ ಸರ್ವೋತ್ತಮತ್ವವೂ ಉಕ್ತವಾದಂತಾಯಿತು. ರುದ್ರನೇ ಸರ್ವೋತ್ತಮನೆಂದು ವಾದಿಸುವ ಶೈವಮತಾನುಯಾಯಿಗಳಾದ ವಾದಿಗಳಿಗೆ ವಾಸುದೇವ ಸಹಸ್ರನಾಮದಲ್ಲಿನ ಪಾರ್ವತೀ ವಾಕ್ಯವೇ ತಕ್ಕ ಉತ್ತರವನ್ನು ಕೊಡುತ್ತಲಿದೆ.

ಎರಡನೇ ಅರ್ಥವು ಈ ರೀತಿ ಇದೆ.

ರುದ್ರಃ ಹರಿವತ್ ದೇಹೇಂದ್ರಿಯಾದಿನಾ, ಏಕಃ = ಏಕಿಭೂತೋ ನ, ಕಿಂತು ದ್ವಿತೀಯಾಯ = ಪ್ರಾಕೃತ ದೇಹ ಯ ಸ್ಮೈ. ತತ್ರಾಪಿ ನ ಪ್ರಥಮಾಯ ಮಹತ್ತತ್ತ್ವಾಭಿಮಾನಿದೇಹಾಯ, ಕಿಂತು ಅಹಂಕಾರಾಖ್ಯ ದ್ವಿತೀಯದೇಹಾಯ ಇತಿವಾ ಅರ್ಥಃ.

**ಅಭಿಪ್ರಾಯ** :- "ಏಕೋರುದ್ರೋ ನ ದ್ವಿತೀಯಾಯತಸ್ಥೆ" ಎಂಬ ಶ್ರುತಿವಾಕ್ಯಕ್ಕೆ ಸ್ವಾರಸ್ಯಕರವಾದ ಮತ್ತೊಂದು ಅರ್ಥವೂ ಇದೆ. ಇಲ್ಲಿ ಹರಿವತ್ ಎಂದು ಹೇಳಿರುವುದರಿಂದ ಶ್ರೀಹರಿಯ ಸ್ವರೂಪವನ್ನು ತಿಳಿಸುವ ವೇದವಾಕ್ಯಗಳನ್ನು ಅರ್ಥಸಹಿತವಾಗಿ ಬರೆಯಲಾಗಿದೆ.

ಸರ್ವೋತ್ತಮನಾದ ಶ್ರೀಹರಿಗೆ ಅಪ್ರಾಕೃತವಾದ ಜ್ಞಾನಾನಂದಮಯವಾದ ಭವ್ಯವಾದ ದೇಹವಿದೆ. ಶ್ರೀಹರಿಯ ತಲೆ, ದಾಡುಗಳು, ದೇಹ, ಕೈ, ಕಾಲು ಇವೆಲ್ಲವೂ ಅಪ್ರಾಕೃತವಾದವುಗಳು, ಜ್ಞಾನಾನಂದಮಯವಾದವುಗಳು, ಪರಮಾತ್ಮನಿಗೂ, ಅವನ ದೇಹಕ್ಕೂ, ಅವನ ಅವಯವಗಳಿಗೂ ಅವನ ಜ್ಞಾನಾನಂದಾದಿ ಧರ್ಮಗಳಿಗೂ, ಜಗತ್ತಿನ ಸೃಷ್ಟಿ ಮೊದಲಾದ ಅವನ ಕ್ರಿಯೆಗಳಿಗೂ ಭೇದವಿಲ್ಲ. ನಿತ್ಯವಾದವುಗಳು, ಅವುಗಳಿಗೂ ಪರಮಾತ್ಮನಿಗೂ ಭೇದವಿಲ್ಲ. ಅವುಗಳಲ್ಲಿ ಶಕ್ತಾವ್ಯಕ್ತವಾ ಎಂಬ ವಿಶೇಷಗಳಿವೆ. ಇದರ ರಹಸ್ಯವನ್ನು ಬ್ರಹ್ಮಸೂತ್ರಗಳ ಮೊದಲನೆಯ ಅಧ್ಯಾಯದ ಎರಡನೇ ಪಾದವಾದ ಅನ್ಯತ್ರ ಪ್ರಸಿದ್ಧವಾದ ಲಿಂಗಪಾದದ ಎರಡನೇ ಅಧಿಕರಣವಾದ ಅತ್ತೃತ್ವಾಧಿಕರಣದ ನ್ಯಾಯಸುಧೆಯಲ್ಲಿ ತಿಳಿಯಬೇಕಾಗಿದೆ.

ಲೇಖನ ವಿಸ್ತಾರ ಭಯದಿಂದ ಅದರ ವಿವರಣೆಯನ್ನು ಬರೆದಿಲ್ಲ.

ಓಂ ಅತ ಚ ತನ್ಮಾತ್ರಮ್ (೩-೨-೧೬) ಎಂಬ ಬ್ರಹ್ಮಸೂತ್ರದಲ್ಲಿ ಶ್ರೀವೇದವ್ಯಾಸರು ಪರಮಾತ್ಮನ ದೇಹಾದಿಗಳೆಲ್ಲವೂ ಅಪ್ರಾಕೃತ ಜ್ಞಾನಾನಂದಾತ್ಮಕಗಳೆಂದು ನಿರ್ಣಯಿಸಿರುತ್ತಾರೆ.

"ಏಕಾತ್ಮಪ್ರತ್ಯಯಸಾರಂ (ಮಾಂ. ೨-೭) ಎಂಬ ಶ್ರುತಿಯು ಪರಮಾತ್ಮನು ಪೂರ್ಣಜ್ಞಾನಸ್ವರೂಪನೆಂದು ಹೇಳುತ್ತಲಿದೆ.

**ಏಕಃ = [illegible]**

**ಪ್ರತ್ಯಯಃ = ಜ್ಞಾನಂ, ಏಕಾತ್ಮ್ಯಂ ಪ್ರತ್ಯಯಶ್ಚೇತಿ ಉಭಯಂ ಸಾರಃ ಸ್ವರೂಪಂ ಯಸ್ಯ ತದೇಕಾತ್ಮ್ಯ ಪ್ರತ್ಯಯಸಾರಂ" ಎಂದು ಶ್ರುತ್ಯರ್ಥವು.**

**ಮಾಂಡೂಕಭಾಷ್ಯದಲ್ಲಿ**

> **ಏಕಃ ಪ್ರಧಾನ ಉದ್ದಿಷ್ಟಃ ಆತ್ಮಾಪೂರ್ಣತ್ವತಃ ಶ್ರುತಃ ।**
> **ತದೇವಾಸ್ಯ ಸ್ವರೂಪಂ ಯದೈಕಾತ್ಮ್ಯಂ ತೇನ ಕೀರ್ತಿತಮ್ ।।**
> **ಪ್ರತ್ಯಯೋ ಜ್ಞಾನರೂಪತ್ವಾತ್ ಸಾರ ಆನಂದರೂಪಕಃ ।। ಇತಿ ।।**

ಎಂದು ಆನಂದರೂಪತ್ವವನ್ನು ಸಾರಶಬ್ದಾರ್ಥವಾಗಿ ವ್ಯಾಖ್ಯಾನಿಸಲಾಗಿದೆ. ಸಾರಶಬ್ದಕ್ಕೆ ಸ್ವರೂಪವೆಂಬ ಅರ್ಥವನ್ನು ಹೇಳಿಲ್ಲ.

ಹಾಗೆಯೇ ವ್ಯಾಸತೀರ್ಥೀಯವ್ಯಾಖ್ಯಾನದಲ್ಲೂ ಸ್ವಾರ್ಥೇ ಷ್ಯಞ್ ಎಂದು ಹೇಳಿ ಏಕಾತ್ಮ್ಯಸ್ಯ ಬ್ರಹ್ಮಾಭೇದಂ ಚಾಶ್ರಿತ್ಯ ಏಕಾತ್ಮ್ಯಸ್ಯಾಸೌಪ್ರತ್ಯಯಶ್ಚಾಸೌ ಸಾರಶ್ಚೇತಿ ಎಂದು ವಿಗ್ರಹವನ್ನು ತೋರಿಸಿರುತ್ತಾರೆ. ಆದಾಗ್ಯೂ "ಆನಂದಮಾತ್ಮಮ್" ಎಂಬ ಮುಂದಿನ ಶ್ರುತಿಗೆ ತಕ್ಕಂತೆ ವ್ಯಾಖ್ಯಾನ ಮಾಡಬೇಕಾಗಿರುವುದರಿಂದ ವ್ಯಾಖ್ಯಾನಕಾರರು ಸಾರಶಬ್ದವನ್ನು ಸ್ವರೂಪ ಎಂಬ ಅರ್ಥವುಳ್ಳದುದನ್ನಾಗಿ ವ್ಯಾಖ್ಯಾನ ಮಾಡಿರುವರು.

ಚತುರ್ವೇದಶಿಖಾವಚನವೂ ಸಹ ಪರಮಾತ್ಮನ ಜ್ಞಾನಾನಂದಾದಿರೂಪತ್ವವನ್ನು ತಿಳಿಸುತ್ತಲಿದೆ.

**"ಆನಂದರೂಪಮಜರಂ ಪುರಾಣಂ ಏಕಂ ಸಂತಂ ಬಹುಧಾ ದೃಶ್ಯಮಾನಮ್ ।**
**ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾಸ್ತೇಷಾಂ ಸುಖಂ ಶಾಶ್ವತಂನೇತರೇಷಾಮ್ ॥**
**(ಇತಿ ಚತುರ್ವೇದಶಿಖಾಯಾಮ್ ॥ )**

**ಅರ್ಥ ಮತ್ತು ಅಭಿಪ್ರಾಯ** :- ಪರಮಾತ್ಮನು = ಆನಂದೈಕಸ್ವರೂಪನು, ಪ್ರಾಕೃತಸ್ವರೂಪನಲ್ಲ.

**ವಿಶಕ್ಕೆಂದರೆ** :- ಅಜರಂ = ಸದಾದೃಢಂ = ಜರಾದಿರಹಿತನು, ಪುರಾಣಂ = ಅನಾದಿಭೂತನು, ಏಕಂ = ಸರ್ವೋತ್ಕೃಷ್ಟನು, ಸಂತಂ = ನಿರ್ದೋಷನು, ಒಬ್ಬನೇ ಆದಾಗ್ಯೂ, ಬಹುಧಾ = ವಿಶ್ವಾದ್ಯಾತ್ಮನಾ, ಮತ್ಸ್ಯಾದಿ ರೂಪಗಳಿಂದ, ಅನೇಕ ಬಗೆಯಾಗಿ ಕಂಡುಬರತಕ್ಕವನು, ಇಂತಹ ಪರಮಾತ್ಮನನ್ನು, ಆತ್ಮಸ್ಥಂ = ತಮ್ಮ ದೇಹದಲ್ಲಿರುವವನ್ನು, ಯೇ ಧೀರಾಃ = ಯಾವ ಜ್ಞಾನಿಗಳು, ಅನುಪಶ್ಯಂತಿ = ಸಾಕ್ಷಾತ್ಕರಿಸುತ್ತಾರೆಯೋ, ತೇಷಾಂ = ಅವರಿಗೆ, ಶಾಶ್ವತಂ ಸುಖಂ = ಮೋಕ್ಷವು ಆಗುತ್ತದೆ, ನೇತರೇಷಾಂ = ಅವನನ್ನು ಸಾಕ್ಷಾತ್ಕರಿಸದಿರುವವರಿಗೆ ಮೋಕ್ಷವಾಗುವುದಿಲ್ಲ.

**ತಾತ್ಪರ್ಯ** :- ಸರ್ವೋತ್ತಮನಾದ ಶ್ರೀಹರಿಯು ಅಪ್ರಾಕೃತವಾದ ಜ್ಞಾನಾನಂದಾತ್ಮಕಸ್ವರೂಪನಾಗಿದ್ದಾನೆ. ಅನಾದಿನಿತ್ಯನಾಗಿರುತ್ತಾನೆ. ಅವನು ಒಬ್ಬನೇ ಆದಾಗ್ಯೂ ವಿಶ್ವಾದಿ, ಮತ್ಸ್ಯಾದಿ ನಾನಾರೂಪಗಳನ್ನುಳ್ಳವನಾಗಿರುತ್ತಾನೆ. ಇಂತಹ ಪರಮಾತ್ಮನನ್ನು ಬಿಂಬರೂಪಿಯಾಗಿರುವವನ್ನು ಯಾವ ಜ್ಞಾನಿಗಳು ತಮ್ಮ ಹೃದಯಾಕಾಶದಲ್ಲಿ ಸಾಕ್ಷಾತ್ಕರಿಸುತ್ತಾರೆಯೋ ಅಂತಹ ಅಪರೋಕ್ಷಜ್ಞಾನಿಗಳಿಗೆ ಮೋಕ್ಷವಾಗುತ್ತದೆ. ಇತರರಿಗೆ ಆಗುವುದಿಲ್ಲವೆಂದು ಶ್ರುತಿವಾಕ್ಯದ ಅಭಿಪ್ರಾಯ.

ಇದೇ ವಿಚಾರವಾಗಿ ಹಿಂದೆಯೇ ಈ ಶ್ರುತ್ಯರ್ಥವನ್ನು ಬರೆದಿರುವುದಾದರೂ ಈಗ ಪ್ರಕೃತವಾದ ರುದ್ರದೇವರ ವಿಚಾರವಾಗಿ ಪ್ರಸಕ್ತಿಯು ಇರುವುದರಿಂದ ಶ್ರೀಹರಿಯಂತೆ ರುದ್ರದೇವರಿಗೆ ಕೇವಲ ಅಪ್ರಾಕೃತವಾದ ದೇಹವಿಲ್ಲವೆಂಬ ವಿಷಯಕ್ಕೆ ಸಂಬಂಧಿಸಿದಂತೆ ಶ್ರೀಹರಿಯ ಸ್ವರೂಪವನ್ನು ಮತ್ತೆ ಜ್ಞಾಪಿಸುವುದಕ್ಕೋಸ್ಕರ ಬರೆಯಲಾಗಿದೆ. ಎರಡನೆಯದಾದ ಅರ್ಥದಲ್ಲಿ ರುದ್ರನು ದೇಹೇಂದ್ರಿಯಾದಿಗಳಿಂದ ಶ್ರೀಹರಿಯಂತೆ ಅಭಿನ್ನನಲ್ಲ.

ಅಹಂಕಾರಾಖ್ಯವಾದ ಪ್ರಾಕೃತವಾದ ದೇಹವುಳ್ಳವನಾಗಿದ್ದಾನೆ. ಪ್ರಾಕೃತ ದೇಹದಲ್ಲೂ ಸಹ (ಅದರಲ್ಲಿಯೂ ಸಹ) ಮಹತ್ತತ್ವವೆಂಬ ಮೊದಲನೆಯ ಪ್ರಾಕೃತದೇಹವುಳ್ಳವನಲ್ಲ. ಅಂತಹ ದೇಹವು ದೇವೋತ್ತಮರಾದ ಚತುರ್ಮುಖ ಬ್ರಹ್ಮನಿಗೆ ಇದೆಯೇ ಹೊರತು ರುದ್ರದೇವನಿಗೆ ಇರುವುದಿಲ್ಲ. ಎರಡನೆಯದಾದ ಪ್ರಾಕೃತವಾದ ಅಹಂಕಾರತತ್ವವೆಂಬ ದೇಹವುಳ್ಳವ ನಾಗಿರುತ್ತಾನೆಂದು ಅಭಿಪ್ರಾಯ.

ಮೂರನೆಯ ಅರ್ಥವು ಈ ರೀತಿ ಇದೆ.

ರುದ್ರಃ = ರುದ್ರನು, ಏಕಃ ನ = ಗರುಡನಂತೆ ಒಂದೇ ರೂಪದಿಂದ ಕೂಡಿದವನಾಗಿಲ್ಲ. ರುದ್ರಃ ಗರುಡಷ್ ಏಕಪದವನ, ಕಿಂತುಕಲ್ಪಾಂತರೇ, ದ್ವಿತೀಯಾಯ = ಶೇಷಾಖ್ಯರೂಪಾಯ ತಸ್ಮೈ.

**ಅಭಿಪ್ರಾಯ** :- ರುದ್ರನು ಗರುಡನಂತಲ್ಲ. ರುದ್ರಪದವೀ ಆದನಂತರದಲ್ಲಿ ರುದ್ರನಿಗೆ ಶೇಷಪದವೀ ಬಂದು ಮುಕ್ತಿಯಾಗುತ್ತದೆ ಎಂದು ಶ್ರುತಿವಾಕ್ಯದ ಅಭಿಪ್ರಾಯ.

ನಾಲ್ಕನೇ ಅರ್ಥ ಮತ್ತು ಅಭಿಪ್ರಾಯ :-

ಕಿಂ ಚ ರುದ್ರಃ ಚತುರ್ಮುಖವತ್, ಅವತಾರಶೂನ್ಯತ್ವಾತ್, ಏಕಾಕೀ ನ, ಕಿಂತು ದ್ವಿತೀಯಾಯ = ಶುಕ, ದುರ್ವಾಸಾಶ್ವತ್ಥಾಮಾದಿರೂಪಾಯ, ತಸ್ಮೈ।।

**ಅಭಿಪ್ರಾಯ** :- ರುದ್ರಃ = ರುದ್ರನು, ಚತುರ್ಮುಖವತ್ = ಚತುರ್ಮುಖ ಬ್ರಹ್ಮನಂತೆ, ಚತುರ್ಮುಖ ಬ್ರಹ್ಮನಿಗೆ ಅವತಾರವೇ ಇಲ್ಲದಿರುವುದರಿಂದ ಹೇಗೆ ಏಕಾಕಿಯಾಗಿದ್ದಾನೆಯೋ ಹಾಗೆ ಏಕಾಕಿಯಾಗಿಲ್ಲ. ಆದರೆ, ರುದ್ರನು, ಶುಕಾಚಾರ್ಯನಾಗಿಯೂ, ದುರ್ವಾಸ ಮಹರ್ಷಿಯಾಗಿಯೂ, ಅಶ್ವತ್ಥಾಮಾಚಾರ್ಯರಾಗಿಯೂ ಅವತಾರಗಳನ್ನು ಉಳ್ಳವನಾಗಿದ್ದಾನೆಂದು ತಾತ್ಪರ್ಯ.

ಐದನೇ ಅರ್ಥವು :

ಏಕೋರುದ್ರಃ ರೋದನಾದ್ರುದ್ರಃ ಭಸ್ಮಾಸುರಕೃತಸ್ವದ್ರೋಗನಿವಾರಣಸಮರ್ಥೋನಾಭೂತ್, ಅತಃ ದ್ವಿತೀಯಾಯ, ಸ್ವರಕ್ಷಕಂ, ಸಕಲಜದ್ಭಿನ್ನತ್ವಾತ್, ದ್ವಿತೀಯಂ, ನಾರಾಯಣಮುದ್ದಿಶ್ಯ ತಸ್ಮೈ = ವೈಕುಂಠಂ ಪ್ರತಿ ಪ್ರತಸ್ಥೆ.

**ಅಭಿಪ್ರಾಯ** :- ಭಸ್ಮಾಸುರನ ತಪಸ್ಸಿಗೆ ಮೆಚ್ಚಿದ ರುದ್ರನು ಆತನಿಗೆ ತನ್ನ ಕೈಯನ್ನು ಯಾರ ತಲೆಯಮೇಲಿಡುವನೋ ಅವನು ಭಸ್ಮನಾಗುವನು ಎಂಬ ವರಪ್ರಸತ್ತನು. ಕ್ಷುದ್ರನಾದ ಆ ಅಸುರನು ಆ ವರದ ಪರೀಕ್ಷೆಗಾಗಿ ರುದ್ರನ ತಲೆಯಮೇಲೇನೇ ತನ್ನ ಕೈಯನ್ನು ಇಡಲು ಹಾಡಿಸಿದಾಗ ಅದರಿಂದ ಬಿಡುಗಡೆ ಪಡೆಯಲು ಎಲ್ಲಿ ಹೋದರೂ ಯಾರು ರಕ್ಷಕರಾಗಲಿಲ್ಲ. ಕಡೆಗೆ ವಿಷ್ಣುವನ್ನೇ ಮರೆಹೊಕ್ಕನು ಎಂದು ಅಭಿಪ್ರಾಯ.

ಆರನೇ ಅರ್ಥವು :

**ಏಕಸ್ತುರುದ್ರಸ್ತಥಾ ನ. ಕಿಂತುದ್ವಿತೀಯಾಯ ದ್ವಿತೀಯಕೋಽಷ್ಟಪಕಂಡಾಯ ತಸ್ಮೈ ।**
**ದ್ವಿತೀಯಕೋಽಷ್ಟಪಕಂಡೇ ಅನನ್ತೋಕೋಽಸ್ಮೀತಿ ಉದ್ದಿಶ್ಯತಸ್ಥೆ।**

**ಅಭಿಪ್ರಾಯ** :-ರುದ್ರದೇವನು ನಾನೇ ಎಲ್ಲಕ್ಕೂ ಪ್ರಧಾನನು, ನಾನೊಬ್ಬನೇ ಇರುವವನೆಂದು ತಿಳಿದಿಲ್ಲ. ಮತ್ತೇನೆಂದರೆ ಪರಮಾತ್ಮನಿಗಿಂತಲೂ ಭಿನ್ನವಾದ ಅಸ್ವತಂತ್ರವಾದ ಪ್ರಪಂಚದಲ್ಲಿ ನಾನೂ ಒಬ್ಬನಾಗಿದ್ದೇನೆಂದು ತಿಳಿದಿದ್ದಾನೆ.

ಏಳನೇ ಅರ್ಥ :-**ಏಕಃ ಏವ ರುದ್ರಃ ದ್ವಿತೀಯರೂಪಾಯ ನ ತಸ್ಥೇ ।**

**ತಾತ್ಪರ್ಯ** :- ದೇವತೆಗಳಲ್ಲಿ ರುದ್ರನು ಮಾತ್ರವೇ ಎರಡನೆಯದಾದ ರೂಪಕ್ಕೆ ಇರತಕ್ಕವನಲ್ಲ. ರುದ್ರನಿಗಿಂತಲೂ ಬೇರೆಯವರೂ ಸಹ ತಮ್ಮ ಪದವಿಗಿಂತಲೂ ಮತ್ತೊಂದು ಪದವಿಗೆ ಅರ್ಹರಾಗಿ ಆ ಪದವಿಯಿಂದ ಮುಂದೆ ಮೋಕ್ಷ ವನ್ನು ಪಡೆಯತಕ್ಕವರಿರುತ್ತಾರೆ.

ಉದಾಹರಣೆ :- ರುದ್ರನಿಗೆ ಶೇಷಪದವೀ ಬಂದನಂತರ ಶೇಷಪದವಿಯಿಂದ ಮೋಕ್ಷವಿರುವಂತೆ ಪ್ರಧಾನ ವಾಯು ದೇವರಿಗೆ ಮುಂದೆ ಚತುರ್ಮುಖಬ್ರಹ್ಮ ಪದವೀ ಬಂದು ಅನಂತರದಲ್ಲಿ ಮೋಕ್ಷವೆಂಬುದು ಸುಪ್ರಸಿದ್ಧವೇ ಆಗಿದೆ.

ಎಂಟನೇ ಅರ್ಥ :- ಇದು ಕೇವಲ ಪರಮಾತ್ಮನಿಗೆ ಮಾತ್ರ ಸಂಬಂಧಿಸಿದ ಅರ್ಥವಾಗಿದೆ.

ಏಕಃ = ಸರ್ವೋತ್ತಮೋ ನಾರಾಯಣಃ, ನ ದ್ವಿತೀಯಾಯ = ಪ್ರಾಥಮಿಕ್ಯಾಯ, ಭಾವಪ್ರಧಾನೋ
ನಿರ್ದೇಶಃ ತಸ್ಥೌ ।

**ತಾತ್ಪರ್ಯ** :- ಸರ್ವೋತ್ತಮನಾದ ಶ್ರೀಮನ್ನಾರಾಯಣನು ಎಲ್ಲರಿಗಿಂತಲೂ ಪ್ರಪ್ರಧಾನನಾಗಿ ಮಹಾಪ್ರಳಯದಲ್ಲೂ ಮೊಟ್ಟಮೊದಲನೆಯವನಾಗಿ ಸರ್ವತಂತ್ರ ಸ್ವತಂತ್ರನಾಗಿರುತ್ತಾನೆ.

ಎಂಬಿವೇ ಮೊದಲಾದ ಸಕಲಸಜ್ಜನಮನೋರಂಜಕವಾದ ಅರ್ಥಗಳು ಈ ಶ್ರುತಿಗೆ ಇರುವುದರಿಂದ, ಇದನ್ನು ಉದಾಹರಿಸಿ ಶಿವಸರ್ವೋತ್ತಮತ್ವವನ್ನು ಇತರ ವಾದಿಗಳು ಸಾಧಿಸಲು ಸಾಧ್ಯವಿಲ್ಲ.

ಸರ್ವೋತ್ತಮನಾದ ಶ್ರೀಮನ್ನಾರಾಯಣನ ಸರ್ವೋತ್ತಮತ್ವವನ್ನು, ಇತರ ದೇವತೆಗಳ ಇತಿಮಿತಿಯನ್ನು ವಿವರಿಸಿ, ಅತ್ಯಂತ ರೋಚಕವಾಗಿ, ಸಾಮಾನ್ಯ ಮಾನವನ ಮನಸ್ಸಿಗೂ ಸುಲಭವಾಗಿ ತಿಳಿಯುವಂತೆ ಪ್ರತಿಪಾದಿಸುವ ಶಿವನ ಉತ್ತಮ ಶ್ಲಕ್ಕೆ ಮೀಸಲಾಗಿರುವ ಸ್ಕಾಂದಪುರಾಣದ ವಚನವಂತೂ ಕೈಗನ್ನಡಿಯಂತೆ ಅತ್ಯಂತ ಸ್ಪಷ್ಟವಾಗಿದೆ.

ದೇವತೆಗಳ ತಾರತಮ್ಯದಲ್ಲಿ ಇಂದ್ರನಿಗಿಂತಲೂ ರುದ್ರನು ಉತ್ತಮನು. ರುದ್ರನಿಗಿಂತಲೂ ಚತುರ್ಮುಖಬ್ರಹ್ಮನು ಶ್ರೇಷ್ಠನು. ಆ ಚತುರ್ಮುಖ ಬ್ರಹ್ಮನಿಗಿಂತಲೂ ಶ್ರೀ ವಿಷ್ಣುವು ಅತ್ಯಂತ ಶ್ರೇಷ್ಠನು.

ಈ ರೀತಿ ವೇದಾದಿಗಳಲ್ಲಿ ವರ್ಣಿತವಾದ ತಾರತಮ್ಯವನ್ನು ಲೌಕಿಕವಾದ ಉದಾಹರಣೆಯಿಂದ ಅತ್ಯಂತ ಖಚಿತವಾಗಿ ಸ್ಕಾಂದ ಪುರಾಣ ವಾಕ್ಯವು ಹೇಳುತ್ತಲಿದೆ.

ಇಂದ್ರನಿಗೂ ರುದ್ರನಿಗೂ ಎಷ್ಟು ವ್ಯತ್ಯಾಸವೆಂದರೆ :-

**ಯದಂತರಂ [illegible]**
**ಯದಂತರಂ [illegible] ।**

**ಯದಂತರಂ ಸೂರ್ಯಸುರೇಜ್ಯಬಿಂಬಯೋಃ**
**ತದಂತರಂ ರುದ್ರಮಹೇಂದ್ರಯೋರಪಿ ॥**

**ಅಭಿಪ್ರಾಯ** :- ಕಾಡಿನಲ್ಲಿ ಹುಲಿಗೂ, ಮೃಗರಾಜನಾದ ಸಿಂಹಕ್ಕೂ ಎಷ್ಟು ವ್ಯತ್ಯಾಸವೋ, ವಿಂಧ್ಯಪರ್ವತಕ್ಕೂ, ಮೇರು ಪರ್ವತಕ್ಕೂ ಎಷ್ಟು ಅಂತರವು ಇರುತ್ತದೆಯೋ, ಸೂರ್ಯಬಿಂಬಕ್ಕೂ ಸುರೇಜ್ಯ(ಗುರು)ಬಿಂಬಕ್ಕು ಎಷ್ಟು ವ್ಯತ್ಯಾಸವೋ, ಅಷ್ಟು ಅಂತರವು, ಇಂದ್ರನಿಗೂ, ರುದ್ರನಿಗೂ, ಇರುತ್ತದೆ. ಅಂದರೆ ಇಂದ್ರನಿಗಿಂತಲೂ ಹುಲಿ ಸಿಂಹಗಳಿರುವಂತೆ, ರುದ್ರನ ಬಲಾದಿಗಳು ಅತ್ಯಧಿಕಗಳಾಗಿವೆ ಎಂದು ತಾತ್ಪರ್ಯ.

ರುದ್ರನಿಗೂ ಚತುರ್ಮುಖ ಬ್ರಹ್ಮನಿಗೂ ಎಷ್ಟು ವ್ಯತ್ಯಾಸವಂದರೆ

**ಯದಂತರಂ ಸಿಂಹಗಜೇಂದ್ರಯೋರ್ವನೇ**
**ಯದಂತರಂ ಸೂರ್ಯಶಶಾಂಕಯೋರ್ದಿವಿ ।**
**ಯದಂತರಂ ಜಾಹ್ನವಿ ಸೂರ್ಯಕನ್ಯಯೋಃ**
**ತದಂತರಂ ಬ್ರಹ್ಮಗಿರೀಶಯೋರಪಿ ॥**

**ತಾತ್ಪರ್ಯ** :- ಪಾರ್ವತೀ ಪತಿಯಾದ ಕೈಲಾಸನಾಥನಾದ ರುದ್ರನಿಗೂ, ಸತ್ಯಲೋಕಾಧಿಪತಿಯಾದ ಚತುರ್ಮುಖ ಬ್ರಹ್ಮನಿಗೂ ಎಷ್ಟು ವ್ಯತ್ಯಾಸವೆಂದರೆ:

ಕಾಡಿನಲ್ಲಿರುವ ಗಜರಾಜನಾದ ಆನೆಗೂ ಮೃಗರಾಜನಾದ ಸಿಂಹಕ್ಕೂ ಎಷ್ಟು ಅಂತರವಿರುತ್ತದೆಯೋ ಅಂದರೆ ಆನೆಗೂ ಸಿಂಹಕ್ಕೂ ಎಷ್ಟು ವ್ಯತ್ಯಾಸವೋ ಆಕಾಶದಲ್ಲಿರುವ ಚಂದ್ರನಿಗೂ, ಸೂರ್ಯನಿಗೂ ಎಷ್ಟು ಅಂತರವಿರುತ್ತದೆಯೋ, ಯಮುನಾನದಿಗೂ, ಗಂಗಾನದಿಗೂ ಎಷ್ಟು ವ್ಯತ್ಯಾಸವಿರುವುದೋ ಅಷ್ಟು ವ್ಯತ್ಯಾಸವು ರುದ್ರನಿಗೂ, ಚತುರ್ಮುಖ ಬ್ರಹ್ಮನಿಗೂ ಇರುತ್ತದೆಯೆಂದು ಅಭಿಪ್ರಾಯ.

ಅಂದರೆ ಆನೆಗೂ ಸಿಂಹಕ್ಕೆ ವ್ಯತ್ಯಾಸವಿರುವಂತೆ ರುದ್ರನಿಗಿಂತಲೂ ದೇವೋತ್ತಮನಾದ ಚತುರ್ಮುಖನಿಗೆ ಆಧಿಕ್ಯವು ಇರುತ್ತದೆಯೆಂದು ಅಭಿಪ್ರಾಯ.

ಚತುರ್ಮುಖ ಬ್ರಹ್ಮನಿಗೂ ಶ್ರೀಮನ್ನಾರಾಯಣನಿಗೂ ಎಷ್ಟು ವ್ಯತ್ಯಾಸವೆಂದರೆ:

**ಯದಂತರಂ ಪ್ರಳಯಜವಾರಿವಿಪ್ರುಷೋಃ**
**ಯದಂತರಂ ಸ್ತಂಬಹಿರಣ್ಯಗರ್ಭಯೋಃ ।**
**ಸ್ಫುಲಿಂಗಸಂವರ್ತಕಯೋರ್ಯದಂತರಂ**
**ತದಂತರಂ ವಿಷ್ಣುಹಿರಣ್ಯಗರ್ಭಯೋಃ ॥**

ನೀರಿನ ಅತಿ ಚಿಕ್ಕದಾದ ತುಂತುರುಹನಿಗೂ, ಮಹಾಪ್ರಳಯಕಾರಕವಾದ ಪ್ರಳಯೋದಕ್ಕೂ ಎಷ್ಟು ಅತ್ಯಧಿಕವಾದ ಅಂತರವಿರುತ್ತದೆಯೋ, ಮತ್ತು ಅತ್ಯಲ್ಪ ಯೋಗ್ಯತೆಯುಳ್ಳ ತೃಣಜೀವಕ್ಕೂ ಸತ್ಯಲೋಕಾಧಿಪತಿಯಾದ ದೇವೋತ್ತಮನಾದ ಚತುರ್ಮುಖ ಬ್ರಹ್ಮನಿಗೂ ಏನೂ ವ್ಯತ್ಯಾಸವಿರುತ್ತದೆಯೋ ಮತ್ತು ಅತಿ ಚಿಕ್ಕದಾದ ಬೆಂಕಿಯಕಿಡಿಗೂ(ಕಿಗ್ಗಿ

ಸೌದೆಯ ಇದ್ದಿಲಿನಿಂದ ಒಲೆಯನ್ನು ಹೊತ್ತಿಸಿ ದೇಸಿದಾಗ ಚಟ್ ಚಟ್ ಎಂದು ಶಬ್ದವಾಗುತ್ತಾ ಕೆಂಪಗೆ ಕಿಡಿಯು ಗಾಳಿಗೆ ಹಾರುತ್ತದೆ. ಅಂತಹ ಚಿಕ್ಕ ಬೆಂಕಿ ಕಿಡಿಗೂ) ಮಹಾಪ್ರಳಯಕಾಲದಲ್ಲಿ ಲೋಕಗಳನ್ನೇ ಸುಟ್ಟುಬೂದಿ ಮಾಡುವ ಪ್ರಚಂಡ ವಾದ ಪ್ರಳಯಾಗ್ನಿಗೂ ಎಷ್ಟು ಅಂತರವಿರುವುದೋ ಅಷ್ಟು ವ್ಯತ್ಯಾಸವು ಹಿರಣ್ಯಗರ್ಭನಿಗೂ (ಚತುರ್ಮುಖ ಬ್ರಹ್ಮನಿಗೂ ) ಶ್ರೀಮನ್ನಾರಾಯಣನಿಗೂ ^ರುತ್ತದೆ.

**ಅನಂತತ್ವಾನ್ಮಹಾವಿಷ್ಣೋಃ ತದಂತರಮನಂತಕಮ್ ।**
**ಮಾಹಾತ್ಮ್ಯಸೂಚನಾರ್ಥಾಯ ಹ್ಯುದಾಹರಣಮೀರಿತಮ್ ॥**
**ತತ್ಸಮೋ ಹ್ಯಧಿಕೋ ವಾಪಿ ನಾಸ್ತಿ ಕಶ್ಚಿತ್ಕದಾಚನ।**
**ಏತೇನಸತ್ಯವಾಕ್ಯೇನ ತಮೇವಪ್ರವಿಶಾಮ್ಯಹಮ್ ॥**

**ತಾತ್ಪರ್ಯ** :- ಮಹಾವಿಷ್ಣುವಿನ ವೈಭವಕ್ಕೆ ಇತಿಮಿತಿಯೇ ಇಲ್ಲ. ಅವನ ಜ್ಞಾನಾನಂದಾದಿ ಧರ್ಮಗಳೆಲ್ಲಾ ಅನಂತಾ ನಂತಗಳಾಗಿವೆ. ಜಗನ್ಮಾತೆಯಾದ ರಮಾದೇವಿಗೂ ಸಹ ಸಮಗ್ರವಾಗಿ ತಿಳಿದುಬಂದಿಲ್ಲವೆಂದಮೇಲೆ ಇತರರಿಗೆ ಅವುಗಳ ಸಮಗ್ರವಾದ ಪರಿಚಯವು ಅಸಂಭಾವಿತ. ಪರಮಾತ್ಮನ ಅಪಾರವಾದ ಮಹಿಮಾತಿಶಯವನ್ನು ಸೂಚಿಸುವುದಕ್ಕಾಗಿ ಸಾಮಾನ್ಯವಾದ ತಿಳಿವಳಿಕೆಗಾಗಿ ಉದಾಹರಣವನ್ನು ಕೊಡಲಾಗಿದೆ. ವಿಚಾರ ಮಾಡಲಾಗಿ, ಕೂಲಂಕಷವಾಗಿ, ಪರಿಶೀಲಿಸ ಲಾಗಿ ಪರಮಾತ್ಮನಿಗೆ ಸಮರಾಗಲಿ, ಅಧಿಕರಾಗಲಿ ಇಲ್ಲವೇ ಇಲ್ಲ. ಇದು ಸತ್ಯವಾದ ಮಾತು. ಇಂತಹ ಸತ್ಯವಾದ ವಾಕ್ಯ ದಿಂದ ಪರಮಾತ್ಮನು ಸುಪ್ರೀತನಾಗಿ ಮೋಕ್ಷವನ್ನು ಕರುಣಿಸುತ್ತಾನೆ.

ಮೊದಲನೆಯ ಅಧ್ಯಾಯದ ಎರಡನೇ ಪಾದವು ಅನ್ಯತ್ರ ಪ್ರಸಿದ್ಧವಾದ ಲಿಂಗಪಾದವು.

ಅದರಲ್ಲಿ ಪಲು ಅಧಿಕರಣಗಳಿವೆ. ಮೊದಲನೆಯದಾದ ಸರ್ವಗತತ್ವಾಧಿಕರಣದಲ್ಲಿ ನಿರವಧಿಕವಾದ ಸರ್ವಗತತ್ವವೆಂಬ ಸರ್ವತ್ರ ಅವ್ಯಾಪ್ತಸ್ವರೂಪವಾದ ಭಾವರೂಪವಾದ ಲಿಂಗ (ಅನುಮಾಪಕವಾದ ಧರ್ಮಕ್ಕೆ ಲಿಂಗವೆಂದು ಹೆಸರು) ದ ಸಮನ್ವ ಯವು ಮಾಡಲ್ಪಟ್ಟಿದೆ.

ಪ್ರಭುವಾದ ಪರಮಾತ್ಮನು ದೂರದಲ್ಲಿ ಇದ್ದು ಕೊಂಡೇ ಆಯಾ ಪದಾರ್ಥಗಳಲ್ಲಿ ಅದರದರ ಯೋಗ್ಯತೆಗೆ ತಕ್ಕಂತೆ ಅದರ ಶಕ್ತಿಯ ಪ್ರಬೋಧನದಲ್ಲಿ ಅತ್ಯಂತ ಶಕ್ತನಾದಾಗ್ಯೂ ಕೇವಲ ಲೀಲಾಮಾತ್ರದಿಂದ ಅಲ್ಲಲ್ಲಿ ತಾನೇ ಇದ್ದು ಆಯಾ ಪದಾರ್ಥಗಳಲ್ಲಿ ಶಕ್ತಿಗೆ ಪ್ರಬೋಧಕನಾಗಿರುತ್ತಾನೆಂಬ ವಿಷಯವು ಸಮರ್ಥಿಸಲ್ಪಟ್ಟಿದೆ...

**"ತತ್ರ ತತ್ರಸ್ಥಿತೋ ವಿಷ್ಣುಃ ತತ್ತಚ್ಛಕ್ತಿಪ್ರಬೋಧಕಃ ।**
**ದೂರತೋಽಪ್ಯತಿಶಕ್ತಃ ಸ ಲೀಲಯಾ ಕೇವಲಂ ಪ್ರಭುಃ।**
**ಇತಿ ಜ್ಞಾಪಯಿತುಂ " (ಅಣುವ್ಯಾಖ್ಯಾನ)**
**"ಯಚ್ಚ ಕಿಂಚಿತ್ ಜಗತ್ಸರ್ವಂ ದೃಶ್ಯತೇ ಶ್ರೂಯತೇಽಪಿ ವಾ।**
**ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ" ।ಇತಿಶ್ರುತಿಃ ॥**

ಎರಡನೇ ಅಧಿಕರಣವಾದ ಅತ್ತ್ರಧಿಕರಣದಲ್ಲಿ (ಅತ್ತೃತ್ವಂ = ಸಂಹರ್ತೃತ್ವಂ) ಸಂಹಾರಕ್ರಿಯಾತ್ಮಕವಾದ ಅತ್ತೃ ತ್ವರೂಪವಾದ ಲಿಂಗದ ಸಮನ್ವಯವು ಉಕ್ತವಾಗಿದೆ. ಶ್ರೀಮನ್ನಾರಾಯಣನು ಯಥಾಯೋಗ್ಯವಾಗಿ ಸರ್ವಜಗತ್ತಿನ ಸೃಷ್ಟಿಕರ್ತನೂ ಸಂಹಾರಕರ್ತನೂ ಎಂಬ ವಿಷಯವನ್ನು ಪುರಾಣವಾಕ್ಯವೂ ಸ್ಪಷ್ಟಪಡಿಸುತ್ತಲಿದೆ.

"ಜ್ಞಾನಂ ನಿತ್ಯಂ ಕ್ರಿಯಾನಿತ್ಯಾ ಬಲಂಶಕ್ತಿಃ ಪರಾತ್ಮನಃ ।
ನಿತ್ಯಾನಂದೋಽಕ್ಷಯಃ ಪೂರ್ಣೋ ಭಗವಾನ್ ವಿಷ್ಣುರಚ್ಯುತಃ ॥
ಇತಿ ಪೈಂಗಿಶ್ರುತಿಃ ॥

ನ್ಯಾಯಸುಧಾ:-

"ಅಯಮರ್ಥಃ- ತತ್ತತ್ಕಾರ್ಯಜನನಶಕ್ತಿರೇವ ಕ್ರಿಯೇತ್ಯುಚ್ಯತೇ ।
ಅತಃ ಶಕ್ತಿರೂಪೇಣ ಸ್ಥಿರಾ ಸಾ ಯದಾ ವ್ಯಜ್ಯತೇ ತದಾ ವ್ಯವಹಾರಾಲಂಬನಂ,
ತತ್ತತ್ಕಾರ್ಯಜನನೀ ಚ ಭವತೀತಿ ನ ಕಶ್ಚಿದ್ದೋಷಃ" । ಇತಿ ।
ವ್ಯಕ್ತಿಶಬ್ದೇನ ಶಕ್ತೇರೇವ, ಅವಸ್ಥಾವಿಶೇಷಸ್ಯ ವಿವಕ್ಷಿತತ್ವಾತ್ ।
ವ್ಯಕ್ತಿರೂಪೇಣೈವ ವ್ಯವಹಾರಾಲಂಬನತ್ವಾತ್ ।
ವ್ಯಕ್ತ್ಯವಸ್ಥಾಯಾ ಏವ ಶಕ್ತೇಃ ಜನಕತ್ವಾತ್ ।
ವ್ಯಕ್ತೇರಪಿ, ಅವಾಂತರನಂತವಿಶೇಷವತ್ತ್ವಾಂಗೀಕಾರಾತ್ ।
ಅಭಿನ್ನೇ ಏವಶಕ್ತಿವ್ಯಕ್ತೀ ।
ಯತಸ್ತತ್ರಶಕ್ತಿರೇತಿ ವ್ಯಕ್ತಿತಾ, ಇತಿ, ವಿಶೇಷೋಽಸ್ತ್ಯೇವ ।
ಸ ಚ ಭೇದಕಾರ್ಯನಿರ್ವಾಹಕಃ ।
ಸ ಚ ವಿಶೇಷಃ ಪರಸ್ಪರಂ ವಿಶೇಷಿಣಾ ಚ ಅಭಿನ್ನಏವ ।
ಅಭಿನ್ನೋಽಪಿ ವಿಶೇಷವಾನಂಗೀಕ್ರಿಯತೇ ।
ಸ್ವನಿರ್ವಾಹಕಶ್ಚೇತ್ಯರ್ಥಃ ॥ ಇತಿ ॥
ಶಕ್ತಿರೇವ ಕ್ರಿಯೇತ್ಯತ್ರ "ಪರಾಸ್ಯ ಶಕ್ತಿಃ ವಿವಿಧೈವ ಶ್ರೂಯತೇ, ಸ್ವಾಭಾವಿಕೀ
ಜ್ಞಾನಬಲಕ್ರಿಯಾ ಚ" ಇತಿಶ್ರುತಿಃ ಪ್ರಮಾಣಂ "।

ಶಕ್ತಿಯೇ ಕ್ರಿಯಾ ಎಂಬುವದರಲ್ಲಿ ಪ್ರಮಾಣವು "ಪರಾಸ್ಯಶಕ್ತಿ" ಇತ್ಯಾದಿ ಶ್ರುತಿಯು. ಅದು ನಿತ್ಯ ಎಂಬುದರಲ್ಲಿ ಹಿಂದೆ ಉದಾಹರಿಸಿದ "ಜ್ಞಾನಂ ನಿತ್ಯಂ" "ಕ್ರಿಯಾ ನಿತ್ಯಾ" ಇತ್ಯಾದಿ ಪೈಂಗಿಶ್ರುತಿಯು ಪ್ರಮಾಣವಾಗಿದೆ.

ಮೊದಲನೆಯ ಅಧ್ಯಾಯದ ಎರಡನೇ ಪಾದದಲ್ಲಿ ಮೂರನೇ ಅಧಿಕರಣವು ಗುಹಾಧಿಕರಣವು. ಇದರಲ್ಲಿ ಲೋಕದ ದೃಷ್ಟಿಯಿಂದ ಅನ್ಯತ್ರ ಪ್ರಸಿದ್ಧವಾದ ಶಾಸ್ತ್ರವಿಹಿತವಾದ ಶುಭಕರ್ಮಫಲಭೋಕ್ತೃತ್ವರೂಪವಾದ ಕ್ರಿಯಾತ್ಮಕ ಲಿಂಗವನ್ನು ವಿಷ್ಣುವಿನಲ್ಲಿ ಸಮನ್ವಯಗೊಳಿಸಲಾಗಿದೆ.

ಅನ್ಯಾಂತರಾತ್ಮೇತಿ ಹರಿರೇಕ ಏವದ್ವಿಧಾ ಸ್ಥಿತಃ ।
ವಿವಿಕ್ತೋ ಹೃದಯೇ ನಿತ್ಯಂ [illegible] ಕರ್ಮಜಮ್ ॥
ಇತಿ ಬೃಹತ್ಸಂಹಿತಾಯಾಮ್ ॥

**ಸ ವಿಷ್ಣುಃ ಪರಮೋ ವಾಯೌ ಪರೇಭ್ಯೋಽಪಿ ಶುದ್ಧರೂಪಕೇ ।**
**ಶುಭಾನ್ನಟತಿ ಭೋಗಾನ್ ಸ ಛಾಯೇವ ವಿದುಷಾಂ ಪ್ರಭುಃ ।**
**ಅತಃ ಪಾಪಿನಾಮ್ ತಿಷ್ಠತಿ ॥**

**ಶುಭಂ ಪಿಬತ್ಯಸೌ ನಿತ್ಯಂ ನಾಶುಭಂ ಸ ಹರಿಃ ಪಿಬೇತ್ ।**
**ಪೂರ್ಣಾನಂದಮಯಸ್ಯಾಸ್ಯ ಚೇಷ್ಟಾ ನ ಜ್ಞಾಯತೇ ಕ್ವಚಿತ್ ॥ ಇತಿಪಾದ್ಮೇ ॥**

**ಅಭಿಪ್ರಾಯ** :- ಶ್ರೀಹರಿಯು ಒಬ್ಬನೇ ಆದಾಗ್ಯೂ, ಬಾಹ್ಯದೇಹದೊಳಗೆ ಆತ್ಮನೆಂದೆನಿಸಿಕೊಂಡವನಾಗಿಯೂ ದೇವನ ಸ್ವರೂಪದೇಹದೊಳಗೆ ಅಂತರಾತ್ಮನೆಂಬುದಾಗಿಯೂ ರೂಪಭೇದದಿಂದ ಎರಡು ರೂಪದಿಂದಿರುವವನಾಗಿ, ವೇದ ವಿಹಿತ ಗಳಾದ ಶುಭಕರ್ಮಗಳ ಶುಭಫಲವನ್ನು ನಿಯಮೇನ ಅನುಭವಿಸುತ್ತಾನೆ. ಜೀವನಿಂದ ಅಭೋಗ್ಯವಾದ ಗುಣವನ್ನೇ ಭೋಗಿ ಸುತ್ತಾನೆ.

ಭಗವದ್ಗೀತೆಯೂ ಈ ಅಭಿಪ್ರಾಯವನ್ನು ವ್ಯಕ್ತಗೊಳಿಸುತ್ತಲಿದೆ.

**ಶ್ರೋತ್ರಂ ಚಕ್ಷುಃ ಸ್ಪರ್ಶನಂ ಚ ರಸನಂ ಘ್ರಾಣಮೇವ ಚ ।**
**ಅಧಿಷ್ಠಾಯ ಮನಶ್ಚಾಯಂ ವಿಷಯಾನುಪಸೇವತೇ ॥ (ಅಧ್ಯಾಯ ೧೫ ಶ್ಲೋಕ ೯)**

**ತಾತ್ಪರ್ಯ** :- ಪರಮಾತ್ಮನು ಬಾಹ್ಯ ಜ್ಞಾನೇಂದ್ರಿಯಗಳಾದ ಕಿವಿ, ಕಣ್ಣು, ತ್ವಕ್, ನಾಲಿಗೆ, ಘ್ರಾಣ, ಅಂತಃಕರಣವೆನಿಸಿದ ಮನಸ್ಸು ಇವುಗಳನ್ನೆಲ್ಲಾ ಅವುಗಳಿಗೆ ಯೋಗ್ಯವಾದ ಶಬ್ದ, ರೂಪ, ಸ್ಪರ್ಶ, ರಸ, ಗಂಧಗಳೆಂಬ ವಿಷಯಗಳಲ್ಲಿ ಪ್ರವೃತ್ತಿಯುಳ್ಳವುಗಳನ್ನಾಗಿ ಮಾಡಿ, ಆ ವಿಷಯಗಳನ್ನು ಭೋಗಿಸುತ್ತಾನೆ.

**ಭುಂಕ್ತೇ ಹರಿಃ ಶುಭಾನ್ಭೋಗಾನ್ ಇಂದ್ರಿಯೇಷು ವ್ಯವಸ್ಥಿತಃ ।**
**ಪೂರ್ಣಾನಂದೋಽಪಿ ಭಗವಾನ್ ಕ್ರೀಡಯಾ ಭುಂಕ್ತೆ ವಿಷತು ॥ (ಗೀತಾ ತಾತ್ಪರ್ಯ)**

**ತಾತ್ಪರ್ಯ** :- ಸರ್ವಪ್ರೇರಕನಾದ ಪರಮಾತ್ಮನು ಇಂದ್ರಿಯಗಳಲ್ಲಿ ಪ್ರೇರಕನಾಗಿ, ನಿಯಾಮಕನಾಗಿ ತಾನು ಇದ್ದು ಶುಭ ಭೋಗಗಳನ್ನು ಮಾತ್ರವೇ ಸ್ವೀಕರಿಸುತ್ತಾನೆ. ಅವನು ಪೂರ್ಣಾನಂದನಾಗಿದ್ದರೂ ಸಹ ಲೀಲಾಮಾತ್ರದಿಂದ (ಕ್ರೀಡೆಗಾಗಿ) ವೈಷಯಿಕವಾದ ಶುಭಭೋಗದ ಸಾರಭಾಗವನ್ನು ಸ್ವೀಕರಿಸುವ ವಿಷಯವು ಪ್ರಮಾಣ ಪ್ರಮಿತವಾಗಿದೆ.

ಪೂರ್ಣಾನಂದಮಯನಾದ ವಿಷ್ಣುವಿನ ಚೇಷ್ಟೆಯು ಅಂದರೆ ಐಶ್ವರ್ಯವು ಯಾವ ದೇಶದಲ್ಲೂ ಯಾವ ಕಾಲದಲ್ಲೂ ಯಾರಿಂದಲೂ ಸಮಗ್ರವಾಗಿ ಹೀಗೆಯೇ ಇದೆಯೆಂಬುದು ಗೋಚರಿಸಲ್ಪಡುವುದಿಲ್ಲ.

ಆದರೆ "ದ್ವಾಸುಪರ್ಣಾ" ಇತ್ಯಾದಿ ಶ್ರುತಿಯಲ್ಲಿ "ಅನಶ್ನನ್ ಅನ್ಯೋಽಭಿಚಾಕಶೀತಿ" ಎಂದು ಪರಮಾತ್ಮನಿಗೆ ಅಶನಾ ಭಾವವನ್ನು ಹೇಳಲಾಗಿದೆ. ಈ ಶ್ರುತಿಯು ಮೇಲೆ ಕಂಡ ಅಭಿಪ್ರಾಯಕ್ಕೆ ವಿರುದ್ಧವಾಗಿ ಆಪಾತತಃ ಕಂಡುಬಂದರೂ ಸಹ ಅದರ ವಿರೋಧವನ್ನು ಶಾಸ್ತ್ರಕಾರರು ಪರಿಹರಿಸಿರುತ್ತಾರೆ.

ಪರಮಾತ್ಮನಿಗೆ ಪಾಧಿಕವಾಯಾ ಭೋಗವನ್ನೂ, ಅಪ್ರಿಯಭೋಗವನ್ನೂ, ಅಶುಭ ಭೋಗವನ್ನೂ, ಜೀವನಂತೆ ನಿರ್ಮೋಕ್ಷಭಾವಕ್ಕೆ ಕಾರಣವಾದ ಭೋಗವನ್ನೂ ಸಹ ಅನಶ್ನನ್ ಎಂಬ ಶ್ರುತಿಯು ನಿಷೇಧಿಸುತ್ತಲಿದೆ. ಆದಕಾರಣ ಹಿಂದಿನ ಪ್ರಮಾಣ ವಾಕ್ಯಗಳಿಂದ ಯಾವ ವಿರೋಧವೂ ಇರುವುದಿಲ್ಲವೆಂದು ಮಹಾಭಿಪ್ರಾಯ.

ನಾಲ್ಕನೆಯ ಅಧಿಕರಣವಾದ ಅಂತರಾಧಿಕರಣದಲ್ಲಿ ಪರಮಾತ್ಮನಿಗೆ ಚಕ್ಷುರಂತಸ್ಥಿತಿ ರೂಪವಾದ ಭಾವಯುಕ್ತವಾದ ರಮಣರೂಪವಾದ ಕ್ರಿಯಾಲಿಂಗದ ಸಮನ್ವಯವು ಉಕ್ತವಾಗಿದೆ.

ಈ ಅಧಿಕರಣಕ್ಕೆ ವಿಷಯ ವಾಕ್ಯವಾಗಿರುವ

“ಯ ಏಷೋಽಕ್ಷಿಣಿ ಪುರುಷೋ ದೃಶ್ಯತೇ ಏಷ ಆತ್ಮೇತಿಹೋವಾಚ ।। (ಛಾಂ - ೪ - ೧೫)

ಎಂಬ ಶ್ರುತಿವಾಕ್ಯದಲ್ಲಿರುವ “ಅಂತರ” ಎಂಬ ಶಬ್ದದ ಸ್ವಾರಸ್ಯದಿಂದಲೇ ಚಕ್ಷುರಂತಃಸ್ಥತ್ವವನ್ನೂ ಪರಮಾತ್ಮನಿಗೆ ರಮಣಕರ್ತೃತ್ವವನ್ನೂ ಹೇಳುತ್ತಿದೆ. ಅಂತಃಶಬ್ದವೇ ಉಪಪದವಾಗಿ ಉಳ್ಳ ರಮು ಕ್ರೀಡಾಯಾಂ ಎಂಬ ಧಾತುವಿನ ಮುಂದೆ ಕರ್ತರಿ “ಅಮಂತಾಡ್ಡಃ” ವ (ಪಾ ೧ ಸೂ ೧೧೧) ಎಂಬ ಉಣಾದಿ ಸೂತ್ರದಿಂದ ಅಮ್ಮಂತ್ಯಕವಾದ ಕವರ್ಗಾದಿ ಪಂಚ ವರ್ಗಗಳ ಅಂತಿಮವರ್ಣಾಂತವಾದ ಧಾತುವಿನ ಮುಂದೆ ಡಪ್ರತ್ಯಯವು ಬಂದು ಚುಟೂ (೧-೩-೭) ಎಂಬ ಸೂತ್ರದಿಂದ ಡಕಾರವೆಂಬ ವ್ಯಂಜನಕ್ಕೆ ಲೋಪವೂ ಬಂದು ಡಿತ್ವಾತ್ (ಅಭಸ್ಯಾಪಿ) ಧಾತುವಿಗೆ ಟಿಲೋಪ ಬರಲಾಗಿ “ರ” ಎಂದು ರೂಪವು ಸಿದ್ಧವಾಗಿದೆ. “ಉಣಾದಯೋ ಬಹುಲಂ” (೩-೩-೧) ಎಂಬ ಸೂತ್ರದಿಂದ ಉಪಪದಕ್ಕೆ ಲೋಪವು ಬಂದಿದೆ. ಅಂತರ ಶಬ್ದಕ್ಕೆ “ರೋ ರಿ” (೮-೩-೧೪) ಎಂಬುದರಿಂದ ರೇಫಕ್ಕೆ ಲೋಪವು, ಬಂದು, ಢ್ರಲೋಪೇ ಪೂರ್ವಸ್ಯ ದೀರ್ಘೋಽಣಃ (೬-೩-೧೧೧) ಎಂಬ ಸೂತ್ರದಿಂದ ದೀರ್ಘವು ಬರಲಾಗಿ ಅಂತಾರ ಎಂದೇ ಆಗಬೇಕೆಂಬ ಶಂಕೆಯು ಉಂಟಾಗಬಹುದು. ಆದರೆ ಉತ್ತರದ ರೇಫಕ್ಕೆ ಪೂರ್ವರೇಫದ ಲೋಪವನ್ನು ಕುರಿತು ನಿಮಿತ್ತತ್ವವು ಇಲ್ಲದಿರುವುದರಿಂದ ದೀರ್ಘಕ್ಕೆ ಪ್ರಾಪ್ತಿಯು ಇಲ್ಲವೆಂದು ಅಭಿಪ್ರಾಯ. ಆದ್ದರಿಂದಲೇ ಅಂತಾರ ಎಂದಾಗದೇ ಅಂತರ ಎಂದು ರೂಪವು ಸಿದ್ಧವಾಗಿದೆ.

ಚಕ್ಷುರಿಂದ್ರಿಯದ ಒಳಗೆ ನಿಯಾಮಕನಾಗಿದ್ದು ರಮಿಸುವವನೆಂಬ ಅರ್ಥದ ವ್ಯಕ್ತಿಯಿಂದ “ಅಂತರ” ಎಂಬ ಶಬ್ದವನ್ನು ಮಾರ್ಮಿಕವಾಗಿ ಸೂತ್ರಕಾರರು ಬಳಸಿದ್ದಾರೆ.

“ಅಂತಃಸ್ಥತ್ವಾದ್ರಮಣಾಚ್ಚಾಂತರಃ ಸ ಉದಾಹೃತಃ”

ಎಂಬ ಅನುವ್ಯಾಖ್ಯಾನದ ಅರ್ಥವನ್ನೇ ಹಿಂದೆ ಹೇಳಲಾಗಿದೆ.

ಸರ್ವನಿಯಾಮಕನಾದ ಪರಮಾತ್ಮನನ್ನು ಒಪ್ಪದಿದ್ದರೆ ಬ್ರಹ್ಮಾದಿದೇವತೆಗಳಿಗೂ ಮಾನುಷಾದಿ ಇತರ ಚೇತನರಿಗೂ ನಿಯಮ್ಯನಿಯಾಮಕಭಾವವು ಏನು ಇದೆಯೋ ಇದು ಅವರ ಸ್ವಭಾವವೇ ಆದಾಗ್ಯೂ, ಅದೂ ಸಹ ಸರ್ವನಿಯಾಮಕನಾದ ಪರಮಾತ್ಮನಿಂದಲೇ ಹೊಂದಲ್ಪಟ್ಟದ್ದಾಗಿದೆ. ಈ ವಿಷಯವನ್ನು “ನ ತದಸ್ತಿ ವಿನಾಯತ್ಸ್ಯಾತ್ ಮಯಾ ಭೂತಂ ಚರಾಚರಮ್” ಎಂಬ ಪರಮಾತ್ಮನ ವಚನವೇ ತಿಳಿಸುತ್ತಿದೆ. ಪರಮಾತ್ಮನಿಗೆ ಸರ್ವನಿಯಾಮಕತ್ವವನ್ನು ಒಪ್ಪದೇ ಇದ್ದರೆ ಸರ್ವೈಶ್ವರ್ಯವೂ ಸಹ ಇಲ್ಲದೇ ಹೋದೀತು. ಅದಕ್ಕೆ ಭಂಗ ಬಂದೀತು. ಅನಾದಿಯಾದ ಸ್ವಭಾವಕ್ಕೆ ಪರಮಾತ್ಮನಿಂದ ನಿಯಮ್ಯತ್ವವು ಉಂಟು. [illegible] ಯಾದುದಕ್ಕೆ ಇತರ ನಿಯಮ್ಯತ್ವವನ್ನು ಇತರ ವಾದಿಗಳೂ ಒಪ್ಪಿಯೇ ಇದ್ದಾರೆ.

ನೈಯ್ಯಾಯಿಕರೂ ಸಹ ಆಕಾಶವು ಅನಾದಿಯಾದಾಗ್ಯೂ ಅದರಲ್ಲಿರತಕ್ಕ ದ್ರವ್ಯತ್ವಕ್ಕೆ ಗುಣವತ್ತ್ವಾಧೀನತ್ವವನ್ನು ಸ್ವೀಕರಿಸಿರುವರು. ಅದ್ವೈತಿಗಳ ಮತರೀತ್ಯಾ "ಷಡಸ್ಮಾಕಮನಾದಯಃ" ಎಂದು ಹೇಳತಕ್ಕವರು ಅನಾದಿಯಾದ ಜೀವಬ್ರಹ್ಮವಿಭಾಗಕ್ಕೆ ಭಾವ ರೂಪವಾದ ಅವಿದ್ಯಾಧೀನತ್ವವನ್ನು ಹೇಳಿರುತ್ತಾರೆ.

ಆದಕಾರಣ ಸರ್ವನಿಯಾಮಕನಾದ ಈಶ್ವರನನ್ನು ಒಪ್ಪದೆಯೋದರೆ, ಅನ್ಯೋನ್ಯನಿಯಮನವೇ ಕೂಡುವುದಿಲ್ಲ. ಅನವಸ್ಥಾದೋಷವೂ, ಅಸಂಭವದೋಷವೂ ಅಪರಿಹಾರ್ಯವಾಗಿ ಬಂದೊದಗುತ್ತದೆ. ಎರಡೂ ಪಕ್ಷಗಳಲ್ಲಿ ಪ್ರವೃತ್ತಿಯೇ ಕೂಡಲಾರದು. ಅನವಸ್ಥಾದಲ್ಲಿ ಹಿಂದೆ ಸಿದ್ಧವಾದ ಮೂಲವೇ ಇಲ್ಲವಾದುದರಿಂದ ಪ್ರವೃತ್ತಿನಿರೋಧವು ಉಂಟಾಗುವುದು. ಅಸಂಭವದಲ್ಲಿ ಸಮಾನತ್ವವಿರುವ ಪ್ರಯುಕ್ತ ಅನ್ಯತರ ಪಕ್ಷಪಾತಿಯಾದ .ಯುಕ್ತಿಯೇ ಇಲ್ಲವಾದುದರಿಂದ ವಿನಿಗಮಕಾಭಾವವು ಸಂಭವಿಸುವುದು. ಆದಕಾರಣ ಸರ್ವನಿಯಾಮಕನಾದ ಈಶ್ವರನನ್ನು ಒಪ್ಪಿಯೇ ತೀರಬೇಕೆಂದು ಪರಮಾಭಿಪ್ರಾಯವಾಗಿದೆ.

ಐದನೆಯ ಅಧಿಕರಣವಾದ ಅಂತರ್ಯಾಮ್ಯಧಿಕರಣದಲ್ಲಿ ಅಂತಃಸ್ಥಿತಿರೂಪವಾದ ಭಾವಯುಕ್ತವಾದ ನಿಯಮನಾಖ್ಯವಾದ ಕ್ರಿಯಾತ್ಮಕವಾದ ಲಿಂಗದ ಸಮನ್ವಯವು ಕಂಡುಬಂದಿದೆ.

ಇದಕ್ಕೆ ಬೃಹದಾರಣ್ಯಕದಲ್ಲಿನ (ಬೃ.. ೫ - ೭ - ೩).

> **"ಯಃ ಪೃಥಿವ್ಯಾಂ ತಿಷ್ಠನ್ ಪೃಥಿವ್ಯಾ ಅಂತರಃ, ಯಂ ಪೃಥಿವೀ ನ ವೇದ ಯಸ್ಯ ಪೃಥಿವೀ ಶರೀರಂ, ಯಃ ಪೃಥಿವೀಂ ಅಂತರೋ ಯಮಯತಿ, ಏಷ ತೇ ಆತ್ಮಾಂತರ್ಯಾಮ್ಯಮೃತಃ" (ಬೃಹದಾರಣ್ಯಕ)**

ಎಂಬ ವಾಕ್ಯದ ಅರ್ಥವು ಹೀಗಿದೆ.

ಇದ್ದಾಲಕಮುನಿಯನ್ನು ಕುರಿತು ಯಾಜ್ಞವಲ್ಕ್ಯರು ಇದನ್ನು ಹೇಳಿರುತ್ತಾರೆ.

**ಅರ್ಥ** :- ಯಃ = ಯಾರು, ಪೃಥಿವ್ಯಾಂ = ಪೃಥುಂ = ವಿಷ್ಣುವನ್ನು, ಹೊತ್ತುಕೊಂಡು, ವಾತಿ = ಗಚ್ಛತಿ = ಹೋಗುತ್ತಾನೆಯೋ, ಇತಿ = ಪೃಥಿವೀ = ಗರುಡನು = ಪೃಥಿವ್ಯಾಂ = ಆ ಗರುಡನಲ್ಲಿ, ತಿಷ್ಠನ್ = ಇರತಕ್ಕವನಾಗಿ, ಪೃಥಿವ್ಯಾಃ = ಅದಕ್ಕೆ ಅಭಿಮಾನಿಯಾದ ಚೇತನನಿಗಿಂತಲೂ, ಅಂತರಃ = ವಿಲಕ್ಷಣನೋ (ಭಿನ್ನನೋ), ಯಂ ಚ = ಯಾವ ಪರಮಾತ್ಮನನ್ನು, ಪೃಥಿವೀ = ಪೃಥಿವ್ಯಭಿಮಾನಿಚೇತನನು, ನ ವೇದ = ಸಮಗ್ರವಾಗಿ ತಿಳಿದಿಲ್ಲವೋ, ಯಸ್ಯ = ಯಾವ ಪರಮಾತ್ಮನಿಗೆ, ಪೃಥಿವೀ = ತದಭಿಮಾನಿಯಾದ ಚೇತನನು, ಪರಮಾತ್ಮನಿಗೆ ವಶನಾಗಿರುವ ಪ್ರಯುಕ್ತ, ಶರೀರಂ = ಶರೀರಭೂತವಾಗಿರುವನೋ, ಆ ಪೃಥಿವಿಯಲ್ಲಿ ಇರುವಿಕೆ ಮಾತ್ರವೇ ಅಲ್ಲ, ಕಿಂತು, ಯಃ ಅಂತರಃ = ಅಂತಃ ಇರುವವನಾಗಿ, ಬಾಹ್ಯದ ಅಪೇಕ್ಷೆಯಿಲ್ಲದ ರಮಮಾಣನಾಗಿರುವನೋ, ಅತಿಪ್ರಿಯನಾಗಿ (ಯಮಯತಿ = ನಿಯಮನ ಮಾಡತಕ್ಕವನಾಗಿರುವನೋ), ಪೃಥಿವೀಂ ಯಮಯತಿ = ಗರುಡನನ್ನು ನಿಯಮನ ಮಾಡುತ್ತಾನೆಯೋ, ಏಷಃ = ಗರುಡನ ಒಳಗೆ ಇದ್ದೂ ಬಾಹ್ಯಾಪೇಕ್ಷೆಯಿಲ್ಲದೆ ನಿಯಾಮಕನಾಗಿ ರಮಿಸುವವನಾದ ಈ (ನಿಯಾಮಕ ಪುರುಷನು) ಪರಮಾತ್ಮನು, ತೇ = ನಿನಗೆ, ಅಂತರ್ಯಾಮೀ = ನಿಯಾಮಕನಾದ ಪುರುಷನು, ಅಮೃತಃ = ನಿತ್ಯಮುಕ್ತನಾದವನು.

ಭಾಷ್ಯಕಾರರು ಈ ಶ್ರುತಿಯ ಅರ್ಥವನ್ನು ಸಂಗ್ರಹಿಸಿ ತಿಳಿಸಿರುತ್ತಾರೆ.

> **"ಸ್ವತಂತ್ರೋ ನಿತ್ಯತೃಪ್ತಃ ಸ ಲೋಕಾಂತರಃ ಸ್ವವಶಸ್ಥಿತಃ ।**
> **ಬಾಹ್ಯಾಪೇಕ್ಷಾಂ ವಿನಾ ಯಸ್ತು ರಮತೇ ಲೋಕಾಂತರಃ ಸ್ಮೃತಃ ॥ ಇತಿ ಬೃಹದ್ಭಾಷ್ಯೇ)**

**ತಾತ್ಪರ್ಯ**:- "ಸ್ವತಂತ್ರನಾಗಿಯೂ, ನಿತ್ಯತೃಪ್ತನಾಗಿಯೂ, ತನ್ನ ವಶಕ್ಕೆ ಒಳಪಟ್ಟ ಗರುಡನಲ್ಲಿ ತಾನಿದ್ದೂ ಹೊರಗಿನ ಅಪೇಕ್ಷೆಯಿಲ್ಲದೆ ರಮಿಸುವವನಾದುದರಿಂದ "ಅಂತರಃ" ಎಂದು ಪರಮಾತ್ಮನು ಕರೆಯಲ್ಪಡುತ್ತಾನೆ."

**ಶಂಕಾ** :- ಆದಿತ್ಯಾದಿ ದೇವತೆಗಳನ್ನೆಲ್ಲಾ ನಿಯಮನ ಮಾಡುವಿಕೆಗೆ ಬಹಳ ಪ್ರಯತ್ನಪಡಬೇಕು. ಅತ್ಯಂತ ಪ್ರಯತ್ನ ಮಾಡುತ್ತಿರುವವನಿಗೆ ಚಿತ್ತದ ವಿಕ್ಷೇಪವು ಸ್ವಾಭಾವಿಕವಾಗಿ ಕಂಡುಬಂದಿದೆ. ಚಿತ್ತವಿಕ್ಷೇಪವಿದ್ದರೆ ರಮಣವೇ ಕೂಡುವುದಿಲ್ಲ. ಸಕಲ ನಿಯಾಮಕನೆಂಬುದೂ ರಮಣವುಳ್ಳವನೆಂಬುದೂ ಕೂಡುವುದಿಲ್ಲವೆಂಬ ಶಂಕೆಯು ಸಹಜವಾಗಿ ಉಂಟಾಗುತ್ತದೆ. ಅದಕ್ಕೆ ತಕ್ಕ ಉತ್ತರವನ್ನು ಅನುವ್ಯಾಖ್ಯಾನಕಾರರು ಹೇಳಿ ಸಮಾಧಾನ ಮಾಡಿರುತ್ತಾರೆ.

> **ರಮಣಂ ನಾತಿಯತ್ನಸ್ಯ ವಿಕ್ಷೇಪಾದೇವಯುಜ್ಯತೇ ।**
> **ಇತಿ ಚೇತ್ ಸರ್ವನಿಯಮೋ ಯತ್ನಕಸ್ಮಾತ್ ನ ಶಕ್ಯತೇ ॥**
> **ಸ್ವಾತ್ಮಾನಾಶ್ರಯಿತಂ ವಸ್ತು ಪ್ರತೀಪಂ ಹ್ಯಾತ್ಮನೋ ಭವೇತ್ ।**
> **ಸ್ವಾಧೀನಸತ್ತಾಶಕ್ತ್ಯಾದಿ ಕಥಮಾತ್ಮಪ್ರತೀಪಕಮ್ ॥ (ಅನುವ್ಯಾಖ್ಯಾನ)**

**ಅಭಿಪ್ರಾಯ** :- ಪರಮಾತ್ಮನಿಗೆ ಸರ್ವಾಂತರ್ಯಾಮಿತ್ವವೂ ಇದೆ. ತನ್ನ ಅಧೀನಕ್ಕೆ ಒಳಪಡದ ವಸ್ತುವಿನ ವಿಷಯದಲ್ಲಿ ನಿಯಂತ್ರಿಸಬೇಕಾದ ಸಂದರ್ಭದಲ್ಲಿ ಚಿತ್ತವಿಕ್ಷೇಪವು ಸಾಮಾನ್ಯವಾಗಿ ಲೋಕದಲ್ಲಿ ಕಂಡುಬಂದಿದೆ. ಪ್ರಕೃತದಲ್ಲಾದರೋ ಎಲ್ಲ ಚೇತನರೂ ಸಹ ಪರಮಾತ್ಮನ ಅಧೀನವಾದ ಸ್ವರೂಪ, ಪ್ರಮಿತಿ, ಪ್ರವೃತ್ತಿಗಳನ್ನುಳ್ಳವರಾದುದರಿಂದ, ಅವರನ್ನು ನಿಯಂತ್ರಿಸಲು ಏನೇನೂ ಕಷ್ಟವಿಲ್ಲ. ಚಿತ್ತವಿಕ್ಷೇಪಕ್ಕೆ ಅವಕಾಶವೇ ಇಲ್ಲ. ತನಗೆ ಅನಧೀನನಾದ ಚೇತನನು ತನಗೆ ವಿರುದ್ಧನಾಗಿರುವ ಸಂದರ್ಭದಲ್ಲಿ ಅವನನ್ನು ನಿಯಂತ್ರಿಸಲು ಬಹಳ ಕಷ್ಟಪಡಬೇಕು. ಆಗ ಚಿತ್ತವಿಕ್ಷೇಪಕ್ಕೆ ಅವಕಾಶವುಂಟು. ಆದರೆ ಸರ್ವ ಪ್ರಕಾರದಿಂದಲೂ ಸರ್ವಚೇತನರೂ ಸಹ ಪರಮಾತ್ಮನಿಗೆ ಅಧೀನರಾಗುವ ಪ್ರಯುಕ್ತ ಚಿತ್ತವಿಕ್ಷೇಪಕ್ಕೆ ಕಾರಣವೇ ಇರುವುದಿಲ್ಲ. ರಾಜಾದಿಗಳಾದರೋ ಬಾಹ್ಯಪ್ರಕಾರದಲ್ಲಿ ನಿಯಾಮಕರಾಗಿರುವವರಾದರೂ ಪರಮಾತ್ಮನು ರಾಜರಂತೆ ನಿಯಾಮಕನಾಗಿಲ್ಲ. ಅಂತಃ ನಿಯಾಮಕನಾಗಿದ್ದಾನೆ. ಸತ್ತಾಪ್ರದನೂ, ಶಕ್ತಿಪ್ರದನೂ ಆಗಿರುವುದರಿಂದ ಯಾವ ಬಾಧಕವೂ ಇರುವುದಿಲ್ಲವೆಂದು ತಾತ್ಪರ್ಯ.

ಅದಕ್ಕೆ ಅಧಿಕರಣವಾದ ಅದೃಶ್ಯತ್ವಾಧಿಕರಣದಲ್ಲಿ ಅಭಾವಾತ್ಮಕವಾದ ಲಿಂಗವನ್ನು ಸಮನ್ವಯಗೊಳಿಸಲಾಗಿದೆ. ದೃಶ್ಯತ್ವಾದ್ಯಭಾವಾತ್ಮಕವಾದ ಲಿಂಗದ ಸಮನ್ವಯವನ್ನು ಪರಮಾತ್ಮನಲ್ಲಿ ಪ್ರತಿಪಾದಿಸಲಾಗಿದೆ. ಪರಮಾತ್ಮನು ಭಾವರೂಪನು. ಭಾವರೂಪನಾದವನ ಧರ್ಮಗಳ ಸಮನ್ವಯವು ಸಂಗತವಾದರೂ, ಅದೃಶ್ಯತ್ವವು ಅಭಾವರೂಪವಾದುದು. ಭಾವರೂಪನು.

ಭಾವರೂಪಗಳಾದ ಧರ್ಮಗಳ ಸಮನ್ವಯವು ಸಂಗತವಾದರೂ, ಅದೃಶ್ಯತ್ವವು ಅಭಾವರೂಪವಾದುದು. ಭಾವರೂಪನಾದ ಪರಮಾತ್ಮನಿಗೆ ಅಭಾವರೂಪವಾದ ಧರ್ಮದ ಅಭೇದವು ಹೇಗೆ ಸಂಗತವಾಗುತ್ತದೆ. ಭಾವಾಭಾವಗಳಿಗೆ ಪರಸ್ಪರ ವಿರೋಧ ಇದೆಯಲ್ಲ ಎಂಬ ಶಂಕೆಯು ಉಂಟಾಗುತ್ತದೆ.

ಇದಕ್ಕೆ ಸಮಾಧಾನವನ್ನು ಈ ರೀತಿ ಅನುವ್ಯಾಖ್ಯಾನಕಾರರು ತೋರಿಸಿರುತ್ತಾರೆ.

**ಶಂಕಾ :- ಗುಣಕ್ರಿಯಾದಯೋ ಭಾವಾಃ ಯದಿ ವಾಸ್ಯುರಭೇದಿನಃ।**
**ಅಭೇದೋಽಭಾವಧರ್ಮಾಣಾಂ ಬ್ರಹ್ಮಣಾ ಯುಜ್ಯತೇ ಕಥಮ್॥**

ಎಂಬುದು ಶಂಕಾಪ್ರದರ್ಶಕವಾದ ವಾಕ್ಯಗಳು.

**ಅಭಿಪ್ರಾಯ** :- ಹಿಂದೆ ತಿಳಿಸಿದ ಗುಣಗಳಾಗಲಿ, ಕ್ರಿಯೆಗಳಾಗಲಿ ಎಲ್ಲವೂ ವಿಧಿರೂಪವಾದ ಭಾವಧರ್ಮಗಳಾಗಿವೆ. ಅವುಗಳಿಂದ ಭಾವರೂಪನಾದ ಪರಮಾತ್ಮನಿಗೆ ಅಭೇದವನ್ನ ಹೇಳಬಹುದು. ಆದರೆ ಪ್ರಕೃತದಲ್ಲಿ ಅದೃಶ್ಯತ್ವವೆಂಬುದು, ದೃಶ್ಯತ್ವಾಭಾವರೂಪವಾದ ಅಭಾವಾತ್ಮಕವಾದ ಧರ್ಮವಾಗಿದೆ. ಆದರಿಂದ ಭಾವರೂಪನಾದ ಪರಮಾತ್ಮನಿಗೆ ಅಭೇದವು ಕೂಡುವುದಿಲ್ಲವೆಂದು ಶಂಕಾಭಿಪ್ರಾಯ.

**ಸಮಾಧಾನ** :- ಅದೃಶ್ಯತ್ವಾಶಬ್ದಗಳಿಂದ ಇಲ್ಲಿ "ದೃಶ್ಯಾದನ್ಯೋ ಅದೃಶ್ಯಃ ತಸ್ಯಭಾವಃ ಅದೃಶ್ಯತ್ವಂ" ಎಂಬುದಾಗಿ ಅದೃಶ್ಯತ್ವಾದಿಶಬ್ದಗಳಿಂದ ದೃಶ್ಯಾದಿಭೇದವು (ಅನ್ಯೋನ್ಯಾಭಾವವು) ಹೇಳಲ್ಪಡುತ್ತದೆ. ಭೇದವು (ಅನ್ಯೋನ್ಯಾಭಾವವು) ಧರ್ಮಿಸ್ವರೂಪವೇ ಆಗಿದೆ. ಆದಕಾರಣ ಯಾವ ಬಾಧಕವೂ ಇಲ್ಲವೆಂದು ಅಭಿಪ್ರಾಯದಿಂದ ಮುಂದಿನ ಅನುವ್ಯಾಖ್ಯಾನವು ಪ್ರವೃತ್ತವಾಗಿದೆ.

**ನಾಭಾವೋ ಭಾವ ಇತಿ ಚ ವಿಶೇಷಃ ಜ್ಞಾಯಕೋ ಭವೇತ್।**
**ಅತದ್ವ್ಯಾವೃತ್ತತಾಽಪೀತಿ ನ ವಿಶೇಷೋಽಸ್ತಿ ಕಶ್ಚನ॥**
**ದೋಷಾಭಾವೋ ಗುಣ ಇತಿ ಪ್ರಸಿದ್ಧೋ ಲೌಕಿಕೇಷ್ವಪಿ॥**
**ಅದೃಶ್ಯತ್ವಾದಿಕಾಸ್ತಸ್ಮಾತ್ ಗುಣಾನಾಹ ಸ್ವಯಂಪ್ರಭುಃ॥**
**(ಇತ್ಯನುವ್ಯಾಖ್ಯಾನಮ್)**

ಈ ಅದೃಶ್ಯತ್ವಾಧಿಕರಣದ ವಿಷಯ ವಾಕ್ಯವು ಈ ರೀತಿ ಇದೆ.

**ಯತ್ತದದ್ರೇಶ್ಯಂ ಅಗ್ರಾಹ್ಯಂ ಅಗೋತ್ರಂ ಅವರ್ಣಂ ಅಚಕ್ಷುಃಶ್ರೋತ್ರಂ ತದಪಾಣಿಪಾದಂ।**
**ನಿತ್ಯಂ ವಿಭುಂ ಸರ್ವಗತಂ ಸುಸೂಕ್ಷ್ಮಂ ತದವ್ಯಯಂ ಯದ್ಭೂತಯೋನಿಂ ಪರಿಪಶ್ಯಂತಿ ಧೀರಾಃ॥ (ಮು. ೧-೧-೬)**

**ಅರ್ಥ**:- ಯತ್ = ಯಾವ ಪರಾವಿದ್ಯಾದಿಂದ ತಿಳಿಯಲ್ಪಡತಕ್ಕ, ಅಕ್ಷರ ಶಬ್ದದಿಂದ ಹೇಳಲ್ಪಡತಕ್ಕ, ತತ್ = ಆ ಪರ ಬ್ರಹ್ಮ ವಸ್ತುವು. ಅದ್ರೇಶ್ಯಂ = ದೃಶ್ಯ ಶಬ್ದದಿಂದ ಹೇಳಲ್ಪಡತಕ್ಕ ಚಕ್ಷುರಾದಿ ಇಂದ್ರಿಗಳಿಂದ ತಿಳಿಯಲ್ಪಡತಕ್ಕ ಪದಾರ್ಥಕ್ಕಿಂತಲೂ ಭಿನ್ನವಾದುದು, ಅಗ್ರಾಹ್ಯಂ = ಮನಸ್ಸಿಂದ ಗ್ರಾಹ್ಯವಾದುದಕ್ಕಿಂತಲೂ ಭಿನ್ನವಾದುದು. ಅಗೋತ್ರಂ =

ಮುಖ್ಯಾದಿಗೋತ್ರರಹಿತವಾದುದು. ಅವರ್ಣಂ = ಪ್ರಾಕೃತಶುಕ್ಲಾದಿವರ್ಣರಹಿತವಾದುದು. ಮತ್ತು (ಗೋತ್ರವರ್ಣಭಿನ್ನವಾಗಿಯೂ ಇರತಕ್ಕದ್ದು), ಯತ್ = ಯಾವುದು, ಅಚಕ್ಷುಃಶ್ರೋತ್ರಂ = ಪ್ರಾಕೃತವಾದ ಚಕ್ಷುರಾದಿ ಇಂದ್ರಿಯಗಳಿಂದ ರಹಿತವಾದ, ತತ್ = ಅ, ಅಪಾಣಿಪಾದಂ = ಪ್ರಾಕೃತಗಳಾದ ಕೈಕಾಲು ಮೊದಲಾದ ಕರ್ಮೇಂದ್ರಿಯಗಳಿಂದ ರಹಿತವಾದ, ನಿತ್ಯಂ = ಸ್ವರೂಪನಾಶರಹಿತವಾದ, ವಿಭುಂ = ಸಮರ್ಥವಾದ, ಸರ್ವಗತಂ = ವ್ಯಾಪ್ತವಾದ, ಸುಸೂಕ್ಷ್ಮಂ = ಅತ್ಯಂತ ಅವ್ಯಕ್ತವಾದ, ಯದ್ಭೂತಯೋನಿಂ = ಸಕಲ ಪ್ರಾಣಿಗಳಿಗೂ ಯಥಾಯೋಗ್ಯವಾಗಿ ಕಾರಣವಾದ ಅಂದರೆ, ಭೂತಗಳಾದ ಆಕಾಶಾದಿಗಳಿಗೂ, ಬ್ರಹ್ಮಾದಿಚೇತನರಿಗೂ, ಕೇವಲ ಮಾತ್ರ ಸ್ವೇಚ್ಛಾಮೂಲಕವಾಗಿಲ್ಲದೆ ತನ್ನ ದೇಹದಿಂದಲೇ ಉತ್ಪಾದಕವಾದ ಯಾವ ಪರಬ್ರಹ್ಮವಸ್ತು ಉಂಟೋ ಅದನ್ನು, ಧೀರಾಃ = ಅಪರೋಕ್ಷ ಜ್ಞಾನಿಗಳು, ಪರಿಪಶ್ಯಂತಿ = ನೋಡುತ್ತಾರೆಯೋ, ತದಕ್ಷರಂ = ಅಂತಹ ಪರಬ್ರಹ್ಮ ವಸ್ತುವು, ಅಕ್ಷರಂ = ದೇಹದಿಂದಲೂ ನಾಶರಹಿತವಾಗಿರುತ್ತದೆ. ಎಂದು ಶ್ರುತಿಯ ಅರ್ಥವಾಗಿದೆ.

ಇದರಲ್ಲಿ ಯತ್ತದದ್ರೇಶ್ಯಂ ಎಂಬಲ್ಲಿ ದ್ರೇಶ್ಯಂ ಎಂಬುದಕ್ಕೆ "ದೃಶ್ಯ" ಎಂಬ ಅರ್ಥವನ್ನು ಇಟ್ಟುಕೊಂಡು "ದೃಶ್ಯಾದನ್ಯೋಽದೃಶ್ಯಃ ತಸ್ಯಭಾವಃ ಅದೃಶ್ಯತ್ವಂ" ಎಂಬುದಾಗಿ ಅದೃಶ್ಯತ್ವಾದಿ ಶಬ್ದಗಳಿಂದ ದೃಶ್ಯಾದ್ಯನ್ಯೋನ್ಯಾಭಾವವು ವಿವಕ್ಷಿತವಾಗಿದೆ. "ಅಶ್ವಾದನ್ಯೋಽನಶ್ವಃ ತಸ್ಯಭಾವಃ ಅನಶ್ವತ್ವಂ" ಎಂಬುದು ಹೇಗೋ ಅದರಂತೆ ತಿಳಿಯಬೇಕೆಂದು ಅಭಿಪ್ರಾಯ. ಅನ್ಯೋನ್ಯಾಭಾವವು, ಭಾವಾಭಾವಸ್ವರೂಪತ್ವಾತ್ ನಾನ್ಯೋನ್ಯಾಭಾವತಾಪೃಥಕ್" ಎಂಬುದಾಗಿ ತತ್ತ್ವವಿವೇಕ ಎಂಬ ಗ್ರಂಥದಲ್ಲಿ ಸೂತ್ರಕಾರರೇ ಧರ್ಮಿಸ್ವರೂಪವೆಂದು ನಿರ್ಣಯಿಸಿರುತ್ತಾರೆ.

ಧರ್ಮಿಯು ವಿಧಿರೂಪವಾಗಿದೆ. ಅನ್ಯೋನ್ಯಾಭಾವವು ನಿಷೇಧರೂಪವಾಗಿರುವುದರಿಂದ ಅನ್ಯೋನ್ಯಾಭಾವಕ್ಕೆ (ಭೇದಕ್ಕೆ) ಧರ್ಮಿಸ್ವರೂಪತ್ವವು ಕೂಡುವುದಿಲ್ಲವೆಂಬ ಬಾಧಕವನ್ನು ಹೇಳುವಂತಿಲ್ಲ. ಘಟಕ್ಕೆ ಇರತಕ್ಕ ಅಘಟತ್ವವೂ ಘಟಾದನ್ಯತ್ವವೂ ಒಂದೇ ಆಗಿದೆ. ಅಘಟ ಎಂದರೂ ಘಟಾದನ್ಯ ಎಂದರೂ ಎರಡಕ್ಕೂ ಏನೂ ವಿಶೇಷವಿಲ್ಲ. ಘಟ ಎಂಬಲ್ಲಿ ನಞ್ ಪ್ರಯೋಗವಿಲ್ಲ, ಅಘಟ ಎಂಬಲ್ಲಿ ನಞ್ ಪ್ರಯೋಗವಿದೆ. ಯಾವ ಕಾರಣದಿಂದ ನಞ್ ಪ್ರಯೋಗಗಳೂ ಅಪ್ರಯೋಗಗಳೂ ಅಭೇದಕ್ಕೆ ಬಾಧಕಗಳಲ್ಲವೋ ಅದನ್ನು ಸೂಚಿಸುವುದಕ್ಕಾಗಿಯೇ ಸೂತ್ರಕಾರರು "ಅದೃಶ್ಯತ್ವಾದಿಗುಣಕೋ ಧರ್ಮೋಕ್ತೇಃ" (೧-೨-೨೧) ಎಂಬುದಾಗಿ ಸೂತ್ರದಲ್ಲಿ ನಞ್ ಶಬ್ದದಿಂದ ವಾಚ್ಯವಾದ ಅದೃಶ್ಯತ್ವಾದಿಗಳಿಗೂ, ಗುಣಗಳಿಗೂ ಐಕ್ಯವನ್ನು (ಅಭೇದವನ್ನು) ಹೇಳಿರುತ್ತಾರೆ.

ಲೌಕಿಕ ವ್ಯವಹಾರದಲ್ಲೂ, ವೈದಿಕ ವ್ಯವಹಾರದಲ್ಲೂ ಸಹ ಇಂತಹ ಪ್ರಯೋಗಗಳು ಕಂಡುಬಂದಿವೆ.

"ಆರೋಗ್ಯಂ ಗುಣಃ" "ಅಕ್ರೌರ್ಯಂ ಗುಣಃ" ಎಂಬುದಾಗಿ ನಞ್ ಪ್ರಯೋಗಕ್ಕೆ ವಿಷಯವಾಗಿರುವುದಕ್ಕೆ ಅನಾರೋಗ್ಯಾಭಾವಕ್ಕೂ, ಕ್ರೌರ್ಯಾಭಾವಕ್ಕೂ ವಿಧಿರೂಪವಾದ ಗುಣತ್ವವನ್ನು ಒಪ್ಪಿರುತ್ತಾರೆ. ಅನೌದಾರ್ಯಂ ದೋಷಃ ಎಂಬಲ್ಲಿ ಗುಣಾಭಾವಕ್ಕೆ (ಔದಾರ್ಯಾಭಾವರೂಪವಾದ ಗುಣಾಭಾವಕ್ಕೆ) ದೋಷತ್ವವನ್ನು ಒಪ್ಪಿರುವುದು ಸುಪ್ರಸಿದ್ಧವಾಗಿಯೇ ಇದೆ. ಒಂದುವೇಳೆ ನಿಷೇಧರೂಪವಾದುದಕ್ಕೆ ವಿಧಿರೂಪತ್ವವು ಸರ್ವಥಾ ಇಲ್ಲವಾಗಿರುವುದಾದರೆ ಸೂತ್ರಕಾರರು ಸೂತ್ರದಲ್ಲಿ "ಅದೃಶ್ಯತ್ವಾದಿ" ಎಂಬುದಾಗಿಯೇ ಸೂತ್ರವನ್ನು ರಚಿಸುತ್ತಿದ್ದರು. ಗುಣಪದವನ್ನು ಬಳಸುತ್ತಿರಲಿಲ್ಲ, ಇದರಿಂದ ತಿಳಿದುಬರುವುದೇನೆಂದರೆ, ನಞ್ ಪ್ರಯೋಗವಾಗಲಿ, ಸಪ್ರತಿಯೋಗಿತ್ವ, ನಿಷ್ಪ್ರತಿಯೋಗಿತ್ವಗಳಾಗಲಿ ಅಭೇದಕ್ಕೆ ವಿರೋಧಿಗಳಲ್ಲವೆಂಬುದು ಗೊತ್ತಾಗುತ್ತದೆ.

ಕೇವಲ (ಅವಿಶಿಷ್ಟವಾದ) ಭಾವಾಭಾವಗಳಿಗೆ ವಿರೋಧವು ಕಂಡುಬರುವುದಿಲ್ಲ. ಘಟವಿದ್ದ ಕಡೆ ಘಟಾತಿರಿಕ್ತವಾದ ಪಟಾಭಾವವು ಸುಪ್ರಸಿದ್ಧವಾಗಿದೆ. ವಿಶಿಷ್ಟವಾದುದಕ್ಕೆ ಪರಸ್ಪರ ವಿರೋಧವು ಇರುತ್ತದೆ. ಘಟಕ್ಕೂ ಘಟಾಭಾವಕ್ಕೂ, ಪಟಕ್ಕೂ ಪಟಾಭಾವಕ್ಕೂ ವಿರೋಧವು ಇದ್ದೇ ಇದೆ.

ಮತ್ತು ಅತ್ತೃತ್ವಾದಿಗಳಿಗೂ, ಅದೃಶ್ಯತ್ವಾದಿಗಳಿಗೂ, ಬ್ರಹ್ಮಸ್ವರೂಪತ್ವವು ಶ್ರುತ್ಯಾದಿಗಳಿಂದ ಹಿಂದೆ ತಿಳಿಸಿದಂತೆ ಸಿದ್ಧವೇ ಆಗಿದೆ. ಅವುಗಳಿಗೂ ಬ್ರಹ್ಮನಿಗೂ ಧರ್ಮಧರ್ಮ್ಯಾದಿವ್ಯವಹಾರವೂ ಸಹ ಕಂಡುಬಂದಿದೆ. ಪ್ರಮಿತವಾಗಿದೆ. ಇವೆರಡರ ಪ್ರತೀತಿ ಯಾವುದಕ್ಕೂ ಬಾಧವು ಇರುವುದಿಲ್ಲ. ಭೇದವಿಲ್ಲ. ಭೇದಕ್ಕೆ ಕಾರ್ಯವಾದ ಭೇದವ್ಯವಹಾರವು ಪ್ರಮಿತವಾಗಿರುವುದರಿಂದ ಅಂತಹ ಭೇದದ ಜಾಗದಲ್ಲಿ (ಸ್ಥಾನದಲ್ಲಿ) ವಿಶೇಷವನ್ನಂತೂ ಒಪ್ಪಿಯೇ ತೀರಬೇಕು.

ವಿಶೇಷಕ್ಕೆ, ಅಭಿನ್ನವಾದುದರಲ್ಲೂ, ಭೇದನಿಮಿತ್ತವಾದ ಭೇದವ್ಯವಹಾರನಿರ್ವಾಹಕತ್ವವು ಸ್ವರೂಪಗ್ರಾಹಕವಾದ ಪ್ರಮಾಣದಿಂದಲೇ ಸಿದ್ಧವಾಗಿದೆ.

ಮೊದಲನೆಯ ಅಧ್ಯಾಯದ ಎರಡನೇ ಪಾದದಲ್ಲಿನ ಏಳನೇ ಅಧಿಕರಣವು ವೈಶ್ವಾನರಾಧಿಕರಣವು.

ಈ ಅಧಿಕರಣವನ್ನು ತತ್ತ್ವಪ್ರದೀಪಕಾರರಾದ ತ್ರಿವಿಕ್ರಮ ಪಂಡಿತಾಚಾರ್ಯರು ತತ್ತ್ವಪ್ರದೀಪ ವ್ಯಾಖ್ಯಾನದಲ್ಲಿ "ಅಧಿಕರಣರಾಜ" ಎಂದು ಕರೆದಿರುತ್ತಾರೆ. ಆ ವ್ಯಾಖ್ಯಾನ ವಾಕ್ಯವು ಈ ರೀತಿ ಇದೆ.

> **"ಏವಂ ತಾವತ್, ಶ್ರುತಿಲಿಂಗಾನಾಂ, ಅನ್ಯತ್ರಪ್ರಸಿದ್ಧಾನಾಂ ಬ್ರಹ್ಮಣಿ ಸಮನ್ವಯಂ ಪ್ರದರ್ಶಯತಾ ಪಾದದ್ವಯಾರ್ಥನಿಗಮನಾಯ ಸರ್ವನಾಮ್ನಾಂ ಸರ್ವಲಿಂಗಾನಾಂ ಚ ಸಮನ್ವಯದೃಢೀಕರಣಾತ್ಮಕೋಽಖಿಲಗುಣೋದೀರಣಪರತಯಾ ಗುಣವಿರಹವಾದನಿರಾಕರಣಾಕೃತಿಃ ಪರಮಕಾರುಣಿಕೇನ, ಅಮರಗಣಗುರುಣಾ, ಅಯಮಧಿಕರಣರಾಜ ಆರಭ್ಯತೇ" ।। ೧೩ ।।**

ಈ ಅಧಿಕರಣದಲ್ಲಿ, ಪಾಚಕತ್ವ, ದಾಹಕತ್ವ, ಪೋಷಕತ್ವ ಮೊದಲಾದ ಅನೇಕಲಿಂಗ (ಸಮನ್ವಯ ಸಿದ್ಧಿಗಾಗಿ) ಯುತವಾದ ವೈಶ್ವಾನರ ಎಂಬ ನಾಮದ ಸಮನ್ವಯವು ಮಾಡಲ್ಪಟ್ಟಿದೆ.

ಪ್ರಥಮಾಧ್ಯಾಯದ ಮೂರನೇ ಪಾದದಲ್ಲಿ ಉಭಯತ್ರ ಪ್ರಸಿದ್ಧಗಳಾದ (ಪರಮಾತ್ಮನಲ್ಲೂ, ಬೇರೆ ಕಡೆಗಳಲ್ಲಿಯೂ) ಪ್ರಸಿದ್ಧಗಳಾದ ನಾಮಾತ್ಮಕ ಮತ್ತು ಲಿಂಗಾತ್ಮಕಗಳಾದ ಶಬ್ದಗಳ ಸಮನ್ವಯವು ಉಕ್ತವಾಗಿದೆ.

ಈ ಮೂರನೇ ಪಾದದಲ್ಲಿ ಹದಿನಾಲ್ಕು ಅಧಿಕರಣಗಳಿವೆ. ಎಂಟನೆಯ ಅಧಿಕರಣವಾದ ದೇವತಾಧಿಕರಣದಲ್ಲಿ ಪ್ರಾಸಂಗಿಕವಾಗಿ ದೇವತೆಗಳಿಗೂ, ಅವರವರ ಪದಪ್ರಾಪ್ತಿಯ ಅನುಸಾರದಲ್ಲೂ ಕೂಡ ವೇದವಿದ್ಯಾಧಿಕಾರವು ಉಂಟೆಂದು ನಿಶ್ಚಯಿಸಲ್ಪಟ್ಟಿದೆ. ಒಂಭತ್ತನೆಯ ಅಧಿಕರಣವಾದ ಅಪಶೂದ್ರಾಧಿಕರಣದಲ್ಲಿ ಶೂದ್ರಾದಿಗಳಿಗೆ ವೇದವಿದ್ಯಾಧಿಕಾರವು

ಇಲ್ಲವೆಂಬುದು ನಿರ್ಧರಿಸಲ್ಪಟ್ಟಿದೆ. ಬಾಕಿ ಹನ್ನೆರಡು ಅಧಿಕರಣಗಳ ಪೈಕಿ ಎಂಟು ಅಧಿಕರಣಗಳಲ್ಲಿ ಉಭಯತ್ರ ಪ್ರಸಿದ್ಧಗಳಾದ ನಾಮಗಳ ಸಮನ್ವಯವೂ, ನಾಲ್ಕು ಅಧಿಕರಣಗಳಲ್ಲಿ ಉಭಯತ್ರ ಪ್ರಸಿದ್ಧಗಳಾದ ಲಿಂಗಗಳ ಸಮನ್ವಯವೂ ಉಕ್ತವಾಗಿದೆ.

ಉಭಯತ್ರ ಪ್ರಸಿದ್ಧಗಳಾದ ೧. ಭೂಮನಾಮ ೨. ಅಕ್ಷರನಾಮ ೩. ಸನ್ನಾಮ ೪. ಈಶಾನನಾಮ ೫. ವಜ್ರನಾಮ ೬. ಜ್ಯೋತಿರ್ನಾಮ ೭. ಆಕಾಶನಾಮ (ಅವ್ಯಾಕೃತಾಕಾಶನಾಮ) ೮. ಬ್ರಾಹ್ಮಣ ಎಂಬ ಎಂಟು ನಾಮಗಳ ಸಮನ್ವಯವು ಮಾಡಲ್ಪಟ್ಟಿದೆ.

ಬಾಕಿ ನಾಲ್ಕು ಅಧಿಕರಣಗಳಲ್ಲಿ ಉಭಯತ್ರ ಪ್ರಸಿದ್ಧಗಳಾದ ೧. ಪೃಥಿವೀ ಸ್ವರ್ಗಾದ್ಯಾಧಾರತ್ವರೂಪವಾದ ಸರ್ವಾಧಾರತ್ವವೆಂಬ ಲಿಂಗವೂ ೨. ಹೃತ್ಪದ್ಮಸ್ಥತ್ವವೆಂಬ ಲಿಂಗವೂ ೩. ಧ್ಯಾನಾರ್ಥವಾಗಿ ಪ್ರಾರ್ಥಿತತ್ವರೂಪವಾದ ಅನುಕೂಲ್ಯೇನ ಗೃಹ್ಯಮಾಣತ್ವವೆಂಬ ಲಿಂಗವೂ ೪. ಸ್ವಪ್ನಾದಿದ್ರಷ್ಟೃತ್ವವೆಂಬ ಲಿಂಗವೂ ಸಮನ್ವಯಗೊಳಿಸಲ್ಪಟ್ಟಿದೆ. ಒಟ್ಟಿನಲ್ಲಿ ಉಭಯ ಪ್ರಸಿದ್ಧಗಳಾದ ಎಂಟು ನಾಮಾತ್ಮಕಶಬ್ದಗಳನ್ನೂ ನಾಲ್ಕು ಲಿಂಗಾತ್ಮಕ ಶಬ್ದಗಳನ್ನು ಪರಮಾತ್ಮನಲ್ಲಿ ಸಮನ್ವಯ ಮಾಡಲಾಗಿದೆ.

ಮೊದಲನೆಯ ಅಧ್ಯಾಯದಲ್ಲಿನ ನಾಲ್ಕನೇ ಪಾದವು ಅನ್ಯತ್ರೈವ ಪ್ರಸಿದ್ಧಗಳಾದ ನಾಮಾತ್ಮಕ ಮತ್ತು ಲಿಂಗಾತ್ಮಕ ಶಬ್ದಗಳ ಸಮನ್ವಯ ಪರವಾಗಿದೆ.

ಸೋಪಾನಾರೋಹಣನ್ಯಾಯದಿಂದ ಪ್ರವೃತ್ತವಾದ ಸಮನ್ವಯಾಧ್ಯಾಯದ ಕಡೆಯ ಪಾದವಾದ ಈ ಪಾದದಲ್ಲಿ ಅತ್ಯಲ್ಪತ್ವಶಂಕೆಗೆ ಆಸ್ಪದವಾದ, ಪರಮಾತ್ಮನ ಪರಮೈಶ್ವರ್ಯಕ್ಕೆ ವಿರೋಧಿಗಳಾದ, ಅವರತ್ವ, ದುಃಖಿತ್ವ, ಮೊದಲಾದ ಶಬ್ದಗಳ ಸಮನ್ವಯವೂ, ಕರ್ಮವಿಶೇಷವಾಚಕಗಳೆಂದು ಅನ್ಯತ್ರೈವ ಪ್ರಸಿದ್ಧಗಳಾದ ಜ್ಯೋತಿಷ್ಟೋಮಾದಿ ಶಬ್ದಗಳೂ, ವರ್ಣಪದಾದಿರೂಪದಿಂದ ವೇದಗಳಲ್ಲಿ ಕಂಡುಬರುವ ಸರ್ವಶಬ್ದಗಳೂ, ಬಹುತ್ವವಾಚಕಗಳಾದ ಶಬ್ದಗಳೂ, ಪರಮಾತ್ಮನ ಪರವಾಗಿ ಸಮನ್ವಯಗೊಳಿಸಲ್ಪಟ್ಟಿದೆ.

ವೈದಿಕಗಳಾದ ಸಕಲ ಶಬ್ದಗಳೂ ಮುಖ್ಯ ವೃತ್ತಿಯಿಂದ ಜಗದ್ವಾಚಕಗಳಾದಾಗ್ಯೂ ಪರಮಮುಖ್ಯ ವೃತ್ತಿಯಿಂದ ಪರಮಾತ್ಮವಾಚಕಗಳಾಗಿ ಪ್ರತಿಪಾದಿಸಲ್ಪಟ್ಟಿವೆ.

ಈ ಪಾದದಲ್ಲಿನ ಆರನೇ ಅಧಿಕರಣವಾದ ಪ್ರಕೃತ್ಯಧಿಕರಣದಲ್ಲಿ ಸ್ತ್ರೀಲಿಂಗಶಬ್ದಗಳಿಗೂ ಸಮನ್ವಯವು ಉಕ್ತವಾಗಿದೆ.

ತನ್ನ ದೇಹ ದಿಂದಲೇ ಪರಮಾತ್ಮನು ಸಾಕ್ಷಾತ್ತಾಗಿಯೂ ಉಪಾದಾನನಾಗಿರುವುದರಿಂದ ಯೋನಿಶಬ್ದದಿಂದ ಹೇಳಲ್ಪಡತಕ್ಕ ಸ್ತ್ರೀತ್ವವೂ ಸಹ ಪರಮಾತ್ಮನಿಗೆ ಉಂಟೆಂಬ ವಿಚಾರವು ಉಕ್ತವಾಗಿದೆ.

ಕಡೆಯದಾದ ಸರ್ವವ್ಯಾಖ್ಯಾನಾಧಿಕರಣದಲ್ಲಿ, ಸರ್ವಸಾಮ್ಯಾದಿ ನ್ಯಾಯಗಳ ನಿಮಿತ್ತದಿಂದ, ಶೂನ್ಯ, ತುಚ್ಛ, ಅಭಾವ, ಬದ್ಧ, ನಾಶ, ಅವ್ಯಕ್ತ, ಅದೃಶ್ಯ, ಅಚಿಂತ್ಯ ಇತ್ಯಾದಿ ಶಬ್ದಗಳ ಸಮನ್ವಯವು ಉಕ್ತವಾಗಿದೆ.

ಈ ನಾಲ್ಕನೇ ಪಾದದಲ್ಲಿನ ಸಮನ್ವಯವು ನಮ್ಮ ಶ್ರೀಮದಾನಂದತೀರ್ಥ ಭಗವತ್ಪಾದರ ಭಾಷ್ಯದ ವಿಶೇಷಾಕಾರವಾದ ಅಗಾಧವಾದ ಮಹಿಮಾವಿಶೇಷದ್ಯೋತಕವೇ ಆಗಿದೆಯೆಂಬುದರಲ್ಲಿ ಯಾವ ಸಂದೇಹವೂ ಇರುವುದಿಲ್ಲ. ಇದೇ ಪಾದದಲ್ಲಿನ

ಸಕಲ ಪದಗಳಿಗೂ ಸಮನ್ವಯವನ್ನು ಶ್ರೀಮದಾಚಾರ್ಯರು ಪ್ರತಿಪಾದಿಸಿ, ಪರಮಾತ್ಮನಿಗೆ ಸಕಲ ವೇದವೇದ್ಯತ್ವವನ್ನು ಸ್ಥಾಪಿಸಿರುತ್ತಾರೆ. "ವೇದೈಶ್ಚ ಸರ್ವೈರಹಮೇವವೇದ್ಯಃ" ಎಂಬ ಶ್ರೀಕೃಷ್ಣಪರಮಾತ್ಮನ ವಾಕ್ಯವನ್ನು ಅಕ್ಷರಶಃ ಸತ್ಯವಾಗಿ ಸಾಧಿಸಿರುತ್ತಾರೆ. ಕರ್ಮಕಾಂಡದಲ್ಲಿ ಕೇವಲ ಕರ್ಮಪ್ರತಿಪಾದಕಗಳಾದ "ವಸಂತೇ ವಸಂತೇ ಜ್ಯೋತಿಷಾ ಯಜೇತ" ಇತ್ಯಾದಿಯಾಗಿ ಕರ್ಮಪ್ರತಿಪಾದಕಗಳಾಗಿಯೂ, ಕಾಲವಿಶೇಷವಾಚಕಗಳಾಗಿಯೂ ಕಂಡುಬರುವ ಸಕಲ ಶಬ್ದಗಳನ್ನು ಪರಮಮುಖ್ಯ ವೃತ್ತಿಯಿಂದ ಪರಮಾತ್ಮನಲ್ಲಿ ಸಮನ್ವಯಗೊಳಿಸುವ ರೀತಿಯು ಅತ್ಯದ್ಭುತವಾಗಿದೆ. ಮಿಕ್ಕ ಯಾವ ಸೂತ್ರಭಾಷ್ಯಗಳಲ್ಲೂ ಕಾಣದಿರುವ ಅದ್ಭುತಪ್ರತಿಪಾದನೆಯು ನಿಷ್ಪಕ್ಷಪಾತಿಗಳಾದ ವಿಮರ್ಶಕರನ್ನು ಚಕಿತಗೊಳಿಸುವುದಾಗಿದೆ. ಆದಕಾರಣ ಈ ನಾಲ್ಕನೇ ಪಾದದಲ್ಲಿ ಸಮನ್ವಯ ಪ್ರಕಾರವನ್ನು ಸ್ವಲ್ಪ ವಿವರವಾಗಿ ತಿಳಿಸಿ, ಒಟ್ಟಿನಲ್ಲಿ ಪ್ರಥಮಾಧ್ಯಾಯವೆಂಬ ಸಮನ್ವಯಾಧ್ಯಾಯದಿಂದ ಸರ್ವೋತ್ತಮನಾದ ಶ್ರೀಮನ್ನಾರಾಯಣನ ಅನಂತಕಲ್ಯಾಣಗುಣಪರಿಪೂರ್ಣತೆಯನ್ನು ನಿರ್ಣಯಿಸಲಾಗಿದೆ. ಈ ವಿಷಯವನ್ನು ನಿರೂಪಿಸಿರುವುದರಿಂದ ಜಿಜ್ಞಾಸುಗಳಾದ ಸಾತ್ವಿಕಜನರಿಗೆ "ಶ್ರೀಹರಿಸರ್ವೋತ್ತಮತ್ವದ" ವಿಷಯದಲ್ಲಿ ದೃಢವಾದ ನಿಶ್ಚಯವು ಆಗುವುದರಲ್ಲಿ ಯಾವ ಸಂದೇಹವೂ ಇಲ್ಲ. ಇದಕ್ಕಾಗಿಯೇ ಜಿಜ್ಞಾಸಾಧಿಕರಣದ ವಿಶೇಷಾಕಾರವಾದ ನಿರೂಪಣೆಗೆ ಸಂಬಂಧಪಟ್ಟಂತೆ ಮೇಲೆ ಕಂಡ ಪ್ರತಿಪಾದನೆಯನ್ನು ಮಾಡಲಾಗಿದೆ.

ಮೋಕ್ಷಕ್ಕೆ ಕಾರಣವಾದ ಪರಮಾತ್ಮನ ಅತ್ಯರ್ಥಪ್ರಸಾದಕ್ಕೆ ಕಾರಣವಾದ ಪರಮೇಶ್ವರ ಭಕ್ತಿಯೆಂಬ ಅತಿ ಪರಿಪಕ್ವ ಭಕ್ತಿಯೋಗಕ್ಕೆ ಹೇತುವಾದ ಬಿಂಬಸಾಕ್ಷಾತ್ಕಾರಕ್ಕೆ ನಿಮಿತ್ತವಾದ ಪರಿಪಕ್ವಭಕ್ತಿಯೋಗಕ್ಕೆ ಕಾರಣವಾದ ನಿದಿಧ್ಯಾಸನಕ್ಕೆ (ಧ್ಯಾನಕ್ಕೆ) ಹೇತುವಾದ ಪಕ್ವಭಕ್ತಿಯೋಗಕ್ಕೆ ಹೇತುವಾದ ಮನನಕ್ಕೆ ಕಾರಣವಾದ ನಿಯತಗುರು ಪೂರ್ವಕ ಸಚ್ಛಾಸ್ತ್ರಶ್ರವಣದಿಂದ ಉಂಟಾಗುವ ಪಕ್ವಭಕ್ತಿಯೋಗಕ್ಕೆ ನಿಮಿತ್ತವಾದ "ಶ್ರೀಹರಿಸರ್ವೋತ್ತಮತ್ವದ ನಿಶ್ಚಯಕ್ಕಾಗಿಯೇ" "ಪರಮಾತ್ಮನ ಸ್ವರೂಪನಿಶ್ಚಯಕ್ಕಾಗಿಯೇ" ಮೀಸಲಾಗಿ ಸಮನ್ವಯಾಧ್ಯಾಯ ಮತ್ತು ಅವಿರೋಧಾಧ್ಯಾಯಗಳಿರುವುದರಿಂದ ಆವೆರಡರ ವಿಷಯಗಳನ್ನ ಸ್ಥೂಲವಾಗಿ ವಿವರಿಸುವ ದೃಷ್ಟಿಯಿಂದ ಈ ನಿರೂಪಣೆಯನ್ನು ಮಾಡಲಾಗಿದೆ. ಇದು ಕೇವಲ ಸ್ಥೂಲವಾದ ಪ್ರತಿಪಾದನೆಯು. ಅತಿವಿಮರ್ಶಾತ್ಮಕವಾದ ಸೂಕ್ಷ್ಮವಾದ ನಿರೂಪಣೆಯನ್ನು ಜನ್ಮಾಧಿಕರಣದಿಂದ ಪ್ರಾರಂಭಿಸಿ ಮುಂದೆ ಆಯಾ ಅಧಿಕರಣಗಳ ಸಾಮಾನ್ಯವಾದ ಅರ್ಥ ಪ್ರತಿಪಾದನೆಯ ಅನಂತರದಲ್ಲಿ ಪ್ರಾರಂಭ ಸುತ್ತೇವೆ.

ನಾಲ್ಕನೇ ಪಾದದಲ್ಲಿನ ಅರ್ಥವಿಶೇಷ ನಿರೂಪಣೆಯು.

"ಓಂ ತತ್ತು ಸಮನ್ವಯಾತ್ ಓಂ" ಎಂಬ ಮೊದಲನೆಯ ಅಧ್ಯಾಯದ ಮೊದಲನೆಯ ಪಾದದಲ್ಲಿನ ನಾಲ್ಕನೇ ಸೂತ್ರದಲ್ಲಿ ವೈದಿಕಗಳಾದ ಸರ್ವಶಬ್ದಗಳಿಗೂ ಮುಖ್ಯವಾಗಿ ಪರಮಾತ್ಮಪರತ್ವವನ್ನು ಹೇಳಲಾಗಿದೆ.

**ಪೂರ್ವಪಕ್ಷಿಯ ಶಂಕಾ** :- ಇದು ಕೂಡುವುದಿಲ್ಲ. ಸರ್ವಶಬ್ದಗಳ ಪೈಕಿ "ಅವ್ಯಕ್ತ" ಎಂಬ ಶಬ್ದವೂ ಸೇರಿದೆ. ಈ ಶಬ್ದವು ಕಾಠಕ ಶಾಖಾದಲ್ಲಿ

**"ಮಹತಃಪರಂ, ಅವ್ಯಕ್ತಂ, ಅವ್ಯಕ್ತಾತ್, ಪುರುಷಃ ಪರಃ"**

ಎಂಬ ಕಾಠಕೋಪನಿಷತ್ತಿನ ಮಂತ್ರದಲ್ಲಿ ಇದೆ.

"ಮಹದಾದಿಗಳು - ಸ್ವಸದೃಶವಾದ ಕಾರಣದಿಂದ ಜನ್ಯವಾದುವು - ಕಾರ್ಯತ್ವಾತ್ - ಘಟವತ್" ಎಂಬ ಸಾಂಖ್ಯರಿಂದ ಉಪನ್ಯಸ್ತವಾದ ಅನುಮಾನದಿಂದ ಸಿದ್ಧವಾದ ಜಡವಾದ "ಪ್ರಧಾನ"ವನ್ನೇ ಅವ್ಯಕ್ತ ಶಬ್ದವು (ಜಡ ಪ್ರಕೃತಿಯನ್ನೇ) ತಿಳಿಸುತ್ತಿದೆ. ಸಾಂಖ್ಯಾನುಮಾನದಿಂದ ಪರಿಕಲ್ಪಿತವಾದ ಪ್ರಧಾನವನ್ನೇ ಉಪನಿಷತ್ತಿನಲ್ಲಿನ ಅವ್ಯಕ್ತ ಶಬ್ದವು ಹೇಳುತ್ತಲಿದೆ. ವಿಷ್ಣುವನ್ನು ಹೇಳುತ್ತಿಲ್ಲ. ಮತ್ತು ಪುರುಷಾತ್ - ಅವರತ್ವವು ಅವ್ಯಕ್ತಕ್ಕೆ ಉಕ್ತವಾಗಿದೆ. ಅವರತ್ವವು ವಿಷ್ಣುವಿಗೆ ಸರ್ವಥಾ ಕೂಡುವುದಿಲ್ಲ. ಏವಂಚ ಸರ್ವಶಬ್ದರ ಸಮನ್ವಯವು ವಿಷ್ಣುವಿನಲ್ಲಿ ಹೇಳಿದುದು ಸರಿಯಲ್ಲವೆಂದು ಪೂರ್ವಪಕ್ಷಿಯ ಆಕ್ಷೇಪವಾಗಿದೆ.

ಇದಕ್ಕೆ ಸಮಾಧಾನವನ್ನು ಈ ರೀತಿ ಸೂತ್ರಕಾರರು ನಾಲ್ಕನೇ ಪಾದದ ಮೊದಲನೆಯದಾದ ಆನುಮಾನಿಕಾಧಿಕರಣದಲ್ಲಿ "ಶರೀರರೂಪಕವಿನ್ಯಸ್ತಗೃಹೀತೇಃ ದರ್ಶಯತಿಚ" ಎಂಬ ಸೂತ್ರಭಾಗದಿಂದ ತಿಳಿಸಿರುತ್ತಾರೆ.

ಸಿದ್ಧಾಂತರೀತ್ಯಾ ಆ ಶ್ರುತಿಯು ಅರ್ಥವು ಈ ರೀತಿ ಇದೆ.

ಮಹತಃ = ಮಹತ್ತತ್ವಕ್ಕೆ ಅಭಿಮಾನಿಯಾದ ಚತುರ್ಮುಖಬ್ರಹ್ಮನಿಗಿಂತಲೂ, ಅವ್ಯಕ್ತಂ = ಅವ್ಯಕ್ತ ಎಂಬ ಶಬ್ದದಿಂದ ಹೇಳಲ್ಪಡತಕ್ಕ ಶ್ರೀತತ್ವವೂ (ಪರಬ್ರಹ್ಮನೂ), ಪರಂ = ಉತ್ತಮವಾದುದು. ಅವ್ಯಕ್ತಾತ್ = ಆ ಅವ್ಯಕ್ತ ಶಬ್ದದಿಂದ ಹೇಳಲ್ಪಡತಕ್ಕ ರಮಾದೇವಿಗಿಂತಲೂ, ಪುರುಷಃ = ಪೂರ್ಣ ಷಡ್ಗುಣನಾದ ಪುರುಷಶಬ್ದವಾಚ್ಯನಾದ ಭಗವಂತನು, ಪರಃ ಉತ್ತಮನು, (ಸರ್ವೋತ್ತಮನು.) ತಸ್ಮಾಚ್ಚ ಉತ್ತಮಂ ನ ಕಿಂಚಿದಸ್ತಿ = ಅವನಿಗಿಂತಲೂ ಉತ್ತಮವಾದುದು ಯಾವುದೂ ಇಲ್ಲ. ಪ್ರಕೃತದಲ್ಲಿ ಅವ್ಯಕ್ತಾದಿ ಶಬ್ದಗಳಿಂದ ಪರಮಾತ್ಮನೇ ಹೇಳಲ್ಪಟ್ಟಿದ್ದಾನೆ. ಉಪನಿಷತ್ತಿನಲ್ಲಿ ಕಂಡುಬರುವ ಅವ್ಯಕ್ತಶಬ್ದವು ಪರಮಮುಖ್ಯವೃತ್ತಿಯಿಂದ ಪರಮಾತ್ಮನನ್ನೇ ಹೇಳುತ್ತಲಿದೆ.

ಲೋಕದಲ್ಲಿ ಶರೀರವು ಹೇಗೆ ಪುರುಷಾಧೀನವಾಗಿದೆಯೋ ಹಾಗೆ ಅವ್ಯಕ್ತದಲ್ಲಿ ಜಡಪ್ರಕೃತಿಯಲ್ಲಿ ಪರಮಾತ್ಮನು ನಿಯಾಮಕನಾಗಿರುವವನಾದುದರಿಂದ ಮುಖ್ಯವಾಗಿ ಪರಮಾತ್ಮನನ್ನೇ ಅವ್ಯಕ್ತಶಬ್ದವು ಹೇಳುತ್ತಲಿದೆ. ಪರಮಾತ್ಮ ತಂತ್ರವಾಗಿರುವುದರಿಂದ (ಪರಮಾತ್ಮನ ಅಧೀನವಾಗಿರುವುದರಿಂದ) ಪ್ರಸಿದ್ಧಶರೀರಸದೃಶವಾದ ಪ್ರಧಾನಾದಿಗಳು ಪರಮಾತ್ಮನ ಶರೀರರೂಪವಾಗಿವೆ.

ಸೂತ್ರಕಾರರು "ಶರೀರರೂಪಕವಿನ್ಯಸ್ತಗೃಹೀತೇಃ" ಎಂದು ಹೇಳಿರುವುದು ಮಾರ್ಮಿಕವಾದ ಸಮಾಧಾನವಾಗಿದೆ. ಶರೀರಸ್ಯರೂಪಮಿವ ರೂಪಂ ಯಸ್ಯತತ್ ಶರೀರರೂಪಂ ಕುತ್ಸಿತಂ ಶರೀರರೂಪಂ = ಶರೀರರೂಪಕಂ = ಪ್ರಧಾನಾದಿ। "ತತ್ರ ವಿನ್ಯಸ್ತಸ್ಯ ವಿಷ್ಣೋಃ = ನ್ಯಸ್ತಸ್ಯವಿಷ್ಣೋಃ ಅವ್ಯಕ್ತಾದಿಶಬ್ದೈರ್ಗ್ರಹೀತೇಃ" ಎಂಬ ನಿರ್ವಚನದಂತೆ ಪ್ರಧಾನಾದಿಗಳಲ್ಲಿ ನಿಯಾಮಕನಾಗಿ ಪರಮಾತ್ಮನು ಇರುವ ಪ್ರಯುಕ್ತ ಮುಖ್ಯವಾಗಿ ಅವ್ಯಕ್ತಶಬ್ದವಾಚ್ಯನಾದ ಪರಮಾತ್ಮನ (ಪರಬ್ರಹ್ಮನ) ಸಂಬಂಧವು ಪ್ರಧಾನಾದಿಗಳಲ್ಲಿರುವುದರಿಂದ ಅವ್ಯಕ್ತಶಬ್ದದ ಪ್ರಯೋಗವು ಅವುಗಳಲ್ಲಿದೆಯೆಂಬ ಅಭಿಪ್ರಾಯ. ಜೀವನ ಶರೀರವು ಹೇಗೆ ಜೀವನಿಗೆ ಅಧೀನವಾಗಿದೆಯೋ ಹಾಗೆಯೇ ಪ್ರಧಾನಾದಿಗಳೂ ಪರಮಾತ್ಮನ ಅಧೀನತೆಯ ದೃಷ್ಟಿಯಿಂದ ಪರಮಾತ್ಮನ ಶರೀರವೆಂದು ಕರೆಯಲ್ಪಡುತ್ತವೆ. ಆದರೆ ಜಡವಾದ ಪ್ರಧಾನವೇ ಮುಖ್ಯವಾದ ಶರೀರವಲ್ಲವೆಂಬ ಅಂಶವನ್ನು ವ್ಯಕ್ತಪಡಿಸುವುದಕ್ಕಾಗಿ ಸೂತ್ರಕಾರರು "ಶರೀರರೂಪಕ" ಎಂಬಲ್ಲಿ ಕುತ್ಸಿತ ಶರೀರ ಎಂಬ ಅರ್ಥ ಬರುವಂತೆ "ಕ" ಪ್ರತ್ಯಯಾಂತವಾದ ರೂಪಶಬ್ದವನ್ನು ಬಳಸಿರುತ್ತಾರೆ. ಕುತ್ಸಿತಶರೀರವು ಎಂದಿಗೂ ಮುಖ್ಯ ಶರೀರವಾಗಲಾರದು. ಪರಮಾತ್ಮನ

ಮುಖ್ಯ ಶರೀರವು ಹಿಂದೆಯೇ ಹೇಳಿದಂತೆ ಅಪ್ರಾಕೃತಾನಂದಾಧಿಕ ಜ್ಞಾನಾನಂದಮಯವಾದುದು ಶ್ರುತಿಸಿದ್ಧವಾಗಿದೆ. ಎನ್ನಸ್ತ ಎಂಬ ಪದದ ಸ್ವಾರಸ್ಯವೇನೆಂದರೆ, ಪ್ರಧಾನಾದಿ ವಿಶಿಷ್ಟನಾದ, ಪ್ರಧಾನಾದಿಗಳಲ್ಲಿದ್ದು ನಿಯಾಮಕನಾದ ಪರಮಾತ್ಮನು ಮಾತ್ರ ಅವ್ಯಕ್ತಶಬ್ದವಾಚ್ಯನಾಗಿದ್ದಾನೆ. ಕೇವಲ ಪರಮಾತ್ಮನಲ್ಲವೆಂದು ಅಭಿಪ್ರಾಯ. ಭಾಷ್ಯಕಾರರು "ಕಪ್ರತ್ಯಯಃ ಕುತ್ಸನೇ" ಎಂದು ಹೇಳಿರುವರು. ವಾಗಿನ್ನಾಚಾರ್ಯರೂ ಸಹ "ಕುತ್ಸಿತೇ" (೫-೩-೭೪) ಎಂದು ಕುತ್ಸನಾರ್ಥದಲ್ಲಿ ಕಪ್ರತ್ಯಯ ಹೇಳಿದ್ದಾರೆ.

ವೇದವಾಣಿಯೂ ಸಹ ಅವ್ಯಕ್ತ ಶಬ್ದದಿಂದ ಮುಖ್ಯವಾಗಿ ಪರಮಾತ್ಮನನ್ನೇ ಹೇಳುತ್ತಲಿದೆ

**ಪಿಪ್ಪಲಾದಶಾಖಾದಲ್ಲಿ** **"ಅವ್ಯಕ್ತಂ, ಅಚಲಂ, ಶಾಂತಂ, ನಿಷ್ಕಲಂ ನಿಷ್ಕ್ರಿಯಂ ಪರಮ್।**
**ಯೋ ವೇದ ಪರಿಮಾತ್ಮಾನಂ ಸ ಭಯಾತನುಮುಚ್ಯತೇ"।।**
**(ಇತಿ ಪಿಪ್ಪಲಾದಶಾಖಾಯಾಂ)**

**ಅರ್ಥ** :- ಯಃ = ಯಾವ ಅಧಿಕಾರಿಯು, ಪರಮಾತ್ಮನನ್ನು ವ್ಯಕ್ತನಾಗಿ ಘಟಪಟಾದಿಗಳಂತೆ ತಿಳಿಯಲು ಆಗದಿರುವುದರಿಂದ, ಅವ್ಯಕ್ತಂ =ಅವ್ಯಕ್ತಶಬ್ದವಾಚ್ಯನನ್ನಾಗಿಯೂ, ಈಶ್ವರನಾಗಿರುವುದರಿಂದ ಅಚಲಂ =ಇತರರಿಂದ ಅಚಾಲ್ಯನನ್ನಾಗಿಯೂ, ಶಾಂತಂ = ನಿರ್ವಿಕಾರನನ್ನಾಗಿಯೂ, ಅಥವಾ ಶಸ್ಯ, ಸುಖಸ್ಯ ಅಂತಂ = ಸುಖೋತ್ಕರ್ಷಸೀಮಾ ಭೂಮಿಂ, ಪೂರ್ಣಸುಖಮಿತಿವಾ, ಪೂರ್ಣಸುಖವುಳ್ಳವನನ್ನಾಗಿಯೂ, ನಿಷ್ಕಲಂ =ನಿರ್ಗತಾಃ ಕಲಾಃ ಯಸ್ಮಾತ್ತಂ ಷೋಡಶಕಲಾರಹಿತನನ್ನಾಗಿಯೂ, ನಿಷ್ಕ್ರಿಯಂ =ಪ್ರಾಕೃತಕ್ರಿಯಾರಹಿತನನ್ನಾಗಿಯೂ, ಅಕ್ಲಿಷ್ಟಕಾರಿಯನ್ನಾಗಿಯೂ, ಪ್ರಳಯ ಕಾಲದಲ್ಲಿ ಪ್ರಚುರವ್ಯಾಪಾರ (ಕ್ರಿಯಾ) ರಹಿತನನ್ನಾಗಿಯೂ, ಪರಂ = ಉತ್ತಮನನ್ನಾಗಿಯೂ, ಆತ್ಮಾನಂ =ಆದಾನಾದಿ ಕರ್ತಾರಂ, ಹರಿಂ = ಹರಿಯನ್ನು, ವೇದ = ತಿಳಿಯುತ್ತಾನೆಯೋ, ಸಃ = ಅಂತಹ ಅಧಿಕಾರಿಂಚೇತನನು. ಅನು = ಅಂತಹ ಪರಮಾತ್ಮನ ಜ್ಞಾನಾನಂತರದಲ್ಲಿ, ಭಯಾತ್ = ಸಂಸಾರ ಭಯದಿಂದ, ಮುಚ್ಯತೇ = ಮುಕ್ತನಾಗುತ್ತಾನೆಂದು, ಪಿಪ್ಪಲಾದ ಋಷಿಗಳಿಂದ ದೃಷ್ಟವಾದ ಶ್ರುತಿಯ ಅರ್ಥವಾಗಿದೆ.

ಮತ್ತು ಅತಿಸೂಕ್ಷ್ಮವಾದ ವಸ್ತುಗಳೇ ಪರಮಾಣು, ಆಕಾಶ ಮೊದಲಾದವುಗಳು ಅವ್ಯಕ್ತ ಶಬ್ದದಿಂದ ಹೇಳಲ್ಪಡುತ್ತವೆ. "ನ ವ್ಯಜ್ಯತೆ" ಇತ್ಯವ್ಯಕ್ತಂ ಎಂಬ ವ್ಯುತ್ಪತ್ತಿಯಿಂದ ಸೂಕ್ಷ್ಮವಾದ ವಸ್ತುವೇ ಅವ್ಯಕ್ತ ಶಬ್ದದಿಂದ ವಾಚ್ಯವಾಗಿದೆ. ಅಂತಹ ಮುಖ್ಯವಾದ ಸೂಕ್ಷ್ಮತ್ವವು ಪರಮಾತ್ಮನಿಗೇನೇ ಇರುವ ವಿಷಯವನ್ನು ಶ್ರುತಿಯೇ ತಿಳಿಸುತ್ತಲಿದೆ. ಪಿಪ್ಪಲಾದ ಶಾಖಾದಲ್ಲಿನ ಶ್ರುತಿವಾಕ್ಯವು ಪರಮಾತ್ಮನಿಗೆ ಪರಮಸೂಕ್ಷ್ಮತ್ವವನ್ನು ವ್ಯಕ್ತಪಡಿಸುತ್ತಲಿದೆ.

**ಯತ್ತತ್ಸೂಕ್ಷ್ಮಂ ಪರಮಂ ವೇದಿತವ್ಯಂ ನಿತ್ಯಂ ಪದಂ ವೈಷ್ಣವಂ ಹ್ಯಾಮನಂತಿ।**
**ಯತ್ತಲ್ಲೋಕಾ ನ ವಿದುಃ ಲೋಕಸಾರಂ ವಿಂದಂತ್ಯೇತತ್ಕವಯೋ ಯೋಗನಿಷ್ಠಾಃ।।**
**(ಇತಿ ಚ ಪಿಪ್ಪಲಾದಶಾಖಾಯಾಮ್)**

**ಅರ್ಥ** :- ಯತ್ = ಯಾವ, ಲೋಕಸಾರಂ = ಈ ಲೋಕಕ್ಕಿಂತಲೂ ಉತ್ತಮವಾದ, ವೈಷ್ಣವಂ ಪದಂ = ವಿಷ್ಣುವಿನ ಸ್ವರೂಪವುಂಟೋ, ತತ್ಪರಮಂ ಸೂಕ್ಷ್ಮಂ =ಉತ್ತಮವಾದ ಮುಖ್ಯವಾದ ಸೂಕ್ಷ್ಮವಾದುದು. ವೇದಿತವ್ಯಂ = ತಿಳಿಯಲ್ಪತಕ್ಕದ್ದೆಂದು, ಆಮನಂತಿ = ವಿಷೋಃಪರಾತ್ಮಾಪೇತಾಪಾ ವೇದಿತವ್ಯಃ (ಮುಂ ೩-೧-೮) ಎಂಬುದಾಗಿ ಅಥರ್ವಣಿಕರು ಪಠಿಸುತ್ತಾರೆಯೋ, ಯಚ್ಚ =ಯಾವ ಪರಬ್ರಹ್ಮ ವಸ್ತುವನ್ನು, ಲೋಕಾಃ = ಪಾಮರರು, ನ ವಿದುಃ = ತಿಳಿಯು ಲಾರರೋ, ತದೇತತ್ = ಅಂತಹ ವಿಷ್ಣುವಿನ ರೂಪವನ್ನು, "ಯೋಗನಿಷ್ಠಾಃ = ಬ್ರಹ್ಮನಲ್ಲಿ ಮನಸ್ಸೋಯೋಗ ನಿಷ್ಠರಾದ ಉಪಾಯನಿದ್ದರಾದ, ಕವಯಃ = ಜ್ಞಾನಿಗಳು, ವಿಂದಂತಿ = ಸಾಕ್ಷಾತ್ಕರಿಸುತ್ತಾರೆ ಎಂಬುದು ಸುಪ್ರಸಿದ್ಧವಾಗಿದೆ.

ಮತ್ತು ತದಧೀನತ್ವನ್ಯಾಯದಿಂದಲೂ ಪರಮಾತ್ಮನಿಗೆ ಅವ್ಯಕ್ತಶಬ್ದವಾಚ್ಯತ್ವವು ಯುಕ್ತವಾಗಿದೆ.

ಸ್ಕಾಂದವಚನದಿಂದಲೂ ಈ ವಿಚಾರವು ತಿಳಿದುಬರುತ್ತದೆ.

**"ಯದಧೀನೋ ಗುಣೋ ಯಸ್ಯ ತದ್ಗುಣೀ ಸೋಽಭಿಧೀಯತೇ ।**
**ಯಥಾ ಜೀವಃ ಪರಾತ್ಮೇತಿ ಯಥಾ ರಾಜಾ ಜಯೀತ್ಯಪಿ" ॥ ಇತಿಸ್ಕಾಂದೇ ॥**

**ತಾತ್ಪರ್ಯ** :- ಅಪ್ರಕೃತವಾದ "ಅವ್ಯಕ್ತತ್ವವೂ, ಮಹತ್ತತ್ತ್ವಕ್ಕಿಂತಲೂ ಪರಮತ್ವವೂ (ಮಹತಃ ಪರಂ ಅವ್ಯಕ್ತಂ") ಏನುಂಟೋ ಇದನ್ನು ಪರಮಾತ್ಮನು ಅವ್ಯಕ್ತಕ್ಕೆ ಉಂಟುಮಾಡುವವನಾದುದರಿಂದ, ಅದಕ್ಕೆ ನಿಯಾಮಕನಾಗಿರುವುದರಿಂದ, ಆ ಧರ್ಮವು (ಗುಣವು) ಪರಮಾತ್ಮನ ಅಧೀನವಾದುದರಿಂದ ಮುಖ್ಯವಾಗಿ ಆ ಶಬ್ದವು ಪರಮಾತ್ಮನನ್ನೇ ಹೇಳುತ್ತಲಿದೆ.

**ಅರ್ಥ** :- ಯತ್ = ಯಾವ ಧರ್ಮಿಯ ವಾಚಕವಾದ ಶಬ್ದಕ್ಕೆ ಪ್ರವೃತ್ತಿನಿಮಿತ್ತವೆಂದು ಕರೆಯಲ್ಪಡತಕ್ಕ ಯಾವ ಗುಣವು, ಯದಧೀನಃ = ಯಾರ ಅಧೀನವೋ, ಸಃ = ಅಂತಹ ಧರ್ಮಕ್ಕೆ ಸ್ವಾಮಿಯಾದವನು, ತದ್ಗುಣೀ = ಆ ಗುಣವುಳ್ಳವನೆಂದು, ಅಭಿಧೀಯತೆ = ಹೇಳಲ್ಪಡುತ್ತಾನೆ.

ಈ ವಿಷಯದಲ್ಲಿ ವೈದಿಕವಾದ ಉದಾಹರಣೆಯೂ ಲೌಕಿಕವಾದ ಉದಾಹರಣೆಯೂ ಪ್ರಸಿದ್ಧವಾಗಿದೆ.

ಯಥಾ = ಹೇಗೆ, ಪರಾತ್ಮಾ = ವಿಷ್ಣುವು, "ಅನೇನ ಜೀವೇನಾತ್ಮನಾ" (ಛಾಂದೋ ೬-೧೦-೧). ಎಂಬಲ್ಲಿ ಜೀವಗತವಾದ ಪ್ರಾಣಧಾರಣಾಖ್ಯವಾದ ಜೀವಶಬ್ದಕ್ಕೆ ಪ್ರವೃತ್ತಿನಿಮಿತ್ತವಾದ ಧರ್ಮಕ್ಕೆ ಸ್ವಾತಂತ್ರ್ಯನಿಮಿತ್ತದಿಂದ ಪರಮಾತ್ಮನೇ "ಜೀವ " ಎಂಬ ಶಬ್ದದಿಂದ ಹೇಳಲ್ಪಡುತ್ತಾನೆ. ಇದು ಅಮುಖ್ಯಪ್ರಯೋಗವಲ್ಲ. ಮುಖ್ಯವಾದ ಪ್ರಯೋಗವೇ ಆಗಿದೆ ಎಂಬುದನ್ನು ಸ್ಕಾಂದವಚನವು ಅಭಿಧಾವೃತ್ತಿಯೆಂಬ ಮುಖ್ಯವೃತ್ತಿಯಿಂದೇ ತಿಳಿಸುವುದಕ್ಕಾಗಿ "ಅಭಿಧೀಯತೇ " ಎಂದು ಹೇಳುತ್ತಲಿದೆ.

ಹಾಗೆಯೇ ಭೃತ್ಯಗತವಾದ ಜಯವು ಜಯಿಶಬ್ದದ ಪ್ರಯೋಗಕ್ಕೆ ಕಾರಣವಾಗದೆ. ಅಂತಹ ಜಯವು ರಾಜನ ಅಧೀನವಾಗಿರುವುದರಿಂದ "ರಾಜಾ ಜಯೀ" ಎಂದು ಲೌಕಿಕವಾದ ವ್ಯವಹಾರವೂ ಕಂಡುಬಂದಿದೆ.

ಇದೇ ರೀತಿ ಅವಾಚ್ಯವೆಂಬುದಾಗಲಿ, ಮುಖ್ಯವಾಗಲಿ, ಬಂಧವೇ ಆಗಲಿ, ಇವೆಲ್ಲವೂ ಅನ್ಯಗತವಾಗಿರುವುದು ಈಶಾಧೀನಗಳಾಗಿರುವುದರಿಂದ ತದಧೀನತಾನಿಮಿತ್ತದಿಂದ ಪರಮಾತ್ಮನ ವಾಚಕಗಳಾಗಿವೆ. ಆದರಿಂದಲೂ ಸ್ವಾತಂತ್ರ್ಯ ನಿಮಿತ್ತದಿಂದಲೂ "ನಾಮಾನಿ ಸರ್ವಾಣಿ ಯಮಾವಿಶಂತಿ ತಂ ವೈ ವಿಷ್ಣುಂ ಪರಮಮುದಾಹರಂತಿ" (ಭಾಲ್ಲವೇಯಶ್ರುತಿ) ಎಂಬ ವೇದವಚನದಂತೆ ಪರಮಾತ್ಮನಿಗೆ ಅವ್ಯಕ್ತಾದಿ ಸರ್ವಶಬ್ದವಾಚ್ಯತ್ವವು ಸಂಗತವಾಗಿದೆ.

ಇದೇ ರೀತಿ ಕರ್ಮವಾಚಕಗಳಾಗಿ ಪ್ರಸಿದ್ಧಗಳಾದ "ವಸಂತೇ ವಸಂತೇ ಜ್ಯೋತಿಷಾ ಯಜೇತ" ಎಂಬ ಶ್ರುತಿವಾಕ್ಯದಲ್ಲಿರತಕ್ಕ ಜ್ಯೋತಿಷ್ಟೋಮಾದಿಕರ್ಮಾದಿವಾಚಕಗಳಾದ ಶಬ್ದಗಳೆಲ್ಲವೂ ಪರಮಮುಖ್ಯವೃತ್ತಿಯಿಂದ ಪರಮಾತ್ಮವಾಚಕಗಳೇ ಆಗಿವೆ.

ಅನುವ್ಯಾಖ್ಯಾನಕಾರರು ಶಬ್ದಪ್ರವೃತ್ತಿಗೆ ಕಾರಣವಾವುದೆಂಬುದನ್ನು ತಿಳಿಸುವಾಗ ಸ್ವಾತಂತ್ರ್ಯವನ್ನು, ತದ್ಗತತ್ವವನ್ನು ನಿಮಿತ್ತಗಳಾಗಿ ಪ್ರತಿಪಾದಿಸಿದ್ದಾರೆ. ಸ್ವಾತಂತ್ರವೇ ಮುಖ್ಯವೂ ಶಬ್ದಪ್ರವೃತ್ತಿನಿಮಿತ್ತವೂ ಆಗಿದೆ.

ಇವೆರಡರಲ್ಲಿ ಸ್ವಾತಂತ್ರ್ಯನಿಮಿತ್ತದಿಂದ "ರಾಜಾ ಜಯೀ" ಎಂಬ ವ್ಯವಹಾರವು ಲೋಕಪ್ರಸಿದ್ಧವಾಗಿದೆ. ಆದಕಾರಣ ಸ್ವಾತಂತ್ರ್ಯವು ಮುಖ್ಯವಾದುದು.

ಯಾವ ಶಬ್ದವು ಯದಧೀನವಾದ ಸ್ವರೂಪ ಪ್ರವೃತ್ತಿನಿಮಿತ್ತವುಳ್ಳದುದೋ ಅದು ಅದಕ್ಕೆ ವಾಚಕವು ಎಂಬ ಅರ್ಥವನ್ನುಳ್ಳ "ಯಃ ಶಬ್ದಃ ಯದಧೀನ ಪ್ರವೃತ್ತಿನಿಮಿತ್ತಕಃ ಸಃ ತದ್ವಾಚಕಃ" ಎಂಬ ವ್ಯಾಪ್ತಿಯು ಈ ಸಂದರ್ಭದಲ್ಲಿ ವಿವಕ್ಷಿತವಾಗಿದೆ.

ಮತ್ತೆ ಯಾವುದು ಯದಧೀನಸಾಕ್ಷಾತ್ಪ್ರತೀತಿಪ್ರವೃತ್ತಿಯುಳ್ಳದುದೋ, ಅದು ಅದಕ್ಕೆ ಮುಖ್ಯವಾದುದಾಗಿದೆ. ಯಥೇಷ್ಟವಾದ ವಿನಿಯೋಗಯೋಗ್ಯತ್ವವು ಸ್ವತಂತ್ರವಸ್ತುವಿಗೆ ಇರುತ್ತದೆಯೇ ಹೊರತು ಅಸ್ವತಂತ್ರವಸ್ತುವಿಗೆ ಇರುವುದಿಲ್ಲ.

ಯಾವುದು ಎಲ್ಲಿ ಇದೆಯೋ ಯಾವುದನ್ನು ಸಂಬಂಧಿಸಿದೆಯೋ ಅದಕ್ಕೆ ಅದು ಮುಖ್ಯವಾಗಿ ವಾಚಕವಲ್ಲ.

ಜೀವನು ತನಗೆ ಬಂದೊದಗಿರತಕ್ಕ ದುಃಖವನ್ನು ತ್ಯಜಿಸುವುದಕ್ಕಾಗಲಿ, ನಾಶಪಡಿಸುವಿಕೆಯಲ್ಲಾಗಲಿ, ಅದರ ಪ್ರಭಾವವನ್ನು ಕಮ್ಮಿ ಮಾಡುವುದಕ್ಕಾಗಲಿ, ಅದನ್ನು ತನಗಲ್ಲದೆ ಮತ್ತೊಬ್ಬರಿಗೆ ಉಂಟುಮಾಡುವಿಕೆಯಲ್ಲಾಗಲಿ ಶಕ್ತನಲ್ಲ, ಸ್ವತಂತ್ರನಾಗಿಲ್ಲ, ಪರಮಾತ್ಮನೇ ಸ್ವತಂತ್ರನು. ಆದಕಾರಣ ಶಬ್ದಪ್ರಯೋಗದಲ್ಲಿ ತದ್ಗತತ್ವವು ಮುಖ್ಯವಲ್ಲ. ಸ್ವಾತಂತ್ರ್ಯವೇ ಮುಖ್ಯವಾಗಿದೆ.

ಪರಮಾತ್ಮನಾದರೋ "ನಿರಸ್ತಾಸ್ತೋ ನಿರವದ್ಯಃ" ಎಂಬ ಶ್ರುತಿಯಲ್ಲಿ ಹೇಳಿರುವಂತೆ ಸಕಲದೋಷಗಳಿಂದಲೂ ರಹಿತನಾಗಿರುತ್ತಾನೆ. ಶಬ್ದಪ್ರವೃತ್ತಿ ಹೇತುಗಳಲ್ಲಿ ಸ್ವಾತಂತ್ರ್ಯವೇ ಮುಖ್ಯ ಕಾರಣವಾಗಿರುವುದರಿಂದ ಅಂತಹ ಸ್ವಾತಂತ್ರ್ಯದ ನಿಮಿತ್ತದಿಂದ, ದುಃಖಿ, ಬದ್ಧ, ಅಪಾರ, ಜೀವ ಇತ್ಯಾದಿ ಶಬ್ದಗಳೂ ಪರಮಮುಖ್ಯವೃತ್ತಿಯಿಂದ ಪರಮಾತ್ಮನನ್ನೇ ಹೇಳುತ್ತಲಿವೆಯೆಂದು ಅಭಿಪ್ರಾಯ.

ಮೇಲೆ ತಿಳಿಸಿದ ಅಭಿಪ್ರಾಯವೆಲ್ಲವೂ "ಅನು ವ್ಯಾಖ್ಯಾನದ ಅಭಿಪ್ರಾಯದ ವಿವರಣೆಯೇ ಆಗಿದೆ. ಸಮ್ಮತಿಗಾಗಿ ವಾಸುದೇವ ಶ್ರುತಿಯನ್ನು ಅನುವ್ಯಾಖ್ಯಾನಕರರು ಉದಾಹರಿಸಿದ್ದಾರೆ.

ವಾಸುದೇವಶ್ರುತಿಯೂ ಸಹ ಇದನ್ನು ಸಮರ್ಥಿಸುತ್ತಲಿದೆ.

> "ವಾಸುದೇವಸ್ತು ಶಿಷ್ಟಾತ್ಮ ನೈವವಿದ್ಯಾದಮಂಗಳಮ್ ।
> ಮಂಗಳಾಮಂಗಳೇಽಸ್ಯ ಕೃತಕೋ ನಾಮಂಗಳಂವದೇತ್ ॥
> ಸ್ವಾತಂತ್ರ್ಯಾಪೇಕ್ಷಯಾವಿಷ್ಣೋರ್ದೋಷೋನಾಮಂಗಳೋಽಸ್ತಿತು ।
> ಬಹುಭುಕ್ತ್ವಂ ಯಥಾ ದೋಷೋ ನೃಷು ನೈವ ಹರೌಕ್ವಚಿತ್ ।
> ಏವಂ ದುಃಖಾದಿಶಬ್ದಾಶ್ಚ ಸ್ವಾತಂತ್ರ್ಯಾಪೇಕ್ಷಯೋದಿತಾಃ ॥
>
> ನೈವದೋಷಾ ಹರೌ ತದ್ವದ್ಬುದ್ಧ್ಯುತ್ಪ್ರದೋಷಕಾರಿಣಃ ।
> ತಸ್ಮಾತ್ತೇ ದೋಷಶಬ್ದಾಶ್ಚ ತಸ್ಯೈವ ಗುಣವಾಚಕಾಃ ॥

**ಅಭಿಪ್ರಾಯ :-** ವಾಸುದೇವ ಶ್ರುತಿಯು ಪರಮಾತ್ಮನ ವಿಷಯದಲ್ಲಿ ದುಃಖ, ಬದ್ಧ, ಇತ್ಯಾದಿ ದೋಷ ವಾಚಕಗಳಾದ (ಅಮಂಗಳ ಶಬ್ದಗಳ) ಪ್ರಯೋಗವನ್ನು ಖಂಡಿಸುತ್ತಲಿದೆ. ಸರ್ವಥಾದೋಷವುಳ್ಳವಿಕೆಯ ದೃಷ್ಟಿಯಿಂದ ಪ್ರಯೋಗಿಸಬೇಕಾರದು. ಪರಮಾತ್ಮನು ನಿರ್ದೋಷನೆಂದು ಘಂಟಾಘೋಷವಾಗಿ ನಿರಸ್ತಮೋ ನಿರವದ್ಯಃ ಎಂಬ ಶ್ರುತಿಯು ಸಾರುತ್ತಲಿದೆ. ಆದಕಾರಣ ಮಂಗಳಾಮಂಗಳಪ್ರಸಕ್ತಿಯು ಪರಮಾತ್ಮನನ್ನು ಬಿಟ್ಟು ಬೇರೆ ಕಡೆ ಉಂಟಾಗಬಹುದಾದರೂ, ಪರಮಾತ್ಮನಲ್ಲಿ ಕೇವಲ ಮಂಗಳಶಬ್ದಗಳನ್ನೇ ಸ್ವತಂತ್ರ್ಯಾಪೇಕ್ಷ ದೃಷ್ಟಿಯಿಂದ ಪ್ರಯೋಗಿಸಬೇಕೆಂದು ಎಚ್ಚರಿಸುತ್ತಲಿದೆ.

''ಬಹುಭುಕ್ತ್ವ'' ಅಂದರೆ ಬಹುಭುಕ್ ಪರಮೇಶ್ವರಃ ''ಪರಮಾತ್ಮನು ಅತಿಭೋಜನವುಳ್ಳವನು'' ಎಂದರೆ ಸಂಹರ್ತೃತ್ವಲಕ್ಷಣವಾದ ಗುಣವೇ ಪರಮಾತ್ಮನಿಗೆ ಹೇಳಿದಂತಾಗುತ್ತದೆ. ಸೃಷ್ಟ್ಯಾದ್ಯಷ್ಟಕರ್ತೃತ್ವರೂಪಗಳಾದ ಸ್ವರೂಪ ಲಕ್ಷಣಗಳಲ್ಲಿ ''ಸಂಹಾರಕರ್ತೃತ್ವವೂ'' ಸೇರಿದೆ. ಅದೂ ಒಂದು ಗುಣವೇ ಆಗಿದೆಯೇ ಹೊರತು ದೋಷವಲ್ಲ. ಅದು (ಮಾನವರಿಗೆ ಮಾತ್ರ) ನರರಿಗೆ ದೋಷವೆಂಬುದಾಗಿ (ಅಸ್ವರ್ಗ್ಯಂಚಾತಿಭೋಜನಂ) ಕಂಡುಬಂದಿದೆ.

''ಬಹುಭುಕ್ ದೇವದತ್ತಃ'' ಎಂದರೆ ಬಹುಭೋಗವುಳ್ಳವನು (ಹೊಟ್ಟೆಬಾಕ ದೇವದತ್ತನು) ದೇವದತ್ತನೆಂಬುದು ದೇವದತ್ತನಿಗೆ ನಿಂದಾರೂಪವಾಗಿದೆ. ದೇವದತ್ತನ ದೋಷವನ್ನು ಹೇಳಿದಂತಾಗುತ್ತದೆ. ಆದುದರಿಂದಲೇ ಯಾರು ಜೀವನಿಗೂ ಬ್ರಹ್ಮನಿಗೂ (ಪರಮಾತ್ಮನಿಗೂ) ಐಕ್ಯವನ್ನು ಹೇಳುವರೋ, ಜೀವನಿಗಿಂತಲೂ ಬ್ರಹ್ಮನು ಬೇರೆ ಇಲ್ಲವೆಂದು ಐಕ್ಯವನ್ನು ದುರಾಗ್ರಹದಿಂದ ಸಾಧಿಸುವರೋ ಅಂತಹವರ ಐಕ್ಯಜ್ಞಾನವು ಅನರ್ಥಕಾರಿ ಎಂಬುದನ್ನು ತೈತ್ತಿರೀಯ ಭಾಷ್ಯವಾಕ್ಯವು ನಿರೂಪಿಸುತ್ತಲಿದೆ.

**''ಅಸನ್ನೇವ ಸ ಭವತಿ ಅಸತ್ ಬ್ರಹ್ಮೇತಿ ವೇದಚೇತ್''** ಎಂಬ ಶ್ರುತಿಯ ಅರ್ಥವು ಈ ರೀತಿ ಇದೆ.

''ಸದ್ಭಾವವಾಚಿನಃ ಶಬ್ದಾಃ ಸರ್ವೇ ತೇ ಸುಖವಾಚಕಾಃ'' ಎಂಬ ವಚನದಂತೆ ''ಸತ್'' ಎಂಬ ಶಬ್ದವು ಸುಖಕ್ಕೆ ವಾಚಕವು ಅಸತ್ ಎಂಬ ಶಬ್ದವು ದುಃಖವೆಂಬ ಅರ್ಥವುಳ್ಳದುದು. ಆದುದರಿಂದ ಬ್ರಹ್ಮನು ಅಸತ್ = ದುಃಖೀ = ದುಃಖವುಳ್ಳವನು ಎಂದು ತಿಳಿದರೆ, (''ದುಃಖಿಯಾದ ಜೀವಾತ್ಮನೇ ಬ್ರಹ್ಮ'') ಎಂದು ತಿಳಿದರೆ, ಆ ರೀತಿ ತಿಳಿಯುತಕ್ಕವನೂ ಸಹ ಸ್ವಯಂ ದುಃಖಿಯೇ ಆಗುತ್ತಾನೆ ಎಂದು ಶ್ರುತಿಯು ಐಕ್ಯಜ್ಞಾನವನ್ನು ಖಂಡಿಸುತ್ತಲಿದೆ. ದೂಷಿಸುತ್ತಲಿದೆ. ಅಂತಹವರಿಗೆ (ಐಕ್ಯ ಜ್ಞಾನಿಗಳಿಗೆ) ನಿತ್ಯನರಕವೇ ಗತಿಯೆಂದು ಪ್ರಮಾಣವಾಕ್ಯವು ಎಚ್ಚರಿಸುತ್ತಲಿದೆ.

> **''ಬ್ರಹ್ಮ ದುಃಖೀತಿವೇದ ಚೇತ್ ತರ್ಹಿ ಸ ಏತಸ್ಮಾದ್ದುಃಖ್ಯೇವಭವತಿ. ಬ್ರಹ್ಮ ಸುಖರೂಪಮಿತಿ ವೇದಚೇತ್ ತಸ್ಮಾದೇನಂ ವೇತ್ತಾರಂ ಸುಖಿನಂ ವಿದುಃ''**

ಎಂದು ಪರಮಾಭಿಪ್ರಾಯ.

ಈ ವಿಷಯದಲ್ಲಿ ನ್ಯಾಯಸುಧಾಕಾರರ ವಾಕ್ಯಗಳು ಅತಿಸ್ಪಷ್ಟವಾಗಿವೆ.

ನ್ಯಾಯಸುಧಾ : "ಪರಮೇಶ್ವರೇ ತು ಸಂಸಾರಧರ್ಮಾಣಾಂ
ಅತ್ಯಂತಾಸಂಭವಾನ್ನದೋಷಪ್ರತಿಭಾಸಃ ಕಿಂತು
ಸರ್ವಸಂಯತ್ತ್ವಾದಿಕಮೇವ ಪ್ರತೀಯತೇ ॥ ಇತಿ ॥

ಎಂದು ಹೇಳಿರುತ್ತಾರೆ.

ಪ್ರಾಚೀನ ಟೀಕಾಕಾರರಾದ ತತ್ವಪ್ರದೀಪಕಾರರಾದ ಪಂಡಿತಾಚಾರ್ಯರ ವಾಕ್ಯಗಳು ಈ ವಿಷಯದಲ್ಲಿ ಅತಿರಂಜಕಗಳಾಗಿವೆ.

"ತದಧೀನತ್ವಾಚ್ಚ, ಅವ್ಯಕ್ತಾದೇಃ, ಅವ್ಯಕ್ತತ್ವಪರಾವರತ್ವಾದಿಧರ್ಮಾಣಾಂ
ತಸ್ಯೈವ, ಅವ್ಯಕ್ತತ್ವಾದಿಧರ್ಮಜಾತಂ ಮುಖ್ಯಂ ।
ಅತಸ್ತಸ್ಯೈವ, ಅವ್ಯಕ್ತಾದಿ ಶಬ್ದಜಾತಂ ಅರ್ಥವತ್ ।
ಅವ್ಯಕ್ತತ್ವಂ ತದ್ರೂಪಂ, ಅವ್ಯಕ್ತಸ್ಯಾವ್ಯಕ್ತತ್ವಂ, ಮಹತಃ ಪರತ್ವಂ ಚ
ಪಾದಯತೀತಿ "ಮಹತಃ ಪರಮವ್ಯಕ್ತ" ಮಿತ್ಯುಚ್ಯತೇ ।
ತದೇವ ತಸ್ಯ ಪುರುಷಾದವರತ್ವಂ ಸಾಧಯತೀತಿ, ಅವರಶಬ್ದಾರ್ಥಃ ।
ನತು ಸ್ವಯಂ ಅವರತ್ವಾತ್ ।
ಯಥಾ, ಅಮೃತತ್ವಾಪಾದಕತ್ವಾತ್, ಅಮೃತಮಿತ್ಯುಚ್ಯತೇ, ಮೃತಿಶೀಲತ್ವಾಪಾ
ದಕತ್ವಾಚ್ಚ ಮೃತ್ಯುರಿತಿ. ಏವಮ್ ॥
ಅಯಮರ್ಥಃ "ಯಥಾದೇವ ಗುಣಸ್ಯ ಪ್ರಾಣಧಾರಣಸ್ಯ ಪರಮಾತ್ಮಾಧೀನತ್ವಾತ್
ಪರಮಾತ್ಮಾದೇವ ಇತ್ಯುಚ್ಯತೆ " ಅನೇನದೇವೇನಾತ್ಮನಾನುಪ್ರವಿಶ್ಯ ಇತ್ಯಾದೌ ॥
ನ ತು ತತ್ರ ಸಂಸಾರಿಪ್ರವೇಶವಿವಕ್ಷಾ ।
ಅನೇನೈವ ನ್ಯಾಯೇನ ದುಃಖಿತ್ವಾದಿಶಬ್ದಾ ಅಪಿ ಪರಮಾತ್ಮನಿ ಪರಮಮುಖ್ಯತ್ವೇನ
ವೃತ್ತ್ಯಾದಿಕಾ ಭವಂತಿ ।
ಸ್ವಾತಂತ್ರ್ಯಸ್ಯ ಪ್ರವೃತ್ತಿ ಹೇತೋಸ್ತಸ್ಯೈವ ವಿದ್ಯಮಾನತ್ವಾತ್ ॥
ಇತಿತತ್ವಪ್ರದೀಪೇ ॥

ಈ ಮೇಲಿನ ವಾಕ್ಯಗಳ ಅಭಿಪ್ರಾಯವನ್ನು ಹಿಂದೆಯೇ ವಿವರಿಸಲಾಗಿದೆ. ಮುಂದೆಯೂ ವಿವರಿಸುತ್ತೇವೆ.

ಭಾಷ್ಯದೀಪಿಕಾಚಾರ್ಯರ ವಿವರಣೆಯು ಈ ರೀತಿ ಇದೆ.

"ತದಧೀನತ್ವಾತ್ತೇಷಾಂ ಅನ್ಯಗತಾವರತ್ವಾದಿ ಧರ್ಮಾಣಾಂ
ಪರಮಾತ್ಮಾಧೀನತ್ವಾತ್ ।
ಸ್ವಾಮಿತಾಸಂಬಂಧೇನ ತೇಷಾಂ ತಸ್ಮಿನ್ (ಪರಮಾತ್ಮನಿ) ಸತ್ವಾತ್, ಅಸ್ಯೈವ,
ಮುಖ್ಯನಿಮಿತ್ತತ್ವಾತ್, ಏತಸ್ಯಾಪಿ ಶಬ್ದ ಪ್ರವೃತ್ತಿನಿಮಿತ್ತೇನ ಶಬ್ದಸ್ಯಾರ್ಥ
ವತ್ತ್ವೋಪಪತ್ತೇರಿತಿಯೋಜನಾ ।

ಅತ್ರ,ಅವ್ಯಕ್ತತ್ವಗ್ರಹಣೇನ, ಅವ್ಯಕ್ತತ್ವಪಾರವಶ್ಯಾದಿರೂಪಗುಣವಾಚಕಶಬ್ದೇಷು

೧. ಅನುಗತಪ್ರವೃತ್ತಿನಿಮಿತ್ತನಿಯಂತೃತ್ವಂ

೨. ತದಧಿಕರಣತ್ವಂ ಚೇತಿನಿಮಿತ್ತದ್ವಯಂ

ಅಪರ ಬುಭುಕ್ಷಾದಿದೋಷವಾಚಿಶಬ್ದೇಷು ತು ಪ್ರವೃತ್ತಿನಿಮಿತ್ತನಿಯಂತೃತ್ವರೂಪಮೇಕಮೇವ ನಿಮಿತ್ತಮಿತ್ಯುಕ್ತಂ ಭವತಿ ।

ಚಂದ್ರಿಕಾಯಾಮಪಿ ದುಃಖಾದಿಶಬ್ದಾನಾಂ ಸ್ವಾತಂತ್ರ್ಯಾದೇವೇಶೇ ಪ್ರವೃತ್ತಿಃ, ಅವ್ಯಕ್ತಾದಿ ಶಬ್ದಾನಾಂ ತು ಆಶ್ರಯತ್ವಾತ್, ಅವ್ಯಕ್ತಶಬ್ದೋ ಗುಣಮಾತ್ರಪರೋ ವ್ಯಾಖ್ಯೇಯಃ ॥ಇತಿ ॥

ಒಂದೇ ಶಬ್ದವು ಕೆಲವು ಕಡೆ ದೋಷವ್ಯಾಪಕ ಪರವಾಗಿ ಅನರ್ಥಕ್ಕೆ ಕಾರಣವಾಗುತ್ತದೆ. ಕೆಲವು ಕಡೆ ಆ ರೀತಿಯಲ್ಲ ಎಂಬುದಕ್ಕೆ ದೃಷ್ಟಾಂತವಾಗಿ ಅನುವ್ಯಾಖ್ಯಾನಕಾರರು ಹೇಳಿರುವ ವಾಕ್ಯವು ಈ ರೀತಿ ಇದೆ.

ಬುಭುಕ್ಷಾಂಯಥಾ ದೋಷೋ ನೃಷುಕ್ವಚಿತಲೌಕ್ಯಚ ॥ಇತ್ಯನುವ್ಯಾಖ್ಯಾನೇ ॥

ಅವ್ಯಕ್ತತತ್ವವು, ಮಹತ್ತತ್ವವು ಎಲ್ಲವೂ ಪರಮಾತ್ಮನ ಅಧೀನವಾಗಿವೆ. ಆ ತತ್ವಗಳಿಗೆ ಅಭಿಮಾನಿಗಳಾದ ಚೇತನರ ಸ್ವರೂಪವೇನು, ಪ್ರಮಿತಿಯೇನು, ಪ್ರವೃತ್ತಿಯೇನು, ಎಲ್ಲವೂ ಪರಮಾತ್ಮನ ಅಧೀನತಕ್ಕೆ ಒಳಪಟ್ಟಿವೆ. ಆದಕಾರಣ ಅವ್ಯಕ್ತಗತವಾದ ಅವ್ಯಕ್ತಧರ್ಮವೂ, ಅದರಲ್ಲಿರುವ ಮತ್ತೊಂದು ಧರ್ಮವಾದ ಪುರುಷಾಪೇಕ್ಷೆಯಾ ಅಪರತ್ವವೆಂಬ ಧರ್ಮವೂ ಪರಮಾತ್ಮನ ಅಧೀನಕ್ಕೆ ಒಳಪಟ್ಟಿದ್ದರಿಂದಲೂ ಮತ್ತು ಪರಮಾತ್ಮನೇ ಪುರುಷನಾಗಿಯೂ, ಅವ್ಯಕ್ತಕ್ಕೆ ಅಪರತ್ವ ವನ್ನು ಉಂಟು ಮಾಡುತ್ತಾನಾದ್ದರಿಂದಲೂ, ಅವ್ಯಕ್ತವೆಂಬ ಶಬ್ದವೂ ಅಪರ ಎಂಬ ಶಬ್ದವೂ ಪರಮಾತ್ಮನ ಅಧೀನತಾ ದೃಷ್ಟಿ ಯಿಂದ "ಯದಧೀನೋ ಗುಣೋ ಯಸ್ಯ " ಎಂದು ಹಿಂದೆ ತಿಳಿಸಿದ ಪ್ರಮಾಣವಾಕ್ಯದಂತೆ ಆ ಶಬ್ದಗಳೆಲ್ಲವೂ ಪರಮಾತ್ಮ ವಾಚಕಗಳಾಗಿವೆ. ಸಾರ್ಥಕಗಳಾಗಿವೆ. ಸ್ವಯಂ ಪರಮಾತ್ಮನು ಅಪರನೆಂಬ ಅಭಿಪ್ರಾಯವಲ್ಲ. ಸರ್ವೋತ್ತಮನಾದ ಸರ್ವತಂತ್ರ ಸ್ವತಂತ್ರನಾದ ಪರಮಾತ್ಮನಿಗೆ ಸ್ವತಃ ಆ ಧರ್ಮಕ್ಕೆ ಆಶ್ರಯತ್ವವನ್ನು ಚಿಂತಿಸಲೂ ಬಾರದು. ಆದರೆ ಆ ಶಬ್ದಪ್ರಯೋಗವು ಹೇಗೆಂದರೆ ಸ್ವಾಮಿತಾಸಂಬಂಧದಿಂದ ಎಂದು ಅಭಿಪ್ರಾಯ.

ಹೇಗೆ ಮರಣರಾಹಿತ್ಯರೂಪವಾದ ಅಮೃತತ್ವವನ್ನು (ಮೋಕ್ಷವನ್ನು) ಉಂಟು ಮಾಡುವದರಿಂದ ಭಗವಂತನನ್ನು ಅಮೃತವೆಂಬ ಪದದಿಂದ ಕರೆಯಲಾಗುತ್ತದೆಯೋ ಮರಣವನ್ನುಂಟು ಮಾಡುವ ಕಾರಣದಿಂದ ಮೃತ್ಯುವೆಂಬ ಶಬ್ದದಿಂದ ವಿಷವನ್ನು ಮೃತ್ಯುವೆಂದು ಕರೆಯುತ್ತಾರೆಯೋ ಅದರಂತೆ ತಿಳಿಯಬೇಕೆಂದು ತಾತ್ಪರ್ಯ.

ಇಯಮರ್ಥ ಎಂದು ಪ್ರಾರಂಭಿಸಿ ಟೀಕಾಚಾರ್ಯರು ಅರ್ಥದ ವಿವರಣೆಯನ್ನು ತೋರಿಸುತ್ತಾರೆ. "ಪ್ರಾಣಧಾರಣ" ಎಂಬ ನಿರ್ವಚನದಂತೆ ಪ್ರಾಣಧಾರಣವೆಂಬ ಜೀವನ ಗುಣವು ಪರಮಾತ್ಮನ ಅಧೀನವಾಗಿದೆ. ಅದರಿಂದಾ ಶ್ರುತಿವಾಕ್ಯದಲ್ಲಿ "ಅನೇನ ಜೀವೇನಾತ್ಮನಾ" ಇತ್ಯಾದಿಯಾಗಿ ಪರಮಾತ್ಮನಲ್ಲಿ ಜೀವಶಬ್ದದ ಪ್ರಯೋಗವು ಕಂಡುಬರುತ್ತದೆ. ಈ ನ್ಯಾಯದಿಂದಲೇ ದುಃಖ, ಬುಭುಕ್ಷಾದಿಶಬ್ದಗಳೂ ಸಹ (ಸ್ವಾತಂತ್ರ್ಯ) ತದಧೀನತ್ವನಿಮಿತ್ತದಿಂದ ಪರಮ ಮುಖ್ಯವೃತ್ತಿಯಿಂದ ಪರಮಾತ್ಮವಾಚಕಗಳಾಗಿವೆಯೆಂದು ಪರಮಾಭಿಪ್ರಾಯವಾಗಿದೆ.

"ವಸಂತೇ ವಸಂತೇ ಜ್ಯೋತಿಷಾ ಯಜೇತ" ಇತ್ಯಾದಿಯಾಗಿ ಕಂಡುಬರುವ ಕರ್ಮವಾಚಕ ಕಾಲವಾಚಕ ಶಬ್ದಗಳು ಸಹ ಪರಮಮುಖ್ಯವೃತ್ತಿಯಿಂದ ಪರಮಾತ್ಮಪರವೇ ಆಗಿವೆ.

ಕರ್ಮವಾಚಕವಾದ ಜ್ಯೋತಿಷಾ ಎಂಬ ಪದವೂ ಕಾಲವಾಚಕವೆಂದು ತೋರಿಬರುವ ವಸಂತೇ ಎಂಬ ಪದವೂ ಪರಮಾತ್ಮನ ಸಂಬೋಧನಪರವಾದ ಪದಗಳೇ ಆಗಿವೆ.

ಅನುವ್ಯಾಖ್ಯಕಾರರು ಇದರ ವಿಷಯವನ್ನು ವಿವರಿಸುತ್ತಾರೆ.

"ಜಾತವೇದಂ ಹರಿಂ ಯಸ್ಮಾತ್, ಜ್ಯೋತಿ ಷಃ ಪ್ರಾಣರೂಪತಃ ।
ಅಯಜೇತತ್ವಾಯಜೇತಃ ವಸನ್ನಿತ್ಯಮಸಂಸ್ಥಿತಃ ॥
ವಿಗತಚ್ಛಾದನತ್ವಾತ್ತುಗಚ್ಛ ಭೂತಕ್ಷಯಂಕರಃ ।
ಭುಂಕ್ತೇ ಇತ್ಯುಕ್ತೋಹರಿಃ ಕುಂಠ ಕುತಮಸ್ಮಿನ್ ಜಗದ್ಧೃತಃ ।
ಸ್ಫುಟತ್ವಾತ್ ಫಡಿತಿಪ್ರೋಕ್ತ ಶಿವ ರಕ್ಷಣ ಇತ್ಯತಃ ।
ಕವಚಂ ವರ್ತತೇ ಯಸ್ಮಾತ್ ಷಡ್ಗುಣಾತ್ಮೇನ ಸರ್ವದಾ ॥
ವಷಟ್, ತದ್ಧ್ವಸ್ತತಸ್ತೇಷಾಂ ವೌಷಡಿತ್ಯೇವ ಕಥ್ಯತೇ ।
ಸ್ವೀಯಂ ಸ್ವೀಕುರುತೇಯಸ್ಮಾತ್ ಸ್ವಾಹೇತ್ಯುಕ್ತೋ ಜನಾರ್ಧನಃ ॥
ನಮಂತ್ಯಸ್ಮಿನ್ ಗುಣಾ ಯಸ್ಮಾನ್ನಮ ಇತ್ಯೇವ ಕಥ್ಯತೇ ।
ಇತ್ಯಶೇಷಕ್ರಿಯಾನಾಮಶಬ್ದೈರೇಕೋ ಜನಾರ್ದನಃ ॥
ಉಚ್ಯತೇ ಮುಖ್ಯತೋ ಯಸ್ಮಾತ್, ಪದವರ್ಣಸ್ವರಾತ್ಮಭಿಃ ।
ತಸ್ಮಾದನಂತಗುಣತಾ ಶ್ರುತಿ ತಾತ್ಪರ್ಯತೋಽಸ್ಯಹಿ ॥

ವೇದದಲ್ಲಿರುವ ಸಕಲಕ್ರಿಯಾ (ಯಜ್ಞಯಾಗಾದಿ ಕ್ರಿಯಾವಾಚಕಶಬ್ದಗಳೂ) ನಾಮವಾಚಕಶಬ್ದಗಳೂ ಸ್ವರ, ವರ್ಣ ಪದಗಳೂ ಸಹ ಪರಮಮುಖ್ಯವೃತ್ತಿಂದ ಪರಮಾತ್ಮನನ್ನೇ ಹೇಳುತ್ತಿವೆ.

ಜ್ಯೋತಿಷ ಎಂಬ ಶಬ್ದದ ನಿಷ್ಪತ್ತಿ ವಿಚಾರ :-

ಜನಿಧಾತುವಿನ ಮುಂದೆ "ಉಣಾದಯೋ ಬಹುಳಮ್" ಎಂಬಲ್ಲಿ ಬಹುಳಗ್ರಹಣ ಮಾಡಿರುವುದರಿಂದ ಉಣಾದಿ ಪ್ರತ್ಯಯಗಳು ಅನೇಕಾರ್ಥಗಳಲ್ಲಿ ಬರುತ್ತವೆ.

ಆದಕಾರಣ ಜನಿಧಾತುವಿನ ಮುಂದೆ ಕರ್ತರಿ ಇ ಪ್ರತ್ಯಯವು ಬಂದು, ಪ್ರತ್ಯಯಡಕಾರಕ್ಕೆ ಲೋಪವು ಬಂದು, ಟಲೋಪವು ಬಂದು "ಜಿ" ಎಂದಾಗಿದೆ.

ಜನ್ + ಇ, ಟಿಭೂತವಾದ ಧಾತು ಸಂಬಂಧಿಯಾದ ಅನ್ನ ಲೋಪ,

ಜ್ + ಇ = ಪ್ರತ್ಯಯಾದಿಭೂತವಾದ ಡಕಾರಕ್ಕೆ ಲೋಪ.

ಜ್ + ಇ = "ಜಿ" ಎಂದಾಗಿದೆ. ಡಿಪ್ರತ್ಯಯವು ಕರ್ತರಿ ಬಂದಿದೆ ಎಂದು ಹಿಂದೆಯೇ ತಿಳಿಸಲಾಗಿದೆ.

ಅವಧಾತುವು ಪ್ರವೇಶಾರ್ಥಕವಾದುದು.

ಅವ ಪ್ರವೇಶನೇ (ರಕ್ಷಣೇ) ಇದರ ಮುಂದೆ (ಕ್ತಿನ್ ಪ್ರತ್ಯಯವು (ಕ್ತಿನ್ಪ್ರತ್ಯಯೇ ) ಕರ್ತರಿ ಕ್ತಿಪ್ರತ್ಯಯವು ಬರಲಾಗಿ "ಜ್ವರತ್ವರಸ್ರಿವ್ಯವಿಮವಾಮುಪಧಾಯಾಶ್ಚ" ಎಂಬ ಸೂತ್ರದಿಂದ, ಅವ ಎಂಬಲ್ಲಿರುವ ಧಾತುಸಂಬಂಧಿಯಾದ ವಕಾರಕ್ಕು, ಉಪಧಾ ಅಕಾರಕ್ಕು "ಊಠ್" ಎಂಬ ಆದೇಶವು ಬಂದು ಊ + ಊ + ತಿ ಎಂದಾದಾಗ, ಸವರ್ಣ ದೀರ್ಘವೂ ಬಂದು, ಕಿತ್ತಾದರೂ ಛಾಂದಸವೆಂಬ ಕಾರಣದಿಂದ, (ಬಾಹುಲಕಾತ್) ಗುಣವೂ ಬಂದ ಓತಿ ಎಂಬ ರೂಪವು ಸಿದ್ಧವಾಗಿದೆ.

"ಓತಪ್ರೋತಂ" ಎಂದು ಅನೇಕ ಪ್ರಯೋಗಗಳಿರುವ ಪ್ರಯುಕ್ತ ಗುಣವು ಬಂದು "ಓತಿ" ಎಂಬ ರೂಪವು ಸಿದ್ಧವಾಗಿದೆ ಎಂದು ತಾತ್ಪರ್ಯ.

ಏವಂಚ ಅವ + ಕ್ತಿನ್, ಊ + ಊ + ಕ್ತಿನ್ = ಊ + ತಿ = ಓತಿ.

ಏವಂ ಚ ಜಿಃ = ಜಾತಂ = ಜಗತ್, ಓತಂ = ಪ್ರವಿಷ್ಟಂ, ಯಸ್ಮಿನ್ ಅಸೌ = ಜ್ಯೋತಿಃ = ಸೃಷ್ಟವಾದ, (ಹುಟ್ಟಿದ) = ಜನ್ಯವಾದ ಪ್ರಪಂಚವು ಯಾರಲ್ಲಿ ಪ್ರವಿಷ್ಟವಾಗಿದೆಯೋ (ಯಾರನ್ನು ಆಶ್ರಯಿಸಿರುವುದೋ) ಅಂತಹ ಶ್ರೀ ಹರಿಯು ಜ್ಯೋತಿಃ ಎಂಬ ಶಬ್ದದಿಂದ ವಾಚ್ಯನಾಗಿದ್ದಾನೆ.

"ಪರಾಃ ಪ್ರಾಣ ಆತ್ಮಾ" ಎಂಬ ಶ್ರುತಿಯು, ಸರ್ವಚೇಷ್ಟಕನಾದ ಶ್ರೀಹರಿಯನ್ನು ಪರಾರವಾಚ್ಯನನ್ನಾಗಿ ತಿಳಿಸುತ್ತಲಿದೆ. ತಥಾಚ ಜ್ಯೋತಿಶ್ಚಾಸೌ + ಪಶ್ಚ = ಜ್ಯೋತಿಷಃ = ಜನ್ಯವಾದ ಜಗತ್ತಿಗೆ ಆಶ್ರಯನೂ ಮತ್ತು ಸರ್ವಚೇಷ್ಟಕನೂ ಆದ ಪರಮಾತ್ಮನೇ ಜ್ಯೋತಿಷಃ = ಎಂಬ ಶಬ್ದದಿಂದ ವಾಚ್ಯನಾಗಿದ್ದಾನೆ.

ಅವನ ಸಂಬೋಧನೆಯೇ "ಜ್ಯೋತಿಷ" ಎಂಬುದು. ಅಯಜೇತಃ = ಎಂಬುದೂ ಸಹ ಸಕಲ ಯಜ್ಞಗಳ ಭೋಕ್ತನಾದವನೂ, ಯಾಜ್ಞಿಕರಿಂದ ಜ್ಞಾನದ್ವಾರಾ ಪ್ರಾಪ್ಯನಾದವನೂ ಆದ ಪರಮಾತ್ಮನಿಗೆ ವಾಚಕವಾಗಿ, ಅಂತಹ ಪರಮಾತ್ಮನ ಸಂಬೋಧನರೂಪವಾಗಿ "ಅಯಜೇತ" ಎಂದಾಗಿದೆ.

ಯಜ್ ಧಾತುವಿನ ಮುಂದೆ, ಭಾವೇ ಅಪ್ರತ್ಯಯವು ಬಂದು, ಅಕಾರಕ್ಕೆ ಲೋಪವು ಬಂದನಂತರ, ಯಜ ಎಂದಾಗಿದೆ.

ಆ = ಸಮ್ಯಕ್ = ಚೆನ್ನಾಗಿ, ಹಿಮುನ್ತಾರ್ದ್ಯಾ = ಯಜೇನ = ಯಜ್ಞೇನ ಕರ್ಮಣಾ ಯಾಜಕೇನ ಪುರುಷೇಣ ವಾ = ಯಜ್ಞಕರ್ಮದಿಂದ, ಯಾಜಕನಾದ ಪುರುಷನಿಂದಲಾಗಲಿ, ಇತಃ = ಪ್ರಾಪ್ತಃ, ತಸ್ಯ ಸಂಬೋಧನಂ = ಅಯಜೇತ ! = ಯಜ್ಞಕರ್ಮದಿಂದ ಹೊಂದಲ್ಪಟ್ಟವನು ಎಂದು ಹೇಳಿದರೆ, ಸಕಲಯಜ್ಞಭೋಕ್ತಾ ಎಂದು ಅರ್ಥವಾಗುತ್ತದೆ, ಯಾಜಕ ಪುರುಷನಿಂದ ಹೊಂದಲ್ಪಟ್ಟವನು ಎಂದರೆ ಯಾಗ ಮಾಡುವವನಿಂದ ಜ್ಞಾನಮೂಲಕವಾಗಿ ಪ್ರಾಪ್ಯನಾದವನು ಎಂದು ಅರ್ಥವಾಗುತ್ತದೆ. ಅಂತಹ ಪರಮಾತ್ಮನ ಸಂಬೋಧನವೇ ಅಯಜೇತ ಎಂದಾಗಿದೆ.

ವಸನ್ತೇ = ಎಂಬುದೂ ಸಹ ಪರಮಾತ್ಮನ ಸಂಬೋಧನವೇ ಆಗಿದೆ. ವ್ಯಾಪ್ತನಾಗಿರುವ ಪರಮಾತ್ಮನೇ ಎಂದು ಪರಮಾತ್ಮನನ್ನು ಸಂಬೋಧಿಸಿರುವುದಾಗಿದೆ.

ವಸ ನಿವಾಸೇ = ಎಂಬ ಧಾತುವಿನ ಮುಂದೆ ಕರ್ತ್ರರ್ಥದಲ್ಲಿ ಪಚಾದಿಗಣಪಠಿತವಾದ ಈ ಧಾತುವಿಗೆ "ಅಚ್" ಪ್ರತ್ಯಯವು ಬಂದು ವಸ್ + ಅ = ವಸ ಎಂದು ರೂಪವಾಗುತ್ತದೆ. ವಸ ಎಂದಿದ್ದರೂ ವಸನ್ ಎಂಬಲ್ಲಿ ನಕಾರಾಗಮ ಬಂದಿರುವುದರಿಂದ ವಸನ್ ಎಂದಾಗಿದೆ. ತಿಃ = ತನು ವಿಸ್ತಾರೆ = ಎಂಬ ಧಾತುವಿನ ಮುಂದೆ ಡಿ ಪ್ರತ್ಯಯವು ಬಂದು ಟಿ ಭೂತವಾದ ಧಾತುವಿನ ಅನ್ ಎಂಬುದಕ್ಕೆ ಲೋಪವು ಬಂದು ತ್ + ಇ = ಎಂದಾಗಿ ತಿ ಎಂದು ರೂಪವಾಗಿದೆ. ತಿಃ = ಎಂದರೆ ವಿಸ್ತಾರ ಎಂದು ಧಾತುವಿನ ಅರ್ಥವಿರುವುದರಿಂದ ವ್ಯಾಪ್ತ ಎಂಬುದಾಗಿ ಅರ್ಥವಾಗಿದೆ.

ಈ ಅಭಿಪ್ರಾಯದಿಂದಲೇ ವಸನ್ವಾಸೌ + ತಿಶ್ಚ = ವಸನ್ತಿಃ ತಸ್ಯ ಸಂಬೋಧನಂ "ವಸನ್ತೇ" ಎಂದಾಗಿದೆ, ದ್ವಿರುಕ್ತಿಯು ಆದರಾರ್ಥದಲ್ಲಿದೆ. ಸರ್ವತ್ರ ವಾಸ ಮಾಡತಕ್ಕವನೂ, ಸರ್ವವ್ಯಾಪ್ತನೂ ಆದ, ಶ್ರೀಹರಿಯೇ! ಎಂದು ಸಂಬೋಧಿಸಲಾಗಿದೆ.

ಇಲ್ಲಿ ವಸ ನಿವಾಸೇ ಎಂದೇ ಧಾತುವಿದೆ. ವಸನ್ತಿಃ ಎಂಬಲ್ಲಿ ಪೂರ್ವಪದದ ಮುಂದೆ ನಕಾರವು ಕಂಡು ಬಂದಿಲ್ಲವಾದ್ದರಿಂದ "ವಸತಿಃ" ಆಗಬೇಕಲ್ಲವೇ ? ವಸನ್ತಿ ಎಂದು ರೂಪವು ಹೇಗಾಗುತ್ತದೆಯೆಂಬ ಶಂಕೆಗೆ ಅವಕಾಶವಿದೆ.

ಆದರೆ **"ವರ್ಣಾಗಮೋ ವರ್ಣವಿಪರ್ಯಯಶ್ಚ ದ್ವೌ ಚಾಪರೌ ವರ್ಣವಿಕಾರನಾಶೌ।**
**ಧಾತೋಸ್ತದರ್ಥಾತಿಶಯೇನ ಯೋಗಃ ತದುಚ್ಯತೇ ಪಂಚವಿಧಂ ನಿರುಕ್ತಮ್"**॥

ಎಂಬುದಾಗಿ ಹೇಳಿರುವ ಐದು ಬಗೆಯ ನಿರುಕ್ತಕ್ಕು ಹಿಂದೆಯೇ ಉದಾಹರಣೆಗಳನ್ನು ಕೊಡಲಾಗಿದೆ.

ಆದಾಗ್ಯೂ ಪ್ರಸಂಗ ದೃಷ್ಟಿಯಿಂದ ಮತ್ತೆ ಜ್ಞಾಪಕಕ್ಕಾಗಿ ಇಲ್ಲಿಯೂ ಹೇಳುತ್ತೇವೆ.

ವಸನ್ ಎಂಬಲ್ಲಿ ನಕಾರಾಗಮವು ಹೇಗೆಂದರೆ ನಿರುಕ್ತ ಶಾಸ್ತ್ರದಲ್ಲಿ ತಿಳಿಸಿರುವಂತೆ "ಪೃಷೋದರಾದೀನಿ ಯಥೋಪದಿಷ್ಟಮ್ (ವ್ಯಾಕರಣಸೂತ್ರ) ಎಂಬ ಸೂತ್ರದಲ್ಲಿ ಹೇಳಿರುವ ಸಂಗ್ರಹ ಶ್ಲೋಕದಂತೆ ವಸನ್ ಎಂಬಲ್ಲಿ ನಕಾರಾಗಮವು ಬಂದಿದೆ ಎಂದು ತಿಳಿಯಬೇಕು.

**ಉದಾಹರಣೆಗಳು** :- ವರ್ಣಾಗಮಕ್ಕೆ ಕೌ + ಜೀರ್ಯತೆ = ಇತಿ "ಕುಞ್ಜರಃ = ಎಂಬಲ್ಲಿ ಕು ಎಂಬಲ್ಲಿರುವ ಉಕಾರಕ್ಕೆ ಮಕಾರಾಗಮವು ಬಂದು ಅನುನಾಸಿಕಸಂಧಿಯಾಗಿ "ಕುಞ್ಜರಃ" ಎಂದಾಗಿದೆ.

ಸಿಂಹಃ ಎಂಬಲ್ಲಿ = ಹಿನಸ್ತೀತಿ "ಸಿಂಹಃ" ಎಂಬಲ್ಲಿ ಆದ್ಯಂತಗಳಾದ ವರ್ಣಗಳಾದ ಹಕಾರ ಸಕಾರಗಳಿಗೆ ವ್ಯತ್ಯಾಸವಾಗಿ ವರ್ಣಗಳ ವ್ಯತ್ಯಯವಾಗಿ ಸಿಂಹ ಎಂದಾಗಿದೆ.

ಷೋಡಸ್ ಎಂಬಲ್ಲಿ ಷಕಾರಕ್ಕೆ ಉವರ್ಣರೂಪಾಪತ್ತಿರೂಪವಾದ ವಿಕಾರವಾಗಿದೆ..

ವರ್ಣನಾಶಾತ್ "ಪೃಷೋದರಂ" ಎಂದು ಹೇಳಿದಂತೆ "ಪೃಷತ್" ಎಂಬಲ್ಲಿನ ತಕಾರಕ್ಕೆ ಲೋಪವು ಬಂದು "ಪೃಷದುದರಂ" ಎಂದಾಗಬೇಕಾಗಿರುವಾಗ "ಪೃಷೋದರಂ" ಎಂದಾಗಿದೆ. ಇದು ವರ್ಣನಾಶಕ್ಕೆ ಉದಾಹರಣೆಯಾಗಿದೆ. ಈ ವಿಧಗಳಾದ ಐದು ವಿಧವಾದ ನಿರ್ವಚನ ಪ್ರಕಾರವು "ಪೃಷೋದರಾದೀನಿ" ಇತ್ಯಾದಿ ವ್ಯಾಕರಣ ಸೂತ್ರದಲ್ಲಿ ಉಕ್ತವಾಗಿದೆ.

ಪ್ರಕೃತದಲ್ಲಿ "ವಸು" ಎಂಬಲ್ಲಿ ಪೂರ್ವಪದಾಂತವಾದ ಸಕಾರದ ಮುಂದೆ ನಕಾರಾಗಮವು ಬಂದು "ವಸ್ನ" ಎಂದು ಶಬ್ದವು ನಿಷ್ಪನ್ನವಾಗಿದೆ ಪರಮಾಭಿಪ್ರಾಯ.

ಇದೇ ಅಭಿಪ್ರಾಯದ ಶ್ಲೋಕವನ್ನು ಶಾಸ್ತ್ರಜ್ಞರು ಉದಾಹರಿಸಿರುತ್ತಾರೆ.

**"ಭವೇದ್ವರ್ಣಾಗಮಾದ್ ಹಂಸೋ**
**ಸಿಂಹೋವರ್ಣವಿಪರ್ಯಯಾತ್ ।**
**ಗೂಢೋತ್ಮಾವರ್ಣವಿಕೃತೇಃ**
**ವರ್ಣನಾಶಾತ್ ಪೃಷೋದರಮ್" ।। ೧೩ ।।**

ಒಟ್ಟಿನಲ್ಲಿ "ವಸ್ನೇ ವಸ್ವ್ಯೇ, ಜ್ಯೋತಿಷ, ಆಯವೇತು" ಎಂಬ ವೇದವಾಕ್ಯವು ಪರಮಾತ್ಮನ ಪರಮವೈಭವವನ್ನೇ ತಿಳಿಸುತ್ತಲಿದೆ.

ಎಲ್ಲೆ, ಸರ್ವತ್ರ ವಾಸ ಮಾಡುವವನೂ, ಸರ್ವತ್ರವ್ಯಾಪ್ತನೂ ಆದ ಶ್ರೀಹರಿಯೇ! ಹುಟ್ಟಿದ ಸಕಲ ಜಗತ್ತಿಗೂ ಆಶ್ರಯನಾಗಿಯೂ, ಸರ್ವಚೇಷ್ಟಕನೂ ಆದ ಶ್ರೀಮನ್ನಾರಾಯಣನೇ! ಸಕಲ ಯಜ್ಞಗಳ ಭೋಕ್ತೃತ್ವವುಳ್ಳ, ಯಾಗ ಮಾಡತಕ್ಕವರಿಂದ ಧ್ಯಾನದ್ವಾರಾ ಪ್ರಾಪ್ಯನಾದ ಶ್ರೀಹರಿಯೇ! ಎಂದು ಎಲ್ಲ ಪದಗಳೂ ಪರಮಾತ್ಮನ ಸಂಬೋಧನ ಪರವೇ ಆಗಿವೆ.

**"ಇಂದ್ರಾಗಚ್ಛ" ಇತ್ಯಾದಿ ಶ್ರುತಿಯ ವ್ಯಾಖ್ಯಾನ.**
**ವಿಗತಭಾರದಕ್ಷಾತ್ಯಗಚ್ಛ (ಅನುವ್ಯಾಖ್ಯಾನ)**

ಗಚ್ಛ ಎಂಬುದರ ರೂಪಸಿದ್ಧಿಯು ಹೀಗೆ ಇದೆ.

ಗಮ್ಲೃಗತೌ ಎಂಬ ಧಾತುವಿನ ಮುಂದೆಯೂ, ಛದಿಸಂವರಣೇ ಎಂಬ ಧಾತುವಿನ ಮುಂದೆ, ಅಂದರೆ ಗಮ್ಲೃಧಾತುವಿಗೆ ಕರ್ಮಣಿ, ಛದಧಾತುವಿಗೆ ಭಾವಾರ್ಥದಲ್ಲಿ ಡ ಪ್ರತ್ಯಯವು ಬಂದು ಎರಡಕ್ಕೂ ಟಿಲೋಪವು ಬಂದು "ಗಚ್ಛ" ಎಂದಾಗಿದೆ.

**ವಿವರಣೆ** :- ಗಮ್ಲೃಧಾತುವಿನ ಮುಂದೆ ಕರ್ಮಣಿ ಡ ಪ್ರತ್ಯಯವು ಬಂದಾಗ, ಟಿ ಭೂತವಾದ "ಅಮ್" ಎಂಬುದಕ್ಕೆ ಲೋಪ ಬಂದು ಪ್ರತ್ಯಯಾದಿಯಾದ ಡಕಾರಕ್ಕೆ ಲೋಪ ಬಂದಾಗ

ಗ್ + ಅ = ಗ, ಭದ್ ಎಂಬಲ್ಲಿ ಭದ್ + ಡ = ಧ್ + ಅ = ಧ. ಎಂದಾಗುತ್ತದೆ. ಒಟ್ಟು ಸೇರಿದಾಗ "ಗಧ್ವ" ಎಂದು ರೂಪವಾಯಿತು.

**ಅರ್ಥ** :- ಗಂ = ವಿಗತಂ, ಧಂ = ಧಾರಣಂ = ಅವಿದ್ಯಾದಿಕಂ ಯಸ್ಮಾದಸೌ "ಗಧ್ವ" ತಸ್ಯ ಸಂಬುದ್ಧಿಃ "ಗಧ್ವ" ಇತಿ ಅದರಂತೆ: ಅವಿದ್ಯಾದಿ ಬಂಧಕವಾದ ಆವರಣರಹಿತನಾದವನೇ 'ಶ್ರೀಹರಿಯೇ' ಎಂದು ತಾತ್ಪರ್ಯ.

ಭುಂಕ್ಷ್ವ ಎಂಬುದರ ನಿಷ್ಪತ್ತಿ ಪ್ರಕಾರವು ಹೇಗೆಂದರೆ:

**"ಭೂತಕ್ಷಯಂಕರಃ ಭುಂಕ್ಷ್ವೇತ್ಯುಕ್ತೋ ಹರಿಃ (ಅನುವ್ಯಾಖ್ಯಾನ)**

ಭೂತ ಶಬ್ದಕ್ಕೆ ಆದೇಶವಾಗಿ ಭೂ ಶಬ್ದವು ಬಂದಿದೆ.

ಈ ಭೂ ಶಬ್ದದ ಮುಂದೆ ಕ್ಷಿ ಕ್ಷಯೇ ಎಂಬ ಧಾತುವಿನ ಮುಂದೆ ಡ್ವ ಎಂಬ ಪ್ರತ್ಯಯವು ಬಂದು ಟಿ ಭೂತವಾದ ಇಕಾರಕ್ಕೆ ಲೋಪವೂ ಬಂದು ಕ್ಷ್ + ವ = ಕ್ಷ್ವ = ಪೂರ್ವಪದಕ್ಕೆ ಮಕಾರಾಗಮವೂ ಬರಲಾಗಿ = ಭು, ಮ್ = 'ಭುಂಕ್ಷ್ವ' (ಪೃಷೋದರಾದಿಗಣಪಠಿತವಾಗಿದೆಯೆಂಬ ಅಭಿಪ್ರಾಯದಿಂದ ಮಕಾರಾಗಮವು.)

ಏವಂ ಚ = ಭೂತಗಳಿಗೆ ಕ್ಷಯವನ್ನು ಉಂಟುಮಾಡುವವನಾದುದರಿಂದ ಶ್ರೀಹರಿಯು ಭುಂಕ್ಷ್ವ ಎಂಬ ಶಬ್ದವಾಚ್ಯನಾಗಿದ್ದಾನೆ. ಅವನ ಸಂಬೋಧನೆಯ ರೂಪವೇ "ಭುಂಕ್ಷ್ವ" ಎಂದಾಗಿದೆ.

ಎಲೈ ಭೂತಕ್ಷಯಕರನಾದ ಶ್ರೀಹರಿಯೇ ! ಎಂದು ಅಭಿಪ್ರಾಯ.

"**ಹುಂ, ಫಟ್, ಸ್ವಾಹಾ**" ಇತ್ಯಾದಿ ಶಬ್ದಗಳ ನಿಷ್ಪತ್ತಿಯು ಈ ರೀತಿ ಇದೆ.

ಇವುಗಳೂ ಸಹ ಪರಮಾತ್ಮ ವಾಚಕಗಳೇ ಆಗಿವೆ.

**ಹುಂ = "ಹುಂ ಚ ಹುತಮಸ್ಮಿನ್ ಜಗದ್ಯತಃ" (ಅನುವ್ಯಾಖ್ಯಾನ)**

"ಹುದಾನಾದನಯೋಃ" ಎಂಬ ಅದನಾರ್ಥಕವಾದ ಧಾತುವಿನ ಮುಂದೆ ಅಧಿಕರಣಾರ್ಥದಲ್ಲಿ ಮಕಾರ ಪ್ರತ್ಯಯವು ಬಂದು ಹು + ಮ್ = "ಹುಮ್" ಎಂದಾಗಿದೆ.

**ಹುಂ ಎಂಬುದು ದ್ವಿತೀಯಾವಿಭಕ್ತ್ಯಂತವೆಂದು ಆಪಾತತಃ ತೋರುತ್ತದೆ.**

ಆದರೆ ಹಾಗಲ್ಲ. "ಕೃನ್ಮೇಜನ್ತಃ" ಎಂಬ ಸೂತ್ರದಿಂದ "ಕೃದಂತಂ ಮಕಾರಾಂತಂ ಮೇಜಂತಂ ಚ ಶಬ್ದ ರೂಪಂ ಅವ್ಯಯಂ ಭವತಿ" ಎಂಬ ವ್ಯಾಕರಣ ನಿಯಮದಂತೆ ಹುಂ ಎಂಬುದು ಅವ್ಯಯವಾಗಿದೆ.

**ಅದರ ಅರ್ಥ** :- ಹುತಂ ಸ್ವೇ ನೈವ ಅಸ್ಮಿನ್ ವಿಷ್ಣೌ ಜಗತ್ ಪ್ರಳಯಾದೌ ಯತೋಽತೋ ಹುಂ ಅಸೌ ವಿಷ್ಣುಃ। =ಇಲ್ಲಿ ಕರ್ಮವಿಶೇಷವು ಉಕ್ತವಾಗದಿರುವುದರಿಂದ ಮಹಾಪ್ರಳಯದಲ್ಲಿ "ಜಗತ್ತು" ಎಂಬ ಕರ್ಮವನ್ನೇ ಇಟ್ಟು ಕೊಳ್ಳಬೇಕಾಗಿರುವ ಪ್ರಯುಕ್ತ ಭಾಷ್ಯಕಾರರು "ಹುತಮಸ್ಮಿನ್ ಜಗದ್ಯತಃ" ಎಂದು ವಿವರಿಸಿರುತ್ತಾರೆ.

ಮಹಾಪ್ರಳಯಕಾಲದಲ್ಲಿ ತನ್ನಲ್ಲಿಯೇ ಜಗತ್ತನ್ನು ಹೋಮಿಸಿಕೊಂಡ ವಿಷ್ಣುವೇ "ಹುಂ" ಎಂಬ ಶಬ್ದದಿಂದ ವಾಚ್ಯನಾಗಿದ್ದಾನೆ.

ಏವಂ ಚ "ಹೂಯತೇ ಅಸ್ಮಿನ್" ಎಂದು ಅಧಿಕರಣಾರ್ಥದಲ್ಲಿ ನಿಷ್ಪನ್ನವಾದ ಹುಂ ಎಂಬ ಶಬ್ದಕ್ಕೆ ಜಗತ್ತಿನ ಪ್ರಳಯಕಾರಕನಾದ ಶ್ರೀಹರಿ ಎಂದು ತಾತ್ಪರ್ಯವಾಗಿದೆ.

ಫಟ್ = ಸ್ಫುಟತ್ವಾತ್ "ಫಟ್" ಇತೀರಿತಃ (ಅನುವ್ಯಾಖ್ಯಾನ) "ಸ್ಫುಟ ವಿಕಸನೇ" ಎಂಬ ಧಾತುವಿನ ಮುಂದೆ ಕರ್ತರಿ ಕ್ವಿಪ್ಪ್ರತ್ಯಯವು ಬಂದು, ಸಕಾರಕ್ಕೆ ಲೋಪವೂ ಬಂದಾಗ, ಉಕಾರಕ್ಕೆ ಅಕಾರವೂ ಬರಲಾಗಿ "ಫಟ್" ಎಂದಾಗಿದೆ.

ಅರ್ಥ :- ಸ್ಫುಟತ್ವಾತ್, ಸ್ವಾತ್ಮಾನಂ ಪ್ರತಿ ವ್ಯಕ್ತತ್ವಾತ್ ಅಸಂಕುಚಿತವೃತ್ತಿತ್ವಾತ್ ಇತಿ ವಾ "ಫಟ್" ಪರಮಾತ್ಮನು ತನ್ನ ದೃಷ್ಟಿಯಿಂದ ವ್ಯಕ್ತನೇ ಆಗಿರುವುದರಿಂದ ಫಟ್ ಶಬ್ದವಾಚ್ಯನಾಗಿದ್ದಾನೆಂದು ಅಭಿಪ್ರಾಯ.

ಕವಚಂ = ಕವರ್ಕ್ಷಣ ಇತ್ಯತಃ ಕವಚಂ (ಅನುವ್ಯಾಖ್ಯಾನ) "ಕವ ರಕ್ಷಣೇ" ಎಂಬ ರಕ್ಷಣಾರ್ಥಕವಾದ ಕವ (ಕವು) ಧಾತುವಿನ ಮುಂದೆ ಕರ್ತರಿ (ಪಚಾದ್ಯಚ್) ಅಚ್ ಪ್ರತ್ಯಯವು ಬರಲಾಗಿ "ಕವಚಂ" ಎಂದು ರೂಪವು ನಿಷ್ಪನ್ನವಾಗಿದೆ. ಕವತಿ = ರಕ್ಷತೀತಿ = ಕವಚಮ್ = ಎಂದರೆ ರಕ್ಷಿಸುವವನು ಎಂದು ಅರ್ಥವು.

ಅಚ್ ಎಂಬುದೇ ಇಲ್ಲಿ ಪ್ರತ್ಯಯವಾಗಿರುವುದರಿಂದ ಕವಚ ಎಂದು ರೂಪವಾಗಿರುವಾಗ "ಅತೋಽಮ್" ಎಂಬುದರಿಂದ ಅಮ್ ಬರಲಾಗಿ ಹ್ರಸ್ವಾಕ್ಷರವಾದ ಸಂಬುದ್ಧಿಸಂಬಂಧಿಯಾದ ಮಕಾರಕ್ಕೆ "ಹೇ ಜ್ಞಾನ" ಎಂಬಂತೆ "ಏಙ್ ಹ್ರಸ್ವಾತ್" ಎಂಬುದರಿಂದ ಪ್ರಾಪ್ತವಾದ ಮಕಾರಕ್ಕೆ ಲೋಪವು "ಉಣಾದಯೋ ಬಹುಳಂ" ಎಂದು ಬಾಹುಲಕಾನ್ನಿವೃತ್ತಿಯಾಗಿ "ಕವಚಮ್" ಎಂಬುದಾಗಿಯೇ ಸಂಬೋಧನೆಯಲ್ಲೂ ರೂಪವು ಸಿದ್ಧವಾಗಿದೆ.

ಕವಚಮ್ ಎಂಬುದಕ್ಕೆ ಎಲ್ಲ ರಕ್ಷಕನಾದ ಶ್ರೀಹರಿಯೇ ಎಂದು ಅರ್ಥ.

ವಷಟ್ = ವರ್ತತೇ ಯಸ್ಮಾತ್ ಷಡ್ಗುಣತ್ವೇನ ಸರ್ವದಾ (ಅನುವ್ಯಾಖ್ಯಾನ)

ಅರ್ಥ = ಯಾವಾಗಲೂ ನಿರವಧಿಕವಾದ ಷಡ್ಗುಣಗಳಿಂದ ಕೂಡಿರುವವನಾದುದರಿಂದ ವಷಟ್ ಎಂದು ಶ್ರೀಹರಿಯು ಕರೆಯಲ್ಪಡುತ್ತಾನೆ.

ವೃತು ವರ್ತನೇ ಎಂಬ ಧಾತುವಿನ ಮುಂದೆ ಡ ಪ್ರತ್ಯಯವು ಬರಲಾಗಿ ಟಿಭೂತವಾದ ಋತ್ ಎಂಬುದಕ್ಕೆ ಲೋಪವು ಬಂದು ವ್ + ಅ = ವ ಎಂದು ರೂಪವಾಗುತ್ತದೆ.

ವೃತು + ಡ = ವ್ + ಅ = ವ = ವರ್ತತೇ ಇತಿ ವ.

ಷಡ್ಗುಣಾತ್ಮಕನಾಗಿರುವುದರಿಂದ ಷಟ್ ಎಂದು ಕರೆಯಲ್ಪಡುತ್ತಾನೆ.

ವಶ್ಚಾಸೌ + ಷಟ್ ಚ = ಇತಿ ವಷಟ್ = ಷಡ್ಗುಣಾತ್ಮಕನಾಗಿದ್ದಾನೆಂದು ತಾತ್ಪರ್ಯ.

ಷಟ್ ಗುಣಗಳು ಯಾವುವೆಂದರೆ:

ಐಶ್ವರ್ಯ, ವೀರ್ಯ, ಯಶಸ್ಸು, ಶ್ರೀ, ಜ್ಞಾನ, ವೈರಾಗ್ಯ (ವಿಜ್ಞಾನ) ಗಳೇ ಷಡ್ಗುಣಗಳು.

ವೌಷಟ್ = ವಿ = ವಿಷ್ಣುಃ.

"ಅ, ಕ, ಯ, ತ್ರ, ವಿ, ಸಂ, ಭೂ, ಮ, ಸ, ಖ, ಹಾ = ವಿಷ್ಣುವಾಚಕಾಃ"

ಎಂಬ ಪ್ರಮಾಣದಂತೆ ವಿ ಎಂದರೆ ವಿಷ್ಣು ಎಂದರ್ಥ. ಎಲ್ಲ ವರ್ಣಗಳೂ ವಿಷ್ಣುವಾಚಕಗಳೆಂದು ಬೃಹದಾರಣ್ಯಕ ಭಾಷ್ಯದಲ್ಲಿ ಭಾಷ್ಯಕಾರರು ಉದಾಹರಿಸಿರುತ್ತಾರೆ.

ಅಂತಹ ವೌ = ವಿಷ್ಣುವಿನಲ್ಲಿ (ಇರತಕ್ಕ) ವರ್ತಮಾನಾಃ ಷಟ್ = (೬) ಗುಣಗಳು = ವೌಷಟ್, ವೌ ಎಂಬಲ್ಲಿ ಸಪ್ತಮೀವಿಭಕ್ತಿಗೆ ಲೋಪವಿಲ್ಲ. ಇದರ ತಾತ್ಪರ್ಯಾರ್ಥವನ್ನೇ ಅನುವ್ಯಾಖ್ಯಾನಕಾರರು ವಿವರಿಸಿರುತ್ತಾರೆ.

"ತದ್ಗತ್ವತಃ ವೌಷಟ್ = ಇತ್ಯೇವಕಥ್ಯತೆ" (ಅನುವ್ಯಾಖ್ಯಾನದ) ತೇಷಾಂ ಷಣ್ಣಾಂ ಗುಣಾನಾಂ ತದ್ಗತ್ವತಃ ವೌಷಟ್ = ಭಗವಂತನ ಸ್ವರೂಪವೇ ಆದ ಭಗವಂತನಾದ ವಿಷ್ಣುವಿನಲ್ಲಿರತಕ್ಕ ಆರು ಗುಣಗಳು ವೌಷಟ್ ಎಂದು ಕರೆಯಲ್ಪಡುತ್ತವೆ. ವೌಷಟ್ ಇತ್ಯೇವ ಕಥ್ಯತೆ ಎಂಬ ಪ್ರಯೋಗವು ಭಾವೇ ಪ್ರಯೋಗವಾಗಿದೆ. ಕರ್ಮಣಿ ಪ್ರಯೋಗವಲ್ಲವಾದ್ದರಿಂದ, ಭಾವವು ಒಂದೇ ಆದುದರಿಂದ ಕಥ್ಯತೆ ಎಂಬ ಭಾಷ್ಯಕಾರರ ಪ್ರಯೋಗವು ಸಾಧುವಾಗಿದೆ ಎಂದು ಅಭಿಪ್ರಾಯ.

"ಏವಂ ಚ ವಿಷ್ಣೌ ವರ್ತಮಾನಾಃ ಗುಣಾಃ ಇತಿ ಕಥ್ಯತೆ ಇತಿ ಕಥನಂ ಎಂದು ಅರ್ಥವು ಇಲ್ಲಿ ವಿವಕ್ಷಿತವಾಗಿದೆ.

(ಏವಂ ಚ ವೌಷಡಿತಿ ಕಥನಂ ಭವತೀತ್ಯರ್ಥೋ ಜ್ಞೇಯಃ)

(ಆರು) ಗುಣಗಳಿಗೆ ವೌಷಟ್ ಎಂಬ ಶಬ್ದವಾಚ್ಯತ್ವವು ಬಂದರೂ, ಆ ಗುಣಗಳೆಲ್ಲವೂ ಭಗವಂತನೇ ಆಗಿರುವುದರಿಂದ, ಆ ಭಗವಂತನು ಒಬ್ಬನೇ ಆಗಿರುವ ಪ್ರಯುಕ್ತ ಕಥ್ಯಂತೆ ಎಂದು ಹೇಳದೇ ಕಥ್ಯತೆ ಎಂದು ಕಥನ ಎಂಬ ಭಾವಾರ್ಥದಲ್ಲಿ ಪ್ರಯುಕ್ತವಾಗಿರುವುದರಿಂದ ಏಕವಚನವು ಯುಕ್ತವಾಗಿದೆ ಎಂಬ ತಾತ್ಪರ್ಯ.

ಸ್ವಾಹಾ ಶಬ್ದದ ನಿಷ್ಪತ್ತಿ ಮತ್ತು ಅರ್ಥದ ವಿವರಣೆ :-

"ಸ್ವೀಯಂ ಸ್ವೀಕುರುತೇ ಯಸ್ಮಾತ್, ಸ್ವಾಹೇತ್ಯುಕ್ತೋ ಜನಾರ್ದನಃ" (ಅನುವ್ಯಾಖ್ಯಾನ)

ಸ್ವಾಹಾ = ಹೃಞ್ ಹರಣೇ ಅಥವಾ ಓಹಾಕ್ ತ್ಯಾಗೇ" ಎಂಬ ಧಾತುವಿನ ಮುಂದೆ ಹೃಞ್ = ಆಙ್ ಪೂರ್ವಕವಾದ ಹೃಞ್ ಹರಣೇ ಎಂಬ ಧಾತುವಿನ ಮುಂದೆ "ಡ" ಪ್ರತ್ಯಯವು ಬಂದು ಧಾತುಸಂಬಂಧಿಯಾದ ಋಕಾರಕ್ಕೆ ಲೋಪವು ಬರಲಾಗಿ ಆಹ್ + ಅ = ಆಹ ಎಂದಾಗುತ್ತದೆ.

ಅಥವಾ = ಆಙ್ ಪೂರ್ವಕವಾದ ಓ ಹಾಕ್ ತ್ಯಾಗೆ ಎಂಬ ಧಾತುವಿನ ಮುಂದೆ ಡ ಪ್ರತ್ಯಯವು ಬಂದು ಧಾತುವಿನ ಸಂಬಂಧಿಯಾದ ಟಿಸಂಜ್ಞಕವಾದ ಆಕಾರಕ್ಕೆ ಲೋಪವು ಬರಲಾಗಿ, "ಆ + ಹ್ + ಅ = ಆಹ" ಎಂದು ರೂಪವು ಸಿದ್ಧವಾಗುವುದು. ಆಙ್ ಪೂರ್ವಕವಾದ ಎರಡೂ ಧಾತುಗಳು ಸ್ವೀಕಾರಾರ್ಥಗಳಾಗಿವೆ.

ಸ್ವಂ = ಸ್ವಭಾವತಃ = ಸ್ವಾಭಾವಿಕವಾಗಿಯೇ, ಸ್ವೀಯಮೇವ = ತನ್ನದೇ ಆದ, ಹವಿರಾದಿಗಳನ್ನು "ಸ್ವೀಕುರುತೆ" ಇತಿ ಸ್ವಾಹಾ ಎಂದು ರೂಪವು ಸಿದ್ಧವಾಗಿದೆ. ಸ್ವೀಕುರುತೆ ಎಂಬ ಭಾಷ್ಯಕಾರರ ವ್ಯಾಖ್ಯಾನವು ಹೇಗೆಂದರೆ :-

"ಕ್ರಿಯಾ ವಾಚಿತ್ವಮಾಖ್ಯಾತುಂ ಏಕೈಕೋಽರ್ಥಃ ಪ್ರದರ್ಶಿತಃ ।
ಪ್ರಯೋಗತೋಽನುಗಂತವ್ಯಾಃ ಅನೇಕಾರ್ಥಾ ಹಿ ಧಾತವಃ" ।।

**ತಾತ್ಪರ್ಯ** :- ವ್ಯಾಕರಣಶಾಸ್ತ್ರಕಾರರು 'ಭೂ ಸತ್ತಾಯಾಂ" ಇತ್ಯಾದಿಯಾಗಿ ಧಾತುಗಳಿಗೆ "ಕ್ರಿಯಾ ವಾಚಿನೋ ಭ್ವಾದಯಃ ಧಾತುಸಂಜ್ಞಾಃ ಸ್ಯುಃ" ಎಂದು ಹೇಳಿ, ಒಂದೊಂದು ಧಾತುವಿಗೂ ಸಾಮಾನ್ಯವಾಗಿ ಒಂದೊಂದು ಕ್ರಿಯಾ ವಾಚಿತ್ವವನ್ನು ಹೇಳಿರುತ್ತಾರೆ. ಆದಾಗ್ಯೂ ಆಯಾ ಧಾತುವಿಗೆ ಅವರು ತಿಳಿಸಿರುವ ಒಂದೇ ಕ್ರಿಯೆಯು ಅರ್ಥವನ್ನು. ಒಂದೇ ಭೂ ಧಾತುವಿಗೆ "ಭೂ ಪ್ರಾಪ್ತೌ, ಭೂಃ ಪ್ರಾರ್ಣತಾಯಾಂ ಎಂದು ಸಂದರ್ಭಾನುಸಾರವಾಗಿ ಅನೇಕಾರ್ಥಗಳಿವೆ. ಹಾಗೆಯೇ ಪ್ರಪಂಚೋ ಯದಿ ವಿದ್ಯೇತ ಎಂದು ಶ್ರುತಿವಾಕ್ಯದಲ್ಲಿನ ವಿದಧಾತುವಿಗೆ ಪ್ರಪಂಚೋ ಯದಿ "ಉತ್ಪದ್ಯೇತ" ಎಂದು ಅರ್ಥ ಮಾಡಲಾಗಿದೆ. ಆದಕಾರಣದಿಂದಲೇ ಪ್ರಯೋಗತೋಽನುಗಂತವ್ಯಾ ಅನೇಕಾರ್ಥಾ ಹಿ ಧಾತವಃ" ಎಂದು ಹೇಳಿರುತ್ತಾರೆ.

ಪ್ರತ್ಯಕ್ಷದಲ್ಲೂ ಸಹ ಒಂದೇ ಹೃಞ್ ಧಾತುವಿಗೆ "ಆಹಾರ, ವಿಹಾರ, ಸಂಹಾರ, ಪ್ರಹಾರ, ಪರಿಹಾರ ಇತ್ಯಾದಿಯಾಗಿ ಉಪಸರ್ಗದ ಬಲದಿಂದ, ಸಂದರ್ಭಾನುಸಾರವಾಗಿ ಅನೇಕಾರ್ಥಗಳಿರುವಂತೆ ಆಙ್ ಪೂರ್ವಕವಾದ ಹೃಞ್ ಧಾತುವಿಗೆ ಸ್ವೀಕಾರ ಎಂಬ ಅರ್ಥ ಮಾಡಿರುವುದೂ ಕೂಡ ಯುಕ್ತವೇ ಆಗಿದೆ.

ಸ್ವಾಹಾಹ್ವಾಸ್ + ಅಕ್ = ಎಂದು ಸವರ್ಣದೀರ್ಘಸಂಧಿ ಮಾಡಲಾಗಿ ಅದರ ಮುಂದೆ ಸುಪ್ರತ್ಯಯವು ಬಂದು "ಅಂತಾದಿವಚ್ಚ" ಎಂಬುದರಿಂದ ಸವರ್ಣದೀರ್ಘಕ್ಕೆ ಪೂರ್ವಾಂತವ್ಯಾಪದಿಂದ ಹ್ರಸ್ವವು ಬಂದು "ಪದ್ ಪ್ರತ್ಯಕ್ಷಯುದ್ಧೇ" ಎಂಬ ಸೂತ್ರದಿಂದ ಸುಲೋಪವೂ ಬಂದು "ಸ್ವಾಹಾ" ಎಂದಾಗಿದೆ.

ಸ್ವಾಹಾ ಎಂಬುದೂ ಸಹ ಸಂಬೋಧನವೇ ಆಗಿದೆ. ಇದೂ ಸಹ ಆಕಾರಾಂತವಾದ ಅವ್ಯಯವಾಗಿದೆ. ಆಕಾರವೂ ಸಹ ಭಾವವ್ಯಾಚಕವೇ ಆಗಿರುವುದರಿಂದ ಸ್ವಾಹಾಹ್ವಾಸ್ + ಅಕ್ = ಎಂದು ವಿಗ್ರಹವನ್ನು ತೋರಿಸಿರುತ್ತಾರೆ. ಅದರ ಮುಂದೆ "ಸುಬಾದಿಪ್ರತ್ಯಯವು ಬಂದಾಗ ಪ್ರಥಮೈಕವಚನವು ಸ್ವಾಹಾಃ" ಎಂದಾಗುವುದು.

ಲೋಪವಾ ಹಬ್ಬದಂತೆ ಇದೂ ಸಹ "ಆಕಾರಾಂತವಾದ ಪುಲ್ಲಿಂಗಶಬ್ದವಾಗಿದೆ. ಅದರ ಸುಬುದ್ಧಿಯು ಸ್ವಾಹಾ ಎದೇ ಆಗಿರುವುದು. ಇದು ಛಾಂದಸಪ್ರಯೋಗವಾಗಿದೆ. ಆದಕಾರಣ ಪ್ರತ್ಯಯಕ್ಕೆ ಲೋಪವು ಬಂದಿದೆಯೆಂದೂ ಕೆಲವರು ಸಮಾಧಾನವನ್ನು ಹೇಳುವರು.

ಸ್ವಾಹಾ = ಸ್ವಭಾವದಿಂದಲೇ ತಾನೇ ಹಾಲುಹಿಸಿದ ಹವಿರಾದಿಗಳನ್ನು ಸ್ವೀಕರಿಸುವವನೇ ! ಹೇ ಶ್ರೀಹರಿಯೇ ಎಂದು ತಾತ್ಪರ್ಯ.

ನಮಃ = ನಮಶ್ಶಬ್ದದ ನಿಷ್ಪತ್ತಿಯು ಈ ರೀತಿ ಇದೆ.

(ಣಮು) "ಣಮ್ ಪ್ರಹ್ವತ್ವೇ ಶಬ್ದೇ ಚ" ಎಂಬುದಾಗಿರುವ ಣಮ್ ಧಾತುವಿನ ಮುಂದೆ, ಅಸುನ್ ಪ್ರತ್ಯಯವು ಬರಲಾಗಿ, ಅಸುನ್ ಪ್ರತ್ಯಯದಲ್ಲಿನ ನಕಾರಲೋಪವೂ ಬಂದು ಸಕಾರಕ್ಕೆ ರುತ್ವವೂ ವಿಸರ್ಗವೂ ಬಂದಾಗ "ನಮಃ" ಎಂದು ರೂಪವು ಸಿದ್ಧವಾಗುವುದು.

ಇದರ ನಿರ್ವಚನವನ್ನು ಭಾಷ್ಯಕಾರರೇ ತೋರಿಸಿರುತ್ತಾರೆ.

"ನಮನ್ತ್ಯಸ್ಮಿನ್ಗುಣಾ ಯಸ್ಮಾತ್ನಮ ಇತ್ಯೇವ ಕಥ್ಯತೇ" (ಅನುವ್ಯಾಖ್ಯಾನ.)

ಇಲ್ಲಿ ಅಧಿಕರಣಾರ್ಥದಲ್ಲಿ ಅಸುನ್ ಪ್ರತ್ಯಯವು ಬಂದಿದೆ. ಅಧಿಕರಣಾರ್ಥದಲ್ಲಿ ಅಸುನ್‌ಪ್ರತ್ಯಯವು ಬಂದಾಗ ಅದರಿಂದ ನಿಷ್ಪನ್ನವಾದ ನಮಃ ಎಂಬ ಶಬ್ದಕ್ಕೆ ಪುಲ್ಲಿಂಗದಲ್ಲೂ ಸಂಬೋಧನಾರ್ಥದಲ್ಲಿ ನಮಃ ಎಂದೇ ರೂಪವು ಆಗುವುದು. ಆದಾಗ್ಯೂ "ಕಮಲಮ್" ಎಂಬಲ್ಲಿ ಹೇಗೆ ನಪುಂಸಕತ್ವವು ಶಬ್ದಕ್ಕೆ ಉಂಟೋ ಅದರಂತೆ ಶಬ್ದಾನುಸಾರಿಯಾಗಿ ನಮಃ ಎಂಬಲ್ಲಿಯು ನಪುಂಸಕಲಿಂಗವನ್ನು ಹೇಳಲಾಗಿದೆ. ಬ್ರಹ್ಮಶಬ್ದದಲ್ಲಿ ಶಬ್ದಸ್ವಭಾವದಿಂದ ಹೇಗೆ ನಪುಂಸಕಲಿಂಗವೋ ಅದರಂತೆ ಇಲ್ಲೂ ಶಬ್ದದ ಸ್ವಭಾವದಿಂದಲೇ ನಪುಂಸಕ ಲಿಂಗವು ವಿವಕ್ಷಿತವಾಗಿದೆ ಎಂದು ಅಭಿಪ್ರಾಯ.

ನಮನ್ತಿ ಅಸ್ಮಿನ್ ಎಂಬುದರಿಂದ ನಮನದಿಂದ ಗುಣಗಳಿಗೆ ಪರಮಾತ್ಮನಲ್ಲಿ ಆತ್ಯಂತಿಕ ಸಂಬಂಧವನ್ನು ಹೇಳಿದಂತಾಯಿತು. ಇಲ್ಲಿ ವಿವಕ್ಷಿತವಾದ ಆತ್ಯಂತಿಕತ್ವವು ಯಾವದ್ದ್ರವ್ಯಭಾವಿತ್ವರೂಪವಾದುದು ಅಥವಾ ತಾದಾತ್ಮ್ಯ ಸಂಬಂಧದಿಂದಲಾದರೂ ಗುಣಗಳಿಗೆ ಅನ್ವಯವನ್ನು ಇಟ್ಟುಕೊಳ್ಳಬೇಕೆಂದು ಅಭಿಪ್ರಾಯ.

ಗುಣಗಳಿಗೆ ಪರಮಾತ್ಮನಲ್ಲಿ ಪ್ರಹ್ವೀಭಾವರೂಪವಾದ ನಮನವು ಎಂದರೆ ಯಾವದ್ದ್ರವ್ಯಭಾವಿತ್ವರೂಪವಾದುದು ಎಂದು ಪರಮಾಭಿಪ್ರಾಯ.

ಈ ರೀತಿ ಯೋಗವೃತ್ತಿಯಿಂದ (ಅವಯವಶಕ್ತಿಯ ಮೂಲಕವಾಗಿ) ಪದಸಮನ್ವಯದಿಂದ ಆಗಿರತಕ್ಕ ಪ್ರಯೋಜನವನ್ನು ನಿಗಮನ ಮಾಡಿ ಭಾಷ್ಯಕಾರರಾದ ಶ್ರೀಮದಾನಂದತೀರ್ಥರು ತಿಳಿಸುತ್ತಿರುತ್ತಾರೆ.

**"ಅತ್ರಶೇಷಕ್ರಿಯಾನಾಮಶಬ್ದೈರೇಕೋ ಜನಾರ್ದನಃ ।**
**ಉಚ್ಯತೇ ಮುಖ್ಯತೋ ಯಸ್ಮಾತ್ ಪದವರ್ಣಸ್ವರಾತ್ಮಭಿಃ ।।**
**ತಸ್ಮಾದನಂತಗುಣತಾ ಶ್ರುತಿತಾತ್ಪರ್ಯಗೋಚರಾ ।। (ಅನುವ್ಯಾಖ್ಯಾನ)**

ಹಿಂದೆ ತಿಳಿಸಿದ ಕ್ರಮದಲ್ಲಿ ಸುಬಂತಗಳಾದ ಶಬ್ದಗಳಿಗೂ ಆಖ್ಯಾತಪದಗಳಾದ ಕ್ರಿಯಾಶಬ್ದಗಳಿಗೂ ಪದ, ವರ್ಣ ಮತ್ತು ಉದಾತ್ತಾದಿಸ್ವರಗಳಿಗೂ (ಏಕಾನೇಕವರ್ಣಾತ್ಮಕವಾದವುಗಳಿಗೂ) ಪರಮಮುಖ್ಯವೃತ್ತಿಯಿಂದ ಪರಮಾತ್ಮಪರತ್ವವಿರುವುದರಿಂದ, ಪರಮಾತ್ಮವಾಚಕತ್ವವಿರುವ ಪ್ರಯುಕ್ತ ಸರ್ವೋತ್ತಮನಾದ ಜಿಜ್ಞಾಸ್ಯನಾದ ಬ್ರಹ್ಮಶಬ್ದವಾಚ್ಯನಾದ ಶ್ರೀಹರಿಗೆ ಅನಂತಗುಣಪರಿಪೂರ್ಣತೆಯು ಸಮರ್ಥಿಸಲ್ಪಟ್ಟಿದೆ.

ವೈದಿಕಗಳಾದ ಸಕಲ ಶಬ್ದಗಳಿಗೂ ಯೋಗವೃತ್ತಿಯಿಂದ ಪ್ರತಿಪಾದನೆಯು ಅನಂತಾನಂತಗುಣಪರಿಪೂರ್ಣತ್ವೇನ ಪರಮಾತ್ಮನ ಜ್ಞಾನಕ್ಕಾಗಿಯೇ ಎಂದು ಅಂಗೀಕರಿಸಿರುವ ಪ್ರಯುಕ್ತ ಯಾವ ಇತರ ವಿಧವಾದ ಚೋದ್ಯಕ್ಕೂ

(ಅಕ್ಷೇಪಕ್ಕೂ) ಅವಕಾಶವಿಲ್ಲ. ಇದರಿಂದ ಸಮಸ್ತ ಕರ್ಮಕಾಂಡಕ್ಕೆ ಪರಮಾತ್ಮನಲ್ಲಿ ಪ್ರತಿಪದಸಮನ್ವಯವನ್ನು ಮಾಡಿದಂತಾಗಿದೆ. ಈ ಬಗೆಯಾದ ಸಮನ್ವಯಪ್ರತಿಪಾದನೆಯಿಂದ "ಓಂ ತತ್ತು ಸಮನ್ವಯಾತ್ ಓಂ" ಎಂಬ ಸೂತ್ರದಿಂದ ಎಲ್ಲ ಬಗೆಯಾದ ಅನುಪಪತ್ತಿಯನ್ನು ಬಗೆಹರಿಸಿದಂತಾಯಿತು.

ಕರ್ಮಪ್ರತಿಪಾದಕಗಳಾದ ಕರ್ಮಕಾಂಡದಲ್ಲಿನ ಪದಗಳಿಗೆ ಈ ಬಗೆಯಾದ ಸಮನ್ವಯಪ್ರತಿಪಾದನೆಯನ್ನು ನಮ್ಮ ಶ್ರೀಮದಾನಂದತೀರ್ಥಭಗವತ್ಪಾದರ ಶ್ರೀಮದ್ಭಾಷ್ಯದಲ್ಲಿ ಮಾತ್ರ ಕಾಣುತ್ತೇವೆಯೇ ಹೊರತು ಮತ್ತಾವ ಸೂತ್ರ ಭಾಷ್ಯಗಳಲ್ಲೂ ನಾವು ಕಾಣಲಾರೆವು. ಇದು ಸೂತ್ರಕಾರರಾದ ಶ್ರೀವೇದವ್ಯಾಸರಿಗೆ ಪರಮಸಮ್ಮತ ಪ್ರಕ್ರಿಯೆಯಾಗಿರುವುದರಿಂದಲೇ ಪಂಡಿತಾಚಾರ್ಯರು ಶ್ರೀಮದಾನಂದತೀರ್ಥರ ಸೂತ್ರಭಾಷ್ಯದ ಮಹಿಮೆಯನ್ನು ವರ್ಣಿಸುವಾಗ "ವ್ಯಾಸದೇವಹೃದಯಯಾತಿವಲ್ಲಭಮ್" ಎಂದು ಮುಕ್ತಕಂಠದಿಂದ ಪ್ರಶಂಸಿಸಿರುತ್ತಾರೆ. ಇಂತಹ ಅದ್ಭುತವಾದ ಪ್ರತಿಪಾದನೆಯಿಂದ ಕೂಡಿದ, ಅನಂತಗುಣಪರಿಪೂರ್ಣನಾದ ಸಕಲದೋಷವರ್ಜಿತನಾದ ಶ್ರೀಮನ್ನಾರಾಯಣನ ಸರ್ವೋತ್ತಮತ್ವವನ್ನು ಸಾಧಿಸುತ್ತಿರುವ ಶ್ರೀಮದ್ಭಾಷ್ಯವು ಅನಂತಪುಣ್ಯಪ್ರಭಾವದಿಂದ ಲಭಿಸಿರುವಾಗ ಯಾವ ಅಧಿಕಾರಿಚೇತನನು ಇದನ್ನು ಬಿಡುವನೋ ಇದರಲ್ಲಿ ಉದಾಸೀನನೋ ಅವನ ವೈಷ್ಣವ ಜನ್ಮವೇ ವ್ಯರ್ಥ. "ಯಸ್ತ್ವ ಪತ್ತುಪನತಂ - ಸ ನೀಚಧೀಃ" ಎಂದು ಶೇಷಾಂಶ ಸಂಭೂತರಾದ ಘಟ್ಟದ ಮೇಲಿನ ಮಠಗಳಿಗೆಲ್ಲಾ ಮೂಲಪುರುಷರಾದ, ಶ್ರೀಮದಾನಂದತೀರ್ಥ ಭಗವತ್ಪಾದರ ಸಾಕ್ಷಾತ್ ಶಿಷ್ಯರಾದ ಶ್ರೀ ಪದ್ಮನಾಭತೀರ್ಥರು ಸೂತ್ರಭಾಷ್ಯವನ್ನು ತ್ಯಜಿಸುವವನನ್ನು "ನೀಚಧೀಃ" ಎಂದು ನಿಂದಿಸಿರುತ್ತಾರೆ.

ವೇದಭಾಷ್ಯಕಾರರೆಂದು ಪ್ರಸಿದ್ಧರಾದ ಸಾಯಣಮಾಧವರೂ ಕೂಡ ಕರ್ಮಕಾಂಡದಲ್ಲಿನ ಕರ್ಮ ಪ್ರತಿಪಾದಕಗಳಾದ ಪದಗಳಿಗಾಗಲಿ, ವಾಕ್ಯಗಳಿಗಾಗಲಿ, ಬೇರೆ ವಾಕ್ಯಗಳಿಗಾಗಲಿ, ಇಡೀ ವೇದರಾಶಿಗೆ ಪರಮಾತ್ಮಪರತ್ವವನ್ನು ಪ್ರತಿಪಾದಿಸಿಲ್ಲ. ಈ ಬಗೆಯಾದ ಪ್ರಕ್ರಿಯೆಯೇ ಅವರ ಬುದ್ಧಿಗೆ ಗೋಚರಿಸಿಲ್ಲ. ಪರಮಮುಖ್ಯವೃತ್ತಿಯೆಂಬ ಕೇವಲ ಪರಮಾತ್ಮಪರತ್ವವನ್ನು ಪ್ರತಿಪಾದಿಸುವ ವೃತ್ತಿವಿಶೇಷದ ಪರಿಚಯವೇ ಇತರ ದಾರ್ಶನಿಕರಿಗೆ ಆದಂತಿಲ್ಲ. ಇತರ ದರ್ಶನಗಳ ಪ್ರಕ್ರಿಯೆಯನ್ನು ಪರಿಶೀಲಿಸಿದಾಗ "ಮಹಾಯೋಗವಾಗಲಿ, ಮಹಾಯೋಗವಿದ್ವದ್ರೂಢಿ" ಯಾಗಲಿ ಎಲ್ಲೂ ಉದಾಹರಿಸಲ್ಪಟ್ಟಿರುವುದು ಕಂಡು ಬಂದಿಲ್ಲ. ಇತರ ದರ್ಶನಾಚಾರ್ಯರು ಯಾರೂ ಸಹ ಶ್ರೀಮನ್ಮಧ್ವಾಚಾರ್ಯರು ಪ್ರತಿಪಾದಿಸಿರುವಂತೆ ವಿಷ್ಣುಸರ್ವೋತ್ತಮತ್ವವನ್ನು ಪ್ರತಿಪಾದಿಸಿಯೇ ಇಲ್ಲ. ಆದಕಾರಣದಿಂದಲೇ ಪ್ರಾಚೀನಾಚಾರ್ಯರು ಸಾತ್ತ್ವಿಕರಾದ ಮಾಧ್ವಜನತೆಯನ್ನು ಕುರಿತು ಈ ಕೆಳಗೆ ಕಂಡಂತೆ ಪ್ರಶಂಸಿಸಿರುತ್ತಾರೆ ಮತ್ತು ಎಚ್ಚರಿಸಿರುತ್ತಾರೆ.

"ಅಹೋಭಾಗ್ಯಂ ಅಹೋಭಾಗ್ಯಂ ಮಧ್ವಮಾರ್ಗಾನುಯಾಯಿನಾಂ।
ಯೇಷಾಂ ಲಕ್ಷ್ಮೀಪತಿರ್ದೇವಃ ಗುರುಃ ಶ್ರೀ ಭಾರತೀಪತಿಃ॥ ಇತಿ॥

ಇಂತಹ ಭಾಷ್ಯವನ್ನು ಶ್ರೀಮಧ್ವರು ಪ್ರವಚನ ಮಾಡುತ್ತಿರುವಾಗ ಜನಲೋಕದಿಂದ ಸನಕಾದಿ ಋಷಿವರೇಣ್ಯರಿಂದ ಸಹಿತರಾಗಿ ಚತುರ್ಮುಖರು ಬಂದು ಶ್ರವಣ ಮಾಡಿದರು ಮತ್ತು ತಮ್ಮ ಲೋಕದಲ್ಲಿ ಸನಕಾದಿಮುನಿಗಳಿಗೆ ಶ್ರೀಮದ್ಭಾಷ್ಯದ ಮಹಿಮಾತಿಶಯವನ್ನು ಹೇಳಿ ಆನಂದೋದ್ರೇಕದಿಂದ ಕೊಂಡಾಡಿದ್ದಾರೆ.

ಅದರ ಅರಿವುದ ಪ್ರಕರಣಾವಾಕ್ಯವು ಈ ೧೬೩ ನೆ.

"ಮಹಾನಂದತೀರ್ಥಸ್ಯ ಯೇ ಭಾಷ್ಯಭಾವಂ ಮನೋವಾಗ್ಭಿರಾವರ್ತಯಂತೇ ಸ್ವಶಕ್ತ್ಯಾ ।
ಸುರಾದ್ಯಾ ನರಾಂತಾ ಮುಕುಂದಪ್ರಸಾದಾದಿಮಂ ಮೋಕ್ಷಮೇತೇ ಭಜಂತೇ ಸದೇತಿ ।।
(ಶ್ರೀ ಸುಮಧ್ವವಿಜಯ ಸರ್ಗ ೧೧, ಶ್ಲೋ. ೭೯.)

**ಅಭಿಪ್ರಾಯ** :- ಶ್ರೀಮನ್ಮಧ್ವಾಚಾರ್ಯರ ಶ್ರೀಮದ್ಭಾಷ್ಯಪ್ರವಚನಾದಿಗಳಿಂದ ಕ್ರಮೇಣ ಉಂಟಾಗುವ ಪರಮ ಪ್ರಸಾದದಿಂದ ಲಭ್ಯವಾಗುವ ಸ್ವರೂಪಾಭಿವ್ಯಕ್ತಿರೂಪವಾದ, ನಿತ್ಯಾನಂದಾತ್ಮಕವಾದ ಮೋಕ್ಷದ ಸ್ಥಾನವಿಶೇಷದ ವರ್ಣನೆಯನ್ನು ನಿರೂಪಿಸಿದಮೇಲೆ ಗ್ರಂಥಕಾರರು ಹೇಳುತ್ತಾರೆ. "ಶ್ರೀಮದಾನಂದತೀರ್ಥರ ಪರಮಪವಿತ್ರವಾದ ಭಾಷ್ಯದ ಭಾವವನ್ನು ತಮ್ಮ ತಮ್ಮ ಯೋಗ್ಯತೆಗೆ ಶಕ್ತಿಗೆ ತಕ್ಕಂತೆ ನಿತ್ಯವೂ ಯಾರು ಶ್ರವಣಮನನಾದಿಗಳಿಂದ ಸೇವಿಸುವರೋ ಅವರು ಮುಕುಂದನ ಅನುಗ್ರಹ ವಿಶೇಷದಿಂದ ಇಂತಹ ಮೋಕ್ಷವನ್ನು ಪಡೆಯುತ್ತಾರೆ" ಎಂದು ಶೇಷದೇವರು ಸನಕಾದಿಗಳಿಗೆ ಪ್ರತಿಪಾದಿಸಿರುತ್ತಾರೆ.

ಹಿಂದೆ ತಿಳಿಸಿದ ಕೇವಲ ಕಾಲ, ಕರ್ಮ ಪ್ರತಿಪಾದಕಗಳಾದ ಶಬ್ದಗಳಂತೆ ಸ್ತ್ರೀಲಿಂಗದ ಪ್ರಕೃತ್ಯಾದಿಶಬ್ದಗಳೂ, ನಿಷೇಧಾರ್ಥಕಗಳಾದ ಅಭಾವಾದಿಶಬ್ದಗಳೂ, ಎಲ್ಲವೂ ಬ್ರಹ್ಮವಾಚಕಗಳೇ ಆಗಿವೆ.

**"ಸ್ತ್ರೀಶಬ್ದಾಶ್ಚ ನಿಷೇಧಾರ್ಥಾಃ ಸರ್ವೇಽಪಿ ಬ್ರಹ್ಮವಾಚಕಾಃ" ॥(ಅನುವ್ಯಾಖ್ಯಾನ)**

ನಿತ್ಯ ಸ್ತ್ರೀಲಿಂಗಶಬ್ದಗಳೂ, ಅಸದಾದಿಶಬ್ದಗಳೂ ಸಹ ಪರಮಾತ್ಮವಾಚಕಗಳೇ ಆಗಿವೆ.

ಸಕಲ ಶಬ್ದಗಳೂ ಪರಮಾತ್ಮನನ್ನೇ ತಿಳಿಸುವುದಾದರೆ, ಆ ಶಬ್ದಗಳಿಗೆ ಭಗವನ್ಮಾತ್ರವಾಚಿತ್ವವು ಇರುವುದಾದರೆ, ಪರಮಾತ್ಮನನ್ನು ಬಿಟ್ಟು ಬೇರೆ ಕಡೆ ವ್ಯವಹಾರವೇ ಆ ಶಬ್ದಗಳಿಗೆ ಇಲ್ಲದೇ ಹೋದೀತು. ಆದರೆ ಬೇರೆ ಕಡೆಯೂ ವ್ಯವಹಾರವು ಕಂಡುಬಂದಿದೆ. ಇದನ್ನು ಹೇಗೆ ಕೂಡಿಸುವುದು. ಎಂಬ ಶಂಕೆಗೆ ಪಾದ್ಮಪುರಾಣವಾಕ್ಯವು ತಕ್ಕ ಸಮಾಧಾನವನ್ನು ಹೇಳುತ್ತಲಿದೆ.

**"ಪರಸ್ಯ ವಾಚಕಾಃ ಶಬ್ದಾಃ ಸಮಾಕೃಷ್ಯೇತರೇಷ್ವಪಿ ।**
**ವ್ಯವಹ್ರಿಯಂತೇ ಸತತಂ ಲೋಕವೇದಾನುಸಾರತಃ ।। ಇತಿಪಾದ್ಮೆ ।।**

ಸತತಂ = ಅನಾದಿ ಕಾಲದಿಂದಲೂ ಸ್ವಾಭಾವಿಕವಾಗಿಯೇ, ಪರಸ್ಯ = ವಿಷ್ಣುವಿಗೆ, ವಾಚಕಾಃ ಶಬ್ದಾಃ = ಪರಮ ಮುಖ್ಯವೃತ್ತಿಯಿಂದ ವಾಚಕವಾಗಿರುವ ಸರ್ವಶಬ್ದಗಳೂ, ಸಮಾಕೃಷ್ಯ = ಪರಮಾತ್ಮ ಸಂಬಂಧದಿಂದ ಸಂಗ್ರಹಿಸಲ್ಪಟ್ಟು, ಲೋಕವೇದಾನುಸಾರತಃ = ಲೋಕವ್ಯವಹಾರವನ್ನೂ, ವೇದದಲ್ಲಿನ ವ್ಯವಹಾರವನ್ನೂ ಅನುಸರಿಸಿ, ಇತರೇಷ್ವಪಿ = ಬೇರೇ ಪದಾರ್ಥಗಳಲ್ಲೂ ಕೂಡ, (ವೈದಿಕರಿಂದ) ವ್ಯವಹ್ರಿಯಂತೆ = ಮುಖ್ಯ ವೃತ್ತಿಯಿಂದ ವ್ಯವಹರಿಸಲ್ಪಡುತ್ತವೆ.

**ತಾತ್ಪರ್ಯ** :- ಸರ್ವಶಬ್ದಗಳಿಗೂ ಪರಮಾತ್ಮವಾಚಿತ್ವವು ಇದ್ದಾಗ್ಯೂ, ಬೇರೆಕಡೆ ವ್ಯವಹಾರಕ್ಕೆ ವಿರೋಧವು ಇರುವುದಿಲ್ಲ. ಬೇರೆ ಕಡೆ ರೂಢಿಯನ್ನು ಅಂಗೀಕರಿಸಲಾಗಿದೆ. ಪ್ರಾಜ್ಞರೂಢಿಯಿಂದ, (ವಿದ್ವದ್ರೂಢಿಯಿಂದ) ಸಕಲ ಶಬ್ದಗಳಿಗೂ ಪರಮಾತ್ಮವಾಚಿತ್ವವು ಇರುವುದಾದರೂ ಅಜ್ಞರೂಢಿಯಿಂದ ಜಗದ್ವಾಚಿತ್ವವೂ ಕೂಡುತ್ತದೆ.

ಪರಮಾತ್ಮಸಂಬಂಧದಿಂದ ಅವುಗಳನ್ನು ಸಂಗ್ರಹಿಸಿ, ಬೇರೆಕಡೆ ರೂಢತ್ವೇನ ಸಂಕೇತಿತಗಳಾಗಿರುವ ಪ್ರಯುಕ್ತ (ಪರಮಮುಖ್ಯ ವೃತ್ತಿಭಿನ್ನವಾದ ಕೇವಲ ಮುಖ್ಯವೃತ್ತಿಯುಕ್ತವಾಗಿರುವ ಪ್ರಯುಕ್ತ) ಅನ್ಯತ್ರ ವ್ಯವಹಾರಕ್ಕೆ ಯಾವ

ಚ್ಯುತಿಯೂ ಇರುವುದಿಲ್ಲ. ಬಾಲರಿಗೆ ಚಿತ್ರಲಿಖಿತಸಿಂಹಾದಿಗಳಲ್ಲಿ "ಇದು ಸಿಂಹ" ಎಂದು ವ್ಯವಹಾರವು ಇರುವಂತೆ, ಪರಮಮುಖ್ಯಾರ್ಥವನ್ನು ಅರಿಯದ ಜನರಿಗೆ ಜಗತ್ತಿನಲ್ಲಿ ಬಾಹುಲ್ಯೇನ ಶಬ್ದಪ್ರಯೋಗವು ಕಂಡುಬಂದಿದೆ. ಅಂತಹ ಪರಿಗೆ ಜಗದ್ವಾಚಿತ್ವಜ್ಞಾನವಿರುವುದರಿಂದ ಜಗತ್ತಿನಲ್ಲಿ ವ್ಯವಹಾರಪ್ರಸಿದ್ಧಿಯು ಇರುತ್ತದೆ.

ಸ್ತ್ರೀಲಿಂಗಶಬ್ದಗಳೂ ಸಹ ಪರಮಾತ್ಮವಾಚಕಗಳಾಗಿವೆ.

**ಏಷ ಹ್ಯೇವಪ್ರಕೃತಿಃ, ಅವಿಕೃತಿಃ, ಯಾ ಪ್ರಾಣೇನ ಸಂಭವತ್ಯದಿತಿಃ ದೇವತಾಮಯೀ, ಇತ್ಯಾದಿಯಾಗಿ ವೇದದಲ್ಲಿನ ಸಕಲ ಸ್ತ್ರೀಲಿಂಗಶಬ್ದವಾಚ್ಯನೂ ಪರಮಾತ್ಮನೇ ಆಗಿರುತ್ತಾನೆ.**

**ಮಾಯಾಂ ತು ಪ್ರಕೃತಿಂ ವಿದ್ಯಾತ್ ಮಾಯಿನಂ ತು ಮಹೇಶ್ವರಮ್**

(ಶ್ವೇತಾಶ್ವತರೋಪನಿಷತ್ತು ೪-೧೦.)

**ಅರ್ಥ** :- ಮಾಯಾಂ = ಭಗವಂತನ ಇಚ್ಛೆಯನ್ನು, ಪ್ರಕೃತಿಂ = ಪ್ರಕೃತಿಶಬ್ದವಾಚ್ಯವಾದುದನ್ನಾಗಿಯೂ, ಮಾಯಿನಂ = ಅಂತಹ ಇಚ್ಛೆಯನ್ನುಳ್ಳ, ಮಹೇಶ್ವರಂ = ಮಹಾಸಾಮರ್ಥ್ಯದಿಂದ ಕೂಡಿದ ವಿಷ್ಣುವನ್ನು, ವಿದ್ಯಾತ್ = ತಿಳಿಯಬೇಕು.

**ಮಹಾಮಾಯೇತ್ಯವಿದ್ಯೇತಿ ನಿಯತಿರ್ಮೋಹಿನೀತಿ ಚ ।**
**ಪ್ರಕೃತಿರ್ವಾಸನೇತ್ಯೇವಂ ತವೇಚ್ಛಾನಂತ ಕಥ್ಯತೇ ॥**

**ಅರ್ಥ** :- ಹೇ ಅನಂತ = ಎಲೈ ವಿಷ್ಣುವೇ ! ತವ = ನಿನ್ನ, ಇಚ್ಛಾ = ಇಚ್ಛೆಯನ್ನೇ, ಮಹಾಮಾಯಾ ಇತಿ = ಮಹಾಮಾಯಾ ಎಂಬುದಾಗಿಯೂ,

ಅವಿದ್ಯಾ ಇತಿ, ಪ್ರಕೃತಿರಿತಿ, ನಿಯತಿಃ ಇತಿ, ಮೋಹಿನೀ ಇತಿ, ವಾಸನಾ ಇತಿ ಚ ಶಬ್ದೈಃ ಕಥ್ಯತೇ ॥

**ಅಭಿಪ್ರಾಯ** :- ಎಲೈ ಅನಂತನೇ ! ವಿಷ್ಣುವೇ ! ನಿನ್ನ ಇಚ್ಛೆಯನ್ನೇ, ಮಹಾಮಾಯಾ ಎಂದೂ, ಅವಿದ್ಯಾ ಎಂದೂ, ನಿಯತಿ ಎಂದೂ ಮೋಹಿನೀ ಎಂದೂ ಪ್ರಕೃತಿ ಎಂದೂ, ವಾಸನಾ ಎಂದೂ ಹೇಳಲ್ಪಡುತ್ತದೆ.

ಪರಮಾತ್ಮನು ಅಂತಹ ಇಚ್ಛಾಸ್ವರೂಪನೇ ಆಗಿದ್ದಾನೆಂದು ಶ್ರುತಿಯು ಹೇಳುತ್ತಲಿದೆ.

**"ಸೋಽಭಿಧ್ಯಾ, ಸ ಜೂತಿಃ, ಸ ಪ್ರಜ್ಞಾ, ಸ ಆನಂದಃ" ॥ (ಇತಿಶ್ರುತಿಃ)**

**ಅರ್ಥ** :- ಸಃ = ಆ ವಿಷ್ಣುವು, ಅಭಿಧ್ಯಾ = ಇಚ್ಛಾರೂಪನು, ಸಃ = ಆ ವಿಷ್ಣುವು, ಜೂತಿಃ = ಪ್ರೇರಣಾರೂಪನು.

"ಸರ್ವಪ್ರೇರಕರೂಪತ್ವಾತ್ ಜೂತಿರಿತ್ಯಭಿಧೀಯತೇ" ॥ (ಐತರೇಯಭಾಷ್ಯ)

ಸಃ = ಆ ವಿಷ್ಣುವು, ಪ್ರಜ್ಞಾ = ಪ್ರಜ್ಞಾರೂಪನು, ಸಃ = ಆ ವಿಷ್ಣುವು, ಆನಂದಃ = ಆನಂದರೂಪನು.

ಪೈಂಗೀಶ್ರುತಿಯು ಸ್ಪಷ್ಟವಾಗಿಯೇ ಪರಮಾತ್ಮನನ್ನು ಪ್ರಕೃತಿಯೆಂದೂ, ಪುರುಷನೆಂದೂ, ಆತ್ಮಾ ಎಂದೂ, ಬ್ರಹ್ಮನೆಂದೂ, ಲೋಕ ಎಂದೂ, ಅಲೋಕ ಎಂದೂ ಉಲ್ಲೇಖಿಸಿದೆ.

**"ಏಷ ಸ್ತ್ರೀ, ಏಷ ಪುರುಷಃ, ಏಷ ಪ್ರಕೃತಿಃ, ಏಷ ಆತ್ಮಾ, ಏಷ ಬ್ರಹ್ಮ, ಏಷ ಲೋಕಃ, ಏಷ ಆಲೋಕಃ, ಯೋಽಸೌ ಹರಿರಾದಿರನಾದಿರನನ್ತೋಽನ್ತಃ ಪರಮಃ ಪರಾದ್ವಿಶ್ವರೂಪಃ" ।।**
**(ಇತಿ ಪೈಂಗಿಶ್ರುತೌ ಸಾಕ್ಷಾದೇವ ಪ್ರಕೃತಿಪುರುಷತ್ವಾಭಿಧಾನಾತ್)**

**ಅರ್ಥ** :- ಏಷಃ =ಪರಮಾತ್ಮನು, ಸ್ತ್ರೀ =ಸತತಂ ರಮಣಾತ್ ಸ್ತ್ರೀಶಬ್ದವಾಚ್ಯಃ = ಸರ್ವದಾ ರಮಿಸುವವನಾದುದರಿಂದ ಸ್ತ್ರೀಶಬ್ದವಾಚ್ಯನು, ಹೀಗೆಯೇ ಪುರುಷಃ, ಆತ್ಮಾ, ಪ್ರಕೃತಿಃ = ಪ್ರಕರ್ಷೇಣಕರೋತೀತಿ ಪ್ರಕೃತಿರಿತಿ ಯೋಗಾಚ್ಚ = ಪ್ರಕರ್ಷವಾಗಿ, ಉತ್ತಮವಾಗಿ ಮಾಡುವವನಾದ್ದರಿಂದ ಪ್ರಕೃತಿಶಬ್ದದಿಂದ ವಾಚ್ಯನಾಗಿದ್ದಾನೆ, ಬ್ರಹ್ಮ =ಬ್ರಹ್ಮಶಬ್ದದಿಂದ ಉಪಲಕ್ಷಿತವಾಗಿ ಸಕಲನಪುಂಸಕಶಬ್ದಗಳಿಂದಲೂ ವಾಚ್ಯನಾಗಿದ್ದಾನೆ (ಏಷ) ಲೋಕಃ = ಆಧಾರನು, ಆಲೋಕಃ = ಪ್ರಕಾಶರೂಪನು, ಯೋಽಸೌಹರಿಃ, ಆದಿಃ = ಕಾರಣನು, ಅನಾದಿಃ = ಉತ್ಪತ್ತಿರಹಿತನು, ಅನಂತಃ = ನಾಶರಹಿತನು, ಅಂತಃ = ಅಂತಕನು, ಪರಾತ್ = ಶ್ರೀತತ್ತ್ವಕ್ಕಿಂತಲೂ, ಪರಮಃ = ಉತ್ತಮನು, ವಿಶ್ವರೂಪಃ = ವಿಶ್ವಸ್ಮಿನ್‌ರೂಪಾಣಿ ಅಸ್ಯೇತಿ, ವಿಶ್ವಾನಿರೂಪಾಣಿ ಅಸ್ಯೇತಿವಾ ವಿಶ್ವರೂಪಃ ಸರ್ವನಿಯಾಮಕರೂಪವುಳ್ಳವನು, ಮತ್ಸ್ಯಾದಿ ಅನೇಕ ರೂಪವುಳ್ಳವನು ಎಂದು ಅರ್ಥ.

"ಪ್ರಕೃತಾವನುಪ್ರವಿಶ್ಯ ತಾಂ ಪರಿಣಾಮ್ಯ, ತತ್ಪರಿಣಾಮೇಷು ತತ್ಪರಿಣಾಮನಿಯಾಮಕತಯಾ ಸ್ಥಿತ್ವಾ ಆತ್ಮನಃ ಬಹುಧಾಕರಣಾತ್।

ಭಾಲ್ಲವೇಯ ಶ್ರುತಿವಚನವು ವಿಶದವಾಗಿ ಈ ವಿಷಯವನ್ನು ತಿಳಿಸುತ್ತಲಿದೆ.

**"ಅಥ ಹ್ಯೇಷ ಆತ್ಮಾ ಪ್ರಕೃತಿಮನುಪ್ರವಿಶ್ಯ ಆತ್ಮಾನಂ ಬಹುಧಾ ಚಕಾರ।**
**ತಸ್ಮಾತ್ಪ್ರಕೃತಿಃ ತಸ್ಮಾತ್ ಪ್ರಕೃತಿರಿತ್ಯಾಚಕ್ಷತೇ ।। (ಇತಿಭಾಲ್ಲವೇಯಶ್ರುತಿಃ)**

**ಅರ್ಥ** :- ಏಷಃ ಪರಮಾತ್ಮಾ ಯತಃ (ಯಾವ ಕಾರಣದಿಂದ) ಪ್ರಕೃತಿಮನುಪ್ರವಿಶ್ಯ =ಸ್ವತಃ ಪರಿಣಾಮ ಶಕ್ತಿರಹಿತ ವಾದ ಜಡವಾದ ಪ್ರಕೃತಿಯನ್ನು ಅದರ ಪರಿಣಾಮಕ್ಕೆ ಅನುಕೂಲವಾಗಿ ತಾನು ಅದರೊಳಗೆ ಪ್ರವೇಶ ಮಾಡಿ, ತಾಂ =ಆ ಜಡಪ್ರಕೃತಿಯನ್ನು ವಿಕಾರಗೊಳಿಸಿ, ಅಲ್ಲಿ ತನ್ನ ಇರುವಿಕೆಗಾಗಿ, ಆತ್ಮಾನಂಬಹುಧಾಚಕಾರ =ತಾನು ಅದಕ್ಕೆ ನಿಯಾಮಕ ರೂಪವನ್ನು ತಾಳಿದನು. (ವ್ಯಕ್ತಗೊಳಿಸಿದನು) ತಸ್ಮಾತ್ =ಬಹುಧಾಕರಣಾತ್ =ಅನೇಕಬಗೆಯಾದುದರಿಂದಲೇ ಪ್ರಕೃತಿಃ = ಪ್ರಕೃತಿಶಬ್ದವಾಚ್ಯನಾಗಿದ್ದಾನೆಂದು ಜ್ಞಾನಿಗಳು ಆಚಕ್ಷತೇ = ಹೇಳುತ್ತಾರೆ.

**ತಾತ್ಪರ್ಯ** :- ಜಡಪ್ರಕೃತಿಗೆ ಸ್ವತಃ ಪರಿಣಾಮವನ್ನು ಹೊಂದುವ ಸಾಮರ್ಥ್ಯವು ಇಲ್ಲ. ಆದ್ದರಿಂದ ಪರಮಾತ್ಮನು ಆ ಜಡ ಪ್ರಕೃತಿಯ ಒಳಗೆ ತಾನು ಪ್ರವೇಶ ಮಾಡಿ, ಅದಕ್ಕೆ ವಿಕಾರಭಾವವು ಬರುವಂತೆ ತಕ್ಕ ಶಕ್ತಿಯನ್ನು ಕೊಟ್ಟು, ಸ್ವತಃ ತಾನು ವಿಕಾರರಹಿತನಾದರೂ, ಜಡಪ್ರಕೃತಿಗೆ ಮಹತ್ತತ್ತ್ವರೂಪದಿಂದ ವಿಕಾರವನ್ನು ಉಂಟುಮಾಡಿ, ಅದಕ್ಕೆ ಪ್ರೇರಕತ್ವೇನ ಆ ಪರಿಣಾಮಗಳಾದ ಮಹದಾದಿಗಳಲ್ಲಿ ತನ್ನ ಇರುವಿಕೆಗಾಗಿ ತಾನು ಅದಕ್ಕೆ ನಿಯಾಮಕವಾದ ತನ್ನ ರೂಪವನ್ನು ವ್ಯಕ್ತಗೊಳಿಸುವುದರಿಂದ ಇಂತಹ ಈಶ್ವರಶಕ್ತಿಯು ಪ್ರಕೃಷ್ಟವಾಗಿದೆ. ಪ್ರಕರ್ಷೇಣ ಕರೋತಿ ಎಂಬುದಾಗಿ ಯೋಗವು (ಅವಯವಾರ್ಥವು ಇರುವುದರಿಂದ) ವಿಷ್ಣುವು ಪ್ರಕೃತಿ ಎಂದೆನಿಸಿದ್ದಾನೆ.

ಇದರಿಂದ ಪ್ರಧಾನಕ್ಕೂ ಪ್ರಕೃತಿಗೂ ತನಗೂ ಬಹುಧಾಕರಣವಿರುವುದರಿಂದ ಇಂತಹ ಪ್ರಕೃಷ್ಟಕರಣವೇ ಪ್ರಕೃತಿ ಶಬ್ದ ಪ್ರಯೋಗಕ್ಕೆ ನಿಮಿತ್ತವೆಂದು ಅಭಿಪ್ರಾಯವಾಗಿದೆ.

ನಾರದೀಯಪುರಾಣ ವಚನವೂ ಸಹ ಈ ಅಭಿಪ್ರಾಯವನ್ನು ವಿಶದಪಡಿಸುತ್ತಲಿದೆ.

**ಅವಿಕಾರೋಽಪಿ ಪರಮಃ ಪ್ರಕೃತಿಂ ತು ವಿಕಾರಿಣೀಮ್ ।**
**ಅನುಪ್ರವಿಶ್ಯ ಗೋವಿಂದಃ ಪ್ರಕೃತಿಶ್ಚಾಭಿಧೀಯತೇ । ಇತಿ ನಾರದೀಯೇ ।।**

**ಅರ್ಥ** :- ಪರಮಃ ಗೋವಿಂದಃ ಅವಿಕಾರೋಽಪಿ = ಸರ್ವೋತ್ತಮನಾದ ಗೋವಿಂದನು ಅತ್ಯಂತ ನಿರ್ವಿಕಾರನಾದಾಗ್ಯೂ, (ವಿಕಾರರಹಿತನಾಗಿದ್ದಾಗ್ಯೂ) ಪ್ರಕೃತಿಂ ವಿಕಾರಿಣೀಂ ವಿಧಾಯ = ಪ್ರಕೃತಿಯನ್ನು ವಿಕಾರವುಳ್ಳದುದನ್ನಾಗಿ ಮಾಡಿ, ಅನುಪ್ರವಿಶ್ಯ = ಆ ಪರಿಣಾಮಕ್ಕೆ ಅನುಕೂಲವಾಗಿ ತಾನು ಪ್ರವೇಶಿಸಿ, ಪ್ರಕೃತಿಶ್ಚಾಭಿಧೀಯತೆ = ಪ್ರಕೃತಿಶಬ್ದ ವಾಚ್ಯನಾಗಿರುತ್ತಾನೆ.

ಅವ್ಯವಧಾನೇನೋತ್ಪತ್ತಿದ್ವಾರತ್ವವೇ ಪ್ರಕೃತ್ಯಾದಿ ಸ್ತ್ರೀಲಿಂಗಪ್ರಯೋಗದಲ್ಲಿ ನಿಮಿತ್ತಭೂತವಾದುದು.

ಸ್ತ್ರೀಮೂಲಕವಾಗಿ ಅಪತ್ಯೋತ್ಪಾದಕತ್ವವು ಪುಂಸ್ತ್ವವು = ಪುಲ್ಲಿಂಗಶಬ್ದ ಪ್ರವೃತ್ತಿನಿಮಿತ್ತವು. ಈ ವಿಧವಾಗಿರತಕ್ಕ ಎರಡೂ ಬಗೆಯಾದ ಪ್ರಸವಕರ್ತೃತ್ವವು ವಾಸುದೇವರೂಪಿ ಪರಮಾತ್ಮನಿಗೆ ಇರುವುದೆಂದು ಬ್ರಹ್ಮಾಂಡ ಪುರಾಣವು ತಿಳಿಸುತ್ತಲಿದೆ.

**"ವ್ಯವಧಾನೇನ ಸೂತಿಸ್ತು ಪುಂಸ್ತ್ವಂ ವಿದ್ವದ್ಭಿರುಚ್ಯತೇ ।**
**ಸೂತಿರವ್ಯವಧಾನೇನ ಪ್ರಕೃತಿತ್ವಮಿತಿ ಸ್ಥಿತಿಃ ।।**
**ಉಭಯಾತ್ಮಕಸೂತಿತ್ವಾದ್ ವಾಸುದೇವಃ ಪರಃ ಪುಮಾನ್ ।**
**ಪ್ರಕೃತಿಃ ಪುರುಷಶ್ಚೇತಿ ಶಬ್ದೈರೇಕೋಽಭಿಧೀಯತೇ ।। ಇತಿ ಬ್ರಹ್ಮಾಂಡೇ ।। "**

**ಅರ್ಥ** :- ಸ್ತ್ರೀಮೂಲಕವಾಗಿ ವ್ಯವಧಾನದಿಂದ, ಸೂತಿಃ = ಅಪತ್ಯೋತ್ಪಾದಕತ್ವವು, ಪುಂಸ್ತ್ವಂ = ಪುಲ್ಲಿಂಗ ಶಬ್ದ ಪ್ರವೃತ್ತಿನಿಮಿತ್ತವು। ಅವ್ಯವಧಾನೇನ = ಸಾಕ್ಷಾತ್ತಾಗಿಯೇ, ಸೂತಿಃ = ಅಪತ್ಯೋತ್ಪಾದಕತ್ವವು, ಪ್ರಕೃತಿತ್ವಂ = ಸ್ತ್ರೀಶಬ್ದ ಪ್ರವೃತ್ತಿ ನಿಮಿತ್ತವು, ಇತಿ ಸ್ಥಿತಿಃ = ಹೀಗೆಂಬ ವ್ಯವಸ್ಥೆಯು ಇದೆ. ಉಭಯಾತ್ಮಕಸೂತಿತ್ವಾತ್ = ಎರಡು ಬಗೆಯಾದ ಪ್ರಸವದ ಕರ್ತೃತ್ವವು ಪರಮಾತ್ಮನಿಗೆ ಇರುವುದರಿಂದ, ವಾಸುದೇವಃ = ವಾಸುದೇವಪದವಾಚ್ಯನಾದ ಪರಮಾತ್ಮನು, ಪರಃ = ಲೋಕವಿಲಕ್ಷಣನಾದ, ಪುಮಾನ್ = ಪುರುಷನು, ಏಕ ಏವ = ಒಬ್ಬನೇನೇ ಪ್ರಕೃತಿಯೆಂದು ಸ್ತ್ರೀವಾಚಕಶಬ್ದದಿಂದಲೂ, ಪುರುಷವಾಚಕಶಬ್ದಗಳಿಂದಲೂ, ಅಭಿಧೀಯತೆ = ಹೀಗೆಯೆಂದು ವಿದ್ವಾಂಸರಿಂದ ಹೇಳಲ್ಪಡುತ್ತಾನೆ.

ಮತೋಕ್ತಯುಕ್ತ್ಯಾ ಪರಮಾತ್ಮನಿಗೆ ಶೂನ್ಯ, ತುಚ್ಛ, ಅಭಾವ, ಅವ್ಯಕ್ತ, ಅದೃಶ್ಯ, ಅಚಿಂತ್ಯ, ನಿರ್ಗುಣ ಇತ್ಯಾದಿಗಳಾದ ಶಬ್ದಗಳಿಂದಲೂ ವಾಚ್ಯತ್ವವನ್ನು ತಿಳಿಸುತ್ತಲಿದೆ.

ಮಹಾಕೂರ್ಮ ಪುರಾಣವು ಮಹೋಪನಿಷತ್ತಿನಲ್ಲಿ ಉಕ್ತವಾಗಿರುವ ಶೂನ್ಯ ಮೊದಲಾದ ಶಬ್ದಗಳ ಅರ್ಥ ವಿವರಣೆಯನ್ನು ವಿಶದವಾಗಿ ನಿರೂಪಿಸುತ್ತಲಿರುವುದನ್ನು ಜಿಜ್ಞಾಸುಗಳು ಮನನ ಮಾಡಬೇಕಾಗಿದೆ. ಇದರಿಂದ ಪರಮಾತ್ಮನಿಗೆ ಓಂ ತತ್ತುಸಮನ್ವಯಾತ್ ಓಂ ಎಂಬ ಸೂತ್ರದಲ್ಲಿ ಪ್ರತಿಜ್ಞೆ ಮಾಡಲ್ಪಟ್ಟ ವೈದಿಕಗಳಾದ ಸರ್ವಶಬ್ದಗಳ ಸಮನ್ವಯವನ್ನು ಸಾಧಿಸಿದಂತಾಗುವುದು.

ಮಹೋಪನಿಷತ್ತಿನ ವಾಕ್ಯವು ಈ ರೀತಿ ಇದೆ.

**"ಏಷ ಹ್ಯೇವ ಶೂನ್ಯಃ, ಏಷ ಹ್ಯೇವ ತುಚ್ಛಃ, ಏಷ ಹ್ಯೇವಾಭಾವಃ, ಏಷ ಹ್ಯೇವ ಅವ್ಯಕ್ತಃ, ಅದೃಶ್ಯಃ, ಅಚಿಂತ್ಯಃ, ನಿರ್ಗುಣಶ್ಚ ।। ಇತಿ । (ಮಹೋಪನಿಷದಿ)**

**ಅರ್ಥ** :- ಏಷಃ = ಭಗವಂತನು, ಶೂನ್ಯಃ = ಶೂನ್ಯಶಬ್ದವಾಚ್ಯನು, ಏಷ ಏವಹಿ = ಈ ಭಗವಂತನೇವೇ ತುಚ್ಛ = ತುಚ್ಛಶಬ್ದವಾಚ್ಯನು, ಇದೇ ರೀತಿ, ಅಭಾವ = ಅಭಾವಶಬ್ದವಾಚ್ಯನು, ಅವ್ಯಕ್ತಃ = ಅವ್ಯಕ್ತ ಶಬ್ದವಾಚ್ಯನು, (ದುರ್ಜನರಿಗೆ ಅವ್ಯಕ್ತನೂ ಆಗಿದ್ದಾನೆ.) ಇದೇ ರೀತಿ ಅದೃಶ್ಯಃ, ನಿರ್ಗುಣಶ್ಚ = ಪ್ರಾಕೃತ ಗುಣರಹಿತನೂ ಆಗಿರುತ್ತಾನೆ.

ಈ ಶ್ರುತಿಯ ಜೊತೆಗೆ "ಏಷ ಹ್ಯೇವಾಸನ್" ಎಂಬುದನ್ನು ಮೊದಲೇ ಸೇರಿಸಿಕೊಳ್ಳಬೇಕು.

ಮಹೋಪನಿಷತ್ತೆಂಬ ಶ್ರುತಿಯು ಪರಮಾತ್ಮನಿಗೆ ಪ್ರಾಧ್ಯರೂಢಿಯಿಂದ ಶೂನ್ಯಾದಿಶಬ್ದವಾಚ್ಯತ್ವವನ್ನು ತಿಳಿಸುತ್ತಲಿದೆ. ವೇದವ್ಯಾಖ್ಯಾನರೂಪವಾದ ಮಹಾಕೂರ್ಮಪುರಾಣವು ಯೋಗವೃತ್ತಿಯಿಂದಲೂ (ಅವಯವ ಶಕ್ತಿಯಿಂದಲೂ) ಪರಮಾತ್ಮನಿಗೆ ಶೂನ್ಯ ಮೊದಲಾದ ಶಬ್ದವೇದ್ಯತ್ವವನ್ನು ಪ್ರತಿಪಾದಿಸುತ್ತಲಿರುವುದು.

**ಶಮೂನಂ ಕುರುತೇ ವಿಷ್ಣುರದೃಶ್ಯಸ್ಸನ್ ಪರಸ್ಸ್ವಯಮ್ ।**
**ತಸ್ಮಾಚ್ಛೂನ್ಯ ಇತಿಪ್ರೋಕ್ತಃ ತೋದನಾತ್ ತುಚ್ಛ ಉಚ್ಯತೇ ।।**
**ನೈಷ ಭಾವಯಿತುಂ ಯೋಗ್ಯಃ ಕೇನಚಿತ್ಪುರುಷೋತ್ತಮಃ ।**
**ಅತೋಽಭಾವಂ ವದನ್ತ್ಯೇನಂ ನಾಶಕ್ತ್ವಾನ್ನಾಶ ಇತ್ಯಪಿ ।।**
**ಸರ್ವಸ್ಯ ತದಧೀನತ್ವಾತ್ ತತ್ತಚ್ಛಬ್ದಾಭಿಧೇಯತಾ ।**
**ಅನ್ಯೇಷಾಂ ವ್ಯವಹಾರಾರ್ಥಮಿಷ್ಯತೇ ವ್ಯವಹರ್ತೃಭಿಃ ।। (ಇತಿಮಹಾಕೌರ್ಮೇ)**

ಶೂನ್ಯ ಮೊದಲಾದ ಶಬ್ದಗಳ ನಿಷ್ಪತ್ತಿ ಪ್ರಕಾರವು ಹೀಗಿದೆ :-

ಶೂನ್ಯಃ = ಶಂ ಶಬ್ದವೇ ಉಪಪದವಾಗಿ ಉಳ್ಳ, ಊನ = ಪರಿಹಾಣೇ ಎಂಬ ಧಾತುವಿನ ಮುಂದೆ ಕರ್ತರಿ "ಯತ್" ಎಂಬ ಪ್ರತ್ಯಯವು ಬಂದು ಶಂ ಶಬ್ದದಲ್ಲಿನ ಟಿಲೋಪವಾಗಿ = ಶೂನ್ಯ ಎಂಬ ಪದವು ನಿಷ್ಪನ್ನವಾಗಿದೆ.

ಶಂ + ಊನ + ಯತ್ = ಶ್ + ಊನ್ + ಯ = ಶೂನ್ಯ.

ತುಚ್ಛ = ತುದ ವ್ಯಥನೇ ಎಂಬ ಧಾತುವಿನ ಮುಂದೆ ಕರ್ತರಿ ಕ್ವಿಪ್ ಪ್ರತ್ಯಯವು ಬರಲಾಗಿ ಕ್ವಿಪ್ ಪ್ರತ್ಯಯಕ್ಕೆ ಪೂರ್ತಿಲೋಪವು ಬಂದು = ತುತ್ ಎಂದಾಗಿದೆ.

ಛದ ಧಾತುವಿಗೆ ಡಪ್ರತ್ಯಯವು ಬಂದು ಛ ಎಂದಾಗಿದೆ.

ತುಚ್ಛಾಸೌ + ಛಶ್ಚ ಎಂದು ವಿಗ್ರಹ ಮಾಡಲಾಗಿ = "ತುಚ್ಛ" ಎಂಬ ಪದವು ನಿಷ್ಪನ್ನವಾಗಿದೆ.

ಅಭಾವ = ಉತ್ಪತ್ತ್ಯರ್ಥಕವಾದ ಭೂ ಣಿಜಂತ ಧಾತುವಿನ ಮುಂದೆ ಎಂಬ ಕರ್ಮಣಿ ಘಞ್ ಪ್ರತ್ಯಯವು ಬಂದು ನಿಷ್ಪನ್ನವಾದ ರೂಪವು = ಭಾವ್ಯ ಎಂದಾಗಿದೆ. ಭಾವ = ಉತ್ಪಾದ್ಯ ಎಂದರ್ಥ. ಆಮೇಲೆ ನ ಭಾವ ಎಂದು ನಞ್ ಸಮಾಸ ಮಾಡಿದಾಗ ಅಭಾವ ಎಂದು ರೂಪವು ನಿಷ್ಪನ್ನವಾಗಿದೆ.

ನಾಶ = ಅಶಭೋಜನೆ ಎಂಬ ಧಾತುವಿನ ಮುಂದೆ ಕರ್ಮಣಿ ಘಞ್ ಪ್ರತ್ಯಯವು ಬಂದರೆ = ಆಶ ಎಂದಾಗುತ್ತದೆ. ಅದರ ಅರ್ಥವು ಭಕ್ಷ್ಯ, ಆ ಮೇಲೆ ನಶಬ್ದದಿಂದ ಸಮಾಸ ಮಾಡಿದಾಗ ನಾಶ ಎಂಬ ಪದವು ನಿಷ್ಪನ್ನವಾಗಿದೆ.

**ಶೂನ್ಯಃ = ಶಮೂನಂ ಕುರುತೇ ವಿಷ್ಣುಃ ಅದೃಶ್ಯಃ ಸನ್ ಪರಃ ಸ್ವಯಮ್ ।**
**ತಸ್ಮಾದ್ ಶೂನ್ಯ ಇತಿಪ್ರೋಕ್ತಃ (ಮಹಾಕೂರ್ಮ ಪುರಾಣವು)**

**ಅರ್ಥ ವಿವರಣೆ** :- ಯಾವ ಕಾರಣದಿಂದ ವಿಷ್ಣು, ಪರಃ ಸನ್ನೇವ = ಸರ್ವೋತ್ತಮತ್ವೇನ, ಪೂರ್ಣಸುಖತ್ವೇನ ಚ ಸನ್ನೇವ = ಸರ್ವೋತ್ತಮನಾಗಿಯೂ, ಪೂರ್ಣಸುಖರೂಪನಾಗಿರುವವನೇ, ಶಂ = ಸುಖವನ್ನು = ಇತರರ ಸುಖವನ್ನು, ಸ್ವಯಂ ಊನಂ = ತನ್ನ ಸುಖಕ್ಕಿಂತಲೂ ಅಲ್ಪವಾದುದನ್ನಾಗಿ, (ಕರೋತಿ = ಮಾಡುತ್ತಾನೆಯೋ) ತಸ್ಮಾತ್ = ಆ ಕಾರಣದಿಂದ, ಶೂನ್ಯ ಇತಿಪ್ರೋಕ್ತಃ = ಶೂನ್ಯ ಎಂಬ ಶಬ್ದದಿಂದ ಹೇಳಲ್ಪಡುತ್ತಾನೆ. ಅಸತ್ತಾದ್ದರಿಂದ ಶೂನ್ಯ ಎಂದು ಕರೆಯಲ್ಪಡುವುದಿಲ್ಲ ಎಂದು ಅಭಿಪ್ರಾಯ.

ಅದೃಶ್ಯಃ = ಸ್ವಯಂ ಸನ್ನೇವಾದೃಶ್ಯಃ = ಸನ್ನೇವ = ತಾನು ಇರತಕ್ಕವನಾದಾಗ್ಯೂ, ಸನ್ನಿಹಿತನಾದಾಗ್ಯೂ, ಅದೃಶ್ಯಃ = ಅದೃಶ್ಯನಾಗಿದ್ದಾನೆ. ಕಾಣದವನಾಗಿದ್ದಾನೆ. ಎಲ್ಲಾ ಕಡೆ ಪರಮಾತ್ಮನು ಇದ್ದಾಗ್ಯೂ ಅವನನ್ನು ನಾವು ಇತರ ಪದಾರ್ಥಗಳಂತೆ ಕಾಣಲು ಆಗುವಂತಿಲ್ಲವೆಂದು ಅಭಿಪ್ರಾಯ. ಅದ್ದರಿಂದಲೇ ಅದೃಶ್ಯ ಎಂಬ ಶಬ್ದದಿಂದ ಹೇಳಲ್ಪಡತಕ್ಕವನಾಗಿರುವನು.

ತುಚ್ಛ = (ಯತಃ) ತೋದನಾತ್ = ದುಃಖಯುಕ್ತತ್ವಾತ್ = ದುಃಖಕರ್ತೃತ್ವಾತ್ = ಅವರವರ ಪಾಪಕ್ಕೆ ತಕ್ಕಂತೆ ದುಃಖ ಫಲವನ್ನುಂಟುಮಾಡುವುದರಿಂದ, ತುಚ್ಛ ಎಂಬ ಶಬ್ದಕ್ಕೆ ವಾಚ್ಯನಾಗಿದ್ದಾನೆ. ತೋದನಾತ್ತುತ್, ಛ = ಛನ್ನಃಸನ್ನೇವ, ದುರ್ಜನೈರದೃಶ್ಯಃ ಸನ್ನಪ್ಯಾತ್. ಅತಃ, ತುಚ್ಛ ಉಚ್ಯತೆ = ದುರ್ಜನರಿಗೆ ಕಾಣದವನಾಗಿಯೇ (ಅವರ ಪಾಪಕ್ಕೆ ತಕ್ಕಂತೆ) ದುಃಖವನ್ನು ಕೊಡತಕ್ಕವನಾಗಿರುವುದರಿಂದ "ತುಚ್ಛ" ಎಂಬ ಶಬ್ದದಿಂದ ಹೇಳಲ್ಪಡತಕ್ಕವನಾಗಿರುವನು. ಅಸತ್ತ್ವಾದ್ದರಿಂದ ಅಲ್ಲ ಎಂದು ಅಭಿಪ್ರಾಯ.

ಪ್ರಾಚೀನಟೀಕಾಕಾರರಾದ ಶ್ರೀ ಪದ್ಮನಾಭತೀರ್ಥರ ಸತ್ತರ್ಕ ದೀಪಾವಳಿಯ ಪ್ರಕಾರ ಈ ಮುಂದಿನ ಅರ್ಥವು ನಿರೂಪಿಸಲ್ಪಟ್ಟಿದೆ.

**"ಲೋಕೇ, ಅಭೀಷ್ಟಂ ವಸ್ತು, ನಷ್ಟಂ, ಅದೃಷ್ಟಂ ವಾ ತದ್ವತಃ ತಮೂನಂ ಕುರುತೇ।**
**ತುದತೇ ಚ ತಂ ತಮನುಭವಂತಮ್।**
**ನ ಚ ತದ್ಭಾವಯಿತುಂ ಯೋಗ್ಯಂ ಸುಖಾಯ।**
**ನಾಪಿ ತೇನೋಪಭೋಗ್ಯಮ್।**
**ವಿಷ್ಣುಸ್ತು ನ ನಷ್ಟಃ, ಕಿಂತು ಸ್ವಯಂ ಪರಃ ಸನ್ನೇವ ಸರ್ವದಾ ಸರ್ವತ್ರ**
**ಸರ್ವೋತ್ತಮತ್ವೇನ ಸನ್ನೇವ ದುರ್ಜನಾದೃಶ್ಯ ಏವತತ್, ತಂ, ಊನಂಕರೋತಿ,**
**ತುದತೇಚತಮ್।**
**ಭಾವಯಿತುಂ ಅಯೋಗ್ಯಃ ತೇನಾನುಪಭೋಗ್ಯಶ್ಚ।**
**ಯಥಾ ರಮಾದಿಶಂಕರಾದಿಭಿಂತ್ಸ್ಮೃತಮ್ ।। ಇತಿ ।।**
**ಅಸ್ಮಿನ್ ಪಕ್ಷೇ ಯತಃ, ಭಃ, ನಿತ್ಯಮದೃಶ್ಯ ಏವತುತ್ = ದುಃಖಯತಿ ಅಸ್ಮಾನ್**
**ದುರ್ಜನಾನ್।**
**ಅತೋ ಅದೃಶ್ಯತ್ವೇಽಪಿ ತೋದನಾತ್ ತುಭ್ರ ಉಚ್ಯತೇ, ಇತಿ ।।**
**ಭಕ್ತ್ಯಾರ್ಥಸ್ಯಾದೃಶ್ಯತ್ವಸ್ಯ ವಿಶೇಷಣತಯಾ ಪೂರ್ವಮನ್ವಯಃ।**
**ಪಕ್ಷದ್ವಯೇಽಪಿ ಏಕಾನೇಕಪದತ್ವಂ ಸಮಾನಮ್।**
**ಏಕಪದೇ ತು ತುಭ್ರಾನ್ + ಭಕ್ತೇತಿ ವಿಗ್ರಹಃ।**

**ಅಭಿಪ್ರಾಯ ಸಂಗ್ರಹ** :- ಲೋಕದಲ್ಲಿ ನಮಗೆ ಇಷ್ಟವಾದ ಪದಾರ್ಥವು ನಾಶವಾದರೆ, ಅಥವಾ ಕಳೆದುಹೋಗಿ ಕಾಣದಿದ್ದರೆ, ಅದರಿಂದ ಉಂಟಾಗಲಿದ್ದ ಸುಖದಿಂದ ನಾವು ಶೂನ್ಯರಾಗುತ್ತೇವೆ. ದುಃಖಿತರಾಗುತ್ತೇವೆ. ಅದರಿಂದ ನಮ್ಮ ಮನಸ್ಸಿಗೆ ವ್ಯಥೆಯಾಗುತ್ತದೆ. ಅಯ್ಯೋ ನನ್ನ ಸುಖಕ್ಕೆ ಸಾಧನವಾದ ವಸ್ತುವು ಹೋಯಿತಲ್ಲಾ, ನಾಶವಾಯಿತಲ್ಲಾ ಎಂದು ಪರಿತಪಿಸುತ್ತೇವೆ.

ಪರಮಾತ್ಮನಾದರೋ ಯಾವ ಕಾರಣದಿಂದಲೂ ಯಾವಾಗಲೂ ಯಾವ ದೇಶದಲ್ಲಿಯೂ ನಷ್ಟನಾಗಿಲ್ಲ. ಆದರೆ ಸ್ವಯಂ ದುರ್ಜನರಿಗೆ ಕಾಣದವನಾಗಿಯೇ ಅವರ ಸುಖವನ್ನು ಹ್ರಾಸಗೊಳಿಸುತ್ತಾನೆ. ಮತ್ತು ಅವರನ್ನು ದುಃಖಗೊಳಿಸುತ್ತಾನೆ. ಆದಕಾರಣದಿಂದಲೇ "ತುಭ್ರ" ಎಂಬ ಶಬ್ದದಿಂದ ವಾಚ್ಯನಾಗಿದ್ದಾನೆ.

ಇಲ್ಲಿ ತುಕ್, ಭ ಎಂದೂ, "ತುಭ್ರ" ಎಂದೂ ಎರಡು ಬಗೆಯಾಗಿ, ಭಿನ್ನಪದತ್ವವೂ ಏಕಪದತ್ವವೂ ವಿವಕ್ಷಿತವಾಗಿದೆ.

ಏಕಪದವೆಂಬ ಪಕ್ಷದಲ್ಲಿ ತುಭ್ರಾನ್ + ಭಕ್ತ = ಎಂದು ವಿಗ್ರಹವು. ಭಿನ್ನಪದವೆಂಬ ಪಕ್ಷದಲ್ಲಿ ತುಕ್, ಭ ಎಂದು ಪದದ ವಿಭಾಗವನ್ನು ಮಾಡಬೇಕು.

**ಅಭಾವಃ = ನೈವ ಭಾವಯಿತುಂ ಯೋಗ್ಯಃ ಕೇನಚಿತ್ ಪುರುಷೋತ್ತಮಃ।**
**ಅತೋ, ಅಭಾವಂ ವದಂತ್ಯೇನಂ।। (ಮಹಾಕೂರ್ಮಪುರಾಣ)**

**ಅರ್ಥ** :- ಏಷಃ = ಪುರುಷೋತ್ತಮನಾದ ಶ್ರೀಹರಿಯು, ಕೇನಚಿತ್ = ಯಾರಿಂದಲೂ, ಭಾವಯಿತುಂ = ಉತ್ಪಾದಯಿತುಂ, ಸಾಕಲ್ಯೇನ ಸಾಕಲ್ಯೇನ ಚಿಂತಯಿತುಂ ವಾ, ನ ಯೋಗ್ಯಃ।
ಯತಃ ಏವಂ ಅತಃ ಏನ ಅಧಾವಂ ವದಂತಿ ಕವಯಃ ಇತ್ಯರ್ಥಃ॥

**ಅಭಿಪ್ರಾಯ** :- ಪುರುಷೋತ್ತಮನಾದ ಶ್ರೀಹರಿಗೆ ಜನಕನು ಯಾರೂ ಇರುವುದಿಲ್ಲ. ಅಥವಾ ಶ್ರೀಹರಿಯನ್ನು ಸಮಗ್ರವಾಗಿ ಚಿಂತಿಸಲು ಯಾರಿಂದಲೂ ಸಾಧ್ಯವಿಲ್ಲ. ಶಕ್ಯವಿಲ್ಲ. ಆದುದರಿಂದ ಇವನನ್ನು "ಅಧಾವ" ವೆಂದು ಜ್ಞಾನಿಗಳು ಹೇಳುತ್ತಾರೆ.

ನಾಶಃ = "ನಾಶ್ಯತ್ವಾತ್ ನಾಶ ಇತ್ಯಪಿ (ಮಹಾಕೂರ್ಮೇ.)

**ಕಸ್ಮಾಚ್ಚಿದಭಕ್ಷ್ಯತ್ವಾತ್ ನಾಶ ಇತ್ಯಭಿಧೀಯತೇ ಇತಿ ತಾ ವದಂತಿಕವಯಃ।**
**ಅಶಭೋಜನೇ, ಇತ್ಯತಃ ಅಶ್ಯಮಿತಿರೂಪಂ, ತಸ್ಯಭಾವಃ ಅಶ್ಯತ್ವಂ ತಸ್ಯ ನಞಾ ಸಂಬಂಧೇ ನಾಶ್ಯತ್ವಾತ್ = ಅಭಕ್ಷ್ಯತ್ವಾದಿತ್ಯರ್ಥಃ।**

ಯಾರಿಂದಲೂ ಪರಮಾತ್ಮನು ಭಕ್ಷಿಸಲ್ಪಡುವವನಲ್ಲ (ಸಂಹರಿಸಲ್ಪಡುವವನಲ್ಲ) ಆದ್ದರಿಂದ "ನಾಶ" ಎಂಬ ಶಬ್ದದಿಂದ ಜ್ಞಾನಿಗಳು ಕರೆಯುತ್ತಾರೆ.

ಶ್ರುತಿ ರೀತ್ಯಾ ಪ್ರಕಾರವಾಗಿ ನಾಕಂ ಎಂಬಲ್ಲಿ ಕಂ = ಸುಖಂ, ನೇತಿ ಅಕಂ = ದುಃಖಂ, ತನ್ನೇತಿನಾಕಂ = ಎಂಬಂತೆ ಕಂ, ಅಕಂ - ನಾಕಂ = ಪರಮಸುಖಂ ಯಾಪಯತೀತಿ ನಾಕಃ = ಪರಮಸುಖವಾದ ಮೋಕ್ಷಜನಕ ಎಂಬರ್ಥವು.

ಅನಂತ ಕಲ್ಯಾಣಗುಣ ಪರಿಪೂರ್ಣನೂ, ಸಕಲದೋಷರಹಿತನೂ, ಸಕಲಚೇತನ ಮತ್ತು ಅಚೇತನಾತ್ಮಕವಾದ, ತನಗಿಂತಲೂ ಅತ್ಯಂತ ಭಿನ್ನವಾದ, ಈ ಪ್ರತ್ಯಕ್ಷಾದಿಪ್ರಮಾಣಗಳಿಂದ ಯಥಾರ್ಥವಾಗಿ ಯಥಾಯೋಗ್ಯವಾಗಿ ತಿಳಿಯಲ್ಪಡುತ್ತಿರುವ ಪ್ರಪಂಚಕ್ಕೆ ಯಥಾಯೋಗ್ಯವಾಗಿ ಉತ್ಪತ್ತಿಗೂ, ಸ್ಥಿತಿಗೂ, ಯಥಾಯೋಗ್ಯವಾದ ವಿನಾಶಕ್ಕೂ ನಿಯಮನಕ್ಕೂ, ಚೇತನಾತ್ಮಕವಾದ ಪ್ರಪಂಚದ ಜ್ಞಾನವೇನು ಅನಾದಿಯಾದ ಭಾವರೂಪವಾದ ಅಜ್ಞಾನವೇನು, ಬಂಧವೇನು, ಯಥಾಯೋಗ್ಯವಾದ ಮೋಕ್ಷವೇನು ಇವುಗಳಿಗೆಲ್ಲಾ ನಿಮಿತ್ತಕಾರಣನೂ, ಸರ್ವತಂತ್ರಸ್ವತಂತ್ರನೂ, ಮುಕ್ತವರ್ಗಕ್ಕೂ, ಅಮುಕ್ತಚೇತನಸಮುದಾಯಕ್ಕು ನಿಯಾಮಕನೂ, ಸಕಲದೇವತಾವರ್ಗದಿಂದ ಸ್ತೋತ್ರ ಮಾಡಲ್ಪಡತಕ್ಕವನೂ, ಸಕಲ ಜಗಜ್ಜನನಿಯಾದ ಶ್ರೀ ಮಹಾಲಕ್ಷ್ಮೀದೇವಿಗೂ ಕೂಡ ಸಾಕಲ್ಯೇನ (ಸಮಗ್ರವಾಗಿ) ಅಚಿಂತ್ಯವಾದ ಅಪಾರವಾದ ಮಹಿಮಾತಿಶಯವುಳ್ಳವನೂ, ಸ್ವರಮಣನೂ, ಸ್ವರ, ವರ್ಣ ಪದವಾಕ್ಯರೂಪವಾದ ವೇದಗಳೇನು ಮತ್ತು ಘೋಷಗಳೇನು ಇವುಗಳಿಂದ ತಿಳಿಯಲ್ಪಡತಕ್ಕವನೂ, ಸಕಲ ವೇದಾಕ್ಷರಗಳಿಂದಲೂ ತಿಳಿಯಲ್ಪಡತಕ್ಕವನೂ, ಪರಮಮುಖ್ಯವೃತ್ತಿಗಳಿಂದ ಕರೆಯಲ್ಪಡತಕ್ಕ ಮಹಾಯೋಗ ಮತ್ತು ಮಹಾಯೋಗ ವಿದ್ವದ್ರೂಢಿ ವೃತ್ತಿಗಳಿಂದ ಆಯಾ ವೈದಿಕ ಶಬ್ದಗಳಿಂದ ಮುಖ್ಯವಾಗಿ ತಿಳಿಯಲ್ಪಡತಕ್ಕವನೂ, ಶಿವ, ಬ್ರಹ್ಮ ಮೊದಲಾದ ದೇವತಾವಾಚಕಶಬ್ದಗಳಿಂದಲೂ ಮುಖ್ಯವಾಗಿ ಪ್ರತಿಪಾದ್ಯನೂ, ಆಯಾ ದೇವತೆಗಳಲ್ಲಿದ್ದು ಅವರಿಂದ ಆಯಾ ಕಾರ್ಯಗಳನ್ನು ಮಾಡಿಸತಕ್ಕವನೂ, ತನಗಿಂತಲೂ ಭಿನ್ನವಾದ ಸಕಲಚೇತನಾ

(ಪದಾರ್ಥಗಳ) ಸ್ವರೂಪಸತ್ತಾ, ಪ್ರಮಿತಿಸತ್ತಾ, ಪ್ರವೃತ್ತಿಸತ್ತೆಗಳೆಂಬ ತ್ರಿವಿಧ (ಮೂರು ಬಗೆಯಾದ) ಸತ್ತೆಗಳಿಗೂ ನಿಯಾಮಕನೂ, ಒಬ್ಬನೇ ಆದಾಗ್ಯೂ ವೈಭವದಿಂದ ಬಹುರೂಪಗಳುಳ್ಳವನೂ, ದೂರದಲ್ಲಿದ್ದು ಸಕಲವನ್ನೂ ನಿಯಂತ್ರಿಸ ತಕ್ಕ ಸಾಮರ್ಥ್ಯವುಳ್ಳವನಾದಾಗ್ಯೂ ಸಹ ವೈಭವದಿಂದ ಕೇವಲ ಲೀಲಾಮಾತ್ರದಿಂದ ಸರ್ವತ್ರ ತಾನಿದ್ದು ಆಯಾ ಪದಾರ್ಥಗಳ ಶಕ್ತಿಗಳಿಗೆ ಪ್ರಬೋಧಕನೂ, ಎತ್ತಲ್ಪಟ್ಟ ಅತಿತೀಕ್ಷ್ಣವಾದ ವಜ್ರಾಯುಧದಂತೆ ಭಯಕಂಪಾದಿಜನಕನಾಗಿರು ವುದರಿಂದ ಇಂದ್ರ ಚಂದ್ರ, ಸೂರ್ಯಾದಿ ದೇವತೆಗಳಿಂದ ಆಯಾ ಕಾರ್ಯಗಳನ್ನು ಚಾಚೂ ತಪ್ಪದಂತೆ ಕ್ರಮವಾಗಿ ಮಾಡಿಸ ತಕ್ಕವನೂ, ಜಾಗ್ರದವಸ್ಥೆ, ಸ್ವಪ್ನಾವಸ್ಥೆ, ಸುಷುಪ್ತಿಗಳೆಂಬ ನಿತ್ಯವೂ ಜೀವರಿಂದ ಅನುಭವಿಸಲ್ಪಡತಕ್ಕ ಅವಸ್ಥೆಗಳಿಗೆ ನಿಯಾಮಕ ನೂ, ಸ್ವಪ್ನಕಾಲದಲ್ಲಿ ಜೀವರ ಅನಾದಿಯಾದ ಮನೋಗತವಾದ ಸಂಸ್ಕಾರಗಳಿಂದ ವಿಧವಿಧವಾದ ಸ್ವಾಪ್ನಪದಾರ್ಥಗಳನ್ನು (ವಾಸನಾಮಯವಾದ ಪದಾರ್ಥಗಳನ್ನು) ತನ್ನ ಇಚ್ಛೆಯಂತೆ ಸೃಷ್ಟಿಮಾಡತಕ್ಕವನೂ, ತನ್ನ ಅವಯವಗಳೇನು, ಗುಣಗಳೇನು, ತನ್ನ ಸೃಷ್ಟ್ಯಾದಿ ಕ್ರಿಯೆಗಳೇನು ಇವೆಲ್ಲವುಗಳಿಂದಲೂ ಸವಿಶೇಷಾತ್ಯಂತಾಭಿನ್ನನಾಗಿಯೂ,

ಜೀವರ ಚಕ್ಷುರಾದಿ ಸಕಲೇಂದ್ರಿಯಗಳಲ್ಲಿ ತಾನಿದ್ದು ಜೀವರಿಂದ ಅಭೋಗ್ಯವಾದ ಸರ್ವಸಾರಭೋಗಗಳುಳ್ಳ ವನೂ, ಸಕಲಜೀವರ ಸ್ವರೂಪದೇಹದಲ್ಲಿದ್ದು ನಿಯಾಮಕನೂ, ಪ್ರಾಕೃತಗಳಾದ ಶುಕ್ಲಾದಿ ವರ್ಣಗಳಿಂದ ರಹಿತನೂ, ಪ್ರಾಕೃತ ಗಳಾದ ಜ್ಞಾನೇಂದ್ರಿಯಗಳಿಂದಲೂ, ಕರ್ಮೇಂದ್ರಿಯಗಳಿಂದಲೂ ರಹಿತನೂ, ಪೃಥಿವೀ, ಸ್ವರ್ಗ ಮೊದಲಾದ ಸಕಲ ಲೋಕ ಗಳಿಗೂ ಆಧಾರನೂ ಸರ್ವದಾ ಪರಿಪೂರ್ಣನಾದುದರಿಂದಲೇ ಭೂಮಾಶಬ್ದವಾಚ್ಯನೂ, ಅನಿತ್ಯತ್ವ, ದೇಹಹಾನಿ, ದುಃಖ ಪ್ರಾಪ್ತಿ, ಅಪೂರ್ಣತಾ ಎಂಬ ನಾಲ್ಕು ಬಗೆಗಳಾದ ನಾಶಗಳಿಲ್ಲದವನಾದುದರಿಂದ ಮುಖ್ಯವಾಗಿ ಅಕ್ಷರಶಬ್ದವಾಚ್ಯನೂ, ಜೀವರ ಸ್ವರೂಪ ಹೃದಯ ಕಮಲದಲ್ಲಿನ ಆಕಾಶದಲ್ಲಿ ನೆಲೆಯಾಗಿ ಬಿಂಬರೂಪಿಯಾಗಿರತಕ್ಕವನೂ, ಪ್ರಾಕೃತಗಳಾದ ಇತರ ಪದಾರ್ಥಗಳಲ್ಲಿ ಕಂಡುಬರುವ ಸ್ಥೌಲ್ಯಾದಿಗಳಿಂದ ರಹಿತನೂ ಹಸಿವು ಬಾಯಾರಿಕೆ ಮೊದಲಾದವುಗಳಿಂದ ಉಂಟಾಗತಕ್ಕ ಪೀಡೆಗಳಿಂದ ರಹಿತನೂ, ಶೋಕ, ಮೋಹ, ಜರಾ, ಮೃತ್ಯು ಮೊದಲಾದವುಗಳಿಲ್ಲದವನೂ, ಸರ್ವಕ್ಕೂ ಅಧಿಪತಿಯಾದ ವನೂ, ಅಧೃಶ್ಯತ್ವಾದಿಗುಣಗಳುಳ್ಳವನೂ, ಜಗತ್ತಿನಲ್ಲಿ ಪ್ರಕಾಶಕಗಳಾದ ಸೂರ್ಯಚಂದ್ರಾದಿಗಳಿಗೆಲ್ಲಾ ಪ್ರಕಾಶಕಸಾಮರ್ಥ್ಯ ಪ್ರದನೂ, ಸೂರ್ಯಾದಿಗಳಲ್ಲಿರುವ ತಾಪನ, ಪಾಚನ, ಶೋಷಣ, ಪ್ರಕಾಶನ ಮೊದಲಾದ ಶಕ್ತಿಗಳೆಲ್ಲಕ್ಕೂ ಅಲ್ಲಿ ತಾನೇ ಸ್ವತಃ ಇದ್ದು ನಿಯಾಮಕನೂ, ಜೀವರ ದೇಹಗಳಲ್ಲಿ ಪ್ರಾಣ, ಅಪಾನಾದಿ ವ್ಯವಸ್ಥಾಪಕನೂ, ದೇಹದ ಮಧ್ಯದಲ್ಲಿದ್ದು ಪ್ರಾಣ ಮತ್ತು ಅಪಾನಾದಿ ವ್ಯವಸ್ಥಾಪಕನಾಗಿರುವುದರಿಂದ ದಿವ್ಯನಿರತಿಶಯ ಸೌಂದರ್ಯಸಂಪನ್ನನಾಗಿರುವುದರಿಂದ ಸರ್ವ ದೇವೋಪಾಸ್ಯ ನಾಗಿ ವಾಮನಶಬ್ದದಿಂದ ಕರೆಸಿಕೊಳ್ಳಲ್ಪಡತಕ್ಕವನೂ, ಇಂದ್ರಿಯಗಳಲ್ಲಿಯೂ ಹೃದಯಾಂತರಾಳದಲ್ಲಿಯೂ ನಿಯಾಮಕ ನಾಗಿರುವವನಾಗಿ, ಜ್ಯೋತಿಃ, ಆತ್ಮಾ, ಬ್ರಹ್ಮ, ಬಲ, ಯಶ, ಆನಂದ ಇತ್ಯಾದಿ ಶಬ್ದಗಳಿಂದ ಮುಖ್ಯವಾಗಿ ಹೇಳಲ್ಪಡತಕ್ಕ ವನೂ, ನಾಮಾತ್ಮಕ ಮತ್ತು ರೂಪಾತ್ಮಕ ಪ್ರಪಂಚಕ್ಕೆ ನಿರ್ವಾಹಕನಾಗಿ ಆಕಾಶಶಬ್ದವಾಚ್ಯನೂ, ವೈದಿಕಗಳಾದ ಸರ್ವಶಬ್ದ ಗಳಿಂದಲೂ ಪರಮಮುಖ್ಯ ವೃತ್ತಿಯಿಂದ ವಾಚ್ಯನಾಗಿದ್ದಾಗ್ಯೂ ಸಮಗ್ರವಾಗಿ ಸಾಕಲ್ಯೇನ ಯಾವ ಶಬ್ದದಿಂದಲೂ ವಾಚ್ಯ ನಲ್ಲದುದರಿಂದ ಅನಾಮನೆಂದೂ, ಪ್ರಾಕೃತವಾದ ಭೌತಿಕವಾದ ದೇಹರಹಿತನಾದುದರಿಂದ ಅರೂಪನೆಂದೂ ಕರೆಯಲ್ಪ ಡ ತಕ್ಕವನೂ, ಕರ್ಮಬಂಧರಹಿತನಾಗಿರುವುದರಿಂದ ಮುಖ್ಯವಾಗಿ ಸ್ವಪ್ನಾದಿಗಳಿಗೆ ದ್ರಷ್ಟವಾಗಿರುವವನೂ, ಸತ್ಯಮಹಿಮನಾಗಿ

ಬ್ರಾಹ್ಮಣಶಬ್ದವಾಚ್ಯನಾಗಿರುವವನೂ, ಮುಕ್ತವರ್ಗಕ್ಕೂ ಅಮುಕ್ತವರ್ಗಕ್ಕೂ, ಅಧಿಪನೂ, ಲೋಕದಲ್ಲಿ ಶರೀರವು ಹೇಗೆ ಪುರುಷಾಯತ್ತವಾಗಿರುವುದೋ ಅದರಂತೆ ಪ್ರಧಾನಾದಿಗಳೆಲ್ಲವೂ ಪರಮಾತ್ಮಾಧೀನವಾಗಿರುವುದರಿಂದ ಅವು ಗಳಲ್ಲಿದ್ದು ಅವುಗಳಿಗೆ ನಿಯಾಮಕನಾಗಿರುವುದರಿಂದ ಮುಖ್ಯವಾಗಿ ಅವ್ಯಕ್ತಾದಿ ಶಬ್ದಗಳಿಂದ ವಾಚ್ಯನಾಗಿರುವವನೂ,

ಸೂಕ್ಷ್ಮವಾದ ಅವ್ಯಕ್ತಾದಿಗಳೆಲ್ಲಕ್ಕಿಂತಲೂ (ಪ್ರಧಾನಾದಿಗಳೆಲ್ಲಕ್ಕಿಂತಲೂ) ಅತ್ಯಂತ ಸೂಕ್ಷ್ಮನಾಗಿರುವುದರಿಂದ ಮುಖ್ಯ ವಾಗಿ ಅವ್ಯಕ್ತಾದಿಶಬ್ದಗಳಿಂದ ಹೇಳಲ್ಪಡತಕ್ಕವನೂ, ಶಬ್ದವೃತ್ತಿಗೆ ಮುಖ್ಯ ಕಾರಣವಾದ ಸ್ವಾತಂತ್ರ್ಯಗುಣಸಂಪನ್ನನಾಗಿರು ವುದರಿಂದ ದುಃಖಿ ಬದ್ಧ, ಅವರ, ಇತ್ಯಾದಿ ಶಬ್ದಗಳಿಂದಲೂ ಸಹ ವಾಚ್ಯನಾಗಿರುವವನೂ, ದುಃಖಕ್ಕೆ ಸ್ವಾಮಿಯೂ, ಬಂಧನಕ್ಕೆ ಸ್ವಾಮಿಯೂ, ಅನ್ಯಗತವಾದ ಅವರತ್ವಾದಿಗಳಿಗೆ ನಿಯಾಮಕನೂ, ಆಗಿರುವುದರಿಂದ ಆ ಶಬ್ದಗಳಿಂದ ಹೇಳಲ್ಪಡ ತಕ್ಕ ದೋಷಗಳು ಇತರರಿಗೆ ನೀಚೋಚ್ಚತಾ ಸಂಪಾದಕವಾದಾಗ್ಯೂ, ಪರಮಾತ್ಮನಿಗೆ ಮಾತ್ರ ತನ್ನಿಯಾಮಕತ್ವರೂಪವಾದ ಸ್ವಾಮಿತ್ವದಿಂದ ಮಾಹಾತ್ಮ್ಯಸಂಪಾದಕವೇ ಆಗಿರುವ ಕಾರಣ ದುಃಖಿಬದ್ಧಾದಿ ಸರ್ವಶಬ್ದವಾಚ್ಯನೆಂದೆನಿಸುವವನೂ, ಕರ್ಮ ಕಾಂಡವೆಂದೆನಿಸಿದ ಬ್ರಾಹ್ಮಣಭಾಗ ರೂಪವಾದ ವೇದದಲ್ಲಿ ಕಂಡುಬರುವ ಫಲವಾಚಕಗಳಾದ "ವಸನ್ತೇ ವಸನ್ತೇ" ಇತ್ಯಾದಿ ಶಬ್ದಗಳಿಂದಲೂ, ಜ್ಯೋತಿಷಾ ಯಜೇತ ಇತ್ಯಾದಿ ಕರ್ಮವಾಚಕಗಳೇನು ಕ್ರಿಯಾವಾಚಕಗಳೇನು ಇವೆಲ್ಲಾ ಶಬ್ದಗಳಿಂದಲೂ ಪರಮಮುಖ್ಯ ವೃತ್ತಿಯಿಂದ ಪ್ರತಿಪಾದಿಸಲ್ಪಡತಕ್ಕವನೂ, (ಇವುಗಳ ವಿವರಣೆಯನ್ನು ಹಿಂದೆಯೇ ತಿಳಿಸಲಾಗಿದೆ.)

ಸ್ವಗತಭೇದರಹಿತನಾಗಿದ್ದಾಗ್ಯೂ ಒಬ್ಬನೇ ಆದಾಗ್ಯೂ ಪ್ರತಿಶರೀರದಲ್ಲೂ ನಾನಾರೂಪನಾಗಿರುವುದರಿಂದ, ಪ್ರತಿ ಶರೀರದಲ್ಲೂ ಇರತಕ್ಕ, ಪ್ರಾಣ, ಚಕ್ಷುಸ್ಸು, ಅನ್ನ, ಮನಸ್ಸು, ಶ್ರೋತ್ರ ಈ ಪಂಚಕಗಳಲ್ಲಿ ತಾನಿದ್ದು ಅವುಗಳಿಗೆ ಪ್ರೇರಕನಾಗಿ, ತನ್ನಾಮಕನಾಗಿ ಮುಖ್ಯವಾಗಿ ಆಯಾ ಶಬ್ದಗಳಿಂದ ವಾಚ್ಯನಾಗಿಯೂ, ಬಹುತ್ವಸಂಖ್ಯಾವಿಶಿಷ್ಟ ವಸ್ತುವಾಚಿಗಳಾದ ಶಬ್ದ ವಾಚ್ಯನಾಗಿಯೂ, ಆಧಾರಾಧೇಯವಾಚಿಗಳಾದ ಶಬ್ದಗಳಿಂದ ವಾಚ್ಯನಾಗಿಯೂ, "ಆತ್ಮನ ಆಕಾಶಃ ಸಂಭೂತಃ, ಆಕಾಶಾ ದ್ವಾಯುಃ" ಇತ್ಯಾದಿಗಳಲ್ಲಿ ಅನ್ಯಕಾರ್ಯತ್ವವೂ ಇತರ ಕಾರಣತ್ವವನ್ನೂ ಉಳ್ಳವನಾಗಿರತಕ್ಕ ವಿಷ್ಣುವೇನೇ ನಿಯಾಮಕನಾಗಿ ಆಯಾ ಶಬ್ದವಾಚ್ಯನಾಗಿರುವುದರಿಂದ, ಸರ್ವಶಬ್ದಗಳೂ ಪರಮಮುಖ್ಯ ವೃತ್ತಿಯಿಂದ ಪರಮಾತ್ಮವಾಚಕಗಳಾಗಿದ್ದಾಗ್ಯೂ, ಅಂತಹ ಪರಮಾತ್ಮನ ಸಂಬಂಧವು ಇತರರಲ್ಲಿರುವ ಪ್ರಯುಕ್ತ ಅವುಗಳನ್ನು ಸಮಾಕರ್ಷಿಸಿ, ಅವುಗಳನ್ನು ಸಂಗ್ರಹಿಸಿ ಅವು ಗಳಿಗೆ ಬೇರೇಬೇರೆ ರೂಪತ್ವೇನ ಸಂಕೇತವನ್ನು ಮಾಡಿರುವುದರಿಂದ ಪರಮಮುಖ್ಯವೃತ್ತಿಗಿಂತಲೂ ಭಿನ್ನವಾದ ಕೇವಲ ಮುಖ್ಯ ವೃತ್ತಿಯಿಂದ ಕೂಡಿದುದನ್ನಾಗಿ ಅಂಗೀಕರಿಸುವುದರಿಂದ ಆಯಾ ಶಬ್ದಗಳಿಗೆ ಜಗದ್ವಾಚಕತ್ವ ವಿಷಯದಲ್ಲಿ ಬಾಧಕವಿಲ್ಲದಿ ರುವ ಪ್ರಯುಕ್ತ ಪರಮಮುಖ್ಯವೃತ್ತಿಯಿಂದ ಸರ್ವಶಬ್ದವಾಚ್ಯನಾಗಿಯೂ, ಹರಿಯತಕ್ಕ ಎಲ್ಲಾ ನದಿಗಳೂ ಸಮುದ್ರವನ್ನೇ ಸೇರುವಂತೆ ಸರ್ವನಾಮಗಳೂ ಪರಮಾತ್ಮನನ್ನೇ ತಿಳಿಸುವುದರಿಂದ ಪ್ರಕೃತಿಃ, ಸ್ತ್ರೀ, ಜಾತಿಃ, ಅಭಿಧಾ, ಪ್ರಜ್ಞಾ ಇತ್ಯಾದಿ ಸಕಲ ಸ್ತ್ರೀಲಿಂಗ ಶಬ್ದವಾಚ್ಯನಾಗಿಯೂ, ಸರ್ವೋತ್ತಮನಾದ ಪೂರ್ಣಸುಖರೂಪನಾದ ಪರಮಾತ್ಮನು ಸ್ವತಃ ಪೂರ್ಣ ಸುಖರೂಪ ನಾಗಿದ್ದಾಗ್ಯೂ ಇತರರ ಸುಖವನ್ನು ತನ್ನ ಸುಖಕ್ಕಿಂತಲೂ ಅಲ್ಪವನ್ನಾಗಿ ಮಾಡುವವನಾದುದರಿಂದ, ಶೂನ್ಯಶಬ್ದದಿಂದ ವಾಚ್ಯನಾಗಿಯೂ, ದುಃಖಸ್ವರೂಪರಾಗಿರುವ ತಾಮಸ ಜೀವರ ಸ್ವರೂಪಕ್ಕೆ ತಕ್ಕಂತೆ ದುಃಖದನಾಗಿಯೂ ಮತ್ತು ದುರ್ಜನರಿಗೆ ಅದೃಶ್ಯನಾಗಿರುವುದರಿಂದ ತುಚ್ಛ ಎಂಬ ಶಬ್ದದಿಂದ ವಾಚ್ಯನಾಗಿಯೂ, ಸಾಕಲ್ಯೇನ, ಯಾರಿಂದಲೂ ಚಿಂತಿ

ಸಲ್ಲಿಸಲು ಅಶಕ್ಯನಾಗಿರುವುದರಿಂದ ಅಭಾವ ಎಂಬ ಶಬ್ದದಿಂದ ವಾಚ್ಯನಾಗಿಯೂ, ಯಾರಿಂದಲೂ ಭಕ್ಷ್ಯನಲ್ಲದುದರಿಂದ (ನ + ಅಶ್ನಾತ್) ನಾಶ ಎಂಬ ಶಬ್ದದಿಂದ ಹೇಳಲ್ಪಡತಕ್ಕವನಾಗಿಯೂ, (ನಾಶ ಎಂಬ ಶಬ್ದದಂತೆ ನಾಶಂ = ಪರಮಸುಖಂ ಯಾಪಯತೀತಿ ನಾಶಃ) ಒಟ್ಟಿನಲ್ಲಿ ಸರ್ವವೂ ಅವನ ಅಧೀನವಾಗಿರುವುದರಿಂದ, ಭಗವಂತನೇ ಎಲ್ಲಕ್ಕು ಸ್ವಾಮಿಯಾಗಿರು ವುದರಿಂದ ಸರ್ವಶಬ್ದವಾಚ್ಯತ್ವವು ಪರಮಾತ್ಮನಿಗೆ ಯುಕ್ತವೇ ಆಗಿದೆ.

ಈ ರೀತಿ ಬ್ರಹ್ಮಮೀಮಾಂಸಾ ಶಾಸ್ತ್ರದ ಮೊದಲನೆಯ ಅಧ್ಯಾಯದಲ್ಲಿ ವೈದಿಕಗಳಾದ ಅನ್ಯತ್ರ ಪ್ರಸಿದ್ಧಗಳಾದ ನಾಮಾತ್ಮಕಗಳಾದ ಮತ್ತು ಲಿಂಗಾತ್ಮಕಗಳಾದ ಶಬ್ದಗಳಿಗೂ, ಉಭಯತ್ರ ಪ್ರಸಿದ್ಧಗಳಾದ ನಾಮಾತ್ಮಕ ಮತ್ತು ಲಿಂಗಾತ್ಮಕ ಶಬ್ದಗಳಿಗೂ, ಅನ್ಯತ್ರೈವ ಪ್ರಸಿದ್ಧಗಳಾದ ನಾಮಲಿಂಗಾತ್ಮಕಗಳಾದ ಶಬ್ದಗಳಿಗೂ ಪರಮಾತ್ಮನಲ್ಲಿ ಸಮನ್ವಯವನ್ನು ಪ್ರತಿಪಾದಿಸಿರುವುದರಿಂದ ಪರಮಾತ್ಮನಿಗೆ ಅನಂತಕಲ್ಯಾಣಗುಣಪರಿಪೂರ್ಣತ್ವವು ಪ್ರಮಾಣ ಪ್ರಸಿದ್ಧವಾಗಿದೆ.

ಇಂತಹ ಸರ್ವೋತ್ತಮನಾದ ಪರಮಾತ್ಮ ತತ್ತ್ವವಿಷಯದಲ್ಲಿನ ಗುಣಪರಿಪೂರ್ಣತ್ವದಲ್ಲೂ ನಿರ್ದೋಷತ್ವದ ವಿಷಯದಲ್ಲಿಯೂ ಸಹ ಆಪಾತತಃ ತೋರತಕ್ಕ ವಿರೋಧಗಳಿಗೆಲ್ಲಾ ಸಿದ್ಧಾಂತರೀತ್ಯಾ ತಕ್ಕ ಸಮಾಧಾನವನ್ನು ಎರಡನೇ ಅಧ್ಯಾಯವಾದ ಅವಿರೋಧಾಧ್ಯಾಯದಲ್ಲಿ ಬ್ರಹ್ಮಮೀಮಾಂಸಾಶಾಸ್ತ್ರಕಾರರು ಹೇಳಿ, ಪರಮಾತ್ಮನಿಗೆ ಸಕಲದೋಷ ದೂರತ್ವವನ್ನು ಸಾಧಿಸಿರುವರು. ಅಂತಹ ಆಪಾತತಃ ತೋರತಕ್ಕ ಶಂಕೆಗಳಾವುವು ಅವುಗಳಿಗೆ ಸಮಾಧಾನಗಳೇನೆಂಬುದನ್ನು ಇನ್ನು ಮುಂದೆ ಸ್ಥೂಲವಾಗಿ ತೋರಿಸುತ್ತೇವೆ.

ಪ್ರಭುವಾದ ವಿಷ್ಣುವು ತಾನು ದೂರದಲ್ಲಿದ್ದುಕೊಂಡೇ ಆಯಾ ಪದಾರ್ಥಗಳಲ್ಲಿನ ಶಕ್ತಿಯ ಪ್ರಬೋಧನೆಯಲ್ಲಿ ಅತ್ಯಂತ ಶಕ್ತನೇ ಆಗಿದ್ದಾನೆ. ಆದಾಗ್ಯೂ ಕೇವಲ ಲೀಲಾಮಾತ್ರದಿಂದ ಅಲ್ಲಲ್ಲಿ ತಾನು ಸ್ವತಃ ಇರುವವನಾಗಿ ಆಯಾ ಪದಾರ್ಥಗಳ ಶಕ್ತಿಗಳಿಗೆ ಪ್ರಬೋಧಕನಾಗಿರುತ್ತಾನೆಂಬ ವಿಶೇಷಾಂಶವನ್ನು ತಿಳಿಸುವುದಕ್ಕಾಗಿ ಪರಮಾತ್ಮನಿಗೆ ಸರ್ವಗತತ್ವವೆಂಬ ಲಿಂಗಾತ್ಮಕವಾದ ಧರ್ಮವು ವೇದದಲ್ಲಿ ಉಕ್ತವಾಗಿದೆ.

ಈ ವೇದವಾಕ್ಯವು ಈ ರೀತಿ ಇದೆ.

ಐತರೇಯೋಪನಿಷತ್ತಿನಲ್ಲಿ "ಏತಂ ಹ್ಯೇವ ಬಹ್ವೃಚಾ ಮಹತ್ಯುಕ್ಥೇ ಮೀಮಾಂಸನ್ತೇ", "ಏತಮಗ್ನಾವಧ್ವರ್ಯವಃ, ಏತಂ ಮಹಾವ್ರತೇ ಛಂದೋಗಾಃ, ಏತಮಸ್ಯಾಂ, ಏತಂ ದಿವಿ, ಏತಂ ವಾಯೌ, ಏತಮಾಕಾಶೇ, ಏತಮಪ್ಸು, ಏತಮೋಷಧೀಷು, ಏತಂ ವನಸ್ಪತಿಷು, ಏತಂ ಚಂದ್ರಮಸಿ, ಏತಂ ನಕ್ಷತ್ರೇಷು, ಏತಂ ಸರ್ವೇಷು ಭೂತೇಷು, ಏತಮೇವ ಬ್ರಹ್ಮೇತ್ಯಾಚಕ್ಷತೇ" ಇತಿ।। ಐತರೇಯ ೩-೨-೩

**ಅರ್ಥ** :- ಬಹ್ವೃಚಾಃ = ಋಗ್ವೇದಿಗಳು, ಏತಂ ಹ್ಯೇವ = ಏತಮೇವ = ಪುರುಷ ಮತ್ತು ಆದಿತ್ಯಾದಿಗಳಲ್ಲಿರುವ ವಿಷ್ಣುವನ್ನೇ, "ಸಯಶ್ಚಾಯಂ, ಅಶರೀರಃ ಪ್ರಜ್ಞಾತ್ಮಾ, ಸಯಶ್ಚಾಸಾವಾದಿತ್ಯೇ, ಏಕಮೇವ, ತದಿತಿ ವಿದ್ಯಾತ್, ತಸ್ಮಾತ್, ಪುರುಷಂ ಪುರುಷಂ ಪ್ರತಿ ಆದಿತ್ಯೋ ಭವತಿ....ಸೂರ್ಯ ಆತ್ಮಾ ಜಗತಃ ತಸ್ಥುಷಶ್ಚ....ಏತಂ ಸರ್ವೇಷು ಭೂತೇಷು।। ಎಂಬ ವಾಕ್ಯದಲ್ಲಿ ಹೇಳಲ್ಪಟ್ಟ ಪುರುಷ ಮತ್ತು ಆದಿತ್ಯಾದಿಗಳಲ್ಲಿರುವ ವಿಷ್ಣುವನ್ನೇ, ಋಗ್ವೇದಿಗಳು,

ಮಹದುಕ್ಥೇ = ಮಹದುಕ್ಥನಾಮಕವಾದ ಬೃಹತೀಸಹಸ್ರದಲ್ಲಿ ಬೃಹತೀ ಸಹಸ್ರವೆಂಬ ಮಂತ್ರದಲ್ಲಿ ಆ ವಿಷ್ಣುವೆಂಬ ದೇವತೆಯನ್ನೇ, ಮೀಮಾಂಸಂತೇ = ವಿಚಾರ ಮಾಡಿ ತಿಳಿಯುತ್ತಾರೆ, ಅಧ್ವರ್ಯವಃ = ಯಜುರ್ವೇದಿಗಳು, ಅಗ್ನೌ = ಚಯನಸಾಧನ ವಾದ ಇಷ್ಟಕಾದೇವತಾವಿಷಯದಲ್ಲಿ ಆ ದೇವತೆಯನ್ನು ಮೀಮಾಂಸಂತೇ = ವಿಚಾರ ಮಾಡಿ ತಿಳಿಯುತ್ತಾರೆ, ಛಂದೋಗಾಃ = ಸಾಮವೇದಿಗಳು, ಮಹಾವ್ರತೇ = ಮಹಾವ್ರತವೆಂಬ ಹೆಸರಿನ ಸ್ತೋತ್ರದಲ್ಲಿ ತಿಳಿಯುತ್ತಾರೆ, ಅಸ್ಯಾಂ = ಈ ಪೃಥಿವಿ ಯಲ್ಲಿ, ಏತಂ = ಈ ವಿಷ್ಣುವನ್ನು, ಇದೇ ರೀತಿ, ದಿವಿ = ಅಂತರಿಕ್ಷದಲ್ಲೂ, ವಾಯುವಿನಲ್ಲೂ, ಆಕಾಶದಲ್ಲೂ ನೀರಿನಲ್ಲೂ, ಓಷಧಿಗಳಲ್ಲೂ, (ಮೂಲಿಕೆಗಳಲ್ಲೂ) ವನಸ್ಪತಿಗಳಲ್ಲೂ, ಚಂದ್ರನಲ್ಲೂ, ನಕ್ಷತ್ರಗಳಲ್ಲೂ, ಸರ್ವಭೂತಗಳಲ್ಲೂ, (ಸರ್ವಪ್ರಾಣಿಗಳಲ್ಲೂ) ಏತಮೇವ = ಈ ವಿಷ್ಣುವನ್ನೇ, ಬ್ರಹ್ಮ = ವ್ಯಾಪ್ತನನ್ನಾಗಿ, (ವಿದ್ವಾಂಸರು) ಆಚಕ್ಷತೇ = ಹೇಳುತ್ತಾರೆ.

ಸರ್ವಭೂತಗತನಾದ ವಿಷ್ಣುವನ್ನೇ (ಸಕಲ ಪ್ರಾಣಿಗಳಲ್ಲೂ ಇರತಕ್ಕ ಪರಮಾತ್ಮನಾದ ವಿಷ್ಣುವನ್ನೇ) ಗುಣಪರಿಪೂರ್ಣನಾಗಿರುವುದರಿಂದಲೂ, ಸರ್ವತ್ರವ್ಯಾಪ್ತನಾಗಿರುವುದರಿಂದಲೂ, ಇವನನ್ನೇ ಮುಖ್ಯವಾಗಿ ಜ್ಞಾನಿಗಳು ಬ್ರಹ್ಮನೆಂದು ಹೇಳುತ್ತಾರೆ.

ಸಕಲ ಪ್ರಾಣಿಗಳಲ್ಲೂ ಚಕ್ಷುರಾದಿಸ್ಥಾನಗಳಲ್ಲೂ ಒಬ್ಬನಾದ ಈ ವಿಷ್ಣುವನ್ನೇ ಗುಣಪರಿಪೂರ್ಣನಾಗಿರುವುದರಿಂದ ಬ್ರಹ್ಮನೆಂದು ಜ್ಞಾನಿಗಳು ಹೇಳುವರು ಎಂದು ಪರಮಾಭಿಪ್ರಾಯವಾಗಿದೆ.

ಇಲ್ಲಿ ಹೇಳಲಾಗಿರುವ ಸರ್ವಗತತ್ವವು ಸರ್ವತ್ರ ಸಂಯೋಗಿತ್ವವು ಮಾತ್ರವಲ್ಲ. ಸರ್ವತ್ರ ಆಯಾ ಪದಾರ್ಥಗಳ ಯೋಗ್ಯತೆಗೆ ತಕ್ಕಂತೆ ಶಕ್ತಿಪ್ರದನಾಗಿಯೂ (ಶಕ್ತಿಪ್ರೇರಕನಾಗಿಯೂ) ವ್ಯಾಪ್ತನಾದ ಪರಮಾತ್ಮನು ಎಲ್ಲೆಡೆಯಲ್ಲಿಯೂ ಇದ್ದಾನೆಂಬ ಮಹಾಮಹಿಮೆಯು ಶ್ರುತಿಗಳಿಗೆ ಇಲ್ಲಿ ಉಕ್ತವಾಗಿದೆ.

ವಿಶೇಷಾಕಾರವಾದ ಶಂಕೆಗೆ ತಕ್ಕ ಪರಿಹಾರವನ್ನು ಸೂತ್ರಕಾರರು ಸೂಚಿಸಿಯುತ್ತಾರೆ. ಆ ಶಂಕೆಯು ಈ ರೀತಿ ಇದೆ.

ಮೊದಲನೆಯ ಅಧ್ಯಾಯದ ಪಾದಭೇದಕ್ಕೆ ಕಾರಣ-ಮೂರನೇ ಪಾದದಲ್ಲೂ, ನಾಲ್ಕನೇ ಪಾದದಲ್ಲೂ ಸಹ ನಾಮಾತ್ಮಕಗಳಾದ ಶಬ್ದಗಳಿಗೂ, ಲಿಂಗಾತ್ಮಕಗಳಾದ ಶಬ್ದಗಳಿಗೂ ಸಮನ್ವಯವು ಕಂಡುಬಂದರೂ ಸಹ, ಮೂರನೇ ಪಾದದಲ್ಲಿ ಉಭಯತ್ರ ಪ್ರಸಿದ್ಧಗಳಾದ ನಾಮಲಿಂಗಾತ್ಮಕಗಳಾದ ಶಬ್ದಗಳಿಗೂ, ನಾಲ್ಕನೇ ಪಾದದಲ್ಲಿ ಅನ್ಯತ್ರೈವ ಪ್ರಸಿದ್ಧಗಳಾದ ನಾಮಾತ್ಮಕ ಲಿಂಗಾತ್ಮಕ ಶಬ್ದಗಳಿಗೂ ಸಮನ್ವಯವು ಉಕ್ತವಾಗಿದೆ. ಎರಡನೇ ಪಾದದಲ್ಲಿಯಾದರೋ ಅನ್ಯತ್ರ ಪ್ರಸಿದ್ಧಗಳಾದ ಲಿಂಗಾತ್ಮಕ ಶಬ್ದಗಳಿಗೆ ಸಮನ್ವಯವು ಉಕ್ತವಾಗಿರುವುದರಿಂದ "ಅರ್ಥೈಕತ್ವಾತ್ ಏಕಂ ವಾಕ್ಯಂ" ಎಂಬ ನ್ಯಾಯದಿಂದ ದ್ವಿತೀಯ ಪಾದಕ್ಕೆ ಸಮಗ್ರವಾಗಿ "ಏಕವಾಕ್ಯತ್ವವು" ಏಕರೂಪವಾದ ಅರ್ಥ ಪ್ರತಿಪಾದಕತ್ವವಿವಕ್ಷೆಯಿಂದ ಏಕವಾಕ್ಯತ್ವವೂ ತೃತೀಯ ಮತ್ತು ಚತುರ್ಥ ಪಾದಗಳಿಗಿಂತಲೂ ವೈಲಕ್ಷಣ್ಯವೂ (ಭೇದವೂ) ಸಿದ್ಧಿಸುತ್ತದೆ.

**ಶಂಕೆ** :- ಮೊದಲನೆಯ ಅಧ್ಯಾಯದಲ್ಲಿನ ಎರಡನೇ ಪಾದದಲ್ಲಿನ ಲಿಂಗಾತ್ಮಕಶಬ್ದಗಳೆಲ್ಲವೂ ಅನ್ಯತ್ರ ಪ್ರಸಿದ್ಧಗಳಾದ ಯೌಗಿಕ ಶಬ್ದಗಳೇ ಆಗಿದೆ. ಪ್ರಥಮ ಪಾದದಲ್ಲಿ ಸಮನ್ವಿತವಾದವುಗಳೂ ಸಹ ಯೌಗಿಕಗಳೇ ಆಗಿವೆ. ಯೌಗಿಕಗಳೇ ಆಗಿರುವುದರಿಂದ ಅವೂ ಸಹ ಲಿಂಗಾತ್ಮಕಗಳೇ ಆದಂತಾಯಿತು. ಹಾಗಿಲ್ಲದ ಪಕ್ಷದಲ್ಲಿ ಅವಯವ ವೃತ್ತಿಯಿಂದ ಆಯಾ ನಾಮಪ್ರತಿಪಾದಿತಗುಣಲಾಭವಿಲ್ಲದೆ ಹೋದೀತು. ಆದಕಾರಣ ನಾಮಲಿಂಗಭೇದಕ್ಕೆ ನಿಮಿತ್ತವೇನು ?

ಉ-ಪ್ರಕೃತದಲ್ಲಿ ಧರ್ಮಿವಾಚಿತ್ವವು ನಾಮತ್ವವೆಂದೂ ಧರ್ಮವಾಚಿತ್ವವು ಲಿಂಗತ್ವವೆಂಬುದು ಸರಿಹೊಂದುವುದಿಲ್ಲ. ಹೀಗೆ ಹೇಳಿದರೆ ಎರಡನೇ ಪಾದದಲ್ಲಿನ ಅಂತರ್ಯಾಮಿಶಬ್ದವು ಧರ್ಮಿವಾಚಿಯಾಗಿರುವುದರಿಂದ ಅದಕ್ಕೆ ನಾಮತ್ವವನ್ನೂ ಆನಂದಾದಿಶಬ್ದಗಳು ಧರ್ಮವಾಚಿಗಳಾಗಿರುವುದರಿಂದ ಪ್ರಥಮಪಾದದಲ್ಲಿನ ಆನಂದಮಯಾಧಿಕರಣದಲ್ಲಿನ ಶಬ್ದಕ್ಕೆ ಲಿಂಗತ್ವವನ್ನೂ ಹೇಳಬೇಕಾದೀತು. ಮತ್ತು ನಾಮತ್ವವೆಂದರೆ ರೂಢತ್ವವೆಂದೂ, ಯೌಗಿಕತ್ವವೇ ಲಿಂಗತ್ವವೆಂದೂ ಹೇಳಬಹುದಾದರೂ, ಪ್ರಥಮಪಾದದಲ್ಲಿನ ಸಕಲಶಬ್ದಗಳಿಗೂ ಗುಣಪೂರ್ತಿಲಾಭದ ದೃಷ್ಟಿಯಿಂದ ಅವುಗಳಿಗೆ ಯೌಗಿಕತ್ವವೂ ವಿವಕ್ಷಿತವಾಗಿರುವುದರಿಂದ ಮತ್ತು ವಿದ್ವತ್ಪ್ರತೀತಿಯಿಂದ ಸಕಲ ಶಬ್ದಗಳೂ ಯೌಗಿಕಗಳೇ ಆಗಿರುವ ಪ್ರಯುಕ್ತನಾಮತ್ವ, ಲಿಂಗತ್ವಗಳ ವಿವೇಚನೆಯೇ ಈ ದೃಷ್ಟಿಯಿಂದ ಕೂಡುವುದಿಲ್ಲವೆಂಬ ಶಂಕೆಗೆ ಮತ್ತೆ ಅವಕಾಶವಾಗುತ್ತದೆ. ಆದಕಾರಣ ನಾಮತ್ವಕ್ಕೂ ಲಿಂಗತ್ವಕ್ಕೂ ಬೇರೆ ದೃಷ್ಟಿಯಿಂದಲೇ ವ್ಯತ್ಯಾಸವನ್ನು ಹೇಳಬೇಕಾಗಿದೆ.

ಅದೇನೆಂದರೆ ವಿದ್ವತ್ಪ್ರತೀತಿಯಿಂದ ಅಂದರೆ ಪ್ರಾಜ್ಞರ ದೃಷ್ಟಿಯಿಂದ ಎಲ್ಲಾ ಶಬ್ದಗಳೂ ಯೌಗಿಕಗಳೇ ಆಗಿವೆ. ಅಜ್ಞರ ಪ್ರತೀತಿಯಿಂದ ಯಾವ ಶಬ್ದಗಳು ರೂಢಗಳಾಗಿವೆಯೋ ಅಂದರೆ ಅಜ್ಞರ ಪ್ರತೀತಿಯಿಂದ, ಇಂದ್ರ, ಚಂದ್ರಾದಿ ಶಬ್ದಗಳು, ಶಚೀಪತಿಯಲ್ಲಿಯೂ, ಚಂದ್ರನಲ್ಲಿಯೂ ಪ್ರಯೋಗಬಾಹುಳ್ಯರೂಪವಾಗಿ ರೂಢಗಳಾಗಿವೆ. ಆದಕಾರಣ ಅನ್ಯತ್ರಪ್ರಸಿದ್ಧ ನಾಮಾತ್ಮಕ ಶಬ್ದಗಳೆಂದು ಪರಿಗಣಿತವಾಗಿವೆ. ಅದರಂತೆ ಅಜ್ಞರ ಪ್ರತೀತಿಯಿಂದ ಯಾವ ಶಬ್ದಗಳು ಯೌಗಿಕಗಳಾಗಿವೆಯೋ ಅವುಗಳ ಲಿಂಗಾತ್ಮಕ ಶಬ್ದಗಳೆಂದು ಪರಿಗಣಿಸಲ್ಪಟ್ಟಿವೆ. ಈ ರೀತಿ ಅಜ್ಞಪ್ರತೀತಿಗೆ ಅನುಗುಣವಾಗಿ ನಾಮಲಿಂಗ ಪ್ರಭೇದವು ಇಲ್ಲಿ ವಿವಕ್ಷಿತವಾಗಿದೆಯೆಂದು ಅಭಿಪ್ರಾಯ.

ಇದೇ ರೀತಿಯಾಗಿ ಅನ್ಯತ್ರಪ್ರಸಿದ್ಧ, ಉಭಯತ್ರಪ್ರಸಿದ್ಧ, ಅನ್ಯತ್ರೈವಪ್ರಸಿದ್ಧಗಳೆಂಬ ಪ್ರಭೇದಗಳ ವಿಷಯದಲ್ಲೂ ಇಟ್ಟುಕೊಳ್ಳಬೇಕು.

ವಿದ್ವತ್ಪ್ರಸಿದ್ಧಿಯಿಂದ ಸರ್ವಶಬ್ದಗಳೂ ಕೂಡ ಪರಮಾತ್ಮನ ಪರವೇ ಆಗಿವೆ. ಆದಕಾರಣ ಅಲ್ಲೂ ಸಹ ಅಜ್ಞಪ್ರತೀತಿಯಿಂದಲೇ ಕೆಲವನ್ನು ಅನ್ಯತ್ರಪ್ರಸಿದ್ಧಗಳೆಂದೂ, ಮತ್ತೆ ಕೆಲವನ್ನು ಉಭಯತ್ರಪ್ರಸಿದ್ಧಗಳೆಂದೂ ಮತ್ತು ಕೆಲವು ಶಬ್ದಗಳನ್ನು ಅನ್ಯತ್ರೈವಪ್ರಸಿದ್ಧಗಳೆಂದೂ ಕರೆದಿದ್ದಾರೆಯೆಂಬುದು ಪರಮಾಭಿಪ್ರಾಯ.

ಈ ಅಭಿಪ್ರಾಯವಿಶೇಷವು ನ್ಯಾಯಸುಧಾ ವಾಕ್ಯದಲ್ಲಿ ಸೂಚಿತವಾಗಿದೆ.

ಆ ಸುಧಾವಾಕ್ಯವು ಈ ರೀತಿ ಇದೆ.

"ತತ್ಪ್ರಥಮಯಂ ವಿಭಾಗಃ।
ತಥಾಪಿ, ಅನ್ಯತ್ರಪ್ರಸಿದ್ಧತ್ವಾದಿವತ್ ಆಪಾತಪ್ರತೀತ್ಯನುರೋಧೇನ,
ಇಯಮುಕ್ತಿರಿತ್ಯದೋಷಃ" ।। ಇತಿ ।।

ಈ ಸಂದರ್ಭದಲ್ಲಿ ಶ್ರೀ ಪರಿಮಳಾಚಾರ್ಯರು ನ್ಯಾಯಸುಧೆಯ "ಆಪಾತಪ್ರತೀತೇತಿ" ಎಂಬ ಪ್ರತೀಕವನ್ನು ಹಿಡಿದು ಅಲ್ಪಪ್ರತೀತ್ಯನುರೋಧೇನೇತ್ಯರ್ಥಃ।" ಎಂಬುದಾಗಿ ಅತ್ಯಂತರಂಜಕವಾಗಿ ವ್ಯಾಖ್ಯಾನ ಮಾಡಿ ಉಪಕರಿಸಿರುತ್ತಾರೆ.

ಅದಕ್ಕೆ ಉಪಪಾದಕವಾಗಿ ಮತ್ತೊಂದು ಪರಿಮಳ ವಾಕ್ಯವೂ ಸಹ ಬಹಳ ಉಪಕಾರಕವಾಗಿದೆ. ಅದು ಈ ರೀತಿ ಇದೆ.

"ಶ್ರೀ ಪರಿಮಳವ್ಯಾಖ್ಯಾವಾಕ್ಯ :-

ತಥಾ ಚ ಯಥಾ ವಿದ್ವತ್ಪ್ರಸಿದ್ಧ್ಯಾ ಭಗವತ್ಪರಾಣಾಮಪಿ, ಇಂದ್ರಾದಿಶಬ್ದಾನಾಂ, ಅಲ್ಪ
ಪ್ರತೀತ್ಯನುರೋಧೇನ, ಅನ್ಯತ್ರಪ್ರಸಿದ್ಧತ್ವಾದಿಕಂ ವಿವಕ್ಷಿತಮ್।
ತಥಾ ಪೂರ್ವಪಾದೇ (ಅನ್ಯತ್ರಪ್ರಸಿದ್ಧನಾಮಪಾದೇ) ಸಮನ್ವಿತಾನಾಂ ಶಬ್ದಾನಾಂ
ವಿದ್ವದ್ರೀತ್ಯಾ ಯೌಗಿಕಾನಾಮಪಿ, ಅಲ್ಪಪ್ರತೀತ್ಯನುರೋಧೇನ, ರೂಢತಯಾ, ಸಾಕ್ಷಾತ್,
ಧರ್ಮ್ಯಭಿಧಾಯಕತ್ವಂ ವಿವಕ್ಷಿತಮ್।
ಅತೋ ಯುಕ್ತೇಯಂ ಪಾದಭೇದೋಕ್ತಿರಿತಿಭಾವಃ ।। ಇತಿ ।।

ಈ ಶ್ರೀ ಪರಿಮಳಾಚಾರ್ಯರ ವಾಕ್ಯಗಳ ಅಭಿಪ್ರಾಯವನ್ನೇ ಹಿಂದೆ ವಿವರಿಸಿರುತ್ತೇವೆ.

ಮೇಲೆ ಕಂಡ ವಾಕ್ಯಗಳ ಸಂಗಳಿತವಾದ ತಾತ್ಪರ್ಯವು ಈ ರೀತಿ ಇದೆ.

ಮೊದಲನೆಯ ಪಾದದಲ್ಲಿ ಸಮನ್ವಿತಗಳಾದ, ಅನ್ಯತ್ರಪ್ರಸಿದ್ಧಗಳಾದ, ದೇವತಾವಾಚಕಗಳಾದ ಇಂದ್ರಾದಿ ಶಬ್ದಗಳೂ, ಭೂತವಾಚಕಗಳಾದ ಆಕಾಶಾದಿಶಬ್ದಗಳೂ, ಅಧ್ಯಾತ್ಮಪರಗಳಾದ ಪ್ರಾಣಾದಿಶಬ್ದಗಳೂ, ಅಧಿವೇದಗಳಾದ ಸೂಕ್ತಪರವಾದ ಅಗ್ನ್ಯಾದಿಶಬ್ದಗಳೂ, ಛಂದೋವಾಚಕಗಳಾದ ಗಾಯತ್ರ್ಯಾದಿಶಬ್ದಗಳೂ, ಎಲ್ಲವೂ ವಿದ್ವತ್ಪ್ರಸಿದ್ಧಿಯಿಂದ ಕೇವಲ ಪರಮಾತ್ಮನನ್ನೇ ಪ್ರತಿಪಾದಿಸುವವಾಗಿರುವುದಾದರೂ, ಅಲ್ಪಪ್ರತೀತ್ಯನುರೋಧದಿಂದ, ಅನ್ಯತ್ರಪ್ರಸಿದ್ಧಗಳೆಂದು ಪರಿಗಣಿಸಲ್ಪಟ್ಟಿವೆ. (ವಿವಕ್ಷಿತವಾಗಿವೆ) ಅವು ವಿದ್ವಾಂಸರ ಪ್ರತೀತಿಯಿಂದ ಯೌಗಿಕಗಳಾದರೂ, ಅಲ್ಪರ ಪ್ರತೀತಿಯಿಂದ ರೂಢಗಳಾಗಿ (ಅಲ್ಪ। ಪ್ರಯೋಗ ಪ್ರಾಚುರ್ಯದಿಂದ) ಸಾಕ್ಷಾತ್ತಾಗಿ ಧರ್ಮಿಯನ್ನೇ ತಿಳಿಸುತ್ತವೆ. ಆದಕಾರಣ ಸಮನ್ವಯಾಧ್ಯಾಯದ ಮೊದಲನೆಯ ಪಾದವು ನಾಮಪಾದವೆಂದೂ ಎರಡನೇ ಪಾದವು ಲಿಂಗಪಾದವೆಂದೂ ಪಾದಗಳ ಭೇದಕಥನವು ಯುಕ್ತವೇ ಆಗಿದೆಯೆಂದು ಪರಮಾಭಿಪ್ರಾಯ.

ಶ್ರೀಮನ್ನ್ಯಾಯಸುಧಾದಲ್ಲಿನ "ಆಪಾತಪ್ರತೀತ್ಯನುರೋಧೇನ" ಎಂಬ ಪದಕ್ಕೆ ಶ್ರೀ ಚಂದ್ರಿಕಾಚಾರ್ಯರು ಮೂರು ಬಗೆಯಾದ ಅರ್ಥ ವಿವರಣೆಯನ್ನು ತೋರಿಸಿರುತ್ತಾರೆ.

ಮೊದಲನೆಯದಾಗಿ, ಯಾವ ಪದಗಳು ಆಪಾತತಃ ರೂಢಗಳೋ (ಲೌಕಿಕ ಪ್ರಯೋಗಪ್ರಾಚುರ್ಯವುಳ್ಳವುಗಳೋ) ಅವು ನಾಮಗಳು.

ಯಾವ ಪದಗಳು ಹಿಂದೆ ಹೇಳಿದುದಕ್ಕೆ ವಿಪರೀತಗಳೋ (ಪ್ರಯೋಗಪ್ರಾಚುರ್ಯರಹಿತಗಳೋ) ಆ ಪದಗಳು ಕೇವಲ ಯೌಗಿಕಗಳು ಅಥವಾ ಯೋಗರೂಢಗಳೋ ಅವು ಲಿಂಗಗಳು ಎಂಬುದಾಗಿ ಮೊದಲನೆಯ ವಿವರಣೆ.

ಹೀಗೆ ಹೇಳಿದರೆ ಅಕ್ಷರಾಧಿಕರಣದಲ್ಲಿನ ಅಕ್ಷರಶಬ್ದಕ್ಕೂ, ಆನಂದಮಯಾಧಿಕರಣದಲ್ಲಿನ ಆನಂದಮಯ ಶಬ್ದಕ್ಕೂ ಟೀಕಾದಲ್ಲಿ ಉಕ್ತವಾಗಿರುವಂತೆ ನಾಮತ್ವವು ಬಾರದೇ ಹೋದೀತು.

ಆದಕಾರಣ ಅಥವಾ ಎಂದು ಪ್ರಾರಂಭಿಸಿ ಚಂದ್ರಿಕಾದಲ್ಲಿ ಎರಡನೆಯ ವಿವರಣವು ಪ್ರಾರಂಭವಾಗಿದೆ.

ಎರಡನೆಯ ಕಲ್ಪ - ಅಥವಾ ಯಾವ ಪದಗಳು ಆಪಾತತಃ ರೂಢಗಳೋ ಅವು ನಾಮಗಳು, ಯಾವುವು ಆಪಾತತಃ ಯೌಗಿಕಗಳೋ ಅವು ಲಿಂಗಗಳು ಎಂಬುದಾಗಿ ನಾಮಲಿಂಗಗಳ ನಿರ್ವಚನವನ್ನು ಮಾಡಬಹುದು.

ಈ ರೀತಿ ಹೇಳಿದಾಗ ಯೋಗರೂಢಗಳು ಪ್ರಥಮಕಲ್ಪದಲ್ಲಿ ಲಿಂಗಗಳ ಪ್ರಭೇದದಲ್ಲಿ ಸೇರುತ್ತವೆ.

ಅಥವಾ ಎಂದು ಹೇಳಿದ ಎರಡನೇ ಕಲ್ಪದಲ್ಲಿ ಯೋಗರೂಢಗಳು ನಾಮಾತ್ಮಕವಾಗಿಯೂ, ಲಿಂಗಾತ್ಮಕವಾಗಿಯೂ ಇರುವುದರಿಂದ ನಾಮಲಿಂಗಾತ್ಮಕಗಳಾಗುತ್ತವೆ.

ಹೀಗೆ ಎರಡನೇ ವಿವರಣವನ್ನು ಅಂಗೀಕರಿಸಿದರೆ, ರೂಢಗಳಿಗೆಲ್ಲಾ ನಾಮತ್ವವೂ, ಯೌಗಿಕಗಳಿಗೆಲ್ಲಾ ಲಿಂಗತ್ವವೂ, ಯೋಗರೂಢಗಳಿಗೆಲ್ಲಾ ಹಿಂದೆ ಹೇಳಿದ ಎರಡೂ ಪ್ರಕಾರಗಳಿಗಿಂತಲೂ ಪ್ರತ್ಯೇಕವಾದ ಮೂರನೇ ಪ್ರಕಾರವೂ ಬರಬೇಕಾಗುತ್ತದೆ.

ಮತ್ತು ಇಂದ್ರಾದಿಶಬ್ದಗಳೂ, ಯೋಗರೂಢಗಳಾಗಿವೆ. ಅವುಗಳಿಗೆ ಕೇವಲ ನಾಮತ್ವವು ಬಾರದೇ ಹೋದೀತು. ಅದರಂತೆ ಅಕ್ಷರಶಬ್ದಕ್ಕೂ ಸಹ ಕೇವಲ ನಾಮತ್ವವು ಇಲ್ಲವಾಗುತ್ತದೆ.

ಆದಕಾರಣ ಅಥವಾ ಎಂಬ ಪಕ್ಷವೂ ಅಷ್ಟು ಸಂಗತವಾಗುವುದಿಲ್ಲ. ಎಂಬುದಾಗಿ ಮೊದಲನೆಯ ಎರಡೂ ಕಲ್ಪಗಳ ಅರ್ಥಗಳನ್ನು ಬಿಟ್ಟು ವಸ್ತುತಸ್ತು ಎಂದು ಚಂದ್ರಿಕಾಕಾರರು ಪ್ರಾರಂಭಿಸಿರುತ್ತಾರೆ.

ಅದರ ಅಭಿಪ್ರಾಯವು ಈ ರೀತಿ ಇದೆ. ವಸ್ತುತಸ್ತು ಎಂಬ ಮೂರನೇ ಕಲ್ಪದ ವಿವರಣೆ:

ಯಾವ ಪದಗಳು ಆಪಾತತಃ ರೂಢಿರಹಿತವಾಗಿವೆಯೋ, ಮತ್ತು ಅವು ಏಕಪ್ರಾತಿಪದಿಕಮಾತ್ರರೂಪಗಳಾಗಿರಲಿ ಅಥವಾ ಅನೇಕಪದಸಮುಧಾಯಾಕಾರರೂಪಗಳಾಗಿರಲಿ ಅಥವಾ "ಸರ್ವೇಷು", "ಯಸ್ಮಿನ್" ಇತ್ಯಾದಿಯಾಗಿ ಸಪ್ತಮೀ ವಿಭಕ್ತಿಸಹಿತವಾಗಿ ಪ್ರಾತಿಪದಿಕರೂಪಗಳಾಗಿರಲಿ, ಧರ್ಮದ್ವಾರಾ ಧರ್ಮಿಗೆ ಉಪಸ್ಥಾಪಕಗಳಾಗಿದ್ದರೆ ಅವು ಲಿಂಗಗಳೆನಿಸುತ್ತವೆ.

ಯಾವ ಪದಗಳು ಆಪಾತತಃ ರೂಢಗಳೋ, ಅಥವಾ ಯೋಗರೂಢಿಯುಕ್ತಗಳಾಗಿವೆಯೋ ಅವು ನಾಮಗಳು. ಹೀಗೆ ಪ್ರಭೇದವನ್ನು ಒಪ್ಪಿರುವುದರಿಂದ ಯೋಗರೂಢಗಳಿಗೆ ಮೂರನೇ ಪ್ರಭೇದವನ್ನು ಒಪ್ಪಬೇಕಾದೀತು ಎಂಬ ಹಿಂದಿನ ಶಂಕೆಗೆ ಅವಕಾಶವೇ ಇರುವುದಿಲ್ಲ.

ಮೊದಲನೆಯ ಅಧ್ಯಾಯದ ಮೊದಲನೆಯ ಪಾದದಲ್ಲಿ ಅನ್ಯತ್ರಪ್ರಸಿದ್ಧ ನಾಮಾತ್ಮಕಶಬ್ದಗಳಿಗೂ ಎರಡನೇ ಪಾದದಲ್ಲಿ ಅನ್ಯತ್ರಪ್ರಸಿದ್ಧಲಿಂಗಾತ್ಮಕಶಬ್ದಗಳಿಗೂ ಸಮನ್ವಯವನ್ನು ಪಾದಭೇದದಿಂದ ಹೇಳಿರುವಂತೆ, ಮೂರನೇ ಪಾದದಲ್ಲಿ ಉಭಯತ್ರಪ್ರಸಿದ್ಧಗಳಾದ ನಾಮಾತ್ಮಕಶಬ್ದಗಳಿಗೂ, ಉಭಯತ್ರ ಪ್ರಸಿದ್ಧಗಳಾದ ಲಿಂಗಾತ್ಮಕ ಶಬ್ದಗಳಿಗೂ ಪಾದಭೇದವು ಏತಕ್ಕೆ ಇಲ್ಲ? ಎಂಬ ಆಕ್ಷೇಪವು ಬರುತ್ತದೆ. ಅದರಂತೆ ನಾಲ್ಕನೇ ಪಾದದಲ್ಲಿನ ಅನ್ಯತ್ರೈವ ಪ್ರಸಿದ್ಧಗಳಾದ ನಾಮಾತ್ಮಕಗಳಿಗೂ, ಲಿಂಗಾತ್ಮಕಗಳಿಗೂ ಪ್ರತ್ಯೇಕವಾಗಿ ಪಾದಭೇದದಿಂದ ಸಮನ್ವಯನಿರೂಪಣೆಯು ಏತಕ್ಕೆ ವಿವಕ್ಷಿತವಾಗಿಲ್ಲ ಎಂಬ ಮತ್ತೊಂದು ಶಂಕೆಯೂ ಸಹ ಸಹಜವಾಗಿ ಉಂಟಾಗುತ್ತದೆ.

ಈ ಎರಡೂ ಶಂಕೆಗಳಿಗೆ ಸಮಾಧಾನವನ್ನು ತಾತ್ಪರ್ಯ ಚಂದ್ರಿಕಾಕಾರರು ಹೇಳಿರುವರು.

ಒಂದೊಂದು ಅಧ್ಯಾಯಕ್ಕೆ ನಾಲ್ಕೇ ಪಾದಗಳೆಂಬ ನಿಯಮವನ್ನು ಅನುಸರಿಸಲಾಗಿದೆ. ಆದಕಾರಣ ತೃತೀಯ ಪಾದದಲ್ಲಾಗಲಿ, ನಾಲ್ಕನೇ ಪಾದದಲ್ಲಾಗಲಿ ಅವಾಂತರ ಭೇದದ ವಿವಕ್ಷೆಯಿಂದ ಪಾದಭೇದವನ್ನು ಆಶ್ರಯಿಸಿಲ್ಲ.

ಅಥವಾ ನಾಮಾತ್ಮಕ ಲಿಂಗಾತ್ಮಕಶಬ್ದಗಳಲ್ಲಿ, ನಾಮಾತ್ಮಕಶಬ್ದಗಳಿಗೆ ಪ್ರಾಧಾನ್ಯವಿರುವುದರಿಂದ ಮೊದಲೇ ಅದನ್ನು ನಿರೂಪಿಸಲಾಗಿದೆ. ಲಿಂಗಾತ್ಮಕವಾದುದನ್ನು ಎರಡನೇ ಪಾದದಲ್ಲಿ ಸಮನ್ವಯಗೊಳಿಸಿ, ಹೀಗೆ ಈ ಎರಡು ಪಾದಗಳ ಸಮನ್ವಯವು ಬುದ್ಧಿಸ್ಥವಾದನಂತರ ಈ ಎರಡನ್ನು ಅನುಸರಿಸುವಿಕೆಯಿಂದ ಮೂರನೇ ಪಾದವೂ, ನಾಲ್ಕನೇ ಪಾದವೂ ಪ್ರವೃತ್ತವಾಗಿರುವ ಪ್ರಯುಕ್ತ ಅಲ್ಲಿ ಅವಾಂತರಪ್ರಭೇದವನ್ನು ಅನುಸರಿಸಿಲ್ಲವೆಂದು ಅಭಿಪ್ರಾಯ.

ಅಥವಾ ಅವಾಂತರ ಪ್ರಸಿದ್ಧವಾದ ನಾಮಾತ್ಮಕ ಮತ್ತು ಲಿಂಗಾತ್ಮಕಗಳ ಭೇದವನ್ನು ಆಶ್ರಯಿಸಿ ಮೊದಲಿನ ಎರಡು ಪಾದಗಳಲ್ಲಿ ವ್ಯತ್ಯಾಸವನ್ನು ತೋರಿಸಲಾಗಿದೆ. ಮೂರು ಮತ್ತು ನಾಲ್ಕನೇ ಪಾದಗಳಲ್ಲಿ ಅವಾಂತರಪ್ರಸಿದ್ಧಿಯನ್ನು ತಿರಸ್ಕರಿಸಿ, ಮಹಾಯೋಗ ವಿದ್ವದ್ರೂಢಿಗಳನ್ನು ಏಕತ್ರ ಒಪ್ಪಿರುವ ಪ್ರಯುಕ್ತ ಪಾದಭೇದಕ್ಕೆ ತಕ್ಕ ಕಾರಣವಿಲ್ಲವೆಂಬುದನ್ನು ತೋರಿಸಲು ಪಾದಭೇದವನ್ನು ಆಶ್ರಯಿಸಿಲ್ಲ.

ತಾತ್ಪರ್ಯಚಂದ್ರಿಕಾಕಾರರು ನಿರೂಪಿಸಿರುವ ಮೊದಲನೆಯ ಅಧ್ಯಾಯದ ಪಾದಕ್ರಮಗಳ ವಿವರಣೆ.

ಅನುವ್ಯಾಖ್ಯಾನಕಾರರು ತಿಳಿಸಿರುವಂತೆ "ಮಹಾಸಮನ್ವಯೇ ತ್ವನ್ಯಾಧಿಕಾರೋಽಪಿಲಕ್ಷಿತಃ" ಎಂಬಂತೆ ನಾಲ್ಕನೇ ಪಾದದಲ್ಲಿನ ಯುಕ್ತಿ, ಬಧ್ವ, ಅಜಾ ಇತ್ಯಾದಿಶಬ್ದಗಳ ಸಮನ್ವಯವು ಸರ್ವಾಧಿಕಾರಿಗಳ ಸಾಧಾರಣವಾಗಿಲ್ಲ. ಆದಕಾರಣ ಅದಕ್ಕೆ ಕಡೆಯ ಪಾದದಲ್ಲಿ ಸಮನ್ವಯವನ್ನು ತೋರಿಸಲಾಗಿದೆ.

ಮತ್ತು ಮೊದಲಿನ ಮೂರು ಪಾದಗಳಲ್ಲಿನ ಶಬ್ದಗಳ ಸಮನ್ವಯವನ್ನು ಶ್ರುತಿಲಿಂಗಾದಿಗಳಿಂದ ಪರಬ್ರಹ್ಮನಲ್ಲಿ ಸಮರ್ಥಿಸಲಾಗಿದೆ. ಅದೇ ರೀತಿ ಪ್ರಬಲಶ್ರುತಿಲಿಂಗಾದಿಗಳಿಂದಲೇ "ಅನ್ಯಪರತಾ" ಸೂ ಉಂಟಾಗಲಿ ಎಂಬ ಶಂಕೆಗೆ ಆಸ್ಪದವಾಗಿ ನಾಲ್ಕನೇ ಪಾದವು ಪ್ರವೃತ್ತವಾಗಿರುವುದರಿಂದ ಅದಕ್ಕೆ ಕಡೆಯಲ್ಲಿ ನಿರೂಪಣೆಯನ್ನು ತೋರಿಸಲಾಗಿದೆ.

ಅನ್ಯತ್ರ ಉಭಯತ್ರಶಬ್ದ ಸಮನ್ವಯದ ವಿಷಯದಲ್ಲಿ ಹಿಂದೆಯೇ ವಿವರಿಸಿರುವಂತೆ ಮಹಾಮಲ್ಲಭಂಗನ್ಯಾಯವನ್ನು ಅನುಸರಿಸಲಾಗಿದೆ.

ಉಭಯತ್ರಪ್ರಸಿದ್ಧಗಳಾದ ಶಬ್ದಗಳ ಸಮನ್ವಯದಲ್ಲಿ, ಅನ್ಯತ್ರಪ್ರಸಿದ್ಧಿಯ ನಿರಾಕರಣೆಯಲ್ಲಿ ಮಾತ್ರ ಯತ್ನಿಸಬೇಕು. ಅಂದರೆ ಏಕಪ್ರಯತ್ನಸಾಧ್ಯವಾದುದು ಉಭಯತ್ರಪ್ರಸಿದ್ಧವಾದ ಶಬ್ದದ ಸಮನ್ವಯವು. ಅನ್ಯತ್ರ ಪ್ರಸಿದ್ಧಶಬ್ದಸಮನ್ವಯವಾದರೋ ಪ್ರಯತ್ನದ್ವಯಸಾಧ್ಯವಾಗಿದೆ. ಅನ್ಯತ್ರಪ್ರಸಿದ್ಧಿಯ ನಿರಾಕರಣೆ, ವಿಷ್ಣುವಿನಲ್ಲಿ ಪ್ರಸಿದ್ಧಿಯ ಉಪಪಾದನೆ. ಆದಕಾರಣ ಈ ಎರಡರ ಪೈಕಿ ಉಭಯತ್ರಪ್ರಸಿದ್ಧಶಬ್ದಗಳಿಗಿಂತಲೂ ಅನ್ಯತ್ರಪ್ರಸಿದ್ಧ ಶಬ್ದಗಳು ಪ್ರಬಲಗಳಾಗಿವೆ.

ಈ ಮೇಲಿನ ಕ್ರಮವು ಅನುವ್ಯಾಖ್ಯಾನದಲ್ಲಿ ಉಕ್ತವಾಗಿರುವಂತೆ ನಿರೂಪಿಸಿರುತ್ತಾರೆ.

ಸೂತ್ರಭಾಷ್ಯದಲ್ಲಿ ಸೂಚಿತವಾದಂತೆ ಮೂರು ಸಮನ್ವಯಗಳಿಗೂ ಸೋಪಾನಾರೋಹಣನ್ಯಾಯದ ಕ್ರಮವನ್ನು ಅನುಸರಿಸಿರುತ್ತಾರೆ.

ಈ ಪಕ್ಷವನ್ನು ತಾತ್ಪರ್ಯ ಚಂದ್ರಿಕಾಕಾರರು "ಯದ್ವಾ" ಎಂಬ ಕಲ್ಪಾಂತರವನ್ನ ಆರಂಭಿಸಿ ನಿರೂಪಿಸಿರುವರು.

ಅನ್ಯತ್ರ ಪ್ರಸಿದ್ಧಗಳಲ್ಲಿ ಅನ್ಯಪರತ್ವವು ಕೇವಲ ಪ್ರಸಿದ್ಧಿಯಿಂದ ಮಾತ್ರ ಕಂಡುಬಂದಿದೆ. ಆ ಪ್ರಸಿದ್ಧಿಯು ಭ್ರಮ ಮೂಲಕವಾಗಿಯೂ ಇರಬಹುದು. ಆದಕಾರಣ ಅದು ದುರ್ಬಲ. ಮೂರನೇ ಪಾದದಲ್ಲಿನ ಉಭಯತ್ರ ಪ್ರಸಿದ್ಧಿಯಾದರೋ "ರುದ್ರೋ ವಾವ ಲೋಕಧಾರು" ಇತ್ಯಾದಿ ಶ್ರುತ್ಯಾದಿಮೂಲಕವಾಗಿದೆ. ಅತಿಸೂಕ್ಷ್ಮವಾಗಿದೆ. ಶ್ರುತಿಯ ಪ್ರಬಲ. ಅದರ ನಿರಾಸವು ಕ್ಲೇಶಸಾಧ್ಯ. ಆದಕಾರಣ ಅದು ಪ್ರಬಲ. ನಾಲ್ಕನೇ ಪಾದದಲ್ಲೂ ಸಹ ಶ್ರುತಿಲಿಂಗಾದಿಗಳ ಜೊತೆಯಲ್ಲಿ ಪ್ರಸಿದ್ಧಿಯೂ ಇದೆ. ಮತ್ತು ಬೇರೆ ಕಡೆ ಅಂದರೆ ವಿಷ್ಣುವಿನಲ್ಲಿ ಬದ್ಧ, ದುಃಖಿ, ಅವರ, ಸ್ತ್ರೀ ಮೊದಲಾದ ಶಬ್ದಗಳನ್ನು ಸಮನ್ವಯಗೊಳಿಸಲು ಅತ್ಯಶಕ್ಯವೆಂಬ ಶಂಕೆಯೂ ಬಾಧಿಸುತ್ತಿದೆ.

ಅದು ಎಲ್ಲಕ್ಕಿಂತಲೂ ಪ್ರಬಲವಾಗಿದೆ. ಈ ರೀತಿ ಉತ್ತರೋತ್ತರಪ್ರಾಬಲ್ಯದೃಷ್ಟಿಯಿಂದ ಸೋಪಾನಾರೋಹಣ ನ್ಯಾಯವನ್ನು ಹೇಳಲಾಗಿದೆ. ಈ ಪಕ್ಷವು ಭಾಷ್ಯಕಾರರ ವಾಕ್ಯದಿಂದಲೇ ಸೂಚಿತವಾಗಿದೆ.

ಸೂತ್ರಭಾಷ್ಯಕಾರರು ಅನ್ಯತ್ರಪ್ರಸಿದ್ಧಾದಿಶಬ್ದಗಳನ್ನು ಪ್ರಯೋಗಿಸಿರುವುದರಿಂದಲೇ ಈ ಮೇಲೆ ಕಂಡ ಅಭಿಪ್ರಾಯವು ವ್ಯಕ್ತವಾಗುತ್ತದೆ.

## ಕರ್ತೃತ್ವ ಕರ್ಮತ್ವಗಳ ವಿಚಾರ

**ಶಂಕಾ** :- ಐತರೇಯೋಪನಿಷತ್ತಿನಲ್ಲಿ "ಯಃ ಏತಂ ಆತ್ಮಾನಂ ಪಶ್ಯೈ ಶಂಸತಿ ತಸ್ಯ ವೇದಾಃ ದುಗ್ಧ ದೋಹಾಃ ಭವಂತಿ" (ಐತರೇಯ ೩-೨-೩) ಎಂಬುದಾಗಿ ಶ್ರುತವಾಗಿದೆ.

**ಅರ್ಥ** :- ಯಃ = ಯಾರು, ಏತಂ ಆತ್ಮಾನಂ = ಚಕ್ಷುರ್ಮಯಃ, ಶ್ರೋತ್ರಮಯಃ, ಛಂದೋಮಯೋ, ಮನೋ ಮಯೋ, ವಾಙ್ಮಯ ಆತ್ಮಾ (ಐತರೇಯ ೩-೨೭) ಎಂಬುದಾಗಿ ಹಿಂದಿನ ಮಂತ್ರದಲ್ಲಿ ಚಕ್ಷುರ್ಮಯತ್ವಾದಿ ಗುಣಕನಾದ, ಆತ್ಮಾನಂ = ಪರಮಾತ್ಮನನ್ನು, ಪಶ್ಯೈ = ಮತ್ಪ್ರೋಚ್ಯನಾದ ಅಯೋಗ್ಯನಿಗೆ, ಶಂಸತಿ = ಉಪದೇಶ ಮಾಡುತ್ತಾನೆ ಯೋ, ತಸ್ಯ = ಅಂತಹ ಉಪದೇಶ ಮಾಡುವ ವ್ಯಕ್ತಿಗೆ, ವೇದಾಃ = ವೇದಗಳು, ದುಗ್ಧದೋಹಾಃ = ಫಲರಹಿತಗಳಾಗಿ, (ನಿಷ್ಫಲಗಳಾಗಿ) ಭವಂತಿ = ಆಗುತ್ತವೆ. ಇದೇ ರೀತಿ "ಐತರೇಯದ ಮುಂದಿನ ಮಂತ್ರದಲ್ಲಿ (೩-೨-೪) ರಲ್ಲಿ "ಯಸ್ತಿತ್ಯಾಜ ಸಚಿವಿದಂ ಸಖಾಯಂ ನ ತಸ್ಯ ವಾಚ್ಯಪಿ ಭಾಗೋ ಅಸ್ತಿ" ಎಂದು ಉಕ್ತವಾಗಿದೆ.

ಅದರ ಅರ್ಥವು ಈ ರೀತಿ ಇದೆ.

ಯಃ = ಯಾರು, ಸಖಿವಿದಂ = ಕರ್ಮಸಂಚಯವನ್ನು ತಿಳಿದಿರುವ, ಸಖಾಯಂ = ಪ್ರೀತಿಯಿಂದ ಏಕದೇಶದಲ್ಲಿರುವಿಕೆಯಿಂದ ಮಿತ್ರನಾದ, ಹರಿಯನ್ನು, ತಿತ್ಯಾಜ = ಬೇರೆ ರೀತಿಯಾಗಿ ತಿಳಿಯುತ್ತಾನೆಯೋ (ಅನ್ಯಥಾ ತಿಳಿಯುವನೋ) ತಸ್ಯ = ಅಂತಹ ಅನ್ಯಥಾ ಪರಮಾತ್ಮನನ್ನು ತಿಳಿಯತಕ್ಕವನಿಗೆ, ವಾಚಿ = ವೇದಾಧ್ಯಯನಾದಿಗಳಲ್ಲಿ, ಭಾಗಃ = ಫಲವು ಇರುವುದಿಲ್ಲ. (ಅವನು ಮಾಡಿದ ವೇದಾಧ್ಯಯನವು ವ್ಯರ್ಥ) ಅಷ್ಟು ಮಾತ್ರವಲ್ಲ. ಪರಮಾತ್ಮನನ್ನು ಅನ್ಯಥಾ ತಿಳಿಯುವುದರ ಫಲವಾಗಿ ನರಕವೇ ಆಗುತ್ತದೆ. ಎಂದು ಅಭಿಪ್ರಾಯ.

ಇಲ್ಲಿ ಮುಖ್ಯವಾಗಿ "ಆತ್ಮಾನಂ, ಶಂಸತಿ" ಎಂಬಲ್ಲಿ ಶ್ರುತಿವಾಕ್ಯದಲ್ಲಿ ಕಂಡುಬರುವ ಶಂಸನಕ್ರಿಯಾದಲ್ಲಿ "ಏತಂ ಆತ್ಮಾನಂ" ಎಂದು ಪರಮಾತ್ಮನನ್ನು ಕರ್ಮತ್ವೇನ, ಶಂಸತಿ ಎಂಬ ಶಂಸನಕ್ರಿಯಾದಲ್ಲಿ ಜೀವನನ್ನು ಕರ್ತೃತ್ವೇನ ನಿರ್ದೇಶ ಮಾಡಿರುವುದು ಸ್ಪಷ್ಟವಾಗಿದೆ. ಒಂದೇ ಕ್ರಿಯಾದಲ್ಲಿ ಒಂದೇ ವ್ಯಕ್ತಿಗೆ ಕರ್ಮತ್ವವೂ, ಕರ್ತೃತ್ವವೂ ಕೂಡುವುದಿಲ್ಲ. ಸಾಮಾನ್ಯವಾಗಿ (ಉತ್ಸರ್ಗತಃ) ಕರ್ತೃಕರ್ಮಭಾವವು ಭೇದವ್ಯಾಪ್ತವಾಗಿದೆ. ಕರ್ತೃಕರ್ಮಗಳು ಭಿನ್ನಗಳಾಗಿಯೇ ಇರುತ್ತವೆ.

ಕ್ರಿಯಾಶ್ರಯನೇ ಕರ್ತಾ ಎಂದೆನಿಸಿಕೊಳ್ಳುತ್ತಾನೆ. ಪರಸಮವೇತಕ್ರಿಯಾಜನ್ಯಫಲಶಾಲಿಯಾದುದು ಕರ್ಮವೆಂದು ಹೇಳಲ್ಪಡುತ್ತದೆ.

**ಅದಕ್ಕೆ ಉದಾಹರಣೆ** :- "ದೇವದತ್ತೋ ಗ್ರಾಮಂ ಗಚ್ಛತಿ" ದೇವದತ್ತನು ಗ್ರಾಮವನ್ನು ಕುರಿತು ಹೋಗುತ್ತಾನೆ. ಎಂಬ ಪ್ರಯೋಗದಲ್ಲಿ ದೇವದತ್ತನು ಗಮನರೂಪವಾದ ಕ್ರಿಯೆಗೆ ಆಶ್ರಯನಾಗಿರುವುದರಿಂದ ಕರ್ತಾ ಎಂದೆನಿಸಿದ್ದಾನೆ. ಅಂತಹ ಗ್ರಾಮಕ್ಕಿಂತಲೂ ಭಿನ್ನನಾದ ದೇವದತ್ತನ ಗಮನಕ್ರಿಯಾಜನ್ಯವಾದ ಉತ್ತರದೇಶ ಸಂಯೋಗರೂಪವಾದ "ಪರಸಮವೇತಕ್ರಿಯಾಜನ್ಯಫಲಾಶ್ರಯ" ವಾದ ಗ್ರಾಮವು ಕರ್ಮವೆಂದೆನಿಸಿದೆ. ಪರಸಮವೇತ ಎಂಬ ಭಾಗವನ್ನು ಬಿಟ್ಟು ಬರೀ "ಕ್ರಿಯಾಜನ್ಯಫಲಶಾಲಿತ್ವ ಮಾತ್ರವೇ" ಕರ್ಮತ್ವವೆಂದು ಹೇಳಿದರೆ ಗಮನ ಕ್ರಿಯಾಜನ್ಯವಾದ ಸಂಯೋಗರೂಪವಾದ ಫಲಶಾಲಿತ್ವವು ದೇವದತ್ತನಿಗೂ ಇರುವುದರಿಂದ, "ದೇವದತ್ತಂ ಗ್ರಾಮಂ ಗಚ್ಛತೀತಿ" ಎಂಬ ಅನಿಷ್ಟ ಪ್ರಯೋಗವು ಬರಬೇಕಾದೀತು. ಆದಕಾರಣ ಕರ್ಮತ್ವದ ಪರಿಷ್ಕಾರದಲ್ಲಿ ಪರಸಮವೇತವೆಂಬ ವಿಶೇಷಣಸಹಿತವಾಗಿ ಹೇಳಬೇಕು. ಏವಂ ಚ ಕರ್ಮಕರ್ತೃಗಳು ನಿಯಮೇನ ಭೇದವ್ಯಾಪ್ತಗಳೆಂದೇ ಒಪ್ಪಬೇಕು.

ಹೀಗೆ ಹೇಳಿದರೆ, ಪರಸಮವೇತಕ್ರಿಯಾಜನ್ಯಫಲಶಾಲಿತ್ವಂ ಕರ್ಮತ್ವಂ ಎಂದು ಹೇಳಿದರೂ ಯಾವ ಭಾಗದಿಂದ ದೇವದತ್ತನು ಪಾಟಲೀಪುತ್ರದಿಂದ ಗ್ರಾಮಕ್ಕೆ ತೆರಳುವನೋ ಅದಕ್ಕೆ ಆ ಭಾಗವೂ ಸಹ ದೇವದತ್ತಸಮವೇತ ಗಮನರೂಪ ಕ್ರಿಯಾಜನ್ಯವಿಭಾಗರೂಪಫಲಶಾಲಿಯಾಗಿರುವುದರಿಂದ "ದೇವದತ್ತಃ ಕೌಶಾಂಬೀಂ ಪಾಟಲೀಪುತ್ರಂ ಗಚ್ಛತಿ" ಎಂಬ ಪ್ರಯೋಗವು ಬರಬೇಕಾಗುತ್ತದೆ.

ಇಂತಹ ಪ್ರಯೋಗವು ಪ್ರಾಮಾಣಿಕವಲ್ಲ. "ದೇವದತ್ತಃ ಕೌಶಾಂಬ್ಯಾಃ ಪಾಟಲೀಪುತ್ರಂಗಚ್ಛತೀತಿ" ಎಂದೇ ಲೋಕದಲ್ಲಿ ವ್ಯವಹರಿಸುತ್ತಾರೆ. ಅಪಾದಾನಕ್ಕೆ ಕರ್ಮತ್ವವು ಏಷ್ಟ - ವಾಗಿಲ್ಲ.

ವಿಶ್ಲೇಷಾವಧಿಯಾದ ಕೌಶಾಂಬೀಗ್ರಾಮಕ್ಕೂ ಕೂಡ ದೇವದತ್ತಸಮವೇತಗಮನರೂಪಕ್ರಿಯಾಜನ್ಯವಿಭಾಗ ರೂಪಫಲ ಶಾಲಿತ್ವವು ಇರುವುದರಿಂದ, ಪರಸಮವೇತಕ್ರಿಯಾಜನ್ಯಫಲಶಾಲಿತ್ವವೂ ಸಹ ಕರ್ಮತ್ವ ಲಕ್ಷಣವಾಗಲಾರದು. ಈ ರೀತಿಯಾದ ಲಕ್ಷಣಕ್ಕೆ ಅತಿ ವ್ಯಾಪ್ತಿಯು ಮಾತ್ರವಲ್ಲ.

ಅವ್ಯಾಪ್ತಿಯೂ ಸಹ ಸಂಭವಿಸುತ್ತದೆ.

ಅನಾಗತಾದಿವಿಷಯೇಚ್ಛಾದಿಕ್ರಿಯಾಜನ್ಯಫಲಶಾಲಿತ್ವವು ಈಗ ಅನಾಗತವಾದುದಕ್ಕೆ ಇರುವುದಿಲ್ಲವಾದುದರಿಂದ ಅದಕ್ಕೆ ಕರ್ಮತ್ವವು ಬಾರದೇಹೋದೀತು.

"ಶ್ವಸ್ತನಂ ಭೋಜನಂ ಇಚ್ಛಾಮಿ" ನಾಳೆಯ ದಿವಸದ ಊಟವನ್ನು ಅಪೇಕ್ಷಿಸುತ್ತೇನೆ. ಎಂದು ಪ್ರಯೋಗವು ಕಂಡುಬಂದಿದೆ. ಇಲ್ಲಿ ಇಚ್ಛಾವಿಷಯವಾದ ನಾಳೆಯ ದಿನದ ಭೋಜನವು ಇನ್ನೂ ಸಿದ್ಧವಿಲ್ಲ. ಅದೇ ಇಲ್ಲವಾದಮೇಲೆ ಅದಕ್ಕೆ ಫಲಶಾಲಿತ್ವವೂ ಕೂಡುವುದಿಲ್ಲ. ಇಂತಹ ಪ್ರಯೋಗವೇ ಇಲ್ಲವೆಂದೂ ಹೇಳಲು ಬರುವುದಿಲ್ಲ. ಅಂತಹುದನ್ನು ಒಪ್ಪದಿದ್ದರೆ ಇಚ್ಛೆಗೆ ಸಕರ್ಮಕತ್ವವೇ ಇಲ್ಲವಾದೀತು. ಅಂತಹ ಕಡೆ ದ್ವಿತೀಯಾವಿಭಕ್ತಿಯೇ ಬಾರದೇ ಹೋದೀತು. ಆದಕಾರಣ ಈ ಲಕ್ಷಣಕ್ಕೆ ಅವ್ಯಾಪ್ತಿದೋಷವೂ ಕಂಡುಬಂದಿದೆ.

ವರ್ತಮಾನಕಾಲದಲ್ಲೂ ಸಹ, ಘಟಮಿಚ್ಛತಿ, ಘಟಂಜಾನಾತಿ, ಘಟಂಕರೋತಿ ಎಂಬ ಉದಾಹರಣೆಗಳಿವೆ. ಪ್ರಾಮಾಣಿಕ ಪ್ರಯೋಗಗಳು ಕಂಡುಬಂದಿವೆ.

ಇಂತಹ ಕಡೆ ವರ್ತಮಾನಕಾಲಿಕವಾದ ಘಟದಲ್ಲಿ ಜ್ಞಾನಾದಿಕ್ರಿಯಾಜನ್ಯವಾದ ಫಲವು ಭಾಟ್ಟಮತರೀತ್ಯಾ

೧. ಸವಿಷಯಕವಾದಜ್ಞಾತತಾ ಆಗಲಿ ೨. ಸಂಸ್ಕಾರವಾಗಲಿ ೩. ವ್ಯವಹಾರವಾಗಲಿ ಯಾವುದೂ ಸಂಗತವಾಗುವುದಿಲ್ಲ.

ಮೊದಲನೆಯದಾಗಿ ಜ್ಞಾನವಿಷಯತಾಕ್ಕಿಂತ ಬೇರೆಯಾದ ಸವಿಷಯಕವಾದ ಪದಾರ್ಥಾಂತರತ್ವೇನ ಭಟ್ಟರು ಒಪ್ಪಿರುವ ಜ್ಞಾತತಾ ಎಂಬುದಲ್ಲಿ ಯಾವ ಪ್ರಮಾಣವೂ ಇಲ್ಲ.

ಎರಡನೆಯದಾದ ಜ್ಞಾನರೂಪಕ್ರಿಯಾಜನ್ಯವಾದ ಸಂಸ್ಕಾರರೂಪವಾದ ಫಲವು ಆತ್ಮನಲ್ಲಿ ಹುಟ್ಟುತ್ತದೆಯೇ ಹೊರತು ಜಡವಾದ ಘಟದಲ್ಲಿ ಹುಟ್ಟುವುದಿಲ್ಲ. ಜಡಕ್ಕೆ ಭಾವನಾಖ್ಯಸಂಸ್ಕಾರವನ್ನುಯಾರೂ ಒಪ್ಪಿಲ್ಲ.

ಮೂರನೆಯದಾಗಿ ಜ್ಞಾನರೂಪಕ್ರಿಯಾಜನ್ಯವಾದ ವ್ಯವಹಾರರೂಪವಾದ ಫಲವಾದರೋ ಅದು ಕರ್ತೃನಿಷ್ಠವೇ ಹೊರತು ಘಟನಿಷ್ಠವಲ್ಲ. ಜ್ಞಾನರೂಪ ಕ್ರಿಯಾಜನ್ಯ ಫಲರೂಪವಾದ ವ್ಯವಹಾರವೂ ಸಹ ಅಭಿವದನರೂಪವಾದುದು (ವಚನರೂಪವಾದುದು) ಅಥವಾ ಉಪಾದಾನಾದಿರೂಪವಾದುದುದೆಂದು ಹೇಳಬೇಕು. ಅಭಿವದನರೂಪ ವ್ಯವಹಾರ ರೂಪವಾದ ಫಲವು (ವಚನವು) ಕರ್ತೃನಿಷ್ಠವೇ ಹೊರತು ಘಟನಿಷ್ಠವಲ್ಲ. ಉಪಾದಾನಾದಿರೂಪವಾದುದು ಎಂದರೆ (ಪರಿಗ್ರಹ ಮತ್ತು ಪರಿತ್ಯಾಗಾದಿರೂಪವಾದುದು) ಅಥವ ಹಾನಾದಿರೂಪವಾದುದೂ ಸಹ ಉಪೇಕ್ಷಣೀಯವಾದು ದರಲ್ಲೂ ಕಂಡುಬಂದಿದೆ. ಹೇಯವಾದುದಕ್ಕೂ (ಕಲಧೌತಮಲಾದಿಗಳೂ) ಅದರ ಜ್ಞಾನಕರ್ಮತ್ವವು ಬರಬೇಕಾದೀತು.

ಮತ್ತು ಹಿಂದೆ ತಿಳಿಸಿದಂತೆ ಕರ್ಮಕರ್ತೃಭಾವವು ಭೇದವ್ಯಾಪ್ತವೆಂದು ನಿರ್ಧರಿಸಿದರೆ "ತಂಡುಲಾಃ ಸ್ವಯಮೇವ ಪಚ್ಯಂತೆ, ವತ್ಸಾಃ ಸ್ವಯಮೇವ ಮುಚ್ಯಂತೆ, ಭಿದ್ಯತೇ ಕಾಷ್ಠಂ ಸ್ವಯಮೇವ" ಇತ್ಯಾದಿ ಸ್ಥಳದಲ್ಲಿ ಕಂಡುಬರುವ "ಕರ್ಮಕರ್ತಾ" ದುರ್ಲಭವಾದೀತು. ಕರ್ಮಕರ್ತೃ ಪ್ರಯೋಗವೇ ಇಲ್ಲದೇ ಹೋದೀತು.

"ಕರ್ಮವತ್ಕರ್ಮಣಾತುಲ್ಯಕ್ರಿಯಃ (ಪಾಣಿನಿ ಸೂತ್ರ ೩-೨-೭೬)" ಎಂಬ ಸೂತ್ರದಲ್ಲಿ ಕರ್ತೃವಿಗೇನೇ ಕರ್ಮತ್ವವು ವಿಹಿತವಾಗಿದೆ. ಕರ್ಮಕರ್ತೃಭಾವವು ನಿಯಮೇನ ಭೇದವ್ಯಾಪ್ತವೆಂದು ಅಂಗೀಕರಿಸಿದರೆ, ಮೇಲೆ ಕಂಡ ಸೂತ್ರದಿಂದ ವಿಹಿತವಾದ ಕರ್ಮಕರ್ತೃತ್ವಗಳ ಐಕ್ಯವು, ಒಂದಕ್ಕೇನೇ ಕರ್ಮತ್ವವೂ ಕರ್ತೃತ್ವವೂ ವಿಹಿತವಾಗಿರುವುದು ಅನುಪಪನ್ನವಾದೀತು. ಅಂದರೆ ಮೇಲೆ ತಿಳಿಸಿದಂತೆ ಭಿದ್ಯತೇ ಕಾಷ್ಠಂ ಸ್ವಯಮೇವ ಇತ್ಯಾದಿ ಪ್ರಯೋಗಗಳು ಅಪ್ರಾಮಾಣಿಕಗಳಾಗಬೇಕಾಗುತ್ತದೆ.

ಆದಕಾರಣ ಕರ್ಮತ್ವವು

೧. ಕ್ರಿಯಾಜನ್ಯಫಲಶಾಲಿತ್ವವಾಗಲಿ

೨. ಪರಸಮವೇತ ಕ್ರಿಯಾಜನ್ಯ ಫಲಶಾಲಿತ್ವವಾಗಲಿ ಹೇಳಲು ಬರುವಂತಿಲ್ಲ.

ಈ ಎರಡೂ ಲಕ್ಷಣಗಳು ಅತಿವ್ಯಾಪ್ತಿ ಅವ್ಯಾಪ್ತಿದೋಷದುಷ್ಟವಾಗಿವೆ.

ಮತ್ತು "ಮಾಂ ಅಹಂಜಾನಾಮಿ" ಎಂಬುದಾಗಿ ಸಾಕ್ಷಿ ಪ್ರತ್ಯಕ್ಷವು ಸುಪ್ರಸಿದ್ಧವಾಗಿದೆ. ಇಲ್ಲಿ ಒಬ್ಬನಿಗೇನೇ ಕರ್ಮತ್ವವೂ ಕರ್ತೃತ್ವವೂ ಕಂಡುಬಂದಿದೆ. ಇಲ್ಲಿ ಕರ್ಮಕರ್ತೃಗಳಿಗೆ ಐಕ್ಯವೇ ಇರುತ್ತದೆ. ಇಂತಹ ಸಾಕ್ಷಾತ್ಕಾರವನ್ನು ಅಪಲಾಪ ಮಾಡುವಂತಿಲ್ಲ.

ಮತ್ತು "ಮಾಂ ಅಹಂಜಾನಾಮಿ" ಎಂಬುದಾಗಿ ಆತ್ಮಕರ್ತೃಕವಾದ ಜ್ಞಾನದಲ್ಲಿ "ಮಾಂ" ಎಂಬುದಾಗಿ ಆತ್ಮನಿಗೆ ಕರ್ಮತ್ವವೂ "ಅಹಂ" ಎಂಬುದಾಗಿ ಅದೇ ಆತ್ಮನಿಗೆ ಕರ್ತೃತ್ವವೂ ಸಿದ್ಧವಾಗಿದೆ. ಇದರಲ್ಲಿ ಆತ್ಮನಿಗೆ ಕರ್ಮತ್ವವನ್ನು ಒಪ್ಪದಿದ್ದಪಕ್ಷದಲ್ಲಿ ಎಂದಿಗೂ ಆತ್ಮಸಾಕ್ಷಾತ್ಕಾರವೇ ಇಲ್ಲವಾದೀತು.

ಅಸಂಪ್ರಜ್ಞಾತಸಮಾಧಿಸ್ಥನಾದ ಯೋಗಿಗೆ (ಯುಂಜಾನನಿಗೆ) ಕೇವಲ ಆತ್ಮ "ಸ್ವರೂಪವೇ ತಿಳಿಯಲ್ಪಡುವ ಪ್ರಯುಕ್ತ" ಆತ್ಮನಿಗೆ ಕರ್ಮತ್ವವನ್ನೂ ಕರ್ತೃತ್ವವನ್ನು ಒಪ್ಪಲೇಬೇಕಾಗುತ್ತದೆ. ಇದನ್ನು ಪರಕೀಯರೂ ಒಪ್ಪಿದ್ದಾರೆ. ಇದು ಎಲ್ಲರಿಗೂ ಸಮ್ಮತ. "ಯುಂಜಾನಸ್ಯ ಕೇವಲ ಏವ ಆತ್ಮಾ ಜ್ಞಾತಾ, ಜ್ಞೇಯಶ್ಚ ನಿರಂಜನಾದಿಶ್ರುತಿಬಲಾತ್" ಎಂದು ಖಂಡನ ಟೀಕಾದಲ್ಲಿ ಉಕ್ತವಾಗಿದೆ. ಆದ್ದರಿಂದ ಕರ್ಮಕರ್ತೃತ್ವಗಳು ಭಿನ್ನವಾಗಿಯೇ ಇರಬೇಕೆಂಬ ನಿಯಮವೂ ಸಹ ಸಂಗತವಲ್ಲ.

"ಆದಕಾರಣ ಕ್ರಿಯಾಸ್ವಾತಂತ್ರ್ಯವೇ ಕರ್ತೃತ್ವವು. ಅಂತಹ ಕ್ರಿಯಾವಿಷಯತ್ವವೇ ಕರ್ಮತ್ವವು ಎಂದು ಹೇಳಬೇಕು." ಇದಕ್ಕೆ ಯಾವ ವಿಧವಾದ ವಿರೋಧವೂ ಇರುವುದಿಲ್ಲ." ಕ್ರಿಯಾಸ್ವಾತಂತ್ರ್ಯವು ಎಂದರೆ ಪ್ರಧಾನವಾದ ಧಾತ್ವರ್ಥಕ್ಕೆ ಆಶ್ರಯತ್ವರೂಪವಾದುದೇ ಕ್ರಿಯಾಸ್ವಾತಂತ್ರ್ಯವು.

**ಶಂಕಾ** :- ಕ್ರಿಯಾ ಸ್ವಾತಂತ್ರ್ಯವೇ ಕರ್ತೃತ್ವವೆಂದೂ, ಕ್ರಿಯಾವಿಷಯತ್ವವೇ ಕರ್ಮತ್ವವೆಂದೂ ಹೇಳಿದರೂ ಸಹ ಪರಸ್ಪರ ವಿರೋಧವು ಇದ್ದೇ ಇದೆ. ಹೇಗೆಂದರೆ, ಕ್ರಿಯಾ ಸ್ವಾತಂತ್ರ್ಯವು ಪ್ರತ್ಯಕ್ಭಾವಲಕ್ಷಣರೂಪವಾಗಿದೆ. (ಅಂತರನಾದ ಆತ್ಮಗತ ವಾದ ಧರ್ಮವಾಗಿದೆ) ಪರಾಗ್ಭಾವರೂಪವಾದ ಕ್ರಿಯಾವಿಷಯತ್ವರೂಪವಾದ ಕರ್ಮತ್ವವಾದರೋ ಬಹಿಃ ಇರತಕ್ಕ ಪದಾರ್ಥಗಳ ಧರ್ಮವಾಗಿದೆ. ಆದಕಾರಣ ಕ್ರಿಯಾ ಸ್ವಾತಂತ್ರ್ಯ ವಿಷಯತ್ವಗಳು ಪ್ರತ್ಯಕ್‌ಪರಾಗ್ಭಾವ ಲಕ್ಷಣರೂಪ ವಾಗಿರುವುದರಿಂದ ಮತ್ತೆ ವಿರೋಧವು ಇದ್ದೇ ಇದೆಯಲ್ಲಾ ಎಂಬ ಶಂಕೆಗೆ ಉತ್ತರವೇನು ?

**ಸಮಾಧಾನ** :- ಕರ್ತೃತ್ವ ಕರ್ಮತ್ವಗಳು ಒಂದೇ ವ್ಯಕ್ತಿಗೆ ಇರುವ ವಿಷಯದಲ್ಲಿ ಹಿಂದೆ ತಿಳಿಸಿದಂತೆ ಅನೇಕ ಸುಪ್ರಸಿದ್ಧಗಳಾದ ಉದಾಹರಣೆಗಳಿರುವುದರಿಂದಲೂ ಸಾಕ್ಷಿ ಪ್ರತ್ಯಕ್ಷಾದಿ ಪ್ರಮಾಣಗಳಿರುವುದರಿಂದಲೂ ಸಹ, ಪ್ರಮಾಣ ಪ್ರಮಿತವಾಗಿ ಪ್ರಸಿದ್ಧವಾಗಿರುವ ವಿಷಯದಲ್ಲಿ ಅದಕ್ಕೆ ಉಪಪಾದಕವಾದ ಭೇದಾಭಾವವೂ ಕಂಡುಬಂದಿರುವಾಗ ಅಂತಹ ವಿಷಯದಲ್ಲಿ ಭೇದಕ್ಕೆ ಪ್ರತಿನಿಧಿಯಾದ ವಿಶೇಷದಿಂದಲೇ ಅಂತಹ ವ್ಯವಹಾರಕ್ಕೆ ನಿರ್ವಾಹಕವನ್ನಾಗಿ ಸ್ವೀಕರಿಸಬೇಕು. ಇದನ್ನು ವಿಶೇಷಸಮರ್ಥನವಾದದಲ್ಲೇ ಸಮರ್ಥಿಸಲಾಗಿದೆ. ಆದ್ದರಿಂದ ಪಚ್ಯತೇ ಫಲಂ ಸ್ವಯಮೇವ ಇತ್ಯಾದಿ ವ್ಯವಹಾರಗಳಿಗೂ ಯಾವ ಚ್ಯುತಿಯೂ ಇರುವುದಿಲ್ಲ. ''ವಿವಕ್ಷಾತಃ ಕಾರಕಾಣಿ ಭವಂತಿ'' ಎಂಬ ನ್ಯಾಯದಿಂದ ಸ್ವತಃ ಅಧಿಕರಣವಾಗಿ ಕಂಡು ಬಂದರೂ ಅದಕ್ಕೆ ಅಧಿಕರಣತ್ವವನ್ನು ವಿವಕ್ಷಾ ಮಾಡದೇ, ಅತಿಶಯ ಮಾತ್ರವನ್ನೇ ಪರಿಗಣಿಸಿ ಕಾಂಸ್ಯಪಾತ್ರ್ಯಾಂ ಭುಂಕ್ತೇ ಎಂಬಂತೆ ಕಾಂಸ್ಯಪಾತ್ರ್ಯಾ ಭುಂಕ್ತೇ ಎಂದೂ ಪ್ರಯೋಗಿಸುವುದು ಕಂಡುಬಂದಿದೆ. ಅತಿಶಯದ ವಿವಕ್ಷಾ ಇಲ್ಲದಿದ್ದಾಗ ಕೇವಲ ಅಧಿಕರಣತ್ವ ವಿವಕ್ಷಾ ಮಾತ್ರವಿದ್ದಾಗ ಕಾಂಸ್ಯಪಾತ್ರ್ಯಾಂ ಭುಂಕ್ತೇ ಎಂದೂ ಪ್ರಯೋಗಿಸುತ್ತಾರೆ. ಅತಿಶಯವಿವಕ್ಷಯಾ ಕರಣಪ್ರತ್ಯಯವೂ (ತೃತೀಯಾವಿಭಕ್ತಿಯೂ) ಅಧಿಕರಣಮಾತ್ರ ವಿವಕ್ಷಯಾ ಸಪ್ತಮೀ ಪ್ರಯೋಗವೂ ವಿಹಿತವೇ ಆಗಿದೆ.

ಅದರಂತೆ ಇಲ್ಲೂ ಸಹ ತಿಳಿಯಬೇಕೆಂದು ಅಭಿಪ್ರಾಯ.

ಇಲ್ಲಿ ಪ್ರಮೇಯರಹಸ್ಯವೊಂದುಂಟು. ಅದನ್ನೇ ''ಓಂ ಕರ್ಮಕರ್ತೃವ್ಯಪದೇಶಾಚ್ಚ ಓಂ'' ಎಂಬ ಸೂತ್ರವನ್ನು ವ್ಯಾಖ್ಯಾನಿಸುವಾಗ ಅನುವ್ಯಾಖ್ಯಾನಕಾರರು ಪ್ರಕಾಶಪಡಿಸಿರುತ್ತಾರೆ.

**ಅನುವ್ಯಾಖ್ಯಾನ:- ಕರ್ಮಕರ್ತ್ರೋರುತ್ಸರ್ಗತೋ ಭಿದಾ ।**
**ಅಭೋದೋಽಪಿ ವಿಶೇಷೇ ಸ್ಯಾತ್, ಬಲೀ ಸೋಽಪ್ಯನಪೋದಿತಃ ।।**

**ಅಭಿಪ್ರಾಯ** :- ಯಾವ ಒಂದು ಕ್ರಿಯೆಯಲ್ಲಿ ಕರ್ತೃವೂ ಕರ್ಮವೂ ಇರುವುದೋ ಸಾಮಾನ್ಯವಾಗಿ ಅವೆರಡಕ್ಕೂ ಭೇದವೇ ಇರುತ್ತದೆಯೆಂಬುದು ಔತ್ಸರ್ಗಿಕವಾದ ನಿಯಮವು ಉಂಟು. ಸರ್ವಸಾಮಾನ್ಯವಾದ ನಿಯಮವು ಇರುತ್ತದೆ. ಆದರೆ ಇದು ಅಗ್ನಿಯಿಂದ (ಬೆಂಕಿಯಿಂದ) ಧೂಮಕ್ಕೆ ಇರತಕ್ಕ ವ್ಯಾಪ್ತಿರೂಪವಾದ ನಿಯಮದಂತೆ ಸಂಕೋಚಕ್ಕೆ ಅನರ್ಹವಾದ ನಿಯಮವೇನಲ್ಲ, ಇದು ಸಂಕೋಚಾರ್ಹವಾದ ಸಾಮಾನ್ಯ ನಿಯಮವಾಗಿದೆ.

ಅಪವಾದವು ಇಲ್ಲದಿದ್ದಾಗ ಉತ್ಸರ್ಗಕ್ಕೆ ಪ್ರಾಬಲ್ಯವುಂಟು. ಅದು ಬಲಿಷ್ಠವಾಗಿ ಸಾಧ್ಯಸಾಧನದಲ್ಲಿ ಸಮರ್ಥವಾಗುತ್ತದೆ.

ಉತ್ಸರ್ಗಾಪವಾದ ನ್ಯಾಯದಿಂದ ಇಲ್ಲಿ ಪ್ರಮೇಯವನ್ನು ಹೊಂದಿಸಿಕೊಳ್ಳಬೇಕು.

**ಹೇಗೆಂದರೆ** :- "ನ ಹಿಂಸ್ಯಾತ್ ಸರ್ವಾ ಭೂತಾನಿ" ಎಂಬುದಾಗಿ ಯಾವ ಭೂತಹಿಂಸೆಯು ಉಂಟೋ ಅದೆಲ್ಲವೂ ನಿಷಿದ್ಧ" ವೆಂಬುದು ಔತ್ಸರ್ಗಿಕ ನಿಯಮವು. ಸಾಮಾನ್ಯ ನಿಯಮವು. ಈ ಸಾಮಾನ್ಯ ನಿಯಮದ ಪ್ರಕಾರ ಸರ್ವಭೂತ ಹಿಂಸಾತ್ವಕ್ಕೂ ನಿಷಿದ್ಧತ್ವಕ್ಕೂ ವ್ಯಾಪ್ತಿಯು ಇದೆ. ಆದರೆ ಇದು ವಹ್ನಿಧೂಮಗಳಿಗೆ ಇರುವಂತೆ ಸಂಕೋಚಕ್ಕೆ ಅನರ್ಹವಾದ ನಿಯಮವಲ್ಲ. ವ್ಯಾಪ್ತಿಯಲ್ಲ. ಪ್ರಮಿತವಾದ ವಿಶೇಷ ವ್ಯಾಪ್ತಿಯಿಂದಲೇ ಸಂಕೋಚವನ್ನು ಮಾಡಲಾಗಿದೆ. ಇದರ ಎಲ್ಲಿ ಪ್ರಮಿತತ್ವವು ಇಲ್ಲವೋ ಸಾಮರ್ಥ್ಯವು ಮಾತ್ರ ಕಂಡುಬರುತ್ತದೆಯೋ ಅಲ್ಲಿ ಸಾಮಾನ್ಯ ವಿಶೇಷಭಾವವು ಸಮ್ಮತವಲ್ಲ.

ಸಾಮಾನ್ಯ ವಿಷಯಕವಾದ ಪ್ರಮಾಣದಿಂದ ತಿಳಿಯಲ್ಪಟ್ಟ ಅರ್ಥಕ್ಕೆ ವಿಶೇಷ ಪ್ರಮಾಣದಿಂದ ಅಪವಾದವು ಉಂಟಾಗುವುದು. ಉದಾಹರಣಾ ಸಾಮಾನ್ಯಪ್ರಮಾಣದಿಂದ ಎಲ್ಲೆಡೆಯಲ್ಲಿಯೂ ಪ್ರಸಕ್ತವಾದ ಬುದ್ಧಿಯು ವಿಶೇಷ ಪ್ರಮಾಣದಿಂದ (ಅಪವಾದವು ಪ್ರಸಕ್ತವಾದಾಗ) ಪ್ರಸಕ್ತವಾದ ವಿಶೇಷ ವಿಷಯವನ್ನು ಮಾತ್ರ ಬಿಟ್ಟು ಮಿಕ್ಕಕಡೆ ಅದು ತನ್ನ ವ್ಯಾಪ್ತಿಯನ್ನು ತೋರಿ ವಿರಮಿಸುತ್ತದೆ.

ಪ್ರಕೃತದಲ್ಲಿ "ನ ಹಿಂಸ್ಯಾತ್ ಸರ್ವಾ ಭೂತಾನಿ" ಎಂಬ ಸಾಮಾನ್ಯಶಾಸ್ತ್ರಕ್ಕೆ "ಅಗ್ನಿಷೋಮೀಯಂ ಪಶುಮಾಲಭೇತ" ಎಂಬ ಅಪವಾದವು ಕಂಡುಬರುವ ಪ್ರಯುಕ್ತ ಯಾಗಾತಿರಿಕ್ತ ಸ್ಥಳದಲ್ಲಿ ಮಾತ್ರ ಸಾಮಾನ್ಯ ಶಾಸ್ತ್ರಕ್ಕೆ ವ್ಯಾಪ್ತಿಯನ್ನು ಸ್ವೀಕರಿಸುವಂತೆ ಇಲ್ಲೂ ಸಹ ಕರ್ಮಕರ್ತೃಭಾವವು ಸಾಮಾನ್ಯವಾಗಿ ಭೇದವ್ಯಾಪ್ತವಾದರೂ, ಹಿಂದೆ ಹೇಳಿದ ಪ್ರಮಾಣ ಪ್ರಮಿತವಾದ ಸ್ಥಳಗಳಲ್ಲಿ ಅಪವಾದ ಗ್ರಸ್ತನಿಯಮವಾದುದರಿಂದ ಭೇದವಿಲ್ಲದ ಕಡೆ ವಿಶೇಷವನ್ನೇ ಒಪ್ಪಿ ವಿರೋಧವನ್ನು ಪರಿಹರಿಸಿಕೊಳ್ಳಬೇಕೆಂಬುದು ಪರಮಾಭಿಪ್ರಾಯ.

ಸೋಪಾಧಿಕ ಸಂಬಂಧವು ಹೇಗೆ ಸಾಧನಾಂಗವಲ್ಲವೋ ಅದರಂತೆ ಸೋಪರಾಧಿಕವ್ಯಭಿಚಾರವೂ ಸಹ ದೂಷಣಾಂಗ ವಲ್ಲವೆಂದು ಅಭಿಪ್ರಾಯ.

ಶ್ರೀಮದಾಚಾರ್ಯರು ರಹಸ್ಯವಾದ ಈ ಪ್ರಮೇಯವನ್ನು ಬಹು ಸ್ವಾರಸ್ಯವಾಗಿ ನಿರೂಪಿಸಿ ಉಪಕರಿಸುತ್ತಾರೆ.

**"ಉತ್ಸರ್ಗತೋಽಪಿ ಯದ್ವ್ಯಾಪ್ತಂ ಅಪವಾದವಿವರ್ಜಿತಂ ।**
**ವ್ಯಭಿಚಾರ್ಯಪವಾದೇನ ಮಾನಮೇವ ಭವಿಷ್ಯತಿ ॥ ಇತಿ ಅನುವ್ಯಾಖ್ಯಾನ ॥**

**ಶಂಕಾ** :- ಕರ್ಮಕರ್ತೃಭಾವವು ಭೇದವ್ಯಾಪ್ತವೋ ಅಲ್ಲವೋ ಹೇಗೆ ?

ಭೇದವ್ಯಾಪ್ತವೆಂದು ಹೇಳಿದರೆ "ಮಾಂ ಅಹಂ ಜಾನಾಮಿ" ಎಂಬುದಾಗಿ ಏಕವ್ಯಕ್ತಿಯಲ್ಲೇ ಕರ್ಮಕರ್ತೃಭಾವವು ಕಂಡುಬರುವುದರಿಂದ ಅದು ಇಲ್ಲದಂತಾಗಿ ಆತ್ಮಸಾಕ್ಷಾತ್ಕಾರವು ಅನುಪಪನ್ನವಾಗುತ್ತದೆ.

**ಭೇದವ್ಯಾಪ್ತವಲ್ಲವೆಂದರೆ** :- ಅದಕ್ಕೆ ಭೇದವ್ಯಾಪ್ತತ್ವವನ್ನು ಇಟ್ಟುಕೊಂಡು "ಆತ್ಮಾನಂ ಪಶ್ಯನ್ ಶಂಸತಿ" ವಾಕ್ಯದಲ್ಲಿನ ಬಾಧಕವಾಗಿ ಹೇಳುತ್ತೀರ ಅದರ ಕ್ರಮವು ಅಸಂಗತವಾದೀತು "ನ ಕರ್ಮಕರ್ತೃವ್ಯಪದೇಶಾತ್ ನ" ಎಂಬ ಸೂತ್ರವೇ ಅಸಂಗತವಾದೀತು. ಈ ರೀತಿ ಎರಡು ಬಗೆಯಾದ ದೋಷಗಳ ಪರಿಹಾರವು ಹೇಗೆ ?

**ಸಮಾಧಾನ** :- "ನ ಹಿಂಸ್ಯಾತ್ ಸರ್ವಾ ಭೂತಾನಿ" ಎಂಬಂತೆ "ಆತ್ಮಾನಂ ಪಶ್ಯನ್ ಶಂಸತಿ" ಎಂಬ ಶ್ರೌತನಿರ್ದೇಶ ವಿರುವುದರಿಂದ ಕರ್ಮಕರ್ತೃಭಾವವು ಭೇದವ್ಯಾಪ್ತವೆಂಬುದು ಸಾಮಾನ್ಯ ನಿಯಮವು. ಇದಕ್ಕೆ "ಮಾಂ ಅಹಂ ಜಾನಾಮಿ"

ಎಂಬಲ್ಲಿ ವ್ಯಭಿಚಾರವು ಬಂದಿದೆ. ಅಂದರೆ ಈ ವಿಶೇಷವಿಷಯದಿಂದ ಅಪವಾದವು ಬಂದಿದೆ. ಭೇದಕ್ಕೆ ಅಪವಾದಕವಾಗಿ ಭೇದಪ್ರತಿನಿಧಿಯಾದ ವಿಶೇಷದಿಂದ ಇದು ನಿರ್ವಾಹವಾಗಿದೆ. ಇಂತಹ ಅಪವಾದಾದಿನಿಮಿತ್ತಕವಾದ ವ್ಯಭಿಚಾರವು ಸೋಪಾಧಿಕವ್ಯಭಿಚಾರವಾಯಿತು. ಸೋಪಾಧಿಕವ್ಯಭಿಚಾರವು ದೂಷಕಾಂಗವಲ್ಲ. ಒಂದು ವೇಳೆ ಸೋಪಾಧಿಕ ವ್ಯಭಿಚಾರವೂ ಸಹ ದೂಷಕಾಂಗವೆನ್ನುವುದಾದರೆ "ವಿಮತಂ ಭೋಜನಂ - ಇಷ್ಟಸಾಧನಂ - ಭೋಜನ ತ್ವಾತ್ - ವ್ಯಸ್ತನಭೋಜನವತ್" ಎಂಬ ಅನುಮಾನವೇ ಅಪ್ರಮಾಣವಾಗಬೇಕಾಗುತ್ತದೆ.

ಅಲ್ಲದೆ ಸಹ ಮುಂದಿನ ಭೋಜನಕ್ಕೂ ಸಹ ಕೆಲವು ಸಂದರ್ಭದಲ್ಲಿ "ಅಪಥ್ಯಾದಿ" ಉಪಾಧಿಯಿಂದ ಅನಿಷ್ಟ ಸಾಧನತ್ವವೂ ಸಹ ಕಂಡುಬಂದಿರುವ ಪ್ರಯುಕ್ತ ಅಂತಹ ಕಡೆ ಈ ಮೇಲೆ ಕಂಡ ಅನುಮಾನಕ್ಕೆ ವ್ಯಭಿಚಾರವು ಬರುತ್ತದೆ. ಅಲ್ಲಿ ಪಥ್ಯತ್ವ ವಿಶಿಷ್ಟ ಭೋಜನತ್ವವನ್ನೇ ಹೇತುವನ್ನಾಗಿ ಹೇಳುತ್ತೇವೆ ಎಂದು ಹೇಳಲು ಸಾಧ್ಯವಿಲ್ಲ. ಮೊದಲು ಪ್ರವೃತ್ತಿಯಾಗಿ ತದುತ್ತರ ಕಾಲದಲ್ಲಿನ ಆರೋಗ್ಯರೂಪವಾದ ಫಲವು ಕಂಡಮೇಲೆ ಮಾತ್ರ ಪಥ್ಯತ್ವವು ಗೊತ್ತಾಗುವುದರಿಂದ ಅದಕ್ಕೆ ಪೂರ್ವದಲ್ಲಿ ಪಥ್ಯತ್ವದ ನಿಶ್ಚಯವು ಉಂಟಾಗುವಂತಿಲ್ಲ. "ವಿಮತಂ ಭೋಜನಂ - ಇಷ್ಟಸಾಧನಂ - ಭೋಜನ ತ್ವಾತ್" ಎಂಬ ಅನುಮಾನವೇ ಅಪ್ರಮಾಣವೆನ್ನುವಂತಿಲ್ಲ. ಹಾಗಿದ್ದ ಪಕ್ಷದಲ್ಲಿ ಪ್ರೇಕ್ಷಾವಂತರಿಗೆ ಭೋಜನಾದಿಗಳಲ್ಲಿ ನಿಃಶಂಕ ಪ್ರವೃತ್ತಿಯೇ ಆಗದಂತಾಗಿ ನಿಶ್ಶಂಕ ವ್ಯವಹಾರವೇ ಅನುಪಪನ್ನವಾದೀತು. ಆದಕಾರಣ ನಿರುಪಾಧಿಕವಾದ, ಸ್ವಾರಸಿಕವಾದ ವ್ಯಭಿಚಾರವೇ ದೂಷಕಾಂಗವು. ಅಸಾಧನತ್ವದಲ್ಲಿ ಹೇತುವು. ಸೋಪಾಧಿಕವಾದ ವ್ಯಭಿಚಾರವು ದೂಷಕಾಂಗವಾಗಲಾರದು. ಇದನ್ನು ಹಿಂದೆಯೇ ವಿವರಿಸಿದ್ದೇವೆ.

**ಶಂಕಾ** :- "ನ ಹಿಂಸ್ಯಾತ್ ಸರ್ವಾ ಭೂತಾನಿ" ಎಂಬುದಾಗಿರುವ ಸಾಮಾನ್ಯನಿಯಮವು ಹಿಂಸಾತ್ವಾದಿ ಜಾತಿವಿಷಯ ವಾಗಿದೆ. ಇದು ಉತ್ಸರ್ಗವು. ಇದಕ್ಕೆ ಅಗ್ನೀಷೋಮೀಯಾದಿ ಅಪವಾದವು ವ್ಯಕ್ತಿವಿಶೇಷವಿಷಯವಾಗಿದೆ. ಆದರೆ ಸಿದ್ಧಾಂತ ದಲ್ಲಿ "ಕುತೋ ಭಸ್ಮತ್ವಮಾಪ್ತಸ್ಯ ನರತ್ವಂ ಪುನರಿಷ್ಯತೇ" ಇತ್ಯಾದಿಗ್ರಂಥದಲ್ಲಿ ಅನುಗತ ಜಾತಿಯನ್ನು ನಿರಾಕರಿಸಿರುತ್ತಾರೆ. ಆದಕಾರಣ ಈ ಸಂದರ್ಭದಲ್ಲಿ ಉತ್ಸರ್ಗಾಪವಾದನ್ಯಾಯಕ್ಕೆ ಅವಕಾಶವು ಹೇಗೆ? ಎಂಬ ಶಂಕೆಯು ಉಂಟಾಗುವುದು.

**ಸಮಾಧಾನ** :- ವೈಶೇಷಿಕನಯದಲ್ಲಿ ಅನುವ್ಯಾಖ್ಯಾನದಲ್ಲಿ "ಅನುಗತಜಾತಿಯು ಇಲ್ಲದಿದ್ದಾಗ್ಯೂ ಸಾದೃಶ್ಯವನ್ನು ಇಟ್ಟುಕೊಂಡು ಉತ್ಸರ್ಗಾಪವಾದನ್ಯಾಯಕ್ಕೆ ಅವಕಾಶವುಂಟೆಂಬುದಾಗಿ ಸಾಧಿಸಿರುವರು.

**ಶಂಕಾ** :- ಸಿದ್ಧಾಂತದಲ್ಲಿ ಪರಬ್ರಹ್ಮನಿಗೆ ಜಗಜ್ಜನ್ಮಾದಿಕಾರಣತ್ವವನ್ನು ಲಕ್ಷಣಸೂತ್ರದಲ್ಲಿ ಲಕ್ಷಣವನ್ನಾಗಿ ಹೇಳಿದ್ದಾರೆ. ಲಕ್ಷಣಸೂತ್ರವಾದ "ಓಂ ಜನ್ಮಾದ್ಯಸ್ಯ ಯತಃ ಓಂ" ಎಂಬ ಸೂತ್ರದಲ್ಲಿ "ಲಕ್ಷ್ಯಲಕ್ಷಣಯೋರ್ಭೇದೋ ಅಭೇದೋ ವಾ ಯದಿ ವಾ ಉಭಯಮ್" ಇತ್ಯಾದಿಯಾಗಿ ಲಕ್ಷ್ಯಕ್ಕೂ ಲಕ್ಷಣಕ್ಕೂ, ಭೇದವೋ, ಅಭೇದವೋ ಅಥವಾ ಭೇದಾಭೇದವೋ ಎಂದು ಶಂಕಿಸಿ "ಅತೋऽಸ ಅನಂತಗುಣಂ ಬ್ರಹ್ಮಸ್ವಭೇದಮಪಿ ಭಣ್ಯತೇ" ಎಂಬ ಗ್ರಂಥದಿಂದ ಅನುವ್ಯಾಖ್ಯಾನಕಾರರು ಸವಿಶೇಷಾಭೇದದಿಂದ ನಿರ್ವಾಹ ಮಾಡಿರುವರು. ಈ ಸಂದರ್ಭದಲ್ಲಿ ಪೂರ್ವಪಕ್ಷಿಗಳ ಅಭಿಪ್ರಾಯವು ಈ ರೀತಿ ಇದೆ. ಅದರ ವಿವರಣೆ:-

ಲಕ್ಷಣವು ಲಕ್ಷ್ಯನಾದ ಬ್ರಹ್ಮನಿಗಿಂತಲೂ ಅಭಿನ್ನವೆಂದು ಪ್ರತಿಪಾದಿಸಿರುವರು ಇದು ಹೇಗೆ ? ಎಂಬ ಶಂಕಿಸುವವರ ಅಭಿಪ್ರಾಯವು ಈ ರೀತಿ ಇದೆ.

ಪರಬ್ರಹ್ಮನಿಗೆ ಲಕ್ಷಣವನ್ನಾಗಿ ಹೇಳುವ ಜಗಜ್ಜನ್ಮಾದಿಕಾರಣತ್ವವೇ ಮೊದಲಾದ ಧರ್ಮಗಳಿಗೂ, ಅದಕ್ಕೆ ಲಕ್ಷ್ಯನಾದ ಬ್ರಹ್ಮನಿಗೂ -

೧. ಭೇದವೋ - ಅನ್ಯತ್ವವೋ,

೨. ಅಭೇದವೋ - ಅಭಿನ್ನತ್ವವೋ

೩. ಭೇದಾಭೇದವೋ - ಭಿನ್ನ ಅಭಿನ್ನತ್ವವೋ

ಎಂದು ಶಂಕಿಸುವವನ ಪ್ರಶ್ನೆಯಾಗಿದೆ.

ಆ ಧರ್ಮಗಳಿಗೂ ಧರ್ಮಿಯಾದ ಪರಬ್ರಹ್ಮನಿಗೂ ಭೇದವನ್ನು ಹೇಳಲು ಬರುವುದಿಲ್ಲ. ಅನ್ಯತ್ವವನ್ನು (ಭಿನ್ನತ್ವವನ್ನು) ಹೇಳಿದರೆ ಅತ್ಯಂತಭಿನ್ನವಾದ ಮೇರುಮಂದರಗಳಂತೆ ಲಕ್ಷ್ಯಲಕ್ಷಣಭಾವವಾಗಲಿ ಗುಣಗುಣಿಭಾವವಾಗಲಿ ಅನುಪಪನ್ನವಾಗುತ್ತದೆ. ಮತ್ತು ಅನ್ಯತ್ವಪಕ್ಷದಲ್ಲಿ ಸಂಬಂಧಕ್ಕೂ ಸಂಬಂಧಿಗಳಿಗೂ ಮತ್ತೊಂದು ಸಂಬಂಧ, ಆ ಸಂಬಂಧಕ್ಕೂ ಸಂಬಂಧಿಗಳಿಗೂ ಮತ್ತೊಂದು ಸಂಬಂಧ, ಹೀಗೆ ಸಂಬಂಧಪರಂಪರೆಯ ಕಲ್ಪನೆಯಿಂದ ಅನವಸ್ಥಾದೋಷವು ಉಂಟಾಗುವುದು.

ಅಭಿನ್ನತ್ವವನ್ನು ಹೇಳಿದರೆ ಅನೇಕ ಧರ್ಮಗಳಿಂದ ಅಭಿನ್ನನಾದ ಪರಬ್ರಹ್ಮನಿಗೂ ಅಂದರೆ ಜಗಜ್ಜನ್ಮಕಾರಣತ್ವ, ಜಗತ್ತಿನ ಸ್ಥಿತಿಕಾರಣತ್ವ, ಜಗತ್ತಿನ ಸಂಹಾರಕಾರಣತ್ವವೇ ಮೊದಲಾದ ಅನೇಕಧರ್ಮಗಳಿಂದ ಅಭಿನ್ನನಾದ ಪರಬ್ರಹ್ಮನಿಗೆ ಅನೇಕತ್ವವು ಬರಬೇಕಾದೀತು. ಇದರಿಂದ "ಏಕಮೇವಾದ್ವಿತೀಯಂ" ಎಂಬುದಾಗಿ ಬ್ರಹ್ಮನಿಗೆ ಏಕತ್ವವನ್ನು ತಿಳಿಸುವ ಶ್ರುತಿಗೆ ವಿರೋಧವು ಬರುತ್ತದೆ.

ಅಥವಾ ಏಕಬ್ರಹ್ಮಾಭಿನ್ನಗಳಾದ ಎಲ್ಲಾ ಧರ್ಮಗಳಿಗೂ ಏಕತ್ವವಾದರೂ ಎಲ್ಲಾ ಲಕ್ಷಣಗಳಿಗೂ ಏಕತ್ವವಾದರೂ ಬರಬೇಕಾಗುತ್ತದೆ. ಇದರಿಂದ "ಯತೋ ವಾ ಇಮಾನಿ ಭೂತಾನಿ ಜಾಯಂತೆ ಯೇನ ಜಾತಾನಿ ಜೀವಂತಿ" ಇತ್ಯಾದಿಯಾಗಿ ಅಭಿನ್ನವಾದ ಧರ್ಮವನ್ನು ಮತ್ತೆ ಮತ್ತೆ ಶ್ರುತಿವಾಕ್ಯವು ತಿಳಿಸುವುದರಿಂದ ಆ ಶ್ರುತಿಗೆ ಪುನರುಕ್ತಿ ದೋಷವೂ ಪ್ರಾಪ್ತವಾಗುತ್ತದೆ.

ಮತ್ತು ಲಕ್ಷ್ಯಲಕ್ಷಣಭಾವವೇ ಅಭೇದಪಕ್ಷದಲ್ಲಿ ಕೂಡುವುದಿಲ್ಲ. ಹಾಗೆಯೇ ಭಿನ್ನತ್ವಪಕ್ಷದಲ್ಲಿ ಗುಣಗುಣಿಭಾವಕ್ಕೆ ಅವಕಾಶವಿಲ್ಲ. ಶಾಸ್ತ್ರದಲ್ಲಿ ಪ್ರಸಿದ್ಧವಾದ ಲಕ್ಷಣದಿಂದ ಅಪ್ರಸಿದ್ಧವಾದುದಕ್ಕೆ ಪರಿಚಯವನ್ನು ಹೇಳಬೇಕು. ಎರಡೂ ಒಂದೇ ಆದರೆ ಅಭಿನ್ನವಾದ ಎರಡೂ ಪ್ರಸಿದ್ಧವಾಗಿರಬೇಕು. ಅಥವಾ ಅಪ್ರಸಿದ್ಧವಾಗಿರಬೇಕು.

ಮತ್ತು ಗುಣವೇ ಬೇರೆ, ಗುಣಿಯೇ ಬೇರೆ, ಗುಣದ ಸಂಬಂಧದಿಂದ ಮತ್ತೊಂದು ಗುಣ ಎಂದೆನಿಸಿಕೊಳ್ಳುತ್ತದೆ. ಎರಡೂ ಅಭಿನ್ನವಾದರೆ ತನ್ನಿಂದಲೇ ತಾನು ಅದನ್ನುಳ್ಳವನೆಂದು ಎನಿಸುವುದಿಲ್ಲ.

ಮೂರನೇದಾದ ಭಿನ್ನಾಭಿನ್ನಪಕ್ಷವಂತೂ" ಪರಸ್ಪರ ವಿರುದ್ಧವಾಗಿರುವ ಕಾರಣ ಕೂಡುವುದಿಲ್ಲವೆಂದು ವಿಕಲ್ಪಿಸಿ, ಮಾಯಾವಾದಿಗಳು ಜಗಜ್ಜನ್ಮಾದಿಕಾರಣತ್ವವೆಂಬುದೇ ಮೊದಲಾದ ಬ್ರಹ್ಮನ ಲಕ್ಷಣಕ್ಕೆ ತಟಸ್ಥ (ಸ್ವರೂಪಬಹಿರ್ಭೂತ) ಲಕ್ಷಣತ್ವವನ್ನು ನಿರೂಪಿಸಿರುವರು.

ಯಾವುದು ಮಿಥ್ಯಾಭೂತವಾದ ಜಗತ್ತಿಗೆ ಕಾರಣತ್ವೇನ ಉಪಲಕ್ಷಿತವೋ ವಿಚಾರ ಮಾಡಲಾಗಿ ಅದು ಬ್ರಹ್ಮವೇ ಆಗಿದೆ ಎಂಬ ಅರ್ಥವನ್ನು ಅಂಗೀಕರಿಸಿರುವುದರಿಂದ, ಆ ತಟಸ್ಥಲಕ್ಷಣವೂ ಸಹ ಮಿಥ್ಯಾಭೂತವಾಗಿರುವ ಪ್ರಯುಕ್ತ ಬ್ರಹ್ಮನ ಅದ್ವಿತೀಯತ್ವಕ್ಕೆ ಯಾವ ಚ್ಯುತಿಯೂ ಇಲ್ಲವೆಂದು ಅದ್ವೈತಿಗಳ ಅಭಿಪ್ರಾಯ.

ಮತ್ತು ಯಾವುದು ರಜತವೆಂದು ಪ್ರತಿಭಾಸವಾಗಿತ್ತೊ ವಿಚಾರ ಮಾಡಲಾಗಿ ಅದು ಶುಕ್ತಿಯೇ ಎಂಬಂತೆ ಮಿಥ್ಯಾಭೂತವಾದ ಪ್ರಪಂಚಕಾರಣತ್ವೇನ ಉಪಲಕ್ಷಣವು ಸಂಭವಿಸುತ್ತದೆಯೆಂದು ಐಕ್ಯವಾದಿಗಳ ನಿಗೂಢವಾದ ಅಭಿಪ್ರಾಯ.

ಇದನ್ನು ಖಂಡತುಂಡವಾಗಿ ನಿರಾಕರಿಸಲಾಗಿದೆ. ಜನ್ಮಾಧಿಕರಣದ ವಿಶೇಷವಾಕ್ಯಾರ್ಥಗಳ ನಿರೂಪಣೆಯಲ್ಲಿ ವಿಸ್ತಾರವಾಗಿ ತಟಸ್ಥಲಕ್ಷಣವಾದದನ್ನು ನಿರಾಕರಿಸುತ್ತೇವೆ.

ಈ ರೀತಿ ಭೇದವಾದಿಗಳಾಗ ದ್ವೈತಸಿದ್ಧಾಂತಿಗಳ ಲಕ್ಷಣವನ್ನು ದೂಷಿಸಲು ಪ್ರವೃತ್ತರಾಗಿರುವ ಐಕ್ಯವಾದಿಗಳ ಪಕ್ಷದಲ್ಲಿ ಐಕ್ಯದ ನಿರೂಪಣದ ಪ್ರಕಾರವೇ ಕೂಡುವುದಿಲ್ಲ.

ನಾವು ಪರಬ್ರಹ್ಮನ ಲಕ್ಷಣಗಳಾದ ಜಗಜ್ಜನ್ಮಾದಿಕಾರಣತ್ವರೂಪಗಳಾದ ಧರ್ಮಗಳಿಗೂ ಪರಬ್ರಹ್ಮನಿಗೂ ಭೇದವೇ ಇಲ್ಲದಿದ್ದಾಗ್ಯೂ, ಅಂತಹ ಭೇದಕ್ಕೆ ಪ್ರತಿನಿಧಿಯಾದ ವಿಶೇಷವನ್ನು ಒಪ್ಪಿರುವುದರಿಂದ, ವಿಶೇಷದ ಬಲದಿಂದ ಎಲ್ಲವೂ ಕೂಡುತ್ತದೆ.

ಐಕ್ಯವಾದಿಗಳ ಪ್ರಕಾರ ತತ್ವಪ್ರತಿಪಾದಕಗಳಾದ ವಾಕ್ಯಗಳು ಮಹಾವಾಕ್ಯವೆಂದೂ, ಅವಾಂತರ ವಾಕ್ಯವೆಂದು ಎರಡು ಬಗೆಯಾಗಿವೆ.

ಅವುಗಳಲ್ಲಿ ಜೀವಬ್ರಹ್ಮರ ಐಕ್ಯಪರವಾದ ''ತತ್ತ್ವಮಸಿ'' ಮೊದಲಾದುವು ಮಹಾವಾಕ್ಯಗಳು. ಮತ್ತೊಂದು ಬ್ರಹ್ಮಸ್ವರೂಪಪರವಾದ ''ಸತ್ಯಂ ಜ್ಞಾನಂ ಅನಂತಂ ಬ್ರಹ್ಮ'' ಎಂಬುದು ಅವಾಂತರವಾಕ್ಯವು.

ಈ ಎರಡೂ ವಾಕ್ಯಗಳೂ ಕೂಡ ಸವಿಶೇಷಾಭಿನ್ನವಸ್ತುನಿಷ್ಠವೆಂದೇ ಮಾಯಾವಾದಿಗಳು ಹೇಳಿಯೇ ತೀರಬೇಕು. ಹಾಗೆ ವಿಶೇಷವನ್ನು ಒಪ್ಪಿ ಹೇಳದಿದ್ದರೆ ಬೇರೆ ಗತಿಯೇ ಇಲ್ಲ.

ಅದು ಹೇಗೆಂದರೆ :

ತತ್ತ್ವಮಸಿ ಎಂಬುದೇ ಮೊದಲಾದ ವೇದವಾಕ್ಯಪ್ರತಿಪಾದ್ಯವಾದ ಜೀವಬ್ರಹ್ಮರ ಐಕ್ಯವು.

''ತತ್'' ಎಂಬ ಪದದಿಂದ ಲಕ್ಷಿತನಾದ ಚೈತನ್ಯದಿಂದ

೧. ಅಭಿನ್ನವೋ ೨. ಭಿನ್ನವೋ ೩. ಭಿನ್ನಾಭಿನ್ನವೋ

ಈ ಮೂರರಲ್ಲಿ ಯಾವುದಾದರೂ ಒಂದು ಕಲ್ಪವನ್ನು ಹೇಳಿಯೇತೀರಬೇಕು.

೧. ಅಭಿನ್ನ ಎಂಬ ಪಕ್ಷದಲ್ಲಿ - ಚೈತನ್ಯಸ್ವರೂಪವು ಸ್ವಪ್ರಕಾಶವಾಗಿ ಸಿದ್ಧವಾಗಿದೆ. (ಅಜ್ಞಾತೇ ಶಾಸ್ತ್ರಂ ಅರ್ಥವತ್) ಸ್ವಪ್ರಕಾಶವಾದುದಕ್ಕೆ ಶಾಸ್ತ್ರಪ್ರತಿಪಾದ್ಯತ್ವವೇ ಕೂಡುವುದಿಲ್ಲ. ಮಾಯಾವಾದಿಗಳು ಅವೇದ್ಯತ್ವೇ ಸತಿ ಅಪರೋಕ್ಷವ್ಯವಹಾರ ಯೋಗ್ಯತ್ವಂ ಸ್ವಪ್ರಕಾಶತ್ವಂ'' ಎಂದು ಒಪ್ಪಿದ್ದಾರೆ.

ಸ್ವಪ್ರಕಾಶ ಚೈತನ್ಯಾತ್ಮಕ ಎಂದು ಹೇಳೋಣವೂ ಶಾಸ್ತ್ರ ಪ್ರತಿಪಾದ್ಯವೆಂಬೋಣವೂ ಸ್ವವ್ಯಾಹತವಾಗಿದೆ.

ಶಾಸ್ತ್ರವು ಐಕ್ಯವನ್ನು ಪ್ರತಿಪಾದಿಸುವುದಿಲ್ಲ. ಮತ್ತೇನೆಂದರೆ ಭೇದಭ್ರಮವನ್ನು ನಿರಾಕರಿಸುತ್ತದೆಯೆಂದು ಅವರು ಹೇಳಬಹುದು.

''ಸಿದ್ಧಂತು ನಿವರ್ತಕತ್ವಾತ್'' ಎಂದು ಅವರ ಮತವಾಗಿದೆ.

ಆ ವಾಕ್ಯದ ಅಭಿಪ್ರಾಯ:

ಐಕ್ಯಕ್ಕೆ ಸ್ವಪ್ರಕಾಶಾತ್ಮಸ್ವರೂಪತ್ವವಿರುವುದರಿಂದ, ಅದಕ್ಕೆ ಸದಾಪ್ರಕಾಶಮಾನತ್ವವು ಇದ್ದಾಗ್ಯೂ, ಶಾಸ್ತ್ರಕ್ಕೆ ಉಪಾದೇಯತ್ವವು ಸಿದ್ಧವೇ ಆಗಿದೆ. ಶಾಸ್ತ್ರಕ್ಕೆ ಭೇದಭ್ರಮ ನಿವರ್ತಕತ್ವವಿರುವುದರಿಂದ ಅರ್ಥವತ್ವವೂ, ಆರಂಭಣೀಯತ್ವವೂ ಸಂಗತವಾಗುತ್ತದೆ. ಆದ್ದರಿಂದಲೇ ಉಪಾದೇಯತ್ವವೂ ಕೂಡುತ್ತದೆಯೆಂದು ಐಕ್ಯವಾದಿಗಳು ವಾದಿಸಬಹುದು.

ಐಕ್ಯವಾದಿಗಳ ಈ ಮೇಲೆ ಕಂಡ ಸಮಾಧಾನವೂ ಕೂಡುವುದಿಲ್ಲ.

ಐಕ್ಯವು ಸ್ವಪ್ರಕಾಶವಾದರೆ - ಭೇದಭ್ರಮಕ್ಕೆ ಅವಕಾಶವೇ ಇಲ್ಲ.

ತತ್ವಜ್ಞಾನವಾಗದಿದ್ದರೆ ಮಾತ್ರ ಭೇದಭ್ರಮ ಬರಬಹುದು. ಅಂದರೆ ಚೈತನ್ಯ ಪ್ರತಿಪತ್ತಿ ಇಲ್ಲವಾದರೆ ತಾನೇ ಭೇದಭ್ರಮಕ್ಕೆ ಪ್ರಸಕ್ತಿಯು. ಸ್ವಪ್ರಕಾಶಾತ್ಮಕ ಚೈತನ್ಯಾತ್ಮಕ ಐಕ್ಯವು ಸ್ವಪ್ರಕಾಶವೇ ಆಗಿರುವಾಗ ಭೇದಭ್ರಮವೆಲ್ಲಿಂದಬಂದೀತು.

ಒಂದುವೇಳೆ ಐಕ್ಯವಾದಿಗಳು - ಚೈತನ್ಯಸ್ವರೂಪಾಂಶದಲ್ಲಿ ಅವಿದ್ಯಾವರಣವು ಇರುವುದಿಲ್ಲ. ಐಕ್ಯಾಂಶದಲ್ಲಿ ಮಾತ್ರ ಅವಿದ್ಯಾವರಣವು ಇದೆ.

ಆದ್ದರಿಂದ ಭೇದಭ್ರಮಕ್ಕೆ ಅವಕಾಶವುಂಟೆಂದು ಹೇಳಬಹುದು. ಈ ಸಮಾಧಾನವೂ ಸಹ ಸಂಗತವಲ್ಲ. ಸ್ವಪ್ರಕಾಶ ಚೈತನ್ಯವು ಐಕ್ಯವಾದಿಗಳ ಮತದಲ್ಲಿ ಅಖಂಡ, ಅಖಂಡಸ್ವಪ್ರಕಾಶಚೈತನ್ಯಾತ್ಮಕವಾದ ಐಕ್ಯವೂ ಸಹ ಅಖಂಡವೇ ಆಗಿದೆ. ಹೀಗಿರುವಾಗ ಅಖಂಡದಲ್ಲಿ (ನಿರಂಶದಲ್ಲಿ) ಅಂಶತಃ ಅವಿದ್ಯಾವರಣವೇ ಕೂಡುವುದಿಲ್ಲ.

ನಿರಂಶಸ್ವಪ್ರಕಾಶಚೈತನ್ಯಾತ್ಮಕವಾದ ಐಕ್ಯಕ್ಕೆ ಸ್ವಪ್ರಕಾಶತ್ವವಿದ್ದಾಗ್ಯೂ ಭೇದಭ್ರಮಕ್ಕೆ ನಿರಾಸವಿಲ್ಲದೆ, ಭೇದಭ್ರಮ ಉಳಿಯುವುದಾದರೆ, ಅದು ಶಾಶ್ವತವಾಗಿಯೇ ಇರಬೇಕಾದೀತು. ಅದರ ನಿರಾಸಕ್ಕಾಗಿ ಹೊರಟ ಶಾಸ್ತ್ರವೇ ನಿರರ್ಥಕವಾದೀತು.

ಅಖಂಡಚೈತನ್ಯಾತ್ಮಕವಾದರೂ ನಿರಂಶವಾದರೂ ಐಕ್ಯಕ್ಕೆ ಅನನುಭಾಸವನ್ನು ಉಂಟುಮಾಡುವ ಅವಿದ್ಯೆಯು ಅಸಂಭವನೀಯಾವಭಾಸಚತುರಾ ಎಂದು ಒಪ್ಪಿದರೆ, ಅಸಂಭಾವಿತವಾದುದನ್ನು ಅವಿದ್ಯೆಯಿಂದ ಸಂಭಾವಿತವಾಗಿ ಸಾಹಸದಿಂದ ಹೇಳಿದರೆ, ಅಂತಹ ಅವಿದ್ಯೆಯನ್ನು "ಜಡದಲ್ಲೇ ಪಕ್ಷಕ್ಕೆ ಹೇಳಬಾರದು" "ಸಾ ನ ಜಹೇಷು" ಎಂದು ಐಕ್ಯವಾದಿಗಳು ಜಡದಲ್ಲಿ ಅವಿದ್ಯೆಯನ್ನು ಪಕ್ಷಕ್ಕೆ ಒಪ್ಪಿಲ್ಲ. ಈ ದೂಷಣಗಳು ವಜ್ರಲೇಪವಾಗಿವೆ. ಇದಕ್ಕೆ ಐಕ್ಯವಾದಿಗಳ ಮತ್ತು ಮತದಲ್ಲಿ ಉತ್ತರವೇ ಇಲ್ಲ.

ಶಾಸ್ತ್ರ ಪ್ರತಿಪಾದ್ಯವೆಂದು ಹೇಳಿದರೂ ಸಹ ತತ್, ತ್ವಂ, ಅಸಿ, ಎಂಬಲ್ಲಿ ತತ್ ಎಂಬ ಪದದಿಂದಲೇ ಬೋಧ್ಯನಾದ ಚೈತನ್ಯಸ್ವರೂಪವಾಗಿರುವ ಐಕ್ಯವು ತತ್ ಎಂಬ ಪದದಿಂದಲೇ ಬೋಧ್ಯವಾಗಿರುವಾಗ "ತ್ವಮಸಿ" ಎಂಬ ವೇದದಲ್ಲಿನ ಎರಡು ಪದಗಳೇ ವ್ಯರ್ಥವಾಗುತ್ತವೆ.

"ತತ್" ಎಂಬ ಭಾಗದಿಂದ ಮಾತ್ರ ಭೇದಭ್ರಮದ ನಿವೃತ್ತಿಯಾಗುವುದಿಲ್ಲ. ಅದಕ್ಕಾಗಿ "ತ್ವಮಸಿ" ಎಂಬ ಭಾಗವು ಸಾರ್ಥಕವೆಂಬ ಸಮಾಧಾನವೂ ಸಂಗತವಾಗಿಲ್ಲ.

"ತತ್" ಎಂಬ ಪದದಿಂದ ಸ್ವಪ್ರಕಾಶನಿರಂಶಚೈತನ್ಯಾಭಿನ್ನವಾದ ಐಕ್ಯವು ತೋರಿದ ಮೇಲೆ, (ಪ್ರತೀತವಾದ ತರುವಾಯ) ಭೇದಭ್ರಮವು ನಾಶವಾಗಿರುವುದರಿಂದ, ಅದಕ್ಕಾಗಿ "ತ್ವಮಸಿ" ಎಂಬ ಭಾಗವೇ ವ್ಯರ್ಥವಾಗುತ್ತದೆ.

ಸ್ವಪ್ರಕಾಶ ಐಕ್ಯವು ಪ್ರತೀತವಾದರೂ ಭೇದಭ್ರಮವು ಉಳಿಯುವುದಾದರೆ ಅದು ಎಂದೆಂದಿಗೂ ಶಾಶ್ವತವಾಗಿಯೇ ಇರಬೇಕಾದೀತು. "ತತ್" ಎಂಬ ಪದದಿಂದ ಐಕ್ಯವು ತೋರದಿದ್ದರೆ ಅಂದರೆ "ತತ್" ಎಂಬ ಪದಕ್ಕೆ ಐಕ್ಯ ಪ್ರತಿಪಾದಕತ್ವವು ಇಲ್ಲವಾದರೆ ತತ್ ಪದದಿಂದ ಉಪಲಕ್ಷಿತವಾದ ಚೈತನ್ಯಾತ್ಮಕತ್ವವೂ ಇಲ್ಲದೇಹೋದೀತು.

"ಸೋಽಯಂ ದೇವದತ್ತಃ" ಎಂಬಲ್ಲಿಯೂ ಸಹ "ಸೋಽಯಂ" ಎಂಬ ವಾಕ್ಯಬೋಧ್ಯವಾದ ಅಭೇದ ಸ್ಥಳದಲ್ಲಿಯೂ ಸಹ ಐಕ್ಯಕ್ಕೂ ಚಿಂತಕ್ಕೂ ಸವಿಶೇಷಾಭೇದವನ್ನು ಒಪ್ಪದಿದ್ದರೆ ಅನುಪಪತ್ತಿಯು ಬಂದೇ ಬರುತ್ತದೆ.

ವೇದಾಂತ ವಾಕ್ಯ ಪ್ರತಿಪಾದ್ಯವಾದ ಐಕ್ಯವು ಸ್ವಪ್ರಕಾಶನಿರಂಶಶುದ್ಧ ಚೈತನ್ಯಕ್ಕಿಂತಲೂ ಭಿನ್ನ ಎಂಬ ಪಕ್ಷವೂ ದೋಷದುಷ್ಟವಾಗಿದೆ.

ಐಕ್ಯಕ್ಕೆ ಚೈತನ್ಯಸ್ವರೂಪಕ್ಕಿಂತಲೂ ಭಿನ್ನ ಎಂದು ಹೇಳಿದರೆ ಅಪಸಿದ್ಧಾಂತದೋಷಗ್ರಸ್ತವಾಗುತ್ತದೆ. ಪ್ರಾಚೀನರಾದ ಅದ್ವೈತಿಗಳು ಐಕ್ಯವನ್ನು ಚೈತನ್ಯಸ್ವರೂಪವೆಂದು ಒಪ್ಪಿರುವುದರಿಂದ ಅದಕ್ಕೆ ವಿರುದ್ಧವಾಗಿ ಹೇಳಿದರೆ ಅಪಸಿದ್ಧಾಂತವು ವಜ್ರಲೇಪವಾಗುತ್ತದೆ.

ಮತ್ತು ತತ್ತ್ವಮಸ್ಯಾದಿ ವಾಕ್ಯಗಳು ಅಖಂಡಚಿನ್ಮಾತ್ರಪರವೆಂದು ಅಖಂಡಾರ್ಥನಿಷ್ಠವೆಂದು ಮಾಯಾವಾದಿಗಳು ಒಪ್ಪಿರುತ್ತಾರೆ.

ಮತ್ತು ಶುದ್ಧಚೈತನ್ಯಕ್ಕಿಂತಲೂ ಐಕ್ಯವು ಭಿನ್ನವಾದುದು ಎಂದರೆ "ಬ್ರಹ್ಮಸತ್ಯಂ ಜಗನ್ಮಿಥ್ಯಾ" ಎಂಬ ಅವರ ಮತದ ಪ್ರಕಾರ ಸತ್ಯಸ್ವರೂಪಬ್ರಹ್ಮವ್ಯತಿರಿಕ್ತವಾದುದೆಲ್ಲವೂ ಮಿಥ್ಯಾ (ಸುಳ್ಳು) ಆದುದರಿಂದ ಚೈತನ್ಯಭಿನ್ನವಾದ ಐಕ್ಯವೂ ಸಹ ಮಿಥ್ಯಾ ಆಗಬೇಕಾದೀತು. ಅಂತಹ ಮಿಥ್ಯಾಭೂತವಾದುದು ಶಾಸ್ತ್ರಜ್ಞೇಯವಾಗಲಾರದು.

ಶುದ್ಧಚೈತನ್ಯಭಿನ್ನವಾದ ಐಕ್ಯವು ಸತ್ಯವಾದುದೆಂದು ಒಪ್ಪಿದರೆ ಸತ್ಯವಾದ ಚೈತನ್ಯವು ಒಂದು, ಅದಕ್ಕಿಂತಲೂ ಭಿನ್ನವಾದ ಐಕ್ಯವೂ ಒಂದು ಸತ್ಯವಾದುದು, ಒಟ್ಟಿನಲ್ಲಿ ಎರಡು ಸತ್ಯ ಪದಾರ್ಥಗಳನ್ನು ಒಪ್ಪಬೇಕಾಗಿ ಬರುವುದರಿಂದ "ಅದ್ವೈತವೆಂಬ" ಅವರ ಪ್ರಕ್ರಿಯೆಗೆ ಭಂಗವೇ ಬರುವುದು.

ಮತ್ತು ಜೀವಬ್ರಹ್ಮರ ಐಕ್ಯವು ಮಿಥ್ಯಾ ಎಂಬ ಪಕ್ಷದಲ್ಲಿ ಪರಸ್ಪರ ವಿರುದ್ಧಗಳಾದವುಗಳಲ್ಲಿ ಒಂದು ಮಿಥ್ಯಾ ಆದರೆ ಅದಕ್ಕೆ ವಿರುದ್ಧವಾದುದು ಸತ್ಯವೇ ಆಗಬೇಕು. ಆದರಂತೆ ಜೀವಬ್ರಹ್ಮರ ಐಕ್ಯವು ಮಿಥ್ಯಾ ಆದರೆ ಅವರಿಬ್ಬರ ಭೇದವು ಸತ್ಯವಾಗುವುದು.

"ಯಯೋಃ ಐಕ್ಯಂ ಮಿಥ್ಯಾ ತಯೋಃ ಭೇದಃ ಸತ್ಯಃ" ಎಂಬುದಾಗಿ ವ್ಯಾಪ್ತಿಯು ಪ್ರಸಿದ್ಧವಾಗಿರುವುದರಿಂದ ಐಕ್ಯವು ಮಿಥ್ಯಾ ಆದರೆ ಭೇದವು ಸತ್ಯವಾಗಬೇಕು. ಅಂದರೆ ಜೀವಬ್ರಹ್ಮರ ಐಕ್ಯವು ಮಿಥ್ಯಾ ಆದರೆ ಜೀವಬ್ರಹ್ಮರ ಭೇದವು ಸತ್ಯವಾಗಬೇಕು.

ಈ ಸಂದರ್ಭದಲ್ಲಿ ಮಾಯಾವಾದಿಗಳು, ನಾವು ಎಲ್ಲೂ ಸಹ ಸತ್ಯವಾದ ಭೇದವನ್ನೇ ಒಪ್ಪಿಲ್ಲ. ಆದಕಾರಣ ನೀವು, ಹೇಳುವ (ಸಿದ್ಧಾಂತಿಗಳು ಹೇಳುವ) ರೀತಿಯಿಂದ ವ್ಯಾಪ್ತಿಯು ಹೇಗೆ? ನಮ್ಮ ರೀತಿಯಿಂದ ಸಂಗತವಾದೀತು ಎಂದು ಶಂಕಿಸಬಹುದು.

ಈ ಶಂಕೆಗೆ ಪತ್ಯ ಉತ್ತರವು ಹೀಗಿದೆ.

"ಪರಸ್ಪರ ವಿರೋಧೇತು ನ ಪ್ರಕಾರಾಂತರ ಸ್ಥಿತಿಃ" ಎಂಬ ನ್ಯಾಯವನ್ನು ದರ್ಶನಾಚಾರ್ಯರೆಲ್ಲರೂ ಒಪ್ಪಿದ್ದಾರೆ.

ಇದರ ಅಭಿಪ್ರಾಯವು ಈ ರೀತಿ ಇದೆ: ಪರಸ್ಪರ ವಿರುದ್ಧಗಳ ಪೈಕಿ ಅನ್ಯತರ ಸ್ಥಿತಿಯ ಹೊರತಾಗಿ ಪ್ರಕಾರಾಂತರದಿಂದ ಸ್ಥಿತಿಯು ಇರುವುದಿಲ್ಲ.

"ಯಾವುದಕ್ಕೆ ಸ್ವರೂಪದಿಂದಲೇ ಸತ್ವವು ಇಲ್ಲವೋ ಅಂದರೆ ಸ್ವರೂಪದಿಂದಲೇ ಮಿಥ್ಯಾನೋ ಅದಕ್ಕೆ ಮಿಥ್ಯಾತ್ವ ವಿರುದ್ಧವಾದ ಸತ್ಯತ್ವವು ಇರುತ್ತದೆ.

ಹೇಗೆಂದರೆ, ಪರಬ್ರಹ್ಮನಿಗೆ ಅನ್ಯತ್ವವು ಮಿಥ್ಯಾ ಆದರೆ ಸತ್ಯತ್ವವು ಸತ್ಯವಾಗಬೇಕೆಂಬ ಸಾಮಾನ್ಯವಾದ ವ್ಯಾಪ್ತಿಯನ್ನು ಆಶ್ರಯಿಸಿ ಪ್ರಕೃತದಲ್ಲಿ (ಐಕ್ಯವು) ಜೀವಬ್ರಹ್ಮರ ಐಕ್ಯವು ಮಿಥ್ಯಾ ಆದರೆ ಭೇದವು ಸತ್ಯವಾಗಬೇಕೆಂಬುದು ಸಿದ್ಧಾಂತವಾದ ಅಭಿಪ್ರಾಯವಾಗಿದೆ.

ಒಟ್ಟಿನಲ್ಲಿ ಜೀವಬ್ರಹ್ಮರ ಐಕ್ಯಕ್ಕೂ ಪರಬ್ರಹ್ಮನಿಗೂ ಭೇದವೂ ಹೇಳುವಂತಿಲ್ಲ. ಅಭೇದವನ್ನಂತೂ ಹೂಡಿಸಲಿಕ್ಕೆ ಬರುವುದೇ ಇಲ್ಲ.

ಭೇದಾಭೇದ ಪಕ್ಷವೂ ಸಹ ಸಂಗತವಾಗುವುದಿಲ್ಲ. ಅಂದರೆ ಜೀವಬ್ರಹ್ಮರ ಐಕ್ಯಕ್ಕೆ, ಚೈತನ್ಯಸ್ವರೂಪಕ್ಕಿಂತಲೂ ಭೇದಾಭೇದವನ್ನು ಒಪ್ಪುವುದಾದರೆ, ಆಗ ಈ ಕೆಳಗೆ ಕಂಡಂತೆ ವಿಕಲ್ಪಗಳು ಪ್ರಸಕ್ತವಾಗುತ್ತವೆ.

ಆ, ಭೇದಾಭೇದವು ೧. ಚೈತನ್ಯಕ್ಕಿಂತಲೂ ಅಭಿನ್ನವೋ
೨. ಭಿನ್ನವೋ
೩. ಭಿನ್ನಾಭಿನ್ನವೋ ಎಂದು ಕೇಳಬೇಕಾಗುತ್ತದೆ.

ಆ ಭೇದಾಭೇದವು ಚೈತನ್ಯಕ್ಕಿಂತಲೂ ಅಭಿನ್ನವಾದರೆ, ಭೇದ ಮತ್ತು ಅಭೇದಗಳೆಂಬ ಎರಡರಿಂದ ಅಭಿನ್ನವಾದ ಚೈತನ್ಯಕ್ಕೆ ದ್ವಿತ್ವವು ಬರಬೇಕು.

ಅಥವಾ ಏಕಚೈತನ್ಯಾಭಿನ್ನವಾದ ಭೇದಾಭೇದಗಳಿಗೆ ಏಕತ್ವವಾದರೂ ಉಂಟಾಗಬೇಕಾದೀತು.

ಇನ್ನು ಭೇದಪಕ್ಷದಲ್ಲಿಯೂ, ಮತ್ತೆ ಭೇದಾಭೇದ ಪಕ್ಷಗಳಲ್ಲಿಯೂ ಅನವಸ್ಥಾದೋಷವು ಪ್ರಸಕ್ತವಾಗುತ್ತದೆ.

ಐಕ್ಯವಾದಿಗಳ ಮತ್ತೊಂದು ಪ್ರಕಾರವನ್ನೂ ಶಂಕಿಸಿ ಖಂಡಿಸಲಾಗಿದೆ. ಸ್ವರೂಪದಿಂದ ಐಕ್ಯಕ್ಕೆ ಭೇದಾಭೇದವು ಉಂಟೆಂದು ಒಪ್ಪುತ್ತೇವೆ. ಆ ಭೇದಾಭೇದಕ್ಕೂ ಐಕ್ಯಕ್ಕೂ ಮತ್ತೊಂದು ಭೇದಾಭೇದವಿಲ್ಲದಿದ್ದಾಗ್ಯೂ ಅದು ತನಗೆ ತಾನೇ ನಿರ್ವಾಹಕವಾಗಿ ವ್ಯವಹಾರ ನಿರ್ವಾಹಕವಾಗಿದೆ ಎಂದು ಹೇಳಲೂ ಸಹ ಸಾಧ್ಯವಿಲ್ಲ. ಸ್ವನಿರ್ವಾಹಕವೆಂಬ ಕಲ್ಪವು ವಿಶೇಷ ವನ್ನೇ ಒಪ್ಪದಿರುವವರಿಗೆ ನಿರೂಪಿಸಲು ಸಾಧ್ಯವೇ ಇಲ್ಲ. ವಿಶೇಷವನ್ನು ಒಪ್ಪಿಯೇ ಸ್ವನಿರ್ವಾಹಕತ್ವವನ್ನು ನಿರೂಪಿಸಬೇಕು.

ಐಕ್ಯಕ್ಕಾಗಲಿ, ಭೇದಾಭೇದಗಳಿಗಾಗಲಿ ಸ್ವನಿರ್ವಾಹಕತ್ವವನ್ನು ಒಪ್ಪುವುದಾದರೆ ಈ ಕೆಳಗೆ ದೂಷಣಗಳು ಅಪರಿಹಾರ್ಯವಾಗಿವೆ.

**ಹೇಗೆಂದರೆ :-** ಸ್ವಸ್ಯ = ತನಗೆ, ನಿರ್ವಾಹಕಂ = ಸ್ವನಿರ್ವಾಹಕಂ, ತಸ್ಯಭಾವಃ = ಸ್ವನಿರ್ವಾಹಕತಾ. ಇಲ್ಲಿ ಸ್ವಸ್ಯ ಎಂಬುದಾಗಿ ಬಂದಿರುವ ಷಷ್ಠೀವಿಭಕ್ತಿಯು, ಕರ್ತೃಕರ್ಮಣೋಃಕೃತಿ (೨-೩-೬೫) ಎಂಬ ಸೂತ್ರದಿಂದ ಬಂದಿರುವ ಕರ್ಮಣಿಷಷ್ಠೀ ಆಗಿದೆ.

ಅಂದರೆ ಒಂದಕ್ಕೇನೇ ನಿರ್ವಾಹ (ನಿರ್ವಹಣ) ಕ್ರಿಯಾದಲ್ಲಿ ಕರ್ತೃತ್ವವೂ ಕರ್ಮತ್ವವೂ ಎಂಬ ನಿರ್ವಾಹ್ಯತ್ವವನ್ನೂ ನಿರ್ವಾಹಕತ್ವವನ್ನು ಹೇಳಿದಂತಾಗುವುದು.

ಅಂತಹ ನಿರ್ವಾಹ್ಯತ್ವವೂ, ನಿರ್ವಾಹಕತ್ವವೂ ಕೂಡ ಪರಸ್ಪರವಾಗಿ (ಅನ್ಯೋನ್ಯವಾಗಿ) ಧರ್ಮಿಯಿಂದಲೂ, ನಿರ್ವಾಹ ಕ್ರಿಯೆಯಿಂದಲೂ,

೧. ಅತ್ಯಂತಾಭಿನ್ನವೋ, ೨. ಅಥವಾ ಭಿನ್ನವೋ ಎಂದು ಕೇಳಬೇಕು.

ಮೊದಲನೆಯದಾದ ಅತ್ಯಂತಾಭಿನ್ನವೆಂಬ ಪಕ್ಷವನ್ನು ಒಪ್ಪಿದರೆ, ನಿರ್ವಾಹ್ಯವೆಂಬುದೂ, ನಿರ್ವಾಹಕವೆಂಬುದೂ, ನಿರ್ವಹಣವೆಂಬುದೂ ಸಹ ಅಭಿನ್ನವಾದುದರಿಂದ, ಈ ಮೂರೂ ಶಬ್ದಗಳ ಸಮೂಹವು ಅಂದರೆ ನಿರ್ವಾಹ್ಯ, ನಿರ್ವಾಹಕ, ನಿರ್ವಹಣ ಎಂಬ ಶಬ್ದಗಳು ಒಂದೇ ವಸ್ತುವನ್ನು ತಿಳಿಸುವ ಪ್ರಯುಕ್ತ ಏಕಾರ್ಥಗಳಾಗಿರುವುದರಿಂದ ಪರ್ಯಾಯ ಶಬ್ದಗಳಾಗಬೇಕಾದೀತು.

ಆದರೆ ಅವುಗಳಿಗೆ ಯಾರೂ ಸಹ ಪರ್ಯಾಯತ್ವವನ್ನು ಒಪ್ಪಿಲ್ಲ.

ಮತ್ತೊಂದಾದ ಭೇದಕಲ್ಪವೂ ಕೂಡುವುದಿಲ್ಲ.

ನಿರ್ವಾಹ್ಯತ್ವವೂ, ನಿರ್ವಾಹಕತ್ವವೂ, ನಿರ್ವಹಣಕ್ರಿಯೆಯೂ, ಧರ್ಮಿಯೂ, ಪರಸ್ಪರವಾಗಿ ಭಿನ್ನಗಳೆಂದು ಹೇಳಿದರೆ, ಮತ್ತೆ ಆ ಭೇದಕ್ಕೂ ಆದರ ಧರ್ಮಿಗಳಿಗೂ ಅಭೇದವೋ, ಭೇದವೋ, ಭೇದಾಭೇದವೋ ಎಂದು ಕೇಳಬೇಕು. ಪುನಃ ಅಭೇದವನ್ನು ಹೇಳಿದರೆ, ಪರ್ಯಾಯತ್ವಾದಿದೋಷಗಳು ಪ್ರಸಕ್ತವಾಗುತ್ತವೆ.

ಮತ್ತೆ ಭೇದವನ್ನು ಹೇಳಿದರೆ ಆ ಭೇದಭೇದಕ್ಕೂ ಧರ್ಮಗಳಿಗೂ ಮತ್ತೆ ಭೇದಾಂತರದ ಪ್ರಸಕ್ತಿಯು ಉಂಟಾಗಿ ಉಭಯಥಾಪಿ ಅನವಸ್ಥಾದೋಷವು ಅಪರಿಹಾರ್ಯವಾಗುತ್ತದೆ.

ಈ ರೀತಿ ಪಕ್ಷವಾದವು ದೂಷಣಗಣದುಷ್ಟವಾಗಿರುವುದರಿಂದ, ವಿಶೇಷವನ್ನು ಒಪ್ಪದಿದ್ದರೆ, ಮಹಾ ವಾಕ್ಯಾರ್ಥವೇ ಕೂಡುವುದಿಲ್ಲ.

ಹೀಗೆಯೇ ಪಕ್ಷವಾದಿಗಳ ಅವಾಂತರ ವಾಕ್ಯದಲ್ಲೂ ದೂಷಣಗಣಗಳು ಪ್ರಸಕ್ತವಾಗಿ ಅಪರಿಹಾರ್ಯವಾದ ಈ ದೋಷಗಳಿಂದ ಪಕ್ಷವಾದಿಗಳ ತತ್ತ್ವಮಸ್ಯಾದಿ ಮಹಾವಾಕ್ಯಕಲ್ಪವೂ, ಬ್ರಹ್ಮಸ್ವರೂಪಪರವಾದ ಅವಾಂತರವಾಕ್ಯಕಲ್ಪವೂ ಅನಂತ ದೋಷದುಷ್ಟಗಳಾಗಿವೆ.

ಸತ್ಯಂ, ಜ್ಞಾನಂ, ಅನಂತಂ, ಬ್ರಹ್ಮ ಇತ್ಯಾದಿ ಅವಾಂತರ ವಾಕ್ಯದಿಂದ ಬ್ರಹ್ಮನ ಸ್ವರೂಪವೆಂದು ಪರಿಗಣಿತಗಳಾದ ಸತ್ಯ, ಜ್ಞಾನ, ಅನಂತಪದಗಳಿಂದ ತಿಳಿಯಲ್ಪಡುವ ಸತ್ಯತ್ವ, ಜ್ಞಾನತ್ವ, ಅನಂತತ್ವಗಳಿಗೆ ಪರಸ್ಪರವಾಗಿ ಭೇದವೋ, ಭೇದಾಭೇದವೋ ಎಂಬ ವಿಕಲ್ಪಗಳು ಸಂಭವಿಸುತ್ತವೆ.

ಆದರೆ ಪಕ್ಷವಾದಿಗಳು "ಜಾತಾವೇ ಭಾಟ್ಟನಯಃ" ಎಂದು ಒಪ್ಪಿರುವ ಪ್ರಯುಕ್ತ ಪದಗಳಿಗೆ ಜಾತಿಯಲ್ಲಿ ಶಕ್ತಿಯನ್ನು ಹೇಳುವುದರಿಂದ, ಸತ್ಯಪದಕ್ಕೆ ವ್ಯಾಪಕವಾದ ಸತ್ತಾಜಾತಿಯೆಂದೂ, ಜ್ಞಾನವೆಂಬ ಪದಕ್ಕೆ ಜ್ಞಾನತ್ವವೆಂಬ ವ್ಯಾಪ್ಯ ಜಾತಿ ಎಂಬುದಾಗಿ ಹೇಳುವುದರಿಂದ ಅವುಗಳಿಗೆ ವಾಚ್ಯಾರ್ಥವೇ ಬೇರೆಬೇರೆಯಾಗಿವೆ. ಆದಕಾರಣ ಪರ್ಯಾಯತ್ವಕ್ಕೆ ಅವಕಾಶವೇ ಇಲ್ಲ. ವ್ಯಾಪಕಜಾತಿಯೇ ಬೇರೆ, ವ್ಯಾಪ್ಯವ್ಯಕ್ತಿಯೇ ಬೇರೆ. ಆದರೆ ವಾಚ್ಯಾರ್ಥವು ವಿಭಿನ್ನವಾದರೂ, ಈ ಅವಾಂತರ ವಾಕ್ಯಗಳು ಭಾಟ್ಟಮತರೀತ್ಯಾ ಪರಾಪರಜಾತಿವಾಚಕಗಳಾಗಿದ್ದಾಗ್ಯೂ ತಾರ್ಕಿಕಾದಿಮತರೀತ್ಯಾ ಸಗುಣಬ್ರಹ್ಮವಾಚಕ ಗಳಾಗಿದ್ದಾಗ್ಯೂ ಶುದ್ಧ ಪರಬ್ರಹ್ಮನಲ್ಲಿ (ನಿರ್ಗುಣಚಿನ್ಮಾತ್ರಸ್ವರೂಪಬ್ರಹ್ಮನಲ್ಲಿ) ಲಕ್ಷಣಯಾ ಪ್ರವೃತ್ತವಾಗಿವೆ. ಅಂದರೆ ಸತ್ಯ ಪದವೂ ಚಿನ್ಮಾತ್ರದಲ್ಲಿ ಲಕ್ಷಣಾ, ಜ್ಞಾನಪದವು ಚಿನ್ಮಾತ್ರೇ ಲಕ್ಷಣಾ, ಅನಂತ ಪದವು ಚಿನ್ಮಾತ್ರೇಲಕ್ಷಣಾ ಎಂದು ಹೇಳಿದಂತಾಗುತ್ತದೆ.

ಮೂರೂ ಪದಗಳಿಗೂ ಚಿನ್ಮಾತ್ರದಲ್ಲೇ ಲಕ್ಷಣಾ ಎಂಬ ಪಕ್ಷದಲ್ಲಿ, ಸತ್ಯವೆಂಬ ಪದದಿಂದ ಲಕ್ಷಿತವಾದುದರಲ್ಲೇ, ಜ್ಞಾನಪದವು, ಅನಂತವೆಂಬ ಪದವು ಲಕ್ಷಣೆಯನ್ನು ಸ್ವೀಕರಿಸಿದಂತಾಗುವುದು. ಅಖಂಡಾರ್ಥತ್ವಸಿದ್ಧಿಗಾಗಿ ಏಕರೂಪವಾದುದರಲ್ಲೇ ಲಕ್ಷಣೆಯನ್ನು ಹೇಳಬೇಕು. ಹೀಗೆ ಹೇಳಿದರೆ, ಸತ್ಯಪದದಿಂದಲೇ ಲಕ್ಷ್ಯವಾದ ಚಿನ್ಮಾತ್ರಪ್ರತೀತಿಯು ಆಗುತ್ತಿರುವಲ್ಲಿ ಜ್ಞಾನ ಮತ್ತು ಅನಂತವೆಂಬ ಪದಗಳು ವ್ಯರ್ಥಗಳಾಗುತ್ತವೆ ಎಂದು ದೋಷವು ಅಪರಿಹಾರ್ಯವಾಗುತ್ತದೆ.

ಒಂದುವೇಳೆ ಸತ್ಯಪದಕ್ಕು, ಜ್ಞಾನವೆಂಬ ಪದಕ್ಕು, ಅನಂತವೆಂಬ ಪದಕ್ಕು ಲಕ್ಷ್ಯಾರ್ಥವೇನೋ ಒಂದೇ ಆದಾಗ್ಯೂ ಸತ್ಯ,ಜ್ಞಾನವೆಂಬ ಪದಗಳು, ಆರೋಪಿತವಾದ ಅಸತ್ಯತ್ವವ್ಯಾವೃತ್ತಿಗಾಗಿಯೂ, ಆರೋಪಿತವಾದ ಅಜ್ಞಾನತ್ವವ್ಯಾವೃತ್ತಿ ಗಾಗಿಯೂ, ಆರೋಪಿತವಾದ ಅಂತತ್ವವ್ಯಾವೃತತ್ರಗಾಗಿಯೂ ಸಾರ್ಥಕಗಳಾಗಿವೆ ಎಂದು ಐಕ್ಯವಾದಿಗಳು ವಾದಿಸಬಹುದು. ಆದರೆ ಈ ವಾದವೂ ಸಹ ದೋಷದುಷ್ಟವಾಗಿದೆ.

ಬ್ರಹ್ಮನ ವಿಶೇಷಣವಾಗಿ, ಅಸತ್ಯತ್ವವ್ಯಾವೃತ್ತಿ, ಲಕ್ಷಣವಾದ ಪ್ರಯೋಜನವು ಸತ್ಯಪದಕ್ಕು ಹಾಗೆಯೇ ಬ್ರಹ್ಮನ ವಿಶೇಷಣವಾಗಿ ಅಜ್ಞಾನತ್ವವ್ಯಾವೃತ್ತಿಲಕ್ಷಣವಾದ ಪ್ರಯೋಜನವು ಜ್ಞಾನಪದಕ್ಕು, ಅಂತತ್ವವ್ಯಾವೃತ್ತಿಲಕ್ಷಣವಾದ ಪ್ರಯೋಜನವು ಅನಂತಪದಕ್ಕು ಹೇಳಲು ಬರುವುದಿಲ್ಲ. ವ್ಯಾವೃತ್ತಿಯನ್ನು ಹೇಳಿದರೆ ವ್ಯಾವೃತ್ತನಾದ ಪರಬ್ರಹ್ಮನಿಗೆ, ಅಸತ್ಯತ್ವ ವ್ಯಾವೃತ್ತತ್ವವನ್ನೂ, ಅಜ್ಞಾನತ್ವವ್ಯಾವೃತ್ತತ್ವವನ್ನು, ಅಂತತ್ವವ್ಯಾವೃತ್ತತ್ವವನ್ನು ಹೇಳಿದಂತಾಗುತ್ತದೆ.

ಈ ರೀತಿ ವ್ಯಾವೃತ್ತತಯಾ ಪ್ರತೀತನಾದ ಪರಬ್ರಹ್ಮನಿಗೆ ಭಾವರೂಪ ವಿಶೇಷಣತ್ವಪ್ರಯುಕ್ತ ಸಖಂಡತ್ವವೇ ಬಂದಂತಾಗಿ ಬ್ರಹ್ಮನನ್ನ ಅಖಂಡವೆಂಬುದಾಗಿ ಹೇಳುವ ಐಕ್ಯವಾದಕ್ಕೆ ಈ ಪ್ರತಿಪಾದನೆಯು ವಿರುದ್ಧವಾಗಿರುವ ಪ್ರಯುಕ್ತ ಪೂರ್ವಾಚಾರ್ಯಾನಂಗೀಕೃತವಾದುದನ್ನು ಒಪ್ಪಿದರೆ ಅಪಸಿದ್ಧಾಂತವೆಂಬ ದೋಷವು ಪ್ರಸಕ್ತವಾಗುತ್ತದೆ.

ಈ ಸಂದರ್ಭದಲ್ಲಿ ಐಕ್ಯವಾದಿಗಳು ಪ್ರತಿಪಾದಿಸುವ ಮತ್ತೊಂದು ಪ್ರಕ್ರಿಯೆಯೂ ಆಭಾಸಮಯವಾಗಿದೆ.

**ಅದೇನೆಂದರೆ** :- ಅಸತ್ಯವ್ಯಾವೃತ್ತಿಯಾಗಲಿ, ಅಜ್ಞಾನವ್ಯಾವೃತ್ತಿಯಾಗಲಿ, ಅಂತವ್ಯಾವೃತ್ತಿಯಾಗಲಿ, ಇದು ಭಾವರೂಪ ವಲ್ಲ. ಭಾವರೂಪವಾದ ವಿಶೇಷಣವಾದರೆ ನಿರ್ವಿಶೇಷತ್ವಕ್ಕೆ ಚ್ಯುತಿ ಬಂದೀತು. ಆದರೆ ಇವೆಲ್ಲವೂ, ವ್ಯಾವೃತ್ತಿಗಳೆಲ್ಲವೂ ಸಹ ಅಭಾವರೂಪಗಳಾಗಿವೆ. ಅಭಾವರೂಪವಿಶೇಷಣಗಳನ್ನು ಬ್ರಹ್ಮನಿಗೆ ಎಷ್ಟು ಹೇಳಿದರೂ ಬ್ರಹ್ಮನ ನಿರ್ವಿಶೇಷತ್ವಕ್ಕೆ ಬಾಧಕವೇ ಇಲ್ಲ. ಈ ರೀತಿ ಅಭಾವವಿಶೇಷಾಂಗೀಕಾರ ಪಕ್ಷದಲ್ಲಿ ಅಭಾವರೂಪಗಳಾದ ಧರ್ಮಗಳು "ಭಾವಾದ್ವೈತಪಕ್ಷಕ್ಕೆ" ಬಾಧಕಗಳಲ್ಲವೆಂಬ ಐಕ್ಯವಾದಿಗಳ ವಾದವೂ ಸಹ ಅಸಂಗವಾಗಿದೆ. ಹೇಗೆಂದರೆ ಅನೇಕಗಳಾದ ಅಭಾವ ಧರ್ಮಗಳನ್ನು ಪರಬ್ರಹ್ಮನಲ್ಲಿ ಒಪ್ಪುವಂತೆ, ಭಾವಧರ್ಮಗಳನ್ನು ಏಕೆ ಒಪ್ಪಬಾರದು.

ಈ ಸಂದರ್ಭದಲ್ಲಿನ ಸುಧಾವಾಕ್ಯವು ಈ ರೀತಿ ಇದೆ.

**ನ್ಯಾಯಸುಧಾ** :- "ಅಭಾವ ವಿಶೇಷಾಂಗೀಕಾರೇ ಚ ಭಾವವಿಶೇಷೈಃ ಕಿಮಪರಾದ್ಧಮ್।। ಇತಿ।। "

ಮತ್ತೊಂದು ದೋಷವನ್ನೂ ಸಹ ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ.

"ನವ್ಯಾವೃತ್ತ್ಯಾ ಪ್ರಯೋಜನಮ್।
ವ್ಯಾವೃತ್ತಸ್ಯಾ ವಿಶೇಷತ್ವೇ ತದಖಂಡಂ ಚ ಖಂಡಿತಮ್।
ನಿರ್ವಿಶೇಷತ್ವಮೇತೇನ ಮೂಕೋಽಹಮಿತಿವದ್ಭವೇತ್।। ಇತ್ಯನು ವ್ಯಾಖ್ಯಾನಮ್।। "

**ಅಭಿಪ್ರಾಯ** :- "ಸತ್ಯಂ, ಜ್ಞಾನಂ, ಅನಂತಂ ಬ್ರಹ್ಮ" ಎಂಬುದಾಗಿ ಶ್ರುತಿವಾಕ್ಯವಿದೆ.

ಈ ಬ್ರಹ್ಮಸ್ವರೂಪಪರವಾದ ಅವಾಂತರ ವಾಕ್ಯದಲ್ಲಿನ, ಸತ್ಯಂ, ಜ್ಞಾನಂ, ಅನಂತಂ, ಎಂಬ ಪದಗಳು,

ಸತ್ಯತ್ವ, ಜ್ಞಾನತ್ವ, ಅನಂತತ್ವವೆಂಬ ಧರ್ಮಗಳನ್ನು ಹೇಳತಕ್ಕವುಗಳಾದರೂ ಅಸತ್ಯವ್ಯಾವೃತ್ತಿ, ಅಜ್ಞಾನತ್ವ ವ್ಯಾವೃತ್ತಿ, ಅಂತತ್ವವ್ಯಾವೃತ್ತಿಗಳೆಂಬ ಪ್ರಯೋಜನಗಳುಳ್ಳವಾಗಿವೆ ಎಂಬ ಪಕ್ಷವಾದಿಗಳ ವಾದವೂ ಸರಿಯಿಲ್ಲ.

ಆವ್ಯಾವೃತ್ತಿಗಳು ವ್ಯಾವೃತ್ತನಾದ ಬ್ರಹ್ಮನ ವಿಶೇಷಣಗಳೋ ಅಥವಾ ಸ್ವತಂತ್ರಗಳೋ ಎಂಬ ಪ್ರಶ್ನೆಗೆ ಉತ್ತರ ಹೇಳಬೇಕು.

ಮೊದಲನೆದಾಗಿ ಈ ಪದಗಳಿಂದ ಬೋಧ್ಯವಾದ ಧರ್ಮಗಳು ಬ್ರಹ್ಮನ ವಿಶೇಷಣಗಳಾದರೆ ವ್ಯಾವೃತ್ತನಾದ ನಿರ್ವಿಶೇಷ ಬ್ರಹ್ಮನಿಗೆ (ವ್ಯಾವೃತ್ತಿಯು ವಿಶೇಷಣವಲ್ಲದಿದ್ದರೆ) ಅಂದರೆ ಬ್ರಹ್ಮನಿಗೆ ಅವಿಶೇಷತ್ವವನ್ನು ಒಪ್ಪಿದರೆ ಬ್ರಹ್ಮನ ವಿಶೇಷಣಗಳಾಗಿ ತೋರುವ ಧರ್ಮಗಳನ್ನು ಹೇಳುವ ಪದಗಳು ವಿಶೇಷಣಗಳನ್ನು ಹೇಳುವ ಮುಖವಾಗಿ, ಆ ಪದಗಳಿಗೆ ವ್ಯಾವೃತ್ತಿಯು ಪ್ರಯೋಜನವೆಂದು ಹೇಳಲು ಶಕ್ಯವಿಲ್ಲ.

ಹಾಗಿಲ್ಲದೆ, ಸತ್ಯತ್ವಾದಿ ಧರ್ಮಗಳು ಪರಬ್ರಹ್ಮನ ವಿಶೇಷಣಗಳೇ ಅಲ್ಲದೆ, ಸ್ವತಂತ್ರಗಳಾಗಿ ತೋರುವ ಪಕ್ಷದಲ್ಲಿ ಅಂದರೆ ವ್ಯಾವೃತ್ತನಾದ ನಿರ್ವಿಶೇಷಬ್ರಹ್ಮನಲ್ಲಿ ಆ ಪದಗಳು ಸತ್ಯತ್ವಾದಿ ಧರ್ಮಗಳನ್ನು ಪ್ರತಿಪಾದಿಸುವುದಿಲ್ಲವೆಂದರೆ, ಅಸತ್ಯತ್ವಾದಿಗಳಿಂದ ವ್ಯಾವೃತ್ತಿಯು ಪದಗಳಿಗೆ ಪ್ರಯೋಜನವೆಂಬುದೂ ಸಹ ಹೇಳಲು ಶಕ್ಯವಿಲ್ಲ.

ಗಂಗಾಯಾಂ ಘೋಷಃ ಎಂಬಲ್ಲಿ ತೀರದಲ್ಲಿ ನದೀತ್ವವನ್ನು ಹೇಳದಿರುವ ಪದಕ್ಕೆ ಅನದೀವ್ಯಾವೃತ್ತಿಯು ಪ್ರಯೋಜನವೆಂಬುದು ಹೇಗಾದೀತು. ಅದರಂತೆ ಸತ್ಯತ್ವಾದಿಗಳನ್ನು ಪರಬ್ರಹ್ಮನಲ್ಲಿ ತಿಳಿಸದಿರುವ ಪದಗಳಿಗೆ ಅಸತ್ಯತ್ವಾ ದಿವ್ಯಾವೃತ್ತಿಯು ಹೇಗೆ ಪ್ರಯೋಜನವಾದೀತು.

ವಿರೋಧಿಯಾದ ಒಂದು ಆಕಾರವನ್ನು ತಿಳಿಸುವ ಮೂಲಕ ಮತ್ತೊಂದು ವಿರೋಧ್ಯಾಕಾರವನ್ನು ವ್ಯಾವೃತ್ತಿಗೊಳಿಸಬೇಕು.

ಪ್ರಕೃತದಲ್ಲಿ ಸತ್ಯಾದಿಪದಗಳ ಲಕ್ಷ್ಯಾರ್ಥನಾದ ಪರಬ್ರಹ್ಮನಲ್ಲಿ ಸತ್ಯತ್ವಾದಿಗಳನ್ನು ಅರ್ಪಿಸದಿರುವ ಮೂಲಕವಾಗಿ ಅಸತ್ಯಾದಿವ್ಯಾವೃತ್ತಿಬೋಧಕತ್ವವು ಸಂಗತವಾಗುವುದಿಲ್ಲ.

ಏವಂ ಚ ಸತ್ಯಾದಿಪದಗಳಿಂದಬೋಧ್ಯವಾದ ಧರ್ಮಗಳು ನಿರ್ವಿಶೇಷಬ್ರಹ್ಮನಲ್ಲಿ ಯಾವ ಬಗೆಯಾಗಿಯೂ, ಅಸತ್ಯಾದಿ ವ್ಯಾವೃತ್ತಿ ಪ್ರಯೋಜನಗಳಾಗಿಲ್ಲವೆಂಬುದು ಖಚಿತವಾದ ಅಭಿಪ್ರಾಯವಾಗಿದೆ.

ಇದರಿಂದ (ಮಾಯಾವಾದಿಗಳುವ) ಪಕ್ಷವಾದಿಗಳು ಹೇಳುವ ಮತ್ತೊಂದು ಪ್ರಕಾರವೂ ಕೂಡ ಅತ್ಯಂತ ಅಸಂಗತವೇ ಆಗಿದೆ. ಅದೇನೆಂದರೆ ಸತ್ಯಂ ಜ್ಞಾನಂ ಅನಂತಂ ಬ್ರಹ್ಮ ಎಂಬುದಾಗಿರುವ ಅವಾಂತರ ವಾಕ್ಯಗಳು ಅಸತ್ಯಾದಿವ್ಯಾವೃತ್ತಿ ಪ್ರಯೋಜನವುಳ್ಳದುದಾಗಿರುವುದರಿಂದ ಶಾಸ್ತ್ರಕ್ಕೆ ಆರೋಪಿತಾಕಾರವ್ಯಾವೃತ್ತಿರೂಪಪ್ರಯೋಜನವು ಸಿದ್ಧವಾಗಿರುವುದರಿಂದ ಸಾರ್ಥಕ್ಯವು ಉಂಟಾಯಿತೆಂಬ ವಾದವೂ ಸಹ ಅಸಂಬದ್ಧಪ್ರಲಾಪವೇ ಆಗಿದೆ.

ಸ್ವಪ್ರಕಾಶಚೈತನ್ಯವು ಸಾಕ್ಷಾತ್ಪ್ರಕಾಶವಾಗಿರುವಾಗ ನಿರ್ವಿಶೇಷವಾದ ಸ್ವಯಂ ಪ್ರಕಾಶಮಾನವಾದ ಚೈತನ್ಯದಲ್ಲಿ ಅದಕ್ಕೆ ವಿರುದ್ಧವಾದ ಆಕಾರದ ಆರೋಪವೇ ಸಂಗತವಾಗುವುದಿಲ್ಲ. ಆದಕಾರಣ ಈ ವಾದವೆಲ್ಲವೂ ಅಸಂಬದ್ಧವಾದ ಪ್ರಲಾಪವಾಗಿದೆ.

ಈ ರೀತಿ ವಿಶೇಷವನ್ನೇ ಒಪ್ಪದಿರುವ ಐಕ್ಯವಾದಿಗಳ, ನಿರ್ವಿಶೇಷಬ್ರಹ್ಮವಾದವು ಅಖಂಡವಾದ, ನಿರ್ವಿಶೇಷ ಬ್ರಹ್ಮವು, ಮಹಾವಾಕ್ಯದಿಂದಲೂ, ಅವಾಂತರ ವಾಕ್ಯದಿಂದಲೂ (ವಾಕ್ಯದ್ವಯದಿಂದಲೂ) ಪ್ರತಿಪಾದ್ಯವೆಂಬ ಮತವು ಖಂಡಿತವಾಗಿದೆ. ಅನೇಕ ದೋಷ ದುಷ್ಟವಾಗಿದೆ ಎಂಬುದೇ ನಿರ್ಗಳಿತವಾದ ಅಭಿಪ್ರಾಯ.

ಐಕ್ಯವಾದದಲ್ಲಿ ಮತ್ತೊಂದು ಅಸಾಧಾರಣವಾದ ವಜ್ರಲೇಪದಂತಿರುವ ದೂಷಣವನ್ನು ಅನುವ್ಯಾಖ್ಯಾನಕಾರರು ಘೋಷಿಸಿರುತ್ತಾರೆ.

''ನಿರ್ವಿಶೇಷತ್ವಂ ಏತೇನ ಮೂಕಕೋಽಸ್ಮಿತಿವ್ಯವೇತ್'' ।।(ಇತ್ಯನು ವ್ಯಾಖ್ಯಾನಮ್) ।।

ಇದರಿಂದ ನಿರ್ವಿಶೇಷತ್ವ ವಚನವು ಸ್ವಕ್ರಿಯಾ ವಿರುದ್ಧವಾಗಿದೆಯೆಂಬುದನ್ನು ''ಮೂಕೋಽಸ್ಮಿ'' ಎಂಬುದಾಗಿ ಉದಾಹರಣೆಯನ್ನು ತೋರಿಸಿ ಖಂಡಿಸಿರುತ್ತಾರೆ.

ಅದರ ಅಭಿಪ್ರಾಯವು ಈ ರೀತಿ ಇದೆ:

''ನಿರ್ವಿಶೇಷಂ ಪರಂಬ್ರಹ್ಮ'' ಎಂಬ ವಾದದಲ್ಲಿ ''ಮೂಕೋಽಸ್ಮಿ'' ಎಂಬುದು ಹೇಗೆ ಸ್ವಕ್ರಿಯಾವಿರುದ್ಧ ವಾಗಿರುವುದೋ ಅದರಂತೆ ''ನಿರ್ವಿಶೇಷಂಬ್ರಹ್ಮ'' ಎಂಬುದೂ ಸಹ ಸ್ವಕ್ರಿಯಾವಿರುದ್ಧವಾಗಿದೆ.

ಮೂಕ ಎಂದರೆ ವಕ್ತೃತ್ವಾಭಾವವಾನ್ (ವಚನಕ್ರಿಯಾಭಾವವಾನ್) ಎಂದು ಅರ್ಥವು. ವಚನಕ್ರಿಯೆಯಿಂದವಕ್ತೃತ್ವವು ಕಂಡುಬಂದಿದೆ. ವಚನಕ್ರಿಯೆಯಿಂದಲೇ ವಚನಕ್ರಿಯಾಭಾವವನ್ನು ಪ್ರತಿಪಾದಿಸುವವನ ಸ್ಥಿತಿಯು ಸ್ವಕ್ರಿಯಾವಿರುದ್ಧವಾಗಿದೆ.

ಅದರಂತೆ ''ನಿರ್ವಿಶೇಷಂಬ್ರಹ್ಮ'' ಎಂಬಲ್ಲಿಯೂ, ನಿರ್ವಿಶೇಷತ್ವವೆಂಬ ವಿಶೇಷಣದಿಂದ ಬ್ರಹ್ಮನು ನಿರ್ವಿಶೇಷತ್ವ ರೂಪವಿಶೇಷಣ ವಿಶೇಷವುಳ್ಳವನಾಗಿರುವ ಪ್ರಯುಕ್ತ ಮತ್ತೆ ನಿರ್ವಿಶೇಷ ಎಂದರೆ ಅಸಂಗತವೇ ಆಯಿತು.

ವಿಶೇಷಾಭಾವವೇ ನಿರ್ವಿಶೇಷಂಬ್ರಹ್ಮ ಎಂಬ ವಾಕ್ಯದಿಂದ ಇಷ್ಟವಾಗಿದೆ. ಪ್ರತಿಪಾದನಕ್ರಿಯೆಯಿಂದ ವಿಶೇಷಾ ಭಾವ ಲಕ್ಷಣವಾದ ವಿಶೇಷವು ಬ್ರಹ್ಮನಿಗೆ ಬಂದಂತಾಯಿತು.

ವಿಶೇಷಾಭಾವ ಲಕ್ಷಣವಾದ ವಿಶೇಷವೂ ಸಹ ನಿರ್ವಿಶೇಷಂ ಎಂಬುದರಿಂದ ನಿರಾಕರಿಸಲ್ಪಡುತ್ತದೆಯೆಂಬ ಐಕ್ಯ ವಾದಿಗಳ ಸಮಾಧಾನವೂ ಸರಿಯಿಲ್ಲ.

ಪ್ರತೀತಿ ವಿರೋಧವು ಬರುತ್ತದೆಯೆಂಬುದಾಗಿ ಹೇಳುವ ಐಕ್ಯವಾದಿಗಳ ಅಭಿಪ್ರಾಯವು ಈ ರೀತಿ ಇದೆ.

ನಿರ್ವಿಶೇಷಂಬ್ರಹ್ಮ ಎಂಬುದಾಗಿ ಸರ್ವವಿಶೇಷಗಳನ್ನೂ ನಿರಾಕರಿಸುವುದರಿಂದ ಕೇವಲ ಪ್ರತಿಪಾದನಕ್ರಿಯಾದಿಂದ ಪ್ರಾಪ್ತವಾದ ಯಾವ ವಿಶೇಷವೂ ಇಲ್ಲವಲ್ಲಾ ಎಂದು ಅವರ ಅಭಿಪ್ರಾಯ.

ಈ ಸಂದರ್ಭದಲ್ಲಿ ಐಕ್ಯವಾದಿಯನ್ನು ಕುರಿತು ಪ್ರಶ್ನಿಸಬೇಕಾಗಿದೆ.

ಏನೆಂದರೆ: ನಿರ್ವಿಶೇಷಂಬ್ರಹ್ಮ ಎಂದು ಹೇಳುವುದರಿಂದ ಸರ್ವವಿಶೇಷಗಳನ್ನು ಇದರಿಂದ ನಿರಾಕರಿಸುವ ಪ್ರಯುಕ್ತ ಪ್ರತಿಪಾದನ ಕ್ರಿಯಾದಿಂದ ಪ್ರಾಪ್ತವಾದ ಯಾವ ವಿಶೇಷವೂ ಇಲ್ಲವಲ್ಲಾ ಎಂದು ಹೇಳುವ ಐಕ್ಯವಾದಿಯ (ಅಭಿಪ್ರಾಯವು) ತಾತ್ಪರ್ಯವು ಏನು ?

೧. ಸಕಲ ವಿಶೇಷಗಳನ್ನೂ "ನಿರ್ವಿಶೇಷಂಬ್ರಹ್ಮ" ಎಂಬುದರಿಂದ ನಿರಾಕರಿಸುವ ಪ್ರಯುಕ್ತ ವಿಶೇಷಾಭಾವರೂಪ ವಿಶೇಷ ಪ್ರತಿಪಾದನಕ್ರಿಯೆಯೇ ಇಲ್ಲವೆಂದು ಅಭಿಪ್ರಾಯವೋ ಅಥವಾ ಅಂತಹ ಕ್ರಿಯೆಯಿಂದ ಪ್ರಾಪ್ತವಾಗತಕ್ಕ ವಿಶೇಷಾಭಾವರೂಪ ವಿಶೇಷವೇ ಇಲ್ಲವೆಂಬ ಅಭಿಪ್ರಾಯವೋ, ಅಥವಾ ಅಂತಹ ವಿಶೇಷಾಭಾವ ಪ್ರತಿಪಾದನಕ್ರಿಯೆಯೇನೋ ಉಂಟು. ಆದರೆ ವಿಶೇಷಾಭಾವ ರೂಪವಿಶೇಷಪ್ರಾಪಕತ್ವವು ಇಲ್ಲವೆಂದು ಅಭಿಪ್ರಾಯವೋ? ನಿಮ್ಮ ಖಚಿತ ಅಭಿಪ್ರಾಯವೇನು ? ಎಂದು ಕೇಳಬೇಕಾಗಿದೆ...

ಮೇಲೆ ಕಂಡ ಅವರ ಅಭಿಪ್ರಾಯದ (ಪಕ್ಷವಾದಿಗಳ ಅಭಿಪ್ರಾಯದ) ಖಂಡನೆಯು ಈ ರೀತಿ ಇದೆ.

ಎರಡನೆ ವಿಕಲ್ಪದಲ್ಲಿ ಕೇಳಿದಂತೆ ವಿಶೇಷಾಭಾವ ಪ್ರತಿಪಾದನಕ್ರಿಯೆಯು ಇದ್ದಾಗ್ಯೂ ಅದಕ್ಕೆ ವಿಶೇಷ ಪ್ರಾಪಕತ್ವವು (ವಿಶೇಷಾಭಾವರೂಪ ವಿಶೇಷ ಪ್ರಾಪಕತ್ವ) ಇಲ್ಲವೆಂದರೆ, ಆ ಪ್ರತಿಪಾದನಕ್ರಿಯೆಯು ಅನ್ಯಥಾ ಸಿದ್ಧವಾಗಿರುವುದರಿಂದ ವಿಶೇಷಾಭಾವರೂಪ ವಿಶೇಷಪ್ರಾಪಕತ್ವವಿಲ್ಲವೋ ಅಥವಾ "ನಿರ್ವಿಶೇಷಂಬ್ರಹ್ಮ "ಎಂಬ ವಾಕ್ಯಕ್ಕೆ ನಿರ್ವಿಶೇಷತ್ವರೂಪ ವಿಶೇಷವಿಧಿಯಲ್ಲಿ ತಾತ್ಪರ್ಯವೇ ಇಲ್ಲವೆಂದು ಅಭಿಪ್ರಾಯವೋ ಹೇಗೆ ?

ಖಂಡನ ಪ್ರಕಾರದ ವಿವರಣೆ :

೧. ಮೊದಲನೆಯ ವಿಕಲ್ಪದ ಖಂಡನೆಯ ಪ್ರಕಾರದ ವಿವರಣೆ.

"ನಿರ್ವಿಶೇಷಂಬ್ರಹ್ಮ" ಎಂಬಲ್ಲಿ ಸರ್ವವಿಶೇಷಾಭಾವ ಪ್ರತಿಪಾದನಕ್ರಿಯೆಯೇ ಇಲ್ಲವೆಂದು ಹೇಳಲು ಸಾಧ್ಯವಿಲ್ಲ.

ಹೀಗೆ ಹೇಳಿದರೆ ಇದಕ್ಕೆ ಪ್ರತಿಬಂದಿಯನ್ನು ಹೇಳುತ್ತಾರೆ.

ಅದೇನೆಂದರೆ "ಮೂಕೋಽಹಂ" ಎಂಬುದಾಗಿ ಸರ್ವವಚನಕರ್ತೃತ್ವಾಭಾವವನ್ನು ಹೇಳುತ್ತಿರುವಾಗ ಏತದ್ವಚನ ಕರ್ತೃತ್ವವೂ ನಿರಾಸವಾಗಿರುವುದರಿಂದ ಅದರಿಂದ ಬಂದ ವಕ್ತೃತ್ವವೂ ಇಲ್ಲವಾಗಿರುವಾಗ ಅಲ್ಲೂ ಸಹ ಸುಪ್ರಸಿದ್ಧವಾದ ಸ್ವಕ್ರಿಯಾವಿರೋಧವನ್ನು ಎಲ್ಲರೂ ಒಪ್ಪಿರುವಾಗ ಮಾಯಾವಾದಿಯ ಮೇಲೆಕಂಡ ಪ್ರಕ್ರಿಯೆಯಪ್ರಕಾರ "ಮೂಕೋಽಹಂ" ಎಂಬಲ್ಲಿಯೂ ಸಹ ಸರ್ವವಚನಕರ್ತೃತ್ವಾಭಾವ ಪ್ರತಿಪಾದನೆಯೇ ಇಲ್ಲವೆಂದಮೇಲೆ ಅಲ್ಲೂ ಸುಪ್ರಸಿದ್ಧವಾದ ಸ್ವಕ್ರಿಯಾ ವಿರೋಧವು ಬಾರದೇ ಹೋದೀತು. ಆದರೆ ಹಾಗಿಲ್ಲ. ಅಲ್ಲಿ ಸ್ವಕ್ರಿಯಾ ವಿರೋಧವನ್ನು ಎಲ್ಲರೂ ಒಪ್ಪಿರುವಾಗ ಅದನ್ನು ಅಪಲಾಪ ಮಾಡುವಂತಿಲ್ಲ.

"ಮೂಕೋಽಹಂ " ಎಂಬುದರಿಂದ ಪ್ರಸಿದ್ಧವಚನಕ್ರಿಯೆಗಳಾಗಲಿ, ತತ್ಪ್ರಯುಕ್ತವಾದ ವಕ್ತೃತ್ವಗಳಾಗಲಿ ಅಪಲಾಪವು ಯುಕ್ತವಲ್ಲ. ಅದಕಾರಣ ಅಲ್ಲಿ ವಚನಕ್ರಿಯಾದಿಂದಲೇ ವಚನಕ್ರಿಯಾ ನಿಷೇಧಿಸುವ ಪ್ರಯುಕ್ತ ಸ್ವಕ್ರಿಯಾ ವಿರೋಧವು ಅತ್ಯಂತ ಸ್ಪಷ್ಟವೇ ಆಗಿದೆ. ಅದರಂತೆ ಪ್ರಕೃತದಲ್ಲೂ ನಿರ್ವಿಶೇಷಂಬ್ರಹ್ಮ ಎಂಬಲ್ಲಿಯೂ ಕೂಡ ನಿರ್ವಿಶೇಷಂ ಎಂಬುದಾಗಿ ವಿಶೇಷ ನಿರಾಕರಣ ಮಾಡಿರುವ ಪ್ರಯುಕ್ತ ಪ್ರಸಿದ್ಧವಾದ ಪ್ರತಿಪಾದನಕ್ರಿಯೆಯನ್ನಾಗಲಿ ಅದರಿಂದ ಪ್ರಾಪ್ತವಾದ ವಿಶೇಷವನ್ನಾಗಲಿ ಇಲ್ಲವೆಂದು ಅಪಲಾಪ ಮಾಡಲು ಸಾಧ್ಯವಿಲ್ಲ. ಇದರಿಂದ ಸ್ವಕ್ರಿಯಾ ವಿರೋಧವು "ನಿರ್ವಿಶೇಷಂಬ್ರಹ್ಮ " ಎಂಬುದಕ್ಕೆ ಪ್ರಸಕ್ತವಾಗಿದೆ. ಅಪರಿಹಾರ್ಯವಾದ ದೋಷವಾಗಿದೆ.

ಮತ್ತು ಎರಡನೆಯ ವಿಕಲ್ಪದ ಪ್ರಕಾರ ''ನಿರ್ವಿಶೇಷಾಭಾವ ಪ್ರತಿಪಾದನೆಯಲ್ಲಿ ಬೇರೆ ಪ್ರಕಾರವೇ ಕಂಡು ಬಾರದಿರುವುದರಿಂದ, ಅದಕ್ಕೆ ಉಪಾಯವಾಗಿರುವ ಪ್ರತಿಪಾದನಕ್ರಿಯೆಗೇನೇ ಅನ್ಯಥಾಸಿದ್ಧತ್ವವನ್ನು ಹೇಳಿ, ಅದಕ್ಕೆ ಆ ಪ್ರತಿಪಾದನೆಗೆ, ವಿಶೇಷಾಭಾವರೂಪ ವಿಶೇಷಪ್ರಾಪಕತ್ವವು ಇಲ್ಲವೆಂದು ಹೇಳಿದರೆ.

ಸಮಾನನ್ಯಾಯದಿಂದ ''ಮೂಕೋಽಹಂ'' ಎಂಬಲ್ಲಿಯೂ ಸಹ ವಕ್ತೃತ್ವಾಭಾವಬೋಧನದಲ್ಲಿ ಬೇರೆ ಉಪಾಯವೇ ಇಲ್ಲವಾದುದರಿಂದ, ಅದಕ್ಕೆ ಉಪಾಯವಾಗಿ ಪ್ರವೃತ್ತವಾದ ಪ್ರತಿಪಾದನೆಗೆ ಅನ್ಯಥಾಸಿದ್ಧತ್ವವನ್ನು ಹೇಳುವುದರಿಂದ ಆ ವಚನಕ್ರಿಯಾಕ್ಕೂ ವಕ್ತೃತ್ವಪ್ರಾಪಕತ್ವವೇ ಇಲ್ಲವಾಗುವುದರಿಂದ ''ಮೂಕೋಽಹಂ '' ಎಂಬಲ್ಲಿಯೂ ಸಹ ಸ್ವಕ್ರಿಯಾ ವಿರೋಧವು ಇಲ್ಲವೆಂದಾಗಲಿ ಎಂಬ ದೋಷವು ಬರುತ್ತದೆ. ಮತ್ತು ಎರಡನೇ ವಿಕಲ್ಪದಲ್ಲಿನ ಎರಡನೇ ವಿಕಲ್ಪವನ್ನು ಖಂಡಿಸಲಾಗಿದೆ.

ಅದೇನೆಂದರೆ ''ನಿರ್ವಿಶೇಷಂಬ್ರಹ್ಮ'' ಎಂಬುದಕ್ಕೆ ವಿಶೇಷ ವಿಧಿಯಲ್ಲಿ ತಾತ್ಪರ್ಯವೇ ಇಲ್ಲ, ಕೇವಲ ವಿಶೇಷ ನಿಷೇಧದಲ್ಲೇ ತಾತ್ಪರ್ಯವೆಂದರೆ ಅದನ್ನು ಪ್ರತಿಪಾದಿಸುವ ಕ್ರಿಯೆಗೆ ವಿಶೇಷಪ್ರಾಪಕತ್ವವೇ ಇಲ್ಲವೆಂಬುದಾಗಿ ಹೇಳಿದರೆ, ''ಮೂಕೋಽಹಂ'' ಎಂಬಲ್ಲಿಯೂ ಕೂಡ ವಚನಕರ್ತೃತ್ವನಿಷೇಧದಲ್ಲೇ ತಾತ್ಪರ್ಯ, ಏತದ್ವಚನಕರ್ತೃತ್ವದಲ್ಲಿ ತಾತ್ಪರ್ಯವಿಲ್ಲವೆಂದು ಪರ್ಯವಸಾನವಾಗುವುದರಿಂದ ಇಲ್ಲೂ ಸಹ ಸ್ವವಚನವಿರೋಧವು ಹೇಗೆ ಬರುತ್ತದೆ ? ಇಲ್ಲಿ ಸ್ವವಚನ ವಿರೋಧವಿಲ್ಲ. ಸ್ವಕ್ರಿಯಾವಿರೋಧವೆಂದರೆ, ಪ್ರಕೃತದಲ್ಲೂ ಸಹ ನಿರ್ವಿಶೇಂಬ್ರಹ್ಮ ಎಂಬಲ್ಲೂ ಸ್ವಕ್ರಿಯಾ ವಿರೋಧವನ್ನೇ ಹೇಳಿದ್ದೇವೆ.

ಇಷ್ಟು ಅಭಿಪ್ರಾಯದಿಂದಲೇ ಮಹಾನುಭಾವರಾದ ಶ್ರೀಮದಾಚಾರ್ಯರು ಬಹ್ವರ್ಥಗರ್ಭಿತವಾಗಿ '' ನಿರ್ವಿಶೇಷಂ ಬ್ರಹ್ಮ '' ಎಂಬಲ್ಲಿ ''ಮೂಕೋಽಹಂ'' ''ಇತಿವದ್ ಭವೇತ್ '' ಎಂದು ಸದೃಷ್ಟಾಂತವಾಗಿ ನಿರ್ವಿಶೇಷಂಬ್ರಹ್ಮವಾದವನ್ನು ಬಹು ಚಮತ್ಕಾರವಾಗಿ ಖಂಡತುಂಡವಾಗಿ ಖಂಡಿಸಿರುತ್ತಾರೆ.

ಮತ್ತು ''ಮೂಕೋಽಹಮ್ '' ಎಂಬಲ್ಲಿ ವಾಕ್ಯಬಲದಿಂದಲೇ ವಕ್ತೃತ್ವಾಭಾವಕ್ಕೆ ಪ್ರಾಪ್ತಿಯು, ಪ್ರತಿಪಾದನಕ್ರಿಯೆಯಿಂದಲೇ ವಕ್ತೃತ್ವಕ್ಕೆ ಪ್ರಾಪ್ತಿಯು, ಪ್ರತಿಪಾದನಕ್ರಿಯೆಯಿಂದಲೇ ವಿಶೇಷಾಭಾವರೂಪ ವಿಶೇಷಕ್ಕೆ ಪ್ರಾಪ್ತಿಯೆಂದು ಹೇಳಿರುವುದರಿಂದ ''ನಿರ್ವಿಶೇಷಂಬ್ರಹ್ಮ'' ಎಂಬುದಕ್ಕೆ ''ಮೂಕೋಽಹಂ'' ಎಂಬುದಕ್ಕೂ ಸಾಮ್ಯವೇ ಇರುತ್ತದೆ ಎಂಬ ಅಭಿಪ್ರಾಯ ದಿಂದಲೇ ಶ್ರೀಮದಾಚಾರ್ಯರು ''ಮೂಕೋಽಹಮಿತಿವದ್ '' ಭವೇತ್ ಎಂದು ಪ್ರತಿಪಾದಿಸಿರುವರು.

''ನಿರ್ವಿಶೇಷಂಬ್ರಹ್ಮ'' ಎಂಬಲ್ಲಿ ಮಾತ್ರ ಸ್ವವಚನವಿರೋಧವು, ''ಮೂಕೋಽಹಮ್ '' ಎಂಬಲ್ಲಿ ಸ್ವಕ್ರಿಯಾವಿರೋಧವೆಂಬ ವ್ಯತ್ಯಾಸವು ಆಗ್ರಹಮಾತ್ರಮೂಲವೇ ಹೊರತು ಅದು ಪ್ರಾಮಾಣಿಕರಿಂದ ಗ್ರಾಹ್ಯವಾಗಿಲ್ಲ.

**ಪೂರ್ವಪಕ್ಷಿಯುಕ್ತಿ** :- ಪ್ರಥಮಾಧ್ಯಾಯದಲ್ಲಿ (ಸಮನ್ವಯಾಧ್ಯಾಯದಲ್ಲಿ) ಯಾವ ಯಾವ ಶಬ್ದಗಳನ್ನು ಪರಮಾತ್ಮನಲ್ಲಿ ಸಮನ್ವಯಗೊಳಿಸಲಾಗಿವೆಯೋ ಮತ್ತು ಲಕ್ಷಣತ್ವೇನ ಯಾವ ಯಾವುದು ಪ್ರಸಕ್ತವಾಗಿವೆಯೋ ಅವೆಲ್ಲ ಧರ್ಮಗಳಿಗೂ ಪರಮಾತ್ಮನಿಗೂ, ಅಂದರೆ ಲಕ್ಷ್ಯಕ್ಕೂ ಲಕ್ಷಣಕ್ಕೂ ಅಭೇದವನ್ನು ಲಕ್ಷಣಸೂತ್ರವಾದ ಜನ್ಮಾದ್ಯಸ್ಯಯತಃ ಎಂಬಲ್ಲಿ ಸವಿಶೇಷಾಭೇದವನ್ನು ಸಾಧಿಸಿ ಭೇದವ್ಯವಹಾರವನ್ನು ನಿರ್ವಹಿಸಿರುವರು.

ಮೊದಲನೆಯ ಅಧ್ಯಾಯದ ಎರಡನೇ ಪಾದವಾದದಲ್ಲಿ ಸೇರಿದ (ಲಿಂಗಪಾದದಲ್ಲಿ) ಎರಡನೆಯ ಅಧಿಕರಣವು ಅತ್ತ್ರಧಿಕರಣವು.

ಇದರಲ್ಲಿ ಲೋಕತಃ ಅನ್ಯತ್ರಪ್ರಸಿದ್ಧವಾದ "ಅದಿತಿ ಶಬ್ದದಿಂದ ಸಹಿತ" ವಾಗಿ ಉಕ್ತವಾದ ಅತ್ತೃತ್ವವೆಂಬ ಲಿಂಗವನ್ನು ಸಮನ್ವಯಗೊಳಿಸಲಾಗಿದೆ.

ಸಂಹಾರರೂಪವಾದ ಕ್ರಿಯಾತ್ಮಕಲಿಂಗ ಸಮನ್ವಯಪರವಾದ ಈ ಅಧಿಕರಣದಲ್ಲಿ ಕಂಡುಬರುವ ಸಂಹಾರ ರೂಪವಾದ ಕ್ರಿಯೆಯು ಅನಿತ್ಯವಾದುದು.

ಪರಬ್ರಹ್ಮನಾದರೋ "ನಿತ್ಯೋನಿತ್ಯಾನಾಂ " ಮೊದಲಾದ ಶ್ರುತಿಗಳಲ್ಲಿ ಹೇಳಲ್ಪಟ್ಟಂತೆ ಪರಮನಿತ್ಯನಾಗಿದ್ದಾನೆ. ಕ್ರಿಯೆಗಳಿಗೆ ಅನಿತ್ಯತ್ವವು ಸುಪ್ರಸಿದ್ಧವೇ ಆಗಿದೆ.

ಹೀಗಿರುವಲ್ಲಿ ಅನಿತ್ಯವಾದ ಕ್ರಿಯೆಗೂ ನಿತ್ಯವಾದ ಬ್ರಹ್ಮನಿಗೂ ಅಭೇದವು ಹೇಗೆ ?

ವಿರುದ್ಧ ಧರ್ಮಗಳಿಂದ ಕೂಡಿದವುಗಳಿಗೆ ಅಭೇದವು ಕೂಡುವುದಿಲ್ಲ. ಭೇದವನ್ನು ಹೇಳಬೇಕು.

ಯಾವ ಎರಡು ಭಾವಪದಾರ್ಥಗಳುಂಟೋ ಅವು ವಿರುದ್ಧಧರ್ಮಗಳಿಗೆ ಆಶ್ರಯಗಳಾಗಿದ್ದರೆ, ಅವೆರಡೂ ಪರಸ್ಪರ ಭಿನ್ನಗಳೇ ಆಗಿರಬೇಕೆಂಬ ವ್ಯಾಪ್ತಿಯು ಲೋಕದಲ್ಲಿ ಪ್ರಸಿದ್ಧವಾಗಿದೆ.

ಇದರಿಂದ ಒಂದು ಅನುಮಾನವು ಉಕ್ತವಾದಂತಾಗಿದೆ.

> **ಸಂಹಾರಕ್ರಿಯೆ ಮತ್ತು ಬ್ರಹ್ಮರು - ಅಭಿನ್ನಗಳಲ್ಲ - ನಿತ್ಯತ್ವ ಮತ್ತು ಅನಿತ್ಯತ್ವಗಳೆಂಬ ವಿರುದ್ಧ ಧರ್ಮಾಧಿಕರಣಗಳಾಗಿರುವುದರಿಂದ.**

ಯಾವುದು - ಯಾವುದರ ವಿರುದ್ಧವಾದ ಧರ್ಮಕ್ಕೆ ಅಧಿಕರಣವೋ ಅದು ಅದಲ್ಲ.

**ಉದಾ** :- ಘಟಪಟಗಳಂತೆ.

ಎಂಬ ಅನುಮಾನದಿಂದ ಸಂಹಾರಕ್ರಿಯೆಗೂ ಪರಬ್ರಹ್ಮನಿಗೂ ಭೇದವೇ ಇರುತ್ತದೆ. ಅಭೇದವು ಇರುವುದಿಲ್ಲವೆಂದು ಪೂರ್ವಪಕ್ಷಿಯ ಅಭಿಪ್ರಾಯ. ಇದರಿಂದ ಲಕ್ಷಣಸೂತ್ರದಲ್ಲಿ ನಿಶ್ಚಯಿಸಲಾದ ಅಭೇದವು ಸಂಗತವಲ್ಲವೆಂದು ಶಂಕಿಸುವುದು ತಾತ್ಪರ್ಯವಾಗಿದೆ. ಪೂರ್ವಪಕ್ಷಿಗಳ ಈ ಅಭಿಪ್ರಾಯವನ್ನೇ ಅನುವಾದ ಮಾಡಿ ಅದನ್ನು ನಿರಾಕರಿಸಿ ಅನುವ್ಯಾಖ್ಯಾನಕಾರರು ಸಿದ್ಧಾಂತಾನುಗುಣವಾದ ಅರ್ಥವನ್ನು ಸ್ಥಾಪಿಸಿರುತ್ತಾರೆ.

**"ಅನಿತ್ಯತ್ವಾತ್ ಕ್ರಿಯಾಣಾಂ ತು ಕಥಮೇವ ಸ್ವರೂಪತಾ ।**
**ಇತಿಚೇತ್ಸವಿಶೇಷೋಽಪಿ ಕ್ರಿಯಾಶಕ್ತ್ಯಾತ್ಮನಾ ಸ್ಥಿರಃ ।(ಇತ್ಯನುವ್ಯಾಖ್ಯಾನಮ್ )॥**

**ಅಭಿಪ್ರಾಯ** :- ಈಶ್ವರನು ಹೇಗೆ ಸ್ಥಿರನೋ = ನಿತ್ಯನೋ, ಅವನ ವಿಶೇಷವಾದ ಕ್ರಿಯಾರೂಪವಾದ ಧರ್ಮವೂ ಸಹ ಸ್ಥಿರವೇ ಆಗಿದೆ. ಸಂಹರಣಾದಿರೂಪವಾದ ಪರಮೇಶ್ವರನ ಕ್ರಿಯೆಯು ನಿತ್ಯವೆಂದಮೇಲೆ ಅನಿತ್ಯತ್ವವನ್ನು ಹೇಳುವ ಅನುಮಾನಕ್ಕೆ ಸ್ವರೂಪಾಸಿದ್ಧಿದೋಷವನ್ನು ಹೇಳಿದಂತಾಗುತ್ತದೆ.

ಈಶ್ವರನ ಸಂಹರಣಾದಿರೂಪಗಳಾದ ಕ್ರಿಯೆಗಳಿಗೆ ಅನಿತ್ಯತ್ವವನ್ನು ಹೇಳಬೇಕೆಂದು ಆಕ್ಷೇಪಿಸುವವರು ಆ ವಿಷಯದಲ್ಲಿ ಯಾವುದಾದರು ಪ್ರಮಾಣವನ್ನು ಹೇಳಬೇಕು. ಅಥವಾ ಕ್ರಿಯೆಗಳಿಗೆ ನಿತ್ಯತ್ವವನ್ನು ಹೇಳಿದರೆ ಬಾಧಕವನ್ನಾದರೂ ವಿವರಿಸಬೇಕು.

ಎರಡು ಸಹ ಇರುವುದಿಲ್ಲ. ಮೊದಲನೆಯದಾಗಿ ಪ್ರಮಾಣಗಳ ಪೈಕಿ ಪ್ರತ್ಯಕ್ಷವನ್ನಂತೂ ಹೇಳುವಂತೆಯೇ ಇಲ್ಲ.

ಈಶ್ವರನು ಪ್ರತ್ಯಕ್ಷಕ್ಕೆ ವಿಷಯನಲ್ಲ. ಅವನ ಕ್ರಿಯೆಗಳೂ ಪ್ರತ್ಯಕ್ಷಗಳಲ್ಲ. ಆದಕಾರಣ ಅವನ ಕ್ರಿಯೆಗಳಿಗೆ ಅನಿತ್ಯತ್ವವನ್ನು ಪ್ರತ್ಯಕ್ಷಪ್ರಮಾಣದಿಂದ ಸಾಧಿಸಲು ಶಕ್ಯವೇ ಇಲ್ಲ. ಮತ್ತು ಈಶ್ವರನ ಕ್ರಿಯೆಗಳಿಗೆ ಅನಿತ್ಯತ್ವನನ್ನು ಸಾಧಿಸುವ ಲಿಂಗವೂ ಸಹ ಇರುವುದಿಲ್ಲ. ಆಗಮವಾದರೋ ಪರಮೇಶ್ವರನ ಜ್ಞಾನ, ಕ್ರಿಯಾ, ಬಲ, ಶಕ್ತಿ, ಆನಂದಾದಿ ಧರ್ಮಗಳಿಗೆ ನಿತ್ಯತ್ವವನ್ನೇ ಘೋಷಣೆ ಮಾಡುತ್ತಲಿದೆ.

ಪೈಂಗೀಶ್ರುತಿ ವಚನವು ಈ ರೀತಿ ಇದೆ.

**ಜ್ಞಾನಂ ನಿತ್ಯಂ, ಕ್ರಿಯಾನಿತ್ಯಾ, ಬಲಂ ಶಕ್ತಿಃ ಪರಮಾತ್ಮನಃ।**
**ನಿತ್ಯಾನಂದೋಽವ್ಯಯಃ ಪೂರ್ಣೋ ಭಗವಾನ್ ವಿಷ್ಣುರಚ್ಯುತಃ ॥**
**(ಇತಿಪೈಂಗೀಶ್ರುತಿಃ)**

ಆದಕಾರಣ ಪರಮಾತ್ಮನ ಕ್ರಿಯೆಗಳಿಗೆ ಅನಿತ್ಯತ್ವವನ್ನು ಹೇಳುವ ಸಾಧಿಸುವ ಪ್ರಮಾಣಗಳಾವುವೂ ಇರುವುದಿಲ್ಲ.

**ಶಂಕಾ** :- ಪರಮೇಶ್ವರನಲ್ಲಿರುವ ಸಂಹರಣಾದಿಕ್ರಿಯೆಗಳು ನಿತ್ಯಗಳಾದರೆ ಬಾಧಕವು ಉಂಟು. ಆದಕಾರಣ ಅವುಗಳಿಗೆ ನಿತ್ಯತ್ವವನ್ನು ಹೇಳುವುದು ಸರಿಯಿಲ್ಲ.

ಪೂರ್ವಪಕ್ಷೀಯ ಅಭಿಪ್ರಾಯದ ವಿವರಣೆ :

ಸಂಹರಣಾದಿಕ್ರಿಯೆಗಳು (ಪರಮಾತ್ಮನ ಕ್ರಿಯೆಗಳು ) ಸೃಷ್ಟಿಸಮಯದಲ್ಲಿ ಸಂಹಾರಕ್ರಿಯೆಗಳು ನಿತ್ಯಗಳಾಗಿರುವ ಪ್ರಯುಕ್ತ "ವೇದವ್ಯ ಸರ್ವದಾ ಸಂಹಾರಕ್ರಿಯೆಯುಳ್ಳವನು ಪರಮೇಶ್ವರನು" ಎಂದು ಪ್ರತಿಪಾದಿಸಬೇಕು. ಮತ್ತು ಘಟಪಟಾದಿಪ್ರಪಂಚಕ್ಕೆ ಒಟ್ಟೊಟ್ಟಿಗೆ (ಯುಗಪತ್) ವಿನಾಶಗಳು ಆಗಬೇಕಾದಿತು. ಮತ್ತು ಪ್ರಪಂಚದ ಸೃಷ್ಟಿಕಾಲದಲ್ಲಿ

ಸಂಹರಣಕ್ರಿಯಾದಿಂದ ಸಂಹಾರವೂ, ಸಂಹಾರಕಾಲದಲ್ಲಿ ಸೃಷ್ಟಿಕ್ರಿಯಾದಿಂದ ಸೃಷ್ಟಿಯೂ ಆಗಬೇಕಾದೀತು. ಈ ರೀತಿ ಸೃಷ್ಟಿ ಸಂಹಾರಾದಿವ್ಯಾಪಾರವು ತಿಳಿಕೊಳ್ಳಬೇಕು. ಈ ರೀತಿಯಾದ ಬಾಧಕಗಳಿರುವ ಪ್ರಯುಕ್ತ ಪರಮಾತ್ಮನಲ್ಲಿರುವ ಸಂಹರಣಾದಿ ಕ್ರಿಯೆಗಳು ಅನಿತ್ಯಗಳಲ್ಲವೆ ?ನಿತ್ಯಗಳು ಹೇಗೆ ?ಎಂದು ಶಂಕಿಸುವವನ ಅಭಿಪ್ರಾಯ.

**ಸಮಾಧಾನ** :- ಆಯಾ ಕಾರ್ಯಜನನಶಕ್ತಿಯೇ ಕ್ರಿಯೆಯು. ಈ ಕ್ರಿಯಾರೂಪವಾದ ವಿಶೇಷವು ಶಕ್ತ್ಯಾತ್ಮನಾ ಸ್ಥಿರವಾದುದು (ನಿತ್ಯವಾದುದು) ಎಂಬ ಯೋಜನೆಯ ಪ್ರಕಾರ, ಕ್ರಿಯಾ, ಶಕ್ತ್ಯಾತ್ಮನಾ ಎಂಬುದಾಗಿ ಭಿನ್ನಪದವೆಂಬ ಅಭಿಪ್ರಾಯದಿಂದ ''ಕ್ರಿಯಾ, ಶಕ್ತ್ಯಾತ್ಮನಾ, ಸ್ಥಿರಃ '' ಎಂಬ ಅನುವ್ಯಾಖ್ಯಾನವಾಕ್ಯವು ತೊರಟಿದೆ ಎಂಬುದಾಗಿ ಒಂದು ಅಭಿಪ್ರಾಯ.

''ಕ್ರಿಯಾಶಕ್ತ್ಯಾತ್ಮನಾ'' ಎಂಬುದಾಗಿ ಏಕಪದತ್ವವಿವಕ್ಷಾದೃಷ್ಟಿಯಿಂದ ಮತ್ತೊಂದು ಅರ್ಥವೂ ಇಲ್ಲಿ ಅನುವ್ಯಾಖ್ಯಾನಕ್ಕೆ ವಿವಕ್ಷಿತವಾಗಿರುವುದನ್ನು ನ್ಯಾಯಸುಧಾಕಾರರು ವಿವರಿಸುತ್ತಾರೆ. ಈ ಅಭಿಪ್ರಾಯದಲ್ಲಿ ಕ್ರಿಯಾ ಎಂಬ ಶಬ್ದವು ವ್ಯಕ್ತಿವಚನವಾಗಿದೆ.

ಕ್ರಿಯಾ, ಶಕ್ತ್ಯಾತ್ಮನಾ, ವ್ಯಕ್ತಿಶಕ್ತಿರೂಪೇಣ ಕಾರಣೇನೇತಿವಾ(ಎಂದು ನ್ಯಾಯಸುಧಾ) ಕ್ರಿಯಾಕ್ಕೆ, ವ್ಯಕ್ತಿರೂಪತ್ವವೂ ಅಂದರೆ ಎರಡೂ ರೂಪಗಳುಳ್ಳ ಕ್ರಿಯಾರೂಪವಾದ ವಿಶೇಷವು ಸ್ಥಿರವಾದುದು.

ಶಕ್ತಿರೂಪದಿಂದ ಸ್ಥಿರವಾದುದಕ್ಕೆ ಕದಾಚಿತ್ಕವಾದ ವ್ಯಕ್ತಿರೂಪತಾದೃಷ್ಟಿಯಿಂದ ಬಾಧಕಕ್ಕೆ ಪರಿಹಾರವು ಕಂಡುಬಂದಿದೆ.

''ಅಂತೂ ಕ್ರಿಯಾಶಕ್ತ್ಯಾತ್ಮನಾ ಸ್ಥಿರಃ '' ಎಂಬಲ್ಲಿ ಅನುವ್ಯಾಖ್ಯಾನವಾಕ್ಯದಲ್ಲಿ ಕ್ರಿಯಾಶಕ್ತ್ಯಾತ್ಮನಾ ಎಂಬಲ್ಲಿ ಕ್ರಿಯಾ, ಶಕ್ತ್ಯಾತ್ಮನಾ ಎಂಬುದಾಗಿ ಪದದ್ವಯವಿವಕ್ಷಾದಿಂದ ಒಂದು ಯೋಜನಾ, ''ಕ್ರಿಯಾಶಕ್ತ್ಯಾಯಾತ್ಮನಾ '' ಎಂಬುದಾಗಿ ಏಕಪದತ್ವವಿವಕ್ಷಾದಿಂದ ಮತ್ತೊಂದು ಬಗೆಯಾಗಿ ಯೋಜನೆಯು ನ್ಯಾಯಸುಧಾರೀತ್ಯಾ ಅಭಿಪ್ರೇತವಾಗಿದೆ.

ಈ ಸಂದರ್ಭದಲ್ಲಿನ ನ್ಯಾಯಸುಧಾ ವಾಕ್ಯಗಳು ಈ ರೀತಿ ಇವೆ.

> **''ಅಯಮರ್ಥಃ-**
> **ತತ್ರ ಕಾರ್ಯಜನನ ಶಕ್ತಿರೇವ ಕ್ರಿಯೇತ್ಯುಚ್ಯತೇ।**
> **ಅತಃ ಶೇಷರೂಪೇಣ ಸ್ಥಿರಾ, ಸಾ, ಯದಾ ವ್ಯಜ್ಯತೇ ತದಾವ್ಯವಹಾರಾಲಂಬನಂ**
> **ತತ್ಕಾರ್ಯಜನನೇ ಚ ಭವತೀತಿ, ನ , ಕಶ್ಚಿದ್ದೋಷ ಇತಿ ॥**
> **''ಕ್ರಿಯಾಶಕ್ತ್ಯಾತ್ಮನಾ '' ವ್ಯಕ್ತಿಶಕ್ತಿರೂಪೇಣಕಾರಣೇನೇತಿವಾ" ॥**
> **(ಇತಿನ್ಯಾಯಸುಧಾ)**

**ಅಭಿಪ್ರಾಯವಿಶೇಷದ ವಿವರಣೆ :-**

ಆಯಾ ಕಾರ್ಯಜನನಶಕ್ತಿಯೇ ಕ್ರಿಯೆಯೆಂದನಿಸಿದೆ. ಶಕ್ತಿಯವ್ಯಕ್ತಿಯೆಂದರೆ, ವ್ಯಕ್ತಿಎಂಬ ಶಬ್ದಕ್ಕೆ, ಶಕ್ತಿಯ ಅವಾಪ್ತವಿಶೇಷವೆಂದರ್ಥ.

"ಸೃಷ್ಟಿಯ ಸಮಯದಲ್ಲಿ ಪರಮಾತ್ಮನಲ್ಲಿ ಸಂಹಾರರೂಪವಾದ ಕ್ರಿಯೆಯು ಶಕ್ತಿರೂಪದಿಂದ ಇದ್ದಾಗ್ಯೂ, ಶಕ್ತಿರೂಪದಿಂದ ವ್ಯವಹಾರಕ್ಕೆ ವಿಷಯವಾಗುವದಿಲ್ಲ. ವ್ಯಕ್ತಿರೂಪದಿಂದ ಮಾತ್ರ ವ್ಯವಹಾರಕ್ಕೆ ಆಸ್ಪದವಾಗುತ್ತದೆ. ಸೃಷ್ಟಿಯ ಸಮಯದಲ್ಲಿ ಸಂಹರಣಕ್ರಿಯೆಗೆ ವ್ಯಕ್ತಿತಾ ಇಲ್ಲವಾದ್ದರಿಂದ ಆಗ ಅಂದರೆ ಸೃಷ್ಟಿಸಮಯದಲ್ಲಿ ಸಂಹಾರವೂ ಇಲ್ಲ. ಆದಕಾರಣ ಶ್ರುತಿಯಲ್ಲಿ ಅಂತಹ ವ್ಯವಹಾರವಿಲ್ಲ.

ವ್ಯಕ್ತ್ಯವಸ್ಥೆಯಿಂದ ಕೂಡಿದ ಕ್ರಿಯೆಗೆ ಮಾತ್ರ ಕಾರ್ಯಜನಕತ್ವ ಇದೆ. ಸೃಷ್ಟಿಸಮಯದಲ್ಲಿ ಸರ್ಜನ ಕ್ರಿಯೆಗೆ ಮಾತ್ರ ವ್ಯಕ್ತಿತಾ ಉಂಟು. ಸಂಹರಣಕ್ರಿಯೆಗೆ ಆಗಿನ ಸಮಯದಲ್ಲಿ ಸಂಹಾರಾದಿಗಳಿಗೆ ಪ್ರಸಕ್ತಿಯೇ ಇಲ್ಲ.

ಈ ವಿಧವಾದ ಪ್ರಕ್ರಿಯಾವಿಶೇಷದಿಂದ, ಶಕ್ತಿಯ ವ್ಯಕ್ತಾವಸ್ಥೆಕ್ಕೆ ಜನಕತ್ವವನ್ನು ಒಪ್ಪಿರುವ ಪ್ರಯುಕ್ತ ಯುಗಪದ್ (ಒಟ್ಟಿಗೆ) ಜನನನಾಶಗಳು ಆಗಲಿ ಎಂಬ ಬಾಧಕವೂ ಸಹ ಪರಿಹೃತವಾಯಿತು.

ಈ ವಿಧವಾದ ಅವಸ್ಥಾವಿಶೇಷವು ಶಕ್ತಿಯ ದಶಾವಿಶೇಷವು ಅದರಿಂದ ಉಂಟಾಗುವ ಕಾರ್ಯಮಾತ್ರದಿಂದ ಉನ್ನೇಯವಾಗಿದೆ. (ಊಹಿಸಲ್ಪಡತಕ್ಕದ್ದಾಗಿದೆ.)

ನಿರ್ಗಳಿತವಾದ ಅಭಿಪ್ರಾಯ :-

ಸರ್ಜನದಶಾದಲ್ಲಿ, ಇತರ ಕ್ರಿಯೆಗೆ, (ಸಂಹರಣಕ್ರಿಯೆಗೆ), ವ್ಯವಹಾರಕ್ಕೆ ಕಾರಣವಲ್ಲದ ಶಕ್ತಿರೂಪದಿಂದ ಇರುವಿಕೆಯು ಇದ್ದಾಗ್ಯೂ ಅದು ನಿತ್ಯವೇ ಆದಾಗ್ಯೂ, ಆ ದಶಾದಲ್ಲಿ ಕಾರ್ಯಜನಕವಲ್ಲದುದರಿಂದ ಸೃಷ್ಟಿಕಾಲದಲ್ಲಿ ಸಂಹಾರವಾಗಲಿ ಎಂಬ ಪೂರ್ವಪಕ್ಷಿಗಳ ಶಂಕೆಗೆ ಅವಕಾಶವೇ ಇಲ್ಲ. ಅಂತೂ ಪರಮಾತ್ಮನ ಕ್ರಿಯೆಗಳೆಲ್ಲವೂ ನಿತ್ಯವೇ ಎಂಬಲ್ಲಿ ಯಾವ ಬಾಧಕಗಳೂ ಇರುವುದಿಲ್ಲ.

"ತತ್ತತ್ಕಾರ್ಯಜನನಶಕ್ತಿರೇವ ಕ್ರಿಯಾ" ಎಂದು ಸಿದ್ಧಾಂತದಲ್ಲಿ ಹೇಳಿರುವ ಪ್ರಯುಕ್ತ, ಅಂತಹ ಶಕ್ತಿಯು ಸಂಹಾರಕಾಲದಲ್ಲಿ (ಆ ಶಕ್ತಿಯು) ವ್ಯಕ್ತವೋ ಅಲ್ಲವೋ ಎಂದು ಶಂಕಿಸಬಹುದು. (ಒಂದೇ ಶಕ್ತಿಯೆಂಬ ಅಭಿಪ್ರಾಯದಿಂದ ಶಂಕೆಯು) ಸಂಹಾರಕ್ರಿಯೆಗೆ ಸಂಹಾರ ಕಾಲದಲ್ಲಿ ವ್ಯಕ್ತಿತ್ವವಿಲ್ಲವೆಂದರೆ ಸಂಹಾರ ಕಾಲದಲ್ಲಿ ಸಂಹಾರದ ವ್ಯವಹಾರವಾಗಲಿ, ಸಂಹರಣವಾಗಲಿ ಹೇಗೆ ತಾನೇ ಆದೀತು ?

ಒಂದೇ ಶಕ್ತಿಯಾಗಿ ಅದು ಸಂಹಾರಕಾಲದಲ್ಲಿ ವ್ಯಕ್ತಿತಾದಶಾಪನ್ನವಾದರೆ ಅದರಿಂದ ಆ ಕಾಲದಲ್ಲಿ ಸಂಹರಣ ವ್ಯಾಪಾರವು ಆಗುವಂತೆ ಸಂಹಾರ ಕಾಲದಲ್ಲಿ ಸೃಷ್ಟಿವ್ಯವಹಾರವೂ ಬರಬೇಕಾದೀತು. ಸೃಷ್ಟಿಯೂ ಸಹ ಆಗಬೇಕಾದೀತು. ಎಂದು ಕೆಲವರು ಆಕ್ಷೇಪಿಸಬಹುದು.

ಆದರೆ ಸಿದ್ಧಾಂತದಲ್ಲಿ (ಶಕ್ತಿಯ) ಕ್ರಿಯಾಸಿದ್ಧವಾದ ವ್ಯಕ್ತಿಯೆಂಬುದು ಸಾಮಾನ್ಯವಾಗಿ ಕಾಲಸಂಬಂಧ ರೂಪವಾದುದು ಎಂಬುದು ವಿವಕ್ಷಿತವಾಗಿದ್ದರೆ ಇಂತಹ ದೋಷಕ್ಕೆ ಅವಕಾಶವುಂಟು. ಸಾಮಾನ್ಯವಾಗಿ ಕಾಲಸಂಬಂಧರೂಪವಾದ ವ್ಯಕ್ತಿಯೆಂಬುದು ಇಲ್ಲಿ ವಿವಕ್ಷಿತವಾಗಿಲ್ಲ. ಮತ್ತೇನೆಂದರೆ ತತ್ತತ್ಕಾಲಸಂಬಂಧವಿಶೇಷರೂಪವಾದ ವ್ಯಕ್ತತೆಯೇ ಇಲ್ಲಿ ವಿವಕ್ಷಿತವಾಗಿದೆ.

ಅನುವ್ಯಾಖ್ಯಾನಕಾರರು ಪರಮರಹಸ್ಯವನ್ನು ಅತಿಪ್ರಸಂಗಪರಿಹಾರವಾದ ಅರ್ಥವಿಶೇಷವನ್ನೂ ಕಾರಿಕೆಯಲ್ಲಿ ಮಾರ್ಮಿಕವಾಗಿ ತಿಳಿಸಿದ್ದಾರೆ.

ಅದೇನೆಂದರ "ಸವಿಶೇಷೋಽಪಿ ಕ್ರಿಯಾಶಕ್ತ್ಯಾತ್ಮನಾ ಸ್ಥಿರಃ" (ಅನುವ್ಯಾಖ್ಯಾನ)

"ಸವಿಶೇಷೋಽಪಿ" ಎಂಬುದರಿಂದ ಸೂಚಿಸಿರುತ್ತಾರೆ.

**ಅಭಿಪ್ರಾಯ** :- ವ್ಯವಹಾರಕ್ಕೆ ಕಾರಣವಾದ ವ್ಯಕ್ತಿರೂಪವಾದ ವಿಶೇಷವು ಏನುಂಟೋ ಅದು ಪರಮಾತ್ಮನಲ್ಲಿ ಅವಾಂತರ, ಅನಂತ, ವಿಶೇಷಗಳಿಂದ ಸಹಿತವಾಗಿದೆ. ಆದಕಾರಣ ವ್ಯವಹಾರದ ಸಾಂಕರ್ಯಕ್ಕೆ ಅವಕಾಶವಿಲ್ಲ. ಪರಮೇಶ್ವರ ನಿಗೆ ನಿತ್ಯಕ್ರಿಯೆಯನ್ನು ಒಪ್ಪುವ ಸಿದ್ಧಾಂತಿಗಳು ಕ್ರಿಯೆಗೆ ಶಕ್ತಿವ್ಯಕ್ತಿರೂಪತ್ವವನ್ನೂ, ವ್ಯಕ್ತಿರೂಪದಿಂದ ವ್ಯವಹಾರವನ್ನೂ, ವ್ಯಕ್ತಿಗೂ ಸಹ ಅವಾಂತರ ಅನೇಕ ವಿಶೇಷಪರತ್ವವನ್ನೂ ಒಪ್ಪಿದ್ದಾರೆ.

ಈ ರೀತಿಯಾದ ಪರಮಾತ್ಮನಲ್ಲಿನ ಜಗತ್ತಿನ ಸರ್ಜನಾದಿಕ್ರಿಯೆಗೆ (ಶಕ್ತಿಗೆ) ಶಕ್ತಿವ್ಯಕ್ತಿರೂಪತ್ವದ ವಿವಕ್ಷಾದಿಂದ, ವ್ಯಕ್ತಿಗೂ ಸಹ ಅವಾಂತರಾನೇಕವಿಶೇಷಮತ್ತ್ವಸ್ವೀಕಾರದೃಷ್ಟಿಯಿಂದ ಸಕಲದೋಷಗಳೂ ಪರಿಹೃತವಾಗುತ್ತವೆ. ಯಾವ ಅತಿ ಪ್ರಸಂಗಕ್ಕೂ ಅವಕಾಶವಿಲ್ಲ.

ಇದನ್ನು ನೈಯ್ಯಾಯಿಕರೂ ಸಹ ಒಪ್ಪಲೇಬೇಕು. ಇಲ್ಲವಾದರೆ ಅವರ ಮತದಲ್ಲೂ "ಸರ್ವದಾ ಸಂಹಾರವಾಗಲಿ" ಎಂಬ ಅತಿಪ್ರಸಕ್ತಿಗೆ ಅವಕಾಶವಾಗುತ್ತದೆ. ಪರಮಾತ್ಮನಿಗೆ ನಿತ್ಯಕ್ರಿಯೆಯನ್ನು ಒಪ್ಪದಿರುವ ನೈಯ್ಯಾಯಿಕರು ಪರಮೇಶ್ವರನ, ನಿತ್ಯವಾದ, ಜ್ಞಾನ, ಇಚ್ಛೆ, ಪ್ರಯತ್ನಗಳಿಂದ ಪ್ರಪಂಚದ ಸಂಹಾರವನ್ನು ಹೇಳುತ್ತಾರೆ. ಸಂಹಾರಕ್ಕೆ ಕಾರಣವಾದ ಇವೆಲ್ಲಾ ನಿತ್ಯವಾದುದರಿಂದ ಸರ್ವದಾ ಸಂಹಾರವಾಗಲಿ ಎಂಬ ದೋಷವು ಪ್ರಸಕ್ತವಾಗುತ್ತದೆ.

ಪರಮೇಶ್ವರನ ಜ್ಞಾನೇಚ್ಛಾದಿಗಳು ನಿತ್ಯಗಳಾದಾಗ್ಯೂ, ಸಂಹಾರವ್ಯಾಪಾರಕ್ಕೆ ಕಾರಣವಾದ ಸಹಕಾರಿಗಳು, ಸೃಷ್ಟಿ ಕಾಲದಲ್ಲಿ ಇಲ್ಲ. ಆದ್ದರಿಂದ ಸೃಷ್ಟಿಕಾಲದಲ್ಲಿ ಸಂಹಾರಕ್ಕೆ ಪ್ರಸಕ್ತಿಯಿಲ್ಲವೆಂಬ ಅವರ ಸಮಾಧಾನವು ಸರಿಯಿಲ್ಲ. ಏಕೆಂದರೆ, ಪರಮೇಶ್ವರನ ಜ್ಞಾನ ಮತ್ತು ಇಚ್ಛೆಗಳು ನಿತ್ಯವಾಗಿವೆ. ಅಂತಹ ನಿತ್ಯೇಚ್ಛಾಧೀನವೇ ಆಗಿರತಕ್ಕ ಸಹಕಾರಿಗಳೂ ಸಹ ನಿತ್ಯ ಗಳಾಗಿರುವ ಪ್ರಯುಕ್ತ ಸರ್ವದಾಸಂಹಾರವಾಗಲಿ ಎಂಬ ದೋಷಕ್ಕೆ ಅವರ ಮತದಲ್ಲಿ ಪರಿಹಾರವೇ ಇಲ್ಲ.

ನೈಯ್ಯಾಯಿಕರ ಮತ್ತೊಂದು ಸಮಾಧಾನವೂ ಸರಿಯಿಲ್ಲ.

ಸಂಹಾರಾದಿಗಳಿಗೆ ಕಾರಣವಾದುದು ಪರಮೇಶ್ವರನ ಇಚ್ಛಾದಿಗಳು ಮಾತ್ರವಲ್ಲ. ಅಂತಹ ಇಚ್ಛೆಗೆ ಸಂಹಾರ ವಿಷಯ ಕತ್ವವು ಮುಖ್ಯವಾಗಿದ್ದರೆ ಮಾತ್ರ ಸಂಹಾರವಾಗುತ್ತದೆ. ಇಲ್ಲವಾದರೆ ಇಲ್ಲವೆಂಬ ಸಮಾಧಾನವೂ ಸಂಗತವಲ್ಲ.

ಅಂದರೆ ಸಂಹಾರವಿಷಯವಿಶೇಷವಿಶಿಷ್ಟವಾದ ಇಚ್ಛೆಯೇ ಸಂಹಾರಕ್ಕೆ ಕಾರಣ, ಕೇವಲ ಇಚ್ಛೆಯು ಅಲ್ಲವೆಂಬುದು ಕೂಡುವುದಿಲ್ಲ.

ಅವರ ಅಭಿಪ್ರಾಯವು ಹೀಗಿದೆ :

ಸೃಷ್ಟಿಸಮಯದಲ್ಲಿ ಇಚ್ಛೆಯು ಮಾತ್ರವಿದೆ. ಆಗ ಸಿಸೃಕ್ಷಾ ಉಂಟು, ಸರ್ಜನವಿಷಯಕತ್ವವು ಮಾತ್ರ ಉಂಟು. ಅಂದರೆ ಸಿಸೃಕ್ಷಾ ಇರುವ ಪ್ರಯುಕ್ತ ಸೃಷ್ಟಿಯು ಆಗಿರುತ್ತದೆ. ಸೃಷ್ಟಿಕಾಲದಲ್ಲಿ ಸಂಜಿಹೀರ್ಷಾ ಇಲ್ಲ. ಅದು ಸಂಹಾರಕಾಲದಲ್ಲಿ ಮಾತ್ರ ಇರುತ್ತದೆ. ಸಂಹಾರಸಮಯದಲ್ಲಿ ಸಿಸೃಕ್ಷಾ ಇಲ್ಲ. ಆದಕಾರಣ ಸೃಷ್ಟಿಸಮಯದಲ್ಲಿ ಸಂಹಾರವಾಗಲಿ, ಸಂಹಾರಸಮಯದಲ್ಲಿ ಸೃಷ್ಟಿಯಾಗಲಿ ಎಂಬ ದೋಷವೂ, ಯುಗಪತ್ (ಒಟ್ಟಿಗೆ) ಸೃಷ್ಟಿಸಂಹಾರಗಳಾಗಲಿ ಎಂಬ ದೋಷವೂ ಪ್ರಸಕ್ತಿಯು ಇಲ್ಲವೆಂಬ ಅವರ ಸಮಾಧಾನವೂ ಸಂಗತವಾಗಿಲ್ಲ.

**ವಿತರ್ಕೆಂದರೆ** :- ಈಶ್ವರನ ಇಚ್ಛೆಗೆ (ಸಂಜಿಹೀರ್ಷಾದಿಗಳು ಆಗಂತುಕ ಧರ್ಮಗಳನ್ನು ಒಪ್ಪಿ ಆಗಂತುಕ ಧರ್ಮಗಳನ್ನು ಇಚ್ಛಾ ಎಂಬ ಗುಣಕ್ಕೆ ನೈಯ್ಯಾಯಿಕರು ಒಪ್ಪಿ, ಆಗಂತುಕಕರ್ಮಜನಕತ್ವವನ್ನು ಹೇಳಬೇಕಾಗುತ್ತದೆ. ಇದನ್ನು ಅವರು ಒಪ್ಪಿಲ್ಲ. ಹಾಗೆ ಹೇಳಿದರೆ ಅಪಸಿದ್ಧಾಂತದೋಷವು ಬರುತ್ತದೆ.

ಮತ್ತು ನಿತ್ಯೇಚ್ಛಾವ್ಯಕ್ತಿಗಿಂತಲೂ ವ್ಯತಿರಿಕ್ತವಾದ = ಪ್ರತ್ಯೇಕವಾದ ಸಂಜಿಹೀರ್ಷಾದಿಗಳಿಂದಲೇ ಸಂಹಾರಾದಿಗಳಾಗುವುದರಿಂದ ಇಚ್ಛಾದಿಗಳನ್ನು ಕಲ್ಪಿಸಬೇಕಾಗಿಯೇ ಇಲ್ಲ. ಅದು ವ್ಯರ್ಥ.

ಮತ್ತು ಸಂಜಿಹೀರ್ಷಾದಿಗಳು, ನಿತ್ಯಗಳೋ ಅನಿತ್ಯಗಳೋ ಎಂದು ಕೇಳಬೇಕು.

ಸಂಜೀಹೀರ್ಷಾದಿಗಳು ನಿತ್ಯಗಳಾದರೆ ನಿತ್ಯವೂ ಸಂಹಾರಾದಿಗಳಾಗಬೇಕು. ಅನಿತ್ಯಗಳಾದರೆ, ಸಂಹಾರದಿಂದ ಸಂಜಿ ಹೀರ್ಷಾ ಸಂಜೀಹೀರ್ಷಾದಿಂದ ಸಂಹಾರವೆಂಬುದಾಗಿ ಅನ್ಯೋನ್ಯಾಶ್ರಯದೋಷವು.

ಇಚ್ಛೆಗೆ ವಿಷಯವಾದುದು ಸಂಹಾರವು, ಅಂತಹ ವಿಷಯಭೂತವಾದ ಸಂಹಾರದಿಂದ ಇಚ್ಛೆಯಲ್ಲಿ ಸಂಜಿಹೀರ್ಷಾತ್ವವೆಂಬ ವಿಶೇಷವು ಉಂಟಾಗುವುದು ಎಂದರೆ,

ಸಂಹಾರಾದಿವಿಷಯತ್ವವು ಇಚ್ಛೆಗೆ ಆಗಂತುಕವೋ ಅಥವಾ ನಿತ್ಯವಾಗಿದೆಯೋ ಎಂದು ಕೇಳಬೇಕಾಗುತ್ತದೆ.

ಮೊದಲನೆಯದಾಗಿ ಆಗಂತುಕವೆನ್ನಲು ಸಾಧ್ಯವಿಲ್ಲ.

ನ್ಯಾಯಮತದಲ್ಲಿ ಇಚ್ಛೆಯೆಂಬುದು ಗುಣವಾಗಿರುವುದರಿಂದ ಗುಣಗಳಲ್ಲಿ ಆಗಂತುಕಧರ್ಮದ ಉತ್ಪತ್ತಿಯನ್ನು ನೈಯ್ಯಾಯಿಕರು ಒಪ್ಪಿಲ್ಲ. ಸಂಹಾರವಿಷಯತ್ವವು ಇಚ್ಛೆಯಲ್ಲಿ ನಿತ್ಯವಾಗಿರುವುದಾದರೆ ಸರ್ವದಾ (ಯಾವಾಗಲೂ) ಸಂಹಾರಾದಿಗಳಾಗಬೇಕು. ಆದಕಾರಣ ನೈಯ್ಯಾಯಿಕರೇ ಮೊದಲಾದ ಇತರವಾದಿಗಳೂ ಸಹ ಶಕ್ತಿ ವ್ಯಕ್ತಿರೂಪತ್ವವನ್ನು ಅನುಸರಿಸಲೇಬೇಕು.

ಅಂತಹ ಶಕ್ತಿವ್ಯಕ್ತಿರೂಪತ್ವವನ್ನು ನಾವು ಭಗವಂತನ ಕ್ರಿಯೆಗೆ ಒಪ್ಪಿ ಸಕಲಬಾಧಕಗಳನ್ನು ಪರಿಹರಿಸಿರುತ್ತೇವೆ. ಅಂದರೆ ನೈಯ್ಯಾಯಿಕರ ಮತದಲ್ಲೂ ಸಹ ಸಂಜಿಹೀರ್ಷಾ ಎಂಬುದು ನಿತ್ಯವಾದಾಗ್ಯೂ, ಸಿಸೃಕ್ಷಾಸೂ ನಿತ್ಯರಾದಾಗ್ಯೂ, ಸಂಜಿಹೀರ್ಷಾ ಸೃಷ್ಟಿಕಾಲದಲ್ಲಿದ್ದಾಗ್ಯೂ, ಸಿಸೃಕ್ಷಾ ಸಂಹಾರಕಾಲದಲ್ಲಿದ್ದಾಗ್ಯೂ ಅವೆರಡೂ ಶಕ್ತಿರೂಪದಿಂದ ಇದ್ದಾಗ್ಯೂ ವ್ಯಕ್ತಿರೂಪದಿಂದಲೇ ಕಾರ್ಯಕಾರಿಯಾಗುವುದರಿಂದ ಯಾವಾಗ ಸಂಜಿಹೀರ್ಷಾಕ್ಕೆ ವ್ಯಕ್ತಿಯು ಉಂಟೋ ಆಗಲೇ ಸಂಹಾರವು,

ಸ್ವಸ್ವಕಾಲದಲ್ಲಿ ಅದಕ್ಕೆ ವ್ಯಕ್ತಿರೂಪತ್ವವು ಇಲ್ಲದಿರುವುದರಿಂದ ಯುಗಪತ್ (ಒಟ್ಟಿಗೆ) ಜನನ ವಿನಾಶಗಳಿಗೆ ಪ್ರಸಂಗವಿಲ್ಲವೆಂದು ಶಕ್ತಿವ್ಯಕ್ತಿತ್ವವನ್ನು ಆಶ್ರಯಿಸಿಯೇ ದೋಷವನ್ನು ಪರಿಹರಿಸಬೇಕಾಗಿದೆ. ಅದು ಪರಮಾತ್ಮನ ಕ್ರಿಯೆಗೂ ಸಮಾನವೇ ಆಗಿದೆ

ಆದಕಾರಣ ಸಿದ್ಧಾಂತದ ಪ್ರಕ್ರಿಯೆಗೆ ಯಾವ ಬಾಧಕವೂ ಇರುವುದಿಲ್ಲವೆಂದು ಮುಖ್ಯವಾದ ತಾತ್ಪರ್ಯ.

**ಕ್ರಿಯೆಯ ಅವಸ್ಥಾ ವಿವರಣೆ** :- ಕ್ರಿಯೆಯ ಶಕ್ತಿ ವ್ಯಕ್ತಿರೂಪಗಳು ಅಭಿನ್ನಗಳೇ ಆಗಿವೆ, ಕ್ರಿಯೆಯಲ್ಲಿ ಶಕ್ತಿತ್ವ, ವ್ಯಕ್ತಿತ್ವರೂಪವಾದ ಅರ್ಥದ್ವಯ ವ್ಯವಸ್ಥಾಪಕವಾದ, ಶಕ್ತಿತ್ವ ವ್ಯಕ್ತಿತ್ವರೂಪ ಭೇದ ಕಾರ್ಯನಿರ್ವಾಹಕವಾದ ಎರಡು ವಿಧವಾದ ಅರ್ಥಾಂತರವಾದ ವಿಶೇಷವೂ ಇರುತ್ತದೆ.

ಶಕ್ತಿತ್ವ ವ್ಯಕ್ತಿತ್ವಗಳೇ ವಿಶೇಷಗಳಲ್ಲ. ಅವೆರಡಕ್ಕೆ ವ್ಯವಸ್ಥಾಪಕಗಳಾದ ವಿಶೇಷಗಳು ಬೇರೆಯಾಗಿಯೇ ಇವೆ.

ಆ, ಶಕ್ತಿತ್ವ, ವ್ಯಕ್ತಿತ್ವಗಳಿಗೆ ಉಪಪಾದಕಗಳಾದ ದ್ವಿವಿಧ ವಿಶೇಷವೂ ಧರ್ಮಿಭೂತವಾದ ಶಕ್ತಿವ್ಯಕ್ತಿಗಳ ಧರ್ಮಗಳಾದ ಶಕ್ತಿತ್ವ, ವ್ಯಕ್ತಿತ್ವಗಳಿಗೆ ಉಪಪಾದಕಗಳಾದ ಎರಡು ಬಗೆಯಾದ ವಿಶೇಷವು ಪರಸ್ಪರವಾಗಿಯೂ ಧರ್ಮಿಭೂತವಾದ ಶಕ್ತಿ ವ್ಯಕ್ತಿಗಳೆಂಬ ಧರ್ಮಿಯಿಂದಲೂ ಅಭಿನ್ನವೇ ಆದಾಗ್ಯೂ, ಅದು ಸ್ವನಿರ್ವಾಹಕವಾಗಿದೆ. ಅಂದರೆ ಸ್ವನಿರ್ವಾಹಕತ್ವವೆಂಬ ವಿಶೇಷವನ್ನುಳ್ಳದುದಾಗಿದೆ.

ಶಕ್ತಿಯೇ ಕ್ರಿಯೆಯೆಂಬಲ್ಲಿ

''ನ ತಸ್ಯ ಕಾರ್ಯಂ ಕರಣಂ ಚ ವಿದ್ಯತೇ ನ ತತ್ಸಮಶ್ಚಾಭ್ಯಧಿಕಶ್ಚ ದೃಶ್ಯತೇ ।
ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ'' ।।
(ಶ್ವೇತಾಶ್ವತರಶ್ರುತಿ)

ಎಂಬ ಶ್ರುತಿವಚನವೇ ಪ್ರಮಾಣವಾಗಿದೆ. ಸ್ವಾಭಾವಿಕೀ ಎಂದರೆ ಯಾವತ್ಸ್ವಭಾವಿನೀ ಎಂದರ್ಥ.

ಅಂತಹ ಪರಮಾತ್ಮನ ಶಕ್ತಿರೂಪಕ್ರಿಯೆಯು (ಜ್ಞಾನ, ಬಲ, ಕ್ರಿಯಾರೂಪವಾದುದು) ನಿತ್ಯವಾದುದು ಎಂಬಲ್ಲಿ ಪೈಂಗೀಶ್ರುತಿ ವಚನವು ಪ್ರಮಾಣವಾಗಿದೆ.

**''ಜ್ಞಾನಂ ನಿತ್ಯಂ ಕ್ರಿಯಾ ನಿತ್ಯಾ, ಬಲಂ ಶಕ್ತಿಃ ಪರಾತ್ಮನಃ ।**
**ನಿತ್ಯಾನಂದೋಽಕ್ಷಯಃ ಪೂರ್ಣೋ ಭಗವಾನ್ ವಿಷ್ಣುರಚ್ಯುತಃ ।। (ಇತಿ ಪೈಂಗೀಶ್ರುತಿಃ)**

**ತಾತ್ಪರ್ಯ** :- ಪರಮಾತ್ಮನ, ಜ್ಞಾನವೂ ನಿತ್ಯ, ಕ್ರಿಯೆಯು ನಿತ್ಯವಾದುದು, ಬಲ, ಶಕ್ತಿ, ಆನಂದ ಎಲ್ಲವೂ ನಿತ್ಯವಾದವುಗಳು, ಯಾವದ್ದ್ರವ್ಯಭಾವಿಧರ್ಮಗಳಾಗಿವೆ. ಸವಿಶೇಷಾಭಿನ್ನ ಧರ್ಮಗಳಾಗಿವೆ. ಇಂತಹ ಪರಮಾತ್ಮನು ನಾಲ್ಕು ಬಗೆಯಾದ ನಾಶರಹಿತನಾಗಿದ್ದಾನೆ. ಜ್ಞಾನಾನಂದಾಗಳಿಂದ ದೇಶತಃ ಕಾಲತಃ ಗುಣತಃ ಪರಿಪೂರ್ಣನೇ ಆಗಿರುತ್ತಾನೆ.

ಈಶ್ವರನ ಕ್ರಿಯೆಯು ನಿತ್ಯವಾದುದು. ಇದಕ್ಕೆ ಶ್ರುತಿವಚನವೇ ಪ್ರಮಾಣ. ಘಟಾದಿಗಳ ಕ್ರಿಯೆಗಳು ಅನಿತ್ಯವಾದವುಗಳಾಗಿವೆ. ಘಟಾದಿಕ್ರಿಯೆಗಳು ನಿತ್ಯಗಳೆಂಬ ವಿಷಯದಲ್ಲಿ ಯಾವ ಪ್ರಮಾಣವೂ ಇರುವುದಿಲ್ಲ. ಆದಕಾರಣ ಅಲ್ಲಿ ಧರ್ಮಿಗೂ ಧರ್ಮಕ್ಕೂ ಭೇದವನ್ನೋ ಭೇದಾಭೇದವನ್ನೋ ಹೇಳಬೇಕು. ನಿತ್ಯವಲ್ಲದ್ದರಿಂದ ಭೇದಕ್ಕೆ ಪ್ರತಿನಿಧಿಯಾದ ವಿಶೇಷವನ್ನು ಅಲ್ಲಿ ಆಶ್ರಯಿಸಬೇಕಾಗಿಲ್ಲ.

ನಿತ್ಯಾನಿತ್ಯಕ್ರಿಯೆಗಳ ವಿಮರ :

ತಾರ್ಕಿಕರು, ಸ್ವರೂಪ, ಸಹಕಾರಿಗಳ ಸಮವಧಾನಗಳಿಗಿಂತಲೂ ವ್ಯತಿರಿಕ್ತವಾದ (ಪ್ರತ್ಯೇಕವಾದ) ಶಕ್ತಿಯೆಂಬುದೇ ಇಲ್ಲವೆಂದು ಹೇಳುತ್ತಾರೆ.

ಈ ರೀತಿ ಹೇಳತಕ್ಕ ತಾರ್ಕಿಕರಿಗೆ, ಶ್ರುತಿವಿರೋಧವೂ ಸ್ಮೃತಿವಿರೋಧವೂ ಅಪರಿಹಾರ್ಯವಾಗಿದೆ.

ಪೈಂಗೀಶ್ರುತಿ ವಚನದಲ್ಲಿ "ಜ್ಞಾನಂ ನಿತ್ಯಂ ಕ್ರಿಯಾ ನಿತ್ಯಾ, ಬಲಂ ಶಕ್ತಿಃ ಪರಾತ್ಮನಃ" ಎಂಬುದಾಗಿ ಸಹಕಾರಿರೂಪವಾದ ಜ್ಞಾನಾದಿಗಳಿಗಿಂತಲೂ ಪ್ರತ್ಯೇಕವಾದ ಶಕ್ತಿಯು ಉಂಟೆಂದು ಉಕ್ತವಾಗಿದೆ. ಅಂತಹ ಶಕ್ತಿಯು ಪ್ರಮಾಣಪ್ರಮಿತವಾಗಿರುವುದರಿಂದ ತಾರ್ಕಿಕರಿಗೆ ಈ ಶ್ರುತಿವಚನ ವಿರೋಧವು ಬರುತ್ತದೆ. ಅವರ ಪ್ರತಿಪಾದನೆಯು ಶ್ರುತಿವಿರುದ್ಧವಾಗಿದೆ.

ಅದರಂತೆ "ಶಕ್ತಯಃ ಸರ್ವಭಾವಾನಾಂ ಅಚಿಂತ್ಯಾ ಜ್ಞಾನಗೋಚರಾಃ" ಎಂಬ ವಿಷ್ಣುಪುರಾಣ ವಚನದ ವಿರೋಧವೂ ಕಂಡುಬಂದಿದೆ.

ಮತ್ತು, ಶಕ್ತಿವ್ಯವಹಾರವು ಬೇರೆ ರೀತಿಯಾಗಿ ಹೊಂದಿಸಲು ಸಾಧ್ಯವಿಲ್ಲವಾದ ಪ್ರಯುಕ್ತ ಪ್ರತ್ಯೇಕವಾದ ಶಕ್ತಿಯನ್ನು ನೈಯ್ಯಾಯಿಕರೂ ಸಹ ಒಪ್ಪಲೇಬೇಕು.

ಘಟಕ್ಕೆ ಉಪಾದಾನ ಕಾರಣವು ಮೃತ್ತು, ಪಟಕ್ಕೆ ಉಪಾದಾನಕಾರಣವು ತಂತುಗಳು, ಇದರ ಸ್ವರೂಪವಂತೂ ಪ್ರತ್ಯಕ್ಷಸಿದ್ಧವಾಗಿದೆ.

ಇವುಗಳಿಗೆ ಇರತಕ್ಕ ಘಟಾದಿಕಾರಣತ್ವವಾದರೋ ಅನ್ವಯವ್ಯತಿರೇಕದಿಂದ ತಿಳಿಯಲ್ಪಡತಕ್ಕದ್ದಾಗಿದೆ.

, ಸ್ವರೂಪವೇ ಆಗಲಿ, ಸಹಕಾರಿಸಮವಧಾನವೇ ಆಗಲಿ, ಕಾರಣತ್ವವೆಂದು ಹೇಳಲು ಶಕ್ಯವಿಲ್ಲ. ಸ್ವರೂಪವು ಪ್ರತ್ಯಕ್ಷಸಿದ್ಧವಾಗಿದೆ. ಅದರ ಪರಿಚಯಕ್ಕೆ ಅನ್ವಯ ವ್ಯತಿರೇಕಗಳ ಅಪೇಕ್ಷೆಯು ಇಲ್ಲ. ಅನುಮೇಯವಾದ ಕಾರಣತ್ವವೇ ಶಕ್ತಿರೂಪವಾದುದು. ಅಂತಹ ಕಾರಣತ್ವವು ಅನ್ವಯವ್ಯತಿರೇಕಗಮ್ಯವಾಗಿದೆ.

ಸಾಮಾನ್ಯವಾದರೋ (ಜಾತಿಯಾದರೋ) ಅಂತಹ ಶಕ್ತಿಯ ಜ್ಞಾನಕ್ಕೆ (ಉಪಾಯವಾಗಿದೆ.) ಉಪಯುಕ್ತವಾಗಿ ಪ್ರತ್ಯಕ್ಷದಿಂದಲೇ ತಿಳಿಯಲ್ಪಡತಕ್ಕದಾಗಿದೆ.

ಆದಕಾರಣ ಸಾಮಾನ್ಯವೇ ಶಕ್ತಿರೂಪವಾಗಲಾರದು.

ಅನುಮೇಯವಾದ ಕಾರಣತ್ವವು ಸಹಕಾರಿಸಮವಧಾನಪ್ರಯೋಜನವೇ ಹೊರತು, ಸಹಕಾರಿಸಮವಧಾನಾತ್ಮಕವೇ ಅಲ್ಲ.

ಆದಕಾರಣ ಮೃದಾದಿಗಳಿಗೆ ಇರತಕ್ಕ ಘಟಾದಿಕಾರಣತ್ವವೆಂಬುದು ಅತೀಂದ್ರಿಯವೆಂದೇ ಹೇಳಬೇಕು.

ಅಂತಹ ಅಪ್ರತ್ಯಕ್ಷವಾದ (ಅತೀಂದ್ರಿಯವಾದ) ಅನ್ವಯವ್ಯತಿರೇಕಗಳಿಂದ ಗಮ್ಯವಾದ ಕಾರಣತ್ವವನ್ನೇ ಶಕ್ತಿವಾದಿಗಳಾದ ಸಿದ್ಧಾಂತಿಗಳು ''ಶಕ್ತಿ'' ಎಂದು ಕರೆಯುತ್ತಾರೆ.

**ಶಂಕಾ** :- ಶಕ್ತಿಯು ಕಾರಣತ್ವರೂಪವಾದರೆ, ಶಕ್ತಿಯೇ ಕಾರಣತ್ವವೆಂದರೆ (ಅದು) ಶಕ್ತಿಯು ಕಾರಣವಾಗದೇ ಹೋಗಲಿ ಎಂಬ ಶಂಕೆಗೆ ಅವಕಾಶವಿಲ್ಲ.

ಕಾರಣಾದಂತೆ ಕಾರಣತ್ವಕ್ಕು ಸಹ ಕಾರ್ಯಪ್ರಾಗಭಾವವ್ಯಾಪ್ಯಪ್ರಾಗಭಾವಪ್ರತಿಯೋಗಿತ್ವರೂಪವಾದ ಅನುಕೂಲತ್ವವಿರುವಪ್ರಯುಕ್ತ ಯಾವ ಅನುಪಪತ್ತಿಯೂ ಇರುವುದಿಲ್ಲ.

**ಅನವಸ್ಥಾಪರಿಹಾರಪ್ರಕಾರ** :- ಬೀಜಾದಿಗಳಿಗೆ ಅಂಕುರಾದಿಗಳನ್ನು ಕುರಿತು ಸಮವಾಯಿಕಾರಣತ್ವವು ಇರುವಂತೆ ಅಂಕುರಜನನಶಕ್ತಿಯನ್ನು ಕುರಿತೂ ಸಹ ಸಮವಾಯಿಕಾರಣತ್ವವು ಇರುವುದು. ಆ ಶಕ್ತಿಗೆ ಮತ್ತೊಂದು ಶಕ್ತಿ ಅದಕ್ಕೂ ಮತ್ತೊಂದು ಶಕ್ತಿ ಕಾರಣವೆಂಬುದಾಗಿ ಶಕ್ತಿಪಾರಂಪರ್ಯಕಲ್ಪನೆಯಿಂದ ಅನವಸ್ಥಾದೋಷವನ್ನು ಕೆಲವರು ಶಂಕಿಸಬಹುದು. ಆದರೆ ನೈಯ್ಯಾಯಿಕರು ಸಮವಾಯಕ್ಕೆ ಮತ್ತೊಂದು ಸಮವಾಯವನ್ನು ಹೇಳದೇ ಸ್ವನಿರ್ವಾಹಕತ್ವವನ್ನು ಹೇಗೆ ಹೇಳುವರೋ, ವಿಶೇಷಕ್ಕೆ ಸಿದ್ಧಾಂತದಲ್ಲಿ ಸ್ವನಿರ್ವಾಹಕತ್ವವು ಹೇಗೆ ಅಂಗೀಕೃತವಾಗಿದೆಯೋ ಅದರಂತೆ ಶಕ್ತಿಗೂ ಸಹ ಸ್ವನಿರ್ವಾಹಕತ್ವವನ್ನು ಒಪ್ಪಿರುವುದರಿಂದ ಸ್ವಸ್ವಕಾರ್ಯಾನುಗುಣವಾದ ಶಕ್ತ್ಯಂತರಕಲ್ಪನಾ ಪ್ರಯುಕ್ತವಾದ ಅನವಸ್ಥಾದೋಷವು ಬರುವುದಿಲ್ಲವೆಂದು ಪರಮಾಭಿಪ್ರಾಯವಾಗಿದೆ.

ದ್ವಿತ್ವಂಚೈಕಸ್ಯಯುಜ್ಯತೆ (ಅನುವ್ಯಾಖ್ಯಾನ) ಒಂದೇ ವ್ಯಕ್ತಿಗೆ ದ್ವಿತ್ವವು ಯುಕ್ತವಾಗುತ್ತದೆಯೆಂಬುದಾಗಿ ಭಾಷ್ಯಕಾರರು ತಿಳಿಸಿದ್ದಾರೆ. ಇದರಮೇಲೆ ಬರತಕ್ಕ ಶಂಕಾಸಮಾಧಾನಗಳ ವಿವರಣೆ :-

**ಶಂಕಾ** :- ಪರಮಾತ್ಮನು ''ಏಕಮೇವಾದ್ವಿತೀಯಮ್'' ಎಂಬ ಶ್ರುತಿಯಲ್ಲಿ ಉಕ್ತವಾಗಿರುವಂತೆ ಅವನಲ್ಲಿ ಏಕತ್ವವೆಂಬ ಸಂಖ್ಯಾ ಬರಬಹುದೇ ಹೊರತು ದ್ವಿತ್ವಸಂಖ್ಯೆಯು ಕೂಡುವುದಿಲ್ಲ. ಎಲ್ಲಿ ಭಿನ್ನಭಿನ್ನವಾದ ಎರಡು ವ್ಯಕ್ತಿಗಳೋ ಅಲ್ಲಿ ಮಾತ್ರ ದ್ವಿತ್ವಸಂಖ್ಯೆಯಾಗಲಿ, ಐದು ವ್ಯಕ್ತಿಗಳಿರುವ ಕಡೆ ಪಂಚತ್ವಸಂಖ್ಯೆಯಾಗಲಿ, ಬರಬಹುದೇ ಹೊರತು ಒಬ್ಬನಲ್ಲಿ ದ್ವಿತ್ವಾದಿಸಂಖ್ಯಾ ಧರ್ಮಗಳು ಬರಲು ಸಾಧ್ಯವಿಲ್ಲ. ಆದಕಾರಣ ಒಬ್ಬ ಪರಮಾತ್ಮನಿಗೆ ದ್ವಿತ್ವವು ಹೇಗೆ ಕೂಡುತ್ತದೆಯೆಂದು ಶಂಕಾಭಿಪ್ರಾಯವಾಗಿದೆ.

ಇದಕ್ಕೆ ಸಮಾಧಾನವು ಹೀಗೆ ಇದೆ :-

ಆನಂದಮಯಾಧಿಕರಣದಲ್ಲಿ ''ಏಕಮೇವಾದ್ವಿತೀಯಮ್'' ಎಂಬ ಶ್ರುತಿವಿರೋಧವಿರುವ ಪ್ರಯುಕ್ತ ಪರಮಾತ್ಮನಿಗೆ ಅನ್ನಮಯಾದಿಪಂಚತ್ವ ಸಂಖ್ಯೆಯು ಹೇಗೆ? ಎಂಬ ಶಂಕೆಯನ್ನು ಪ್ರಸ್ತಾಪಿಸಿ ಪರಮಾತ್ಮನಿಗೆ ಅನ್ನಮಯಾದಿಬಹುರೂಪಗಳಿರುವಪ್ರಯುಕ್ತ ಪಂಚತ್ವಸಂಖ್ಯೆಗೆ ರೂಪಬಾಹುಳ್ಯಾಭಿಪ್ರಾಯದಿಂದ ವಿರೋಧವಿಲ್ಲವೆಂಬ ಸಮಾಧಾನವನ್ನು ಹೇಳಲಾಗಿದೆ. ಅದರಂತೆ ಇಲ್ಲಿ ಸಹ ''ಗುಹಾಧಿಕರಣದಲ್ಲೂ ಕೂಡ, ಪರಮಾತ್ಮನಿಗೆ ಅತ್ತಾ, ಅಂತರಾತ್ಮಾ'' ಎಂಬ ದ್ವಿರೂಪತ್ವವು ಇರುವ ಪ್ರಯುಕ್ತ ದ್ವಿತ್ವಕ್ಕೆ ವಿರೋಧವಿಲ್ಲವೆಂಬ ಸಮಾಧಾನವನ್ನು ಇಟ್ಟುಕೊಳ್ಳಬೇಕು.

ಅಂದರೆ ಆನಂದಮಯಾಧಿಕರಣದಲ್ಲಿ ಪರಮಾತ್ಮನ ಪಂಚರೂಪ ವಿವಕ್ಷಯಾ ಪಂಚತ್ವಸಂಖ್ಯಾ ಹೇಗೆ ಇದೆಯೋ ಇಲ್ಲೂ ಸಹ ರೂಪದ್ವಯವಿವಕ್ಷಯಾದ್ವಿತ್ವಸಂಖ್ಯೆಯನ್ನು ಹೇಳುವುದರಲ್ಲಿ ಬಾಧಕವಿಲ್ಲವೆಂದು ಅಭಿಪ್ರಾಯ.

ಏಕತ್ವವನ್ನುಳ್ಳ ಪರಮಾತ್ಮನಲ್ಲಿ ದ್ವಿತ್ವವು ಕೂಡುವುದಿಲ್ಲ. ಏಕತ್ವಕ್ಕೂ ದ್ವಿತ್ವಕ್ಕೂ ಪರಸ್ಪರ ವಿರೋಧವಿದೆ ಎಂದು ಪೂರ್ವಪಕ್ಷಿಯು ಶಂಕಿಸಿದರೆ - ಅಂತಹ ವಿರೋಧವು ಏಕತ್ವಕ್ಕು ದ್ವಿತ್ವಕ್ಕು ಇಲ್ಲವೆಂಬ ಅಭಿಪ್ರಾಯದಿಂದ ಶ್ರೀಮದಾಚಾರ್ಯರು ''ದ್ವಿತ್ವಂಚೈಕಸ್ಯಯುಜ್ಯತೆ'' ಎಂದು ಹೇಳಿರುತ್ತಾರೆ.

**ಅಭಿಪ್ರಾಯ ವಿವರಣೆ** :- ಲೋಕದಲ್ಲಿ ವಿರೋಧವು ನಾಲ್ಕು ಬಗೆಯಾಗಿದೆ.

೧. ಭಾವ ಅಭಾವಲಕ್ಷಣವಾದ ವಿರೋಧವು. ಉದಾ :- ಘಟ ಮತ್ತು ಘಟಾಭಾವ.

೨. ಎರಡನೆಯದಾಗಿ ವಧ್ಯಘಾತುಕಭಾವಲಕ್ಷಣವಾದ ವಿರೋಧವು. ಮೂಷಕಮಾರ್ಜಾರಗಳಿಗೆ ಇದ್ದಂತೆ. ಅಥವಾ ಅಹಿನಕುಲಗಳಿಗೆ ಇದ್ದಂತೆ.

''ನಾಜಾತೋ ಏಕೋ ಅನ್ಯಂಪಂತಿ ನಾಷ್ಯನ್ನಾಧಾರ : '' ಎಂಬ ನ್ಯಾಯದಂತೆ ಮೂಷಕಮಾರ್ಜಾರಗಳಿಗೆ ಕೆಲವು ಕ್ಷಣಕಾಲ ಒಟ್ಟಿಗೆ ಇದ್ದವುಗಳಿಗೇನೇ ವಧ್ಯಘಾತುಕಭಾವ ಕಂಡುಬಂದಿದೆ.

೩. ತಾದಾತ್ಮ್ಯಾಭಾವರೂಪವಾದುದಾದರೋ ಏಕತ್ರ ಅವಸ್ಥಾನವುಳ್ಳವುಗಳಿಗೇನೇ ಇರುತ್ತದೆ.

ಘಟತಾದಾತ್ಮ್ಯಾಭಾವವು ಪಟಕ್ಕೂ ಪಟತಾದಾತ್ಮ್ಯಾಭಾವವು ಘಟಕ್ಕು ಇರುವುದಾದರೂ ಇಂತಹ ವಿರೋಧವು ಘಟಪಟಗಳಿಗೆ ಇರುವುದಾದರೂ ಏಕತ್ರ ಎರಡೂ ಇರುತ್ತವೆ. ಆದಕಾರಣ ಅಂತಹ ವಿರೋಧವು ಪ್ರಕೃತಕ್ಕೆ ಉಪಯೋಗವು ಇಲ್ಲ. ಮೇಲೆ ಕಂಡು ಮೂರು ಬಗೆಯಾದ ವಿರೋಧವು ಏಕತ್ವದ್ವಿತ್ವಗಳಿಗೆ ಇರುವುದಿಲ್ಲ.

೪. ಆದಕಾರಣ ಸಹಾನವಸ್ಥಾನ ಲಕ್ಷಣವಾದ ವಿರೋಧವನ್ನೇ ಹೇಳಬೇಕು.

ಅಂದರೆ ಏಕತ್ವವಿದ್ದ ಕಡೆ ದ್ವಿತ್ವವು ಇರುವುದಿಲ್ಲವೆಂದು ಒಟ್ಟಿಗೆ ಇಲ್ಲದಿರುವಿಕೆಯೆಂಬ ಸಹಾನವಸ್ಥಾನಲಕ್ಷಣವಾದ ವಿರೋಧವನ್ನು ಹೇಳಬೇಕು.

ಆದರೆ ಇಂತಹ ವಿರೋಧವೂ ಸಹ ಏಕತ್ವಕ್ಕು ದ್ವಿತ್ವಕ್ಕು ಇರುವುದಿಲ್ಲ. ಸಹಾನವಸ್ಥಾನಲಕ್ಷಣವಿರೋಧವು ಇದ್ದಕಡೆ ಪರಸ್ಪರ ಪರಿಹಾರದಿಂದ ಇರುವಿಕೆಯನ್ನು ಹೇಳಬೇಕು.

ಅಂತಹ ವಿರೋಧವು ಏಕತ್ವದ್ವಿತ್ವಗಳಿಗೆ ಕಂಡುಬಂದಿಲ್ಲ. ಅಭೇದೇನ ಏಕತ್ವವಿಶಿಷ್ಟವಾದ ಘಟದಲ್ಲಿ ಪಟಸಹಿತವಾಗಿ ದ್ವಿತ್ವವೂ ಘಟಪಟೌದ್ವೌ ಎಂಬುದಾಗಿ ವ್ಯವಹಾರವೂ ಇರುತ್ತದೆ.

“ಋತಂಪಿಬಂತೌ” ಎಂಬುದಾಗಿ ದ್ವಿವಚನಕ್ಕೆ ವಿಷಯವಾಗಿ ಪ್ರಕೃತವಾದ ದ್ವಿತ್ವಕ್ಕೆ ಆಧಾರಭೂತವಾದ ಪರಮಾತ್ಮನ ರೂಪದ್ವಯಕ್ಕೆ “ಯಃ ಸೇತುಃ” ಎಂಬುದಾಗಿ ಶ್ರುತಿಯಲ್ಲಿ ಏಕವಚನದಿಂದ ನಿರ್ದೇಶವು ಕಂಡು ಬಂದಿದೆ.

**ವಿಶೇಷವಿಷಯ** :- ಚೇತನರಲ್ಲಿ ನಿಯಮ್ಯ ನಿಯಾಮಕಭಾವವು ಸ್ವಭಾವಸಿದ್ಧವೇ ಆಗಿದೆ. ಬ್ರಹ್ಮಾದಿ ಚೇತನರು ನಿಯಾಮಕರು ಮಾನುಷಾದಿಚೇತನರು ನಿಯಮ್ಯರು. ಈ ಬಗೆಯಾದ ನಿಯಮ್ಯನಿಯಾಮಕತ್ವಲಕ್ಷಣವಾದುದು ಅವರ ಸ್ವಭಾವ; ಇದು ಮೋಕ್ಷದಶಾದಲ್ಲೂ ಇದೆ. ಇದು ಅನಾದಿಯಾದುದು. ಇದು ಸರ್ವನಿಯಾಮಕನಾದ ಪರಮಾತ್ಮನ ನಿಯಮದಿಂದ ಕೂಡಿದೆ.

ಅನಾದಿಯಾದ ಈ ಸ್ವಭಾವವು ಈಶಾಧೀನವು ಹೇಗೆ ಎಂದು ಕೆಲವರು ಆಕ್ಷೇಪಿಸಬಹುದು.

ಅನ್ಯಾಧೀನವಾದುದು ಅಸ್ವಭಾವವೆಂದೂ, ಅನ್ಯಅನಧೀನವಾದುದು ಮಾತ್ರ ಸ್ವಭಾವವೆಂದೂ ಕೆಲವರು ಹೇಳುವರು.

ಇದಕ್ಕೆ ತಕ್ಕ ಉತ್ತರವನ್ನು ಅನುವ್ಯಾಖ್ಯಾನಕಾರರು “ಓಂ ಅನವಸ್ಥಿತೇರಸಂಭವಾಚ್ಚನೇತರಃ ಓಂ” ಎಂಬ ಸೂತ್ರದ ವ್ಯಾಖ್ಯಾನ ಭಾಗದಲ್ಲಿ ತಿಳಿಸಿರುತ್ತಾರೆ.

**ಅನುವ್ಯಾಖ್ಯಾನ:- ಅನ್ಯೋನ್ಯವಿಯುತಿಶ್ಚೇಶನಿಯಮೇನಾನ್ಯಥಾಭವೇತ್ ।**
**ಚೇತನಾನಾಂ ವಿಶೇಷೋ ಯಃ ಸ್ವಭಾವೋಽಪೀಶ್ವರಾರ್ಪಿತಃ ॥**
**(ಅನುವ್ಯಾಖ್ಯಾನ)**

**ಅಭಿಪ್ರಾಯ** :- ಸರ್ವತಂತ್ರಸ್ವತಂತ್ರನಾದ ಪರಮೇಶ್ವರನ ನಿಯಮನಕ್ಕೆ ಒಳಪಟ್ಟು ಬ್ರಹ್ಮಾದಿಚೇತನರಿಗೆ ನಿಯಾಮಕತ್ವವೂ ಮಾನುಷಾದಿಚೇತನರಿಗೆ ನಿಯಮ್ಯತ್ವವೂ

“ನ ತದಸ್ತಿ ವಿನಾ ಯತ್ಸ್ಯಾತ್ ಮಯಾ ಭೂತಂ ಚರಾಚರಮ್” ॥ (ಗೀ. ೧೦-೩೯)

ಎಂಬ ಪ್ರಮಾಣದಿಂದ ಪ್ರಮಿತವಾಗಿದೆ.

ಅನಾದಿಯಾದುದಕ್ಕೆ ಇತರಾಧೀನತೆಯನ್ನು ನೈಯ್ಯಾಯಿಕರೂ, ಅದ್ವೈತಿಗಳೂ ಸಹ ಒಪ್ಪಿರುತ್ತಾರೆ.

ತಾರ್ಕಿಕರು ಆಕಾಶದಲ್ಲಿನ ಅನಾದಿಯಾದ ದ್ರವ್ಯತ್ವಕ್ಕೆ ಗುಣವತ್ತ್ವಾಧೀನತೆಯನ್ನು, ಒಪ್ಪಿರುವರು.

ಅದ್ವೈತಿಗಳಮತದಲ್ಲಿ

“ಜೀವ, ಈಶೋ, ವಿಶುದ್ಧಾಚಿತ್, ಭೇದಸ್ತಸ್ಯಾಸ್ತಯೋರ್ದ್ವಯೋಃ ।
ಅವಿದ್ಯಾತಚ್ಚಿತೋರ್ಯೋಗಃ ಷಡಸ್ಮಾಕಮನಾದಯಃ”

ಎಂದು ಆರು ಪದಾರ್ಥಗಳನ್ನು ಅನಾದಿಗಳೆಂದು ಹೇಳುವರು.

ಇಂತಹ ಅನಾದಿಯಾಗಿ ಒಪ್ಪಿರುವ ಜೀವಬ್ರಹ್ಮ ವಿಭಾಗಕ್ಕೆ ಅವಿದ್ಯಾ, ತತ್ಕಾರ್ಯ ಅನ್ಯತರತ್ವದಸ್ಯೈಃ ಕಾರ್ಯ ಎಂಬುದಕ್ಕೆ ನಿಯಮ್ಯ ಎಂದು ಹೇಳಿ ಅವಿದ್ಯಾನಿಯಮ್ಯತ್ವವನ್ನು ಒಪ್ಪಿರುವರು.

ಅನವಸ್ಥಾ (ಅನವಸ್ಥಿತಿ) ಅಸಂಭವವೆಂಬ ಎರಡು ದೋಷಗಳನ್ನ ಸೂತ್ರಕಾರರು ಉದಾಹರಿಸಿರುತ್ತಾರೆ.

ಸರ್ವತಂತ್ರಸ್ವತಂತ್ರನಾದ ಸರ್ವೇಶ್ವರನಾದ ಪರಮಾತ್ಮನನ್ನು ಒಪ್ಪಿದರೆ ಮಾತ್ರ ಅನ್ಯೋನ್ಯನಿಯಮನವು ಕೂಡುತ್ತದೆ. ಈಶ್ವರನನ್ನು ಒಪ್ಪದೇ ಇದ್ದರೆ ಪರಸ್ಪರ ನಿಯಮ್ಯನಿಯಾಮಕಭಾವವೇ ಕೂಡುವುದಿಲ್ಲವೆಂಬ ಅಂಶದಲ್ಲಿ ಅನವಸ್ಥಾದೋಷವನ್ನು ಅಸಂಭವದೋಷವನ್ನೂ ಸೂತ್ರಕಾರರು ಹೇಳಿರುತ್ತಾರೆ.

ಸರ್ವನಿಯಾಮಕನಾದ ಪರಮಾತ್ಮನನ್ನು ಒಪ್ಪದೇ ಇದ್ದರೆ ಒಬ್ಬ ಜೀವನಿಗೆ ನಿಯಾಮಕನಾದವನೂ ಮತ್ತೊಬ್ಬಜೀವನಾದರೆ, ಆ ನಿಯಾಮಕನಾದ ಮತ್ತೊಬ್ಬಜೀವನಿಗೆ ಅವನಿಂದ ನಿಯಮ್ಯನಾದ ಜೀವನು ನಿಯಾಮಕನಾಗಲಾರ. ಹಾಗೆ ಹೇಳಿದರೆ ಅನ್ಯೋನ್ಯಾಶ್ರಯದೋಷಕ್ಕೆ ಅವಕಾಶವಾಗುವುದು. ಆದಕಾರಣ ಹಿಂದಿನ ಜೀವನಿಗೆ ನಿಯಾಮಕನಾದ ಮತ್ತೊಬ್ಬ ಜೀವನಿಗೆ ಬೇರೊಬ್ಬ ಜೀವನು ನಿಯಾಮಕನು. ಅವನಿಗೂ ಮತ್ತೊಬ್ಬಜೀವನು ನಿಯಾಮಕನು. ನಿಯಮ್ಯತಾಪ್ರಯೋಜಕ ಧರ್ಮವೂ, ನಿಯಾಮಕತಾಪ್ರಯೋಜಕಧರ್ಮವೂ ಕೇವಲ ಜೀವತ್ವಮಾತ್ರವಾದುದರಿಂದ ಅನವಸ್ಥಾದೋಷವು ಅಪರಿಹಾರ್ಯವಾಗುತ್ತದೆ.

ಜೀವತ್ವವೂ, ಅಸ್ವಾತಂತ್ರ್ಯವೂ ಎಲ್ಲ ಜೀವರಲ್ಲಿ ಸಮಾನವಾದುದರಿಂದ ಒಬ್ಬ ಜೀವನು ಮತ್ತೊಬ್ಬ ಜೀವನಿಗೆ ಪ್ರೇರಕನು ಅಥವಾ ನಿಯಮ್ಯನು ಎಂಬುದೇ ಸಂಭವಿಸುವುದಿಲ್ಲ. ಇಂತಹ ಅಸಂಭವದೋಷವೂ ಪ್ರಸಕ್ತವಾಗುವುದು. ಆದಕಾರಣ ಸರ್ವಸಿಯಂತೃವಾದ ಪರಮಾತ್ಮನನ್ನು ಒಪ್ಪಬೇಕು.

ತಾರತಮ್ಯಾನುಸಾರವಾಗಿ ಅಧಮಜೀವರಿಗೆ ಅವರಿಗಿಂತಲೂ ಉತ್ತಮರಾದ ದೇವತಾಜೀವವು ಪರಮಾತ್ಮನ ನಿಯಂತ್ರಣಕ್ಕೆ ಒಳಪಟ್ಟು ನಿಯಾಮಕನಾದುದರಿಂದ ಅವರೆಲ್ಲರಿಗೂ ಸರ್ವನಿಯಾಮಕನಾದ ಪರಮಾತ್ಮನನ್ನು ಒಪ್ಪಿರುವ ಸಿದ್ಧಾಂತದಲ್ಲಿ ಅನವಸ್ಥಾದೋಷಕ್ಕಾಗಲಿ, ಅಸಂಭವದೋಷಕ್ಕಾಗಲಿ ಪ್ರಸಕ್ತಿಯೇ ಇರುವುದಿಲ್ಲ.

ಅನವಸ್ಥಿತಿ, ಅಸಂಭವಗಳಿಗೆ ಇಲತಕ್ಕ ವ್ಯತ್ಯಾಸ.

**ಶಂಕಾ** :-ಅನವಸ್ಥಿತಿಯಲ್ಲೂ, ಅಸಂಭವದಲ್ಲೂ ಎರಡರಲ್ಲೂ ಪ್ರವೃತ್ತಿಯ ಅನುಪಪತ್ತಿಯು ಸಮಾನವಾಗಿರುವುದರಿಂದ ಅವೆರಡಕ್ಕೂ ಏನು ಭೇದವು ?ಎಂಬ ಶಂಕೆಯು ಸಾಮಾನ್ಯವಾಗಿ ಉಂಟಾಗುತ್ತದೆ.

**ಸಮಾಧಾನ** :- ಅನವಸ್ಥಾದಲ್ಲಿ ಪ್ರಾಕ್‌ಸಿದ್ಧವಾದ ಮೂಲವೇ ಇಲ್ಲವಾದುದರಿಂದ ಪ್ರವೃತ್ತಿಯನಿರೋಧವು.

ಅಸಂಭವದಲ್ಲಾದರೋ ಸಮಾನವಾಗಿರುವಿಕೆಯಿಂದ, ಅನ್ಯತರಪಕ್ಷಪಾತಿಯಾದ ಯುಕ್ತಿಯು ಇಲ್ಲವಾದುದರಿಂದ ಪ್ರವೃತ್ತಿಯನಿರೋಧವೆಂಬ ವ್ಯತ್ಯಾಸವನ್ನು ಕಾಣಬಹುದಾಗಿದೆ.

ಪ್ರವೃತ್ತಿನಿರೋಧವೆಂಬ ಫಲವು ಅನವಸ್ಥಾಪಕ್ಷದಲ್ಲೂ, ಅಸಂಭವಪಕ್ಷದಲ್ಲೂ ಸಮಾನವಾಗಿದ್ದಾಗ್ಯೂ, ಆ ಫಲಕ್ಕೆ ಉಪಪಾದಕವಾದುದರ ಭೇದದಿಂದ (ವ್ಯತ್ಯಾಸದಿಂದ) ಅವೆರಡಕ್ಕೂ ವ್ಯತ್ಯಾಸವು ಕಂಡುಬಂದಿದೆ.

ಯದರ್ಥಂ ಉತ್ತರೋತ್ತರಾನುಸರಣಂ ತನ್ಮೂಲಂ = ಯಾವುದಕ್ಕಾಗಿ ಉತ್ತರೋತ್ತರ ಅನುಸರಿಸುವಿಕೆಯು ಉಂಟೋ ಅದು ಮೂಲವು.

ಅಂತಹ ಉತ್ತರೋತ್ತರಾನುಸಾರಣೆಗೆ ಕಾರಣವಾದ ಪೂರ್ವವ್ಯಕ್ತಿಯು ಪ್ರಮಾಣಸಿದ್ಧವಲ್ಲವಾದುದರಿಂದ ಪ್ರಕೃತವಾದ ಅನವಸ್ಥಾದೋಷವು ಮೂಲಕ್ಷಯಕಾರಿಯಾಗಿ ದೋಷವಾಗಿದೆ.

ಮೂಲವು ಪ್ರಾಮಾಣಿಕವಾಗಿದ್ದರೆ ಈ ದೋಷವು ಬರುವುದಿಲ್ಲ.

''ಯದ್ಬಲಾತ್ ಉತ್ತರತ್ರ ಪರಂಪರಾಕಲ್ಪನಂ ತನ್ಮೂಲಂ, ತಸ್ಯ ಪ್ರಮಾಣಾಸಿದ್ಧತ್ವೇ ಮೂಲಕ್ಷಯಃ''

ಎಂಬ ವಾಕ್ಯವು ಸಹ ಹಿಂದಿನ ಅಭಿಪ್ರಾಯದಿಂದಲೇ ವ್ಯಾಖ್ಯಾಕಾರರಿಂದ ಉಕ್ತವಾಗಿದೆ.

ಸಿದ್ಧಾಂತಿಗಳು ಸರ್ವನಿಯಾಮಕನಾದ ಪರಮೇಶ್ವರನನ್ನು ಅಂಗೀಕರಿಸುವ ಪ್ರಯುಕ್ತ ಆ ಪರಮಾತ್ಮನ ಅಚಿಂತ್ಯಾದ್ಭುತಶಕ್ತಿಯಿಂದ ಅವನ ಅಧೀನರಾದ ಬ್ರಹ್ಮಾದಿಚೇತನರಲ್ಲಿ ನಿಯಮ್ಯನಿಯಾಮಕಭಾವವು ಸಂಭವಿಸುತ್ತದೆ. ಎಂದು ಅಭಿಪ್ರಾಯ.

ಮೊದಲನೆಯ ಅಧ್ಯಾಯದ ಎರಡನೇ ಪಾದವಾದ ಲಿಂಗಪಾದದಲ್ಲಿ ಐದನೆಯದು ಅಂತರ್ಯಾಮ್ಯಧಿಕರಣವು. ಇದರಲ್ಲಿ ಪರಮಾತ್ಮನಿಗೆ ಸರ್ವಾಂತರ್ಯಾಮಿತ್ವವು ಸಿದ್ಧಾಂತಗೊಳಿಸಲಾಗಿದೆ. ಈ ವಿಷಯದಲ್ಲಿ ಪೂರ್ವಪಕ್ಷಿಯ ಶಂಕೆಯು ಈ ರೀತಿ ಇದೆ.

ಅಂತರ್ಯಾಮಿತ್ವವೆಂದರೆ ಅಂತಃಸ್ಥಿತ್ವಾ ನಿಯಾಮಕತ್ವವು. ಸರ್ವಚೇತನರಲ್ಲಿ ಇದ್ದು ರಮಿಸುವವನೂ ಪ್ರೇರಕನೂ ಆದವನು ಶ್ರೀಹರಿಯು ಎಂದು ನಿರ್ಣಯಿಸಲಾಗಿದೆ. ಆದರೆ ಇದು ಸಂಗತವಾಗುವುದಿಲ್ಲ. ಆದಿತ್ಯಾದಿ ಸಕಲಚೇತನರಲ್ಲಿದ್ದು ನಿಯಾಮಕನಾಗಿರಬೇಕಾದರೆ, ಅತಿಪ್ರಯತ್ನವುಳ್ಳವನಾಗಿರಬೇಕು. ಹೆಚ್ಚು ಹೆಚ್ಚು ಪ್ರಯತ್ನಪಡತಕ್ಕವನಿಗೆ ಅತಿಯಾದ ಚಿತ್ತವಿಕ್ಷೇಪವು ತಪ್ಪಿದ್ದಲ್ಲ. ಹೆಚ್ಚು ಚಿತ್ತವಿಕ್ಷೇಪವುಳ್ಳವನಿಗೆ ಅತಿದುಃಖವೇ ಹೊರತು ಸುಖಲೇಶವೂ ಇರಲಾರದು. ಹೀಗಿರುವಲ್ಲಿ ಸರ್ವರನ್ನೂ ನಿಯಾಮಕನೂ ರಮಿಸುವವನೂ ಎಂಬ ಮಾತೇ ವ್ಯಾಹತವಾಗಿದೆ. ಎಂದು ಪೂರ್ವಪಕ್ಷಿಯು ಆಕ್ಷೇಪಿಸುತ್ತಾನೆ.

ಅದಕ್ಕೆ ಸಮಾಧಾನವನ್ನು ಅನುವ್ಯಾಖ್ಯಾನಕಾರರು ಬಹುಸ್ವಾರಸ್ಯವಾಗಿ ತೋರಿಸಿರುತ್ತಾರೆ.

''ಸ್ವಾತ್ಮನಾ ಅಸಂಯುತಂ ವಸ್ತು ಪ್ರತೀಪಂ ಸ್ಯಾತ್ ಮನೋಭವೇತ್ ।
ಸ್ವಾಧೀನಸ್ಯಾಶಕ್ತ್ಯಾದಿಕಮಾತ್ಮಪ್ರತೀಪಕಮ್ ॥ (ಇತ್ಯನುವ್ಯಾಖ್ಯಾನಮ್)

ಯಾವ ಪದಾರ್ಥವಾಗಲಿ, ಯಾವ ಮನುಷ್ಯನಾಗಲಿ, ನಮಗೆ ಅಧೀನವಲ್ಲವೋ, ನಮಗೆ ವಿರುದ್ಧವೋ, ನಮ್ಮ ಹತೋಟಿಗೆ ಮೀರಿದುದೋ, ಅವರ ಮೇಲಿನ ಅಧಿಕಾರವು ನಮಗೆ ಇಲ್ಲವೋ, ಅವನ ಜ್ಞಾನ, ಇಚ್ಛೆ, ಪ್ರಯತ್ನಗಳನ್ನು ನಿಯಂತ್ರಿಸಲು ನಮಗೆ ಶಕ್ತಿಯಿಲ್ಲವೋ, ಅಂತಹ ಪದಾರ್ಥವ, ಚೇತನರನ್ನು ನಿಯಮಿಸಬೇಕಾದರೆ ಬಹಳ ಪ್ರಯತ್ನ ಮಾಡಬೇಕು. ಅತಿಪ್ರಯತ್ನ ಮಾಡುವಾಗ ಮನಸ್ಸಿಗೂ ದೇಹಕ್ಕೂ ಅತಿಯಾದ ಆಯಾಸವಾಗಿ ಚಿಂತಾಕ್ರಾಂತನಾಗಿ ನೆಮ್ಮದಿಯಿಲ್ಲದೆ ದುಃಖಪಡುತ್ತಿರುವಾಗ ಸುಖವಿಲ್ಲದಂತಾಗುತ್ತದೆ ಇದು ಲೋಕಾನುಭವಸಿದ್ಧವಾದ ವಿಷಯವಾಗಿದೆ.

ಹೀಗಿರುವಲ್ಲಿ ಪರಮಾತ್ಮನು ಸರ್ವಾಂತರ್ಯಾಮಿಯಾಗಿ ಸರ್ವನಿಯಾಮಕನು ಎಂದು ಹೇಳಿದರೆ, ಅವನಿಗೆ ಅತಿಪ್ರಯತ್ನ, ಅತಿಯಾದ ಚಿಂತೆ, ಅತಿಯಾದ ಆಯಾಸವಾಗಿ ಸುಖವೇ ಇಲ್ಲದಂತಾಗುತ್ತದೆ.

ಆದಕಾರಣ ಸರ್ವನಿಯಾಮಕನಾಗಿ ರಮಿಸುವವನು ಎಂಬುದು ಸಂಗತವಾಗುರುದಿಲ್ಲವೆಂದು ಪೂರ್ವಪಕ್ಷಿಗಳ ಆಕ್ಷೇಪವಾಗಿದೆ. ಇದಕ್ಕೆ ಸಮಾಧಾನರೂಪವಾದ ಅನುವ್ಯಾಖ್ಯಾನ ಅಭಿಪ್ರಾಯವು ಈ ರೀತಿ ಇದೆ.

ಪರಮಾತ್ಮನು ಸ್ವತಂತ್ರ. ಅವನಿಗಿಂತಲೂ ಬೇರೆಯಾದ ಚೇತನ ಅಚೇತನಾತ್ಮಕವಾದ ಜಗತ್ತೆಲ್ಲವೂ ಅಸ್ವತಂತ್ರವಾದುದು. ಅವೆಲ್ಲದರ ಸ್ವರೂಪವೂ, ಪ್ರಮಿತಿಯೂ, ಪ್ರವೃತ್ತಿಯೂ ಸರ್ವರೀತಿಯಿಂದಲೂ ಪರಮಾತ್ಮನ ಅಧೀನವಾಗಿದೆ. ಅವುಗಳ ಸ್ವರೂಪಸತ್ತಾದಿಗಳು ಪರಮಾತ್ಮನಿಗೆ ಅಧೀನಗಳಲ್ಲದಿದ್ದರೆ ಅವನಿಗೆ ವಿರುದ್ಧವಾಗಿರಬೇಕಾದ ಪ್ರಸಂಗವು ಒದಗೀತು. ಆಗ ಅತಿಪ್ರಯತ್ನ, ಅತಿಚಿಂತಾ ಇತ್ಯಾದಿಗಳಿಗೆ ಪ್ರಸಕ್ತಿಯು ಉಂಟಾಗುತ್ತದೆ.

ಪ್ರಕೃತದಲ್ಲಿ ಹಾಗಿಲ್ಲ. ಎಲ್ಲ ಪದಾರ್ಥಗಳ ಸ್ವರೂಪಸತ್ತಾದಿಗಳು ಅತ್ಯಂತಿಕವಾಗಿ ಪರಮಾತ್ಮನಿಗೆ ಸರ್ವದಾ ಅಧೀನವಾಗಿರುವುದರಿಂದ ಅನಾಯಾಸವಾಗಿ ಅವುಗಳನ್ನು ನಿಯಂತ್ರಿಸುತ್ತಾ ಪರಮಾತ್ಮನು ರಮಿಸುತ್ತಾನೆಂಬ ಸಿದ್ಧಾಂತಕ್ಕೆ ಯಾವ ಬಗೆಯಾದ ಬಾಧಕವೂ ಇಲ್ಲ.

ಪರಮೇಶ್ವರನು ರಾಜಾದಿಗಳಂತಲ್ಲ. ರಾಜಾದಿಗಳು ಹೊರಗಡೆ ನಿಯಾಮಕರು, ಅದೂ ಸಹ ಪರಂಪರೆಯಿಂದ ನಿಯಾಮಕರು. ಪರಮಾತ್ಮನಾದರೋ ಸತ್ತಾದಿಪ್ರದನಾಗಿ ಅಂತರ್ಯಾಮಿಯಾಗಿ ಸಾಕ್ಷಾತ್ತಾಗಿಯೂ, ತತ್ತ್ವಾಭಿಮಾನಿ ದೇವತೆಗಳಮೂಲಕವಾಗಿಯೂ ನಿಯಾಮಕನೆಂಬ ಸಿದ್ಧಾಂತಕ್ಕೆ ಯಾವ ಚ್ಯುತಿಯೂ ಇರುವುದಿಲ್ಲ. ನಿಯಾಮಕನಾಗಿ ರಮಣನಾಗಿರುವನೆಂಬುದಕ್ಕೆ ಬಾಧಕವೂ ಇಲ್ಲ.

ಮೊದಲನೆಯ ಅಧ್ಯಾಯದ ಎರಡನೇ ಪಾದದಲ್ಲಿನ ಆರನೇ ಅಧಿಕರಣವಾದ ಅದೃಶ್ಯತ್ವಾಧಿಕರಣದಲ್ಲಿ ಅಭಾವಾತ್ಮಕಲಿಂಗಸಮನ್ವಯವು ಮಾಡಲ್ಪಟ್ಟಿದೆ.

ಹಿಂದೆ ಸಮನ್ವಯಗೊಳಿಸಲ್ಪಟ್ಟವುಗಳಾದ ಆನಂದಾದಿಗಳು ಗುಣಗಳು, ಸಂಹರಣಾದಿಗಳು ಕ್ರಿಯೆಗಳು, ಸರ್ವಗತತ್ವಾದಿಗಳು ಭಾವಧರ್ಮಗಳು. ಅವೆಲ್ಲಾ ಭಾವರೂಪವಾಗಿವೆ. ಪರಮಾತ್ಮನು ಭಾವರೂಪನಾಗಿದ್ದಾನೆ. ಅವುಗಳಿಗೂ ಪರಮಾತ್ಮನಿಗೂ ಅಭೇದವು ಸಂಗತವಾಗುತ್ತದೆ. ಆದರೆ ಅದೃಶ್ಯತ್ವಾದಿಧರ್ಮಗಳು ಅಭಾವರೂಪಗಳಾಗಿದೆ. ಅವುಗಳಿಗೂ ಭಾವರೂಪನಾದ ಪರಮಾತ್ಮನಿಗೂ ಅಭೇದವು ಕೂಡುವುದಿಲ್ಲ. ಭಾವಾಭಾವಗಳಿಗೆ ಐಕ್ಯವು ಅತಿವಿರುದ್ಧವಾಗಿದೆ ಎಂಬುದಾಗಿ ಆಕ್ಷೇಪವು ಬರುತ್ತದೆ.

ಇದಕ್ಕೆ ಸಮಾಧಾನವನ್ನು ಭಾಷ್ಯಕಾರರು ನಿರೂಪಿಸಿರುತ್ತಾರೆ.

ಸೂತ್ರಕಾರರು ಸೂತ್ರದಲ್ಲಿ "ಅದೃಶ್ಯತ್ವಾದಿ" ಎಂದು ಹೇಳದೆ ಗುಣಪದವನ್ನು ಸೇರಿಸಿ ಅದೃಶ್ಯತ್ವಾದಿಗುಣಕವೆಂದು ಸೂತ್ರವನ್ನು ರಚಿಸಿರುತ್ತಾರೆ. ಇದರಿಂದ ದೃಶ್ಯಾದನ್ಯತ್, ಅದೃಶ್ಯಂ ಎಂಬುದಾಗಿ ವಿಗ್ರಹ ಮಾಡುವುದರಿಂದ ದೃಶ್ಯಾನ್ಯೋನ್ಯಾಭಾವವು (ದೃಶ್ಯಭೇದವು) ಹೇಳಿದಂತಾಗುತ್ತದೆ. ಅನ್ಯೋನ್ಯಾಭಾವವು ಧರ್ಮಿಸ್ವರೂಪವು. ಸೂತ್ರದಲ್ಲಿನ ಗುಣಪದದಿಂದ ವಿಧಿರೂಪತ್ವವು ಸೂಚಿತವಾಗಿದೆ. ಆದಕಾರಣ ದೃಶ್ಯಭೇದಕ್ಕೆ ಧರ್ಮಿರೂಪಭಾವಸ್ವರೂಪತ್ವಕ್ಕೂ ಈಶರೂಪಧರ್ಮಿಸ್ವರೂಪತ್ವಕ್ಕೂ ವಿರೋಧವಿಲ್ಲವೆಂದು ಅಭಿಪ್ರಾಯ.

ವಿಶೇಷಬಲದಿಂದ ಧರ್ಮಧರ್ಮಿತ್ವವನ್ನು ಸೂಚಿಸಲು ಬಹುವ್ರೀಹ್ಯರ್ಥದಲ್ಲಿ ಗುಣಕ ಎಂಬಲ್ಲಿ ಸೂತ್ರದಲ್ಲಿ ಕ ಪ್ರತ್ಯಯವನ್ನು ತೋರಿಸಲಾಗಿದೆ.

"ದೃಶ್ಯಾದನ್ಯಃ ಅದೃಶ್ಯಃ ತಸ್ಯ ಭಾವಃ ಅದೃಶ್ಯತ್ವಂ" ಎಂದು ದೃಶ್ಯದ ಅನ್ಯೋನ್ಯಾಭಾವವು ಭಾವರೂಪವೇ ಆಗಿದೆ. ಅನ್ಯೋನ್ಯಾಭಾವವು ಧರ್ಮಸ್ವರೂಪವಾಗಿದೆ.

ಅದೃಶ್ಯತ್ವಾಧಿಕರಣದಲ್ಲಿ ಮುಂಡಕದ ವಾಕ್ಯವನ್ನು ವಿಷಯವಾಕ್ಯವಾಗಿ ಉದಾಹರಿಸಲಾಗಿದೆ.

"ಯತ್ತದದ್ರೇಶ್ಯಂ ಅಗ್ರಾಹ್ಯಂ, ಅಗೋತ್ರಂ, ಅವರ್ಣಂ, ಅಚಕ್ಷುಃಶ್ರೋತ್ರಂ,
ತದಪಾಣಿಪಾದಮ್।
ನಿತ್ಯಂ ವಿಭುಂ, ಸರ್ವಗತಂ, ಸುಸೂಕ್ಷ್ಮಂ, ತದವ್ಯಯಂ, ಯದ್ಭೂತಯೋನಿಂ,
ಪರಿಪಶ್ಯಂತಿ ಧೀರಾಃ" ।। (ಮು. ೧-೧-೬)

**ಅರ್ಥ** :- ಯತ್ = ಯಾವಪರವಿದ್ಯಾಗಮ್ಯವಾದ ಅಕ್ಷರವು, ತತ್ = ಅದು, ಅದ್ರೇಶ್ಯಂ = ಇಲ್ಲಿ ದ್ರೇಶ್ಯಂ = ಎಂಬುದಕ್ಕೆ, ದೃಶ್ಯಂ = ಎಂಬ ಅರ್ಥವನ್ನು ಇಟ್ಟುಕೊಂಡು, ನ್ಯಾಯಸುಧೆಯಲ್ಲಿ ದೃಶ್ಯಾದನ್ಯೋ ಅದೃಶ್ಯಃ ಎಂದು ಹೇಳಿರುವರು. ಅಂದರೆ ದೃಶ್ಯಶಬ್ದಿತವಾದ ಚಕ್ಷುರಾದಿಗಳಿಂದ ಜ್ಞೇಯವಾದುದಕ್ಕಿಂತಲೂ ಭಿನ್ನವಾದ, ಅಗ್ರಾಹ್ಯಂ = ಮನೋಗ್ರಾಹ್ಯಭಿನ್ನವಾದ, ಅಗೋತ್ರಂ = ನ ವಿದ್ಯತೇ ಗೋತ್ರಾದಿಕಂ ಯಸ್ಯ ತತ್ತಥೋಚ್ಯತೆ" ಎಂದು ನ್ಯಾಯಸುಧಾದಲ್ಲಿ ಉಕ್ತವಾದಂತೆ ವಸಿಷ್ಠಾದಿಗೋತ್ರಹೀನವಾದ, ಅವರ್ಣಂ = ಪ್ರಾಕೃತವಾದ ಶುಕ್ಲಾದಿವರ್ಣರಹಿತವಾದ, ಅದೃಶ್ಯತ್ವಾದಿಶಬ್ದೈಃ ದೃಶ್ಯಾದ್ಯನ್ಯೋನ್ಯಾಭಾವೋ ಅಭಿಧೀಯತೇ" ಎಂಬ ಸುಧಾವಾಕ್ಯದಂತೆ ಗೋತ್ರವರ್ಣ ಭಿನ್ನವಾದ, ಅಚಕ್ಷುಃಶ್ರೋತ್ರಂ = ಪ್ರಾಕೃತಜ್ಞಾನೇಂದ್ರಿಯಾದಿಶೂನ್ಯವಾದ, ತತ್ = ಅಂತಹ, ಅಪಾಣಿಪಾದಂ = ಪ್ರಾಕೃತಕರ್ಮೇಂದ್ರಿಯಶೂನ್ಯವಾದ, ನಿತ್ಯಂ = ಸ್ವರೂಪನಾಶರಹಿತವಾದ, ವಿಭುಂ = ಸಮರ್ಥವಾದ, ಸರ್ವಗತಂ = ವ್ಯಾಪ್ತವಾದ, ಸುಸೂಕ್ಷ್ಮಂ = ಅತ್ಯಂತ ಅವ್ಯಕ್ತವಾದ, ಯದ್ಭೂತಯೋನಿಂ = ಸಕಲಪ್ರಾಣಿಗಳಿಗೂ ನಿಮಿತ್ತಕಾರಣವಾದ, (ಪರಮಾತ್ಮನನ್ನು) ಧೀರಾಃ = ಅಪರೋಕ್ಷಜ್ಞಾನಿಗಳು, ಪರಿಪಶ್ಯಂತಿ = ಸಾಕ್ಷಾತ್ಕರಿಸುತ್ತಾರೆಯೋ, ತದಕ್ಷರಂ = ಅವ್ಯಯಂ = ಅಂತಹದು ನಾಲ್ಕು ವಿಧವಾದ ನಾಶರಹಿತವಾದುದು, ದೇಹದಿಂದಲೂ, ನಾಶರಹಿತವಾದುದು." (ಪರಬ್ರಹ್ಮವು) ಎಂದರ್ಥವು.

"ಅದೃಶ್ಯಂ" ಎಂಬಲ್ಲಿಯೂ, "ಅಗ್ರಾಹ್ಯಂ" ಎಂಬಲ್ಲಿಯೂ ಸಹ, ದೃಶ್ಯಾನ್ಯೋನ್ಯಾಭಾವವೂ, ಗ್ರಾಹ್ಯ ಭೇದವೂ ವಿವಕ್ಷಿತವಾಗಿದೆ. ಚಕ್ಷುರಾದಿಪ್ರಾಕೃತವಾದ ಇಂದ್ರಿಯಗಳಿಂದ ತಿಳಿಯಲ್ಪಡತಕ್ಕ ಸಕಲಪದಾರ್ಥಗಳ ಭೇದವೂ, ಮನೋಗ್ರಾಹ್ಯವಾದ ಪದಾರ್ಥಗಳ ಭೇದವೂ ಸಹ ಪರಮಾತ್ಮನಲ್ಲಿ ಅಬಾಧಿತಗಳಾಗಿರುವುದರಿಂದ ಅವುಗಳಿಗೆ ಬ್ರಹ್ಮಲಕ್ಷಣತ್ವವು ಕೂಡುತ್ತದೆ. ಈ ಅಧ್ಯಾಯದಲ್ಲಿ ಯಾವುದಕ್ಕೆ ಪರಬ್ರಹ್ಮನಲ್ಲಿ ಸಮನ್ವಯವನ್ನು ಹೇಳಲಾಗಿದೆಯೋ ಅದೆಲ್ಲವೂ ಪರಬ್ರಹ್ಮನ ಲಕ್ಷಣಗಳೆಂಬುದಾಗಿಯೂ ಆ ಲಕ್ಷಣಗಳಿಗೂ ಪರಬ್ರಹ್ಮನಿಗೂ ಸವಿಶೇಷಾಭೇದವೆಂಬುದಾಗಿಯೂ ಜನ್ಮಾಧಿಕರಣದಲ್ಲಿ ನಿರೂಪಿಸಿರುತ್ತಾರೆ.

ಪ್ರಕೃತದಲ್ಲಿ ಭೇದವು ಧರ್ಮಸ್ವರೂಪವಾಗಿರುವುದರಿಂದ ದೃಶ್ಯಾದಿಭೇದವು ಪರಮಾತ್ಮನ ಲಕ್ಷಣವೆಂದರೂ, ಅಗೋತ್ರಂ ಎಂಬಲ್ಲಿಯೂ ಅವರ್ಣಂ ಎಂಬಲ್ಲಿಯೂ ಸಹ, ಗೋತ್ರಾದನ್ಯತ್ ಅಗೋತ್ರಂ, ವರ್ಣಾದನ್ಯತ್ ಅವರ್ಣಂ" ಎಂಬುದಾಗಿ ಗೋತ್ರಾದಿಭೇದವನ್ನು ಹೇಳಿದರೆ ಅಂತಹ ಭೇದವು ಬ್ರಹ್ಮನಲ್ಲಿರುವಂತೆ ಪ್ರಪಂಚದಲ್ಲೂ ಕಂಡುಬರುವ

ಪ್ರಯುಕ್ತ ಬ್ರಹ್ಮಲಕ್ಷಣಕ್ಕೆ ಅತಿವ್ಯಾಪ್ತಿದೋಷವು ಪ್ರಸಕ್ತವಾಗುತ್ತದೆ. ಆದಕಾರಣ ನ ವಿದ್ಯತೇ ಗೋತ್ರಾದಿ, ಯಸ್ಯ, ಎಂಬುದಾಗಿ ಬಹುವ್ರೀಹಿಸಮಾಸವನ್ನು ಹೇಳಿ ಗೋತ್ರಾದಿಸಂಸರ್ಗಾಭಾವವನ್ನು ಹೇಳಬೇಕು. ಆದರೆ ಇದು ಅಭಾವ ರೂಪವಾದುದು. ಬ್ರಹ್ಮನು ಭಾವರೂಪ, ಆದಕಾರಣ ಇದು ಗೋತ್ರಾದಿಸಂಸರ್ಗಾಭಾವವಾಗಲಿ, ಪ್ರಾಕೃತವರ್ಣಾಭಾವವಾಗಲಿ, ಪ್ರಾಕೃತಜ್ಞಾನೇಂದ್ರಿಯಕರ್ಮೇಂದ್ರಿಯಾಭಾವಗಳಾಗಲಿ ಪರಬ್ರಹ್ಮನ ಲಕ್ಷಣಗಳು ಹೇಗೆ ? ಎಂಬ ಶಂಕೆಯು ಉಂಟಾಗುತ್ತದೆ.

ಅದಕ್ಕೆ ಸಮಾಧಾನವು ಈ ರೀತಿ ಇದೆ.

ಗೋತ್ರಾದಿಸಂಸರ್ಗಾಭಾವವು ಅಭಾವರೂಪವಾದುದರಿಂದ ಭಾವರೂಪನಾದ ಪರಬ್ರಹ್ಮಲಕ್ಷಣವಲ್ಲವಾದಾಗ್ಯೂ ಕೂಡ ಪ್ರಕೃತದಲ್ಲಿ ಗೋತ್ರಾದಿಸಂಸರ್ಗಾಭಾವವತ್ತ್ವವೇ ಇಲ್ಲಿ ಲಕ್ಷಣವಾಗಿ ವಿವಕ್ಷಿತವಾಗಿದೆ. ಅದು ಭಾವರೂಪವಾದುದರಿಂದ ಬ್ರಹ್ಮಲಕ್ಷಣವೆಂಬಲ್ಲಿ ಯಾವ ಬಾಧಕವೂ ಇಲ್ಲವೆಂದು ಅಭಿಪ್ರಾಯ. ಅಂತಹ ಅಭಾವವತ್ತ್ವವೆಂಬ ಲಕ್ಷಣಕ್ಕು ಬ್ರಹ್ಮನಿಗೂ ಅಭೇದವೇ ಇದೆಯೆಂದು ಅಭಿಪ್ರಾಯ.

**ಶಂಕಾ** :- ಅಭಾವವತ್ತ್ವವೆಂದರೆ ಅಭಾವವತಃ ಭಾವಃ ಎಂದು ಹೇಳಬೇಕು. ಮತುಬಂತಾದ್ವಿಹಿತೋ ಭಾವ ಪ್ರತ್ಯಯಃ ಪ್ರಕೃತ್ಯರ್ಥಂ ಅಭಿಧತ್ತೇ ಎಂಬ ನ್ಯಾಯದಿಂದ ಅಭಾವವತೋ ಭಾವಃ = ಅಭಾವವತ್ತ್ವಂ, ಅದು ಅಭಾವವೇ ಆಗಿದೆ. ಗಂಧವತೋ ಭಾವಃ ಗಂಧವತ್ತ್ವಂ, ಗಂಧವತ್ತ್ವಂ ಚ ಗಂಧಏವ, ಎಂಬಂತೆ, ಆದಕಾರಣ ಗೋತ್ರಾದಿಸಂಸರ್ಗಾ ಭಾವವತ್ತ್ವಂ ಎಂಬುದೂ ಸಹ ಬ್ರಹ್ಮನ ಲಕ್ಷಣವಾಗಲಾರದು. ಅದಕ್ಕೆ ಬ್ರಹ್ಮಾಭೇದವೂ ಬಾಧಿತವಾಗಿದೆ ಎಂಬ ಶಂಕೆಯು ಉಂಟಾಗುತ್ತದೆ.

**ಅದಕ್ಕೆ ಸಮಾಧಾನ** :- "ದಂಡಿತ್ವವದ್, ಅಭಾವವತ್ತ್ವಸ್ಯ ಧರ್ಮತ್ವೇನ ವಿವಕ್ಷಿತತ್ವಾತ್" ಎಂಬ ನ್ಯಾಯ ಸುಧಾದಲ್ಲಿನ ಸಮಾಧಾನವಾಕ್ಯದ ಅಭಿಪ್ರಾಯವು ಈ ರೀತಿ ಇದೆ.

"ಗೋತ್ರಾದ್ಯಭಾವವತ್ತಾ ತು ಭಾವರೂಪೈವ ಇತಿ ನ ತಸ್ಯಾಃ ಬ್ರಹ್ಮಸ್ವರೂಪತ್ವೇ ಕಾಚಿದನುಪಪತ್ತಿರಿತಿ ನೇಯ ವಿಚಾರ್ಯತೇ" ಎಂಬುದಾಗಿಯೂ ನ್ಯಾಯಸುಧಾದಲ್ಲಿ ಸಮಾಧಾನವನ್ನು ಹೇಳಲಾಗಿದೆ.

**ಅಭಿಪ್ರಾಯ** :- "ಕೃತ್ತದ್ಧಿತಸಮಾಸೇಭ್ಯಃ ಸಂಬಂಧಾಭಿಧಾನಂ ಭಾವಪ್ರತ್ಯಯೇನ" ಎಂಬ ವಚನದಂತೆ, ಅಭಾವದ ಸಂಬಂಧವೇನೇ "ಅಭಾವವತ್ತ್ವಂ" ಎಂಬುದು, ಅದು ಅಭಾವವಲ್ಲ. ಆದುದರಿಂದ "ಗೋತ್ರಾದ್ಯ ಭಾವವತ್ತ್ವಂ" ಗೋತ್ರಾದ್ಯಭಾವವಿಶಿಷ್ಟಸಂಬಂಧವು ಭಾವರೂಪವೇ ಆಗಿರುವುದರಿಂದ ಅದಕ್ಕು ಬ್ರಹ್ಮನಿಗೂ ಅಭೇದವು ಇಲ್ಲಿ ವಿವಕ್ಷಿತವಾಗಿರುವುದರಿಂದ ಬಾಧಕವಿಲ್ಲವೆಂಬುದು ಒಂದು ಸಮಾಧಾನ.

**ಶಂಕಾ** :- ಈ ಮೇಲೆ ಕಂಡ ಸಮಾಧಾನದ ನಂತರವೂ ಮತ್ತೊಂದು ಶಂಕೆಯೂ ಉಂಟಾಗುವುದು.

**ಹೇಗೆಂದರೆ** :- ಅಭಾವವಿಶಿಷ್ಟಸಂಬಂಧವು ಬ್ರಹ್ಮಾಭಿನ್ನವಾಗಿ ಬ್ರಹ್ಮಸ್ವರೂಪವೆಂದರೆ, ಅಭಾವಕ್ಕು ಬ್ರಹ್ಮಭೇದವು ಬಂದಂತೆಯೇ ಆಯಿತಲ್ಲಾ, "ಯದ್ವಿಶಿಷ್ಟಸ್ಯಯತ್, ಭವತಿ, ತತ್, ತದ್ವಿಶೇಷಣಸ್ಯಾಪಿ" ಎಂಬ ವ್ಯಾಪ್ತಿಯ ಬಲದಿಂದ ಹೇಳುತ್ತೇವೆ ಎಂಬ ಮತ್ತೊಂದು ಶಂಕೆಯು ಉಂಟಾಗುವುದು. ಅದಕ್ಕೆ ಸಮಾಧಾನವು ಈ ಕೆಳಗೆ ಕಂಡಂತಿದೆ.

**ಸಮಾಧಾನ** :- ಅವಚ್ಛಿನ್ನಸ್ಯ ಯದ್‌ಭವತಿತದ್ ಅವಚ್ಛೇದಕಸ್ಯಾಪಿ ಎಂಬ ವ್ಯಾಪ್ತಿಯಾಗಲಿ, "ಯದ್ವಿಶಿಷ್ಟಸ್ಯ ಯದ್‌ಭವತಿ, ತದ್, ತದ್ವಿಶೇಷಣಸ್ಯಾಪಿ ಭವತಿ" ಎಂಬ ವ್ಯಾಪ್ತಿಯಾಗಲಿ ಸಿದ್ಧಿಸುವುದಿಲ್ಲ.

**ವಿಶಕ್ಕೆಂದರೆ** :- ಘಟಾತ್ಯಂತಾಭಾವವೂ, ಘಟಧ್ವಂಸವೂ, ಘಟಾವಚ್ಛಿನ್ನವಾಗಿದೆ. ಆ ಅತ್ಯಂತಾಭಾವಕ್ಕೂ, ಆ ಧ್ವಂಸಕ್ಕೂ ಘಟದೇಶಭಿನ್ನದೇಶತ್ವವೂ, ಘಟಕಾಲಭಿನ್ನಕಾಲವೃತ್ತಿತ್ವವೂ ಇದ್ದಾಗ್ಯೂ ಸಹ, ಅವಚ್ಛೇದಕವಾದ ಘಟಕ್ಕೆ ಅದು ಇಲ್ಲವಾದ್ದರಿಂದ ಹಿಂದೆ ಹೇಳಿದ ವ್ಯಾಪ್ತಿಯು ಸಿದ್ಧಿಸುವುದಿಲ್ಲ. ವ್ಯಭಿಚರಿತವಾಗಿದೆ.

ಅದರಂತೆ ಪ್ರಕೃತದಲ್ಲಿ ಗೋತ್ರಾದ್ಯಭಾವ ವಿಶಿಷ್ಟಸಂಬಂಧವು ಬ್ರಹ್ಮಸ್ವರೂಪವಾದರೂ, ಅದಕ್ಕೆ ಅವಚ್ಛೇದಕವಾದ ಅಭಾವಕ್ಕೆ ಆ ಸಂಬಂಧವನ್ನು ಕುರಿತು ತಟಸ್ಥವಾಗಿ ವ್ಯಾವರ್ತಕವಾಗಿ ಉಪಲಕ್ಷಣವಾಗಿದೆ. ಆದಕಾರಣ ಅವಚ್ಛೇದಕವಾದ ಅಭಾವಕ್ಕೆ ಬ್ರಹ್ಮಸ್ವರೂಪತ್ವವು ಹೇಗೆ ಎಂಬ ಶಂಕೆಗೆ ಅವಕಾಶವೇ ಇಲ್ಲ. ಮತ್ತು "ಸಂಬಂಧೇಽಸ್ತಿ ವಿವಕ್ಷಾಯಾಂ ಭವಂತಿಮತುಬಾದಯಃ" ಎಂದು ಹೇಳುತ್ತದೆ.

ಈ ಅಭಿಪ್ರಾಯದಿಂದಲೇ ನ್ಯಾಯಸುಧಾಕಾರರು "ನ ಕಾಚಿದನುಪಪತ್ತಿಃ" ಎಂದು ಹೇಳಿರುವರು.

ಈ ಸಂದರ್ಭದಲ್ಲಿ ಮತ್ತೊಂದು ಆಕ್ಷೇಪವು ಕಂಡುಬಂದಿದೆ.

**ಅದರ ವಿವರಣೆ** :- ಆನಂದವಲ್ಲಿಯಲ್ಲಿ ಪ್ರಸಕ್ತವಾಗಿರುವ ಆನಂದಕ್ಕೆ ಧರ್ಮತ್ವವು ಇಲ್ಲ. ಆನಂದವತ್ತ್ವವೇ ಧರ್ಮವೆಂದು ಕಲ್ಪಿಸಬೇಕಾಗುತ್ತದಲ್ಲಾ? ಈ ರೀತಿ ಹೇಳಿದರೆ "ಆನಂದೋ ಬ್ರಹ್ಮೇತಿ ವ್ಯಜಾನಾತ್" ಎಂಬ ಶ್ರುತಿಯ **ವಿರೋಧವು ಬರುವುದಿಲ್ಲವೇ? ಎಂದು ಕೆಲವರು ಆಕ್ಷೇಪಿಸುತ್ತಾರೆ.**

**ಅದಕ್ಕೆ ಸಮಾಧಾನ** :- ಆನಂದಾದಿಗಳಲ್ಲಿ ಬೇರೆ ತರಹದ ಕಲ್ಪನೆಗೆ ಅವಕಾಶವೇ ಇಲ್ಲ. ಶ್ರುತಿಯು ಸ್ಪಷ್ಟವಾಗಿ "ಆನಂದೋ ಬ್ರಹ್ಮ" ಎಂದೇ ಹೇಳುತ್ತಲಿದೆ.

ಆನಂದಕ್ಕೇನೇ "ಬ್ರಹ್ಮಸ್ವರೂಪತ್ವವು" ಉಕ್ತವಾಗಿರುವುದರಿಂದ "ಆನಂದವತ್ತ್ವಂ" ಎಂಬುದಾಗಿ ಕಲ್ಪಿಸಬೇಕಾಗಿಲ್ಲ. ಆನಂದಾದಿ ತಾದಾತ್ಮ್ಯವೇ (ಅಭೇದವೇ) ಬ್ರಹ್ಮನಲ್ಲಿ ಶ್ರುತಿಪ್ರಮಿತವಾಗಿದೆ. ಆದಕಾರಣ ಆನಂದಾದಿಗಳಿಗೇನೇ ಬ್ರಹ್ಮಧರ್ಮತ್ವವು ಸಂಗತವಾಗಿದೆ.

**ವಿಶೇಷವಾಕ್ಯಾರ್ಥದ ನಿರೂಪಣೆ** :- ಪ್ರಾಗಭಾವವಾಗಲಿ, ಧ್ವಂಸವಾಗಲಿ, ಅತ್ಯಂತಾಭಾವವೇ ಆಗಲಿ ಇವೆಲ್ಲವೂ ಧರ್ಮಿಗಿಂತಲೂ ಭಿನ್ನವೇ ಆಗಿವೆ. ಆದಕಾರಣ ಬ್ರಹ್ಮನಲ್ಲಿರುವುದೂ ಸಹ ಭಿನ್ನವೇ ಸರಿ, ಹೀಗೆ ಹೇಳುವುದರಿಂದ "ಏವಂಧರ್ಮಾನ್" ಎಂದು ಪರಮಾತ್ಮನಿಗೂ ಅವನ ಧರ್ಮಗಳಿಗೂ ಭೇದವನ್ನು ನಿಷೇಧಿಸಿ ಅಭೇದವನ್ನು ಹೇಳುವ ಶ್ರುತಿಗೆ ವಿರೋಧವನ್ನು ಶಂಕಿಸಬಾರದು.

ಪ್ರಾಗಭಾವಾದಿಗಳು ಧರ್ಮಿಗಿಂತಲೂ ಭಿನ್ನಗಳೇ ಆಗಿವೆ. ಯಾವ ಭೂತಲದಲ್ಲಿ ಘಟಾಭಾವವು ಉಂಟೋ ತನ್ನ ಅಧಿಕರಣವಾದ ಭೂತಲವು ಖನನಾದಿಗಳಿಂದ ನಾಶವಾದಾಗ್ಯೂ ಘಟಾಭಾವವು ಇದ್ದೇ ಇರುತ್ತದೆ. ಆದುದರಿಂದ ಭಾವದಂತೆ ಅಭಾವವೂ ಪ್ರತ್ಯೇಕವಾದ ಪದಾರ್ಥವಾಗಿ ಪರಿಗಣಿಸಲ್ಪಟ್ಟಿದೆ. ಅನ್ಯೋನ್ಯಾಭಾವವು (ಭೇದವು) ಮಾತ್ರ ಧರ್ಮಿಸ್ವರೂಪವೆಂದು ನಿರ್ಣಯಿಸುತ್ತಾರೆ.

ಪ್ರಾಗಭಾವಾದಿಗಳು ಭೇದದಂತೆ ಧರ್ಮಿಸ್ವರೂಪವಲ್ಲ. ಅನ್ಯೋನ್ಯಾಭಾವದಂತೆ ಪ್ರಾಗಭಾವಾದಿಗಳಲ್ಲಿ ಧರ್ಮಿತಾದಾತ್ಮ್ಯಸಾಧಕವಾದ ಪ್ರಮಾಣವಾಗಲಿ ಯುಕ್ತಿಯಾಗಲಿ ಇರುವುದಿಲ್ಲ.

ಭೇದವು ಮಾತ್ರ ಧರ್ಮಿಸ್ವರೂಪವಾದುದು, ಪ್ರಾಗಭಾವಾದಿಗಳು ಧರ್ಮಿಸ್ವರೂಪಗಳಲ್ಲವೆಂಬ ವ್ಯತ್ಯಾಸಕ್ಕೆ ಇದೇ ಕಾರಣವನ್ನು ಹೇಳಲಾಗಿದೆ.

ಭೇದದ ವಿಷಯದಲ್ಲಿ ಒಂದು ವಿಶೇಷ ಸಂದರ್ಭವು ಉಂಟು.

ಅನಿತ್ಯದಲ್ಲಿರುವ ಭೇದವು (ಅನಿತ್ಯಧರ್ಮಿಕವಾದ ಭೇದವು) ಅನಿತ್ಯವೇ ಸರಿ. ಧರ್ಮಿಯು ನಾಶವಾದರೆ ಅದರಲ್ಲಿರುವ ಭೇದವೂ ಸಹ ನಾಶವನ್ನು ಹೊಂದುತ್ತದೆ. ಗ್ರಂಥಕಾರರಿಗೆ ಇದೇ ಅಭಿಪ್ರಾಯ.

ಆದರೆ ''ನಷ್ಟಾನಾಮಪಿ ವಸ್ತೂನಾಂ ಭೇದೋ ನೈವ ವಿನಶ್ಯತಿ'' ಎಂದು ಕೆಲವು ಕಡೆ, ಧರ್ಮಿಯು ನಾಶವಾದರೂ ಭೇದವು ನಾಶವಿಲ್ಲವೆಂದು ಹೇಳಿರುವುದಕ್ಕೆ ಅಭಿಪ್ರಾಯವೇ ಬೇರೆಯಾಗಿದೆ. ಆದಕಾರಣ ಅದರ ವಿರೋಧವನ್ನು ಪ್ರಕೃತದಲ್ಲಿ ಹೇಳುವಂತಿಲ್ಲ.

ಘಟಾದಿಧರ್ಮಿಯು ನಾಶವಾದರೆ ಅದರಲ್ಲಿರುವ ಭೇದವೂ ಸಹ ಸರ್ವಥಾ ನಾಶವಾಗುವುದೇ ಇಲ್ಲ'' ಎಂಬ ಅಭಿಪ್ರಾಯವು ''ನಷ್ಟಾನಾಮಪಿ ವಸ್ತೂನಾಂಭೇದೋ ನೈವ ವಿನಶ್ಯತಿ'' ಎಂಬ ವಾಕ್ಯಕ್ಕೆ ವಿವಕ್ಷಿತವಾಗಿಲ್ಲ.

ಈ ವಿಷಯದಲ್ಲಿ ಒಂದು ರಹಸ್ಯಾಂಶವನ್ನು ತಿಳಿಯಬೇಕಾಗಿದೆ.

ಧರ್ಮಿನಾಶವಾದರೆ ಸರ್ವಥಾಭೇದವೂ ನಾಶವಾಗುತ್ತದೆ ಎಂದಾಗಲಿ ಧರ್ಮಿಯು ನಾಶವಾದರೆ ಸರ್ವಥಾಭೇದವು ನಾಶವನ್ನೇ ಹೊಂದುವುದಿಲ್ಲ ಎಂಬ ಅಭಿಪ್ರಾಯವಾಗಲಿ ಆಪಾತತಃ ನಿಶ್ಚಯಿಸಬಾರದು.

ಸತ್ಕಾರ್ಯವಾದಿಗಳು, ಅಸತ್ಕಾರ್ಯವಾದಿಗಳು, ಸದಸತ್ಕಾರ್ಯವಾದಿಗಳು ಎಂಬುದಾಗಿ ದಾರ್ಶನಿಕರಲ್ಲಿ ಮತಭೇದವೊಂದುಂಟು. ಈ ಪೈಕಿ ಅಸತ್ಕಾರ್ಯವಾದಿಗಳು ನೈಯ್ಯಾಯಿಕರು. ಸತ್ಕಾರ್ಯವಾದಿಗಳು ಸಾಂಖ್ಯರು, ಸದಸತ್ಕಾರ್ಯವಾದಿಗಳು ಸಿದ್ಧಾಂತಿಗಳು. ಸಿದ್ಧಾಂತಮತದ ರೀತಿಯಿಂದ ಪ್ರಕೃತದಲ್ಲಿ ಘಟಾದಿಗಳು ಕಾರ್ಯದ ಆಕಾರದಿಂದ ನಾಶವಾದಾಗ ಭೇದವು ಕಾರಣದ ಆಕಾರವಾಗಿ ನಾಶವಿಲ್ಲದೇ ಇರುತ್ತದೆ. ಕಾರ್ಯದ ಆಕಾರದಿಂದ ಧರ್ಮಿಯು ನಾಶವಾದಾಗ ತದಾಕಾರದಿಂದ ಭೇದವು ನಾಶವಾಗುತ್ತದೆಯೇ ಹೊರತು ಕಾರಣದ ಆಕಾರದಿಂದ ನಾಶವನ್ನು ಹೊಂದುವುದಿಲ್ಲ ಎಂಬ ಅಭಿಪ್ರಾಯದಿಂದ ''ನಷ್ಟಾನಾಮಪಿ ವಸ್ತೂನಾಂ ಭೇದೋ ನೈವ ವಿನಶ್ಯತಿ'' ಎಂಬ ವಾಕ್ಯವು ಹೊರಟಿದೆ.

''ಘಟಾಭಾವವತ್'' ಭೂತಲಂ ಎಂಬಲ್ಲಿ ಘಟಾಭಾವವು ವಿಶೇಷಣವಾಗಿ ಮಾತ್ರ ತೋರುತ್ತದೆ. ಅಲ್ಲಿ ಘಟಾಭಾವವತ್ತ್ವವೇ ಧರ್ಮವು. ಭೂತಲಾದಿಗಳಲ್ಲಿ ಧರ್ಮತ್ವವು ತತ್ತತ್ಸಂಬಂಧಿತವಾದುದೇ ಹೊರತು (ತದಧಿಕರಣತಾ ನಿರೂಪಿತವಾದುದೇ ಹೊರತು) ಅಭಾವನಿರೂಪಿತವಾದುದಲ್ಲ. ಎಂದು [illegible] ಉಲ್ಲೇಖಿಸಲಾಗಿದೆ.

**ಅನ್ಯೋನ್ಯಾಭಾವಕ್ಕೆ (ಭೇದಕ್ಕೆ) ಧರ್ಮಿಸ್ವರೂಪತ್ವದ ಸಮರ್ಥನೆ.** ನೈಯ್ಯಾಯಿಕರು ಅನ್ಯೋನ್ಯಾ ಭಾವಕ್ಕೆ ಧರ್ಮಿಸ್ವರೂಪತ್ವವನ್ನು ಒಪ್ಪಿಲ್ಲ.

೧. ಅನ್ಯೋನ್ಯಾಭಾವದ ಸ್ಥಳದಲ್ಲಿ ಅಘಟಃ ಪಟಃ ಎಂಬಲ್ಲಿ ನ ಘಟಃ ಅಘಟಃ ಎಂಬುದಾಗಿ ನಞ್ ಪ್ರಯೋಗವಿದೆ. ಆದ್ದರಿಂದ ಇದು ನಿಷೇಧರೂಪವಾಯಿತು. .

ತಾದಾತ್ಮ್ಯನಿಷೇಧವನ್ನೇ ಅನ್ಯೋನ್ಯಾಭಾವವೆಂದೂ ಭೇದವೆಂದೂ ಕರೆಯುತ್ತಾರೆ. ಪಟಃ ಎಂಬುದು ವಿಧಿರೂಪ. ವಿಧಿ ನಿಷೇಧಗಳಿಗೆ ಪರಸ್ಪರ ವಿರೋಧವುಂಟು. ಆದಕಾರಣ ಅನ್ಯೋನ್ಯಾಭಾವವು ಧರ್ಮಿಸ್ವರೂಪವಲ್ಲ. ಇದಕ್ಕೆ ಸಾಧಕವಾಗಿ ಅನುಮಾನವನ್ನೂ ಉದಾಹರಿಸುವರು. ವಿಮತೌ - (ಘಟತದ್ಧರ್ಮಿಕಾನ್ಯೋನ್ಯಾಭಾವೌ) - ನಾಭಿನ್ನೌ - ವಿರುದ್ಧತ್ವಾತ್ - ಸಂಮತವತ್ - (ಘಟಘಟಾಭಾವವತ್) ಹೀಗೆಯೇ - ವಿಮತೌ - ವಿರುದ್ಧೌ - ವಿಧಿ ನಿಷೇಧರೂಪತ್ವಾತ್ - ಸಂಮತವತ್ ಎಂದು ಹಿಂದಿನ ಹೇತುವಿಗೆ ಸಾಧಕವಾಗಿ ಮತ್ತೊಂದು ಅನುಮಾನವನ್ನೂ ಹೇಳುವರು.

ಅದರಂತೆ ವಿಮತೌ - ವಿಧಿನಿಷೇಧರೂಪೌ - ನಞ್ ಪ್ರಯೋಗಾಪ್ರಯೋಗವಿಷಯತ್ವಾತ್ - ಸಂಮತವತ್ ಎಂದೂ ಪ್ರಯೋಗಿಸುವರು.

ಆದರೆ ಮೇಲೆ ಕಂಡ ವಿರುದ್ಧತ್ವಸಾಧಕವಾದ ಅನುಮಾನವು ವ್ಯಭಿಚರಿತವಾದ್ದರಿಂದ ಪೂರ್ವಪಕ್ಷಿಯು ಅನ್ಯೋನ್ಯಾಭಾವಕ್ಕೆ ಧರ್ಮಿಸ್ವರೂಪತ್ವವನ್ನು ನಿರಾಕರಿಸಲು ಸಾಧ್ಯವಿಲ್ಲ.

ಇದರ ವಿಷಯವಾಗಿಯೇ ಅನುವ್ಯಾಖ್ಯಾನವು ಪ್ರವೃತ್ತವಾಗಿದೆ.

''ಅತದ್ವ್ಯಾವೃತ್ತಿ, ಅನ್ಯತಾಚೇತಿ ನ ವಿಶೇಷೋಽಸ್ತಿ ಕಶ್ಚನ'' (ಅನುವ್ಯಾಖ್ಯಾನ)

**ಅದರ ಅಭಿಪ್ರಾಯ ವಿವರಣೆ :-**

ಪಟಃ ಅಘಟಃ, ಪಟಃ ಘಟಾದನ್ಯಃ ಎಂಬೆರಡರಲ್ಲಿ ಏನೂ ವಿಶೇಷವಿಲ್ಲ. ಏಕಾರ್ಥವಾಗಿಯೇ ಇದೆ. ಘಟಕ್ಕೆ ಇರತಕ್ಕ ಅಘಟತ್ವವೂ, ಘಟಾನ್ಯತ್ವವೂ ಸಹ ಒಂದೇ ಆಗಿದೆ. ಅಭಿನ್ನವೇ ಆಗಿದೆ. ಆದರೆ ಅಘಟಃ ಎಂಬಲ್ಲಿ, ನ ಘಟಃ ಅಘಟಃ ಎಂಬಲ್ಲಿ ನಞ್ ಪ್ರಯೋಗವಿದೆ. ಅದು ಅಭಾವರೂಪವಾಗಿದೆ ಘಟಾದನ್ಯಃ ಎಂಬಲ್ಲಿನ ಅನ್ಯತ್ವವು ಭಾವರೂಪವಾಗಿದೆ. ಇಲ್ಲಿ ನಞ್ ಇಲ್ಲ. ಹೀಗಿದ್ದಾಗೂ ಇವೆರಡಕ್ಕೂ ವಿರೋಧವೇ ಇಲ್ಲ. ಆದಕಾರಣ ಹಿಂದೆ ಪೂರ್ವಪಕ್ಷಿಗಳೂ ಹೇಳಿದ ಅನುಮಾನದಲ್ಲಿ ಕೂಡ ಸಾಧ್ಯವಿಲ್ಲ. ಹೇತುವು ಮಾತ್ರ ಇಂತಹ ಸ್ಥಳದಲ್ಲಿ ಬಂದುದರಿಂದ ಇಲ್ಲಿ ಅಘಟತ್ವಘಟಾನ್ಯತ್ವಗಳಲ್ಲಿ ಅವರ ಅನುಮಾನವು ವ್ಯಭಿಚಾರಗ್ರಸ್ತವಾಯಿತು ಎಂದು ಅಭಿಪ್ರಾಯ.

ಈ ಕಾರಣದಿಂದ ಅನ್ಯೋನ್ಯಾಭಾವಕ್ಕೆ ಧರ್ಮಿಸ್ವರೂಪತ್ವವನ್ನು ನಿರಾಕರಿಸಲು ಆಗುವುದಿಲ್ಲವೆಂದು ಅಭಿಪ್ರಾಯ.

ಮತ್ತು ಮತ್ತೊಂದು ಕಡೆಯೂ ಸಹ ಹಿಂದಿನ ಅನುಮಾನಕ್ಕೆ ವ್ಯಭಿಚಾರವು ಕಂಡುಬಂದಿದೆಯೆಂದು ಅನುವ್ಯಾಖ್ಯಾನಕಾರರು ತೋರಿಸಿರುತ್ತಾರೆ.

**ದೋಷಾಭಾವೋ ಗುಣ ಇತಿ ಪ್ರಸಿದ್ಧೋ ಲೌಕಿಕೇಷ್ವಪಿ ।। (ಅನುವ್ಯಾಖ್ಯಾನ)**

ಆರೋಗ್ಯಂಗುಣಃ ಎಂಬುದಾಗಿ ಲೌಕಿಕಪ್ರಸಿದ್ಧಿಯೂ ಉಂಟು. ವೈದಿಕಪ್ರಸಿದ್ಧಿಯೂ ಉಂಟು.

**ಆರೋಗ್ಯಂ ಎಂದರೆ** :- ನ ವಿದ್ಯಂತೇರೋಗಾಃ ಯಸ್ಯಸಃ ಅರೋಗಃ ತಸ್ಯಭಾವಃ ಆರೋಗ್ಯಂ ಎಂಬ ರೋಗಾಭಾವಕ್ಕೆ ನಞ್ ಪ್ರಯೋಗವಿಷಯತ್ವವು ಕಂಡುಬಂದಿದೆ. ಇದಕ್ಕೆ ನಞ್ ಪ್ರಯೋಗಕ್ಕೆ ವಿಷಯವಲ್ಲದ ಗುಣಃ ಎಂಬುದಾಗಿ ವಿಧಿರೂಪವಾದ ಗುಣತ್ವವೂ ಪ್ರಸಿದ್ಧಿಯಿದೆ.

ಹೀಗೆಯೇ ಅಕ್ರೌರ್ಯಂ ಗುಣಃ ಎಂಬ ಪ್ರಸಿದ್ಧಿಯೂ ಉಂಟು. ಅಕ್ರೌರ್ಯಂ = ಎಂದರೆ ಶಾಂತ್ಯಭಾವಾ ಭಾವವು ಅದಕ್ಕೂ ಗುಣತ್ವದ ಪ್ರಸಿದ್ಧಿಯು ಉಂಟು.

ಇದೇ ರೀತಿ ಗುಣಾಭಾವಕ್ಕೆ ದೋಷತ್ವದ ಸಿದ್ಧಿಯೂ ಸಹ ಅನೌದಾರ್ಯಂ ದೋಷಃ ಎಂಬಲ್ಲಿ ಕಂಡುಬಂದಿದೆ.

ಆದಕಾರಣ ಹಿಂದಿನ ಅನುಮಾನಕ್ಕೆ ವಿರುದ್ಧತ್ವರೂಪವಾದ ಸಾಧ್ಯವಿಲ್ಲದ ಹಿಂದೆ ತೋರಿಸಿದ ಜಾಗಗಳಲ್ಲಿ ಅಂದರೆ, ಅಪಟಃ ಅಘಟಃ, ಘಟಾದನ್ಯಃ, ಆರೋಗ್ಯಂ ಗುಣಃ (ನಞ್ ಪ್ರಯೋಗಕ್ಕೆ ವಿಷಯವಾದ ರೋಗಭಾವಕ್ಕೆ ನಞ್ ಪ್ರಯೋಗಕ್ಕೆ ಅವಿಷಯವಾದ ವಿಧಿರೂಪವಾದ ಗೂಣತ್ವವೂ), ಅನೌದಾರ್ಯಂ ದೋಷಃ ಎಂಬಲ್ಲಿ ಗುಣಾಭಾವಕ್ಕೆ ದೋಷತ್ವವೂ ಪ್ರಸಿದ್ಧವಾಗಿರುವುದರಿಂದ ಇಂತಹ ಕಡೆ ವ್ಯಭಿಚಾರದೋಷವು ಪ್ರಸಕ್ತವಾಗಿ ಆ ಹಿಂದಿನ ಅನುಮಾನವು ದುಷ್ಟವಾಯಿತೆಂದು ಅಭಿಪ್ರಾಯ.

ಆದುದರಿಂದ ಈ ರೀತಿ ಅನ್ಯೋನ್ಯಾಭಾವಕ್ಕೆ ಹಿಂದೆ ಹೇಳಿದ ರೀತಿಯಿಂದ ಧರ್ಮಿಸ್ವರೂಪತ್ವದ ಸಮರ್ಥನವು ಉತ್ಪ್ರೇಕ್ಷಿಕವಾದುದಲ್ಲ. ಇದು ಶ್ರೀ ಬಾದರಾಯಣರಿಗೂ ಸಮ್ಮತವೇ ಆಗಿದೆ. ಇದನ್ನು ಸೂತ್ರಕಾರರು ಅದೃಶ್ಯತ್ವಾದಿ ಗುಣಕೋ ಧರ್ಮೋಕ್ತೇಃ ಎಂಬ ಸೂತ್ರದಲ್ಲಿ ಗುಣಪದವನ್ನು ಪ್ರಯೋಗಿಸಿ ಹಿಂದೆ ತೋರಿಸಿದ ನೈಯ್ಯಾಯಿಕರ ವಿರುದ್ಧತ್ವಸಾಧಕ ಅನುಮಾನವು ವ್ಯಭಿಚರಿತವೆಂಬುದನ್ನು ಸೂಚಿಸಿಯೇ ಇರುತ್ತಾರೆ.

ಈ ವಿಷಯವಾಗಿ ಅನುವ್ಯಾಖ್ಯಾನವು ಈ ರೀತಿ ಇದೆ.

''ಅದೃಶ್ಯತ್ವಾದಿಕಾಂಸ್ತಸ್ಮಾದ್ಗುಣಾನಾಹಸ್ವಯಂಪ್ರಭುಃ (ಅನುವ್ಯಾಖ್ಯಾನ) ನಞ್'' ಪ್ರಯೋಗದ ಇರುವಿಕೆಯು, ಇಲ್ಲದಿರುವಿಕೆಯು ಅಭೇದಕ್ಕೆ ವಿರೋಧಿಯಲ್ಲವೆಂಬುದನ್ನು ಸೂಚಿಸುವುದಕ್ಕಾಗಿಯೇ ಸೂತ್ರಕಾರರು ''ಅದೃಶ್ಯತ್ವಾದಿಗುಣಕ'' ಎಂಬುದಾಗಿ, ನಞ್ ಶಬ್ದ ವಾಚ್ಯವಾದ ಅದೃಶ್ಯತ್ವಾದಿಗಳಿಗೂ, ನಞ್ ಶಬ್ದ ವಾಚ್ಯವಲ್ಲದ ಗುಣಗಳಿಗೂ ಐಕ್ಯವನ್ನು ತೋರಿಸಿರುತ್ತಾರೆ. ಸೂತ್ರಕಾರರಿಗೆ ಮೇಲೆ ಕಂಡ ಅಂಶವು ಅಭಿಪ್ರೇತವಲ್ಲದಿದ್ದರೆ ''ಅದೃಶ್ಯತ್ವಾದಿ'' ಎಂದೇ ಹೇಳುತ್ತಿದ್ದರು.

ಇದರಿಂದ ಅಭೇದಕ್ಕೆ ನಞ್ ಪ್ರಯೋಗದ ಇರುವಿಕೆಯೂ ಇಲ್ಲದಿರುವಿಕೆಯೂ ಹೇಗೆ ವಿರೋಧಿಯಲ್ಲವೋ ಅದರಂತೆ ಸಪ್ರತಿಯೋಗಿಕತ್ವ, ನಿಷ್ಪ್ರತಿಯೋಗಿಕತ್ವವೂ ಸಹ ವಿರೋಧಿಯಲ್ಲವಾದ್ದರಿಂದ ಅನ್ಯೋನ್ಯಾಭಾವಕ್ಕೆ ಧರ್ಮಿಸ್ವರೂಪತ್ವವು ಅಬಾಧಿತವಾಗಿದೆಯೆಂದು ಪರಮತಾತ್ಪರ್ಯ.

ಮತ್ತು ಅದೃಶ್ಯತ್ವಾದಯಃ ಗುಣಾಃ ಯಸ್ಯಸಃ = ಅದೃಶ್ಯತ್ವಾದಿಗುಣಕಃ ಎಂಬಲ್ಲಿ ದೃಶ್ಯಾದ್ ಅನ್ಯತ್ ಅದೃಶ್ಯಂ ಎಂಬುದಾಗಿ ವಿಗ್ರಹವನ್ನು ಮಾಡಿ ಅದೃಶ್ಯತ್ವಂ - ದೃಶ್ಯಭಿನ್ನತ್ವಂ ಇದು ಬ್ರಹ್ಮಸ್ವರೂಪವೇ ಆಗಿದೆ.

ಗೋತ್ರಾದ್ಯತ್ವಂಚಾಭಾವವು ಬ್ರಹ್ಮಭಿನ್ನವಾದುದು, ಇಲ್ಲಿ ದೃಶ್ಯಭಿನ್ನತ್ವಾದಿಗಳು ಗುಣಗಳೆಂದು ಹೇಳಿರುವುದರಿಂದ ಶುದ್ಧ ಧರ್ಮಾರ್ಥಕವಾದ ಗುಣಪದವನ್ನು ಸೂತ್ರಕಾರರು ಹೇಳಿರುವುದರಿಂದ, ಈಶಾಖ್ಯ ಧರ್ಮಿಸ್ವರೂಪತ್ವವು ಉಕ್ತವಾಗಿದೆ. ಇದಕ್ಕೆ ಯಾವ ಬಾಧಕವೂ ಇಲ್ಲವೆಂದು ಅಭಿಪ್ರಾಯ.

ಅದೃಶ್ಯತ್ವಾದಿಗುಣಕನು - ತತ್ - ವಿಷ್ಣುವೇ ಆಗಿದ್ದಾನೆಂದು ಅಭಿಪ್ರಾಯ.

ಇಲ್ಲಿ ವಿಶೇಷ ಬಲದಿಂದ ಧರ್ಮಧರ್ಮಿಭಾವವನ್ನು ಹೊಂದಿಸಬೇಕೆಂದು ಸೂಚಿಸಲು ಬಹುವ್ರೀಹ್ಯರ್ಥಕವಾದ ಕ ಪ್ರತ್ಯಯವು ಉಕ್ತವಾಗಿದೆ.

ವೈಶ್ವಾನರಾಧಿಕರಣದಲ್ಲಿ ಪಾಚಕತ್ವ, ದಾಹಕತ್ವ, ಶೋಷಕತ್ವಾದಿ ಅನೇಕ ಲಿಂಗ ಸಮನ್ವಯ ಸಿದ್ಧಿಗಾಗಿ ಪರಬ್ರಹ್ಮನಲ್ಲಿ ವೈಶ್ವಾನರನಾಮವನ್ನು ಸಮನ್ವಯಗೊಳಿಸಲಾಗಿದೆ.

ವಿಶ್ವನರ ಶಬ್ದದ ಮುಂದೆ ತಸ್ಯ ಇದಂ ಎಂಬುದಾಗಿ ಸಂಬಂಧಾರ್ಥದಲ್ಲಿ ಅಣ್‌ಪ್ರತ್ಯಯವು ಬರಲಾಗಿ

"ವಿಶ್ವಸ್ಯವಸುರಾಟೋಃ । ಮಿತ್ರೇ ಚರ್ಷೌ ನರೇ ಸಂಜ್ಞಾಯಾಮ್"

ಎಂಬ ಸೂತ್ರದಿಂದ ವಿಶ್ವಶಬ್ದದ ಮುಂದೆ ವಸುರಾಟ್ ಶಬ್ದಗಳು ಪರವಾದಾಗ, ಮಿತ್ರಶಬ್ದವು ಪರವಾದಾಗ, ನರಶಬ್ದವು ಮುಂದೆ ಬಂದಾಗ, ವಿಶ್ವಶಬ್ದಕ್ಕೆ ದೀರ್ಘವು ಬಂದು, ವಿಶ್ವಾವಸುಃ, ವಿಶ್ವಾರಾಟ್ ವಿಶ್ವಾಮಿತ್ರಃ ವಿಶ್ವಾನರಃ ಎಂದು ರೂಪಸಿದ್ಧಿಯಾಗುತ್ತದೆ. ಆಮೇಲೆ ವಿಶ್ವನರಸ್ಯ ಇದಂ ಎಂಬುದಾಗಿ ಸಂಬಂಧಾರ್ಥದಲ್ಲಿ ಅಣ್ ಪ್ರತ್ಯಯವು ಬರಲಾಗಿ ಣಿತ್ತ್ವಾದಾದಿವೃದ್ಧಿಬಂದು ವೈಶ್ವಾನರ ಎಂದು ರೂಪವು ಸಿದ್ಧಿಸುತ್ತದೆ.

ಏವಂ ಚ ವಿಶ್ವನರಸಂಬಂಧೀ ವೈಶ್ವಾನರ ಎಂದು ವೈಶ್ವಾನರ ಶಬ್ದವು ಯೌಗಿಕವೂ, ಅನ್ಯಗತತ್ವೇನ ಪ್ರಸಿದ್ಧಿಯು ಇರುವ ಪ್ರಯುಕ್ತ ರೂಢವೂ ಆಗಿರುವ ಪ್ರಯುಕ್ತ ಅನ್ಯತ್ರಪ್ರಸಿದ್ಧವಾದ ನಾಮಲಿಂಗಾತ್ಮಕಗಳಾದ ಶಬ್ದಗಳ ಸಮನ್ವಯ ಪರವಾದ ಪಾದದ್ವಯಗಳ ಕಡೆಯಲ್ಲಿ ಈ ಶಬ್ದದ ಸಮನ್ವಯವನ್ನು ತೋರಿಸಿರುತ್ತಾರೆ.

ಸಮನ್ವಯಾಧ್ಯಾಯವೆನಿಸಿದ ಪ್ರಥಮಾಧ್ಯಾಯದ ಮೂರನೇ ಪಾದದಲ್ಲಿ ಒಟ್ಟು ಇರತಕ್ಕ ಹದಿನಾಲ್ಕು ಅಧಿಕರಣಗಳಲ್ಲಿ ಹನ್ನೆರಡು ಅಧಿಕರಣಗಳಲ್ಲಿ ಮಾತ್ರ ಉಭಯತ್ರ ಪ್ರಸಿದ್ಧಗಳಾದ ನಾಮಲಿಂಗ ಶಬ್ದಗಳ ಸಮನ್ವಯವನ್ನು ತೋರಿಸಲಾಗಿದೆ.

ಎಂಟನೆಯ ಅಧಿಕರಣವಾದ ದೇವತಾಧಿಕರಣದಲ್ಲಿ ದೇವತೆಗಳಿಗೂ ಸಹ ಬ್ರಹ್ಮವಿದ್ಯಾಧಿಕಾರವು ಉಂಟೆಂದು ಪ್ರಾಸಂಗಿಕವಾಗಿ ಸಮರ್ಥಿಸಲಾಗಿದೆ. ಅದರಂತೆ ಒಂಭತ್ತನೆಯ ಅಧಿಕರಣವಾದ ಅಪಶೂದ್ರಾಧಿಕರಣದಲ್ಲಿ ತ್ರೈವರ್ಣೇತರಾದ ಶೂದ್ರರಿಗೆ ವೇದೋಕ್ತವಾದ ಬ್ರಹ್ಮವಿದ್ಯೆಯಲ್ಲಿ ಅಧಿಕಾರವು ಇಲ್ಲವೆಂದು ಪ್ರಾಸಂಗಿಕವಾಗಿ ಶೂದ್ರರಿಗೆ ವೇದ ವಿದ್ಯಾಧಿಕಾರವನ್ನು ನಿರಾಕರಿಸಲಾಗಿದೆ. ಬಾಕಿ ಉಳಿದ ಹನ್ನೆರಡು ಅಧಿಕರಣಗಳ ಪೈಕಿ ಮೊದಲನೆಯದಾದ ದ್ಯುಭ್ವಾದ್ಯಧಿಕರಣದಲ್ಲಿ ಉಭಯತ್ರಪ್ರಸಿದ್ಧವಾದ ಅಂದರೆ ಪ್ರಧಾನ, ವಾಯು, ರುದ್ರದೇವರಲ್ಲೂ ಪರಬ್ರಹ್ಮನಲ್ಲೂ ಪ್ರಸಿದ್ಧವಾದ ಸರ್ವಾಧಾರತ್ವವೆಂಬ ಲಿಂಗದ ಸಮನ್ವಯವು ಉಕ್ತವಾಗಿದೆ.

ಎರಡನೇ ಅಧಿಕರಣವಾದ ಭೂಮಾಧಿಕರಣದಲ್ಲಿ "ಭೂಮಾ" ಎಂಬ ನಾಮವನ್ನು ವಿಷ್ಣುವಿನಲ್ಲಿ ಸಮನ್ವಯಗೊಳಿಸಲಾಗಿದೆ.

ಮೂರನೆಯ ಅಧಿಕರಣದಲ್ಲಿ ಅಂದರೆ ಅಕ್ಷರಾಧಿಕರಣದಲ್ಲಿ ವಿಷ್ಣುವಿನಲ್ಲಿ ಅಕ್ಷರನಾಮಸಮನ್ವಯವೂ, ನಾಲ್ಕನೆಯ ಅಧಿಕರಣವಾದ ದಹರಾಧಿಕರಣದಲ್ಲಿ ಹೃತ್ಸದ್ಮಸ್ಥತ್ವವೆಂಬ ಲಿಂಗದ ಸಮನ್ವಯವೂ, ಆರನೇ ಅಧಿಕರಣವಾದ ಅನುಕೃತ್ಯಧಿಕರಣದಲ್ಲಿ ಜ್ಞಾನಾರ್ಥವಾಗಿ ಪ್ರಾರ್ಥಿತತ್ವರೂಪವಾದ ಅನುಕೂಲ್ಯೇನ ಗೃಹ್ಯಮಾಣತ್ವರೂಪವಾದ ಲಿಂಗದ ಸಮನ್ವಯವೂ ಏಳನೇ ಅಧಿಕರಣವಾದ ವಾಮನಾಧಿಕರಣದಲ್ಲಿ ಈಶಾನ ಎಂಬ ನಾಮದ ಸಮನ್ವಯವೂ, ಪ್ರಾಸಂಗಿಕವಾಗಿರುವ ಎಂಟು ಮತ್ತು ಒಂಭತ್ತನೆಯ ಅಧಿಕರಣಗಳನ್ನು ಬಿಟ್ಟು ಹತ್ತನೆಯ ಅಧಿಕರಣವಾದ ಕಂಪನಾಧಿಕರಣದಲ್ಲಿ "ವಜ್ರ" ಎಂಬ ನಾಮದ ಸಮನ್ವಯವೂ, ಹನ್ನೊಂದನೆಯ ಅಧಿಕರಣವಾದ ಜ್ಯೋತಿರಧಿಕರಣದಲ್ಲಿ ಉಭಯತ್ರ ಪ್ರಸಿದ್ಧವಾದ ಜ್ಯೋತಿರ್ನಾಮ ಸಮನ್ವಯವೂ, ಹನ್ನೆರಡನೆಯ ಅಧಿಕರಣವಾದ ಆಕಾಶಾಧಿಕರಣದಲ್ಲಿ ಉಭಯತ್ರ ಪ್ರಸಿದ್ಧವಾದ "ಅವ್ಯಾಕೃತಾಕಾಶ" ಪರತ್ವವನ್ನು ನಿರಾಕರಿಸಿ, ವಿಷ್ಣುವಿನಲ್ಲಿ "ಆಕಾಶ" ಎಂಬ ನಾಮದ ಸಮನ್ವಯವೂ, ಹದಿಮೂರನೆಯ ಅಧಿಕರಣವಾದ ಸುಷುಪ್ತ್ಯಧಿಕರಣದಲ್ಲಿ "ಸ್ವಪ್ನಾದಿದ್ರಷ್ಟೃತ್ವ" ವೆಂಬ ಲಿಂಗದ ಸಮನ್ವಯವೂ ಹದಿನಾಲ್ಕನೆಯ ಅಧಿಕರಣವಾದ ಬ್ರಾಹ್ಮಣಾಧಿಕರಣದಲ್ಲಿ "ಬ್ರಾಹ್ಮಣ" ಎಂಬ ನಾಮದ ಸಮನ್ವಯವೂ ಉಕ್ತವಾಗಿದೆ.

ಅಂತೂ ಪ್ರಥಮಾಧ್ಯಾಯದ ಮೂರನೆಯ ಪಾದದಲ್ಲಿರತಕ್ಕ ಹದಿನಾಲ್ಕು ಅಧಿಕರಣಫಲಿತಾಂಶವು ಈ ಕೆಳಗೆ ಕಂಡಂತಿದೆ.

ಮೊದಲನೆಯ ಅಧಿಕರಣದಲ್ಲಿ ಪೃಥಿವೀಸ್ವರ್ಗಾದಿಗಳಿಗೆ ಆಧಾರನಾದ ಸರ್ವಗತನಾದ ಪರಮಾತ್ಮನಿಗೆ (ಅಜನಿಗೆ) ಪ್ರಾದುರ್ಭಾವಾಖ್ಯವಾದ ಜನಿಯನ್ನೂ, ಭೂಮನಯದಲ್ಲಿ ಸರ್ವಗತನಾದಾಗ್ಯೂ ಪರಮಾತ್ಮನಿಗೆ ಪರಿಸ್ಪಂದಕ್ರಿಯೆಯೂ, ಅಕ್ಷರನಯದಲ್ಲಿ ಮಹತೋಽಪಿ ಅಣುತ್ವವೂ, ಈಕ್ಷತಿಯದಲ್ಲಿ (ಸದಧಿಕರಣದಲ್ಲಿ) ಪರಮಾತ್ಮನಿಗೆ ಸ್ವರೂಪದಿಂದಲೇ ಬಹುಭವನವೂ, ದಹರನಯದಲ್ಲಿ ಈತನಿಗೆ ವ್ಯಾಪ್ತತ್ವವೂ ಅನುಕೃತ್ಯಧಿಕರಣದಲ್ಲಿ ಸೂರ್ಯಾದಿಕೃತಿಗೆ ಈಶಾಯತ್ತತ್ವವೂ ವಾಮನಾಧಿಕರಣದಲ್ಲಿ ಪ್ರಾಣಪ್ರೇರಕತ್ವವೂ, ಶ್ರುತ್ಯಾದಿಗಳಿಗೆ ಪೂರ್ವಪೂರ್ವಪ್ರಾಬಲ್ಯವೂ, ದೇವತಾಧಿಕರಣದಲ್ಲಿ ದೇವತೆಗಳಿಗೂ ಋಷಿಗಳಿಗೂ ಕರ್ಮದಲ್ಲಿಯೂ ಬ್ರಹ್ಮವಿದ್ಯೆಯಲ್ಲಿಯೂ ಅಧಿಕಾರವೂ, ಅಪಶೂದ್ರಾಧಿಕರಣದಲ್ಲಿ ವೇದವಿದ್ಯಾದಲ್ಲಿ ಶೂದ್ರರಿಗೆ ಅಧಿಕಾರವಿಲ್ಲದಿರುವಿಕೆಯೂ, ಕಂಪನಾಧಿಕರಣದಲ್ಲಿ ರೂಢಿಗಿಂತಲೂ ಸ್ಮೃತ್ಯುಕ್ತಯೋಗಕ್ಕೆ ಪ್ರಾಬಲ್ಯವೂ, ಜ್ಯೋತಿ ರ್ನಯದಲ್ಲಿ ಜೀವನೊಡನೆ ಈಶನಿಗೆ ಲೋಕಾಂತರ ಸಂಚಾರವಿರುವುದಾದರೂ ಅದಕ್ಕೆ ಕರ್ಮಾನಧೀನತ್ವವೂ, ಸುಷುಪ್ತಿ ನಯದಲ್ಲಿ ಪರಮಾತ್ಮನಿಗೆ ನಿರ್ಲೇಪತ್ವವೂ, ಅಂತ್ಯವಾದ ಬ್ರಾಹ್ಮಣಾಧಿಕರಣದಲ್ಲಿ ಪರಮಾತ್ಮನಿಗೆ ವಿರಿಂಚ್ಯೈಕ್ಯನಿರಾಸವೂ ಫಲರೂಪವಾಗಿ ಸಿದ್ಧಿಸಿರುವುದಾಗಿದೆ.

ಅನನ್ಯತ್ರ ಪ್ರಸಿದ್ಧಗಳಾದ (ಬಲವತ್ತಾದ ಶ್ರುತಿಲಿಂಗಗಳಿಂದ) ನಾಮಲಿಂಗಾತ್ಮಕಗಳಾದ ಶಬ್ದಗಳಿಗೆ ಮತ್ತು ಸ್ವರ, ವರ್ಣ, ಪದಾತ್ಮಕಗಳಾದ ಸಮಸ್ತ ಶಬ್ದಗಳಿಗೂ ಸಮನ್ವಯಪರವಾದ ನಾಲ್ಕನೆಯ ಪಾದದಲ್ಲಿನ ಮೊದಲನೆಯ ಅಧಿಕರಣವಾದ ಆನುಮಾನಿಕಾಧಿಕರಣದಲ್ಲಿ ಪರಮಾತ್ಮನ ಐಶ್ವರ್ಯಕ್ಕೆ ವಿರೋಧಿಗಳಾದ, ಅಪರತ್ವ ದುಃಖಿತ್ವಾರ್ಥಕಗಳಾದ ಶಬ್ದಗಳ ಸಮನ್ವಯವು ಉಕ್ತವಾಗಿದೆ. ಎರಡನೆಯ ಅಧಿಕರಣವಾದ ಜ್ಯೋತಿರುಪಕ್ರಮಾಧಿಕರಣದಲ್ಲಿ ಕರ್ಮತದಂಗಗಳಲ್ಲೇ ಪ್ರಸಿದ್ಧಗಳಾದ ಸ್ವರವರ್ಣಪದಾದಿರೂಪಗಳಾದ ಶಬ್ದಗಳಿಗೆಲ್ಲಾ ಸಮನ್ವಯವು ವಿಷ್ಣುವಿನಲ್ಲಿ ಪ್ರತಿಪಾದಿಸಲ್ಪಟ್ಟಿದೆ.

ಮೂರನೆಯ ಅಧಿಕರಣವಾದ ನ ಸಂಖ್ಯೋಪಸಂಗ್ರಹಾಧಿಕರಣದಲ್ಲಿ ಪ್ರಾತಿಪದಿಕದಿಂದಲೂ, ಪ್ರತ್ಯಯಮುಖವಾಗಿಯೂ, ಬಹುತ್ವಸಂಖ್ಯಾವಿಶಿಷ್ಟವಾದ ವಸ್ತುವಾಚಿಗಳಾದವುಗಳಿಗೂ, ಆಧಾರ, ಆಧೇಯವಾಚಿಗಳಾದ ಶಬ್ದಗಳಿಗೂ ಸಮನ್ವಯವು ಪ್ರತಿಪಾದಿಸಲ್ಪಟ್ಟಿದೆ.

ನಾಲ್ಕನೆಯ ಅಧಿಕರಣವಾದ ಆಕಾಶಾಧಿಕರಣದಲ್ಲಿ ಅವಾಂತರಕಾರಣತ್ವವೆಂಬ ಲಿಂಗವು, ಅವಾಂತರ ಕಾರಣವೆಂದು ಶ್ರುತಿಯಲ್ಲಿ ಉಕ್ತವಾದ ಆಕಾಶಾದಿಶಬ್ದವೆಂಬ ನಾಮದ ಸಮನ್ವಯವೂ ಉಕ್ತವಾಗಿದೆ.

ಐದನೆಯ ಅಧಿಕರಣವಾದ ಸಮಾಕರ್ಷಾಧಿಕರಣದಲ್ಲಿ ಜ್ಯೋತಿರ್ನಯದಂತೆ ನ್ಯಾಯಭೇದದಿಂದ ಸರ್ವಶಬ್ದಗಳಿಗೂ ಸಮನ್ವಯವನ್ನು ಸಾಧಿಸಲಾಗಿದೆ.

ಆರನೆಯ ಅಧಿಕರಣವಾದ ಪ್ರಕೃತ್ಯಧಿಕರಣದಲ್ಲಿ ಸ್ತ್ರೀಲಿಂಗ ಶಬ್ದಗಳಿಗೂ ಪರಮಾತ್ಮನಲ್ಲಿ ಸಮನ್ವಯವನ್ನ ತೋರಿಸಲಾಗಿದೆ.

ಏಳನೆಯ ಅಧಿಕರಣವಾದ ಏತೇನ ಸರ್ವೇವ್ಯಾಖ್ಯಾತಾಧಿಕರಣದಲ್ಲಿ ನಿಷೇಧಾರ್ಥಕಶಬ್ದಗಳನ್ನೂ, ನಿಷೇಧ್ಯಾರ್ಥಗಳಾದ ಶಬ್ದಗಳನ್ನು, ಸಮನ್ವಯಗೊಳಿಸಲಾಗಿದೆ.

ನಾಲ್ಕನೇ ಪಾದದ ಅಧಿಕರಣಗಳ ಫಲಿತಾಂಶವು ಈ ಕೆಳಕಂಡಂತಿದೆ.

ಪ್ರಥಮಾಧಿಕರಣವಾದ ಆನುಮಾನಿಕಾಧಿಕರಣದಲ್ಲಿ ತತ್ತ್ವನಿಷ್ಠನಾದ ಈಶನ ಸಂಬಂಧದಿಂದ ಅನ್ಯತ್ರ ವ್ಯವಹಾರವು, ಸ್ವಾತಂತ್ರ್ಯಕ್ಕೆ ಶಬ್ದದ ಪ್ರವೃತ್ತಿಯಲ್ಲಿ ನಿಮಿತ್ತತ್ವವೂ ಮುಖ್ಯತ್ವವೂ ಉಕ್ತವಾಗಿದೆ. ಎರಡನೆಯದಾದ ಜ್ಯೋತಿರ್ನಯದಲ್ಲಿ ವರ್ಣ, ಪದ, ರೂಪವಾಗಿರುವ ಶಬ್ದಗಳಿಗೆ ಈಶನಲ್ಲಿ ವೃತ್ತಿಯು ಇರುವುದಾದರೂ ಅನ್ಯತ್ರ ರೂಢಿಯನ್ನ ತೋರಿಸಲಾಗಿದೆ. ನ ಸಂಖ್ಯೋಪಸಂಗ್ರಹಾಧಿಕರಣವೆಂಬ ಮೂರನೇ ಅಧಿಕರಣದಲ್ಲಿ ಈಶನಿಗೆ ರೂಪ ಭೇದದಿಂದ ಆಧಾರಾಧೇಯಭಾವವು ಸಮರ್ಥಿಸಲ್ಪಟ್ಟಿದೆ.

ನಾಲ್ಕನೆಯದಾದ ಆಕಾಶಾಧಿಕರಣದಲ್ಲಿ ಈಶನಿಗೆ ರೂಪದ ವ್ಯತ್ಯಾಸದಿಂದ (ರೂಪಭೇದದಿಂದ) ವ್ಯಂಗ್ಯ ವ್ಯಂಜಕತ್ವವೆಂಬ ಕಾರ್ಯತ್ವವೂ ಕಾರಣತ್ವವೂ ಸಮರ್ಥಿಸಲ್ಪಟ್ಟಿದೆ.

ಸಮಾಕರ್ಷಾಧಿಕರಣವೆಂಬ ಐದನೆಯ ಅಧಿಕರಣದಲ್ಲಿ ವೃತ್ತಿತಾರತಮ್ಯವು ಉಕ್ತವಾಗಿದೆ. ಆರನೆಯ ಅಧಿಕರಣವಾದ ಪ್ರಕೃತ್ಯಧಿಕರಣದಲ್ಲಿ ಪರಮಾತ್ಮನ ಒಂದೇ ರೂಪದಲ್ಲಿ ಸ್ತ್ರೀತ್ವ, ಪುಂಸ್ತ್ವಸಮಾವೇಶವು ಪ್ರತಿಪಾದಿತವಾಗಿದೆ. ಕಡೆಯದಾದ ಏಳನೆಯ ಅಧಿಕರಣದಲ್ಲಿ ಏತೇನ ಸರ್ವೇವ್ಯಾಖ್ಯಾಧಿಕರಣದಲ್ಲಿ ತುಚ್ಛಸಿಯಂತ್ಯತ್ವಾದಿಗಳು ಪ್ರತಿಪಾದಿಗಳಾಗಿವೆ.

ಈ ರೀತಿ ಇಡೀ ಸಮನ್ವಯಾಧ್ಯಾಯದಲ್ಲಿ ವೇದದಲ್ಲಿನ (ಸಕಲ ಶಬ್ದಗಳಿಗೂ) ಮುಖ್ಯವಾಗಿ ಅನ್ಯತ್ರ ಪ್ರಸಿದ್ಧಗಳಾದ ನಾಮಾತ್ಮಕ ಲಿಂಗಾತ್ಮಕ ಶಬ್ದಗಳಿಗೂ, ಉಭಯತ್ರಪ್ರಸಿದ್ಧಗಳಾದ ನಾಮಾತ್ಮಕ ಲಿಂಗಾತ್ಮಕ ಶಬ್ದಗಳಿಗೂ, (ಅನ್ಯತ್ರೈವ ಪ್ರಸಿದ್ಧಗಳಾದ) ಶ್ರುತಿಲಿಂಗಾದಿಗಳಿಂದ ಅನ್ಯತ್ರೈವ ಪ್ರಸಿದ್ಧಗಳಾದ ಯುಕ್ತಿಬಲಗಳಾದ ತುಚ್ಛ, ಬದ್ಧ, ಅಭಾವ, ಶೂನ್ಯ, ದುಃಖ ಇತ್ಯಾದಿ ಶಬ್ದಗಳಿಗೆ ಪರಮಾತ್ಮನಲ್ಲಿ ಸಮನ್ವಯಗೊಳಿಸುವುದರಿಂದ ಸರ್ವೋತ್ತಮನಾದ ಪರಮಾತ್ಮನ ಅನಂತಕಲ್ಯಾ

ಗುಣಪರಿಪೂರ್ಣತ್ವವು ಸಮರ್ಥಿಸಲ್ಪಟ್ಟಿದೆ. ಎರಡನೆಯ ಅಧ್ಯಾಯದಲ್ಲಿ ಇಂತಹ ಪರಮಾತ್ಮನ ಗುಣಪರಿಪೂರ್ಣತ್ವಕ್ಕೆ ಬಾಧಕಗಳಾದ ಯುಕ್ತಿಗಳ ವಿರೋಧವನ್ನೂ, ಸಮಯಗಳ ವಿರೋಧವನ್ನೂ, ಪರಸ್ಪರ ಶ್ರುತಿಗಳ ವಿರೋಧವನ್ನು, ಯುಕ್ತಸಹಿತಗಳಾದ ಶ್ರುತಿವಾಕ್ಯಗಳ ವಿರೋಧವನ್ನೂ ಪರಿಹರಿಸುವಮೂಲಕವಾಗಿ ನಿರ್ದೋಷತ್ವವು ಸಮರ್ಥಿಸಲ್ಪಟ್ಟಿದೆ.

"ವಿಷ್ಣೋಃ ಸರ್ವೋತ್ತಮತ್ವಂ ಚ ಸರ್ವದಾ ಪ್ರತಿಪಾದಯ" ಎಂಬ ಶ್ರೀಮದಾಚಾರ್ಯರ ದಿವ್ಯಸಂದೇಶಕ್ಕೆ ಅನುಗುಣವಾಗಿ ಜಿಜ್ಞಾಸಾಧಿಕರಣಾದ ವಿಶೇಷ ವಾಕ್ಯಾರ್ಥಗಳ ನಿರೂಪಣೆಯ ನಿಮಿತ್ತದಿಂದ ಅನೇಕ ಪ್ರಮಾಣಗಳನ್ನು ಉದಾಹರಿಸಿ ಶ್ರೀಹರಿಯ ಸರ್ವೋತ್ತಮತ್ವವನ್ನು ನಿರೂಪಿಸುತ್ತೇವೆ.

ಈ ವಿಷ್ಣು ಸರ್ವೋತ್ತಮತ್ವವೆಂಬ ಅತಿಮುಖ್ಯವಾದ ಪ್ರಮೇಯದ ವಿಷಯದಲ್ಲಿ ಮುಕ್ತಿಯೋಗ್ಯನಾದ ಚೇತನನಿಗೆ ಲವಲೇಶವೂ ಸಂದೇಹವಾಗಲಿ, ಭ್ರಾಂತಿಯಾಗಲಿ ಉಂಟಾಗದಂತೆ ಅತಿದೃಢವಾದ ಯಥಾರ್ಥಜ್ಞಾನವಿರಬೇಕು. ನಿಶ್ಚಲ ಮನಸ್ಸಿನಿಂದ ಸರ್ವದಾ ಆ ಸರ್ವೋತ್ತಮನಾದ ಶ್ರೀಹರಿಯನ್ನು ನಾಲ್ಕನೆಯ ಅಧ್ಯಾಯದ ಮೊದಲನೆಯ ಪಾದದಲ್ಲಿನ ಎರಡನೆಯ ಅಧಿಕರಣವಾದ ಆತ್ಮಾಧಿಕರಣದಲ್ಲಿ ಶ್ರೀಮಧ್ವರು ನಿರ್ಣಯಿಸಿರುವಂತೆ ಸರ್ವದಾ ಶ್ರೀಹರಿಯನ್ನು ಸ್ವಾಮಿತ್ವೇನ ಧ್ಯಾನ ಮಾಡಬೇಕೆಂದು ಸತ್ತತ್ವವೆಂಬ ಪ್ರಮಾಣ ಗ್ರಂಥದ ವಚನವೂ, ಷಾಡ್ಗುಣ್ಯವೆಂಬ ಮತ್ತೊಂದು ಪ್ರಮಾಣದ ವಚನವೂ ಎಚ್ಚರಿಸುತ್ತಲಿದೆ. ಆ ಬಗೆಯಾದ ಸತ್ತತ್ವ ವಚನವು ಈ ಕೆಳಗೆ ಕಂಡಂತಿದೆ.

"ಸ್ವಾಮೀ ಮೇ ವಿಷ್ಣುರಿತ್ಯೇವ ನಿತ್ಯದೋಪಾಸ್ಯಮಂಜಸಾ ।
ಸ್ವಾಮೀ ವಿಷ್ಣುರಿತಿಧ್ಯಾನಂ ವಿಶೇಷಣವಿಶೇಷತಃ ।।
ಕರ್ತವ್ಯಂ ಸರ್ವಥೈವೈತನ್ನಕಥಂಚ ನ ವಿಸ್ಮರೇತ್ ।
।। ಇತಿ ಸತ್ತತ್ವವಚನಮ್ ।।

"ಷಾಡ್ಗುಣ್ಯವಚನಂ ಪರಂ" ತದ್ಯಥಾ -
ಮಮಸ್ವಾಮೀ ಹರಿರ್ನಿತ್ಯಂ ಸರ್ವಸ್ಯ ಪತಿರೇವ ಚ ।
ಇತಿಧ್ಯೇಯಃ ಸರ್ವದೈವ ಭಗವಾನ್ವಿಷ್ಣುರವ್ಯಯಃ ।। ಇತಿಷಾಡ್ಗುಣ್ಯವಚನಮ್ ।।

ನಾನಾ ಕ್ಲೇಶಗಳಿಂದ ಕೂಡಿದವರಾದಾಗ್ಯೂ ಸಹ ಅಧಿಕಾರಿಚೇತನರು ಶ್ರೀಹರಿಯನ್ನು ಆತ್ಮಾ ಎಂಬುದಾಗಿ ಉಪಾಸನೆ ಮಾಡಬೇಕೆಂದು ಭವಿಷ್ಯತ್ಪರ್ವ ವಚನವೂ ಪ್ರತಿಪಾದಿಸುತ್ತಲಿದೆ.

"ಆತ್ಮೇತ್ಯುಪಾಸನಂ ಕಾರ್ಯಂ ಸರ್ವದೈವಮುಮುಕ್ಷುಭಿಃ ।
ನಾನಾಕ್ಲೇಶಸಮಾಯುಕ್ತೋಽಪ್ಯೇತಾವನ್ನೈವ ವಿಸ್ಮರೇತ್ ।। ಇತಿ ಭವಿಷ್ಯತ್ಪರ್ವಣಿ ।।

ಬ್ರಾಹ್ಮಪುರಾಣದಲ್ಲೂ ಕೂಡ ಇನ್ನೂ ಅಧಿಕವಾಗಿ ಪರಮಾತ್ಮನನ್ನು ಸ್ವಾಮಿತ್ವೇನ ತಾನು ಅಧಿಕಾರಿಚೇತನನು ಧ್ಯಾನ ಮಾಡುವುದು ಮಾತ್ರವಲ್ಲದೆ, ಪರರಿಗೂ ಕೂಡ ಅದೇ ರೀತಿ ಸರ್ವದಾ ಉಪದೇಶವನ್ನೂ ಮಾಡಬೇಕೆಂದೂ, ಈ ರೀತಿ ಉಪಾಸನೆಯನ್ನು ಯಾರು ಮಾಡುವುದಿಲ್ಲವೋ ಅಂತಹವರಿಗೆ ಮೋಕ್ಷವು ದೊರಕುವುದಿಲ್ಲವೆಂದೂ ಉಕ್ತವಾಗಿದೆ.

ಆ ಬ್ರಾಹ್ಮ ವಚನವು ಈ ರೀತಿ ಇದೆ.

**ಸರ್ವೇಷಾಂ ಚ ಮುಮುಕ್ಷೂಣಾಂ ಉಪದೇಶಶ್ಚತಾದೃಶಃ ।**
**ಕರ್ತವ್ಯೋ ಹ್ಯನ್ಯಥಾನೈವ ಕಸ್ಯಚಿನ್ಮೋಕ್ಷ ಇಷ್ಯತೇ ।। ಇತಿಬ್ರಾಹ್ಮೇ ।।**

**ಅಭಿಪ್ರಾಯ** :- ಮುಮುಕ್ಷುವಾದವನು ಅಂದರೆ ಮೋಕ್ಷವನ್ನು ಅಪೇಕ್ಷಿಸುವ ಮುಕ್ತಿಯೋಗ್ಯನಾದ ಅಧಿಕಾರಿ ಮಾನವನು "ಆತ್ಮಾವಿಷ್ಣುಃ" "ಮಮಸ್ವಾಮೀ ವಿಷ್ಣುಃ" ಎಂಬುದಾಗಿ ವಿಶೇಷಾವಿಶೇಷಭಾವೋಪೇತವಾಗಿ ಧ್ಯಾನಮಾಡಬೇಕು. ಅದೇ ರೀತಿ ಶಿಷ್ಯರಿಗೂ ಉಪದೇಶವೀಯಬೇಕು. ಈ ಬಗೆಯಾದ ಆತ್ಮತ್ವೋಪಾಸನೆಯನ್ನು ಮಾಡದಿದ್ದರೆ ಯಾರಿಗೂ ಮೋಕ್ಷವು ದೊರಕುವುದೇ ಇಲ್ಲ ಎಂದು ಪರಮಾಭಿಪ್ರಾಯ.

ಹಿಂದೆಯೇ ತಿಳಿಸಿದಂತೆ ವಿಷ್ಣುಸರ್ವೋತ್ತಮತ್ವವೆಂಬ ಪ್ರಮೇಯದ ದಾರ್ಢ್ಯಕ್ಕಾಗಿ, ಶೈವರು ಆಗ್ರಹದಿಂದ ಶಿವನಿಗೆ ಜಗತ್ಕಾರಣತ್ವವನ್ನು ಹೇಳಿ ಶಿವನಿಗೇನೇ ಸರ್ವೋತ್ತಮತ್ವವನ್ನು ಹೇಳುವುದರಿಂದ, ಆ ಇತರ ಮತವನ್ನು ಇನ್ನು ಮುಂದೆ ನಿರಾಕರಿಸಲಾಗುತ್ತದೆ.

ಶೈವಮತದ ನಿರಾಕರಣ ಅಥವಾ ಶಿವಸರ್ವೋತ್ತಮತ್ವದ ನಿರಾಸವು. ವಿಷ್ಣು ಸರ್ವೋತ್ತಮತ್ವದ ವಿಷಯದಲ್ಲಿ ಬಾಧಕದ ಪರಿಹಾರ.

ಶಿವಸರ್ವೋತ್ತಮತ್ವವಾದದ ನಿರಾಕರಣೆ :-

ಶ್ರೀಮದಾಚಾರ್ಯರು ಜಿಜ್ಞಾಸಾಧಿಕರಣದ ಸೂತ್ರಭಾಷ್ಯದಲ್ಲಿ ಶ್ರೀಹರಿಯ ಹಿರಿಮೆಯನ್ನು ಅವನ ಜಿಜ್ಞಾಸೆಯನ್ನು ಸಮರ್ಥಿಸಿ, ವೇದದಲ್ಲೂ, ರಾಮಾಯಣದಲ್ಲೂ, ಪುರಾಣಗಳಲ್ಲೂ, ಶ್ರೀ ಮಹಾಭಾರತದಲ್ಲೂ, ಆದಿಯಲ್ಲೂ, ಮಧ್ಯದಲ್ಲೂ, ಕಡೆಯಲ್ಲೂ ಸರ್ವತ್ರ ವಿಷ್ಣುವೇ ಪ್ರಧಾನವಾಗಿ ಪ್ರತಿಪಾದ್ಯನಾಗಿರುವನೆಂದು ಹರಿವಂಶ ವಚನದಿಂದ ಸಿದ್ಧಾಂತಗೊಳಿಸಿರುತ್ತಾರೆ.

ಆ ಹರಿವಂಶ ವಚನವು ಈ ರೀತಿ ಇದೆ.

**"ವೇದೇ ರಾಮಾಯಣೇ ಚೈವ ಪುರಾಣೇ ಭಾರತೇ ತಥಾ ।**
**ಆದಾವಂತೇ ಚ ಮಧ್ಯೇ ಚ ವಿಷ್ಣುಃ ಸರ್ವತ್ರಗೀಯತೇ ।। (ಇತಿ ಹರಿವಂಶೇಷು)**

ಖಿಲ, ಅಖಿಲ, ಪಾರಿಜಾತವೆಂಬ ಹರಿವಂಶದ ಮೂರು ಭಾಗದಲ್ಲೂ ಮೇಲೆ ಕಂಡ ವಚನವು ಕಂಡುಬಂದಿದೆ.

ಇದಕ್ಕೆ ಪಾಶುಪತಾದಿಸ್ಮೃತಿಗಳ ವಿರೋಧವನ್ನು ಪರಿಹರಿಸಿರುತ್ತಾರೆ.

ಪಾಶುಪತಾದಿಸ್ಮೃತಿಗಳು ತಾಮಸಜನರ ಮೋಹಕ್ಕಾಗಿ ರಚಿತವಾದವುಗಳು.

ಶ್ರೀ ನಾರಾಯಣರು ರುದ್ರನನ್ನು ಕುರಿತು ಈ ರೀತಿ ಅಪ್ಪಣೆ ಮಾಡಿದರು. ಅದು ಹೇಗೆಂದರೆ, ಎಲೈ ಮಹಾಪರಾಕ್ರಮಿಯಾದ ರುದ್ರನೇ! ಶತ್ರುಗಳನ್ನು ನಿಗ್ರಹಿಸುವ ಸಾಮರ್ಥ್ಯವುಳ್ಳವನೇ! ನೀನು ತಾಮಸಜನರನ್ನು ಮೋಹಗೊಳಿಸುವ ಮೋಹಕವಾದ ಶಾಸ್ತ್ರವನ್ನು ರಚಿಸು, ದಧೀಚ್ಯಾದಿ ಋಷಿಗಳಿಂದಲೂ ಮಾಡಿಸು.

ಎಲ್ಲೂ ಇಲ್ಲದ ಸುಳ್ಳಾದ ವಿಚಾರಗಳನ್ನು "ಲಿಂಗಮೂಲಾನ್ವೇಷಣಕಥೆ" ಮೊದಲಾದವುಗಳನ್ನು ಪ್ರಕಾಶಗೊಳಿಸು. ವಿಷ್ಣುವಿನ ಧರ್ಮಗಳನ್ನೂ, ವಾಯುದೇವರಲ್ಲಿರುವ ಮಹಿಮೆಗಳನ್ನೂ ನಿನ್ನಲ್ಲಿರುವಂತೆ ಪ್ರತಿಪಾದಿಸು ಲೋಕದಲ್ಲಿ ನಿನ್ನನ್ನೇ ಪ್ರಸಿದ್ಧಗೊಳಿಸು, ನನ್ನನ್ನು ಪ್ರಸಿದ್ಧಿಗೊಳಿಸಬೇಡ.

ಎಂದು ಶ್ರೀ ವರಾಹದೇವರು ರುದ್ರನಿಗೆ ಅಪ್ಪಣೆ ಮಾಡಿರುವ ಕಾರಣದಿಂದ, ಪಾಶುಪತಾದಿ ಆಗಮಗಳು ತಾಮಸರಿಗಾಗಿಯೇ ರುದ್ರನಿಂದ ರಚಿತವಾಗಿವೆ. ಇತರತಾಮಸಸ್ಮೃತಿಗಳೂ ರಚಿತವಾಗಿವೆ. ಇವೆಲ್ಲವೂ ತಾಮಸಜನರ ಅನ್ಯಥಾ ಜ್ಞಾನಕ್ಕಾಗಿಯೇ ಮೋಹಕಗಳಾಗಿ ರಚಿಸಲ್ಪಟ್ಟಿವೆ.

ವರಾಹ ಪುರಾಣದ ವಚನವು ಈ ರೀತಿ ಇದೆ.

> **"ತ್ವಂ ಚ ರುದ್ರಮಹಾಬಾಹೋ ಮೋಹಶಾಸ್ತ್ರಾಣಿ ಕಾರಯ।**
> **ಅತಥ್ಯಾನಿವಿತಥ್ಯಾನಿದರ್ಶಯಸ್ವ ಮಹಾಭುಜ॥**
> **ಪ್ರಕಾಶಂ ಕುರು ಚಾತ್ಮಾನಂ ಅಪ್ರಕಾಶಂ ಚ ಮಾಂಕುರು॥ (ಇತಿವಾರಾಹ ವಚನಾತ್)**

ಅತ್ಯಂತ ಅಪ್ರಾಮಾಣಿಕವಾದ, ತಾಮಸಜನರಿಗೆ ಅನ್ಯಥಾ ಜ್ಞಾನವನ್ನು ಉಂಟುಮಾಡುವುದಕ್ಕಾಗಿಯೇ ರಚಿತವಾದ ಲಿಂಗ ಮೂಲಾನ್ವೇಷಣಾ ಕಥೆಯು ಈ ಕೆಳಗೆ ಕಂಡಂತಿದೆ.

ಲಿಂಗಮೂಲಾನ್ವೇಷಣಾ ಕಥಾಸಂಗ್ರಹ :-

ಹಿಂದೆ ಜಗತ್ತಿನ ಕರ್ತೃತ್ವದ ವಿಷಯದಲ್ಲಿ ವಿಷ್ಣುವಿಗೂ ವಿರಿಂಚನಿಗೂ (ಚತುರ್ಮುಖ ಬ್ರಹ್ಮನಿಗೂ) ವಿವಾದವು ಉಂಟಾಯಿತು. "ನಾನೇ ಜಗತ್ತಿಗೆ ಕರ್ತನು, ನನಗಿಂತ ಬೇರೇ ಯಾರೂ ಇಲ್ಲವೆಂದು ವಿಷ್ಣುವು ಹೇಳಿದನು. ಬ್ರಹ್ಮನೂ ಸಹ ನಾನೇ ಕರ್ತನು, ನೀನಲ್ಲ. ನನ್ನ ಹೊರತು ಬೇರೆ ಯಾರೂ ಜಗತ್ತಿನ ಕರ್ತೃವು ಇರುವುದಿಲ್ಲವೆಂದು ಚತುರ್ಮುಖನು ವಿವಾದಕ್ಕೆ ಇಳಿದನು. ಈ ಸಂದರ್ಭಕ್ಕೆ ಸರಿಯಾಗಿ ಆ ಇಬ್ಬರ ಗರ್ವವನ್ನು ವಿನಾಶಗೊಳಿಸುವ ಸಲುವಾಗಿ, ಅವರಿಬ್ಬರ ಮಧ್ಯದಲ್ಲಿ ಒಂದು ಲಿಂಗವು ಪ್ರಾದುರ್ಭಾವವಾಯಿತು. ವಿಷ್ಣುವು ವಿರಿಂಚನೂ ಇಬ್ಬರೂ ಆ ಲಿಂಗರೂಪಿಯಾದ ರುದ್ರನನ್ನು ನೋಡಿ, ಸರ್ವದೇವನಾದ ಆ ರುದ್ರನ ಸನ್ನಿಧಾನದಲ್ಲಿ ಪರಸ್ಪರವಾಗಿ ಒಂದು ಸಮಯವನ್ನು (ಒಡಂಬಡಿಕೆಯನ್ನು) ಮಾಡಿಕೊಂಡರು. ಅದೇನೆಂದರೆ ಬ್ರಹ್ಮನು ಲಿಂಗರೂಪಿಯಾದ ಪರಮಶಿವನ ಸನ್ನಿಧಾನದಲ್ಲಿ ವಿಷ್ಣುವನ್ನು ಕುರಿತು ಎಲೈ ವಿಷ್ಣುವೇ, ನಮ್ಮಿಬ್ಬರ ಮಧ್ಯದಲ್ಲಿ ಯಾರು ಈ ಲಿಂಗದ ಅಂತವನ್ನೂ ಮೂಲವನ್ನೂ ಕುರಿತು ಹೋಗುತ್ತಾರೆಯೋ ನೋಡುತ್ತಾರೆಯೋ ಅವನೇ ಲೋಕದಲ್ಲಿ ಅಧಿಕನು. ಲೋಕಕ್ಕೆ ಕರ್ತನಾದ ಪ್ರಭುವೂ ಸಹ ಅವನೇ ಸರಿ. ಆದ್ದರಿಂದ, ಎಲೈ ವಿಷ್ಣುವೇ ನೀನು ಲಿಂಗದ ಮೂಲವನ್ನು ಹುಡುಕಲು ಕೆಳಗೆ ಹೋಗು. ನಾನಾದರೋ ಈ ಲಿಂಗದ ತುದಿಯನ್ನು ಹುಡುಕಲು ಮೇಲಕ್ಕೆ ಹೋಗುತ್ತೇವೆ. ಎಂದು ಇಬ್ಬರೂ ಸಹ ಒಂದು ಸಮಯವನ್ನು (ಒಪ್ಪಂದವನ್ನು) ಮಾಡಿಕೊಂಡು ಹುಡುಕಲು ಹೊರಟರು. ಆಗ ವಿಷ್ಣುವು ವರಾಹರೂಪದಿಂದ ಲಿಂಗದ ಮೂಲವನ್ನು ಹುಡುಕಲು ಕೆಳಗಡೆಗೆ ಹೊರಟನು. ಸರಸ್ವತೀಪತಿಯಾದ ಬ್ರಹ್ಮನಾದರೋ ಹಂಸರೂಪದಿಂದ ಮೇಲೆ ಮೇಲಕ್ಕೆ ಹಾರಿಹೋದನು.

ಆಮೇಲೆ ವಿಷ್ಣುವು ಕೆಳಗಡೆ ವರಾಹರೂಪದಿಂದ ಹೋಗಿ ಲಿಂಗದ ಮೂಲವನ್ನು ಕಂಡುಹಿಡಿದು ಪುನಃ ಸ್ವಸ್ಥಾನಕ್ಕೆ ಬಂದು ನಾನು ಲಿಂಗದ ಮೂಲವನ್ನು ನೋಡಿ ಬಂದಿದ್ದೇನೆಂದು ಸತ್ಯವಾಗಿಯೇ ಹೇಳಿದನು. ವಿರಿಂಚನಾದರೋ ಮೇಲಿಂದ ಬಂದು ನೋಡಿ ಬಂದಿದ್ದೇನೆ ಎಂದು ಸುಳ್ಳನ್ನು ಹೇಳಿದನು. ಆಗ ಲಿಂಗರೂಪನಾದ ಮಹೇಶ್ವರನು ಆ ಇಬ್ಬರ ಮಾತನ್ನು ಕೇಳಿ ಹೀಗೆ ಹೇಳಿದನು. ಎಲೈ ವಿಷ್ಣುವೇ ನೀನು ಸತ್ಯವನ್ನೇ ಹೇಳಿದ್ದೀಯೆ, ಆದ್ದರಿಂದ ನಿನಗೆ ಲೋಕದಲ್ಲಿ ನನಗೆ ಸಮಾನವಾದ ಪೂಜೆಯು ಆಗುತ್ತದೆ. ಬ್ರಹ್ಮನು ಸುಳ್ಳುಸುಳ್ಳನ್ನು ಹೇಳಿದ್ದಾನೆ. ನನ್ನ ಅಂತವನ್ನು ತುದಿಯನ್ನು ಅವನು ನೋಡಿಯೇ ಇಲ್ಲ. "ನೋಡಿದ್ದೇನೆಂದು" ಸುಳ್ಳನ್ನು ಹೇಳಿರುವ ಪ್ರಯುಕ್ತ ಅವನಿಗೆ ಲೋಕದಲ್ಲಿ ಪೂಜೆಯೇ ಇಲ್ಲದೇ ಹೋಗಲಿ ಎಂದು ಶಾಪರೂಪವಾದ ವಚನವನ್ನು ಹೇಳಿದನು.

ಆಗ ಬ್ರಹ್ಮನು ತುಂಬಾ ದುಃಖಗೊಂಡು, ಎಲೈ ರುದ್ರನೇ ನನ್ನ ಸುಳ್ಳಿನ ಅಪರಾಧವನ್ನು ಕ್ಷಮಿಸು ಎಂದು ಬೇಡಿಕೊಂಡನು. ಅದಕ್ಕೆ ರುದ್ರನು ಎಲೈ ಬ್ರಹ್ಮನೇ ನನ್ನ ಮಾತು ಸುಳ್ಳಾಗಲಾರದು. ಆದಾಗ್ಯೂ ಸಹ ನೀನು ಸುಳ್ಳು ಹೇಳಿದ ಅಪರಾಧಕ್ಕಾಗಿ, ಆ ದೋಷದ ಪರಿಹಾರಕ್ಕಾಗಿ, ಗಂಧಮಾದನ ಪರ್ವತಕ್ಕೆ ಹೋಗು, ಅಲ್ಲಿ ಯಾಗಗಳನ್ನು ಆಚರಿಸು. ಅದರಿಂದ ನಿನಗೆ ಶ್ರೌತಸ್ಮಾರ್ತ ಕರ್ಮಗಳಲ್ಲಿ ಮಾತ್ರ ಇನ್ನು ಮುಂದೆ ಭೂಲೋಕದಲ್ಲಿ ಪೂಜೆಯು ಲಭಿಸುತ್ತದೆ. ದೇವಾಲಯಗಳಲ್ಲಿ ವಿಷ್ಣುವಿಗೆ ಇರುವಂತೆ ಪೂಜಾದಿಗಳು ದೊರಕುವುದಿಲ್ಲ" ಎಂದು ಹೇಳಿ ಅಂತರ್ಧಾನ ಹೊಂದಿದನು (ಅದೃಶ್ಯನಾದನು). ಇತ್ಯಾದಿರೂಪವಾದ ಲಿಂಗಮೂಲಾನ್ವೇಷಣ ಕಥೆಯು ಸ್ಕಾಂದಪುರಾಣದಲ್ಲಿ ಉಕ್ತವಾಗಿದೆ.

ಆದರೆ ಇದು ತಾಮಸಜನರ ಮೋಹಕ್ಕಾಗಿಯೇ ಶೈವದುರ್ಗ್ರಹದಿಂದ ಕಲ್ಪಿತವಾಗಿದೆ. ಇದು ಪ್ರಾಮಾಣಿಕವಲ್ಲ. ಇದರ ವಿರೋಧವನ್ನು ಹಿಂದೆ ತಿಳಿಸಿದ "ವಿಷ್ಣುಸರ್ವೋತ್ತಮತ್ವ"ಕ್ಕೆ ಶಂಕಿಸುವಂತಿಲ್ಲ. ಏತಕ್ಕೆಂದರೆ ಶಿವನ ಉತ್ಕರ್ಷಕ್ಕಾಗಿಯೇ ಮೀಸಲಾದ ಸ್ಕಾಂದಪುರಾಣದಲ್ಲಿಯೇ ಶಿವನೇ "ಸಮಾಧಿಭಾಷಾದೃಷ್ಟಿಯಿಂದ "ಶ್ರೀಹರಿಯ ಉತ್ತಮತ್ವವನ್ನೂ ಮುಕ್ತಕಂಠದಿಂದ ಪ್ರಶಂಸಿದ್ದಾನೆ.

ಇದನ್ನೇ ಶ್ರೀ ಮಧ್ವಾಚಾರ್ಯರು ಜಿಜ್ಞಾಸಾಧಿಕರಣದ ಸೂತ್ರಭಾಷ್ಯದಲ್ಲಿ ಕಡೆಯದಾಗಿ "ನ ಚೇತರ ಗ್ರಂಥವಿರೋಧಃ" ಎಂದು ಪ್ರಾರಂಭಿಸಿ ಪ್ರತಿಪಾದಿಸಿರುತ್ತಾರೆ.

ಶಿವನ ವಚನವು ಈ ರೀತಿ ಇದೆ.

> **ಕೃತಕೃತ್ಯಾಃ ಕಥಂ ತ್ವಂ ಬ್ರಹ್ಮೇಶಾನಾದಯಃ ಸುರಾಃ**
> **ತದ್ವದಚ್ಯುತಯಾಂಶ್ಚೇವ ಯದ್ಯನುಗ್ರಹಕೃದ್ಭವಾನ್ (ಇತಿಶೈವೇ ಚ ಸ್ಕಾಂದೇ)**

**ಅಭಿಪ್ರಾಯ** :- ರುದ್ರದೇವನು ಶ್ರೀ ಅಚ್ಯುತನನ್ನು ಕುರಿತು ಈ ರೀತಿ ಹೇಳಿದ್ದಾನೆ.

ಎಲೈ ಅಚ್ಯುತನೇ, ನಾರಾಯಣನೇ! ನೀನು ನಮ್ಮ ವಿಷಯದಲ್ಲಿ ಸರ್ವಥಾ ವಿಮುಖನಾದರೆ, ನಮಗೆ ನೀನು ಅನುಗ್ರಹಮಾಡದಿದ್ದರೆ, ನೀನು ನಮ್ಮ ವಿಷಯವಾಗಿ ದಯೆಯನ್ನು ತೋರದಿದ್ದರೆ, ಆಗ ಚತುರ್ಮುಖನೇ ಆಗಲೀ, ನಾನೇ

ಆಗಲೀ ಇತರ ದೇವತೆಗಳೇ ಆಗಲಿ, ಅವರು ಎಂತಹವರೇ ಆಗಲೀ, ನಾಯಿಗಳಿಗೆ ಅನ್ನವನ್ನು ಬೇಯಿಸುವ ಶ್ವಪಚನಿಗಿಂತಲೂ, ಚಂಡಾಲನಿಗಿಂತಲೂ, ನೀಚನಿಗಿಂತಲೂ, ಅತಿಯಾದ ಕಷ್ಟಕ್ಕೆ ಗುರಿಯಾಗುತ್ತೇವೆ. ನಾವೆಲ್ಲರೂ ನಿನಗೆ ಸರ್ವದಾ ಸರ್ವರೀತಿಯಿಂದಲೂ ಅಧೀನರೇ ಆಗಿರುತ್ತೇವೆ. ಎಂದು ಶಿವನು ಹೇಳಿದ್ದಾನೆ.

ಲಿಂಗಮೂಲಾನ್ವೇಷಣವೆಂಬ ಕಲ್ಪಿತವಾದ ಕಥೆಯಿಂದಲೂ ಸಹ ವಿಷ್ಣುಸರ್ವೋತ್ತಮತ್ವಕ್ಕೆ ಬಾಧಕವಿಲ್ಲ.

ವಿಷ್ಣುಸರ್ವೋತ್ತಮತ್ವವು ಸಕಲ ಸಾತ್ವಿಕ ಪುರಾಣಗಳಲ್ಲೂ ವಿಶೇಷಾಕಾರವಾಗಿ ಪ್ರತಿಪಾದಿತವಾಗಿದೆ. ಅದಕ್ಕೆ ವಿರುದ್ಧವಾಗಿ ತಾಮಸಪುರಾಣಗಳಲ್ಲಿನ ಕಥೆಗಳನ್ನು ಕಲ್ಪಿತಗಳೆಂದೂ ಅಪ್ರಾಮಾಣಿಗಳೆಂದು ಪರಿಗಣಿಸಬೇಕು.

ಮತ್ತು "ವಿಷ್ಣು ಮತ್ತು ಚತುರ್ಮುಖಬ್ರಹ್ಮರು, ವರಾಹರೂಪದಿಂದ ವಿಷ್ಣುವೂ, ಹಂಸರೂಪದಿಂದ ಚತುರ್ಮುಖಬ್ರಹ್ಮನೂ ಶಿವಲಿಂಗದ ಮೂಲಭಾಗವನ್ನೂ ಅಗ್ರಭಾಗವನ್ನೂ ನೋಡಿ ಬಂದರು" ಎಂಬ ಕಥಾಭಾಗವು, ಕೂರ್ಮಪುರಾಣದಲ್ಲೂ, ಶಿವರಾತ್ರಿಮಹಾತ್ಮ್ಯೆಯಲ್ಲೂ ಪ್ರತಿಪಾದಿತವಾಗಿದೆ.

ಅವೆಲ್ಲವೂ ಸಹ ತಾಮಸಪುರಾಣಭಾಗಗಳೆಂಬುದು, ಸುಪ್ರಸಿದ್ಧಸಂಗತಿಯೇ ಆಗಿದೆ.

ಮತ್ತು **"ಉದ್ಧೃತಾಸಿ ವರಾಹೇಣಕೃಷ್ಣೇನಶತಬಾಹುನಾ"**
**"ಆಪೋವಾ ಇದಮಗ್ರೇಸಲಿಲಮಾಸೀತ್, ತಸ್ಮಿನ್ ಪ್ರಜಾಪತಿರ್ವಾಯುಃ**
**ಭೂತ್ವಾಚರತ್, ಸ ಇಮಾಮಪಶ್ಯತ್ । ತಾಂವರಾಹೋ**
**ಭೂತ್ವಾ ಅಹರತ್ "**

ಇತ್ಯಾದಿ ಶ್ರುತಿಗಳಿಗೆ ಹಿಂದೆ ಹೇಳಿದ ಲಿಂಗಮೂಲಾನ್ವೇಷಣ ಕಥೆಯು ವಿರುದ್ಧವಾಗಿದೆ. ಆ ಶ್ರುತಿಯಲ್ಲಿ ಸಕಲಭೂತಭೌತಿಕಪದಾರ್ಥಗಳಿಗೆಲ್ಲಾ ಆಶ್ರಯವಾದ ಪೃಥಿವಿಯ ಉದ್ಧಾರವು ವಿಷ್ಣುವಿನಿಂದಲೇ ಆದುದಾಗಿ ಉಕ್ತವಾಗಿದೆ. ಹಿಂದೆ ತಿಳಿಸಿದ ಶಿವನ ಲಿಂಗವೂ ಕೂಡ ಪಾರ್ಥಿವ ಪದಾರ್ಥವೇ ಆಗಿದೆ.

ಆ ಶಿವನ ಲಿಂಗವಾದರೋ, ಪೃಥಿವೀ ವಿಕಾರವಲ್ಲವೆಂಬಲ್ಲಿಯೂ, ಅಪ್ರಾಕೃತವೆಂಬಲ್ಲಿಯೂ, ಊರ್ಧ್ವದೇಶ, ಅಧೋದೇಶವಲ್ಲಿ ಅಪರಿಮಿತವಾಗಿದೆಯೆಂಬ ವಿಚಾರವಾಗಿಯೂ ಯಾವ ಪ್ರಮಾಣವೂ ಇರುವುದಿಲ್ಲ. ಸರ್ವನಿಯಾಮಕನಾದ, ಸರ್ವಜ್ಞಶಿಖಾಮಣಿಯಾದ ಸರ್ವೋತ್ತಮನಾದ ಮಹಾವಿಷ್ಣುವಿಗೆ ಆ ಲಿಂಗದ ಪರಿಜ್ಞಾನವೇ ಇಲ್ಲವೆಂದು ಕಲ್ಪಿಸುವುದೂ ಸಹ, "ಯಃ ಸರ್ವಜ್ಞಃ ಸರ್ವವಿತ್ " ಇತ್ಯಾದಿಯಾದ ವಿಷ್ಣುವಿಗೆ ಸರ್ವಜ್ಞತ್ವವನ್ನು ಘೋಷಿಸುತ್ತಿರುವ ಶ್ರುತಿವಿರುದ್ಧವಾಗಿರುವುದರಿಂದ ಅದು ಸಂಗತವಾಗುವುದಿಲ್ಲ.

ಮತ್ತು ವಿಷ್ಣುವಿಗೆ ವಿಚಿತ್ರಶಕ್ತಿಯನ್ನು ತಿಳಿಸುತ್ತಿರುವ ಶ್ರುತಿಗೂ ಕೂಡಾ ಆ ತಾಮಸಪುರಾಣದ ಲಿಂಗ ಮೂಲಾನ್ವೇಷಣ ಕಥೆಯು ವಿರುದ್ಧವಾಗಿರುವ ಕಾರಣ ಅದು ಅಪ್ರಮಾಣಿಕವೆಂದೇ ನಿರ್ಧರಿಸಬೇಕು.

ವಿಷ್ಣುವಿಗೆ ವಿಚಿತ್ರಶಕ್ತಿಯನ್ನು ಹೇಳುತ್ತಿರುವ ಶ್ರುತಿಯು ಈ ಕೆಳಗೆ ಕಂಡಂತಿದೆ.

**"ವಿಚಿತ್ರಶಕ್ತಿ: ಪುರುಷ:ಪುರಾಣೋ ನ ಚಾನ್ಯೇಷಾಂ ಶಕ್ತಯಃ ತಾದೃಶಾಃ ಸ್ಯು:।।**

ಇತ್ಯಾದಿ ,ಮತ್ತು **"ನತಸ್ಯ ಕಾರ್ಯಂ ಕರಣಂ ಚ ವಿದ್ಯತೇ ನ ತತ್ಸಮಶ್ಚಾಭ್ಯಧಿಕಶ್ಚದೃಶ್ಯತೇ" ।।**

'ಪರಾಸ್ಯ ಶಕ್ತಿ: ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾಚ" ಇತ್ಯಾದಿಯಾದ ಶ್ವೇತಾಶ್ವತರ ಶ್ರುತಿವಾಕ್ಯಕ್ಕೂ ಕೂಡ ಲಿಂಗಮೂಲಾನ್ವೇಷಣ ಕಥೆಯು ವಿರುದ್ಧವಾಗಿದೆ.

ಬ್ರಹ್ಮವೈವರ್ತಪುರಾಣದಲ್ಲಿಯೂ ಕೂಡ, ಬ್ರಹ್ಮನ ಉತ್ಕರ್ಷವನ್ನು ಪ್ರತಿಪಾದಿಸುವ ಘಟ್ಟದಲ್ಲೂ ಸಹ ಚತುರ್ಮುಖಬ್ರಹ್ಮನೂ ಸಹ ಶ್ರೀಹರಿಯ ಅಸಾಧಾರಣವಾದ ಮಹಿಮೆಯನ್ನು ಪ್ರಸಂಶೆ ಮಾಡಿರುತ್ತಾನೆ. ಇದನ್ನೂ ಸಹ ಸೂತ್ರಭಾಷ್ಯದಲ್ಲಿ ಶ್ರೀಮದಾಚಾರ್ಯರು ಉದಾಹರಿಸಿರುತ್ತಾರೆ.

**ಬ್ರಾಹ್ಮೇ ಚ ಬ್ರಹ್ಮವೈವರ್ತೇ** :- ಚತುರ್ಮುಖನ ವಚನವು ಈ ರೀತಿ ಇದೆ.

**ನಾಹಂ ನ ಚ ಶಿವೋಽನ್ಯೇ ಚ ತಚ್ಛಕ್ತ್ಯೇಕಾಂಶಭಾಗಿನ:।**
**ಬಾಲ: ಕ್ರೀಡನಕೈರ್ಯದ್ವದ್ ಕ್ರೀಡತೇಽಸ್ಮಾಭಿರಚ್ಯುತ: ।। ಇತಿ (ಬ್ರಹ್ಮವೈವರ್ತೇ)**

**ಅಭಿಪ್ರಾಯ** :- ಚತುರ್ಮುಖನು ಹೇಳಿದ್ದಾನೆ. "ನಾನಾಗಲಿ, ಶಿವನೇ ಆಗಲಿ, ನಮ್ಮ ಇಬ್ಬರಿಗಿಂತಲೂ ಬೇರೆಯವರಾದ ಯಾರೇಆಗಲಿ, ಆ ವಿಷ್ಣುವಿನನ ಸಾಮರ್ಥದ ಏಕಾಂಶವನ್ನೂ ಸಹ ಹೊಂದಿದವರಾಗಿಲ್ಲ. ಆದಾಗ್ಯೂ ಕೂಡ ಬಾಲಕನು ಕ್ರೀಡಾಸಾಧನಗಳಿಂದ ಬೊಂಬೆಗಳಿಂದ ಆಟವಾಡುವಂತೆ ಆ ಸರ್ವಸಾಮರ್ಥ್ಯಸಂಪನ್ನನಾದ ಸ್ವತಂತ್ರನಾದ ಶ್ರೀಹರಿಯು ನಮ್ಮನ್ನು ಆಟದ ಬೊಂಬೆಗಳಂತೆ ನಮ್ಮಲ್ಲಿದ್ದು (ನಮ್ಮಿಂದಾ) ನಮ್ಮಮೂಲಕವಾಗಿ ತಾನೇನೇ ಸೃಷ್ಟ್ಯಾದಿ ಕ್ರೀಡೆಯನ್ನು ಮಾಡುತ್ತಿದ್ದಾನೆ. ಆಟವಾಡುತ್ತಿದ್ದಾನೆ. ಈ ರೀತಿ ಚತುರ್ಮುಖನ ಮುಖದಿಂದಲೂ ಆ ಶಿವನ ಮುಖದಿಂದಲೂ ವಿಷ್ಣುವಿನ ಉತ್ತಮತ್ವವು ಉಕ್ತವಾಗಿದೆ. ಆದಕಾರಣ ಶ್ರೀಹರಿಯ ಸರ್ವೋತ್ತಮತ್ವದ ವಿಷಯದಲ್ಲಿ ಇತರ ಗ್ರಂಥಗಳ ಯಾವ ವಿರೋಧವೂ ಸಹ ಇರುವುದಿಲ್ಲವೆಂಬುದೇ ಪರಮ ತಾತ್ಪರ್ಯವಾಗಿದೆ.

ಆದರೆ ವೈಷ್ಣವಪುರಾಣಗಳಲ್ಲಾದರೋ ಈ ರೀತಿ ಇಲ್ಲ. ಅಲ್ಲೆಲ್ಲಾ ಶಿವಾದಿಗಳ ಉತ್ಕರ್ಷವು ಮೋಹಕವೆಂದೂ ತಾಮಸಜನರ ಅನ್ಯಥಾಜ್ಞಾನಕ್ಕೆಂದೂ ಹೇಳಿರುವುದರಿಂದ ಅನ್ಯಥಾ ಭಾವನೆಗೆ ಅಥವಾ ವಿಪರೀತವಾದ ಶಂಕೆಗೆ ಅವಕಾಶವೇ ಇಲ್ಲ.

ಪಾದ್ಮಪುರಾಣದಲ್ಲಿನ ವಚನವನ್ನು ಪರಿಶೀಲಿಸಿದಾಗ ಅವತಾರಸಮಯದಲ್ಲಿ ಶ್ರೀಹರಿಯು, ತೋರಿಕೆಗಾಗಿ, ತಾಮಸಜನರ ಅನ್ಯಥಾ ಜ್ಞಾನಕ್ಕಾಗಿ, ಶಿವನ ಪ್ರಾರ್ಥನೆ ಶಿವಪೂಜಾದಿಗಳನ್ನು ಮಾಡಿರುವುದೆಂಬ ಅಂಶವು ಮತ್ತೂ ಕೂಡ ಸಂದೇಹ ಭ್ರಾಂತಿಗಳಿಗೆ ಅವಕಾಶವಾಗದಂತೆ ಗೊತ್ತಾಗುತ್ತದೆ. ಪಾದ್ಮಪುರಾಣವಚನವು ಈ ರೀತಿ ಇದೆ. ಶಿವನನ್ನು ಕುರಿತು ವಿಷ್ಣುವಿನ ಮಾತು ಈ ಕೆಳಗೆ ಕಂಡಂತಿದೆ.

**"ಅಹಮಪ್ಯವತಾರೇಷು ತ್ವಾಂ ಚ ರುದ್ರ ! ಮಹಾಬಲ ।**
**ತಾಮಸಾನಾಂ ಮೋಹನಾರ್ಥಂ ಪೂಜಯಾಮಿ ಯುಗೇ ಯುಗೇ" ।।**

**(ಇತಿ ಪಾದ್ಮಪುರಾಣೇ)**

**ತಾತ್ಪರ್ಯ** :- ಎಲೈ, ಮಹಾಬಲಶಾಲಿಯಾದ, ಶಿವನೇ ! ನಾನೂ ಕೂಡ, ರಾಮಕೃಷ್ಣಾದಿಗಳ ಅವತಾರ ಕಾಲದಲ್ಲಿ ಯುಗಯುಗಗಳಲ್ಲಿಯೂ ಕೂಡ, ತಾಮಸರ ಮೋಹಕ್ಕಾಗಿ ನಿನ್ನನ್ನು ಪೂಜಿಸುತ್ತೇನೆಂದು ವಿಷ್ಣುವು ಹೇಳಿರುವನು.

ಮತ್ತು ಶಿವನು ಶ್ರೀ ವಿಷ್ಣುವನ್ನು ಕುರಿತು ಎಲೈ ಸರಸ್ವಾಮಿಯಾದ ವಿಷ್ಣುವೇ ! ನನಗೆ ಮತ್ತೊಂದು ವರವನ್ನು ಕೊಡು, ಆ ವರದ ಪ್ರಕಾರವು ಏನೆಂದರೆ :-

**"ಅನ್ಯದೇವಂ ವರಂ ದೇಹಿ ಪ್ರಸಿದ್ಧಂ ಸರ್ವಜನ್ತುಷು ।**
**ಮರ್ತ್ಯೋ ಭೂತ್ವಾ ಭವಾನೇವ ಮಮ ಸಾಧಯ ಕೇಶವ ।।**
**ಮಾಂ ಭಜಸ್ವ ಚ ದೇವೇಶ ವರಂ ಮತ್ತೋ ಗೃಹಾಣ ಚ ।**
**ಯೇನಾಹಂ ಸರ್ವಭೂತಾನಾಂ ಪೂಜ್ಯಾತ್ ಪೂಜ್ಯತಮೋಽಭವಮ್" ।। ಇತಿ ।।**

ವಿಷ್ಣುರುವಾಚ **ದೇವಕಾರ್ಯಾವತಾರೇಷು ಮಾನುಷತ್ವಮುಪೇಯಿವಾನ್ ।**
**ತ್ವಾಮೇವಾರಾಧಯಿಷ್ಯಾಮಿ ಮಮ ತ್ವಂ ವರದೋ ಭವ" ।। ಇತಿ (ರುದ್ರಗೀತಾ)**
**(ವರಾಹಪುರಾಣ)**

ರುದ್ರನು ಶ್ರೀ ವಿಷ್ಣುವನ್ನು ಕುರಿತು ಪ್ರಾರ್ಥಿಸಿದ ವರದ ವಿವರವು ಈ ರೀತಿ ಇದೆ.

ಎಲೈ ವಿಷ್ಣುವೇ ! ನನಗೆ ಮತ್ತೊಂದು ವರವನ್ನು ಕೊಡು ಅದೇನೆಂದರೆ, ನೀನು ರಾಮಕೃಷ್ಣಾದಿರೂಪದಿಂದ ಅಭಿವ್ಯಕ್ತನಾದಾಗ, ಅವತಾರವನ್ನು ತಾಳಿದಾಗ, ನನ್ನನ್ನು (ಶಿವನಾದ ನನ್ನನ್ನು) ಕುರಿತು ಭಜಿಸು, ಎಲೈ ದೇವದೇವೇಶನೆ ! ನೀನೇ ನನ್ನನ್ನು ಕುರಿತು ಬೇಡಿ ವರವನ್ನು ಪ್ರಾರ್ಥಿಸು. ಇದರಿಂದ ಭೂಲೋಕದಲ್ಲಿ ಎಲ್ಲರೂ ತಾಮಸಜನರೆಲ್ಲರೂ ಶಿವನೇ ಸರ್ವೋತ್ತಮನೆಂಬುದಾಗಿ ನನ್ನನ್ನು ತಿಳಿಯುತ್ತಾರೆ. ಇದರಿಂದ ಭೂಲೋಕದಲ್ಲಿ ಪೂಜ್ಯತಮನಾಗಿ ನಾನು ಪ್ರಸಿದ್ಧಿಪಡೆಯುತ್ತೇನೆ. ವಿಷ್ಣುವೇನೇ ರುದ್ರನನ್ನು ಕುರಿತು ವರವನ್ನು ಬೇಡಿ ಪಡೆದಿದ್ದಾನೆ. ಶಿವನನ್ನು ಪೂಜಿಸಿದ್ದಾನೆ. ಇದರಿಂದ ಶಿವನೇ ಎಲ್ಲರಿಗಿಂತಲೂ ಉತ್ತಮನು" ಎಂದು ತಾಮಸರೆಲ್ಲಾ ತಿಳಿಯುವುದರಿಂದ ನನ್ನ ಪ್ರಸಿದ್ಧಿಯು ಭೂಲೋಕದಲ್ಲಿ ವಿಶೇಷಾಕಾರವಾಗಿ ಆಗುತ್ತದೆಯೆಂದು ರುದ್ರನು ವಿಷ್ಣುವಿನಿಂದ ಒಂದು ವರವನ್ನು ಪಡೆದಿದ್ದಾನೆ. ರುದ್ರದೇವನ ಪ್ರಾರ್ಥನೆಗೆ ಸಮ್ಮತಿಸಿದ ವಿಷ್ಣುವಿನ ವಚನವೂ ಸಹ ಈ ರೀತಿ ಇದೆ.

ದೇವಕಾರ್ಯವತಾರೇಷು ಇತ್ಯಾದಿ. ಅದರ ಅಭಿಪ್ರಾಯವು ಹೀಗಿದೆ.

**ಆ ವಚನದ ಅಭಿಪ್ರಾಯ** :- ಎಲೈ ರುದ್ರನೇ ! ದೇವತೆಗಳ ಕೆಲಸಕ್ಕಾಗಿ ನಾನು ಭೂಲೋಕದಲ್ಲಿ ಅವತಾರ ಮಾಡುತ್ತೇನೆ. ಮನುಷ್ಯರೂಪವಂತೆ ತೋರತಕ್ಕ ಆಕಾರದಿಂದ ಅಭಿವ್ಯಕ್ತನಾಗುತ್ತೇನೆ. ನಿನ್ನನ್ನೇ (ಶಿವನನ್ನೇ) ಆರಾಧಿಸುತ್ತೇನೆ. (ಶಿವನಿಂದ ವರವನ್ನೂ) ನಿನ್ನಿಂದ ವರವನ್ನು ಪಡೆಯುತ್ತೇನೆಂದು ವರಾಹಪುರಾಣದ ರುದ್ರಗೀತಾದಲ್ಲಿ ಉಕ್ತವಾಗಿದೆ.

ಕೂರ್ಮ ಪುರಾಣದಲ್ಲಿಯೂ ಸಹ ಇವರ ಸಂವಾದಿಯಾದ ವಿಚಾರವು ಉಕ್ತವಾಗಿದೆ. ಶಿವನನ್ನು ವಿಷ್ಣುವು ಪೂಜಿಸುವುದಾಗಿಯೂ, ಶಿವನಿಂದ ವಿಷ್ಣುವು ವರವನ್ನು ಪಡೆದಿರುವ ಸಂಗತಿಯೂ ಸಹ ಉಕ್ತವಾಗಿದೆ.

ಈ ವಿಚಾರಗಳಾವುವೂ ಸಹ ಶ್ರೀಹರಿಯ ಸರ್ವೋತ್ತಮತ್ವಕ್ಕೆ ಬಾಧಕಗಳಾಗಲಾರವು. ಶ್ರೀಕೃಷ್ಣಾವತಾರದಲ್ಲಿ ಶ್ರೀಕೃಷ್ಣನು ತನಗಿಂತಲೂ ಅತ್ಯಂತವಾಗಿ ತಾರತಮ್ಯದಲ್ಲಿ ಕಮ್ಮಿಯಾಗಿರತಕ್ಕ ಇಂದ್ರಾಂಶ ಸಂಭೂತನಾದ ಅರ್ಜುನನಿಗೆ ಸಾರಥ್ಯವನ್ನು ಮಾಡಿದ್ದಾನೆ. ಇದು ತನ್ನನ್ನೂ ಆಶ್ರಯಿಸಿದ ಭಕ್ತರಿಗೆ ನಾನು ಅತಿಸುಲಭನೆಂಬುದಾಗಿ ಆಶ್ರಿತಭಕ್ತ ವಾತ್ಸಲ್ಯವನ್ನು ತೋರಿಸುವುದಕ್ಕಾಗಿ ಪರಮಾತ್ಮನು ಈ ರೀತಿ ಚಟುವಟಿಕೆಗಳನ್ನು ತೋರಿಸಿರುತ್ತಾನೆ. ಇದರಿಂದ ಪರಮಾತ್ಮನಾದ ಶ್ರೀಕೃಷ್ಣನ ಸರ್ವೋತ್ತಮತ್ವಕ್ಕೆ ಯಾವ ಚ್ಯುತಿಯೂ ಬಂದಂತಾಗುವುದಿಲ್ಲ.

ಕೂರ್ಮ ಪುರಾಣದಲ್ಲಿ ಶ್ರೀರಾಮಾವತಾರದ ಕಾಲದಲ್ಲಿನ ಒಂದು ವಿಚಾರವು ಉಕ್ತವಾಗಿದೆ. ಶ್ರೀರಾಮನು ರಾಮೇಶ್ವರದಲ್ಲಿ ಸೇತುಮಧ್ಯದಲ್ಲಿ ಶಿವಲಿಂಗವನ್ನು ಪ್ರತಿಷ್ಠೆಗೊಳಿಸಿರುವುದಾಗಿಯೂ, ಶಿವನಿಂದ ವರವನ್ನು ಪಡೆದಿರುವುದಾಗಿಯೂ ಹೇಳಲಾಗಿದೆ. ಇದರಿಂದಲೂ ಸಹ ಶ್ರೀಹರಿಯ ಸರ್ವೋತ್ತಮತ್ವಕ್ಕೆ ಯಾವ ಬಾಧಕವೂ ಇರುವುದಿಲ್ಲ. ಅವತಾರ ಕಾಲದಲ್ಲಿನ ಈ ಕೃತ್ಯಗಳೆಲ್ಲಾ ಶಿವನ ಪ್ರಾರ್ಥನೆಯಂತೆ ಶ್ರೀಹರಿಯು ವರವನ್ನು ಶಿವನಿಗೆ ಅನುಗ್ರಹಿಸಿದ ಕಾರಣದಿಂದಲೇ ನಡೆದಿರುವುದಾಗಿವೆ.

ಆ ಕೂರ್ಮ ಪುರಾಣ ವಚನವು ಕೆಳಗೆ ಕಂಡಂತಿದೆ.

**ಸೇತುಮಧ್ಯೇಮಹಾದೇವಮೀಶಾನಂ ಕೃತ್ತಿವಾಸಸಮ್ ।**
**ಸ್ಥಾಪಯಾಮಾಸ, ಲಿಂಗಂ ತದ್ ಪೂಜಯಾ ಮಾಸ ರಾಘವಃ ।।**
**ತಸ್ಯದೇವೋಮಹಾದೇವಃ ಸ್ಥಾವರಾನ್ ವರಮುತ್ತಮಮ್ ।।**
**( ಇತಿ ಇತಿಕೂರ್ಮ ಪುರಾಣವಚನಂ)**

**ತಾತ್ಪರ್ಯ:-** ಸರ್ವೋತ್ತಮನಾದ ಸರ್ವ ಜಗಜ್ಜನ್ಮಾದಿಕಾರಣನಾದ, ಸರ್ವತಂತ್ರಸ್ವತಂತ್ರನಾದ, ಸರ್ವಜ್ಞಶಿಖಾಮಣಿಯಾದ ಚೇತನಾಚೇತನಾತ್ಮಕವಾದ ಪ್ರಪಂಚಕ್ಕೆ ಯಥಾಯೋಗ್ಯವಾಗಿ ಸೃಷ್ಟಿ, ಸ್ಥಿತಿ, ಸಂಹಾರ ನಿಯಮನ, ಜ್ಞಾನ, ಅಜ್ಞಾನ, ಬಂಧ, ಮೋಕ್ಷಗಳೆಂಬ ಅಷ್ಟಕಕ್ಕೆ ನಿಮಿತ್ತಕಾರಣನಾದ ಶ್ರೀಹರಿಯು ರಾಮಾವತಾರಕಾಲದಲ್ಲಿ ವಿಶ್ವಾಮಿತ್ರ ಭರದ್ವಾಜ, ಅಗಸ್ತ್ಯಾದಿಗಳಿಗೆ ನಮಸ್ಕಾರ ಮಾಡಿವುದು, ಅವರುಗಳಿಂದ ಪಡೆದಿರುವುದೂ, ಕರ್ಮಬಂಧರಹಿತನಾದಾಗ್ಯೂ, ಶ್ರುತಿಸ್ಮೃತಿಗಳಲ್ಲಿ ಉಕ್ತವಾಗಿರುವ ನಿತ್ಯ ನೈಮಿತ್ತಿಕ ಕರ್ಮಗಳನ್ನುಆಚರಿಸುವುದು ಇದೆಲ್ಲವೂ ಲೋಕಶಿಕ್ಷಣಕ್ಕಾಗಿಯೇ ಹೊರತು ತನ್ನ ಸ್ವಾರ್ಥ ವೃತ್ತಿಯಿಂದ ಎಂದಿಗೂ ಇಲ್ಲವೆಂದು ಇದೇ ವೇದಗಳೇನು ವೇದಾನುಸಾರಿಗಳಾದ ಸ್ಮೃತಿಗಳೇನು ಇವುಗಳಿಂದ ಕಂಡುಬರುತ್ತಿರುವುದರಿಂದ ಶ್ರೀಹರಿಯ ಸರ್ವೋತ್ತಮತ್ವಕ್ಕೆ ಪಾರಮ್ಯತ್ವಕ್ಕೂ ಸರ್ವಸ್ವತಂತ್ರ್ಯಕ್ಕೂ ಅವುಗಳಾವುವು ಬಾಧಕಗಳಾಗಲಾರವು. ಇದೇ ರೀತಿಯಾದ ಸಮಾಧಾನವನ್ನು ಶ್ರೀಕೃಷ್ಣಪರಮಾತ್ಮನು ಕೈಲಾಸಯಾತ್ರೆಯನ್ನು ಮಾಡಿದ್ದಕ್ಕೂ, ಆ ಶಿವನ ವರದಿಂದ ಪುತ್ರಪ್ರಾಪ್ತಿಯನ್ನು ಪಡೆದುದಕ್ಕೂ ಅನ್ವಯಿಸಿಕೊಳ್ಳಬೇಕೆಂದು ಪ್ರಮಾಣಗಳು ತಿಳಿಸುತ್ತವೆ.

ಹರಿವಂಶದಲ್ಲಿ ಹಿಂದೆ ತಿಳಿಸಿದಂತೆ, ಶ್ರೀಹರಿಯ ಸರ್ವೋತ್ತಮತ್ವವು ವಿಲಾಪಿಲ ಪಾರಿಜಾತಗಳೆಂಬ ಮೂರು ಪ್ರಕರಣಗಳಲ್ಲೂ ಉಕ್ತವಾಗಿರುವುದರಿಂದ, ಶಿವನೇ ಶ್ರೀಕೃಷ್ಣನನ್ನು ಕುರಿತು ಧ್ಯಾನಾದಿಗಳನ್ನು ಆಚರಿಸಿರುವನೆಂದು ಹೇಳಿರುವುದರಿಂದ ಕೂರ್ಮಪುರಾಣಾದಿಗಳಲ್ಲಿ ಉಕ್ತವಾಗಿರುವ ಶ್ರೀಕೃಷ್ಣನ ಕಾರ್ಯಾದಿಗಳೆಲ್ಲವೂ ಕೇವಲ ನಟನೆಗಳೆಂದೇ ಹೇಳಬೇಕು.

ಈ ವಿಷಯವು ಸಾಕ್ಷಾತ್ತಾಗಿ ರುದ್ರನೇ ಪರಮಾತ್ಮನಾದ ವಿಷ್ಣುವನ್ನು ಕುರಿತು ಆಡಿರುವ, ಹರಿವಂಶದ ಮಾತುಗಳಿಂದ ಸ್ಪಷ್ಟವಾಗಿ ತಿಳಿದುಬರುತ್ತದೆ.

''ತತೋ ವೃಷಧ್ವಜೋ ದೇವಃಶೂಲೀಸಾಕ್ಷಾದುಮಾಪತಿಃ।
ಕರಂ ಕರೇಣ ಸಂಸ್ಪೃಶ್ಯ ವಿಷ್ಣೋಶ್ಚಕ್ರಧರಸ್ಯಹಿ ।।
ಪ್ರೋವಾಚ ಭಗವಾನ್ರುದ್ರಃ ಕೇಶವಂ ಗರುಡಧ್ವಜಮ್।
ಶೃಣ್ವತಾಂಸರ್ವದೇವಾನಾಂ ಮುನೀನಾಂಭಾವಿತಾತ್ಮನಾಮ್।
''ಕಿಮಿದಂ ದೇವದೇವೇಶ ಚಕ್ರಪಾಣೇಜನಾರ್ದನ।
ತಪಶ್ಚರ್ಯಾಂಕಿ ಮರ್ಥಂತೇ ಪ್ರಾರ್ಥನಾ ತವ ಕಾವಿಭೋ।।
ಸ್ವಯಂವಿಷ್ಣುರ್ಭವಾನ್ನಿತ್ಯಃತಪಸಾಪಾತ್ವಯಾಹರೇ।
ತ್ವತ್ತಸ್ಸಮಭವದ್ವಿಶ್ವಂ ತ್ವಯಿಸರ್ವಂಪ್ರಲೀಯತೇ।।
ಮದ್ವತ್ತ್ವಂ ಸರ್ವಗೋದೇವತ್ವಮೇವಾಹಂ ಜನಾರ್ದನ।
ಆವಯೋರಂತರಂನಾಸ್ತಿಶಬ್ದೈರರ್ಥೈರ್ಜಗತ್ಪತೇ।।
ನಾಮಾನಿ ತವ ಗೋವಿಂದ ಯಾನಿಲೋಕೇ ಮಹಾಂತಿಚ।
ತಾನ್ಯೇವ ಮಮ ನಾಮಾನಿ ನಾತ್ರಕಾರ್ಯಾವಿಚಾರಣಾ।।
ತ್ವದುಪಾಸಾಜಗನ್ನಾಥ ಸೈವಾಸ್ತುಮಮಗೋಪತೇ।
ಯಶ್ಚತ್ವಾಂದ್ವೇಷ್ಟಿದೇವೇಶ ಸಮಾಂದ್ವೇಷ್ಟಿನ ಸಂಶಯಃ।
ನಶಬ್ದಸ್ತುವಿನಾದೇವ ಯತ್ರೇವಿರಹಿತಂ ಕ್ವಚಿತ್।।
ಯದಾಸೀದ್ಯಚ್ಚವರ್ತೇತ ಯಚ್ಚಭಾವಿ ಜ[illegible]ತೇ।
ಸರ್ವಂತ್ವಂ ದೇವ ದೇವೇಶ ವಿನಾಕಿಂಚಿತ್ತ್ವ[illegible]ನಹಿ।। ಇತಿಹರಿವಂಶೇ।।

ಈ ರೀತಿ ಹರಿವಂಶದಲ್ಲೇ ರುದ್ರನಿಂದ ಶ್ರೀಹರಿಯನ್ನು ಕುರಿತು ಹೇಳಲಾಗಿದೆ.

**ಇದರ ಅಭಿಪ್ರಾಯ** :- ಶ್ರೀಕೃಷ್ಣನ ತಪಸ್ಸಿನ ಆಚರಣೆಯೇನು, ರುದ್ರನನ್ನು ಕುರಿತು ಶ್ರೀಕೃಷ್ಣನ ಪ್ರಾರ್ಥನೆಯೇನು ಇದೆಲ್ಲವೂ ಕೇವಲ ನಟನೆಯೆಂಬುದನ್ನೇ ರುದ್ರನ ವಾಕ್ಯದಿಂದ ನಿಶ್ಚಯಿಸಬೇಕಾಗಿದೆ.

ಆಗ ಶ್ರೀಕೃಷ್ಣನ ನಟನೆಯನ್ನು ರುದ್ರನು ನೋಡಿದಾಗ ಆಡಿದ ಮಾತುಗಳು ಈ ರೀತಿ ಇವೆ ವೃಷಧ್ವಜನಾದ ಶೂಲಿಯಾದ, ಉಮಾಪತಿಯಾದ ರುದ್ರನು ಸಾಕ್ಷಾತ್ತಾಗಿ ಶ್ರೀಕೃಷ್ಣಪರಮಾತ್ಮನನ್ನು ಕುರಿತು ಇಂತೆಂದನು, ಸಕಲ ದೇವತೆಗಳೂ, ಸಕಲಮುನಿಗಳೂ, ನಿರಂತರದಲ್ಲೂ ಧ್ಯಾನಾಸಕ್ತರಾದ ಮಹಾನುಭಾವರಾದ ಎಲ್ಲರೂ ಕೇಳುತ್ತಿರುವಂತೆಯೇ ಚಕ್ರಪಾಣಿಯಾದ ಶ್ರೀಕೃಷ್ಣನ ಎದುರಿಗೆ ಸಾಕ್ಷಾತ್ತಾಗಿ ರುದ್ರನು ಬಂದು, ತನ್ನ ಕೈಯಿಂದ ಶ್ರೀಕೃಷ್ಣನ ಕೈಯನ್ನು ಹಿಡಿದುಕೊಂಡು ಹೀಗೆ ಹೇಳಿದನು. ಎಲೈ ದೇವದೇವೇಶನಾದ ಚಕ್ರಪಾಣಿಯಾದ ಜನಾರ್ದನನೇ! ನೀನು ನನ್ನನ್ನು ಕುರಿತು ತಪಸ್ಸನ್ನು ಆಚರಿಸುತ್ತಿರುವುದು ಎಂಬುದು ಇದೇನು ? ಆಟವಾಡುತ್ತಿರುತ್ತಿಯೇ! ಸರ್ವಸಮರ್ಥನಾದ ಸರ್ವತಂತ್ರಸ್ವತಂತ್ರನಾದ ಮತ್ತು ನನಗೆ ತಾತನಾದ ನೀನು ನನ್ನನ್ನು ಪ್ರಾರ್ಥಿಸುವುದೆಂಬುದು ವಿತರ್ಕ ಮಾಡುತ್ತಿರುತ್ತಿಯೇ, ಇದೆಲ್ಲಾ ಕೇವಲ ಲೀಲೆಯಾಗಿದೆ.

ಎಲೈ ಸ್ವಾಮಿಯೇ ನೀನಾದರೋ, ಸ್ವಯಂ ವಿಷ್ಣುವೇ ಆಗಿದ್ದೀಯೇ, ದೇಶದಿಂದಲೂ, ಕಾಲದಿಂ[illegible] ದಿಂದಲೂ ಪರಿಪೂರ್ಣನಾಗಿದ್ದೀಯೇ ನಿನಗೆ ನಮ್ಮಂತೆ ಯಾವ ಬಗೆಯಾದ ಕೊರತೆಯೂ ಇರ[illegible] ಆಗಿದ್ದೀಯೇ, ನಿತ್ಯವಾದ ಪದಾರ್ಥಗಳಿಗೆಲ್ಲ ನಿತ್ಯತ್ವವನ್ನು ಕೊಡತಕ್ಕವನಾಗಿರುತ್ತೀಯೇ ಸ್ವತಂತ್ರ[illegible] ಷಡ್ಗುಣೈಶ್ವರ್ಯ ಸಂಪನ್ನನೇ ಆಗಿದ್ದೀಯೇ। ಆಪ್ತಸಮಸ್ತಕಾಮನಾದ ನೀನ[illegible].

ಇದೀ ಚೇತನ ಮತ್ತು ಅಚೇತನಾತ್ಮಮಕವಾದ ಈ ಜಗತ್ತಿಗೆ ಯಥಾಯೋಗ್ಯವಾಗಿ ಸೃಷ್ಟ್ಯಾದಿಗಳಿಗೆ ನಿಮಿತ್ತಕಾರಣನೇ ಆಗಿರುತ್ತೀಯೆ, ನಿನ್ನಿಂದಲೇ ಈ ಜಗತ್ತೂ ಸೃಷ್ಟಿಕಾಲದಲ್ಲಿ ಹುಟ್ಟಿರುತ್ತದೆ. ಮಹಾಪ್ರಳಯ ಕಾಲದಲ್ಲಿ ನಿನ್ನಲ್ಲೇ ಲಯವನ್ನು ಹೊಂದುತ್ತಿದೆ. ನೀನು ಸರ್ವಾಂತರ್ಯಾಮಿಯಾಗಿದ್ದೀಯೇ, ನನ್ನದು ಎಂಬುದು ಏನುಂಟೋ ಅದೆಲ್ಲವೂ ಕೂಡ ನಿನ್ನ ಅಧೀನವೇ ಆಗಿದೆ. ಎಲೈ ಜನಾರ್ದನನೇ ನಾನು ನಿನ್ನವನೇ, ನಿನ್ನ ಆಶ್ರಿತನೇ ನಿನ್ನಿಂದ ಪ್ರೇರಿಸಲ್ಪಡತಕ್ಕವನೇ ಆಗಿದ್ದೇನೆ. ನನ್ನ ಸ್ವರೂಪವೂ, ನನ್ನ ಜ್ಞಾನವೂ, ನನ್ನ ಸಕಲ ಚೇಷ್ಟೆಗಳೂ ಎಲ್ಲಕ್ಕೂ ನೀನೇ ನಿಯಾಮಕನಾಗಿರುವೆ. ರುದ್ರ ಶಿವ, ಇತ್ಯಾದಿ ನನ್ನ ಹೆಸರುಗಳೆಲ್ಲವೂ ಸಹ ಪರಮಮುಖ್ಯವೃತ್ತಿಯಿಂದ ನಿನ್ನ ನಾಮಗಳೇ ಆಗಿವೆ. ನನ್ನ ನಾಮವಾದ ರುದ್ರವೆಂಬ ನಾಮವು ನನಗೆ ನಿನ್ನಿಂದಲೇ ಬಂದಿದೆ. ''ರುಜಂದ್ರಾವಯತೇ ಯಸ್ಮಾತ್ ರುದ್ರಸ್ತಸ್ಮಾಜ್ಜನಾರ್ದನ। ಶಿವಃ ಶಿವಾತ್ಮಮಕತ್ವಾತ್ (ಮಂಗಳ ರೂಪತ್ವಾತ್) ಎಂಬಂತೆ ಪರಮಮಂಗಳರೂಪನಾಗಿರುವ ನಿನಗೇನೇ ಶಿವ ಎಂಬ ನಾಮವು ಸಲ್ಲತಕ್ಕದ್ದಾಗಿದೆ. ಆದ ಕಾರಣ ನನ್ನ ನಾಮಕ್ಕೂ ನಿನ್ನ ನಾಮಕ್ಕೂ ಅಂತರವೇನೂ ಇರುವುದಿಲ್ಲ. ನನ್ನ ನಾಮಗಳೆಲ್ಲ ನಿನ್ನದೇ ಎಂದು ''ಯೋದೇವಾನಾಂ ನಾಮಧಾಏಕಏವ'' ಎಂದೇ ಶ್ರುತಿಗಳು ಸಾರುತ್ತಿವೆ. ಎಲೈ ಗೋವಿಂದನೇ! ಸಕಲನಾಮಧಾರಿಯಾದ ನಿನ್ನ ನಾಮಗಳೇ ನನಗೂ ಲೋಕಕ್ಕೂ ಉಕ್ತವಾಗಿವೆ. ಇದನ್ನು ಸಮಾಕರ್ಷಾಧಿಕರಣದಲ್ಲಿ ಶ್ರೀವೇದವ್ಯಾಸರೇ ಸಮರ್ಥಿಸಿರುತ್ತಾರೆ. ಇದರಲ್ಲಿ ಯಾವ ಸಂದೇಹವೂ ಇರುವುದಿಲ್ಲ. ಇದನ್ನು ಪಾದ್ಮಪುರಾಣವಚನವೇ ವಿವರಿಸುತ್ತಲಿದೆ.

ಪರಸ್ಯವಾಚಕಾಃ ಶಬ್ದಾಃ। ಸಮಾಕೃಷ್ಯೇತರೇಷ್ವಪಿ।
ಪ್ರಯುಜ್ಯಂತೆ ಸತತಂ ಲೋಕವೇದಾನುಸಾರತಃ।। ಇತಿಪಾದ್ಮೆ।।

**ತಾತ್ಪರ್ಯ** :- ಪರಮಾತ್ಮನನ್ನೇ ಹೇಳುತ್ತಲಿರುವ ಸರ್ವಶಬ್ದಗಳನ್ನೂ, ಪರಮಾತ್ಮನ ಸಂಬಂಧವಿರುವುದರಿಂದ ಸಂಗ್ರಹಿಸಿ ವೈದಿಕ ಲೌಕಿಕಗಳಾದ ಸರ್ವ ವ್ಯವಹಾರಸಿದ್ಧಿಗಾಗಿ ಇತರ ಪದಾರ್ಥಗಳಲ್ಲಿ ವೈದಿಕರಿಂದಲೂ, ಲೌಕಿಕರಿಂದಲೂ ಕೇವಲ ರೂಢಿಗಳಿಂದು ವ್ಯವಹರಿಸಲ್ಪಡುತ್ತವೆ. ಪರಮಾತ್ಮನಲ್ಲಿಯೂ ವಿದ್ವದ್ರೂಢಿಯಿಂದ ವ್ಯವಹರಿಸಲ್ಪಡುತ್ತವೆ.

ಎಲೈ ಜಗನ್ನಾಥನೇ, ನನಗೆ ನಿನ್ನ ಉಪಾಸನೆಯು ಧ್ಯಾನವು ಯಾವಾಗಲೂ ಇರಲಿ. ಈ ಉಪಾಸನಾ ರೂಪವಾದ ಸೇವೆಯನ್ನು ನನಗೆ ಚ್ಯುತಿ ಬಾರದಂತೆ ಕರುಣಿಸು ಎಲೈ ಸರ್ವಸ್ವಾಮಿಯೇ ಯಾರು ನನಗೂ ಸಹ ಸ್ವಾಮಿಯಾದ ನಿನ್ನನ್ನು ದ್ವೇಷಿಸುತ್ತಾರೆಯೋ ಅವರೆಲ್ಲಾ ನನ್ನ ದ್ವೇಷಿಗಳು. ಇದರಲ್ಲಿ ಸಂದೇಹವೇ ಇಲ್ಲ. ಎಲೈ ದೇವನೇ! ನಿನ್ನ ಹೊರತಾಗಿ ನಿನ್ನ ಸನ್ನಿಧಾನವಿಲ್ಲದಿರುವ ಯಾವ ಪದಾರ್ಥವೂ ಇರುವುದಿಲ್ಲ. ಸಕಲ ಪದಾರ್ಥಗಳಿಗೂ ಅಂತರ್ಯಾಮಿಯಾಗಿ ನೀನೇ ನಿಯಾಮಕನಾಗಿರುತ್ತೀಯೇ, ಹಿಂದಿನ, ಇಂದಿನ ಮುಂದಿನ ಯಾವುದೇ ಪದಾರ್ಥವಾಗಲಿ ಎಲ್ಲವೂ ಸಹ ನಿನ್ನ ಅಧೀನವೇ ಆಗಿರುತ್ತದೆ. ಇದರಲ್ಲಿ ಯಾವ ಸಂದೇಹವೂ ಇಲ್ಲ. ನೀನಲ್ಲದೇ ಯಾವುದೂ ಇಲ್ಲ.

ಇತ್ಯಾದಿಯಾಗಿ ರುದ್ರನೇ ಶ್ರೀಕೃಷ್ಣನನ್ನು ಕುರಿತು ಹೇಳಿರುವುದರಿಂದ ರುದ್ರನಿಗಿಂತಲೂ ಶ್ರೀಕೃಷ್ಣರೂಪಿಯಾದ ಪರಮಾತ್ಮನು ಸರ್ವೋತ್ತಮನೆಂಬ ವಿಷಯದಲ್ಲಿ ಯಾವ ಶಂಕೆಗೂ ಅವಕಾಶವೇ ಇಲ್ಲ.

**ಶಂಕಾ** :- ಕಾಶೀ ಕ್ಷೇತ್ರವು ಮೋಕ್ಷವನ್ನು ಕೊಡುವುದೆಂದು ಪ್ರಸಿದ್ಧಿಯು ಇದೆ. ಈ ಕಾಶೀಕ್ಷೇತ್ರವಾದರೋ ಶಿವನ ಕ್ಷೇತ್ರವೇ ಆಗಿದೆ. ಇದರಿಂದ ಶಿವನೇ ಮೋಕ್ಷಪ್ರದನಾಗಿರುವುದರಿಂದ ಸಕಲ ಮುಮುಕ್ಷುಗಳೂ ಕೂಡ ಶಿವನನ್ನೇ ಉಪಾಸಿಸಬೇಕು. ಇದರಿಂದ ಶಿವನೇ ಸರ್ವೋತ್ತಮ ದೇವತೆಯೆಂಬ ಶೈವರ ವಾದವನ್ನು ಅನುಸರಿಸಿ ಕೆಲವರು ಶಂಕಿಸುತ್ತಾರೆ.

**ಸಮಾಧಾನ** :- ಮೇಲಿನ ಶಂಕೆಯು ಅಪಾತತಃ ಮೇಲೆ ಮೇಲಿಂದ ತೋರಿಕೆಗೆ ಸರಿ ಎಂದು ಕಂಡುಬಂದರೂ ಸಹ ಒಳಹೊಕ್ಕು ವಿಚಾರಮಾಡಿದರೆ ಅಷ್ಟು ಮಾತ್ರದಿಂದ ಶಿವನಿಗೆ ಮೋಕ್ಷಪ್ರದತ್ವವು ಸ್ವತಂತ್ರವಾಗಿ ಸಿದ್ಧಿಸುವುದಿಲ್ಲ.

ಕಾಶೀಕ್ಷೇತ್ರದಲ್ಲಿ ಪ್ರಾಣಿಯು ಪ್ರಾಣತ್ಯಾಗ ಮಾಡುವ ವೇಳೆಯಲ್ಲಿ ಅಂದರೆ ಜಂತುಗಳ ಮರಣದ ಸಮಯದಲ್ಲಿ ರುದ್ರದೇವನು ತಾರಕ ಬ್ರಹ್ಮಮಂತ್ರವನ್ನು ಬಲದ ಕಿವಿಯಲ್ಲಿ ಉಪದೇಶಿಸುತ್ತಾನೆ. ಆದರಿಂದ ಸಾಯುವ ವ್ಯಕ್ತಿಯು ಅನೇಕ ವಿಧಗಳಾದ ಪಾಪಗಳಿಂದ ಬಿಡುಗಡೆ ಪಡೆಯುತ್ತಾನೆಂದು ಜಾಬಾಲ ಶ್ರುತಿವಚನವು ಹೇಳುತ್ತಲಿದೆ ?

**"ಜಂತೋಃ ಪ್ರಾಣೇಷೂತ್ಕ್ರಮಮಾಣೇಷು ರುದ್ರಸ್ತಾರಕಂ ಬ್ರಹ್ಮಮಂತ್ರಂ ವ್ಯಾಚಷ್ಟೇ।**
**ಯೇನಾಸಾವಮೃತೀಭೂತ್ವಾಮೋಕ್ಷೀಭವತಿ।।**

ಹೀಗೆ ಜಾಬಾಲಿಶ್ರುತಿಯು ತಿಳಿಸುತ್ತಲಿದೆ. ಅದರಂತೆ ರಾಮೋಪನಿಷತ್ತಿನಲ್ಲಿಯೂ ಸಹ ಶಿವನು ತಾರಕ ಬ್ರಹ್ಮನನ್ನು ಉಪದೇಶಮಾಡತಕ್ಕವನೆಂದು ಉಕ್ತವಾಗಿರುವುದರಿಂದ, ಕಾಶೀ ಕ್ಷೇತ್ರವು ಶಿವನಕ್ಷೇತ್ರವಾದರೂ, ಮೋಕ್ಷಜನಕವಾದ ಜ್ಞಾನಕ್ಕೆ ವಿಷಯನು ಶ್ರೀರಾಮನೇ ಹೊರತು, ಶಿವನಲ್ಲವಾದುದರಿಂದ ಶಿವನಿಗೆ ಸರ್ವೋತ್ತಮತ್ವವನ್ನು ಶಂಕಿಸಲು ಆಗುವುದಿಲ್ಲ.

ಯಾರು ತಾರಕ ಬ್ರಹ್ಮಮಂತ್ರಕ್ಕೆ ವಿಷಯನೋ ಅವನೇ ಮೋಕ್ಷಪ್ರದನು. ಅವನು ಶ್ರೀರಾಮನೇ ಹೊರತು ಶಿವನಲ್ಲವೆಂಬುದು ಸ್ಪಷ್ಟವಾದ ಸಂಗತಿಯಾಗಿದೆ. ಆ ಸಂದರ್ಭದಲ್ಲಿ ಬಂದಿರತಕ್ಕ ವಾಕ್ಯಗಳ ಪರಿಶೀಲನೆಯಿಂದಲೂ ಇದು ವ್ಯಕ್ತವಾಗುತ್ತದೆ. ಆ ರಾಮೋಪನಿಷತ್ತಿನ ವಾಕ್ಯಗಳು ಹೀಗೆ ಇವೆ.

**"ಶ್ರೀರಾಮಮಂತ್ರಂ ಕಾಶ್ಯಾಂವ್ಯಜಪತ ವೃಷಭಧ್ವಜಃ।**
**ಮನ್ವಂತರಸಹಸ್ರೈಸ್ತು ಜಪಹೋಮಾರ್ಚನಾದಿಭಿಃ।**
**ತತಃ ಪ್ರಸನ್ನೋಭಗವಾನ್ ಶ್ರೀರಾಮಃಪ್ರಾಹ ಶಂಕರಮ್।।**
**ವೃಣೀಷ್ವಯದಭೀಷ್ಟಂತೇದಾಸ್ಯಾಮಿ ಪರಮೇಶ್ವರ।। ಇತಿ।।**

**ತಾತ್ಪರ್ಯ** :- ವೃಷಭಧ್ವಜನಾದ, ಪಾರ್ವತೀ ಪತಿಯಾದ ಶಿವನು, ಕಾಶೀಕ್ಷೇತ್ರದಲ್ಲಿ ಶ್ರೀರಾಮಮಂತ್ರವನ್ನು ಸಹಸ್ರಮನ್ವಂತರಗಳ ಕಾಲ ಬಹಳ ಭಕ್ತಿಯಿಂದ, ಜಪ, ಹೋಮ, ಪೂಜಾದಿಗಳ ಮೂಲಕವಾಗಿ ಜಪಿಸಿ ಘೋರವಾದ ತಪಸ್ಸನ್ನು ಶ್ರೀರಾಮನನ್ನೇ ಧ್ಯಾನಿಸುತ್ತಾ ಆಚರಿಸಿದನು. ಶಿವನ ನಿಶ್ಚಲವಾದ ಭಕ್ತಿಗೆ ಮೆಚ್ಚಿದ ಶ್ರೀರಾಮನು ಸುಪ್ರಸನ್ನನಾಗಿ ಪ್ರತ್ಯಕ್ಷನಾದ ಶ್ರೀರಾಮನು, ಎಲೈ ಭಕ್ತವರೇಣ್ಯನಾದ ಶಿವನೇ ನಿನ್ನ ಭಕ್ತಿಗೆ ಮೆಚ್ಚಿದ್ದೇನೆ, ನಿನಗೆ ಏನುಬೇಕೋ ಕೇಳು ಆ ವರವನ್ನು ಕರುಣಿಸುತ್ತೇನೆಂದು ಹೇಳಿದನು. ಆಗ

**"ಸತ್ಯಾನಂದಚಿದಾತ್ಮಾನಂ ಪ್ರಾಹಶ್ರೀರಾಮಮೀಶ್ವರಃ। ಮಣಿ ಕರ್ಣೀಮಹಾಕ್ಷೇತ್ರೇ**
**ಗಂಗಾಯುವಿತಟೇ ಪುನಃ ಮ್ರಿಯಂತೇ ಯೇ ಪ್ರಭೋದೇಹಿ ಮುಕ್ತಿಂನಾತೋವರಾಂತರಮ್।। " ಇತಿ**

**ಅಭಿಪ್ರಾಯ** :- ತನ್ನ ಭಕ್ತಿಗೆ ಮೆಚ್ಚಿ ವರವನ್ನು ಕರುಣಿಸುತ್ತೇನೆಂದು ಅನುಗ್ರಹಿಸಿದ ಸತ್ಯರೂಪನೂ ಜ್ಞಾನರೂಪನೂ ಆನಂದರೂಪನೂ ಆದ ಶ್ರೀರಾಮನನ್ನು ಕುರಿತು ಶಿವನು ಎಲೈ ಸರ್ವಸ್ವಾಮಿಯಾದ ಶ್ರೀರಾಮನೇ ! ಶ್ರೀವಿಷ್ಣುವಿನ ಪಾದೋದಕವಾದ ಗಂಗೆಯು ನಿರಂತರದಲ್ಲೂ ಹರಿಯುತ್ತಿರುವುದರಿಂದ ಪರಮಪವಿತ್ರವಾದ ಮಣಿಕರ್ಣಿಕಾ ಕ್ಷೇತ್ರದ ದಡದಲ್ಲಿ ಯಾರು ಮರಣವನ್ನು ಹೊಂದುವರೋ ಅವರಿಗೆ ಮುಕ್ತಿಯನ್ನು ಕೊಡು. ಇದೊಂದು ವರವೇ ಹೊರತು ಬೇರೆ ಯಾವುದೂ ಬೇಡವೆಂದು ಪ್ರಾರ್ಥಿಸಿದನು.

ಆ ಶಿವನ ಪ್ರಾರ್ಥನೆಗೆ ಶ್ರೀರಾಮನು ಅನುಗ್ರಹಿಸಿದವರ ವಿವರವು ಈರೀತಿ ಇದೆ।।

**ಸಹೋವಾಚ ಶ್ರೀರಾಮಚಂದ್ರಃ**
**ಕ್ಷೇತ್ರೇಸ್ಮಿನ್ದೀಯೇ ದೇವೇಶ ಯತ್ರ ಕುತ್ರಾಪಿ ವಾ ಮೃತಾಃ।**
**ಕ್ರಿಮಿಕೀಟಾದಯೋಽಪ್ಯಾಶುಮುಕ್ತಾಸ್ಸಂತು ನಚಾನ್ಯಥಾ।। ಇತಿ।।**
**ಅವಿಮುಕ್ತೇತವಕ್ಷೇತ್ರೇ ಸರ್ವೇಷಾಂಮುಕ್ತಿಸಿದ್ಧಯೇ।**

**ಅಹಂಸನ್ನಿಹಿತಸ್ತತ್ರ ಶಿಲಾದಿಪ್ರತಿಮಾದಿಷು ।**
**ಮುಮುಕ್ಷೋಃ ದಕ್ಷಿಣೇಕರ್ಣೇ ಯಸ್ಯಕಸ್ಯಾಪಿವಾಸ್ತ್ವಯಮ್ ।।**
**ಉಪದೇಕ್ಷ್ಯಸಿ ಮನ್ಮಂತ್ರಂಸ ಮುಕ್ತೋಭವಿತಾಶಿವ ।। (ಇತಿ ರಾಮೋಪನಿಷತ್)**

**ಅಭಿಪ್ರಾಯ** :- ಶಿವನು ಪ್ರಾರ್ಥಿಸಿದಾಗ ಶ್ರೀರಾಮಚಂದ್ರದೇವನು ಪ್ರತ್ಯಕ್ಷನಾಗಿ ಇಂತೆಂದನು. ಎಲೈ ದೇವೇಶನಾದ ರುದ್ರನೇ, ನಿನ್ನ ಈ ಕ್ಷೇತ್ರದಲ್ಲಿ ಎಲ್ಲೆ ಆಗಲಿ ಯಾರೇ ಆಗಲಿ ಮೃತರಾದರೆ ಅವರು ಮುಕ್ತರಾಗುತ್ತಾರೆ. ಇದರಲ್ಲಿ ಅನ್ಯಥಾ ಇರುವುದಿಲ್ಲ. ನಿನ್ನ ಈ ಪವಿತ್ರವಾದ ಮಣಿಕರ್ಣಿಕಾಕ್ಷೇತ್ರದಲ್ಲಿ ಸಾಧನಸಂಪತ್ತುಗಳೆಲ್ಲಾ ಪೂರ್ಣಗೊಂಡು ಮುಕ್ತರಾಗಲು ಪ್ರತಿಬಂಧಕಗಳಾದ ಪಾಪಗಳ ಅತಿಶಯದಿಂದ ತೊಂದರೆಪಡುತ್ತಿರುವ ಮುಕ್ತಿಯೋಗ್ಯರಾದ ಸಕಲ ಸುಜೀವಿಗಳ ಮೋಕ್ಷಕ್ಕಾಗಿಯೇ ನಾನು ಈ ಕ್ಷೇತ್ರದಲ್ಲಿರುವ ಪ್ರತಿಮೆಗಳಲ್ಲಿ ಸನ್ನಿಹಿತನಾಗಿರುತ್ತೇನೆ. ಇಂತಹ ನನ್ನ ಸನ್ನಿಧಾನವಿರುವ ಶಿಲಾದಿ ಪ್ರತಿಮೆಗಳ ಮಹತ್ವವನ್ನು ಅರಿತು ನನ್ನನ್ನು ನಿರಂತರವಲ್ಲೂ ಧ್ಯಾನಮಾಡುವ ಮುಮುಕ್ಷುಗಳಾದ ಸಾತ್ವಿಕರಾದ ಯಾವ ಜೀವರಿಗೆ ನೀನು ಆ ಯೋಗ್ಯಜೀವನ ಬಲದ ಕಿವಿಯಲ್ಲಿ ಅಂತಿಮ ಕಾಲದಲ್ಲಿ ನನ್ನ ಮಂತ್ರವನ್ನು ಉಪದೇಶಿಸುತ್ತೀಯೋ ಆ ಜೀವನು ಇತರ ಸಕಲಸಾಧನ ಸಂಪತ್ತನ್ನೆಲ್ಲಾ ಆಚರಿಸಿ ಕಡೆಯದಾಗಿ ಪ್ರತಿಬಂಧಕಗಳಾದ ಪಾಪಗಳನ್ನು ಸಹ ನಿನ್ನ ಉಪದೇಶದಿಂದ ಪರಿಹರಿಸಿಕೊಂಡು ಮುಕ್ತನಾಗುತ್ತಾನೆ।। ಎಂಬುದಾಗಿ, ಶಿವನಿಗೆ ತಾರಕಬ್ರಹ್ಮ ಮಂತ್ರದ ಉಪದೇಶಕತ್ವವು ಪ್ರಾಪ್ತವಾಗಿದೆ. ಆ ಮಂತ್ರಕ್ಕೆ ವಿಷಯನಾದವನು ಶ್ರೀರಾಮನೇ ಆಗಿದ್ದಾನೆ. ಅದನ್ನು ಉಪದೇಶಮಾತ್ರಕ್ಕೆ ನು ರುದ್ರನಾಗಿದ್ದಾನೆ. ಇದರಿಂದಲೂ ಸಹ ಶ್ರೀರಾಮನಿಗೆ ಮೋಕ್ಷದಾತೃತ್ವವೆಂಬ ಮಹಿಮೆಯು ಉಕ್ತವಾಗಿರುವುದರಿಂದ ಶ್ರೀರಾಮನೇ ಸರ್ವೋತ್ತಮದೇವತೆಯೆಂಬುದು ಸಿದ್ಧವಾಗುತ್ತದೆ. ಅಮೃತಮಥನದ ಕಥೆಯಿಂದಲೂ ಶ್ರೀಹರಿಯು ಸರ್ವೋತ್ತಮತ್ವವು ಸ್ಪಷ್ಟವಾಗುತ್ತಿದೆ. ಅಮೃತಮಥನವನ್ನು ಕ್ಷೀರಸಮುದ್ರದಲ್ಲಿ ದೇವತೆಗಳೂ ದೈತ್ಯರೂ ನಡೆಸಿದರು. ಆಗ ಕಾಲಕೂಟ ವಿಷವು ಹುಟ್ಟಿತು. ಆ ವಿಷದ ಪಾನವನ್ನು ಶಿವನು ಸಮಗ್ರವಾಗಿ ಮಾಡಲಿಲ್ಲ. ಪ್ರಧಾನ ವಾಯುದೇವನು ಪರಮಾತ್ಮನ ಸೂಚನೆಯಂತೆ ಸಮಗ್ರವಾದ ಕಾಲಕೂಟ ವಿಷವನ್ನು ಪಾನಮಾಡಿದನು. ಆಮೇಲೆ ಅದರ ಸ್ವಲ್ಪ ಭಾಗವು ಅಂದರೆ ಅಲ್ಪವಾದ ಶೇಷಭಾಗವು ವಾಯುದೇವನ ಕೈಗೆ ಅಂಟಿಕೊಂಡಿತ್ತು. ಅದನ್ನು ವಾಯುವು ಚೆನ್ನಾಗಿ ತಿಕ್ಕಿ ಅದರ ಬಲವನ್ನು ಕಮ್ಮಿಮಾಡಿ, ಅದರ ಸ್ವಲ್ಪ ಭಾಗವನ್ನು ರುದ್ರನಿಗೆ ಕೊಟ್ಟನು. ಆಗ ರುದ್ರನು ಆ ಪ್ರಬಲ ಶಕ್ತಿರಹಿತವಾದ ವಾಯುದೇವನಿಂದ ಕೊಡಲ್ಪಟ್ಟ ಅತ್ಯಲ್ಪವಾದ ವಿಷಶೇಷವನ್ನು ಪಾನಮಾಡಿದನು. ಈ ರೀತಿ ಶಿವನು ಪಾನಮಾಡಿದುದೂ ಸಹ ತನ್ನ ಶಕ್ತಿಯಿಂದ ಅಲ್ಲ. ಶ್ರೀರಾಮಮಂತ್ರದ ಪ್ರಭಾವ ಮಹಿಮೆಯಿಂದಲೇ ಎಂಬುದನ್ನು ಬ್ರಹ್ಮಾಂಡ ಪುರಾಣ ವಚನವು ತಿಳಿಸುತ್ತಲಿದೆ. ಆ ವಚನವು ಹೀಗೆ ಇದೆ.

**"ತಂ ದೃಷ್ಟ್ವಾ ಘೋರಸಂಕಾಶಂ ಪ್ರಾದುರ್ಭೂತಂ ಮಹಾವಿಷಂ ।**
**ಧ್ಯಾತ್ವಾ ನಾರಾಯಣಂ ದೇವಂಹೃದಯೇ ಗರುಡಧ್ವಜಮ್ ।। (ಇತಿ ಬ್ರಹ್ಮಾಂಡೇ)**

**ತಾತ್ಪರ್ಯ** :- ಅಮೃತಕ್ಕಾಗಿ ಕ್ಷೀರಸಮುದ್ರವನ್ನು ಮಂದರ ಪರ್ವತದಿಂದ ದೇವಾಸುರರು ಮಥಿಸಿದಾಗ ಭಯಂಕರವಾದ ಕಾಲಕೂಟ ವಿಷವು ಹುಟ್ಟಿತು.

ಆಗ ತನ್ನ ಹೃದಯದಲ್ಲಿರುವ ನಿಯಾಮಕನಾದ ನಾರಾಯಣನನ್ನು ಶಿವನು ಧ್ಯಾನಮಾಡಿದ ಮೇಲೆ, ವಾಯು ದೇವನಿಂದ ಪೂರ್ತಿ ವಿಷಪಾನವು ಮಾಡಲ್ಪಟ್ಟು ತನಗೆ ಕೊಟ್ಟ ಅಲ್ಪಭಾಗವನ್ನು ಪಾನಮಾಡಿದನು. ಶಿವನು ನಾರಾಯಣ ನನ್ನು ಧ್ಯಾನಮಾಡಿದ ಪ್ರಭಾವದಿಂದಲೇ ಅಲ್ಪವಾದ ವಿಷದ ಪಾನಕ್ಕೆ ಶಕ್ತಿಯು ಬಂದು ಪಾನಮಾಡಿದನೆಂಬುದು ಇದರ ತಾತ್ಪರ್ಯವಾಗಿದೆ. ಗರುಡ ಪುರಾಣದಲ್ಲಿಯೂ ವಚನವೂ ಸಹ ಈ ರೀತಿ ಇದೆ. ಪಾರ್ವತಿಯನ್ನು ಕುರಿತು ಶಿವನು ಹೀಗೆ ಹೇಳಿದ್ದಾನೆ.

**ಅಪ್ರಕಾಶಮಿದಂದೇವಿ ಗುಹ್ಯಾದ್ಗುಹ್ಯತರಂಪದಮ್ ।**
**ಪುರಾಹಮಬ್ಧಿಮಥನೇ ಪತಗೇಂದ್ರ ವಿಷಾಪಹಮ್ ।**
**ಅಪದ್ಮಂಗರಲಂ ಘೋರಂ ಅಭುಂಜಮಮೃತಂ ಯಥಾ ।। (ಇತಿ ಗರುಡ ಪುರಾಣ)**

ಮತ್ತೊಂದು ಪುರಾಣದಲ್ಲೂ ಸಹ ಪರಮಾತ್ಮನ ಅನುಗ್ರಹದಿಂದಲೇ ಶಿವನು ವಿಷಪಾನ ಮಾಡಿದ್ದಾನೆಂಬುದು ಉಕ್ತವಾಗಿದೆ.

**"ಯೇನ ಜೀರ್ಣಂ ಚ ಗರಲಂ ಕಂಠಸ್ಥಂ ಚಕಪಾಲಿನಃ ।**
**ಅಂತರಾತ್ಮಧ್ವತಂತಸ್ಯ ಹೃದಯೇ ಗರುಡಧ್ವಜಮ್ ।। (ಇತಿ ಪುರಾಣಾಂತರ ವಚನ ।**

**ಅಭಿಪ್ರಾಯ** :- ಕಪಾಲಿಯಾದ ಶಿವನ ಕುತ್ತಿಗೆಯಲ್ಲಿ ಅವನು ಪಾನಮಾಡಿದ ವಿಷವು ಅಷ್ಟಕ್ಕೆ ಜೀರ್ಣವಾಗಿಸಿಂತಿದ್ದೂ ಸಹ ಶಿವನ ಹೃದಯ ಗುಹೆಯಲ್ಲಿರುವ ಗರುಡಧ್ವಜನ ಪ್ರಭಾವದಿಂದಲೇ ಆಗಿದೆಯೆಂದು ಪುರಾಣಾಂತರದ ಮಾತಿನಿಂದ ವ್ಯಕ್ತವಾಗಿದೆ.

ಮಂತ್ರಶಾಸ್ತ್ರದಲ್ಲೂ ಸಹ ಇದು ಪ್ರಸ್ತಾಪಿಸಲ್ಪಟ್ಟಿದೆ.

**"ಅಚ್ಯುತಾನಂತ ಗೋವಿಂದಮಂತ್ರತೋಽಚ್ಯುಕುಭಂಪರಮ್ ।**
**ಓಂ ನಮಃ ಸಂಪುಟೀಕೃತ್ಯಜಪನ್ ವಿರಪಧರೋಽಹರತ್" ।। ಇತಿ (ಮಂತ್ರಶಾಸ್ತ್ರವಚನ)**

**ಅಭಿಪ್ರಾಯ** :- ಶಿವನು, ಅಚ್ಯುತ, ಅನಂತ, ಗೋವಿಂದ ಎಂಬ ವಿಷ್ಣುವಿನ ಮೂರು ನಾಮಗಳನ್ನು ಭಕ್ತಿಯಿಂದ ಓಂ ನಮಃ ಎಂಬುದಾಗಿ ಸಂಪುಟೀಕಾರವಾಗಿ ನೀರಿನಲ್ಲಿ ನಿಂತು ಜಪಿಸುವವನಾಗಿ ವಿಷವನ್ನು ತನ್ನ ಕುತ್ತಿಗೆಯಲ್ಲಿ ಧರಿಸಿದ ಬಾಧೆಯನ್ನು ಪರಿಹರಿಸಿಕೊಂಡನು.

ಶಿವನು ಜಪಿಸಿದ ಸಂಪುಟೀಕೃತವಾದ ಮಂತ್ರವು ಈ ರೀತಿ ಇದೆ.

ಓಂ ಅಚ್ಯುತಾಯನಮಃ ಓಂ ಓಂ ಅನಂತಾಯನಮಃ, ಓಂ

ಓಂ ಗೋವಿಂದಾಯನಮಃ ಓಂಬೇರೆ ಪುರಾಣದ ವಚನದಿಂದಲೂ ಕೂಡ, ಶಿವನು ಮಾಡಿದ ಈ ವಿಷಪಾನದ ವಿಚಾರವು ಗೊತ್ತಾಗುತ್ತಲಿದೆ.

**"ನಾಮತ್ರಯ ಪ್ರಭಾವಾಚ್ಚ ವಿಷ್ಣೋಃಸರ್ವಗತಸ್ಯವೈ ।**
**ವಿಷಂತದಭವಜ್ಜೀರ್ಣಂ ಲೋಕಸಂಹಾರಕಾರಣಮ್ ।।"ಇತಿ (ಪುರಾಣಾಂತರವಚನಮ್)**

**ಅಭಿಪ್ರಾಯ** :- ಸರ್ವಾಂತರ್ಯಾಮಿಯಾದ ವಿಷ್ಣುವಿನ, ಓಂ ಅಚ್ಯುತಾಯನಮ ಓಂ, ಓಂ ಅನಂತಾಯನಮಃ ಓಂ ಓಂ ಗೋವಿಂದಾಯನಮಃ ಓಂ ಎಂಬ ಮೂರು ನಾಮಗಳ ಪವಿತ್ರ ಪ್ರಾಭಾವದಿಂದ ಶಿವನು ಪಾನಮಾಡಿದ ಲೋಕವನ್ನು ಸಂಹರಿಸುವ ಭಯಂಕರವಾದ ವಿಷವು ಜೀರ್ಣವಾಯಿತು. ಕುತ್ತಿಗೆಯಲ್ಲಿ ನಿಂತು ಶಕ್ತಿ ರಹಿತವಾಯಿತು. ಮತ್ತು ಪ್ರಬಲವಾದ ವಿಷದ ಪಾನವನ್ನು ಪೂರ್ತಿಯಾಗಿ ಪಾನಮಾಡಿದವನು ಪ್ರಧಾನವಾಯು ದೇವನೆಂದೂ ಪಾನಮಾಡುವ ಕಾಲದಲ್ಲಿ ವಾಯುವಿನ ಕೈಯಲ್ಲಿ ಶೇಷವಾಗಿ ಎಲ್ಲೋ ಸ್ವಲ್ಪವಾಗಿ ಅಂಟಿಕೊಂಡಿದ್ದುದನ್ನು ವಾಯುದೇವನು ಚೆನ್ನಾಗಿ ತಿಕ್ಕಿ ಅದರ ಬಲವನ್ನು ಶಕ್ತಿಯನ್ನು ಕಮ್ಮಿಮಾಡಿ, ಆ ಅತ್ಯಲ್ಪ ಭಾಗವನ್ನು ಪಾನಮಾಡಲು ಶಿವನಿಗೆ ಕೊಟ್ಟನು ಎಂಬ ಸಂಗತಿಯನ್ನು ಶ್ರುತಿವಚನವು ತಿಳಿಸುತ್ತಲಿದೆ. ಆ ಶ್ರುತಿವಚನವು ಹೀಗಿದೆ.

**ವಾಯುರಸ್ಮಾಉಪಾಮಂಥತ್ ಪಿನಷ್ಟಿಸ್ಮಾಕುನನ್ನಮಾ ।**
**ಕೇಶೀವಿಷಸ್ಯಪಾತ್ರೇಣ ಯದ್ರುದ್ರೇಣಾಪಿಬತ್ಸಹಾ ।। ಇತಿಶ್ರುತಿಃ ।।**

**ಅರ್ಥ** :- ಕೇಶೀ = ಪ್ರಶಸ್ತವಾದ ಕೇಶವನ್ನುಳ್ಳ, ಸುಖರೂಪನಾದ ನಾರಾಯಣನನ್ನು ಸ್ವಾಮಿಯಾಗಿ ಉಳ್ಳವನಾದ, ಕುನನ್ನಮಾ = ಪ್ರಧಾನ ವಾಯುದೇವನು, ಕುತ್ಸಿತರಾದ ಕಲ್ಯಾದಿ ದೈತ್ಯರನ್ನು ವಿಶೇಷವಾಗಿ ಅಂಧತಮಸ್ಸಿನಲ್ಲಿ ಮುಳುಗಿಸುವವನಾದುದರಿಂದ ಕುನನ್ನಮಾ ಎಂದು ಕರೆಯಲ್ಪಡತಕ್ಕ ಪ್ರಧಾನ ವಾಯುದೇವರು ವಿಷಸ್ಯ = ಹಾಲಾಹಲವೆಂಬ ಕಾಲಕೂಟವಿಷದ, ಪಾತ್ರೇಣ = ಸುವರ್ಣಪಾತ್ರದಿಂದ ತುಂಬಿಸಲ್ಪಟ್ಟ ಯಾವ ವಿಷವು ಇತ್ತೋ ಅದನ್ನು, ಆ ಪಾತ್ರೆಯಿಂದ ರುದ್ರೇಣ ಸಹ = ರುದ್ರನೊಡನೆ, ಅಪಿಬತ್ = ಕುಡಿದರು. ಕುಡಿದ ನಂತರ, ಉಳಿದ ಸ್ವಲ್ಪ ವಿಷದ ಭಾಗವನ್ನು, ಅಸ್ಮೈ (ಅ ರುದ್ರನಿಗಾಗಿ = ಉಪಾಮಂಥತ್. ಅಮಥ್ನಾತ್ = ಕುಡಿಯಲು ಆಗುವಂತೆ ಚೆನ್ನಾಗಿತಿಕ್ಕಿ ಅದರ ತೀಕ್ಷ್ಣತೆಯನ್ನು ಕಮ್ಮಿ ಮಾಡಿದರು. ಅಂತಹ ಅಲ್ಪ ಭಾಗವನ್ನು ರುದ್ರದೇವನು ಕುಡಿದನು.

ಈ ಮೇಲೆ ಕಂಡ ಶ್ರುತಿಯಿಂದ ಕಾಲಕೂಟ ವಿಷವನ್ನು ಪೂರ್ತಿಪಾನ ಮಾಡಿದವನು ಪ್ರಧಾನವಾಯುದೇವನೆಂದೂ, ಪೂರ್ತಿಪಾನ ಮಾಡಿದ ನಂತರ ಶೇಷವಾಗಿ ಉಳಿದಿದ್ದ ಅತ್ಯಲ್ಪ ಭಾಗವನ್ನು ಚೆನ್ನಾಗಿ ಮಥನಮಾಡಿ ಅದರ ಶಕ್ತಿಯನ್ನು ಕುಂದಿಸಿ, ಆ ಭಾಗವನ್ನು ರುದ್ರನಿಗೆ ಕೊಟ್ಟನು. ರುದ್ರನು ಅದನ್ನು ಕುಡಿದನು ಎಂಬುದಾಗಿ ಶ್ರುತಿ ವಚನವು ತಿಳಿಸುತ್ತಲಿದೆ. ತ್ರಿಪುರಾಸುರಸಂಹಾರದ ಪ್ರಸಕ್ತಿಯೂ ಸಹ ರುದ್ರನಿಗೆ ಸರ್ವೋತ್ಕರ್ಷವನ್ನು ಸಮರ್ಥಿಸುವುದಿಲ್ಲ.

''ಅಹಂವೃಣೇ ಅಹಮೇವಪಶೂನಾಮಧಿಪತಿರಸಾನಿ'' ಎಂಬ ಶ್ರುತಿಯು ಶಿವನಿಗೆ ಪಶುಪತಿತ್ವವು ಬಂದಿರುವುದು ವಿಷ್ಣುವಿನ ವರದಿಂದ ಎಂಬುದಾಗಿ ಹೇಳುತ್ತಲಿದೆ.

ಕೂರ್ಮ ಪುರಾಣದಲ್ಲಿ ಶಿವನನ್ನು ಕುರಿತು ವಿಷ್ಣುವು ಈರೀತಿ ಹೇಳಿದ್ದಾನೆ. ಎಲೈ ಶಿವನೇ, ನೀನು ನನ್ನ ಶರಣಾಗತನಾಗಿ ಭಯರಹಿತನಾಗಿದ್ದೀಯೆ. ನಾನೇ ದೇವಪಶುರೂಪವನ್ನು ತಾಳಿ ತ್ರಿಪುರಾಸುರರನ್ನು ಸಂಹರಿಸಿದ್ದೇನೆ ಎಂದು ವಿಷ್ಣುವು ಶಿವನನ್ನು ಕುರಿತು ಹೇಳಿರುವುದಾಗಿ ಕೂರ್ಮಪುರಾಣವು ಹೇಳುತ್ತಲಿದೆ.

**''ತತೋಽಮಾಂಶರಣಂಗತ್ವಾತ್ವಮೇದೇ ವಿಭಯೋಽಭವಾನ್ ।**
**ಅಹಂ ದೇವಪಶೋಽಭೂತ್ವಾಪುರಸ್ತಾನಘಾತಯಮ್ ।। '' (ಇತಿಕೂರ್ಮಪುರಾಣ)**

ಮಹಾಭಾರತದಲ್ಲಿ ಕರ್ಣಪರ್ವದಲ್ಲಿ ನಾರಾಯಣನೇ ರುದ್ರಾಂತರ್ಯಾಮಿಯಾಗಿರುವುದರಿಂದ ರುದ್ರನು ತನ್ನೊಳಗೆ ನಿಯಾಮಕನಾಗಿರುವ ವಿಷ್ಣುವಿನ ಪ್ರಭಾವದಿಂದಲೇ ಧನುಸ್ಸಿನ ವೇಗವನ್ನು ಸಹಿಸಿದನೆಂದು ಉಕ್ತವಾಗಿದೆ.

**''ವಿಷ್ಣುರಾತ್ಮಾಭಗವತೋ ರುದ್ರಸ್ಯಾಮಿತತೇಜಸಃ ।**
**ತಸ್ಮಾದ್ಧನುರ್ಜ್ಯಾಸಂಸ್ಪರ್ಶಂಸವಿಷೇಹೇ ಮಹೇಶ್ವರಃ ।ಎಂದು ಮಹಾಭಾರತದ ಕರ್ಣಪರ್ವದವಚನವು**

ಮತ್ತೊಂದು ಸ್ಮೃತಿಯೂ ಸಹ ''ಅದ್ವಿತೀಯವಾದ ತಾರಕಬ್ರಹ್ಮಮಂತ್ರವನ್ನು ಶಿವನು ಜಪಿಸಿ ಸಿದ್ಧಿಯನ್ನು ಪಡೆದಿದ್ದಾನೆ ಇದು ಪರಮಸತ್ಯವು ಎಂದು ತಿಳಿಸುತ್ತಲಿದೆ. ಆಸ್ಮೃತಿಯ ವಚನವು ಹೀಗೆ ಇದೆ.

**ಅದ್ವಿತೀಯಂ ಯಥಾಮಂತ್ರಂ ತಾರಕಂ ಬ್ರಹ್ಮನಾಮಕಮ್ ।**
**ಜಪಿತ್ವಾಸಿದ್ಧಿಮಾಪ್ನೋತಿ ಸತ್ಯಂ ಸತ್ಯಂವದಾಮ್ಯಹಮ್ ।।**
**ಇಮಮೇವಜಪನ್ ಮಂತ್ರಂತ್ರ್ಯಂಬಕಸ್ತ್ರಿಪುರಾಂತಕಃ ।। ಇತಿಸ್ಮೃತಿವಚನಮ್ ।।**

ದಕ್ಷ ಪ್ರಜಾಪತಿಯು ಆಚರಿಸಿದ ಯಾಗವನ್ನು ಶಿವನ ಅವತಾರಭೂತನಾದ ವೀರಭದ್ರನು ನಾಶಪಡಿಸಿದಾಗ ಆ ವೀರಭದ್ರನನ್ನು ಕಂಡು ಭಯದಿಂದ ಕೂಡಿದ ವಿಷ್ಣುವು ತನ್ನ ನಿಜರೂಪವನ್ನು ಮರೆಮಾಚಿಕೊಂಡು ಜಿಂಕೆಯ ರೂಪವನ್ನು ಧರಿಸಿ ವೇಗವಾಗಿ ಓಡಿಹೋದನೆಂದು ವೀರಭದ್ರನಿಂದ ವಿಷ್ಣುವು ಪರಾಜಿತನಾದನೆಂದೂ ತಾಮಸ ಪುರಾಣದಲ್ಲಿ ಹೇಳಲಾಗಿದೆ. ಇದು ಸರ್ವಥಾ ಸುಳ್ಳಾದ ವಿಚಾರವಾಗಿದೆ. ಏತಕ್ಕೆಂದರೇ ದಕ್ಷನಯಾಗಕ್ಕೆ ವಿಷ್ಣುವಾಗಲಿ, ಚತುರ್ಮುಖ ಬ್ರಹ್ಮನಾಗಲಿ ಇಬ್ಬರೂ ಬಂದೇ ಇರಲಿಲ್ಲವೆಂದು ಭಾಗವತದಲ್ಲಿ ಉಕ್ತವಾಗಿದೆ. ಆದಕಾರಣ ಭಾಗವತಕ್ಕೆ ವಿರುದ್ಧವಾದ ಕಥೆಯಾದ್ದರಿಂದ ತಾಮಸ ಪುರಾಣದ ಆ ಕಥೆಯು ಪ್ರಮಾಣವಾಗಿಲ್ಲ. ನಿಜವಾದ ಕಥೆಯಲ್ಲ. ಅದು ಕಲ್ಪಿತವಾದ ಕಥೆಯಾಗಿದೆ.

**"ಉಪಲಬ್ಧ ಪುರಾವೇತೌ ಭಗವಾನಬ್ಜ ಸಂಭವಃ ।**
**ನಾರಾಯಣಶ್ಚ ವಿಶ್ವಾತ್ಮಾನ ತಮಧ್ವರಮೀಯತುಃ (ಇತಿ ಭಾಗವತಮ್)**

ಎಂಬುದಾಗಿ ದಕ್ಷಾಧ್ವರಕ್ಕೆ ವಿಷ್ಣುವೂ ಚತುರ್ಮುಖನೂ ಬಂದಿರಲಿಲ್ಲವೆಂದು ಭಾಗವತದಲ್ಲಿ ಹೇಳಲಾಗಿದೆ. ಕೆಲವು ಕಡೆ ಆ ಯಾಗಕ್ಕೆ ವಿಷ್ಣುವೂ ಬ್ರಹ್ಮನೂ ಬಂದಿದ್ದಾರೆಂದು ಹೇಳತಕ್ಕ ವಾಕ್ಯಗಳಿದ್ದರೂ ಸಹ ಅದು ಭಾಗವತಕ್ಕೆ ವಿರುದ್ಧವಾಗಿರುವುದರಿಂದ ಅನಾದರಣೀಯವಾಗಿದೆ. ಸ್ಕಾಂದಪುರಾಣದಲ್ಲಿ ಕಾಶೀಖಂಡದಲ್ಲಿ "ಶ್ರೀ ವೇದವ್ಯಾಸರು ಎರಡು ಭುಜಗಳನ್ನು ಎತ್ತಿಕೊಂಡು ವೇದಶಾಸ್ತ್ರಗಳಿಗೆ ಶ್ರೇಷ್ಠತ್ವವನ್ನು, ವಿಷ್ಣುವಿಗೆ ಸರ್ವೋತ್ತಮತ್ವವನ್ನು ಸಕಲಋಷಿಗಳ ಸಭಾ ಮಧ್ಯದಲ್ಲಿ ಘೋಷಣೆಮಾಡಿದರೆಂದೂ, ಆಗ ಶ್ರೀ ವೇದವ್ಯಾಸರ ಭುಜವು ಸ್ತಬ್ಧವಾಯಿತೆಂದೂ ಪ್ರತಿಪಾದಿಸಲ್ಪಟ್ಟಿದೆ.

ಆ ಸ್ಕಾಂದ ಪುರಾಣದಲ್ಲಿನ ಕಾಶೀಖಂಡದ ವಚನವು ಹೀಗೆ ಇದೆ.

**"ಸತ್ಯಂ ಸತ್ಯಂ ಪುನಃ ಸತ್ಯಂ ಭುಜಮುದ್ಧೃತ್ಯಚೋಚ್ಯತೇ ।**
**ವೇದಶಾಸ್ತ್ರಾತ್ಪರಂನಾಸ್ತಿ ನದೈವಂ ಕೇಶವಾತ್ಪರಮ್ ।।ಇತಿ ಸ್ಕಾಂದೇಕಾಶೀಖಂಡವಚನಮ್ ।**

**ಅಭಿಪ್ರಾಯ** :- ವೇದಶಾಸ್ತ್ರಕ್ಕಿಂತಲೂ ಉತ್ತಮವಾದುದು ಬೇರೆ ಯಾವುದೂ ಇಲ್ಲ. ಸರ್ವೋತ್ತಮನಾದ ಕೇಶವ ನಿಗಿಂತಲೂ ಉತ್ತಮನಾದವನು ಬೇರೆ ಯಾರೂ ಇರುವುದಿಲ್ಲ ಎಂಬುದನ್ನು ನಾನು ಎರಡೂ ಭುಜಗಳನ್ನು ಎತ್ತಿಕೊಂಡು ಘೋಷಣೆ ಮಾಡುತ್ತಿದ್ದೇನೆ. ಇದು ಸತ್ಯ, ಇದು ಸತ್ಯ, ಮತ್ತೂ ಸತ್ಯವೆಂದು ಹೇಳುತ್ತೇನೆ. "ಎಂಬುದಾಗಿ ಈ ವೇದ ವ್ಯಾಸರು ಸಕಲ ಋಷಿಗಳ ಸಭಾಮಧ್ಯದಲ್ಲಿ ಎರಡೂ ಭುಜಗಳನ್ನೆತ್ತಿಕೊಂಡು ಘೋಷಣೆ ಮಾಡಿದರು. ಇದಕ್ಕೆ ವಿರುದ್ಧವಾಗಿ ಹೇಳಲಾಗಿರುವ ಭುಜದ ಸ್ತಬ್ಧತೆಯನ್ನು ಹೇಳುವ ಸ್ಕಾಂದಪುರಾಣದಲ್ಲಿನ ಕಾಶೀಖಂಡವು ಕೇವಲ ತಾಮಸ ಪುರಾಣಭಾಗವಾಗಿರುವುದರಿಂದ ಅದು ವೇದಕ್ಕೆ ವಿರುದ್ಧವಾಗಿರುವ ಪ್ರಯುಕ್ತ ವೈದಿಕರು ಅದನ್ನು ಪರಿಗ್ರಹಿಸಬಾರದು.

**"ಅವೈದಿಕತ್ರಯಂ ಜ್ಞಾನಂವಾಸಿಷ್ಠಂ ಸೂತಸಂಹಿತಾ । ಕಾಶೀಖಂಡಂ**
**ಪರಿತ್ಯಾಜ್ಯಂ ವೈದಿಕಸ್ಯ ವಿರೋಧತಃ ।। " ಇತಿ**

**ತಾತ್ಪರ್ಯ** :- ವಾಶಿಷ್ಠ, ಸೂತಸಂಹಿತಾ, ಕಾಶೀಖಂಡ ಇವು ಮೂರೂ ಸಹವೇದಕ್ಕೆ ವಿರುದ್ಧವಾದ ವಿಚಾರಗಳಿಂದ ಕೂಡಿವೆ. ಇವು ಮೂರೂ ಅವೈದಿಕಗಳು. ಇವುಗಳಿಂದ ತಿಳಿದುಬರುವ ವಿಚಾರಗಳು ಪ್ರಾಮಾಣಿಕಗಳಲ್ಲ.

ತೈತ್ತಿರೀಯ ಆರಣ್ಯಕದ ಪ್ರಶ್ನಭಾಗದಲ್ಲಿರತಕ್ಕ ವಾಕ್ಯದಿಂದ ಸಹೋವಾಚವ್ಯಾಸಃ ಪಾರಾಶರ್ಯಃ। (ತೈ. ಆ. ಪ್ರ. ಪಾ. ೧. ಅನು ೯) ಎಂಬುದಾಗಿರುವುದರಿಂದ ವೇದವ್ಯಾಸರ ವಚನಗಳಿಗೆ ಪ್ರಾಮಾಣ್ಯವು ಗೊತ್ತಾಗುತ್ತಲಿದೆ. ಸಕಲ ವೇದವಚನಗಳೂ ಶ್ರೀಮನ್ನಾರಾಯಣನಿಗೆ ಸರ್ವೋತ್ತಮತ್ವವನ್ನು ಸಮರ್ಥಿಸುತ್ತಿರುವುದರಿಂದ ಅದಕ್ಕೆ ವಿರುದ್ಧವಾದ ತಾಮಸ ಪುರಾಣದ ಕಾಶೀಖಂಡದ ವಚನವು ಅಪ್ರಮಾಣವಾಗಿದೆ.

ಅಮೃತಕ್ಕಾಗಿ ಕ್ಷೀರಸಮುದ್ರವನ್ನು ಕಡೆದಾಗ, ದೇವತೆಗಳ ಹಿತವನ್ನು ರಕ್ಷಿಸುವುದಕ್ಕಾಗಿಯೇ ಪುರುಷೋತ್ತಮನಾದ ಶ್ರೀಮನ್ನಾರಾಯಣನು ಮೋಹಿನೀ ರೂಪವನ್ನು ಸ್ವೀಕರಿಸಿದನು. ದೇವತೆಗಳಿಗೆ ಮಾತ್ರ ಅಮೃತವನ್ನು ಹಂಚಿದ ಕಾರ್ಯವು ಮುಗಿದ ನಂತರ, ಅತ್ಯಾಶ್ಚರ್ಯಕರವಾದ ಮೋಹಿನೀ ರೂಪವನ್ನು, ನೋಡಿ, ಚಕಿತಗೊಂಡು, ರುದ್ರದೇವನು ವಿಷ್ಣುವನ್ನು ಕುರಿತು ನನ್ನ ಸ್ವಾಮಿಯಾದ ವಿಷ್ಣುವೇ ! ನನಗಾಗಿ ಆ ಮೋಹಿನೀ ರೂಪವನ್ನು ದಯಮಾಡಿ ಮತ್ತೊಂದಾವರ್ತಿ ತೋರಿಸು ಎಂದು ಪ್ರಾರ್ಥಿಸಿದನು. ಭಕ್ತನಾದ ರುದ್ರನ ಪ್ರಾರ್ಥನೆಯಂತೆ ವಿಷ್ಣುವು ರುದ್ರನಿಗೆ ಮೋಹಿನೀರೂಪವನ್ನು ತೋರಿಸಿದಾಗ, ರುದ್ರನು ತನ್ನ ಸಮೀಪದಲ್ಲಿಯೇ ಇರುವ ಪಾರ್ವತೀದೇವಿಯನ್ನು ಬಿಟ್ಟು, ಮೋಹಪರವಶನಾಗಿ ಕಾಮೋದ್ರೇಕದಿಂದ ಹೊರಗೆ ಜಾರಿಬಿದ್ದ ವೀರ್ಯದ ಪ್ರವಾಹದಿಂದ ತನ್ನ ದಾರಿಯನ್ನು ನೆನೆಸುತ್ತಿರುವವನಾಗಿ, ಆ ಮೋಹಿನೀ ವೇಷವನ್ನೇ ಹಿಂಬಾಲಿಸಿದನೆಂದು ಪುರಾಣಗಳಲ್ಲಿ ಕೇಳಿ ಬರುತ್ತಲಿದೆ. ಇದರಿಂದ ವಿಷ್ಣುವಿಗೆ ಯಾವ ನ್ಯೂನತೆಯು ಇರುವುದಿಲ್ಲ. ಅಸುರ ಜನರ ಮೋಹಕ್ಕಾಗಿ, ಭಕ್ತರಾದ ದೇವತೆಗಳ ಕಾರ್ಯಕ್ಕಾಗಿ ಸ್ತ್ರೀರೂಪದಂತೆ, ಮತ್ಸ್ಯರೂಪವನ್ನು, ವರಾಹರೂಪವನ್ನು, ಕೂರ್ಮರೂಪವನ್ನು ಧರಿಸಿ ನರಸಿಂಹ ರೂಪವನ್ನೂ ಆಯಾ ಸಂದರ್ಭಕ್ಕೆ ತಕ್ಕಂತೆ ಧರಿಸಿರುವುದು ಪ್ರಸಿದ್ಧವೇ ಆಗಿದೆ.

ತಾಮಸಪುರಾಣದಲ್ಲಿ ಶ್ರೀನೃಸಿಂಹದೇವರ ವಿಷಯದಲ್ಲಿ ಒಂದು ಕಥೆಯು ಪ್ರಸ್ತುತವಾಗಿದೆ. ಅದೇನೆಂದರೆ - ರುದ್ರನು ಶರಭ ವೇಷಧಾರಿಯಾಗಿ ನೃಸಿಂಹನನ್ನು ಸಂಹರಿಸಿದನು ಎಂದು ಹೇಳಲಾಗಿದೆ. ಇದನ್ನು ವಿಮರ್ಶಿಸಬೇಕಾಗಿದೆ. ತಾಮಸ ಪುರಾಣದ ಕಥೆಯು ಈ ರೀತಿ ಇದೆ.

"ಹಿರಣ್ಯಾಸುರನ ರಕ್ತಪಾನದಿಂದ ನೃಸಿಂಹನಿಗೆ ಉನ್ಮಾದವುಂಟಾಗಿ, ಉನ್ಮತ್ತನಾದ ನೃಸಿಂಹನು ಲೋಕಕ್ಕೆಲ್ಲಾ ಉಪದ್ರವವನ್ನು ಉಂಟುಮಾಡಿದನಂತೆ. ಆಗ ದೇವತೆಗಳೆಲ್ಲಾ ಈ ಲೋಕಕಂಟಕನಾದ ನೃಸಿಂಹನನ್ನು ನಿಗ್ರಹಿಸಬೇಕೆಂದು ಶಿವನನ್ನು ಪ್ರಾರ್ಥಿಸಿದರಂತೆ. ಆಗ ಶಿವನಿಂದ ಪ್ರೇರಿಸಲ್ಪಟ್ಟವನಾದ ವೀರಭದ್ರನು ಶರಭವೇಷಧಾರಿಯಾಗಿ ನರಸಿಂಹನ ಎರಡೂ ಪಾದಗಳನ್ನು ಹಿಡಿದು ಗರಗರನೆ ತಿರುಗಿಸಿಬಿಟ್ಟನಂತೆ. ಆಗ ನರಸಿಂಹನಿಗೆ ಉನ್ಮಾದವು ಕಮ್ಮಿಯಾಗಿ ವೀರಭದ್ರನನ್ನು ಪ್ರಾರ್ಥಿಸಿದನಂತೆ. ಆಗ ವೀರಭದ್ರನು "ಇನ್ನು ಮುಂದೆ ಈ ಬಗೆಯಾದ ಕೆಲಸವನ್ನು ಮಾಡಬೇಡವೆಂದು ವಿಷ್ಣುವನ್ನು ವಿಧೇಯನನ್ನಾಗಿ ಮಾಡಿ ಶಿವನ ಸಮೀಪಕ್ಕೆ ಹೋದನಂತೆ" ಎಂಬ ಒಂದು ವಿಚಾರವು ಸ್ಕಾಂದಪುರಾಣದಲ್ಲಿ ಉಕ್ತವಾಗಿದೆ. ಆದರೆ ಶೈವಪುರಾಣದಲ್ಲಿ ರುದ್ರನೇ ಶರಭನಾಗಿ ನೃಸಿಂಹನನ್ನು ಕೊಂದೇ ಬಿಟ್ಟನು ಎಂದು ಹೇಳಲಾಗಿದೆ. ಎರಡೂ ಸಹ ಅಂದರೆ ಸ್ಕಾಂದಪುರಾಣವೂ ಶೈವಪುರಾಣವೂ ಕೂಡ ತಾಮಸ ಪುರಾಣಗಳೇ ಆಗಿರುವುದರಿಂದ ಎರಡಕ್ಕೂ ಕಥಾಭಾಗದಲ್ಲಿಯೂ ಕೂಡ ಪರಸ್ಪರ ವಿರೋಧವು ಕಂಡುಬಂದಿದೆ.

ಮತ್ತೇನೆಂದರೆ ಸಾತ್ವಿಕ ಪುರಾಣಗಳಲ್ಲಿ ಎಲ್ಲೂ ಸಹ ಶ್ರೀನೃಸಿಂಹದೇವರು ಹಿರಣ್ಯಾಸುರನ ರಕ್ತವನ್ನು ಪಾನಮಾಡಿದನು ಎಂದು ಹೇಳಿಲ್ಲ. ಮತ್ತು ಹಿರಣ್ಯಾಸುರನ ರಕ್ತಪಾನದಿಂದ ಸರ್ವೋತ್ತಮನಾದ ನರಸಿಂಹಸ್ವಾಮಿಗೆ ಮೋಹದ ಪ್ರತಿಪಾದನೆಯಂತೂ ಅತ್ಯಂತ ಅಸಂಗತವಾದವಿಚಾರವಾಗಿದೆ. ನಾರಾಯಣೋಪನಿಷತ್ತಿನಲ್ಲಿ "ಸರ್ವಭೂತಸ್ಥ ಮೇಕಂ ನಾರಾಯಣಂ ಕಾರಣರೂಪಮಕಾರಣಂ ಪರಂ ಬ್ರಹ್ಮೋಂ ಏತಚ್ಛೋಕಮೋಹವಿನಿರ್ಮುಕ್ತಂ ವಿಷ್ಣುಂ ಧ್ಯಾಯನ್ ನ ಸೀದತಿ" (೧೩ ನಾರಾಯಣೋಪನಿಷತ್)

ಎಂಬುದಾಗಿ ನಾರಾಯಣನಿಗೆ ಶೋಕವಾಗಲಿ ಮೋಹವಾಗಲಿ ಸರ್ವಥಾ ಇಲ್ಲವೆಂದೆ ವೇದವಾಣಿಯು ಹೊಗಳುತ್ತಲಿದೆ. ಮತ್ತು ತಾಮಸಪುರಾಣ ಪಾದಸ್ಕಾಂದದಲ್ಲಿ ಹೇಳಲಾದ ವಿಚಾರವೂ ಸಹ ಅಂದರೆ ಸರ್ವಲೋಕಗಳೂ ನೃಸಿಂಹನಿಂದ ಉಪದ್ರವವನ್ನು ಹೊಂದಿದವು ಎಂಬುವಂತೂ ಅತ್ಯಂತ ಅಸಂಗತ, ಅಪ್ರಾಮಾಣಿಕ । ಪರಮಾತ್ಮನ ಪ್ರತಿಜ್ಞೆಯು ''ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್। ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ।। (ಭಗವದ್ಗೀತಾ) ಎಂಬುದಾಗಿ ಭಗವದ್ಗೀತೆಯಲ್ಲಿ ಉಕ್ತವಾಗಿದೆ.

ಅಂದರೆ ಪರಮಾತ್ಮನ ಸಕಲ ಅವತಾರಗಳೂ ಕೂಡ, ಸಾಧುಜನ ಸಂರಕ್ಷಣಾ, ದುಷ್ಟನಿಗ್ರಹ ಎಂಬ ಪ್ರಯೋಜನಕ್ಕಾಗಿಯೇ ಬದ್ಧವಾಗಿವೆ. ಮತ್ತು ನೃಸಿಂಹನು ಶರಭನಿಂದ ಹತನಾದನು ಎಂದು ಶೈವಪುರಾಣದ ಕಥೆಯಂತೂ ಅತ್ಯಂತ ಅಸಂಗತವೇ ಆಗಿದೆ.

ಏತಕ್ಕೆಂದರೇ ನೃಸಿಂಹತಾಪನೀಯ ಉಪನಿಷತ್ತಿನಲ್ಲಿ

''ಏಷ ದೇಹಾಂತೇ ತಮಸಃ ಪರಮಂಧಾಮಪ್ರಾಪ್ನುಯಾತ್।

ಯತ್ರವಿರಜೋನೃಸಿಂಹೋ ಭಾಸತೇತತ್ರ ಉಪಾಸತೇ। ತತ್ಪದ್ಯಶಾಮುನಯಃ।। ಇತ್ಯಾದಿಯಾಗಿ

ಶ್ರೀನೃಸಿಂಹದೇವರಿಗೆ ಪರಮಪದದಲ್ಲಿ ಇರುವಿಕೆಯನ್ನು ವೇದವಾಣಿಯು ತಿಳಿಸುತ್ತಲಿದೆ. ಮತ್ತು ತಾಪನೀಯ ಉಪನಿಷತ್ತಿನ ಉಪಕ್ರಮದಲ್ಲಿ ''ಕೇವಲಂ ಜ್ಯೋತಿರೇಕಂ ಅನಾದ್ಯನಂತಂ'' ಇತ್ಯಾದಿಯಾಗಿ ಶ್ರೀನೃಸಿಂಹಸ್ವಾಮಿಗೆ ಅನಾದಿತ್ವವನ್ನು ಅನಂತತ್ವವನ್ನು ಹೇಳಿರುವುದನ್ನು ಮುಖ್ಯವಾಗಿ ಕಾಣಬಹುದಾಗಿದೆ. ಈ ವಿಚಾರವಾಗಿ ಹೆಚ್ಚು ಹೇಳಬೇಕಾಗಿಯೇ ಇಲ್ಲ. ಅನೇಕ ಪುರಾಣಗಳಲ್ಲಿ ಶ್ರೀ ನೃಸಿಂಹದೇವರೇ ಶರಭನನ್ನು ಸಂಹರಿಸಿದನು ಎಂದು ಹೇಳಲಾಗಿದೆ. ಆದಕಾರಣ ಬೇರೆ ರೀತಿಯಾಗಿ ಶಂಕಿಸಲು ಸಾಧ್ಯವೇ ಇಲ್ಲ ಪರಮಾತ್ಮನಾದ ಶ್ರೀನೃಸಿಂಹಸ್ವಾಮಿಯ ವ್ಯಕ್ತಿತ್ವಕ್ಕೆ ಚ್ಯುತಿಯನ್ನು ಹೇಳುವ ಕಟ್ಟುಕಥೆಗಳೆಲ್ಲ ವೇದವಾಣಿಗೆ ವಿರುದ್ಧಗಳಾಗಿರುವುದರಿಂದ ಅವೆಲ್ಲವೂ ಅಪ್ರಾಮಾಣಿಕಗಳೇಬುದೇ ನಿರ್ಧಾರ. ಪದ್ಮಪುರಾಣ ವಚನವಂತೂ ಹಿಂದೆ ತಿಳಿಸಿದ ಸ್ಕಾಂದ, ಶೈವಪುರಾಣಗಳ ಕಲ್ಪಿತಕಥೆಗಳಿಗೆ ವಿರುದ್ಧವಾಗಿಯೇ ಇದೆ. ಶ್ರೀನೃಸಿಂಹದೇವರ ಶರಭ ದುಷ್ಟನಿಗ್ರಹ ಕಾರ್ಯವನ್ನು ಪ್ರಶಂಸಿಸುತ್ತಲಿದೆ.

**ತಥಾಹಿಪಾದ್ಮೆ ''ತೌಯುದ್ಧಮಾನೌಚ ಚಿರಂ ವೇಗೇನ ಬಲವತ್ತಮೌ**
**ನ ಸಮಂ ಜಗ್ಮತುರ್ದೇವೌನೃಸಿಂಹಶರಭಾಕೃತೀ।।**

**ತತಃಕ್ರುದ್ಧೋಮಹಾಕಾಯೋ ನೃಸಿಂಹೋಭೀಮವಿಕ್ರಮಃ।**
**ಸಹಸ್ರಕರಜಾನತ್ರ ತಸ್ಯಕಾಯೇ ನ್ಯವೇಶಯತ್।। ಪತಿತಂ ಭೀಮಮತ್ಯುಗ್ರಂ**
**ನೃಸಿಂಹಃ ಶರಭಂರುಷಾ। ದಧಾನನಿಶಿತೈಸ್ತೀಕ್ಷ್ಣೈರ್ನಖೈಃ ನಖವರಾ**
**ಯುಧಃ। ನಿಹತೇಶರಭೇ ತಸ್ಮಿನ್ ರೌದ್ರೇಮಧುನಿಷೂದನಮ್।**
**ತುಷ್ಟುವುಃ ಪುಂಡರೀಕಾಕ್ಷಂ ದೇವಾಃ ದೇವರ್ಷಯಸ್ತಥಾ।। ಇತಿ ಇತಿಪಾದ್ಮೆ।।**

**ಅಭಿಪ್ರಾಯ** :- ಶ್ರೀನೃಸಿಂಹದೇವರು ಮತ್ತು ಶರಭ ಇವರಿಬ್ಬರಿಗೂ ಭಯಂಕರವಾದ ಯುದ್ಧವು ನಡೆಯಿತು. ಪ್ರಬಲವಾಗಿ ಅತಿ ವೇಗವಾಗಿ ಯುದ್ಧವು ನಡೆದರೂ ಇವರಿಬ್ಬರ ಯುದ್ಧದಲ್ಲಿ ಸರಿಸಮಾನತೆ ಕಾಣಲಿಲ್ಲ. ಶ್ರೀಮನ್ನೃಸಿಂಹಸ್ವಾಮಿಗೆ ಸಮನಾಗಿ ಶರಭನು ಯುದ್ಧದಲ್ಲಿ ವಿಜೃಂಭಿಸಲಿಲ್ಲ. ಆಗ ಶ್ರೀನೃಸಿಂಹನು ಕೋಪಾವಿಷ್ಟನಾಗಿ ದೊಡ್ಡ ದೇಹದಿಂದ ಭಯಂಕರವಾದ ಪರಾಕ್ರಮದಿಂದ ತನ್ನ ಸಾವಿರಾರುವಜ್ರಾಯುಧಗಳಂತಿರುವ ಅತಿತೀಕ್ಷ್ಣಕರವಾದ ಉಗುರುಗಳಿಂದಲೇ ಶರಭನ ದೇಹವನ್ನು ಸೀಳಿ ಸಂಹರಿಸಿದನು. ಶ್ರೀನೃಸಿಂಹಸ್ವಾಮಿಯ ಅತಿತೀಕ್ಷ್ಣವಾದ ಉಗುರುಗಳಿಂದ ಸೀಳಲ್ಪಟ್ಟ ದೇಹವುಳ್ಳವನಾಗಿ ಶರಭನು ಮೃತನಾದುದನ್ನು ಕಂಡು ದೇವತೆಗಳು ಆನಂದಭರಿತರಾಗಿ ಪುಂಡರೀಕಾಕ್ಷನಾದ ಸರ್ವೋತ್ತಮನಾದ ಶ್ರೀನೃಸಿಂಹ ದೇವರ ಮೇಲೆ ಪುಷ್ಪವೃಷ್ಟಿಯನ್ನುಂಟುಮಾಡಿದರು.

ವಾಮನ ಪುರಾಣದಲ್ಲೂ ಸಹ ಶ್ರೀನೃಸಿಂಹನಿಂದ ಸಂಹರಿಸಲ್ಪಟ್ಟ ಶರಭನ ವಿಚಾರವು ಉಕ್ತವಾಗಿದೆ.

**''ವಿಕೃತ್ತಬಾಹೂರುಶಿರಾ ವಜ್ರಕಲ್ಪಮುಖೈಃ ನಖೈಃ।**
**ಮೇರುಪೃಷ್ಠೇ ನೃಸಿಂಹೇನ ಶರಭಸ್ತ್ವಥಸೋಽಪತತ್ ॥ (ಇತಿ ವಾಮನಪುರಾಣೇ)**

**ತಾತ್ಪರ್ಯ** :- ಶ್ರೀನರಸಿಂಹಸ್ವಾಮಿಯು ವಜ್ರಾಯುಧದಂತಿರುವ ತನ್ನ ಉಗುರುಗಳಿಂದ ಶರಭನ ತೋಳು, ತೊಡೆ, ತಲೆಗಳನ್ನು ಕತ್ತರಿಸಿ ಸೀಳಿದವನಾಗಿ ಮೇರುಪರ್ವತ ತಪ್ಪಲಿನಲ್ಲಿ ಸಂಹರಿಸಿದನು. ಶ್ರೀನೃಸಿಂಹನಿಂದ ಕತ್ತರಿಸಲ್ಪಟ್ಟು ಚೂರು ದೇಹವುಳ್ಳ ಶರಭನ ದೇಹವು ಕೆಳಗೆ ಬಿದ್ದಿತು.

ಕೂರ್ಮಪುರಾಣದಲ್ಲೂ ಕೂಡ ಶ್ರೀನೃಸಿಂಹದೇವರಿಂದ ಸಂಹರಿಸಲ್ಪಟ್ಟ ಶರಭನ ವಿಚಾರವು ಪ್ರಸ್ತಾಪಿಸಲ್ಪಟ್ಟಿದೆ.

**''ಸಚಂಚುಪಂಚಾನನಮಷ್ಟಪಾದಂ ಪಕ್ಷದ್ವಯಾಢ್ಯಂ ಘನನೀಲಗಾತ್ರಂ।**
**ಸ್ಫುರನ್ಮಹಾತೀವ್ರಸಹಸ್ರಹಸ್ತಂ ಸಹಸ್ರಶಸ್ತ್ರಂ ಶರಭಸ್ವರೂಪಮ್ ॥**
**ಕರಾದಾದಾಯ ಪ್ರತ್ಯೇಕಂ ಮುಖಂ ಚಂಚುಪುಟದ್ವಯಮ್।**
**ವಿದಾರ್ಯ ಚ ನೃಸಿಂಹಸ್ತಂ ಹಿರಣ್ಯಕಶಿಪುಂ ಯಥಾ ॥ ಇತಿ ॥**

**ತಾತ್ಪರ್ಯವು** :- ಶರಭನ ದೇಹವು ಭಯಂಕರವಾಗಿತ್ತು. ಎರಡುದೊಡ್ಡ ಕೊಕ್ಕುಗಳುಳ್ಳದಾಗಿತ್ತು. ಐದು ಮುಖಗಳು. ಎಂಟು ಪಾದಗಳು, ಎರಡು ದೊಡ್ಡ ರೆಕ್ಕೆಗಳು, ಮೋಡದಂತೆ ಕಪ್ಪಗಿದ್ದ ದೊಡ್ಡದಾದ ಭಯಂಕರವಾದ ಶರೀರವುಳ್ಳವನಾಗಿದ್ದನು. ಪ್ರಕಾಶಮಾನವಾದ ಅತ್ಯಂತ ತೀವ್ರವಾದ ಒಂದು ಸಾವಿರ ಕೈಗಳು, ಪ್ರತ್ಯೇಕವಾಗಿ ಕೈಗಳಲ್ಲಿ ತೀಕ್ಷ್ಣಗಳಾದ ಶಸ್ತ್ರಗಳಿಂದ ಸಜ್ಜಿತವಾಗಿದ್ದವು. ಇದು ಇತರರಿಗೆ ಅತಿಭಯಂಕರವಾದ ಆಕಾರವಾಗಿ ಇತರರಿಂದ ಅದೇಯವಾದ ದೇಹವನ್ನುಳ್ಳವನಾಗಿದ್ದ ಶರಭನನ್ನು ಶ್ರೀನೃಸಿಂಹಸ್ವಾಮಿಯು ಕ್ಷಣಮಾತ್ರದಲ್ಲಿ ಶರಭನ ಎರಡುಕೊಕ್ಕುಗಳನ್ನುಳ್ಳ ಮುಖಗಳನ್ನು ಸೆಳೆದು ಸೀಳಿಬಿಟ್ಟನು. ಶ್ರೀನೃಸಿಂಹನು ಹಿಂದೆ ಹಿರಣ್ಯಕಶಿಪುವನ್ನು ಹೇಗೆ ವಿದಾರಿಸಿ ಸಂಹರಿಸಿದನೋ ಅದರಂತೆ ಶರಭನನ್ನು ಸಂಹರಿಸಿದನು. ಆಗ್ನೇಯಪುರಾಣದಲ್ಲೂ ಸಹ ಶರಭನ ಸಂಹಾರದ ವಿಚಾರವು ಉಕ್ತವಾಗಿದೆ. ಆಗ್ನೇಯ ಪುರಾಣ ನಲವತ್ತನಾಲ್ಕನೇ ಅಧ್ಯಾಯದಲ್ಲಿ ಶ್ಲೋಕಗಳು ಈ ರೀತಿ ಇವೆ.

**''ತತಃ ಕ್ಷಣೇನ ಶರಭೋ ನಾದ ಪೂರಿತದಿಙ್ಮುಖಃ।**
**ಅಭ್ಯಾಶಮಾಗಮದ್ವಿಷ್ಣೋಃ ನನದದ್ಭೈರವಸ್ವನಮ್ ॥**
**ಸ ತಮಭ್ಯಾಗತಂ ದೃಷ್ಟ್ವಾ ನೃಸಿಂಹಃ ಶರಭಂ ರುಷಾ।**
**ನಖೈಃ ವಿದಾರಯಾಮಾಸ ಹಿರಣ್ಯಕಶಿಪುಂ ಯಥಾ ॥ (ಇತಿ ಆಗ್ನೇಯಪುರಾಣೇ ೪೪ನೇ ಅಧ್ಯಾಯ)**

ಮಹಾನಾರಾಯಣೋಪನಿಷತ್ತಿನಲ್ಲೂ ಸಹ ಶ್ರೀಹರಿಯ ಹಿರಿಮೆಯು ಉಕ್ತವಾಗಿದೆ. ಶ್ರೀಹರಿಯು ಶಿವನನ್ನು ಸಂಹರಿಸುವುದನ್ನು ಉಪನಿಷತ್ತು ತಿಳಿಸುತ್ತಲಿದೆ.

**''ಹರಿಂ ಹರಂತಂ ಅನುಯಂತಿ ದೇವಾಃ। ವಿಶ್ವಸ್ಯೇಶಾನಂ ವೃಷಭಂ**
**ಮತೀನಾಂ (ಇತಿಮಹಾನಾರಾಯಣೋಪನಿಷತ್ತು ೧೩-೧೧)**

ಈ ಶ್ರುತಿವಾಕ್ಯದಿಂದ ಈಶಾನ ಶಬ್ದದಿಂದ ವಾಚ್ಯನಾದ ರುದ್ರನಿಗೆ ಶ್ರೀನೃಸಿಂಹದೇವರಿಂದ ಮರಣವು ಆಗಿರುವುದನ್ನು ತಿಳಿಯಬಹುದಾಗಿದೆ.

ಈ ಮೇಲಿನ ಮಂತ್ರದಲ್ಲಿರುವ ವಿಶ್ವಸ್ಯ ಎಂಬ ಷಷ್ಠೀ ವಿಭಕ್ತಿಯು ಪ್ರಥಮಾ ವಿಭಕ್ತಿಯ ಅರ್ಥದಲ್ಲಿದೆ. ಅಂದರೆ ವಿಶ್ವೇದೇವಾಃ ಎಂದು ಅನ್ವಯಿಸಬೇಕು. ಅನ್ವಯಕ್ರಮವು ವಿಶ್ವೇದೇವಾ, ಈಶಾನಂ, ರುದ್ರಂ, ಹರಂತಂ - ಸಂಹರಂತಂ ಹರಿಂ, ಅನುಯಂತಿ" ಎಂಬುದಾಗಿ ಅನ್ವಯಿಸಿ ಅರ್ಥವನ್ನು ಹೇಳಬೇಕು.

**ಅರ್ಥ** :- ರುದ್ರನನ್ನು ಸಂಹರಿಸುವವನಾದ, ಹರಿಯನ್ನು ಸಕಲ ದೇವತೆಗಳೂ ಅನುಸರಿಸುತ್ತಾರೆ. ಹರಿ ಶಬ್ದಕ್ಕೆ ಪ್ರವೃತ್ತಿ ನಿಮಿತ್ತವಾದ ಧರ್ಮವೂ ಸಹ, ಬ್ರಹ್ಮ ಈಶಾನಾದಿ ಹನ್ತೃತ್ವವೇ ಆಗಿದೆಯೆಂಬುದನ್ನು ಶ್ರುತಿವಾಕ್ಯವು ತಿಳಿಸುತ್ತಲಿದೆ. ಇಲ್ಲಿರುವ ಹರಿಶಬ್ದವು ಕೇವಲ ರೂಢಶಬ್ದವಲ್ಲ. ಹರಿಶಬ್ದವು ಯೌಗಿಕವೂ ಆಗಿದೆಯೆಂಬುದನ್ನು ಶ್ರುತಿವಾಕ್ಯವು ವ್ಯಕ್ತಪಡಿಸುತ್ತಲಿದೆ.

**ಬ್ರಹ್ಮಾಣಮಿಂದ್ರಂ ರುದ್ರಂ ಚ ಯಮಂ ವರುಣಮೇವ ಚ।**
**ನಿಹತ್ಯ ಹರತೇಯಸ್ಮಾತ್ತಸ್ಮಾದ್ಧರಿರಿಹೋಚ್ಯತೇ ।। ಇತಿಸ್ಮೃತಿಃ ।।**

**ಅಭಿಪ್ರಾಯ** :- ಶ್ರೀಮನ್ನಾರಾಯಣನು, ಬ್ರಹ್ಮನನ್ನೂ, ರುದ್ರನನ್ನು, ಇಂದ್ರನನ್ನೂ ಯಮನನ್ನೂ, ವರುಣನನ್ನು ಸಂಹರಿಸುತ್ತಾನೆ. ನಿಹತ್ಯಹರತೇ ಎಂಬ ಎರಡುಪದಗಳು ವಿಶೇಷಾರ್ಥದ ದೃಷ್ಟಿಯಿಂದ ಪ್ರಯುಕ್ತವಾಗಿವೆ. ಯಾವ ಕಾರಣದಿಂದ ಅವರೆಲ್ಲರನ್ನು ಹನನ ಮಾಡುತ್ತಾನೆಯೋ ಅಪಹರಿಸುತ್ತಾನೆಯೋ ಆದುದರಿಂದ ಹರಿ ಎಂಬ ಶಬ್ದದಿಂದ ಹೇಳಲ್ಪಡುತ್ತಾನೆ.

ತೈತ್ತಿರೀಯಾರಣ್ಯದಲ್ಲಿ ಮತ್ತೊಂದು ವಿಚಾರವು ಪ್ರಸ್ತಾಪಿಸಲ್ಪಟ್ಟಿದೆ. ಅದರಿಂದಲೂ ಸಹ ಶ್ರೀವಿಷ್ಣುವಿನ ಸರ್ವೋತ್ತಮತ್ವವು ಅತಿದೃಢವಾಗಿ ತಿಳಿದುಬರುತ್ತದೆ.

ರುದ್ರನು ಒಂದಾವರ್ತಿ ಲೀಲೆಯಿಂದ ತನ್ನ ಗದ್ದವನ್ನು ಧನುಸ್ಸಿನ ಮೇಲಿಟ್ಟುಕೊಂಡು ಕುಳಿತಿದ್ದನು. ಆಗ ಇಂದ್ರನು ಒಂದು ಕೀಟರೂಪದಿಂದ ಕ್ರಿಮಿಯ ರೂಪದಿಂದ ಬಂದು ಆ ಧನುಸ್ಸಿನ ಹದೆಯನ್ನು ತುಂಡರಿಸಿದನು. ಆಗ ರುದ್ರನ ರುಂಡವು (ತಲೆಯು) ಕತ್ತರಿಸಿ ಬೇರ್ಪಟ್ಟಿತು. ಶಿವನ ತಲೆಯು ಕತ್ತರಿಸಲ್ಪಟ್ಟಾಗ ದೇವತೆಗಳು ಗಾಬರಿಗೊಂಡು ಶಿವನ ಉಜ್ಜೀವನಕ್ಕಾಗಿ ಪ್ರವರ್ಗ್ಯಾಹುತಿಯಿಂದ ಸರ್ವಸ್ವಾಮಿಯಾದ ಶ್ರೀವಿಷ್ಣುವನ್ನು ಉದ್ದೇಶಿಸಿ ಹೋಮಮಾಡಿ ಸಂತೋಷಗೊಳಿಸಿದರು. ಪ್ರಸನ್ನನಾದ ಶ್ರೀಹರಿಯು ಕತ್ತರಿಸಲ್ಪಟ್ಟು ಭೂಮಿಯಲ್ಲಿ ಬಿದ್ದಿದ್ದ ಆ ತಲೆಯನ್ನು ಮತ್ತೆ ಶಿವನ ಮುಂಡಕ್ಕೆ ಸೇರಿಸಿ ಅನುಗ್ರಹಿಸಿದನು.

**"ತಸ್ಯೇಂದ್ರೋ ವಮ್ರಿರೂಪೇಣ ಧನುರ್ಜ್ಯಾಮಚ್ಛಿನತ್ ಸ್ವಯಂ। ಎಂದು ಉಪಕ್ರಮವಾಗಿ**
**"ಏತದ್ರುದ್ರಸ್ಯಧನುಃ। ರುದ್ರಸ್ಯತ್ವೇವಧನುರಾರ್ತ್ನಿಃ।**
**ಶಿರಉತ್ಪಿಪೇಷ "ಸಪ್ರವರ್ಗ್ಯೋಽಭವತ್" (ಇತಿ ತೈತ್ತಿರೀಯ ಅರಣ್ಯಕ) ಎಂಬಲ್ಲಿ**
**ಇಂದ್ರನಿಂದ ರುದ್ರನ ಶಿರಸ್ಸಿನ ಛೇದವು ಮಾಡಲ್ಪಟ್ಟಿದೆ ಎಂದು ಹೇಳಲಾಗಿದೆ.**

**ಅಭಿಪ್ರಾಯ** :- ತಾರತಮ್ಯದಲ್ಲಿ ಇಂದ್ರನು ರುದ್ರನಿಗಿಂತಲೂ ಕಡಿಮೆ ದರ್ಜೆಯವನು. ಸಾಮರ್ಥ್ಯದಲ್ಲೂ ಸಹ ಬಲ ಹೀನನು. ಇಂತಹವನು ರುದ್ರನ ಶಿರಸ್ಸನ್ನು ಛೇದಿಸಿದನು ಎಂಬುದು ಅಸಂಭಾವಿತವೆಂದು ಶಂಕಿಸಬಹುದು. ಆದರೆ ಇದಕ್ಕೆ ಸಂಬಂಧಿಸಿದ ಮತ್ತೊಂದು ಉಪಾಖ್ಯಾನವು ಇದೆ -

**ಉಪಖ್ಯಾನದ ವಿವರ** :- ಒಂದು ಕಲ್ಪದಲ್ಲಿ ಒಂದು ಕಡೆ ಇಂದ್ರನು ಶ್ರೀಮನ್ನಾರಾಯಣಸ್ವಾಮಿಯನ್ನು ಕುರಿತು ಬಹಳ ಭಕ್ತಿಭಾವದಿಂದ ಆರಾಧಿಸಿದನು. ಅದರ ಅಂಗವಾಗಿ ಇತರ ಯಾವ ದೇವತೆಗಳನ್ನು ಕರೆಯದೇ ಎಲ್ಲ ದೇವತೆಗಳನ್ನು

ತಿರಸ್ಕರಿಸಿ, ಕೇವಲ ನಾರಾಯಣನನ್ನೇ ಕುರಿತು ಯಜ್ಞವನ್ನು ಮಾಡಲು ಪ್ರಾರಂಭಿಸಿದನು. ಆಗ ಇತರ ಎಲ್ಲಾ ದೇವತೆಗಳಿಗೂ ಇಂದ್ರನ ಮೇಲೆ ಕೋಪವು ಬಂತು. ಇಂದ್ರನ ಯಜ್ಞಕ್ಕೆ ತೊಂದರೆಯನ್ನುಂಟುಮಾಡುವ ಮನಸ್ಸು ಮಾಡಿದರು. ತಮ್ಮಿಂದ ಇಂದ್ರನ ಯಜ್ಞವನ್ನು ಧ್ವಂಸಗೊಳಿಸಲು ಸಾಧ್ಯವಿಲ್ಲವೆಂದು ತಿಳಿದು ದೇವತೆಗಳೆಲ್ಲರೂ ಒಟ್ಟಾಗಿ ಸೇರಿ ರುದ್ರನನ್ನು ಮೊರೆ ಹೊಕ್ಕರು. ಇತರ ಎಲ್ಲಾ ದೇವತೆಗಳ ಪ್ರಾರ್ಥನೆಯಂತೆ ರುದ್ರದೇವನು ಇಂದ್ರನ ನಾರಾಯಣದೇವರನ್ನು ಉದ್ದೇಶಿಸಿ ಮಾಡುತ್ತಿದ್ದ ಯಜ್ಞವನ್ನು ಕೆಡಿಸಲು ಬಂದನು. ಆಗ ಇಂದ್ರನು ನಾರಾಯಣನನ್ನು ಸ್ಮರಿಸಿದನು. ತಾನು ಆಚರಿಸುತ್ತಲಿರುವ ಯಜ್ಞಕ್ಕೆ ಕಂಟಕಪ್ರಾಯನಾದ ರುದ್ರನ ತೊಂದರೆಯನ್ನು ಪರಿಹರಿಸಬೇಕೆಂದು ನಾರಾಯಣನನ್ನು ಪ್ರಾರ್ಥಿಸಿದನು. ನಾರಾಯಣನು ಪ್ರತ್ಯಕ್ಷನಾಗಿ ತನ್ನ ಚಕ್ರದಿಂದ ರುದ್ರನತಲೆಯನ್ನು ಕತ್ತರಿಸಿಬಿಟ್ಟನು. ಆಮೇಲೆ ಪಾರ್ವತೀದೇವಿಯು ತನ್ನ ಪತಿಯಉಜ್ಜೀವನಕ್ಕಾಗಿ ಶ್ರೀಮನ್ನಾರಾಯಣನನ್ನು ಭಕ್ತಿಯಿಂದ ಸ್ತೋತ್ರಮಾಡಿದಳು. ಪಾರ್ವತಿಯ ಭಕ್ತಿಪೂರ್ವಕವಾದ ಸ್ತೋತ್ರಕ್ಕೆ ಪ್ರಸನ್ನನಾದ ನಾರಾಯಣನು ಶಿವನನ್ನು ಬದುಕಿಸಿದನು. ಈ ವಿಚಾರವು ಮತ್ಸ್ಯ ಪುರಾಣದಲ್ಲಿ ಬಂದಿದೆ. ನರಸಿಂಹ ಪುರಾಣದಲ್ಲೂ ಕಂಡುಬಂದಿದೆ. ಆದ ಕಾರಣ ಅನೇಕ ಪುರಾಣಗಳಲ್ಲಿ ನೃಸಿಂಹದೇವನಿಂದಲೇ ಶರಭನ ಸಂಹಾರವು ಆಗಿರು ವುದನ್ನು ಸತ್ಯ ಸಂಗತಿಯನ್ನಾಗಿ ತಿಳಿಯಬೇಕು. ಇದರಿಂದ ಶ್ರೀಮನ್ನೃಸಿಂಹನ ವಿಜಯವೇ ಪ್ರಾಮಾಣಿಕವಾದುದಾಗಿದೆ.

ಮಹಾಭಾರತದಲ್ಲಿಯೂ ಸಹ ವಾಸುದೇವನಿಗೂ ಮಹೇಶ್ವರನಿಗೂ ಯುದ್ಧವು ನಡೆದು ಶೂಲಪಾಣಿಯಾದ ರುದ್ರ ನನ್ನು ಜಯಿಸಿದ ವಿಚಾರವು ಉಕ್ತವಾಗಿರುವುದರಿಂದ ಶ್ರೀಕೃಷ್ಣನ ಸರ್ವೋತ್ತಮತ್ವವೂ ಉತ್ಕರ್ಷವೂ ನಿರ್ಧರಿತವಾಗಿದೆ. ಇದರಲ್ಲಿ ಸಂದೇಹವೇ ಉಂಟಾಗುವಂತಿಲ್ಲ. ಆ ಮಹಾಭಾರತದ ವಾಕ್ಯಗಳು ಕೆಳಗೆ ಕಂಡಂತಿವೆ.

"ತತಸ್ತೌ ಚಕ್ರತುಃ ಯುದ್ಧಂ ವಾಸುದೇವಮಹೇಶ್ವರೌ ।
ತದ್ಯುದ್ಧಮಭವದ್ಘೋರಂ ಅಚಿಂತ್ಯರೋಮಹರ್ಷಣಮ್ ॥
ಅನ್ಯೋನ್ಯಂ ತೌ ತತಃ ಸಾಕ್ಷಾದ್ ಅನ್ಯೋನ್ಯ ಜಯಕಾಂಕ್ಷಿಣೌ ।
ದಿವ್ಯಾನ್ಯಸ್ತ್ರಾಣಿ ದೇವೌ ತೌ ಮುಮುಚತುಸ್ತದಾ ॥
ತತಃ ಕೃಷ್ಣೋರಣಂ ಕೃತ್ವಾ ಮುಹೂರ್ತಂ ಶೂಲಪಾಣಿನಾ ।
ವಿಜಿತ್ಯ ತಂ ಮಹಾದೇವಂ ತತೋಯುದ್ಧೇ ಜನಾರ್ದನಃ ॥
ಅಜ್ಞಾತ್ ಸಚಿತ್ತ್ವದ್ವಾರಸ್ಥಾನ್ ಪ್ರವಿವೇಶ ಪುರೋತ್ತಮಮ್" ( ಇತಿ ಮಹಾಭಾರತೇ )

**ತಾತ್ಪರ್ಯ** :- ಆ ಮೇಲೆ ಶ್ರೀಕೃಷ್ಣನಿಗೂ ರುದ್ರನಿಗೂ ಅತಿಘೋರವಾದ ಯುದ್ಧವು ರೋಮಾಂಚಕರವಾದ ಅಚಿಂತ್ಯವಾದ ರೀತಿಯಲ್ಲಿ ನಡೆಯಿತು. ಪರಸ್ಪರ ಜಯದ ಅಪೇಕ್ಷೆಯಿಂದ ಒಬ್ಬೊಬ್ಬರೂ ಕೂಡ ದಿವ್ಯವಾದ ಅಸ್ತ್ರಗಳನ್ನು ಪ್ರಯೋಗಿಸಿದರು. ಕೋಪಾವಿಷ್ಟರಾಗಿ ಹೋರಾಡಿದರು. ಆಗ ಶ್ರೀಕೃಷ್ಣಪರಮಾತ್ಮನು ಒಂದೇ ಮುಹೂರ್ತಕಾಲದಿಂದ ಮಹಾದೇವನನ್ನು ಜಯಿಸಿದನು. ರುದ್ರನ ದ್ವಾರಪಾಲಕರನ್ನೆಲ್ಲಾ ಕ್ಷಣಮಾತ್ರದಲ್ಲಿ ಜಯಿಸಿ ಶ್ರೇಷ್ಠವಾದ ನಗರವನ್ನು ಪ್ರವೇಶ ಮಾಡಿದನು" ಮಹಾಭಾರತದ ಕಥಾಪ್ರಸಂಗರೂಪವಾದ ಇದರಿಂದಲೂ ಸಹ ಶ್ರೀವಿಷ್ಣುವಿನಉತ್ಕರ್ಷವೇ ಸರ್ವೋತ್ತಮತ್ವ ವೇ ಸಿದ್ಧಿಸುವುದಾಗಿದೆ. ರಾಮಾಯಣದಲ್ಲೂ ಕೂಡ ಶಿವನಿಗಿಂತಲೂ ಅಧಿಕನನ್ನಾಗಿ ದೇವತೆಗಳು ಋಷಿಗಳೂ ವಿಷ್ಣುವನ್ನು ತಿಳಿದರೆಂಬುದಾಗಿ ಹೇಳಲಾಗಿದೆ

"ಜೃಂಭಿತಃ ತದ್ಧನುಶ್ಶೈವಂ ದೃಷ್ಟ್ವಾವಿಷ್ಣುಪರಾಕ್ರಮೈಃ ।
ಅಧಿಕಂ ಮೇನಿರೇ ವಿಷ್ಣುಂ ದೇವಾಸ್ಸರ್ಷಿಗಣಾಸ್ತಥಾ ॥ ಇತಿರಾಮಾಯಣೇ ॥

ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿಯೂ ಸಹ ಬ್ರಹ್ಮನಿಗಿಂತಲೂ ರುದ್ರನಿಗಿಂತಲೂ ವಿಷ್ಣುವಿಗೇನೇ ಪರಬ್ರಹ್ಮತ್ವವನ್ನು ಬ್ರಹ್ಮವಾದಿಗಳಾದ ಋಷಿವರೇಣ್ಯರು ನಿರ್ಣಯಿಸಿದ ವಿಚಾರವು ಉಕ್ತವಾಗಿದೆ.

**"ಸರಸ್ವತ್ಯಾಸ್ತಟೇ ರಾಜನ್ ಋಷಯಸ್ಸತ್ರಮಾಸತ ।**
**ವಿತರ್ಕಸ್ಸಮಭೂತ್ತೇಷಾಂ ತ್ರಿಷ್ವಧೀಶೇಷುಕೋ ಮಹಾನ್ ॥**
**ತಸ್ಯಜಿಜ್ಞಾಸಯಾತೇವೈ ಭೃಗುಂಬ್ರಹ್ಮಸುತಂ ನೃಪ ।**
**ತಜ್ಞಪ್ತ್ಯೈಪ್ರೇಷಯಾಮಾಸುಸ್ಸೋಽಭ್ಯಗಾದ್ಬ್ರಹ್ಮಣಃಸಭಾಮ್ ॥**
**ಇತ್ಯಾದಿನಾ ಪುನಃ ಸಸತ್ರಮಾಸಾದ್ಯಮುನೀನಾಂ ಬ್ರಹ್ಮವಾದಿನಾಮ್ ।**
**ಸ್ವಾನುಭೂತಮಶೇಷೇಣ ಸರ್ವಂ ಭೃಗುರವರ್ಣಯತ್ ॥**
**ತನ್ನಿಶಮ್ಯಾಥಮುನಯೋ ವಿಸ್ಮಿತಾಃಮುಕ್ತಸಂಶಯಾಃ ।**
**ಭೂಯಾಂಸಂಶ್ರದ್ದಧುಃ ವಿಷ್ಣುಂ ಯತಃಶಾಂತಿರ್ಯತೋಽಭಯಮ್ ॥**
**ಧರ್ಮಃ ಸಾಕ್ಷಾದ್ಯತೋಜ್ಞಾನಂ ವೈರಾಗ್ಯಂ ಚ ಚತುರ್ವಿಧಮ್ ॥**
**ಐಶ್ವರ್ಯಮಷ್ಟಧಾಯಸ್ಮಾದ್ಯಶಶ್ಚಾತ್ಮಮಲಾಪಹಮ್ ॥"(ಇತಿ ಭಾಗವತೇ)**

**ಅಭಿಪ್ರಾಯ :-** ಬ್ರಹ್ಮಜ್ಞಾನಿಗಳಾದಮಹರ್ಷಿಗಳು ಒಂದಾವರ್ತಿ ಸರಸ್ವತೀ ನದೀತೀರದಲ್ಲಿ ಸತ್ರ ಯಾಗವನ್ನು ಆಚರಿಸು ತ್ತಲಿದ್ದರು. ಆಗ ಆ ಋಷಿಗಳಲ್ಲಿ ಪರಸ್ಪರವಾಗಿ ಒಂದು ಚರ್ಚೆಯು ಉಂಟಾಯಿತು. ಬ್ರಹ್ಮ ವಿಷ್ಣು ಮಹೇಶ್ವರ (ರುದ್ರ) ಈ ಮೂರು ಜನ ದೇವತೆಗಳಲ್ಲಿ ಸರ್ವೋತ್ತಮನು ಯಾರು ಎಂಬ ವಿಚಾರವಾಗಿ ಚರ್ಚೆಯು ಪ್ರಾರಂಭವಾಯಿತು. ಅದನ್ನು ಖಚಿತವಾಗಿ ತಿಳಿದುಬರಲು ಚತುರ್ಮುಖ ಬ್ರಹ್ಮನ ಮಗನಾದ ಭೃಗು ಮಹರ್ಷಿಯನ್ನು ಕಳುಹಿಸಿದರು. ಆ ಭೃಗು ಮಹರ್ಷಿಯು ಕೈಲಾಸಕ್ಕೂ, ಸತ್ಯಲೋಕಕ್ಕೂ, ಅಮುಕ್ತ ವೈಕುಂಠಸ್ಥಾನಕ್ಕೂ ಭೇಟಿಮಾಡಿ ಅಲ್ಲಲ್ಲಿರುವ ಆ ದೇವತೆಗಳ ಇತಿಮಿತಿಯಲ್ಲಿ ತಿಳಿದುಬಂದು, ಆ ಋಷಿವರೇಣ್ಯರಿಗೆ ಕಟ್ಟಕಡೆಯದಾಗಿ ಈ ಕೆಳಗೆ ಕಂಡತೆ ತೀರ್ಮಾನವನ್ನು ಹೇಳಿದನು.

**"ಹರಿಃ ಸರ್ವೋತ್ತಮಃ ರಸಾಕ್ಷಾತ್ ರಮಾ ಚ ತದನಂತರಂ ।**
**ವಿಧಿವಾಯೂತದಂತೇ ಚ ತದಂತೇಶರ್ವಪೂರ್ವಕಾಃ ॥**

ಇತ್ಯಾದಿಯಾಗಿ ಹೇಳಿದನು.

ಅಂದರರೆ, ಶ್ರೀಹರಿಯೇ ಸರ್ವೋತ್ತಮನು. ಸರ್ವತಂತ್ರ ಸ್ವತಂತ್ರನು, ಇದರಲ್ಲಿ ಯಾವ ಸಂದೇಹವೂ ಇರುವುದಿಲ್ಲ. ಅವನಿಂದ ಬೇರೆ ಎಲ್ಲರೂ ಅಸ್ವತಂತ್ರರು. ಆ ಅಸ್ವತಂತ್ರ ವರ್ಗದಲ್ಲಿ ಶ್ರೀರಮಾದೇವಿಯು ಉತ್ತಮಳು. ಅವಳನ್ನು ಬಿಟ್ಟರೆ ಚತುರ್ಮುಖಬ್ರಹ್ಮ ಮತ್ತು ವಾಯುದೇವರು ಶ್ರೇಷ್ಠರು ಉತ್ತಮರು. ಅವರಿಗಿಂತಲೂ ಇಂದ್ರಾದಿಗಳು ಅಧಮರು. ಇತ್ಯಾದಿಯಾಗಿ ಹೇಳಿ ಶ್ರೀಹರಿಯ ಸರ್ವೋತ್ತಮತ್ವವನ್ನು ಉತ್ಕರ್ಷವನ್ನು ಭೃಗುಮಹರ್ಷಿಯು ಋಷಿವರೇಣ್ಯರಿಗೆ ನಿಸ್ಸಂದೇಹವಾಗಿ ಖಚಿತಪಡಿಸಿದನು. ಇದನ್ನು ಕೇಳಿ ಋಷಿವರೇಣ್ಯರಿಗೆಲ್ಲಾ ಆಶ್ಚರ್ಯವಾಯಿತು. ಮತ್ತು ಅವರಿಗೆ ಬಂದಿದ್ದ ಸಂದೇಹವೆಲ್ಲಾ ಪರಿಹಾರವಾಯಿತು.

ಆಗ ಎಲ್ಲಾ ಋಷಿಗಳೂ, ಯಾರಿಂದ ಪ್ರಾಣಿವರ್ಗಕ್ಕೆ ಅಭಯವು ದೊರಕುವುದೋ, ಯಾರಿಂದ ಧರ್ಮಸಂಸ್ಥಾಪನೆಯು ಆಗುತ್ತದೆಯೋ, ಯಾರಿಂದ ಜ್ಞಾನಪ್ರಸಾರವು ನಿರ್ವಿಘ್ನವಾಗಿ ನಡೆಯುವದೋ ಯಾರಿಂದ ನಾಲ್ಕುಬಗೆಗಳಾದ

ವೈರಾಗ್ಯಗಳು ಸಜ್ಜನರಿಗೆ ಉಂಟಾಗುತ್ತವೆಯೋ, ಯಾರಿಂದ ಜೀವರ ಬಂಧುಗಳೆಲ್ಲಾ ಪರಿಹಾರವಾಗುತ್ತವೆಯೋ ಅಂತಹ ಸರ್ವೋತ್ತಮನಾದ ದೇವತೆಯು ಶ್ರೀವಿಷ್ಣುವೇ ಸರಿಯೆಂಬುದಾಗಿಯೂ ಆ ಶ್ರೀಹರಿಯೇ ಪರಬ್ರಹ್ಮನೆಂಬುದಾಗಿಯೂ ನಿಶ್ಚಯವುಳ್ಳವರಾದರು. ಮತ್ತು ವೃಕಾಸುರನ ಕಥಾಪ್ರಸಂಗದಿಂದಲೂ ಶ್ರೀಹರಿಯ ಉತ್ಕರ್ಷವು ನಿಶ್ಚಯವಾಗುತ್ತವೆ.

ಶ್ರೀಮದ್ಭಾಗವತದ ಹತ್ತನೆಯ ಸ್ಕಂದದಲ್ಲಿ ಉತ್ತರಾರ್ಧದಲ್ಲಿ ಎಂಭತ್ತೆಂಟನೆಯ ಅಧ್ಯಾಯದಲ್ಲಿ ಹನ್ನೆರಡನೆಯ ಶ್ಲೋಕದಿಂದ ನಲವತ್ತನೆಯ ಶ್ಲೋಕದ ಪೂರ್ತಿಯಾಗಿ ಉಕ್ತವಾಗಿರುವ ಕಥಾಭಾಗವು ಶ್ರೀಹರಿಯ ಸರ್ವೋತ್ತಮತ್ವಕ್ಕೆ ಪರಿಪೋಷಕವಾಗಿದೆ. ಶ್ರೀವಿಜಯಧ್ವಜೀಯ ವ್ಯಾಖ್ಯಾನದಂತೆ ಈ ಕಥಾವಭಾಗವು ದಶಮಸ್ಕಂಧದ ಉತ್ತರಾರ್ಧದ ತೊಂಭತ್ತೆರಡನೆಯ ಅಧ್ಯಾಯದಲ್ಲಿ ನಿರುಪಿಸಲ್ಪಟ್ಟಿದೆ.

ಸ ತದ್ವರಪರೀಕ್ಷಾರ್ಥಂ ಶಂಭೋಃಶೀರ್ಷ್ಣಿವೃಕಾಸುರಃ ।
ಸ್ವಹಸ್ತಂ ಧಾತುಮಾರೇಭೇ ಸೋಽಬಿಭ್ಯತ್ ಸ್ವಕೃತಾಚ್ಛಿವಃ ।।
ತೇನೋಪಸೃಷ್ಟಃ ಸಂತ್ರಸ್ತಃ ಪರಿಧಾವನ್ ಸವೇಪಥುಃ ।।
ಯಾವದಂತಂದಿವೋ ಭೂಮೇಃಕಾಷ್ಠಾನಾಮಧಿಕಂದಿವಃ ।।
ಅಜಾನಾನಃ ಪ್ರತಿವಿಧಿಂ ತೂಷ್ಣೀಮಾಸನ್ ಸುರೇಶ್ವರಾಃ ।।
ತತೋ ವೈಕುಂಠಮಗಮತ್ ಭಾಸ್ವರಂತಮಸಃಪರಮ್ ।।
ಯತ್ರ ನಾರಾಯಣಃ ಸಾಕ್ಷಾತ್ ನ್ಯಾಸಿನಾಂಪರಮಾಗತಿಃ ।
ಶಾಂತಾನಾಂ ನ್ಯಸ್ತದಂಡಾನಾಂ ಯತೋನಾವರ್ತಯೇತ್ತಮಃ ।
(ಯತೋನಾವರ್ತತೇಗತಃ)
ತಂತಥಾವ್ಯಸನಂ ದೃಷ್ಟ್ವಾ ಭಗವಾನ್ ವೃಜನಾರ್ದನಃ ।। ಇತ್ಯಾದಿನಾ ।।
ಏವಂಭಗವತಾ ಪೃಷ್ಟೋವಚಸಾಮೃತವರ್ಷಿಣಾ ।
ತಸ್ಯವಾದಬ್ರವೀತ್ತಸ್ಮೈಯಥಾಪೂರ್ವಮನುಷ್ಠಿತಮ್ ।।
ವೃಕಾಸುರಂ ಪ್ರತಿಭಗವಾನೇವಂ ಉವಾಚ ಏವಂಚೇತ್ತರ್ಹಿತದ್ವಾಕ್ಯಂ ನ
ವಯಂ ಶ್ರದ್ದಧೀಮಹಿ ।
ಯೋದಕ್ಷಶಾಪಾತ್ಪೈಶಾಚ್ಯಂ ಪ್ರಾಪ್ತಃ ಪ್ರೇತಪಿಶಾಚರಾಟ್ ।।
ಯದಿವಸ್ತತ್ರವಿಶ್ರಂಭೋ ದಾನವೇಂದ್ರಜಗದ್ಗುರೌ ।
ತರ್ಹ್ಯಂಗುಲ್ಯೈಃ ಸ್ವಶಿರಸಿ ಹಸ್ತನ್ಯಾಸಃಪ್ರದೀಯತಾಮ್ ।।
(ತರ್ಹ್ಯಂಗಾತುಶಿರಸಿ ಹಸ್ತಂನ್ಯಸ್ಯಪ್ರದೀಯತಾಮ್)
ಯದ್ಯಸತ್ಯಂವಚಃಶಂಭೋಃ ಕಥಂಚಿತ್ ದಾನವರ್ಷಭ ।।
ತದೈನಂ ಜಹ್ಯಸದ್ವಾಕ್ಯಂ ನಚವಕ್ತಾನೃತಂಪುನಃ ।
ಇತ್ಥಂ ಭಗವತಃ ಚಿತ್ರೈಃವಚೋಭಿಃ ಸುಪೇಶಲೈಃ ।। (ಸುಪೇಶಲೈಃ)
(ತಥೇತಿವಿಸ್ಮೃತಃ ಶೀರ್ಷ್ಣಿಸ್ವಹಸ್ತಂಕುಮತಿರ್ನ್ಯಧಾತ್ )।
ಅಥಾಪತದ್ಭಿನ್ನಶಿರಾಃ ವಜ್ರಾಹತಇವಕ್ಷಣಾತ್ ।

ಜಯಶಬ್ದೋನಮಃಶಬ್ದಃ ಸಾಧುಶಬ್ದೋಽಭವದ್ದಿವಿ ॥
ಮುಮುಚುಃ ಪುಷ್ಪವರ್ಷಾಣಿ ಹತೇಪಾಪೇವೃಕಾಸುರೇ।
ದೇವರ್ಷಿಪಿತೃಗಂಧರ್ವಾ॒ಮೋಚಿತಃ ಸಂಕಟಾತ್ ಶಿವಃ ॥
ಮುಕ್ತಂಗಿರಿಶಮಭ್ಯಾಹ ಭಗವಾನ್ ಪುರುಷೋತ್ತಮಃ।
ಅಹೋ ದೇವಮಹಾದೇವ ಪಾಪೋಽಯಂಸ್ವೇನಪಾಪ್ಮನಾ।
ಹತಃಕೋಽನುಮಹತ್ಸ್ವೀಶಜಂತುರ್ವೈ ಕೃತಕಿಲ್ಬಿಷಃ।
ಕ್ಷೇಮೀಸ್ಯಾತ್ಕಿಮು ವಿಶ್ವೇಶೇಕೃತಾಗಸ್ಕೋ (ಕೃತಪಾಪೋ) ಜಗದ್ಗುರೌ ॥
ಯ ಏವಮವ್ಯಾಕೃತಶಕ್ತ್ಯುದನ್ವತಃ।
ಪರಸ್ಯಸಾಕ್ಷಾದ್ ಪರಮಾತ್ಮನೋಹರೇಃ ॥
ಗಿರೀಶಮೋಕ್ಷಂ ಕಥಯೇತ್ ಶೃಣೋತಿವಾ।
ವಿಮುಚ್ಯತೇಸಂಸೃತಿಭಿಸ್ತಥಾರಿಭಿಃ ॥

ವೃಕಾಸುರ ಕಥೆಯ ವಿವರವು ಈ ರೀತಿ ಇದೆ.

ಶ್ರೀವಿಷ್ಣುಭಕ್ತನು ಮೋಕ್ಷವನ್ನು ಪಡೆಯುತ್ತಾನೆ. ಶಿವಭಕ್ತನು ನಶ್ವರವಾದ ಸಂಪತ್ತನ್ನು ಪಡೆಯುತ್ತಾನೆ. ಶಿವನಾದರೋ ಸದ್ಯಃ ಶಾಪವನ್ನು ಬೇಗನೇ ಪ್ರಸಾದವನ್ನು ಕೊಡತಕ್ಕವನೆಂಬುದಕ್ಕೆ ವೃಕಾಸುರಾಖ್ಯಾನವು ದೃಷ್ಟಾಂತವಾಗಿದೆ. ಅದು ಈ ರೀತಿ ಇದೆ.

ಒಂದಾವರ್ತಿ ಶಕುನಿ ಪುತ್ರನಾದ ವೃಕಾಸುರನು ನಾರದರನ್ನು ಭೇಟಿಮಾಡಿ ತ್ರಿಮೂರ್ತಿಗಳಲ್ಲಿ ಬೇಗನೇ ಒಲಿಯುವ ಮತ್ತು ವರವನ್ನು ಕೊಡುವ ದೇವತೆಯು ಯಾರೆಂದು ಪ್ರಶ್ನಮಾಡಿದನು.ಅದಕ್ಕೆ ನಾರದರು ಬೇಗ ತೃಪ್ತಿಪಟ್ಟು ಕೇಳಿದ ವರವನ್ನು ಕೊಡತಕ್ಕವನು ಶಿವನೆಂದು ಹೇಳಿ, ನೀನು ಶಿವನನ್ನು ಸಂತೋಷಗೊಳಿಸಿ ವರವನ್ನು ಪಡೆಯೆಂದು ಹೇಳಿದರು. ಹಿಂದೆ ರುದ್ರದೇವನು ರಾವಣನಿಗೂ ಬಾಣಾಸುರನಿಗೂ ವರವನ್ನು ಕೊಟ್ಟ ಸಂಗತಿಯನ್ನು ಅವರು ಆ ವರದ ಪ್ರಭಾವದಿಂದ ಅಧಿಕವಾದ ಐಶ್ವರ್ಯದಿಂದ ಮೆರೆದ ವಿಚಾರವನ್ನು ತಿಳಿಸಿದರು. ಇದನ್ನು ಕೇಳಿದ ವೃಕಾಸುರನು ತಾನೂ ಸಹ ಶಿವನಿಂದ ವರವನ್ನು ಪಡೆಯಬೇಕೆಂದು ಹಿಮಾಲಯ ಪರ್ವತದಲ್ಲಿರುವ ಕೇದಾರ ಕ್ಷೇತ್ರಕ್ಕೆ ಹೋದನು. ಅಲ್ಲಿ ಕೇದಾರೇಶ್ವರನ ಸನ್ನಿಧಾನದಲ್ಲಿ ಆರುದಿನಗಳ ಕಾಲ ಅಗ್ನಿಯಲ್ಲಿ ಶಿವನನ್ನು ಕುರಿತು ಹೋಮ ಮಾಡಿದನು. ಆದಾಗ್ಯೂ ಶಿವನದರ್ಶನವು ಆಗಲಿಲ್ಲ. ಆದರಿಂದ ತುಂಬಾ ಬೇಸರಪಟ್ಟವನಾಗಿ ಕಡೆಯ ಏಳನೆಯ ದಿನ ತನ್ನ ಕುತ್ತಿಗೆಯನ್ನೇ ಕತ್ತರಿಸಿ ಹೋಮ ಮಾಡಲುಯತ್ನಿಸಿದನು. ಆಗ ಪರಮ ಕರುಣಾಳುವಾದ ಶಿವನು ಅಗ್ನಿಮೂಲಕವಾಗಿ ಪ್ರತ್ಯಕ್ಷನಾದನು. ನಿನಗೆ ಇಷ್ಟವಾದ ವರವನ್ನು ಕೇಳೆಂದು ಹೇಳಿದನು. ಅದಕ್ಕೆ ವೃಕಾಸುರನನು "ನಾನು ಯಾರ ತಲೆಯ ಮೇಲೆ ಕೈಯನ್ನು ಇಡುತ್ತೇನೆಯೋ ಅವನು ಮರಣವನ್ನು ಹೊಂದಲಿ" ಎಂಬುದಾಗಿ ವರವನ್ನು ಬೇಡಿದನು. ಈ ವರದ ವಿಷಯದಲ್ಲಿ ಶಿವನಿಗೆ ಸ್ವಲ್ಪ ಮನಸ್ಸಿನಲ್ಲಿ ಅಳುಕು ಆದರೂ, ಪರಮ ದಯಾಳುವಾದುದರಿಂದ ಮುಂದಿನ ಪರಿಣಾಮವನ್ನು ಲೆಕ್ಕಿಸದೆ ರುದ್ರದೇವನು ಹಾಗೆಯೇ ಆಗಲೆಂದು ವರವನ್ನು ಕೊಟ್ಟೇಬಿಟ್ಟನು. ಆಗ ದುಷ್ಟನಾದ ಆ ವೃಕಾಸುರನು ಎಲೈ ರುದ್ರದೇವನೇ ! ನೀನು ಕೊಟ್ಟಿರತಕ್ಕ ವರದ ಪರೀಕ್ಷೆಯನ್ನು ನಿನ್ನ ತಲೆಯ ಮೇಲೆಯೇ ನನ್ನ ಕೈಯನ್ನು ಇಟ್ಟು ಪರೀಕ್ಷಿಸಿನೋಡುತ್ತೇನೆಂದು ಹೇಳಿ ರುದ್ರನ ತಲೆಯ ಮೇಲಿಡಲು ಹೊರಟನು. ಆಗ ದಿಗ್ಭ್ರಾಂತನಾಗಿ ಶಿವನು, ಭಯಾಕ್ರಾಂತನಾಗಿ ವೃಕಾಸುರನ ಕೈಗೆ

ಬಿಡದೇ ಓಡಿಹೋದನು. ವೃಕಾಸುರನು ಬಿಡಲಿಲ್ಲ. ಶಿವನನ್ನ ಹಿಂಬಾಲಿಸಿ ಹೊರಟನು. ಶಿವನಾದರೂ ಇಡೀ ಭೂಮಂಡಲವನ್ನೆಲ್ಲಾ ಸುತ್ತಾಡಿದರೂ ಪಾತಾಳಕ್ಕೆ ಹೋದರೂ ಸಹ ಆ ಅಸುರನು ಬಿಡದೇ ಹಿಂಬಾಲಿಸಿದನು ಇದನ್ನು ಕಂಡು ದೇವತೆಗಳಿಗೆಲ್ಲಾ ಗಾಬರಿಯಾಯಿತು. ಆದರೆ ಅವರಲ್ಲಿ ಯಾರಿಗೂ ಇದಕ್ಕೆ ತಕ್ಕ ಪ್ರತಿಕ್ರಿಯೆಯನ್ನು ಮಾಡುವ ಯೋಚನೆಯೂ ಹೊಳೆಯಲಿಲ್ಲ, ಎಲ್ಲರೂ ಸುಮ್ಮನೆ ಪ್ರೇಕ್ಷಕರಾಗಿ ಪಶ್ಚಾತ್ತಾಪದಿಂದ ತಪ್ತರಾದರು. ಕಡೆಗೆ ಶಿವನು ಅಮುಕ್ತ ವೈಕುಂಠಸ್ಥಾನಕ್ಕೆ ಹೋಗಿ ಸರ್ವೇಶ್ವರನಾದ ಶ್ರೀ ಮನ್ನಾರಾಯಣನನ್ನೇ ಮರೆಹೊಕ್ಕನು. ಆಗ ವಿಷ್ಣುವು ಬಾಲಬ್ರಹ್ಮಚಾರಿ ವೇಷಧಾರಿಯಾಗಿ ವೃಕಾಸುರನನ್ನು ಕುರಿತು ಇಂತೆಂದನು. ಶಾಕುನೇಯ, ವೃಕಾಸುರ, ಬಹಳ ಆಯಾಸಪಟ್ಟಿದ್ದೀಯೇ ಬಹಳ ದೂರ ಬಂದಿದ್ದಿಯೇ, ಸ್ವಲ್ಪವಿಶ್ರಾಂತಿಯನ್ನು ಪಡೆ. ನಿನಗೆ ಏನಾಗಬೇಕು ಏತಕ್ಕೆ ಇಷ್ಟುದೂರ ಶಿವನೊಡನೆ ಅವನನ್ನು ಹಿಂಬಾಲಿಸಿಕೊಂಡು ಬಂದಿದ್ದೀಯೇ ಎಂದು ಕೇಳಿದನು. ಆಗ ವೃಕಾಸುರನು ಹಿಂದೆ ನಡೆದ ಸಂಗತಿಯನ್ನೆಲ್ಲಾ ತಿಳಿಸಿದನು.

"ಎಲೈ ಅಸುರವರ್ಯ, ನನಗೆ ರುದ್ರನ ವಾಕ್ಯದಲ್ಲಿ ಅವನು ನಿನಗೆ ಕೊಟ್ಟಿರತಕ್ಕ ವರದ ವಿಷಯದಲ್ಲಿ ಸ್ವಲ್ಪವೂ ನಂಬಿಕೆಯು ಇರುವುದಿಲ್ಲ. ಆ ರುದ್ರನಾದರೋ ಬರೀ ಸುಳ್ಳುಗಾರ. ಅವನು ದಕ್ಷನ ಶಾಪದಿಂದ ಪಿಶಾಚಿಯಂತೆ ಸ್ಮಶಾನದಲ್ಲಿ ಅಲೆಯುತ್ತಿದ್ದಾನೆ. ಯಾವಾಗಲೂ ಕೋಪಿಷ್ಠ. ಅವನು ಯಾರು ಯಾರಿಗೆ ಏನೇನು ವರಗಳನ್ನು ಕೊಟ್ಟಿರುವನೋ ಎಲ್ಲವೂ ವ್ಯರ್ಥವೇ ಆಗಿವೆ. ಕ್ರೋಧದಿಂದ ಕೂಡಿದ ಶಿವನ ಮಾತಿನಲ್ಲಿ ಸತ್ಯವೆಲ್ಲಿಂದ ಬಂತು. ನೀನಾದರೋ ಆ ಶಿವನ ಮಾತನ್ನು ನಂಬಿದ್ದೀಯೇ ಅದನ್ನು ನಂಬಿ ಮೂಢನಾಗಿರುತ್ತಿಯೇ, ಆ ರುದ್ರನ ಮಾತಿನಲ್ಲಿ ನನಗಂತೂ ಸ್ವಲ್ಪವೂ ನಂಬಿಕೆಯು ಇಲ್ಲ. ನಿನಗೇನಾದರೂ ಆ ಸುಳ್ಳುಗಾರನಾದ ಶಿವನ ಮಾತಿನಲ್ಲಿ ಸ್ವಲ್ಪವಾದರೂ ವಿಶ್ವಾಸವಿದ್ದರೆ, ನಿನ್ನ ತಲೆಯ ಮೇಲೆ ನಿನ್ನ ಕೈಯನ್ನು ಇಟ್ಟುಕೋ, ಅದೇನಾದರೂ ಸುಳ್ಳಾದರೆ, ಅಂತಹ ಸುಳ್ಳನ್ನು ಹೇಳಿರುವ ಶಿವನನ್ನು ಕೊಂದುಬಿಡು. ಮುಂದಾದರೂ ಇಂತಹ ಸುಳ್ಳನ್ನು ಅವನು ಆಡದಿರಲಿ" ಇತ್ಯಾದಿ ನಯವಾದ ಅತಿ ಚಮತ್ಕಾರವಾದ ಮಾತುಗಳನ್ನಾಡಿದನು. ಈ ವಿಧವಾದ ಮೃದು ಮಧುರವಾದ ಬ್ರಹ್ಮಚಾರಿ ವೇಷಧಾರಿಯಾದ ಶ್ರೀಹರಿಯಮಾತಿಗೆ ಬೆರಗಾಗಿ, ಮೈಮರೆತು, ಹಿಂದಿನದೆಲ್ಲಾ ಮರೆತು ಮುಂದಿನ ಪರಿಣಾಮವನ್ನು ಸಹ ಯೋಚಿಸದೆ, ಆ ರಾಕ್ಷಸನು ತನ್ನ ತಲೆಯ ಮೇಲೆ ತನ್ನ ಕೈಯನ್ನು ಇಟ್ಟುಕೊಂಡನು. ಆ ಕೂಡಲೇ ವಜ್ರಾಹತನಂತೆ ಬಿದ್ದು ಸತ್ತನು. ಆಗ ದೇವತೆಗಳು ಪರಮಾನಂದದಿಂದ ಜಯ ಜಯ ಘೋಷಗಳನ್ನು ಮಾಡುತ್ತಾ ಶ್ರೀಹರಿಯ ಮೇಲೆ ಹೂವಿನ ಮಳೆಗರೆದರು. ಪಾಪಿಯಾದ ವೃಕಾಸುರನ ಬಾಧೆಯು ಶ್ರೀಹರಿಯಿಂದ ಪರಿಹಾರವಾಯಿತು. ಮತ್ತಾರಿಂದಲೂ ಆಗದಿರುವ ಈ ಸಂಕಟ ಪರಿಹಾರವು ಶ್ರೀವಿಷ್ಣುವಿನಿಂದ ಮಾತ್ರ ಆಯಿತು. ಆದಕಾರಣ ರುದ್ರನ ಸಂಕಟ ಪರಿಹಾರಕನಾದ ಶ್ರೀಹರಿಯೇ ಸರ್ವೋತ್ತಮನೆಂಬುದಕ್ಕೆ ಈ ವೃಕಾಸುರನ ಕಥಾಖ್ಯಾನವೂ ಕೂಡ ಒಂದು ದೃಷ್ಟಾಂತವಾಗಿದೆ. ಈ ರೀತಿ ಪರಮಾತ್ಮನ ಅಪಾರವಾದ ಮಹಿಮೆಯನ್ನು, ಈಶ್ವರನಿಗೆ ಸಂಕಟವನ್ನು ಪರಿಹರಿಸಿದ ಆಖ್ಯಾನವನ್ನು ಗಿರೀಶನ ಮೋಕ್ಷವನ್ನು ಯಾರು ಹೇಳುತ್ತಾರೋ ಮತ್ತು ಕೇಳುತ್ತಾರೋ ಅವರು ಸಂಸಾರದಿಂದ ಬಿಡುಗಡೆಯನ್ನು ಪಡೆಯುತ್ತಾರೆ. ಸರ್ವೋತ್ತಮನಾದ ಶ್ರೀಹರಿಯ ಪಾದೋದಕವಾದ ಗಂಗೆಯನ್ನು ಧರಿಸಿರುವುದರಿಂದ ಶಿವನಿಗೆ ಶಿವತ್ವವು ಮಂಗಳರೂಪತ್ವವು ಪಾದ್ಮಪುರಾಣದಲ್ಲಿ ಉಕ್ತವಾಗಿದೆ-

**"ಅಥಸರ್ವೇಶ್ವರೋ ವಿಷ್ಣುರ್ಗಿರೀಶೀಯಂಪಾದಮುತ್ತಮಮ್ ।**
**ದಿವಿ ಪ್ರಸಾರಯಾಮಾಸ ಬ್ರಹ್ಮಲೋಕಾಂತಮುಚ್ಛ್ರಿತಃ ।।**

**ಧರ್ಮೋಽಸ್ಮೈಶಿವದದ್ ಬ್ರಹ್ಮಾಗೃಹೀತ್ವಾಸ್ವಕಮಂಡಲುಮ್ ।**
**ಭಕ್ತ್ಯಾ ಪ್ರಕ್ಷಾಲಯಾಮಾಸ ತತ್ಸಂಸ್ಕೃತವಾರಿಣಾ ।।**

**ಅಕ್ಷಯ್ಯಮಭವತ್ತೋಯಂ ತಚ್ಚ ವಿಷ್ಣೋಃ ಪ್ರಸಾದತಃ ।**
**ತತ್ತೀರ್ಥಂ ಮೇರುಶಿಖರೇ ಚತುರ್ದಿಕ್ಷುಪ್ರವಾಹಿತಮ್ ।।**

**ಆತ್ಮನಃ ಪಾವನಾರ್ಥಾಯ ಶಿರಸಾಹಮಧಾರಯಮ್ ।। (ಇತಿ ಪಾದ್ಮೇ)**
**"ಯದ್ ಶೌ ಚ ನಿಸ್ಸೃತಸರಿತ್ಪ್ರವರೋದಕೇನತೀರ್ಥೇನಮೂರ್ಧ್ನಿ**
**ವಿಧೃತೇನ ಶಿವಃ ಶಿವೋಽಭೂತ್" (ಇತಿ ಪಾದ್ಮೇ)**

**ಅಭಿಪ್ರಾಯ** :- ತ್ರಿವಿಕ್ರಮಾವತಾರ ಕಾಲದಲ್ಲಿ ಶ್ರೀಹರಿಯು ಎರಡನೆಯ ಪಾದವನ್ನು ದ್ಯುಲೋಕದ ಕಡೆ ಚಾಚಿದನು ಬ್ರಹ್ಮಲೋಕಾಂತವಾಗಿ ಚಾಚಲ್ಪಟ್ಟ ಆ ಪಾದವು ಬ್ರಹ್ಮಾಂಡಕಟಾಹಕ್ಕೆ ತಗುಲಿ ಪರಮಾತ್ಮನ ಉಗುರಿನಿಂದ ಬ್ರಹ್ಮಾಂಡದ ಹೊರಗಡೆಯ ಜಲಾವರಣದ ಉದಕವು ಹೊರಹೊಮ್ಮಿತು. ಆಗ ಚತುರ್ಮುಖ ಬ್ರಹ್ಮನು "ಧನ್ಯನಾದೆನು" ನಾನು ಎಂದು ಹೇಳುತ್ತಾ, ಹೊರಹೊಮ್ಮಿದ ನೀರನ್ನು ತನ್ನ ಕಮಂಡಲುವಿನಿಂದ ಹಿಡಿದು ಶೇಖರಿಸಿಕೊಂಡು ಪರಮಾತ್ಮನ ಪಾದದ ಪ್ರಕ್ಷಾಲನೆಯನ್ನು ಮಾಡಿದನು. ಆ ಜಲವೇ ಅಚ್ಯುತನ ಅನುಗ್ರಹದಿಂದ ಅಕ್ಷಯವಾಗಿ ಹರಿಯತೊಡಗಿತು. ಆ ತೀರ್ಥ ಪ್ರವಾಹವು ಮೇರು ಪರ್ವತದ ಶಿಖರದಲ್ಲಿ ನಾಲ್ಕೂ ದಿಕ್ಕುಗಳಲ್ಲಿ ಹರಿಯಿತು. ಆಗ ರುದ್ರದೇವನು ತನ್ನ ಪವಿತ್ರತೆಗಾಗಿ ಆ ವಿಷ್ಣು ಪಾದೋದಕವನ್ನು ತಾನು ತನ್ನ ತಲೆಯಲ್ಲಿ ಧರಿಸಿರುವುದಾಗಿ ಹೇಳಿಕೊಂಡಿರುತ್ತಾನೆಂದು ಪಾದ್ಮವಚನವು ತಿಳಿಸುತ್ತಲಿದೆ.

ರುದ್ರದೇವನು ಮಹಾವಿಷ್ಣುಭಕ್ತನೆಂಬುದನ್ನು ಋಗ್ವೇದ ಮಂತ್ರವು ತಿಳಿಸುತ್ತಲಿದೆ.

**ಸ್ತುಹಿ ಶ್ರುತಂ ಗರ್ತಸದಂ ಯುವಾನಂ**
**ಮೃಗಂ ನ ಭೀಮಂ ಉಪಹತ್ನುಮುಗ್ರಮ್ ।**
**ಮೃಳಾಜರಿತ್ರೇರುದ್ರಸ್ತವಾನೋ**
**ಅನ್ಯಂತೇ ಅಸ್ಮನ್ನಿವಪಂತುಸೇನಾಃ ।।**
**(ಋಗ್ವೇದ ಮಂಡಲ ೨ ಸೂಕ್ತ ೬ ಮಂತ್ರ ೧೮)**

**ತಾತ್ಪರ್ಯವು ಈ ರೀತಿ ಇದೆ :-**

ರುದ್ರನನ್ನು ಕುರಿತು ಭಕ್ತನು ಈ ರೀತಿ ಪ್ರಾರ್ಥಿಸಿದ್ದಾನೆ - ಎಲೈ ರುದ್ರದೇವನೇ ! ನಿನ್ನನ್ನು ಸ್ತೋತ್ರ ಮಾಡುವವರಿಗೆ ನೀನು ರಕ್ಷಕನಾಗಿರುತ್ತೀಯೇ । ಹೀಗೆ ಭಕ್ತರನ್ನು ರಕ್ಷಿಸುವವನಾದ ಓ ರುದ್ರನೇ ! ನೀನು ನಿನ್ನ ಹೃದಯಗುಹಾದಲ್ಲಿ ಸದಾ ನೆಲಸಿರುವ ನರಹರಿಯನ್ನು ಯಾವಾಗಲೂ ಸ್ತೋತ್ರಮಾಡು. ಆ ನರಹರಿಯ ಮಹಿಮೆಯನ್ನು ಎಷ್ಟೆಂದು ಹೇಳಲಿ. ಆ ನರಹರಿಯು ಸಕಲವೇದಗಳಲ್ಲಿಯೂ, ವೇದಾರ್ಥಗಳನ್ನು ಉಪಾಖ್ಯಾನಗಳ ಮೂಲಕವಾಗಿ ಪ್ರಕಾಶಪಡಿಸುತ್ತಿರುವ ಪುರಾಣಗಳಲ್ಲೂ ಸರ್ವೋತ್ತಮನೆಂದು ಸುಪ್ರಸಿದ್ಧನಾಗಿರುತ್ತಾನೆ. ಮುಪ್ಪು ಇಲ್ಲದ ನಿತ್ಯ ಯೌವನ ಸಂಪನ್ನನಾಗಿದ್ದಾನೆ. ತನ್ನ ಭಕ್ತನಾದ ಪ್ರಹ್ಲಾದರಾಜನಿಗೆ ಉಪದ್ರವಕಾರಕನಾದ ಹಿರಣ್ಯಕಶಿಪುವನ್ನು ಸಂಹರಿಸುತ್ತಾನೆ. ಶತ್ರುಗಳಿಗೆ ಸಿಂಹದಂತೆ ಭಯಂಕರನಾಗಿರುವನು. ಅಂತಹ ಮಹಾಮಹಿಮೋಪೇತನಾದ ಶ್ರೀಮನ್ನೃಸಿಂಹ ಸ್ವಾಮಿಯನ್ನು ಸರ್ವದಾ ಧ್ಯಾನಮಾಡುತ್ತಲಿರುವ ವೈಷ್ಣವಾಗ್ರೇಸರನಾದ ನಿನ್ನನ್ನು ನಾನು ಸ್ತೋತ್ರಮಾಡುತ್ತೇನೆ. ಇಂತಹ ನಿನ್ನ ಭಕ್ತನಾದ ನನಗೆ ಶತ್ರುಗಳಾದವರನ್ನು ಜನರಿಗೆ ಭಯಂಕರರಾದ ನಿನ್ನ ಪರಿವಾರಗಳಾದ ಪ್ರಮಥಾದಿಗಣಗಳೂ ಭೂತಗಳೂ, ಪ್ರೇತಗಳೂ, ಪಿಶಾಚಿಗಳೂ ಸಂಹರಿಸಲಿ. ಅಥವಾ ನೀನು ನರಹರಿಯನ್ನು ಸ್ತೋತ್ರಮಾಡುತ್ತಲಿರುವ ನಿನ್ನ ಶಕ್ತಿಯಿಂದ ಯಾವ ವೈಷ್ಣವನು ನರಸಿಂಹನನ್ನು ಸ್ತೋತ್ರ

ಮಾಡುತ್ತಾನೆಯೋ ಅವನಿಂದ ಅನ್ಯರಾದ ಪರಮಾತ್ಮನ ವೈಭವವನ್ನು ಅಲ್ಲಗಳೆಯುವ ಏಕವಾದಿಗಳಾದ ಮಾಯಾವಾದಿಗಳೆಂದು ಕರೆಯಲ್ಪಡತಕ್ಕ ವಿಷ್ಣುಭಕ್ತಿರಹಿತರನ್ನು ಭಯಂಕರವಾದ ನಿನ್ನಸೇನೆಯು ಸಂಹರಿಸಲಿ. ವೈಷ್ಣವರ ತಂಟೆಗೆ ಹೋಗದೆ ಇರಲಿ ಎಂದು ವೇದವಾಣಿಯು ರುದ್ರನಿಗೂ ಸ್ವಾಮಿಯಾದ ಶ್ರೀನರಹರಿಯ ಹಿರಿಮೆಯನ್ನು ತಿಳಿಸುತ್ತಲಿದೆ.

ಋಗ್ವೇದದ ಎರಡನೇ ಮಂಡಲದ ಮೂವತ್ತಮೂರನೇ ಸೂಕ್ತದಲ್ಲಿ ಹನ್ನೆರಡನೆಯ ಮಂತ್ರದಲ್ಲೂ ಸಹ ಅಂದರೆ ರುದ್ರಸೂಕ್ತವೆಂದು ಪ್ರಸಿದ್ಧವಾದ ಮಂತ್ರದಲ್ಲೂ ಸಹ ರುದ್ರನ ತಂದೆಯು ಶ್ರೀಕೃಷ್ಣ ಪರಮಾತ್ಮನೆಂದು ಹೇಳಲಾಗಿದೆ.

**ಕುಮಾರಶ್ಚಿತ್ ಪಿತರಂ ವಂದಮಾನಂ**
**ಪ್ರತಿನಾನಾಮರುದ್ರೋಪಯಂತಮ್ ।**
**ಭೂರೇರ್ದಾತಾರಂ ಸತ್ಪತಿಂ ಗೃಣೀಷೇ**
**ಸ್ತುತಸ್ತ್ವಂ ಭೇಷಜಾರಾಸ್ಯಸ್ಮೇ ॥**

**(ಋಗ್ವೇದಮಂ ೨. ಸೂ ೩೩. ಮಂತ್ರ ೧೨)**

**ಅಭಿಪ್ರಾಯ** :- ಎಲೈ ರುದ್ರನೇ, ಶ್ರೀಕೃಷ್ಣಪರಮಾತ್ಮನಿಂದ ಹುಟ್ಟಿರುವವನಾದುದರಿಂದ ನೀನು ಅವನ ಮಗನಾಗಿರುತ್ತೀಯೇ। ಹೀಗಿದ್ದರೂ ಕೂಡ ಅವತಾರಸಮಯದಲ್ಲಿ ಮಾನವರಂತೆ ಅನುಕರಿಸುವ ಸರ್ವರಿಗೂ ತಂದೆಯಾದ ಶ್ರೀಕೃಷ್ಣನು, ಕೆಲವು ಲೀಲಾರ್ಥವಾಗಿ ಕೈಲಾಸಕ್ಕೆ ಬಂದು ಪುತ್ರಾರ್ಥಿಯಾಗಿ ನಿನ್ನನ್ನು ಕುರಿತು ತಪಸ್ಸು ಮಾಡುವವನಂತೆ ನಟನೆಮಾಡುತ್ತಾ ನಿನಗೆ ನಮಸ್ಕಾರ ಮಾಡುತ್ತಾನೆ. ಹಿರಿಯರು ಕಿರಿಯರಿಗೆ ನಮಸ್ಕಾರಮಾಡುವುದು ಕಿರಿಯರ ಅಶ್ರೇಯಸ್ಸಿಗೆ ಕಾರಣವಾಗುವುದರಿಂದ, ತನ್ನ ತಂದೆಯಾದ ಶ್ರೀಕೃಷ್ಣನು ದೈತ್ಯಜನಮೋಹಕ್ಕಾಗಿ ಮಾಡಿದ ನಮಸ್ಕಾರದಿಂದ ಪಾಪಕ್ಕೆ ಗುರಿಯಾಗುತ್ತೇನೆಂಬ ಭಯದಿಂದ ಶಿವನು ತನ್ನ ಪ್ರಭುವಾದ ಶ್ರೀಕೃಷ್ಣನಿಗೆ ಭಕ್ತಿಪೂರ್ವಕವಾಗಿ ಪ್ರತಿಯಾಗಿ ನಮಸ್ಕಾರ ಮಾಡಿದನು. ಇದನ್ನು ವೇದವಾಣಿಯು ''ನನಾಮ'' ಎಂದೆ ಇರಬೇಕಾಗಿದ್ದರೂ ಕೂಡ ''ನಾನಾಮ'' ಎಂದು ದೀರ್ಘಸಹಿತವಾಗಿ ನಕಾರವನ್ನು ಒಳಗೊಂಡಿದೆ. ಮತ್ತು ಶ್ರೀಕೃಷ್ಣನು ಮಾಡಿದ ನಮಸ್ಕಾರವೂ ಕೂಡ ರುದ್ರಾಂತರ್ಯಾಮಿಯಾದ ತನಗೇನೇ (ಶ್ರೀಕೃಷ್ಣನಿಗೇನೇ ಹೊರತು) ರುದ್ರನಿಗಲ್ಲ ಎಂಬುದನ್ನು ಸೂಚಿಸುವುದಕ್ಕಾಗಿ ಶ್ರುತಿವಾಕ್ಯದಲ್ಲಿ ಕಂಡುಬಂದಿದೆ. ಇದರಿಂದ ಶ್ರೀಕೃಷ್ಣನ ನಮಸ್ಕಾರದ ಸ್ವಾರಸ್ಯವು ವ್ಯಕ್ತವಾಗುತ್ತದೆ. ಈ ರಹಸ್ಯಾರ್ಥವನ್ನು ರುದ್ರದೇವನೇ ಶ್ರೀಭಾಗವತದಲ್ಲಿ ಉಮಾದೇವಿಯನ್ನು ಕುರಿತು ಹೇಳಿರುತ್ತಾನೆ.

**''ಪ್ರತ್ಯುದ್ಗಮಪ್ರಶ್ರಯಣಾಭಿವಾದನಂ**
**ವಿಧೀಯತೇ ಸಾಧುಮಿಥಃ ಸುಮಧ್ಯಮೇ ।**
**ಪ್ರಾಜ್ಞೈಃ ಪರಸ್ಮೈ ಪುರುಷಾಯ ಚೇತಸಾ**
**ಗುಹಾಶಯಾಯೈವ ನ ದೇಹಮಾನಿನೇ ॥ (ಶ್ರೀಭಾಗವತ ೪-೩-೨೨)**

ಪ್ರಾಜ್ಞರಾದ ಜ್ಞಾನಿಗಳು, ಪರಸ್ಪರವಾಗಿ ಮಿಳಿತರಾದಾಗ, ಎದುರುಗೊಂಡಾಗ ನಮ್ರತೆಯಿಂದ ನಮಸ್ಕಾರ ಮಾಡುವುದು, ನಮ್ರತೆಯನ್ನು ತೋರಿಸುವುದು, ಇದೆಲ್ಲವೂ ಸಹ ಹೃದಯಗುಹಾದಲ್ಲಿರುವ ನಿಯಾಮಕನಾದ ಪರಮಪುರುಷನಾದ ಅಂತರ್ಯಾಮಿಯಾದ ಪರಮಾತ್ಮನಿಗೇ ಹೊರತು ದೇಹಾಭಿಮಾನಿಯಾದ ಜೀವನಿಗೆ ಅಲ್ಲ ಎಂದು ರುದ್ರ

ದೇವರು ತಮ್ಮ ಪತ್ನಿಯಾದ ಪಾರ್ವತೀದೇವಿಗೆ ಹೇಳಿರುವರು. ಶ್ರೀವಿಷ್ಣುವಿನ ಪಾದೋದಕವಾದ ಗಂಗೆಯನ್ನು ತನ್ನ ತಲೆಯಲ್ಲಿ ಶಿವನು ಧರಿಸಿರುವುದರಿಂದ ಶಿವನಿಗೆ ಶಿವತ್ವವು (ಮಂಗಳ ರೂಪತ್ವವು) ಲಭಿಸಿರುವುದೆಂದು ವೇದವಾಣಿಯೂ ಸಹ ವಿಷ್ಣುಪಾದೋದಕದ ಮಹಿಮೆಯನ್ನು ತಿಳಿಸುತ್ತಲಿದೆ.

ಋಗ್ವೇದದ ಮಂತ್ರವು ಈ ರೀತಿ ಇದೆ.

**ತವಶ್ರಿಯೆಮರುತೋಮರ್ಜಯಂತ**
**ರುದ್ರಯತ್ತೇಜನಿಮಚಾರುಚಿತ್ರಂ।**
**ಪದಂಯದ್ವಿಷ್ಣೋರುಪಮಂ ನಿಧಾಯಿ**
**ತೇನಪಾಸಿಗುಹ್ಯಂನಾಮಗೋನಾಂ॥**
**(ಋಗ್ವೇದ ೭೮-೧೬)**

**ಅಭಿಪ್ರಾಯ** :- ಪ್ರತಿ ಬ್ರಹ್ಮಕಲ್ಪದಲ್ಲೂ ಆ ಕಲ್ಪದಲ್ಲಿನ ಬ್ರಹ್ಮದೇವರಿಂದ ಆಗಿನ ರುದ್ರದೇವನು ಪುತ್ರನಾಗಿ ಜನಿಸುತ್ತಾನೆ. ತ್ರಿವಿಕ್ರಮಾವತಾರದ ಸಮಯದಲ್ಲಿ ತ್ರಿವಿಕ್ರಮ ರೂಪಿಯಾದ ಪರಮಾತ್ಮನು ತನ್ನ ಒಂದು ಪಾದವನ್ನು ಮೇಲೆ ಎತ್ತಿದಾಗ ಆ ಪಾದದ ಅಂಗುಷ್ಠದ ನಖದ ಸ್ಪರ್ಶದಿಂದ ಬ್ರಹ್ಮಾಂಡದ ಖರ್ಪರವು ಸೀಳಿ ಬ್ರಹ್ಮಾಂಡದ ಹೊರಗಿನ ನೀರು ಒಳಗೆ ಬಂದಾಗ ಆ ನೀರನ್ನು ಚತುರ್ಮುಖ ಬ್ರಹ್ಮನು ತನ್ನ ಕಮಂಡಲುವಿನಲ್ಲಿ ಹಿಡಿದು ತ್ರಿವಿಕ್ರಮ ಸ್ವಾಮಿಯ ಪಾದವನ್ನು ತೊಳೆದು ಪೂಜಿಸಿದನು. ಅದೇ ನೀರು ದೇವಗಂಗೆಯಾಗಿ ಪ್ರವಹಿಸಿತು. ಆ ಗಂಗೆಯನ್ನು ರುದ್ರದೇವನು ತನ್ನ ತಲೆಯಲ್ಲಿ ಧರಿಸಿ ಪವಿತ್ರನಾದನು. ಅಲ್ಲದೆ ಆ ವಿಷ್ಣುವಿನ ಪಾದವನ್ನು ಧ್ಯಾನಮಾಡುತ್ತಾ ಮತ್ತು ಪವಿತ್ರವಾದ ಪರಮ ಗೋಪ್ಯವಾದ ನಾಮವನ್ನು ಸದಾ ಪಠಿಸುತ್ತಾ ಮತ್ತು ತನ್ನ ಭಕ್ತಜನರಿಗೆ ಉಪದೇಶಮಾಡುವ ಮೂಲಕವಾಗಿ ರಕ್ಷಿಸುತ್ತಿರುತ್ತಾನೆಂದು ದೇವವಾಣಿಯು ಹೇಳುತ್ತಿದೆ.

ಅಗಮ್ಯ ಮಹಿಮನಾದ ಪರಮಾತ್ಮನ ವಿಚಾರವನ್ನು ಋಗ್ವೇದದ ಮತ್ತೊಂದು ಮಂತ್ರವು ಹೇಳುತ್ತಲಿದೆ.

**ಇಯಂವಿಸೃಷ್ಟಿಃಯತ ಆಬಭೂವ**
**ಯದಿವಾದಧೆ ಯದಿವಾನ।**
**ಯೋ ಅಸ್ಯಾಧ್ಯಕ್ಷಃ ಪರಮೇವ್ಯೋಮನ್**
**ಸೋ ಅಂಗವೇದ ಯದಿವಾನವೇದ॥**
**(ಋಗ್ವೇದ ೮-೭-೧೭)**

ಪರಮಾತ್ಮನಿಂದ ಚತುರ್ಮುಖನು ಸಕಲ ವೇದಗಳನ್ನು ಕೇಳುತ್ತಿರುವವನಾದಾಗ್ಯೂ ಸಹ ತನ್ನ ಹೃದಯಾಕಾಶದಲ್ಲಿ ನೆಲೆಸಿರುವ ಪ್ರಭುವಾದ ಶ್ರೀಹರಿಯನ್ನು ಸಮಗ್ರವಾಗಿ ತಿಳಿದಿದ್ದಾನೆಯೋ ಇಲ್ಲವೋ ಎಂದು ವೇದವಾಣಿಯೇ ಹೇಳುತ್ತಿರುವಾಗ ಮಿಕ್ಕ ಅಲ್ಪಜ್ಞರಾದ ಜೀವರು ಚೆನ್ನಾಗಿ ತಿಳಿದಿಲ್ಲವೆಂಬುದು ಸ್ಪಷ್ಟವಾಗಿಯೇ ಇದೆ ಇದನ್ನು ಹೇಳಬೇಕಾಗಿಯೇ ಇಲ್ಲ. ಇದನ್ನು "ಇಯಂವಿ ಸೃಷ್ಟಿ" ಎಂಬ ವೇದವಾಣಿಯು ಹೇಳುತ್ತಲಿದೆ. ಈ ಶ್ರುತಿಯನ್ನು ವೈದಿಕರು ಮಿಕ್ಕ

ಕರ್ಮದಲ್ಲಿ ಹಾಡುತ್ತಾರೆ. ಜೀವೋತ್ತಮನಾದ ಚತುರ್ಮುಖ ಬ್ರಹ್ಮನು ಪರಮಾತ್ಮನನ್ನು ತಿಳಿದಿಲ್ಲವೆಂದರೆ, ಸಮಗ್ರವಾಗಿ ಪರಮಾತ್ಮನನ್ನು ತಿಳಿದಿಲ್ಲವೆಂದೇ ಶ್ರುತಿಯ ಅಭಿಪ್ರಾಯವಾಗಿದೆ. ಆ ಸರ್ವೋತ್ತಮನಾದ ಭಗವಂತನು ಅನಂತನಾದುದರಿಂದ ಇತರ ಯಾರಿಗೂ ಅವನನ್ನು ಸಂಪೂರ್ಣವಾಗಿ ತಿಳಿಯುವುದು ಅಸಾಧ್ಯವೆಂದು ಶ್ರುತಿಯ ಪರಮಾಭಿಪ್ರಾಯ.

ಶ್ರೀವಿಷ್ಣುವು ಸರ್ವದೇಶಗಳಲ್ಲಿಯೂ ಸರ್ವಕಾಲಗಳಲ್ಲಿಯೂ ಸರ್ವ ವಿಧದಿಂದಲೂ ಜಯಶಾಲಿಯಾಗಿಯೇ ಆಗಿದ್ದಾನೆಂದು ಮತ್ತೊಂದು ಋಕ್ಕಿನ ಮಂತ್ರವು ಪರಮಾತ್ಮನ ಸರ್ವತ್ರ ವಿಜಯಶಾಲಿತ್ವವನ್ನು ಪ್ರಶಂಸೆ ಮಾಡುತ್ತಲಿದೆ. ಆ ಮಂತ್ರ ಭಾಗವು ಈ ರೀತಿ ಇದೆ -

**ಉಭಾಜಿಗ್ಯಥುರ್ನಪರಾಜಯೇಥೇ**
**ನಪರಾಜಿಗ್ಯೇ ಕತರಶ್ಚನೈನೋಃ।**
**ಇಂದ್ರಶ್ಚವಿಷ್ಣೋ ಯದಪಸ್ಪೃಧೇಥಾಂ**
**ತ್ರೇಧಾಸಹಸ್ರಂವಿತದೈರಯೇಥಾಮ್**
**(ಋ. ಮಂ೬. ಸೂ. ಮಂತ್ರ. ೧೫)**

**ಅಭಿಪ್ರಾಯ** :- ಇಂದ್ರ ಮತ್ತು ವಿಷ್ಣು ನೀವಿಬ್ಬರೂ ಸರ್ವವನ್ನೂ, ಸರ್ವಶತ್ರುಗಳನ್ನು ಜಯಿಸಿದ್ದೀರಿ. ಮೇಲೆ ಕಂಡ ವಿಷ್ಣು ಸೂಕ್ತದಲ್ಲಿನ ವೇದವಾಣಿಯು ಎಲ್ಲ ಕಡೆಯಲ್ಲಿಯೂ ಶ್ರೀಹರಿಯು ಜಯಶಾಲಿಯೆಂದೂ ಎಲ್ಲಿಯೂ ಅವನಿಗೆ ಪರಾಜಯವೇ ಇಲ್ಲವೆಂದೂ ಹೇಳುತ್ತಲಿದೆ. ಆದ ಕಾರಣ ನಿರತಿಶಯವಾದ ಮಹಾಸಾಮರ್ಥ್ಯವನ್ನುಳ್ಳ ಶ್ರೀಹರಿಗೆ ಸಮರು ಯಾರೂ ಇಲ್ಲವೆಂದು ಶ್ರುತಿಯ ಅಭಿಪ್ರಾಯವಾಗಿದೆ ಮೇಲಿನ ಋಕ್ಕಿನಲ್ಲಿರುವ ಇಂದ್ರಶಬ್ದದಿಂದ ವಿಷ್ಣುವಿನ ಇಂದ್ರಾವಿಷ್ಣುವಾದ ವಿಷ್ಣುವಿನ ರೂಪವೂ, ವಿಷ್ಣುಪದದಿಂದ ಬೇರೆ ಇರತಕ್ಕ ವಿಷ್ಣುವಿನ ರೂಪವೂ ಹೇಳಲ್ಪಟ್ಟಿದೆ. ಅಂದರೆ ಇಂದ್ರ ಶಬ್ದದಿಂದ ದೇವತೆಗಳ ರಾಜನಾದ ಶಚೀಪತಿಯಾದ ಇಂದ್ರನಲ್ಲಿ ಇಂದ್ರಾವಿಷ್ಣುನಾದ ವಿಷ್ಣುವಿನ ರೂಪವನ್ನೇ ಹೇಳುತ್ತಲಿದೆ. ಪರಮಾತ್ಮನಾದ ವಿಷ್ಣುವಿನ ಸರ್ವತ್ರ ವಿಜಯಶಾಲಿತ್ವವನ್ನು ತಿಳಿಸತಕ್ಕ ಅದಕ್ಕೆ ಸಂವಾದ ರೂಪವಾದ ಮತ್ತೊಂದು ಭಾಗವತದ ವಾಕ್ಯವೂ ಇರುತ್ತದೆ.

**ಯುಯುತ್ಸತಾಂಕುತ್ರಚಿದಾತತಾಯಿನಾಂ**
**ಜಯಃಸದೈಕತ್ರನವೈಪರಾದಯಃ।**
**ವಿನೈಕಮುತ್ಪತ್ತಿಲಯಸ್ಥಿತೀಶ್ವರಂ**
**ಸರ್ವಜ್ಞಮಾದ್ಯಂ ಪುರುಷಂ ಪುರಾತನಮ್ ॥ (ಭಾಗವತ ೬-೧೨-೮)**

**ತಾತ್ಪರ್ಯ** :- ಇಂದ್ರನಿಗೂ ವೃತ್ರಾಸುರನಿಗೂ ಘೋರವಾದ ಯುದ್ಧವು ನಡೆಯಿತು. ಆ ಯುದ್ಧದಲ್ಲಿ ವೃತ್ರಾಸುರನು ಗದೆಯಿಂದ ಇಂದ್ರನ ಗಲ್ಲಕ್ಕೆ ಬಲವಾಗಿ ಹೊಡೆದನು. ಆಗ ಇಂದ್ರನ ವಜ್ರಾಯುಧವು ಕೈಜಾರಿ ಕೆಳಗೆಬಿತ್ತು.

ಇಂದ್ರನು ಆ ಶತ್ರುವಿನ ಮುಂದೆ ಕೆಳಗೆ ಬಿದ್ದ ತನ್ನ ಆಯುಧವನ್ನು ಪುನಃ ಕೈಯಿಂದ ತೆಗೆದುಕೊಳ್ಳಲು ನಾಚಿಕೆಪಟ್ಟು ಹಿಂಜರಿದನು. ಆ ಸಂದರ್ಭದಲ್ಲಿ ವೃತ್ರನು ಈ ರೀತಿ ಇಂದ್ರನಿಗೆ ಹೇಳಿದ್ದಾನೆ. "ತಮಾಹ ವೃತ್ರೋಹರಆತ್ತವಜ್ರೋಜಹಿಸ್ವಶತ್ರುಂ ನವಿಷಾದಕಾಲಃ ಯುಯುತ್ಸತಾಂ " ಇತ್ಯಾದಿ,

**ಅಭಿಪ್ರಾಯ** :- ಎಲೋ ಇಂದ್ರನೇ ವಜ್ರಾಯುಧವನ್ನು ಹಿಡಿದು ನಿನ್ನ ಶತ್ರುವಾದ ನನ್ನನ್ನು ಕೊಲ್ಲು. ಕೈಯಿಂದ ವಜ್ರಾಯುಧವು ಕೆಳಗೆ ಬಿತ್ತೆಂದು ವಿಷಾದಪಡುವುದಕ್ಕೆ ಇದು ಕಾಲವಲ್ಲ. ಆ ಆಯುಧಪಾಣಿಗಳಾಗಿ ಯುದ್ಧಮಾಡುವವರಿಗೆ ಯಾವಾಗಲೂ ಯಾವುದಾದರೂ ಒಂದು ಕಡೆಯಲ್ಲಿಯೇ ಜಯವಿದ್ದು ಅಪಜಯವೇ ಇಲ್ಲದಿರುವುದು ಕಂಡುಬಂದಿಲ್ಲ. ಯಾವಾಗಲೂ ಎಲ್ಲ ಕಡೆಯಲ್ಲಿಯೂ ಅಪಜಯವೇ ಇಲ್ಲದೆ ಜಯವೇ ಇರುವುದು ಆ ಸರ್ವೋತ್ತಮನಾದ ಸರ್ವಜ್ಞನಾದ ಪುರಾತನನಾದ ಪರಮಾತ್ಮನಲ್ಲಿ ಮಾತ್ರ ಕಂಡುಬಂದಿದೆ. ಸೃಷ್ಟಿ ಸ್ಥಿತಿ ಲಯಕರ್ತನೂ ಸರ್ವಜ್ಞನೂ ಆದಿ ಪುರುಷನು ಸನಾತನನೂ ಆದ ಈಶ್ವರನಲ್ಲಿ (ಶ್ರೀಹರಿಯಲ್ಲಿ) ಮಾತ್ರಗೆ ಸದಾ ಜಯವಿರುವುದೇ ಹೊರತು ಮತ್ತಾರಲ್ಲೂ ಇರುವುದಿಲ್ಲ ಎಂದು ಹೇಳಿದನು ಈ ಭಾಗವತದ ವಾಕ್ಯವು ಹಿಂದೆ ತಿಳಿಸಿದ ಶ್ರುತಿಯ ಅರ್ಥವನ್ನೇ ಹೇಳುತ್ತಲಿದೆ. ಚತುರ್ಮುಖಬ್ರಹ್ಮನೂ ಕೂಡ ಶ್ರೀಹರಿಯನ್ನು ಆಶ್ರಯಿಸಿರುವುದನ್ನು ಮತ್ತೊಂದು ಸಂದರ್ಭದಿಂದ ತಿಳಿಯಬೇಕಾಗಿದೆ.

ಪೂರ್ವದಲ್ಲಿ ಬ್ರಹ್ಮನು ವೇದಾಪಹಾರಿಯಾದ ಅಸುರನಿಂದ ಪರಾಜಿತನಾದನು ಆ ಅಸುರನನ್ನು ಜಯಿಸುವುದಕ್ಕಾಗಿ ಶ್ರೀಹಯಗ್ರೀವ ಸ್ವಾಮಿಯನ್ನೇ ಆಶ್ರಯಿಸಿದನು. ಇದರಿಂದ ಚತುರ್ಮುಖನು ಅಸ್ವತಂತ್ರನೆಂದು ಸದಾ ಶ್ರೀಹರಿಯನ್ನೇ ಉಪಜೀವಿಸಿಕೊಂಡಿರುವನೆಂದೂ ಸಿದ್ಧಪಡುತ್ತದೆ. ಇದನ್ನು ಹರಿಭಕ್ತಿಲತಾದಲ್ಲಿ ಶ್ರೀವಾದೀರಾಜ ಗುರುವರೇಣ್ಯರವರು ಉಲ್ಲೇಖಿಸಿದ್ದಾರೆ.

**"ವೇದಾಪಹಾರ್ಯಸುರತೋ ಬ್ರಹ್ಮಾ ಪೂರ್ವಂ ಪರಾಜಿತಃ ।**<br>
**ತಜ್ಜಯಾರ್ಥಂ ಹಯಗ್ರೀವಂ ಭಕ್ತ್ಯಾಽಽಶ್ರಿತೋಽವದ ॥**<br>
**(ಹರಿಭಕ್ತಿಲತಾ ಶ್ಲೋ. ೧೨೬)**

ಹಿಂದೆ ರುದ್ರನು ತಪಸ್ಸನ್ನು ಮಾಡುತ್ತಿದ್ದನು. ಆಗ ಯೋಗಿನಿಯರೆಂಬ ದುಷ್ಟಶಕ್ತಿಗಳು ಈಶ್ವರನನ್ನು ನುಂಗಲು ಬಂದವು. ಅವರನ್ನು ನಿಗ್ರಹಿಸಲು ರುದ್ರನಿಗೆ ಆಗಲಿಲ್ಲ. ಅವರಿಂದ ಪರಾಜಿತನಾದನು. ಆಗ ತನ್ನ ರೂಪವನ್ನು ಮರೆಮಾಚಿ ಕುರಿ ರೂಪವನ್ನು ತಾಳಿದನು. ಆದಾಗ್ಯೂ ದುಷ್ಟಶಕ್ತಿಗಳ ಕಾಟವು ತಪ್ಪಲಿಲ್ಲ. ಕಡೆಗೆ ನರಸಿಂಹನನ್ನೇ (ನಾರಾಯಣನನ್ನೇ) ಶರಣುಹೋದನು. ಆಗ ನರಸಿಂಹನು (ನಾರಾಯಣನು) ಆ ಕುರಿಯನ್ನೇ ವಾಹನವನ್ನಾಗಿ ಮಾಡಿಕೊಂಡು ಆ ದುಷ್ಟಶಕ್ತಿಗಳನ್ನು ಸಂಹರಿಸಿ ರುದ್ರನನ್ನು ಕಾಪಾಡಿದನು. ಇದರಿಂದಲೂ ಸಹ ಶ್ರೀಹರಿಯ ಹಿರಿಮೆಯು ಗೊತ್ತಾಗುತ್ತದೆ.

ಈ ವಿಚಾರವನ್ನು ಸಹ ಹರಿಭಕ್ತಿ ಲತಾಗ್ರಂಥದಲ್ಲಿ ಶ್ರೀವಾದಿರಾಜರು ತಿಳಿಸಿದ್ದಾರೆ.

"ಸ್ವಭಕ್ತಾನಾಮಯಾಗಾಭ್ಯೋಯೋ ಗೀರ್ಧ್ವಪರಾಜಿತಃ ।
ಅಶಕ್ತಶ್ಚಜಯೇ ತಾಸಾಂ ಮೇಷಮೇಷಧರೋಽಹರಃ ।।
ತಸ್ಮಯಾರ್ಥಂ ನಾರಸಿಂಹಮನ್ತ್ರೇಽಹಂ ನಾಶ್ರತೋ ವದ ।।ಇತಿ।।
(ಹರಿಭಕ್ತಿಲತಾ ಶ್ಲೋ.೧೨೫)

ಸರ್ವತ್ರ ಅಜೇಯನು ಶ್ರೀಹರಿಯೇ ಎಂಬುದು ವಿಷ್ಣುಸಹಸ್ರನಾಮದಿಂದಲೂ ಗೊತ್ತಾಗುತ್ತಲಿದೆ.

ವೇದಾ । ಸ್ವಾಂಗೋ, ಅಜಿತಃ ಕೃಷ್ಣ (ವಿಷ್ಣುಸಹಸ್ರನಾಮ ೭ ೨)
(ನಕೇನಾಪಿಜಿತಃ, ಇತಿ, ಅಜಿತಃ)

ಮತ್ತೊಂದು ವೇದವಾಣಿಯು, ಶ್ರೀನರಹರಿಯು ಎಲ್ಲ ಕಡೆಯೂ, ಎಲ್ಲಾ ಕಾಲದಲ್ಲೂ ವಿಜಯಶಾಲಿಯೆಂದು ತಿಳಿಸುತ್ತಲಿದೆ.

ಆ ವೇದವಾಣಿಯು ಕೆಳಕಂಡಂತಿದೆ.

ಅಭಿ ಇದಂ ಏಕಂ ಏಕಃ ಅಸ್ಮಿ ನಿಷ್ಷಾಟ್ ಅಭಿ

ದ್ವಾಕಿಮ್ ಉ ತ್ರಿತ್ರಯಃ ಕರನ್ತಿ

ಖಲೇನ ಪರ್ಷಾನ್ ಪ್ರತಿ ಹನ್ಮಿ ಭೂರಿ

ಕಿಂಮಾ ನಿನ್ದಂತಿ ಶತ್ರವಃ ಅನಿನ್ದ್ರಾಃ ।।

**ಅಭಿಪ್ರಾಯ** :- ಚೇತನ ಮತ್ತು ಅಚೇತನಾತ್ಮಕವಾದ ಇದೀ ಈ ಜಗತ್ತು ಒಂದೇ ಆಗಲಿ, ಅಥವಾ ಎರಡೇ ಆಗಲಿ ಅಥವಾ ಮೂರು ಪ್ರಪಂಚಗಳೇ ಆಗಲಿ ನನಗೆ ಎದುರಾಗಿ ನನ್ನೊಡನೆ ಯುದ್ಧಕ್ಕೆ ಬಂದರೂ ಸಹ ನಾನು ಅವುಗಳಿಗೆ ಸ್ವಲ್ಪವೂ ಹೆದರದೆ ಸಹನೆಯಿಂದ ಅಮಿತವಾದ ನನ್ನ ಶಕ್ತಿಯಿಂದ ಅವುಗಳನ್ನು ನಾನೊಬ್ಬನೇ ಎದುರಿಸುತ್ತೇನೆ. ಕ್ಷಣ ಮಾತ್ರದಲ್ಲಿ ಸಂಹರಿಸುತ್ತೇನೆ. ಅಶಕ್ತರಾದ, ಅಸ್ವತಂತ್ರರಾದ, ನನ್ನೊಡನೇ ಲೀಲಾಮಾತ್ರದಿಂದ ಅವರೆಲ್ಲರನ್ನೂ ಆ ನೀಚ ರೆಲ್ಲರನ್ನೂ, ಗಾಣಿಗನು ಬೀಜಗಳಿಂದ ಎಣ್ಣೆ ತೆಗೆದು, ರಾಶಿರಾಶಿಯಾಗಿ ಬಿದ್ದಿರುವ ಧಾನ್ಯಗಳನ್ನು ಚೂರುಚೂರುಮಾಡಿ ಹಿಂಡಿ ಹಿಪ್ಪೆಮಾಡಿ ನಾಶಗೊಳಿಸುವಂತೆ ಎಲ್ಲರನ್ನು ನಾನು ಕೊಂದುಬಿಡುತ್ತೇನೆ. ಅಸಮರ್ಥರಾದ ಶತ್ರುಗಳು ನನ್ನನ್ನು ಯಾರೂ ಎದುರಿಸಲಾರರು. ನಿರವಧಿಕವಾದ ಅಚಿಂತ್ಯವಾದ ಅದ್ಭುತವಾದ ಶಕ್ತಿಸಂಪನ್ನನಾದ ನನಗೆ ಇದೀ ಈ ಜಗತ್ತಿನಲ್ಲಿ ಯಾರೂ ಎದುರಾಳಿಗಳೇ ಇರುವುದಿಲ್ಲ.

ಈ ರೀತಿಯಾದ ಸರ್ವೇಶ್ವರನಾದ ಅಪಾರವಾದ ಅಚಿಂತ್ಯವಾದ ಶಕ್ತಿಸಂಪನ್ನನಾದ ಪರಮಾತ್ಮನ ಮಹಿಮೆಯನ್ನು ಋಗ್ವೇದದ ಮತ್ತೊಂದು ಮಂತ್ರವು ತಿಳಿಸುತ್ತಲಿದೆ.

ನಿಷು ಸೀದ ಗಣಪತೇಗಣೇಷು
ತ್ವಾಮಾಹು ರ್ವಿಪ್ರತಮಂ ಕವೀನಾಂ

ನಋತೇ ತ್ವತ್ಕ್ರಿಯತೇಕ್ರಿಂಚನಾರೇ
ಮಹಾಮರ್ಕಂ ಮಘವಂ ಚಿತ್ರಮರ್ಚ ।। (ಋಗ್ವೇದ ೮-೬-೧೩)

**ಅಭಿಪ್ರಾಯ** :- ಎಲೈ ರಮಾಪತಿಯಾದ ವಿಷ್ಣುವೇ ! ನೀನು ಸಕಲೇಂದ್ರಿಯಗಳಿಗೂ ನಿಯಾಮಕನು. ಒಡೆಯನು. ನೀನು ಅಪರಿಮಿತವಾದಐಶ್ವರ್ಯವನ್ನುಳ್ಳವನಾಗಿರುತ್ತೀಯೇ. ನಿರತಿಶಯವಾದ ಕೀರ್ತಿಸಂಪನ್ನನಾಗಿರುತ್ತೀಯೇ, ಸಕಲಯಜ್ಞಭೋಕ್ತೃವೂ ಆಗಿರುವಿ. ಆದುದರಿಂದ ಹೇಮಘವನ್, ಇಂದ್ರಶಬ್ದವಾಚ್ಯನಾದ ಪರಮಾತ್ಮನೇ ! ನೀನು ಸಕಲ ಇಂದ್ರಿಯಗಳಲ್ಲೂ ಸನ್ನಿಹಿತನಾಗಿರು. ನಾನು ನಿನ್ನನ್ನು ಸಕಲೇಂದ್ರಿಯಗಳಿಂದಲೂ ಪೂಜಿಸುವಂತೆ ನನ್ನನ್ನೂ ಪ್ರೇರಣೆಮಾಡು. ಪರಮಾನಂದ ಸ್ವರೂಪನೂ ಅತೀವ ಆಶ್ಚರ್ಯಮಯನೂ, ಪರಮಪೂಜ್ಯನೂ ಸಹ ಆದ ನಿನ್ನನ್ನು ನೀನೇ ಪೂಜಿಸಿಕೋ, ಎಲೈ ಸ್ವಾಮಿಯೇ, ನಾನು ಅಸ್ವತಂತ್ರನು. ನೀನಾದರೋ ಸರ್ವತಂತ್ರ ಸ್ವತಂತ್ರನಾಗಿರುವಿ. ಬ್ರಹ್ಮಜ್ಞಾನಿಗಳಾದ ಮಹಾತ್ಮರು ನಿನ್ನನ್ನು ಜ್ಞಾನಿಗಳಲ್ಲೆಲ್ಲಾ ಶ್ರೇಷ್ಠತಮನೆಂದು ಹೇಳುತ್ತಾರೆ. ನಿನ್ನ ಹೊರತಾಗಿ ಅಂದರೆ ನೀನಿಲ್ಲದೆ ನಿನ್ನ ಪ್ರೇರಣೆಯಿಲ್ಲದೆ ಎಲ್ಲೂ, ಎಂದಿಗೂ, ಯಾರಿಂದಲೂ, ಯಾವ ಚಿಕ್ಕ ಕೆಲಸವೂ ಸಹ, ಕಡೇಪಕ್ಷ ರೆಪ್ಪೆಯನ್ನೂ ಆಡಿಸಲೂ ಸಹ ಅದು ಎಂತಹುದೇ ಕೆಲಸವಾಗಲಿ, ಅದು ಸಮೀಪದಲ್ಲೇ ಆಗಲಿ, ದೂರದಲ್ಲೆ ಆಗಲಿ, ಎಲ್ಲೂ ಏನೂ ನಡೆಯುವುದಿಲ್ಲ. ಅದು ನಿನ್ನ ಪ್ರೇರಣೆಯಿಲ್ಲದೇ ಸಾಧ್ಯವೂ ಇಲ್ಲ. ಸರ್ವ ರೀತಿಯಿಂದಲೂ, ಸ್ವರೂಪ ಪ್ರಮಿತಿ ಪ್ರವೃತ್ತಿಗಳಲ್ಲಿ ಕೇವಲ ನಿನ್ನ ಅಧೀನನಾಗಿರುವ ನಾನು ಏನನ್ನೂ ತಾನೇ ಮಾಡಿಯೇನು ? ಆದ ಕಾರಣ ನಿನ್ನನ್ನು ನೀನೇ ಪೂಜಿಸಿಕೋ, ನಿನಗೆ ನೀನೇ ಪೂಜಕ. ಅಸ್ವತಂತ್ರನಾದ ನನ್ನಲ್ಲಿ ನಿಂತು ನೀನೇ ಸನ್ನಿಹಿತನಾಗಿ ನಿನ್ನನ್ನು ಪೂಜೆ ಮಾಡು. ಬ್ರಹ್ಮಾದಿ ದೇವತೆಗಳೂ ಸಹ ಶ್ರೀಹರಿಯ ಪ್ರೇರಣೆಯಿಲ್ಲದೆ, ಅಲ್ಪವಾದ ಒಂದು ಹುಲ್ಲುಕಡ್ಡಿಯನ್ನು ಸ್ವತಂತ್ರರಾಗಿ ಎತ್ತಲೂ ಕೂಡಾ ಸಮರ್ಥರಲ್ಲವೆಂದು ಮೇಲೆ ಮಹಾ ಸಮರ್ಥನಾದ ಶ್ರೀಹರಿಗೆ ಸಮನು ಯಾರು ತಾನೇ ಇರುವನು ? ಎಂಬ ಅಭಿಪ್ರಾಯದಿಂದ ಆ ವೇದವಾಣಿಯು ಶ್ರೀಹರಿಯ ಮಹಿಮಾತಿಶಯವನ್ನು ತಿಳಿಸುತ್ತಲಿದೆ

ಶ್ರೀಮನ್ಮಹಾಭಾರತದಲ್ಲಿನ ಕರ್ಣಪರ್ವದಲ್ಲಿ ಇಪ್ಪತ್ತನಾಲ್ಕನೆಯ ಅಧ್ಯಾಯದಲ್ಲಿ ಉಕ್ತವಾಗಿರುವ ಕಥಾಭಾಗದಿಂದಲೂ ಶ್ರೀಹರಿಸರ್ವೋತ್ತಮತ್ವವು ಅತ್ಯಂತ ಸ್ಪಷ್ಟವಾಗಿ ತಿಳಿದು ಬರುತ್ತಿದೆ. ಅದರಲ್ಲಿ ರುದ್ರದೇವರು ಮಾಡಿದ ತ್ರಿಪುರಾಸುರ ಸಂಹಾರದ ಕಥೆಯು ವಿವರಿಸಲ್ಪಟ್ಟಿದೆ. ಅದು ಈ ಕೆಳಗೆ ಕಂಡಂತಿದೆ.

ತ್ರಿಪುರಾಸುರರು ತಾರಕಾಸುರನ ಮಕ್ಕಳು. ತಾರಾಕ್ಷ, ಕಮಲಾಕ್ಷ, ವಿದ್ಯುನ್ಮಾಲೀ ಎಂದು ಅವರ ಹೆಸರು. ಅವರು ಬ್ರಹ್ಮ ದೇವರನ್ನು ಕುರಿತು ತಪಸ್ಸು ಮಾಡಿದರು. ತ್ರಿಪುರತ್ವವನ್ನು ಪಡೆದರು. ಅವರಲ್ಲಿ ತಾರಾಕ್ಷನದು ಕಾಂಚನಪುರ ಕಮಲಾಕ್ಷನದು ರಾಜತಪುರ, ವಿದ್ಯುನ್ಮಾಲೀಯದು ಆಯಸಪುರ. ಈ ತ್ರಿಪುರಾಸುರ ಸಂಹಾರದ ವಿಷಯವು ಶ್ರೀಭಾಗವತದ ಏಳನೇ ಸ್ಕಂಧದ ಹತ್ತನೆಯ ಅಧ್ಯಾಯದಲ್ಲಿಯೂ ಸಹ ಯುಧಿಷ್ಠರ ನಾರದಾ ಸಂವಾದ ರೂಪವಾದ ನಾರದರಿಂದ ಯುಧಿಷ್ಠಿರನಿಗೆ ಹೇಳಲ್ಪಟ್ಟಿದೆ. ಇದು ಹತ್ತನೆಯ ಅಧ್ಯಾಯದ ಐವತ್ತಮೂರನೆಯ ಶ್ಲೋಕದಿಂದ ಎಪ್ಪತ್ತನೆಯ ಶ್ಲೋಕ ಪೂರ್ತಿಯಾಗಿ ಉಕ್ತವಾಗಿದೆ. ಭಾಗವತದಲ್ಲಿ ಉಕ್ತವಾಗಿರುವ ಕಥಾ ಸಾರಾಂಶವು ಹೀಗಿದೆ -

ಒಮ್ಮೆ ದೇವತೆಗಳಿಂದ ದೈತ್ಯರೆಲ್ಲಾ ಯುದ್ಧದಲ್ಲಿ ಪರಾಜಿತರಾದರು. ತಮ್ಮ ಅಪಜಯವನ್ನು ಸಹಿಸಲಾರದೇ ಅಸುರರು ತಮ್ಮ ಆಚಾರ್ಯನಾದ ಮಯನಿಗೆ ಶರಣಾಗತರಾದರು. ಆಗ ಮಾಯಿಗಳ ಪರಮಾಚಾರ್ಯನಾದ ಮಯನು ಮಾಯಾ ಪ್ರಭಾವದಿಂದ ಚಿನ್ನದ, ಬೆಳ್ಳಿಯ ಮತ್ತು ಕಬ್ಬಿಣದ ಮೂರು ಪಟ್ಟಣಗಳನ್ನು ನಿರ್ಮಾಣಮಾಡಿ ಅದಕ್ಕೆ ಯಾರಿಂದಲೂ ಯಾವ ವಿಧವಾಗಿಯೂ ಅಪಾಯವು ಉಂಟಾಗದಂತೆ ಭದ್ರಪಡಿಸಿದನು. ದೈತ್ಯರು ಆ ನಗರದಲ್ಲಿದ್ದುಕೊಂಡು ದೇವತೆಗಳ ಮೇಲಿನ ಹಿಂದಿನ ದ್ವೇಷದಿಂದ ಕೂಡಿದವರಾಗಿ ದೇವತೆಗಳಿಂದೊಡಗೂಡಿದ ಮೂರು ಲೋಕಗಳನ್ನು ವಿನಾಶಗೊಳಿಸಿದರು. ಆಗ ತ್ರಿಪುರಾಲಯರಾದ ದೈತ್ಯರಿಂದ ಉಂಟಾಗಿರುವ ಹಿಂಸೆಯನ್ನು ದೇವತೆಗಳು ಈಶ್ವರನಲ್ಲಿಗೆ ಹೋಗಿ ತಮ್ಮನ್ನು ರಕ್ಷಿಸಬೇಕೆಂದೂ, ಆ ರಾಕ್ಷಸರ ಬಾಧೆಯನ್ನು ಪರಿಹರಿಸಬೇಕೆಂದೂ ಭಕ್ತಿಯಿಂದ ಪ್ರಾರ್ಥಿಸಿದರು. ತ್ರಿಪುರದಹನವು ರುದ್ರನಿಂದಲೇ ಆಗಬೇಕೆಂದೂ ಶ್ರೀಹರಿಯ ಸಂಕಲ್ಪವಾಗಿತ್ತು. ಆ ಶ್ರೀಹರಿಯ ತೇಜಸ್ಸಿನಿಂದ ರಕ್ಷಿತನಾದ ಅಜೇಯನಾದ ರುದ್ರನು ಧನುಸ್ಸಿನಲ್ಲಿ ಬಾಣವನ್ನು ಹೂಡಿ ಅದರಿಂದ ಆ ತ್ರಿಪುರರ ಮೂರು ಪಟ್ಟಣಗಳನ್ನು ವಿನಾಶಗೊಳಿಸಿ ಆ ಅಸುರರ ಪ್ರಾಣವನ್ನು ತೆಗೆದನು. ಆದರೆ ಮೃತರಾದ ಆ ಅಸುರ ದೇಹಗಳನ್ನೆಲ್ಲಾ ಅಸುರಾಚಾರ್ಯನಾದ ಮಯನು "ಅಮೃತ ಸಂಜೀವಿನೀ" ಎಂಬ ಸಿದ್ಧಾಮೃತ ರಸದಿಂದ ಕೂಡಿದ ಭಾವಿಯ ರಸದಲ್ಲಿ ಅದ್ದಿ ಆ ದೈತ್ಯರನ್ನು ಮತ್ತೆ ಉಜ್ಜೀವಿತರನ್ನಾಗಿ ಮಾಡಿದನು. ಅವರು ಮತ್ತೂ ಮಹಾಪರಾಕ್ರಮದಿಂದ ರುದ್ರನೊಡನೆ ಮತ್ತೆ ಯುದ್ಧಕ್ಕೆಬಂದರು. ಭಯಂಕರವಾದ ಆ ಅಸುರರನ್ನು ಕಂಡು ಚಕಿತನಾದ ರುದ್ರನು ಚಿಂತಾಕ್ರಾಂತನಾದನು. ಶ್ರೀವಿಷ್ಣುವನ್ನು ಮರೆಹೊಕ್ಕನು. ಆಗ ಸರ್ವೋತ್ತಮನಾದ ಶ್ರೀವಿಷ್ಣುವು ಒಂದು ಉಪಾಯವನ್ನ ಮಾಡಿದನು. ಮಯನ ಮಾಯೆಗಿಂತಲೂ ಪರಮಾತ್ಮನ ಮಾಯೆಯು ಅಪರಿಮಿತವಾದ ಮಹಿಮೆಯುಳ್ಳದ್ದು. ಇದರಲ್ಲಿ ಯಾವ ಸಂದೇಹಕ್ಕೂ ಅವಕಾಶವೇ ಇಲ್ಲ. ಪರಮಾತ್ಮನು ಮಾಡಿದ ಉಪಾಯದ ವಿವರವು ಹೀಗಿದೆ.

ಶ್ರೀಹರಿಯು ಗೋರೂಪವನ್ನು ತಾಳಿದನು. ಬ್ರಹ್ಮನನ್ನು ಕರುವನ್ನಾಗಿ ಮಾಡಿಕೊಂಡನು. ಈ ಹಸುಕರುಗಳು ತ್ರಿಪುರ ಪಟ್ಟಣಕ್ಕೆ ಹೋದವು. ಅಲ್ಲಿದ್ದ ಭಾವಿಯಲ್ಲಿನ ಅಮೃತರಸವನ್ನು ಪೂರ್ತಿಯಾಗಿ ಕುಡಿದುಬಿಟ್ಟವು. ಸ್ವಲ್ಪ ಭಾಗವನ್ನು ಕೂಡ ಉಳಿಸಲೇ ಇಲ್ಲ, ಪೂರ್ತಿ ನೆಕ್ಕಿಬಿಟ್ಟವು. ಪರಮಾತ್ಮನ ಪ್ರಭಾವದಿಂದ ಮೋಹಿತರಾದ ಅಸುರರು ಈ ಹಸುಕರುಗಳ ವ್ಯಾಪಾರವನ್ನು ನೋಡುತ್ತಲೇ ಇದ್ದಾಗ್ಯೂ, ಭಗವಂತನ ಮಾಯೆಯಿಂದ ತಿಳಿಯಲಿಲ್ಲ. ಸಾಮಾನ್ಯವಾಗಿ ಅಸುರರಿಗೆ ಲಭಿಸುವ ಜಯವು ತಾತ್ಕಾಲಿಕವಾದುದು. ಶಾಶ್ವತವಾದ ಅಸುರ ಜಯವು ಯಾವ ಸಂದರ್ಭದಲ್ಲೂ ಕಂಡಿಲ್ಲ.

ಶಾಶ್ವತವಾದ ಜಯವು ದೇವತೆಗಳಿಗೆ ಮಾತ್ರವೇ ಎಂಬುದು ದೈವಗತಿಯ ರಹಸ್ಯವಾಗಿದೆ. ಇದನ್ನರಿತ ಮಾಯಿಗಳ ಮಹಾಚಾರ್ಯನಾದ ಮಯನು ಈ ಜೀವರಾಶಿಯಲ್ಲಿ ಬೇರೇ ಯಾವ ದೇವತೆಯೇ ಆಗಲಿ, ಅಸುರನೇ ಆಗಲಿ ಬೇರೊಬ್ಬನು ಯಾರೇ ಆಗಲಿ ಶ್ರೀಹರಿಯಂತೆ ಸಮರ್ಥರು ಸರ್ವಥಾ ಇರುವುದಿಲ್ಲ. ಆ ಸರ್ವಶಕ್ತಿಯಾದ ಶ್ರೀಹರಿ ಸಂಕಲ್ಪದಂತೆಯೇ ಎಲ್ಲವೂ ನಡೆಯುತ್ತದೆ ಎಂದು ತನ್ನ ಮನಸ್ಸಿನಲ್ಲೇ ತೀರ್ಮಾನಿಸಿದನು. ಮಯಾಚಾರ್ಯನು ತಾನು ಸುಮ್ಮನಿರುವುದೇ ಲೇಸೆಂದು ಸುಮ್ಮನಿದ್ದನು. ಅಮೃತ ಸಂಜೀವಿನಿರಸವನ್ನು ಪೂರ್ತಿಯಾಗಿ ಗೋವು ಮತ್ತು ವತ್ಸರೂಪಿಗಳಾದ ವಿಷ್ಣುಬ್ರಹ್ಮರು ಕುಡಿದ ನಂತರ ರುದ್ರನು ವಿಷ್ಣುವಿನತೇಜಸ್ಸಿನಿಂದ ರಕ್ಷಿತನಾಗಿ ಯುದ್ಧಸನ್ನದ್ಧನಾಗಿ ತ್ರಿಪುರಾಸುರರನ್ನು ಸಂಹರಿಸಿದನು. ಈ ತ್ರಿಪುರಾಸುರರ ಸಂಹಾರದ ಒಳರಹಸ್ಯದಿಂದಲೂ ಸಹ ಶ್ರೀಹರಿಯೇ ರುದ್ರನಿಗೆ ತ್ರಿಪುರ ಸಂಹಾರದ ಶಕ್ತಿಪ್ರದನಾದುದರಿಂದ ರುದ್ರನಿಗಿಂತಲೂ ಶ್ರೀಹರಿಯು ಉತ್ತಮನೆಂದೂ, ಸರ್ವೋತ್ತಮನೆಂದೂ

ಸಿದ್ಧವಾಗುತ್ತದೆ. ಇಂತಹ ಶ್ರೀಹರಿಗೆ ಸಮರಾಗಲಿ ಉತ್ತಮರಾಗಲಿ ಯಾರೂ ಇರುವುದಿಲ್ಲವೆಂಬುದೇ ಪರಮಾಭಿಪ್ರಾಯವಾಗಿದೆ. ಶ್ರೀಮದ್ಭಾಗವತದ ಹತ್ತನೇ ಸ್ಕಂಧ ಪೂರ್ವಾರ್ಧದಲ್ಲಿ ಮೊದಲನೆಯ ಅಧ್ಯಾಯದಲ್ಲಿ ಶ್ರೀಶುಕಾಚಾರ್ಯರು ಪರೀಕ್ಷಿತ್ ರಾಜನಿಗೆ ವಾಸುದೇವನ ಅಗಮ್ಯವಾದ ಮಹಿಮೆಯನ್ನು ವಿವರಿಸುತ್ತಾರೆ.

**ಬ್ರಹ್ಮಾತದುಪಧಾರ್ಯಾಥ ಸಹದೇವೈಃ ತಯಾಸಹ**
**ಜಗಾಮಸತ್ರಿನಯನಃ ತೀರಂ ಕ್ಷೀರಪಯೋನಿಧೇಃ ।।**
**ಇತಿ ಭಾಗವತೋಕ್ತ್ಯಾ ಚ ಬ್ರಹ್ಮರುದ್ರಾದಯಃ ಸುರಾಃ ।**
**ಶರಣಾಗತ ಭೂಭಾರಹರಣೇಕಾರ್ಯೇಽಶಕ್ತಿವರ್ಜಿತಾಃ ।**
**ಧರಾಕಾರ್ಯಾಯ ಪುಂಸೂಕ್ತಮಂತ್ರಮುಖ್ಯಾರ್ಯಭಕ್ತಿತಃ ।।**
**ಯಂಭೇಜುಃ ತತ್ಸಮಃ ಕಸ್ಮಾತ್ ವದಂತು ಪ್ರತಿವಾದಿನಃ ।।**

**(ಹರಿಭಕ್ತಿಲತಾ)**

**ಅಭಿಪ್ರಾಯ** :- ದುರಹಂಕಾರಿಗಳಾದ ರಾಜರಿಂದಲೂ, ಆ ರೂಪದಿಂದ ಭೂಮಿಯಲ್ಲಿ ಜನಿಸಿದ ದೈತ್ಯರೇನು ರಾಕ್ಷಸರೇನು ಇವರುಗಳಿಂದಲೂ ಅವರ ಅಧಿಪಾಧಿಕಾರಿಗಳಾದ ಸೈನ್ಯಪಡೆಗಳಿಂದಲೂ ಆಕ್ರಮಿಸಲ್ಪಟ್ಟ ಭೂಭಾಗದಲ್ಲಿ ಅಧರ್ಮವು ಎಲ್ಲೆಲ್ಲೂ ತಾಂಡವಮಾಡುತ್ತಿರಲಾಗಿ ಧರ್ಮಮಾರ್ಗಕ್ಕೆ ಗ್ಲಾನಿಯು ಉಂಟಾಯಿತು. ಆಗ ಅಧರ್ಮದ ಭಾರವನ್ನು ಸಹಿಸಲಾರದೆ ಭೂದೇವಿಯು, ಗೋರೂಪವನ್ನು ತಾಳಿದವಳಾಗಿ ಕಣ್ಣೀರಿಡುತ್ತಾ ತನ್ನ ಸಂಕಟವನ್ನು ಬ್ರಹ್ಮದೇವನ ಬಳಿಗೆ ಹೋಗಿ ವಿಜ್ಞಾಪಿಸಿಕೊಂಡಳು. ಧರಾದೇವಿಯ ಸಂಕಟವನ್ನು ಕೇಳಿದ ಬ್ರಹ್ಮದೇವನು ಸಕಲ ದೇವತೆಗಳ ಪರಿವಾರದಿಂದಲೂ, ಈ ಭೂದೇವಿಯಿಂದಲೂ, ರುದ್ರನ ಸಹಿತನಾಗಿ ಕ್ಷೀರಸಮುದ್ರದ ದಡದ ಬಳಿಗೆ ಹೋಗಿ ಶ್ರೀಹರಿಯ ಹಿರಿಮೆಗೆ ಮೀಸಲಾದ ಪುರುಷಸೂಕ್ತದ ಮಂತ್ರದಿಂದ ಶ್ರೀವಿಷ್ಣುವನ್ನು ಸ್ತೋತ್ರಮಾಡಿದನು. ದೈತ್ಯರ ಮತ್ತು ರಾಕ್ಷಸರ ಕಾಟದಿಂದ ಉಂಟಾದ ಭೂಭಾರದ ಹರಣಕಾರ್ಯದಲ್ಲಿ, ಬೇರೆ ಯಾರೊಬ್ಬರಿಗೂ ಶಕ್ತಿ ಇಲ್ಲದ್ದರಿಂದಲೇ ಬ್ರಹ್ಮಾದಿದೇವತೆಗಳು ಅಚಿಂತ್ಯ ಶಕ್ತಿಸಂಪನ್ನನಾದ ಸರ್ವೋತ್ತಮನಾದ ವಿಷ್ಣುವಿಗೇನೇ ಶರಣಾಗತರಾದರು. ಇಂತಹ ಅಪಾರ ಮಹಿಮಾನ್ವಿತ ಶ್ರೀಹರಿಗೆ ಸಮರಾಗಲಿ ಉತ್ತಮರಾಗಲಿ ಯಾರು ತಾನೇ ಇರುವರು ? ಯಾರೂ ಇಲ್ಲ. ಈ ಪ್ರಸಂಗವೂ ಸಹ ಶ್ರೀಹರಿಯ ಸರ್ವೋತ್ತಮತ್ವವಾದವನ್ನು ಚೆನ್ನಾಗಿ ಮನವರಿಕೆ ಮಾಡಿಕೊಡುತ್ತಲಿದೆ. ಶ್ರೀಭಾಗವತದ ಇನ್ನೂ ವಿವರವಾದ ಈ ಕಥಾಭಾಗವು ಈ ಕೆಳಗೆ ಕಂಡಂತಿದೆ. ಭೂಭಾರಹರಣಕ್ಕಾಗಿ ಪರಮಾತ್ಮನು ಭಗವದ್ಗೀತೆಯಲ್ಲಿ

**"ಯದಾ ಯದಾಹಿ ಧರ್ಮಸ್ಯಗ್ಲಾನಿರ್ಭವತಿಭಾರತ ।**
**ಅಭ್ಯುತ್ಥಾನ ಮಧರ್ಮಸ್ಯ ತದಾತ್ಮಾನಂಸೃಜಾಮ್ಯಹಮ್ ।।**

**(ಭಗವದ್ಗೀತಾ)**

ಎಂದು ನುಡಿದಿದ್ದಾನೆ.

ಆ ಪರಮಾತ್ಮನ ವಚನದಂತೆ ಅಧರ್ಮದ ನಾಶಕ್ಕಾಗಿ ಧರ್ಮದ ಪುನರುಜ್ಜೀವನಕ್ಕಾಗಿ ಪರಮಾತ್ಮನ ಅವತಾರಗಳಾಗುತ್ತಿರುವುದು ಪ್ರಮಾಣಪ್ರಸಿದ್ಧವಾದ ಸಂಗತಿಯೇ ಆಗಿದೆ. ಅದರಂತೆ ದೈತ್ಯರ ಕಾಟದಿಂದ ದುಃಖಿತಳಾದ ಭೂದೇವಿಯ ಪ್ರಾರ್ಥನೆಯಂತೆ ಬ್ರಹ್ಮದೇವರು, ನಾರದಾದಿ ಮುನಿಗಳಿಂದಲೂ ಅನುಚರರಿಂದ ಕೂಡಿದ ದೇವತೆಗಳ ಸಹಿತವಾಗಿ ಎಲ್ಲರೂ ಕ್ಷೀರಸಮುದ್ರದ ಬಳಿಗೆ ತೆರಳಿ ಭೂಭಾರಹರಣಕ್ಕಾಗಿ ಪರಮಾತ್ಮನನ್ನು ಪ್ರಾರ್ಥಿಸಿದರು. ಆಗ ಪರಮಾತ್ಮನು

ತಾನು ವಸುದೇವನ ಮಗನಾಗಿ ದೇವಕಿ ದೇವಿಯ ಗರ್ಭದಿಂದ ಪ್ರಾದುರ್ಭವಿಸುತ್ತೇನೆಂದೂ, ಭೂದೇವಿಯ ಸಂಕಟವನ್ನು ಪರಿಹರಿಸುತ್ತೇನೆಂದೂ ಅಭಯವಚನವನ್ನಿತ್ತನು. ಅದರಂತೆ ಶ್ರೀಕೃಷ್ಣಾವತಾರವಾಯಿತು. ಇದರಿಂದಲೂ ಶ್ರೀಕೃಷ್ಣನ ಸರ್ವೋತ್ತಮತ್ವವು ತಿಳಿದುಬರುತ್ತಲಿದೆ. ರುದ್ರನ ಅವತಾರದ ಹಿನ್ನಲೆಯನ್ನು ವಿಚಾರಮಾಡಿದರೂ ಸಹ ಆ ರುದ್ರನು ಶ್ರೀಮನ್ನಾರಾಯಣನ ಮೊಮ್ಮಗನಾಗಿದ್ದಾನೆ. ಇಂತಹ ರುದ್ರನನ್ನು ಶೈವರು ಸರ್ವೋತ್ತಮನೆಂದು ಕರೆದು ತಮ್ಮ ಗ್ರಂಥಗಳಲ್ಲಿ ಪಾಶುಪತಾದಿ ಆಗಮಗಳಲ್ಲಿ ಪ್ರತಿಪಾದಿಸುವುದು ಅದಕ್ಕೆ ತಕ್ಕಂತೆ ರುದ್ರನೂ ಕೂಡ ಪಾಶುಪತಾದಿ ಶಾಸ್ತ್ರಗಳನ್ನು ರಚಿಸಿ ತನ್ನ ಉತ್ಕರ್ಷವನ್ನು ಹೇಳಿರುವುದೆಲ್ಲವೂ ವರಾಹದೇವರ ಆಜ್ಞೆಯಂತೆ ನಡೆದಿರುವುದರಿಂದ ಅದು ತಾಮಸ ಜನರ ಮೋಹಕ್ಕೆಂದೇ ತೀರ್ಮಾನಿಸಬೇಕು. ಶ್ರೀಭಾಗವತದ ಮೂರನೇ ಸ್ಕಂಧದ ಹದಿಮೂರನೇ ಅಧ್ಯಾಯದಲ್ಲಿ ಹತ್ತನೆಯ ಶ್ಲೋಕವು ಈ ರೀತಿ ಇದೆ.

**"ಯದರೋದೀಃ ಸುರಶ್ರೇಷ್ಠಸೋದ್ವೇಗ ಇವ ಬಾಲಕಃ।**
**ತತಸ್ತ್ವಾಮಭಿಧಾಸ್ಯಂತಿ ನಾಮ್ನಾ ರುದ್ರ ಇತಿ ಪ್ರಜಾಃ।। (ಶ್ರೀಭಾಗವತ ಸ್ಕಂಧ ೩. ಅ. ೧೩. ಶ್ಲೋ. ೧೦)**

ಸರ್ವೋತ್ತಮನಾದ ಶ್ರೀಹರಿಯ ಸರ್ವೋತ್ತಮತ್ವಜ್ಞಾನವು ಮೋಕ್ಷಸಾಧನವು. ಅಂತಹ ಜ್ಞಾನವು ಅವಶ್ಯ ಇರಲೇಬೇಕು. ಶ್ರೀಭಾಗವತದ ಮೂರನೇ ಸ್ಕಂಧದಲ್ಲಿ ದೇವತೆಗಳ ತಾರತಮ್ಯವನ್ನು ಸೃಷ್ಟಿಕ್ರಮದಿಂದ ವಿವರಿಸಲಾಗಿದೆ.

ಚತುರ್ಮುಖ ಬ್ರಹ್ಮದೇವರು ಐದು ವಿಧಗಳಾದ ಅಜ್ಞಾನದ ವೃತ್ತಿಗಳನ್ನು (೭೪ ಪ್ರಭೇದಗಳನ್ನು) ಸೃಷ್ಟಿಮಾಡಿದರು. ತಮಸ್ಸುಮೋಹ, ಮಹಾಮೋಹ, ತಾಮಿಸ್ರ, ಅಂಧತಾಮಿಸ್ರಗಳೆಂಬ ಅಜ್ಞಾನದ ವೃತ್ತಿಗಳನ್ನು ಸೃಷ್ಟಿಸಿದರು.

"ತಮಸ್ತು ಶಾರ್ವರಂ ಪ್ರೋಕ್ತಂ ಮೋಹಸ್ತ್ವೇವ ವಿಪರ್ಯಯಃ।।
ತದಾಗ್ರಹೋಮಹಾಮೋಹ ತಾಮಿಸ್ರಂಕ್ರೋಧ ಉಚ್ಯತೇ।।

ಮರಣಾಂತ್ವಂಧತಾಮಿಸ್ರಂ ಅವಿದ್ಯಾ ಪಂಚಪರ್ವಿಕಾ।। ಎಂಬ ಪ್ರಮಾಣದಂತೆ

೧) ತಮಸ್ಸು ಶಾರ್ವರ (ಅಜ್ಞಾನ) ೨) ಮೋಹ (ವಿಪರೀತವಾದ ಜ್ಞಾನ) ೩) ಮಹಾಮೋಹ (ವಿಪರೀತವಾದ ಜ್ಞಾನದಲ್ಲಿ ಆಗ್ರಹ) ೪) ತಾಮಿಸ್ರ (ಕ್ರೋಧ) ೫) ಅಂಧತಾಮಿಸ್ರ (ಮರಣ) ಎಂಬುದಾಗಿ ಐದು ಪ್ರಸಿದ್ಧಗಳಾದ ಅಜ್ಞಾನದ ವೃತ್ತಿಗಳನ್ನು ಸೃಷ್ಟಿಮಾಡಿದನು.

ಪಾಪಕ್ಕೆ ಕಾರಣಗಳಾದ ಇವುಗಳ ಸೃಷ್ಟಿಯಿಂದ ತೃಪ್ತಿಪಡೆಯದ ಬ್ರಹ್ಮದೇವರು ತಮ್ಮ ಮನಸ್ಸಿನ ವಿಶೇಷ ಕಾರವಾದ ಪರಿಶುದ್ಧತೆಗಾಗಿ ಮತ್ತೆ ಶ್ರೀಹರಿಯನ್ನು ಧ್ಯಾನಮಾಡಿದನು. ಮತ್ತೆ ಸನಕ, ಸನಂದನ, ಸನತ್ಸುಜಾತ, ಸನತ್ಕುಮಾರರೆಂಬ ಆಜನ್ಮಬ್ರಹ್ಮಚಾರಿಗಳಾದ ಸನ್ಯಾಸಿಶ್ರೇಷ್ಠರಾದ ಯೋಗಿವರೇಣ್ಯರನ್ನು ಸೃಷ್ಟಿಮಾಡಿದರು. ಇವರ ಸೃಷ್ಟಿಯಾದ ನಂತರ ಇವರನ್ನು ಕುರಿತು ಇಂತೆಂದರು.

ಎಲೈ ಮಕ್ಕಳಿರಾ! ಪ್ರಜೆಗಳನ್ನು ಸೃಷ್ಟಿಸಿರಿ ಎಂದು ಆಜ್ಞೆ ಮಾಡಿದನು. ಕೇವಲ ನಿವೃತ್ತಿ ಮಾರ್ಗದಲ್ಲಿದ್ದು ಯಾವಾಗಲೂ ಶ್ರೀಹರಿಯ ಧ್ಯಾನದಲ್ಲೇ ತಲ್ಲೀನರಾಗಿದ್ದ ಸನಕಾದಿಗಳು ಬ್ರಹ್ಮದೇವರು ಹೇಳಿದ ಸೃಷ್ಟಿಯ ಕಾರ್ಯಕ್ಕೆ ಒಡಂಬಡಲಿಲ್ಲ. ಇದರಿಂದ ಬ್ರಹ್ಮದೇವರಿಗೆ ಕೋಪವು ಬಂತು. ಸಹಿಸಲಸಾಧ್ಯವಾದ ಆ ಕೋಪವನ್ನು ತಮ್ಮ ಬುದ್ಧಿಯಿಂದ

ತಡೆದವರಾದರೂ ಸಹ ಅದನ್ನು ನಿಗ್ರಹಿಸುವುದರೊಳಗಾಗಿಯೇ ಬ್ರಹ್ಮದೇವನ ಹುಬ್ಬಿನ ಮಧ್ಯಭಾಗದಿಂದ (ಭ್ರೂಮಧ್ಯ ಭಾಗದಿಂದ) ಕಪ್ಪು ಮತ್ತು ಕೆಂಗಣ್ಣುಗಳನ್ನುಳ್ಳ ಬಾಲಕನೊಬ್ಬನು ಜನಿಸಿದನು. ಸದ್ಯದಲ್ಲಿಯೇ ಜನಿಸಿದುದರಿಂದ ಈ ಬಾಲಕನಿಗೆ ಸದ್ಯೋಜಾತನೆಂದೂ, ಕಪ್ಪು ಮಬ್ಬು ಉಳ್ಳವನಾದ್ದರಿಂದ ನೀಲಲೋಹಿತನೆಂದೂ ಎರಡು ಹೆಸರುಗಳು ಬಂದವು.

ಇಂದ್ರ ಮೊದಲಾದ ದೇವತೆಗಳಿಗಿಂತಲೂ ಮೊದಲು ಜನಿಸಿದ ಈ ಬಾಲಕನು ಹುಟ್ಟಿದ ಕೂಡಲೇ ಅಳಲು ಆರಂಭಿಸಿದನು. ಆದ್ದರಿಂದ ಇಂದಿಗೂ ಕೂಡ ಮಕ್ಕಳು ಹುಟ್ಟಿದ ಕೂಡಲೇ ಅಳುವುದು ಪ್ರಸಿದ್ಧವೇ ಆಗಿದೆ. ಬ್ರಹ್ಮನ ಹುಬ್ಬಿನಿಂದ ಹುಟ್ಟಿದ ಸದ್ಯೋಜಾತನಾದ, ನೀಲಲೋಹಿತನಾದ ಈ ಬಾಲಕನು ರೋದನಮಾಡಿದುದರಿಂದಲೇ ಇವನನ್ನು ರೋದನಾದ್ರುದ್ರ ಉಚ್ಯತೆ ಎಂಬ ನಿರ್ವಚನದಂತೆ ರುದ್ರ ಎಂಬುದಾಗಿಯೇ ಕರೆಯಲಾಗಿದೆ. ಇದನ್ನು ಭಾಗವತವಾಣಿಯು ತಿಳಿಸುತ್ತಲಿದೆ.

**"ಯದರೋದೀಃ ಸುರಶ್ರೇಷ್ಠ ಸೋದ್ವೇಗ ಇವ ಬಾಲಕಃ ।**
**ತತಸ್ತ್ವಾಮಭಿಧಾಸ್ಯಂತಿನಾಮ್ನಾ ರುದ್ರ ಇತಿ ಪ್ರಜಾಃ ॥ (ಭಾಗವತ ಸ್ಕಂಧ ೩. ಅ. ೧೨. ಶ್ಲೋ. ೧೦)**

**ಅಭಿಪ್ರಾಯ** :- ಎಲೈ ಬಾಲಕನೇ, ನೀನು ಹುಟ್ಟಿದ ಕೂಡಲೇ ಉದ್ವೇಗದಿಂದ ಎಳೆಯ ಮಕ್ಕಳಂತೆ ಯಾವ ಕಾರಣದಿಂದ ಅಳಲು ಆರಂಭಿಸಿದೆಯೋ, ಅದರಿಂದಲೇ ನಿನ್ನನ್ನು ಪ್ರಜೆಗಳು ಹೆಸರಿಸುವಲೂ ಕೂಡ "ರುದ್ರ" (ರೋದನಾದ್ರುದ್ರಃ) ಎಂದೇ ಕರೆದಿರುತ್ತಾರೆ. ಇದರಿಂದ ಶ್ರೀವಿಷ್ಣುವಿನ ಮಗನಾದ ಬ್ರಹ್ಮನ ಹುಬ್ಬಿನಿಂದ ಹುಟ್ಟಿರುವ ರುದ್ರದೇವನು ಶ್ರೀಹರಿಯ ಮೊಮ್ಮಗನೇ ಆದುದರಿಂದ ಅಂತಹ ಶಿವನನ್ನು ಶ್ರೀವಿಷ್ಣುವಿಗೆ ಸಮನೆಂದಾಗಲಿ, ಅಥವಾ ಅಧಿಕನೆಂದಾಗಲಿ ಯಾರು ತಾನೇ ಹೇಳಿ ಯಾರು? ಹರಿಭಕ್ತಿಲತಾ ಗ್ರಂಥದಲ್ಲಿ ಮತ್ತೆರಡು ಪ್ರಸಂಗಗಳಿಂದಲೂ ಆ ಶ್ರೀಹರಿಯ ಸರ್ವೋತ್ತಮತ್ವವನ್ನು ಶ್ರೀವಾದಿರಾಜರು ಪ್ರತಿಪಾದಿಸಿರುತ್ತಾರೆ.

**"ಸಕಾಲಿಯವಿಷಜ್ವಾಲರೂಷಿತೇ ಯಮುನಾಹ್ರದೇ**
**ತದಾನನ ಸಹಸ್ರೋಗ್ರದಂಷ್ಟ್ರಾಘಾತಶತೈರಪಿ ।**
**ನಾರೋದೀತ್ ಯೋ ನಾಪಿರುಗ್ಣಃ ತಥಾಪೂತನಿಕಾಸ್ತನಮ್ (೧೮೧)**
**ಕಾಲಕೂಟವಿಷಾಲೇಪದೂಷಿತಂ ಯಃಪಿಬನ್ ಶಿಶುಃ ।**
**ನಾರೋದೀತ್ ನ ಚ ರುಗ್ಣೋऽಭೂತ್**
**ತಸ್ಯಶೂಲೀ ಶಿವಃಕಥಮ್, ಸಮತಾಮೇತಿಕೃಷ್ಣಸ್ಯವದಂತು ಕೃತಿವಾದಿನಃ ॥ ೧೮೨ ॥**
**(ಹರಿಭಕ್ತಿಲತಾ)**

**ಹಿನ್ನೆಲೆ ಮತ್ತು ತಾತ್ಪರ್ಯ** :- ಯಮುನಾ ನದಿಯ ಮಡುವಿನಲ್ಲಿ ಕಾಲಿಯಸರ್ಪನು ತನ್ನ ಪರಿವಾರ ಸಮೇತವಾಗಿ ವಾಸವಾಗಿದ್ದನು. ಆಳವಾದ ಭಯಂಕರವಾದ ಆ ಮಡುವಿನ ನೀರು ಕಾಲಿಯಸರ್ಪನ ವಿಷಜ್ವಾಲೆಯಿಂದ ಕಲುಷಿತವಾಗಿತ್ತು. ನೀರನ್ನು ಕುಡಿಯಲು ಬಂದ ದನಕರುಗಳು ಆ ನೀರನ್ನು ಕುಡಿದು ಸಾಯುತ್ತಲಿದ್ದವು. ಅಂತಹ ಆಘಾತವನ್ನು ತಪ್ಪಿಸಲು ಆ ಸರ್ಪದ ಬಾಧೆಯನ್ನು ಪರಿಹರಿಸಲು, ಆ ಕಾಲಿಯ ಸರ್ಪವನ್ನು ನಿಗ್ರಹಿಸಲು, ಶ್ರೀಕೃಷ್ಣ ಪರಮಾತ್ಮನು ಭಯಂಕರವಾದ ವಿಷಜ್ವಾಲೆಯಿಂದ ಕೂಡಿದ ಆ ಮಡುವಿನಲ್ಲಿ ಧುಮುಕಿದನು. ಆಗ ಆ ಮಡುವಿನಲ್ಲಿ

ವಾಸವಾಗಿದ್ದ ಕಾಲಿಯಸರ್ಪನು ಕೋಪಾವಿಷ್ಟನಾಗಿ ನಾಗಪತ್ನಿಯರಿಂದ ಕೂಡಿ ಶ್ರೀಕೃಷ್ಣಪರಮಾತ್ಮನನ್ನು ಮರ್ಮ ಪ್ರದೇಶದಲ್ಲಿ ಅನೇಕಸಲ ಕಚ್ಚಿ ಸುತ್ತುವರಿದು ಬಿಗಿ ಹಿಡಿದಾಗ್ಯೂ ಸಹ ಶ್ರೀಕೃಷ್ಣನು ಅಳಲಿಲ್ಲ. ಮತ್ತು ಎಷ್ಟು ಸಲ ಕಚ್ಚಿದರೂ ಸ್ವಲ್ಪವೂ ಶ್ರೀಕೃಷ್ಣನಿಗೆ ಗಾಯವಾಗಲಿಲ್ಲ. ಮೇಲಾಗಿ ಆ ಕಾಲಿಯ ಸರ್ಪವನ್ನೇ ನಿಗ್ರಹಿಸಿದನು.

ಹೀಗೆಯೇ ವಿಷದಿಂದ ದೂಷಿತವಾದ ಪೂತನಿಯ ಮೊಲೆಯನ್ನುಂಡವನಾದಾಗ್ಯೂ ಕೂಡ ಆ ವಿಷದ ಕಾಟವು ಸ್ವಲ್ಪವೂ ಶ್ರೀಕೃಷ್ಣನಿಗೆ ಆಗಲಿಲ್ಲ. ಆಗಲೂ ಕೂಡ ಅಳಲಿಲ್ಲ. ಆದರೆ ಶಿವನಾದರೋ ಚತುರ್ಮುಖ ಬ್ರಹ್ಮನ ಹುಬ್ಬಿನಿಂದ ಹುಟ್ಟಿದ ಕೂಡಲೇ "ಅಯ್ಯೋ ನನಗೆ ಕುಡಿಯಲು ಹಾಲಿಲ್ಲ. ತನಗೆ ಹೆಸರಿಲ್ಲ. ನಿಲ್ಲಲು ಜಾಗವಿಲ್ಲ" ಎಂದು ದುಃಖದಿಂದ ಅತ್ತು ಬಿಟ್ಟನು. (ರೋದನಾದ್ರುದ್ರಉಚ್ಯತೆ) ಆದ್ದರಿಂದಲೇ ರುದ್ರನೆಂದು ವಿಖ್ಯಾತನಾದನು. ಮತ್ತು ಪ್ರಧಾನ ವಾಯುದೇವನು ಕ್ಷೀರಸಮುದ್ರವನ್ನು ಮಥಿಸಿದ ಮೇಲೆ ಹುಟ್ಟಿದ ಹಾಲಾಹಲ ವಿಷದ ಪೂರ್ತಿ ಭಾಗವನ್ನು ಶ್ರೀಹರಿಯ ಅಪ್ಪಣೆಯಂತೆ ಕುಡಿದು ಜೀರ್ಣಿಸಿಕೊಂಡು, ಎಲ್ಲೋ ಸ್ವಲ್ಪಭಾಗವು ಕೈಗೆ ಅಂಟಿಕೊಂಡುದನ್ನು ಮತ್ತೆ ತನ್ನ ಕೈಯಿಂದ ನಾಶವನ್ನು ತಿಕ್ಕುವಂತೆ ತಿಕ್ಕಿ ಅದರ ಶಕ್ತಿಯನ್ನು ಕುಂದಿಸಿ, ಆ ಅತ್ಯಲ್ಪಶೇಷವನ್ನು ರುದ್ರನಿಗೆ ಕುಡಿಯಲು ಕೊಟ್ಟನು. ರುದ್ರನು ಅದನ್ನು ಬಾಯಲ್ಲಿ ಹಾಕಿಕೊಂಡ ಕೂಡಲೇ ಅದರ ವೇಗವನ್ನು ತಡೆಯಲಾರದೇ ಮೂರ್ಛೆಗೊಂಡನು. ಪರಮದಯಾಳುವಾದ ಶ್ರೀಹರಿಯ ಕೈಗಳ ಸ್ಪರ್ಶದಿಂದ ಮತ್ತೆ ಎಚ್ಚೆತ್ತನು. ಶ್ರೀಹರಿಯ ದಯೆಯಿಂದ ಆ ವಿಷವು ಕುತ್ತಿಗೆಯಲ್ಲೇ ನಿಂತು ವಿಷಕಂಠನೆಂದು ಪ್ರಸಿದ್ಧನಾದನು. ಮತ್ತು ಆ ವಿಷದ ಶೂಲೆಯ ಪರಿಹಾರಕ್ಕಾಗಿಯೇ ವಿಷ್ಣುಪಾದೋದಕವಾದ ಶೀತಲಗಂಗೆಯನ್ನು ತನ್ನ ತಲೆಯ ಮೇಲೆ ಧರಿಸಿದನು. ಇಂತಹ ಶ್ರೀಹರಿಯ ಮೊಮ್ಮಗನಾದ ಶ್ರೀಹರಿಯ ದಯೆಗೆ ಪಾತ್ರನಾದ ಶಿವನು ಶ್ರೀವಿಷ್ಣುವಿಗೆ ಹೇಗೆ ತಾನೇ ಸಮನಾದಾನು ? ಶಿವನೇ ಸರ್ವೋತ್ತಮನೆಂದು ಶುಷ್ಕವಾದ ವಾದವನ್ನು ಮಾಡುವ ಪ್ರತಿವಾದಿಗಳು ಇದಕ್ಕೆ ಉತ್ತರವನ್ನು ಕೊಡಲಿ ಎಂದು ಶ್ರೀವಾದಿರಾಜ ಗುರುವರೇಣ್ಯರು ಪ್ರಶ್ನಿಸಿದ್ದಾರೆ. ಈ ಎಲ್ಲಾ ಪ್ರಸಂಗಗಳಿಂದಲೂ ಶ್ರೀಹರಿಯ ಸರ್ವೋತ್ತಮತ್ವವು ಅತ್ಯಂತ ನಿಚ್ಚಳವಾಗಿ ಆ ಬಾಲ ವೃದ್ಧರಿಗೂ ತಿಳಿದುಬರುತ್ತದೆ. ಶ್ರೀಮದ್ಭಾಗವತದಲ್ಲಿನ ಹತ್ತನೆಯ ಸ್ಕಂಧದಲ್ಲಿ ಶ್ರೀವಿಷ್ಣುವಿನ ಮಹಿಮೆಯನ್ನು ವರ್ಣಿಸುವಾಗ ಪ್ರಸಕ್ತವಾಗಿರುವ ವೇಣುಗೀತೆಯ ಪ್ರಸಂಗವೂ ಕೂಡ ಶ್ರೀಕೃಷ್ಣಪರಮಾತ್ಮನ ಸರ್ವೋತ್ತಮತ್ವವನ್ನು ಪ್ರಕಟಿಸುವ ರತ್ನದ ಕನ್ನಡಿಯಂತಿದೆ.

"ಶರ್ವಶಕ್ರಪೂರ್ವಗೀರ್ವಾಣಾಸ್ತೇ ಹರೇಃ ಶಿಶೋಃ ।
ತದ್ವೇಣುಗೀತಶೀಲತ್ವಂ ಅಪಶ್ಯಂಶ್ಚ ಭೂತಲೇ ॥
ಶ್ರೋತುಂ ಕೌತೂಹಲಯುತಾಃ ಕಂಧರಾಂಗಾತ್ರಮೇವಚ ।
ಸನ್ನ್ಯೇಕ್ಷ್ಯಸ್ವಲೋಕಾದಪ್ಯಧೋಭಾಗೇ ಪ್ರದರ್ಶಿತಮ್ ॥
ಶ್ರುತ್ವಾವಧಾರ್ಯ ಮನಸಾ ಸ್ವಾಭ್ಯಾಸಾಂಪೂರ್ವತಾಂತಮ್ ।
ನಿಶ್ಚಿತ್ಯ ಹರಿಕೃತ್ಯತ್ವಂ, ಇಯತ್ತಾಪ್ರಾಪ್ತಿಧೀಯುತಾಃ ॥
ಮಹಾಂತಂ ವಿಸ್ಮಯಂ ಸರ್ವೇ ಯಯುರಿತ್ಯಾಹ ವಾಗಿಯಮ್ ॥

ಆ ಭಾಗವತದ ವಾಕ್ಯವು ಈ ರೀತಿ ಇದೆ.

''ಸುವನಸಸ್ತದುಪಧಾರ್ಯ ಸುರೇಶಾಃ
ಶಕ್ರಶರ್ವಪರಮೇಷ್ಠಿಪುರೋಗಾಃ ।
ಕವಯ ಆನತಕಂಧರಗಾತ್ರಾಃ
ವಿಸ್ಮಯಂ ಯಯುರನಿಶ್ಚಿತತತ್ವಾಃ ।। (ಇತಿ ಭಾಗವತೇ ವೇಣುಗೀತಾ ಮಾಹಾತ್ಮ್ಯೇ)
''ಯೇಽಸ್ಯ ಸಂಗೀತಕೌಶಲ್ಯಮಪಿ ನಾನ್ತಂ ವಿಜಾನತೇ ।
ತೇದೇವಾಃ ಸೃಷ್ಟಿಸಂಹಾರಸ್ಥಿತ್ಯಾದಿಷು ಚ ಕೌಶಲಮ್ ।।
ಅನಾದಿಕಾಲಮಾರಭ್ಯಾನಂತರಾಕ್ಷಸಶಿಕ್ಷಣೇ ।
ಸಮರ್ಥವೀರ್ಯ ಧೈರ್ಯಾದಿ ಕೌಶಲ್ಯಂ ಜಗದೀಶಿತುಃ ।।
ನಜಾನಂತೀತಿ ಕಿಂವಾಚ್ಯಂ ಈದೃಶ್ಯೇನ ಮಹಾತ್ಮನಾ ।
ಕಃಸಮೋ ವಾ ಅಧಿಕೋವಾಸ್ಯಾದ್ ವದಂತು ಪ್ರತಿವಾದಿನಃ ।। (ಇತಿ ಹರಿಭಕ್ತಿಲತಾ)

**ತಾತ್ಪರ್ಯ** :- ಇಂದ್ರ, ರುದ್ರ, ಬ್ರಹ್ಮ ಮೊದಲಾದ ದೇವತೆಗಳು ಶಿಶುರೂಪಿಯಾದ ಶ್ರೀಕೃಷ್ಣ ಪರಮಾತ್ಮನ ಅದ್ಭುತವಾದ, ಅಸಾಧಾರಣವಾದ, ವೇಣುಗಾನವನ್ನು ಕೇಳಿ, ಆ ಗಾನದ ಇತಿ ಮಿತಿ, ಪರಿಮಿತಿಯನ್ನು ತಿಳಿಯದೇ, ನಮ್ರತೆಯಿಂದ ತಲೆಯನ್ನು ಬಗ್ಗಿಸಿಕೊಂಡು ಭಕ್ತಿಪರವಶರಾಗಿ ಕೇಳಿ ಆಶ್ಚರ್ಯಪಟ್ಟರು ಎಂಬ ವಿಷಯವು ಶ್ರೀಮದ್ಭಾಗವತದಲ್ಲಿ ದಶಮ ಸ್ಕಂಧದಲ್ಲಿ ವೇಣುಗೀತೆಯ ಪ್ರಕರಣದಲ್ಲಿ ಉಕ್ತವಾಗಿದೆ.

**ಒಟ್ಟು ಅಭಿಪ್ರಾಯ ಸಂಗ್ರಹ** :- ಜಗತ್ತಿನಲ್ಲಿ ಪ್ರಸಿದ್ಧರಾದ ದೈತ್ಯರ ಹನನ ಕಾರ್ಯವೇ ಮೊದಲಾದವುಗಳನ್ನು ನಡೆಸಿರುವವರಾದ, ಇಂದ್ರ, ರುದ್ರ, ಚತುರ್ಮುಖ ಮೊದಲಾದ ದೇವತೆಗಳು ಭೂಮಿಯಲ್ಲಿ ಶ್ರೀಕೃಷ್ಣರೂಪದಿಂದ ಅವತರಿಸಿದ (ಅಭಿವ್ಯಕ್ತನಾದ) ಪರಮಾತ್ಮನು ಶಿಶುರೂಪನಾಗಿ ನುಡಿಸಿದ ಆಶ್ಚರ್ಯಕರವಾದ ವೇಣುಗಾನವನ್ನು ತಮ್ಮ ತಮ್ಮ ಲೋಕಗಳಲ್ಲಿಯೇ ಇದ್ದೂ ದೇಹವನ್ನು ಬಗ್ಗಿಸಿಕೊಂಡು, ತಲೆಯನ್ನು ಬಗ್ಗಿಸಿಕೊಂಡು ಕೇಳುತ್ತಾ ತಮಗೆ ಅದುವರೆವಿಗೆ ಎಂದೂ ಎಲ್ಲೂ ಕೇಳದಿರುವ ಗಾನಶಾಸ್ತ್ರದ ವೈಖರಿಯನ್ನು ಕೇಳುತ್ತಾ ಆಶ್ಚರ್ಯದಿಂದ ಚಕಿತರಾದರು. ಶ್ರೀಹರಿಯ ಮಹಿಮೆಗೆ ಇತಿಮಿತಿಯೇ ಇಲ್ಲವೆಂದು ನಿಶ್ಚಯಿಸಿದವರಾಗಿ ಆಶ್ಚರ್ಯಪಟ್ಟರು ಎಂದು ಪರಮಾಭಿಪ್ರಾಯ. ಶ್ರೀಹರಿಯ ಸರ್ವೋತ್ಕರ್ಷವನ್ನು ಶ್ರೀವಾದಿರಾಜರು ಈ ಪ್ರಕರಣದಿಂದಲೂ ದೃಢಪಡಿಸುತ್ತಾರೆ.

ಯೇಽಸ್ಯಸಂಗೀತಕೌಶಲ್ಯಮಪಿ ನಾನ್ತಂವಿಜಾನತೇ ಎಂಬ ವಾಕ್ಯಗಳಿಂದ ವಿವರಿಸುತ್ತಾರೆ.

**ಅಭಿಪ್ರಾಯ** :- ಯಾವ ಬ್ರಹ್ಮ, ರುದ್ರ, ಇಂದ್ರಾದಿ ದೇವತೆಗಳು ಕಡೇ ಪಕ್ಷ ಪರಮಾತ್ಮನ ಸಂಗೀತದ ಪಾಂಡಿತ್ಯದ ಪರಮಾವಧಿಯನ್ನು ಕೂಡ ತಿಳಿಯಲಾರರೋ, ಅಂತಹ ದೇವತೆಗಳು, ಶ್ರೀಹರಿಯ ಜಗತ್ತಿನ ಸೃಷ್ಟಿವ್ಯಾಪಾರದ, ಸ್ಥಿತಿವ್ಯಾಪಾರದ, ಸಂಹಾರವೇ ಮೊದಲಾದ ವ್ಯಾಪಾರಗಳ, ಚಮತ್ಕಾರಗಳನ್ನಾಗಲಿ, ಅನಾದಿ ಕಾಲದಿಂದಲೂ ಪರಮಾತ್ಮನು ನಡೆಸುತ್ತಿರುವ ಅಸಂಖ್ಯಾಕರಾದ ದೈತ್ಯರ ಸಂಹಾರ ಕ್ರಿಯೆಯನ್ನಾಗಲಿ, ಮತ್ತು ಶ್ರೀಹರಿಯ ಅಪರಿಮಿತವಾದ, ಧೈರ್ಯ, ಸ್ಥೈರ್ಯ, ವೀರ್ಯ, ಔದಾರ್ಯ, ಸೌಂದರ್ಯ ಕೌಶಲ್ಯ ಮೊದಲಾದವುಗಳನ್ನು ಸಮಗ್ರವಾಗಿ ಹೇಗೆ ತಾನೇ ತಿಳಿಯಲು ಶಕ್ತರಾಗುತ್ತಾರೆ ? ಇಂತಹ ಅಗಮ್ಯವಾದ ಮಹಾಮಾಹಾತ್ಮ್ಯೆಯನ್ನುಳ್ಳ ಶ್ರೀಹರಿಗೆ ಯಾರು ತಾನೇ ಸಮರು ಅಥವಾ ಅಧಿಕರು ? ಪ್ರತಿವಾದಿಗಳೇ ಹೇಳಿರಿ ಎಂದು ಒಂದು ಸವಾಲನ್ನು ಹಾಕಿರುತ್ತಾರೆ. ಅತಿ ಚಮತ್ಕಾರವಾಗಿ ಮತ್ತೊಂದು ಪ್ರಶ್ನೆಯನ್ನು ಸಹ ಶ್ರೀವಾದಿರಾಜರು ಹಾಕಿ ಅದಕ್ಕೆ ತಕ್ಕ ಉತ್ತರವೇ ಇಲ್ಲವಾದ್ದರಿಂದಲೂ ಶ್ರೀಹರಿಯ ಸರ್ವೋತ್ಕರ್ಷವನ್ನು ತೀರ್ಮಾನಿಸಿರುತ್ತಾರೆ.

**ಚತುರ್ಮುಖಃ, ಪಂಚಮುಖಃ ಷಣ್ಮುಖೋದ್ವಿ ಮುಖೋಽಪಿವಾ ।**
**ಸಹಸ್ರವದನೋವಾ ಸ್ಯಾದ್ ಅನೇಕೈರ್ವದನೈರಪಿ ।। ೧೯೫ ।।**
**ಶಿಶೋಃ ಕೃಷ್ಣಸ್ಯ ವಕ್ತ್ರಚಿತ್ರಗಾನರಸೋಪಮಮ್ ।**
**ಕಸಂಗೀತರಸಂ ಕುರ್ಯಾತ್ ವದಂತು ಪ್ರತಿವಾದಿನಃ ।। ೧೯೬ ।। (ಹರಿಭಕ್ತಿಲತಾ)**

**ತಾತ್ಪರ್ಯ** :- ದೇವತೆಗಳಲ್ಲಿ ಸುಪ್ರಸಿದ್ಧನಾದ ನಾಲ್ಕು ಮುಖಗಳನ್ನುಳ್ಳ ಚತುರ್ಮುಖ ಬ್ರಹ್ಮನಾಗಲಿ, ಪಂಚಮುಖನಾದ ಶಂಭುವೇ ಆಗಲಿ, ಆರುಮುಖಗಳನ್ನುಳ್ಳ ಷಣ್ಮುಖನೇ ಆಗಲಿ, ಎರಡುಮುಖಗಳನ್ನುಳ್ಳವನೇ ಆಗಲಿ, ಅಥವಾ ಒಂದು ಸಾವಿರಮುಖಗಳನ್ನುಳ್ಳ ಆದಿಶೇಷನೇ ಆಗಲಿ, ತಮ್ಮ ಅನೇಕ ಮುಖಗಳಿಂದ ನಮ್ಮ ಸ್ವಾಮಿಯಾದ ಪುಟ್ಟ ಮಗುವಿನಂತಿರುವ ಶ್ರೀಕೃಷ್ಣನ ಚಿಕ್ಕ ಬಾಯಿಯಿಂದ ಹೊರಹೊಮ್ಮಿದ ವಿಚಿತ್ರವಾದ ಗಾನರಸ ಸ್ವಾರಸ್ಯಕ್ಕೆ ಸರಿಸಮಾನವಾದ ಆನಂದಕರವಾದ ಸಂಗೀತವನ್ನು ಹಾಡಬಲ್ಲರೇನು ? ಪ್ರತಿವಾದಿಗಳೇ ಹೇಳಿರಿ.

ಮತ್ತೊಂದು ರೀತಿಯಿಂದಲೂ ಶ್ರೀಹರಿಯ ಸರ್ವೋತ್ಕರ್ಷವನ್ನು ಯುಕ್ತಿಯುಕ್ತವಾಗಿ ಸಾಧಿಸಿರುತ್ತಾರೆ.

**ಶಾಪಪ್ರಸಾದಯೋರೀಶಾಃ ಬ್ರಹ್ಮವಿಷ್ಣುಶಿವಾದಯಃ ।**
**ಸದ್ಯಃಶಾಪಪ್ರಸಾದೋಂಽಗಶಿವೋಽಬ್ರಹ್ಮಾಚ ನಾಚ್ಯುತಃ ।। ೧೯೭ ।। (ಹರಿಭಕ್ತಿಲತಾ)**

**ತಾತ್ಪರ್ಯ** :- ದೇವತೆಗಳ ಗುಂಪಿನಲ್ಲಿ ಸರ್ವೋತ್ತಮನಾದ ಶ್ರೀಹರಿ, ಬ್ರಹ್ಮ, ಶಿವ, ಇಂದ್ರ ಮೊದಲಾದ ದೇವತೆಗಳು ವರವನ್ನು ಕೊಡಲು ಸಮರ್ಥರು ಮತ್ತು ಶಾಪವನ್ನು ಕೊಡಲೂ ಸಹ ಶಕ್ತರು. ಆದರೆ ಶ್ರೀಹರಿಯ ಹೊರತಾಗಿ ಬ್ರಹ್ಮ ಶಿವ ಮೊದಲಾದವರ ಶಾಪವಾಗಲಿ, ಪ್ರಸಾದವಾಗಲಿ, ವರವೇ ಆಗಲಿ, ಅದು ತಾತ್ಕಾಲಿಕವಾದುದು. ಸ್ಥಿರವಾದುದೇನೂ ಅಲ್ಲ. ಅಚ್ಯುತನದು ಹಾಗಲ್ಲ. ಶ್ರೀವಿಷ್ಣುವಿನ ವರವೂ ಪ್ರಸಾದವೂ ಸಹ ಶಾಶ್ವತವಾದುದು. ಶಾಪವೂ ಸಹ ಸ್ಥಿರವಾದುದು. ಅದಕ್ಕೆ ಎಂದಿಗೂ ಚ್ಯುತಿಯೇ ಇರುವುದಿಲ್ಲ. ಇದೊಂದು ಕಾರಣವೂ ಸಹ ಶ್ರೀಹರಿಯ ಸರ್ವೋತ್ಕರ್ಷವನ್ನು ವ್ಯಕ್ತಪಡಿಸುತ್ತಲಿದೆ. ಇದೂ ಸಹ ಶ್ರೀಮದ್ಭಾಗವತದಲ್ಲಿ ಉಕ್ತವಾಗಿದೆ.

ಮೇಲೆ ಕಂಡ ಅಂಶಕ್ಕೆ ದೃಷ್ಟಾಂತವನ್ನು ತೋರಿಸಿದ್ದಾರೆ.

**ಇತಿ ಭಾಗವತೋಕ್ತ್ಯಾ ಚ ವರಂದತ್ವೈವಮಾರಕೇ ।**
**ಕಥಂ ಬ್ರಹ್ಮಶಿವೌ ಭಕ್ತಪಾಲನೈಕಧುರಂಧರಾತ್ ।। ೧೯೮ ।।**
**ವಿಭೀಷಣಧ್ರುವಾದೀನಾಂ ಆಕಲ್ಪಾಂತಪದಪ್ರದಾತ್ ।**
**ಹರೇರೂನಚರಿತ್ರೌ ನ ವದಂತು ಪ್ರತಿವಾದಿನಃ ।। ೧೯೯ ।। (ಹರಿಭಕ್ತಿಲತಾ)**

**ತಾತ್ಪರ್ಯ** :- ಹಿಂದೆ ಉದಾಹರಿಸಿದ "ಶಾಪಪ್ರಸಾದಯೋರೀಶಾ" ಎಂಬ ಶ್ಲೋಕವು ಶ್ರೀಮದ್ಭಾಗವತ ಹತ್ತನೇ ಸ್ಕಂಧದ ಉತ್ತರಾರ್ಧದ ಎಂಭತ್ತೆಂಟನೆಯ ಅಧ್ಯಾಯದಲ್ಲಿ ಪರೀಕ್ಷಿತ್ ರಾಜನಿಗೆ ಶುಕಾಚಾರ್ಯರ ಉಪದೇಶ ರೂಪವಾದ ಹನ್ನೆರಡನೆಯ ಶ್ಲೋಕವಾಗಿದೆ.

ಸರ್ವೋತ್ತಮನಾದ, ಸರ್ವಶಕ್ತನಾದ, ಭಕ್ತಪರಿಪಾಲನೈಕಧುರಂಧರನಾದ, ಧರ್ಮದ ಪುನರುಜ್ಜೀವನಕ್ಕಾಗಿ ಅವತಾರಗಳನ್ನು ತಾಳಿರುವವನಾದ, ಸರ್ವತಂತ್ರ ಸ್ವತಂತ್ರನಾದ ಶ್ರೀಹರಿಯು ವಿಭೀಷಣನಿಗೂ, ಧ್ರುವನಿಗೂ ಮತ್ತು ಇವರೇ ಮೊದಲಾದ ಭಕ್ತರಿಗೂ ಶಾಶ್ವತವಾದ ಪದವಿಗಳನ್ನು ಅನುಗ್ರಹಿಸಿ ರಕ್ಷಿಸುತ್ತಿದ್ದಾನೆ. ಆ ಪದವಿಗಳಿಗೆ ಎಂದಿಗೂ ಚ್ಯುತಿಯು

ಇರುವುದಿಲ್ಲ. ಆದರೆ ಬ್ರಹ್ಮನಾಗಲಿ, ರುದ್ರನಾಗಲಿ, ಇವರು ತಮ್ಮನ್ನು ಕುರಿತು ತಪಸ್ಸನ್ನು ಮಾಡಿದವರಿಗೆ ದೈತ್ಯದಾನವರಿಗೆ ವರಗಳನ್ನು ಕೊಟ್ಟಿರುತ್ತಾರೆ. ಆ ವರರೂಪವಾದ ಅನುಗ್ರಹಗಳು ಕೆಲವು ಕಾಲದವರೆವಿಗೆ ಮಾತ್ರ ಅವರುಗಳಿಗೆ ಕಾರಕಗಳಾಗಿವೆ. ಕೆಲವು ಕಾಲ ಕಳೆದ ಮೇಲೆ ಅವೆಲ್ಲಾ ಮಾರಕಗಳಾಗಿವೆ. ಹೀಗಿರುವಲ್ಲಿ ಬ್ರಹ್ಮರುದ್ರಾದಿಗಳು ಶ್ರೀಹರಿಗಿಂತಲೂ ತಾರತಮ್ಯದಲ್ಲಿ ಅಧಮರಲ್ಲವೇನು ? ಪ್ರತಿವಾದಿಗಳು ಹೇಳಲಿ ಎಂದು ಶ್ರೀಹರಿಯ ಉತ್ಕರ್ಷವನ್ನು ಈ ದೃಷ್ಟಿಯಿಂದಲೂ ವ್ಯಕ್ತಪಡಿಸುತ್ತಾರೆ. ಮತ್ತೊಂದು ಸಂದರ್ಭವೂ ಸಹ ಶ್ರೀಹರಿಯ ಸರ್ವೋತ್ಕರ್ಷಕ್ಕೆ ಸಾಧಕವಾಗಿರುವುದನ್ನು ಶ್ರೀಮದ್ಭಾಗವತದಲ್ಲಿನ ಪ್ರಸಂಗದಿಂದ ಉದಾಹರಿಸಲಾಗಿದೆ.

ಶುಕಾಚಾರ್ಯರನ್ನು ಕುರಿತು ಪರೀಕ್ಷಿದ್ ರಾಜನ ಪ್ರಶ್ನೆ -

**ದೇವಾಸುರಮನುಷ್ಯೇಷು ಯೇ ಭಜಂತಿ. ಅಶಿವಂ ಶಿವಮ್ ।**
**ಪ್ರಾಯಸ್ತೇ ಧನಿನೋ ಬ್ರಹ್ಮನ್ ನ ತುಲಕ್ಷ್ಮೀಪತಿಂ ಹರಿಮ್**
**ಏತದ್ವೇದಿತುಮಿಚ್ಛಾಮಿ ಸಂದೇಹೋಽತ್ರಮಹಾನ್ ಹಿನಃ ।**
**ವಿರುದ್ಧಶೀಲಯೋಃ ಪ್ರಭ್ವೋಃ ವಿರುದ್ಧಾಭಜತಾಂಗತಿಃ ।। ೨೦೧ ।। (ಶ್ರೀಭಾಗವತ)**

ಈ ಶ್ಲೋಕವು ಶ್ರೀಮದ್ಭಾಗವತದ ಹತ್ತನೇ ಸ್ಕಂಧದ ಉತ್ತರಾರ್ಧದ ಎಂಭತ್ತೆಂಟನೆಯ ಅಧ್ಯಾಯದಲ್ಲಿ ಪರೀಕ್ಷಿದ್ ರಾಜನು ಶುಕಾಚಾರ್ಯರನ್ನು ಕುರಿತು ಪ್ರಶ್ನೆಮಾಡುವ ಸಂದರ್ಭದಲ್ಲಿ ಮೊದಲನೆಯ ಶ್ಲೋಕವಾಗಿದೆ.

**ಪ್ರಶ್ನೆಯ ಅಭಿಪ್ರಾಯ** :- ಎಲೈ ಬ್ರಹ್ಮಜ್ಞಾನಿಗಳಾದ ಶುಕಾಚಾರ್ಯರೇ ! ದೇವತೆಗಳಾಗಲಿ, ದೈತ್ಯರೇ ಆಗಲಿ, ಮಾನವರೇ ಆಗಲಿ ಈ ಗುಂಪುಗಳಲ್ಲಿ ಶ್ಮಶಾನವಾಸಿಯಾಗಿ ರುಂಡಮುಂಡಮಾಲಾಧಾರಿಯಾಗಿ ದಕ್ಷನ ಶಾಪಕ್ಕೆ ಗುರಿಯಾದ ಶಿವನನ್ನು ಯಾರು ಭಜಿಸುತ್ತಾರೆಯೋ ಪ್ರಾಯಃ ಸಾಮಾನ್ಯವಾಗಿ ಅವರು ನಶ್ವರವಾದ ಧನವುಳ್ಳವರಾಗಿ ಕಂಡು ಬರುತ್ತಾರೆ. ಆದರೆ ಸರ್ವೋತ್ತಮನಾದ ಶ್ರೀಲಕ್ಷ್ಮೀಪತಿಯನ್ನು ಆರಾಧಿಸುವವರಿಗೆ ಈ ರೀತಿ ಇಲ್ಲ. ಶ್ರೀಹರಿಯನ್ನು ಆರಾಧಿಸಿ ಐಶ್ವರ್ಯವಪಡೆದವರ ಭಾಗ್ಯವು ಶಾಶ್ವತವಾಗಿರುತ್ತದೆ. ಇದಕ್ಕೆ ಕಾರಣವೇನು ? ಅದನ್ನು ತಿಳಿಯಲು ಅಪೇಕ್ಷಿಸುತ್ತೇನೆ. ಈ ವಿಷಯದಲ್ಲಿ ನನಗೆ ಬಹಳ ಸಂದೇಹವು ಇದೆ. ವಿರುದ್ಧವಾದ ಸ್ವಭಾವವನ್ನುಳ್ಳ ಪ್ರಭುಗಳನ್ನು ಸೇವಿಸುವವರಿಗೆ ವಿರುದ್ಧವಾದ ಫಲಗಳೇ ಕಂಡುಬಂದಿವೆ. ಈ ಸಂದೇಹವನ್ನು ದಯಮಾಡಿ ಪರಿಹರಿಸಿರಿ ಎಂದು ಶುಕಾಚಾರ್ಯರನ್ನು ಕುರಿತು ಪರೀಕ್ಷಿದ್‌ರಾಜನು ಪ್ರಶ್ನೆಮಾಡಿದ್ದಾನೆ.

''ಇತಿಭಾಗವತೇ ರಾಜ್ಞಾಪೃಷ್ಟೋಽವಕ್ತ್ರಿಶುಕಃಕಿಲ''

ಈ ರೀತಿ ಭಾಗವತದಲ್ಲಿ ಪರೀಕ್ಷಿದ್‌ರಾಜನಿಂದ ಪ್ರಶ್ನೆಮಾಡಲ್ಪಟ್ಟ ಶುಕಾಚಾರ್ಯರು ಉತ್ತರಿಸಿದ್ದಾರೆ.

ಶುಕಾಚಾರ್ಯರ ಉತ್ತರವು ಈ ರೀತಿ ಇದೆ.

**ಹರಿಂ ಗುಣತ್ರಯಾತೀತಂ ಸರ್ವಜ್ಞಂ ಸರ್ವಸಾಕ್ಷಿಣಂ ।**
**ನೈರ್ಗುಣ್ಯಾಖ್ಯ ವಿಮುಕ್ತೇಶ್ಚ ದಾತಾರಂ ಭಜತಾಂ ಸತಾಮ್ ।।**
**ಹರಂತುತ್ರಿಗುಣೈರ್ಬದ್ಧಂ ಭಜತಾಮಪಿ ಬಂಧಕಮ್ ।। ೨೦೨ ।। (ಭಗವತ)**

**ತಾತ್ಪರ್ಯ** :- ಅಪ್ರಾಕೃತ ಮೂರ್ತಿಯಾದ ಶ್ರೀಹರಿಯಾದರೋ, ಸತ್ವಗುಣ, ರಜೋಗುಣ ತಮೋಗುಣಗಳೆಂಬ ಪ್ರಾಕೃತಗಳಾದ ಬಂಧಗಳಾದ ಗುಣಗಳನ್ನು ಮೀರಿದವನು. ಅವುಗಳಿಗೆ ದೂರಸ್ಥನಾದವನು. ಆ ಗುಣತ್ರಯರಹಿತನು. ಅವನು

ದೇಹವೂ ಸಹ ಪ್ರಾಕೃತವಲ್ಲ. ಕೇವಲ ಅಪ್ರಾಕೃತವಾದ ಜ್ಞಾನಾನಂದಾತ್ಮಕ ದೇಹವನ್ನುಳ್ಳ ಮಹಾಮಹಿಮನು. ನಿರುಪಮಿತ ಸರ್ವಜ್ಞನು, ಸರ್ವಾಂತರ್ಯಾಮಿಯು, ಸರ್ವಸಾಕ್ಷಿಯು. ಪಾರ್ವತೀಪತಿಯಾದ ಶಿವನಾದರೋ, ಸತ್ತ್ವ, ರಜಸ್ಸು, ತಮಸ್ಸೆಂಬ ಪ್ರಾಕೃತಗಳಾದ ಗುಣತ್ರಯಗಳಿಂದ ಬದ್ಧನಾಗಿದ್ದಾನೆ. ಅವನ ದೇಹವೂ ಸಹ ಪ್ರಾಕೃತವಾದ ಅಹಂಕಾರತತ್ತ್ವವೇ ಆಗಿದೆ. ಗುಣತ್ರಯಗಳಿಂದ ಬದ್ಧನಾಗಿರುವ ಕಾರಣ ತನ್ನನ್ನು ಭಜಿಸುವವರಿಗೂ ಬಂಧಕನಾಗಿದ್ದಾನೆ. ಶ್ರೀಹರಿಯು ಗುಣತ್ರಯಗಳಿಗೆ ದೂರನಾಗಿರುವುದರಿಂದ ತನ್ನನ್ನು ಭಜಿಸುವ ಭಕ್ತರಿಗೆ ಪ್ರಾಕೃತಗಳಾದ ಗುಣತ್ರಯಗಳ ಸಂಬಂಧವಿಲ್ಲದ ನಿತ್ಯವಾದ ಮೋಕ್ಷಫಲವನ್ನೇ ಕರುಣಿಸುತ್ತಾನೆ.

**ಯತೋಽಭೂತ್ ಬಂಧಕೋ ರುದ್ರಃ ಸುರಾಣಾಮಗ್ರಣೀರಪಿ ।**
**ಹರಿಸ್ತು ಬಂಧವಿಧುರೋಽಬದ್ಧಾನಾಂ ಮೋಚಕೋಽಪ್ಯಭೂತ್ ॥**
**ತತೋಽಪೀಶಃ ಸಮೋ ವಿಷ್ಣೋಃ ವದಂತು ಶ್ರುತಿವಾದಿನಃ (೨೦೪-೨೦೫) (ಹರಿಭಕ್ತಿಲತಾ)**

**ತಾತ್ಪರ್ಯ** :- ದೇವತೆಗಳಿಗೆ ಮುಖಂಡನಾಗಿದ್ದಾಗ್ಯೂ ಸಹ ರುದ್ರನು ಬಂಧಕನೇ ಆಗಿದ್ದಾನೆ. ಶ್ರೀಹರಿಯಾದರೋ ಸ್ವತಂತ್ರನಾಗಿ ಬಂಧನದಿಂದ ರಹಿತನಾಗಿರುವ ಕಾರಣ ತನ್ನ ಭಕ್ತರನ್ನೂ ಬಂಧನದಿಂದ ಬಿಡುಗಡೆಮಾಡಿ ಶಾಶ್ವತವಾದ ಸುಖರೂಪವಾದ ಮೋಕ್ಷವನ್ನೇ ಕೊಡುತ್ತಾನೆ. ಇಂತಹ ಒಂದು ಅಸಾಧಾರಣವಾದ ಕಾರಣದಿಂದಲೂ ಕೂಡ ನಮ್ಮ ಸ್ವಾಮಿಯಾದ ಶ್ರೀಹರಿಗೆ ಸಮಾನರಾರಿರುತ್ತಾರೆ? ಪ್ರತಿವಾದಿಗಳು ಹೇಳಲಿ.

ಇನ್ನೂ ವಿವರವಾಗಿ ಶ್ರೀಹರಿಯ ಉತ್ಕರ್ಷವನ್ನು ಶುಕಾಚಾರ್ಯರು ವಿವರಿಸುತ್ತಾರೆ.

**ಹರಿಸ್ತು ನಿರ್ಗುಣಃ ಸಾಕ್ಷಾದ್ ಪುರುಷಃ ಪ್ರಕೃತೇಃ ಪರಃ ।**
**ಸ ಸರ್ವದೃಕ್ ಉಪದ್ರಷ್ಟಾ ತಂ ಭಜನ್ ನಿರ್ಗುಣೋ ಭವೇತ್ ॥ ೨೦೬ ॥**

ಶ್ರೀಹರಿಯು ಪ್ರಾಕೃತ ಗುಣರಹಿತನಾಗಿದ್ದಾನೆ. ಸಾಕ್ಷಾತ್ತಾಗಿ ಪುರುಷಶಬ್ದವಾಚ್ಯನೂ ಆಗಿದ್ದಾನೆ. ಪೂರ್ಣ ಗುಣ್ಯಗುಣೋದಾರನೂ ಆಗಿರುವನು. ಚೇತನಪ್ರಕೃತಿ (ರಮಾದೇವಿ) ಅಚೇತನಪ್ರಕೃತಿ (ಜಡಪ್ರಕೃತಿ) ಇವುಗಳಿಗಿಂತಲೂ ವಿಲಕ್ಷಣನು. ಸರ್ವೋತ್ತಮನು. ಸರ್ವತ್ರ ಸ್ವತಂತ್ರನು. ಸರ್ವತ್ರ ವ್ಯಾಪ್ತಿಯುಳ್ಳವನು. ಎಲ್ಲಾ ಪದಾರ್ಥಗಳ ಒಳಗೂ ಹೊರಗೂ ತಾನು ಸಾಕ್ಷಾತ್ತಾಗಿ ಇದ್ದು ಅವುಗಳನ್ನು ನಿಯಮಿಸುತ್ತಿರುವನು. ಎಲ್ಲವನ್ನೂ ನೋಡುತ್ತಿರುವನು. ಎಲ್ಲಕ್ಕೂ ನಿಯಾಮಕನು. ಇಂತಹ ಪ್ರಾಕೃತ ಗುಣರಹಿತನಾದ ಶ್ರೀಹರಿಯನ್ನು ಸೇವಿಸುವ ಭಕ್ತನೂ ಸಹ ಪ್ರಕೃತಿ ಬಂಧನದಿಂದ, ಶ್ರೀಹರಿಯ ಕೃಪೆಯಿಂದ ಬಿಡುಗಡೆಯನ್ನು ಹೊಂದುತ್ತಾನೆ.

**ಮತ್ತೂ "ಯಾಶಕ್ತಿಸ್ತ್ರಿವಿಧಾ ಬದ್ಧುಂ ಪ್ರಕೃತಿರ್ಜಡರೂಪಿಣೀ ।**
**ತಾಶಕ್ತಿಃ ಬಂಧಿಕಾಶಕ್ತಿದ್ ತಯಾಬದ್ಧಃ ಶಿವಃ ೩೦ ॥**

**ತಾತ್ಪರ್ಯ** :- ಮೂಲ ಜಡಪ್ರಕೃತಿಯು ಎಲ್ಲವನ್ನೂ ಬಂಧಿಸುವ ಶಕ್ತಿಯುಳ್ಳದ್ದಾಗಿದೆ. ಪರಮಾತ್ಮನಿಂದ ಅನುಗೃಹೀತವಾಗಿ ವಿಶೇಷಶಕ್ತಿಯುಳ್ಳದ್ದಾಗಿದೆ. ಎಲ್ಲರನ್ನೂ ಬಂಧಿಸುತ್ತದೆ. ಅಂತಹ ಬಂಧಕಶಕ್ತಿಯುಳ್ಳ ಪ್ರಕೃತಿಯಿಂದ ಜನ್ಯವಾದ ಅಹಂಕಾರತತ್ತ್ವದಿಂದ ಶರೀರವನ್ನುಳ್ಳವನಾದ ಶಿವನೂ ಸಹ ಬದ್ಧನೇ ಆಗಿದ್ದಾನೆ.

ಶಿವನ ವಿಷಯವಾಗಿ ಇನ್ನೂ ಕೆಲವು ವಿಷಯಗಳನ್ನು ವಿವರಿಸುತ್ತಾರೆ.

**ಅತ ಏವ ರಜಸ್ಸತ್ವತಮೋಭಿಶ್ಚಿತ್ರರೂಪಕೈಃ।**
**ಗುಣೈರಾಬದ್ಧಸಜ್ಞಾನ ಸ್ವರೂಪತ್ವಾಚ್ಚ ಶಿವಂಬುಧಾಃ॥**
**ಗುಣಸಂವೃತ ಇತ್ಯಾಹುಸ್ತಾಮಸಾದಿಪ್ರಭೇದಕಃ।**
**ತ್ರಿರೂಪಾಹಂಕಾರತತ್ವಂ ಕಾಮಲೋಭಮದಪ್ರದಮ್॥**
**ಯಸ್ಯಾಸಾಧಾರಣೋ ಧರ್ಮಸ್ತ್ರಿಲಿಂಗಃ ಸ ಶಿವಃಕಿಲ॥ (ಹರಿಭಕ್ತಿಲತಾ)**

**ಅಭಿಪ್ರಾಯ** :- ಮನಸ್ಸನ್ನು ಸತ್ವ, ರಜಸ್ಸು, ತಮಸ್ಸೆಂಬ ಪ್ರಾಕೃತಗುಣಗಳು ಕಲುಷಿತಗೊಳಿಸುತ್ತವೆ. ಅಂತಹ ಗುಣಗಳಿಂದ ಮುಚ್ಚಲ್ಪಟ್ಟ ಸ್ವರೂಪವುಳ್ಳವನಾದುದರಿಂದಲೇ ಜ್ಞಾನಿಗಳು ಶಿವನನ್ನು ಗುಣಸಂವೃತನೆಂದೂ ಗುಣಬದ್ಧನೆಂದೂ ಕರೆಯುತ್ತಾರೆ.

ಸತ್ವ, ರಜಃ ತಮಃ ಎಂಬುದಾಗಿ ಮೂರು ಬಗೆಯಾಗಿರತಕ್ಕ ಅಹಂಕಾರತತ್ವವು ಕಾಮವನ್ನು, ಲೋಭವನ್ನು ಮದವನ್ನು ಉಂಟುಮಾಡುತ್ತದೆ. ಇವು ಯಾವ ರುದ್ರದೇವನಿಗೆ ಅಸಾಧಾರಣ ಧರ್ಮಗಳಾಗಿವೆಯೋ ಅಂತಹ ಶಿವನು ತ್ರಿಲಂಗನೆಂದು ಕರೆಯಲ್ಪಟ್ಟಿರುತ್ತಾನೆ. ಶಿವನ ಕೆಲವು ಕ್ರೋಧ ಮೊದಲಾದವುಗಳ ಕೃತ್ಯಗಳನ್ನು ಉಲ್ಲೇಖಿಸಿ ವಿವರಿಸುತ್ತಾರೆ.

**ಯಃಕ್ರೋಧಾದಚ್ಛಿನದ್ ದಕ್ಷಶಿರಃ ಅಲಾಭಾದ್ ರುರೋದಚ।**
**ಮದಾಂಧತ್ವಾದ್ ಸ್ವಹಸ್ತಧನುಷಾಚ್ಛಿನ್ನಮಸ್ತಕಃ**
**ಈದೃಶಸ್ಯ ಶಿವಸ್ಯ ಅಹಂತತ್ವದತಾ ಉಚಿತೈವಹಿ॥ ೨೧೨॥ (ಹರಿಭಕ್ತಿಲತಾ)**

**ಅಭಿಪ್ರಾಯ** :- ಕ್ರೋಧಾವೇಶದಿಂದ ಯಾವ ರುದ್ರನು ತನ್ನ ಹೆಂಡತಿಯಾದ ಸತೀದೇವಿಗೆ ತಂದೆಯಾದ ದಕ್ಷ ಪ್ರಜಾಪತಿಯ ತಲೆಯನ್ನೇ ಕತ್ತರಿಸಿ ತುಂಡರಿಸಿ ಅಗ್ನಿಕುಂಡಕ್ಕೆ ಹಾಕಿ ಸುಟ್ಟು ಬೂದಿಮಾಡಿಬಿಟ್ಟನೋ ಬ್ರಹ್ಮನ ಹುಬ್ಬಿನಿಂದಲೇ ಹುಟ್ಟಿದಕೂಡಲೇ ಕುಡಿಯಲು ಹಾಲಿಗಾಗಿಯೂ, ತನಗೊಂದು ಹೆಸರು, ಸ್ಥಾನವು ಇಲ್ಲದುದರಿಂದಲೂ ಗಳಗಳನೆ ಅತ್ತುಬಿಟ್ಟನೋ, ಮದಾಂಧನಾಗಿದ್ದುದರಿಂದ ಬಾಣದಿಂದ ಸಜ್ಜುಗೊಳಿಸಲ್ಪಟ್ಟ ಧನುಸ್ಸನ್ನು ಊರಿಕೊಂಡು ತಲೆಯನ್ನು ಅದರ ಮೇಲೆ ಊರಿಸಿಕೊಂಡು ಕುಳಿತಿದ್ದಾಗ ಕೀಟರೂಪವನಾಗಿ ಬಂದ ಇಂದ್ರನು ಆ ಧನುಸ್ಸಿನ ಹಗ್ಗವನ್ನು ಕತ್ತರಿಸಿಬಿಟ್ಟಾಗ ತುಂಡರಿಸಲ್ಪಟ್ಟ ತಲೆಯುಳ್ಳವನಾದನೋ ಅಂತಹ ರುದ್ರನಿಗೆ ಅಹಂಕಾರತತ್ವಾಭಿಮಾನಿತ್ವವು ಯೋಗ್ಯವೇ ಆಗಿದೆಯಷ್ಟೆ. ಅಂತಹ ರುದ್ರನು ಉತ್ತಮನೋ ಅವನತಾತನಾದ ಶ್ರೀಹರಿಯು ಉತ್ತಮನೋ ಪ್ರತಿವಾದಿಗಳೇ ಹೇಳಲಿ.

ಮತ್ತೊಂದು ಪ್ರಸಂಗದಿಂದಲೂ ಶ್ರೀಹರಿಯ ಉತ್ಕರ್ಷವನ್ನು ಯುಕ್ತಿಯುಕ್ತವಾಗಿ ಶ್ರೀವಾದಿರಾಜರು ಪ್ರತಿಪಾದಿಸುತ್ತಾರೆ.

**"ತೂಣೀರಾ ಗೃಹೀತ್ವಾಬಾಣೌಘ್ರಾಂ ವಿಹಾಸೇ ತಸ್ಯನಂದಿನಃ।**
**ಸಶೂಲಿಹಾಣಂ ಚಿಕ್ಷೇಪವೈನತೇಯೋಧನುಕ್ಷತಮ್॥**
**ಅಕ್ಷಿಪದ್ ಶಿಲಯದ್ವಾಹಃ ಶಾರ್ಙ್ಗ್ಯಃತ್ಯಕ್ತಂಧನುಕ್ಷತಮ್।**
**ಕಃಸಮಸ್ತಸ್ಯ ಕೃಷ್ಣಸ್ಯವದಂತುಪ್ರತವಾದಿನಃ॥ (೨೩೦) (ಹರಿಭಕ್ತಿಲತಾ)**

**ತಾತ್ಪರ್ಯ** :- ಶ್ರೀಕೃಷ್ಣದೇವರ ವಾಹನವಾದ ಯಾವ ಗರುಡನು, ಒಂದಾವರ್ತಿ ಶಿವನಿಗೂ ಗರುಡನಿಗೂ ಪರಸ್ಪರ ವಿರೋಧವು ಉಂಟಾದಾಗ, ಶಿವನ ವಾಹನವಾದ ನಂದಿಯ ಎರಡು ಕೋಂಬುಗಳನ್ನು ಬೇಗನೇ ಹಿಡಿದು ಮೇಲೆ ಕುಳಿತಿರುವ ಶಿವನ ಸಹಿತವಾಗಿ ನೂರು ಬಿಲ್ಲಳತೆ ದೂರಕ್ಕೆ ಒಗೆದುಬಿಟ್ಟನೋ ಅಂದರೆ ಯಾರವಾಹನವೇ ವಾಹನ ಸಹಿತನಾದ ರುದ್ರನನ್ನೇ ತಿರಸ್ಕರಿಸಿದನೋ ಅಂತಹ ಶ್ರೀಕೃಷ್ಣನಿಗೆ ಸಮರಾರು ? ಪ್ರತಿವಾದಿಗಳೇ ಹೇಳಿರಿ.

ರಾಜಸೂಯಯಾಗದಲ್ಲಿನ ಅಗ್ರಪೂಜೆಯಿಂದಲೂ ಸಹ ಶ್ರೀಕೃಷ್ಣನ ಸರ್ವೋತ್ಕರ್ಷವನ್ನು ತಿಳಿಯಬಹುದಾಗಿದೆ.

**ಇಂದ್ರಾದಯೋಲೋಕಪಾಲಾಃ ವಿರಿಂಚಭವಸಂಯುತಾಃ ।**
**ಸಗಣಾಸ್ಸಿದ್ಧಗಂಧರ್ವಾ ವಿದ್ಯಾಧರಮಹೋರಗಾಃ ॥ ೨೫೬ ॥**
**ಮುನಯೋಯಕ್ಷರಕ್ಷಾಂಸಿಖಗಾಃಕಿನ್ನರಚಾರಣಾಃ ।**
**ರಾಜಾನಶ್ಚ ಸಮಾಹೂತಾಃರಾಜಪತ್ನ್ಯಶ್ಚಸರ್ವಶಃ ॥ ೨೫೭ ॥**
**ರಾಜಸೂಯಂ ಸಮೀಯುಸ್ತೇರಾಜ್ಞಃ ಪಾಂಡುಸುತಸ್ಯವೈ ।**
**ಇತಿ ಶ್ರೀಮದ್ಭಾಗವತೇಸ್ತುತೇಧರ್ಮಸುತಕ್ರತೌ ॥ ೨೫೮ ॥**
**ಅರ್ಹತಿಹ್ಯಚ್ಯುತಃಶ್ರೈಷ್ಠ್ಯಂಭಗವಾನ್ ಸಾತ್ವತಾಂಪತಿಃ ।**
**ತಸ್ಮಾದ್ ಕೃಷ್ಣಾಯಮಹತೇ ದೀಯತಾಂ ಪರಮಾರ್ಹಣಮ್ ॥ ೨೫೯ ॥**
**ಇತಿ ತತ್ಸ್ವಸದಸಿ ಸಹದೇವೇನಸಂಸ್ತುತಃ ।**
**ಜಗ್ರಾಹ ಯೋಽಗ್ರ್ಯಪೂಜಾಂ ಕೃಷ್ಣೋದೇವರ್ಷಿಸನ್ನಿಧೌ ॥ ೨೬೦ ॥**
**ಸಪರೇಶೋ ನಃ ಕಿಂ ಸರ್ವೇ ವದಂತು ಪ್ರತಿವಾದಿನಃ ॥ (ಇತಿ ಹರಿಭಕ್ತಿಲತಾ)**

**ತಾತ್ಪರ್ಯ** :- ಚತುರ್ಮುಖ ಬ್ರಹ್ಮ, ರುದ್ರದೇವ, ಇಂದ್ರ ಮೊದಲಾದ ದೇವತೆಗಳಿಂದಲೂ , ಲೋಕಪಾಲಕರಾದ ದೇವತೆಗಳಿಂದಲೂ, ಗುಂಪು ಗುಂಪಾಗಿ (ಸ್ವಾಹಿತರಾದ) ಜಮಾಯಿಸಿದ ಸಿದ್ಧರೇನು ಸಾಧ್ಯರೇನು, ಗಂಧರ್ವರೇನು ವಿದ್ಯಾಧರರೇನು, ಮಹಾನಾಗಗಳೇನು, ಬ್ರಹ್ಮಜ್ಞಾನಿಗಳಾದ ಯೋಗಿವರೇಣ್ಯರಾದ ಮುನಿಗಳೇನು, ಯಕ್ಷರೇನು, ರಾಕ್ಷಸರೇನು, ಪಕ್ಷಿಗಳೇನು, ಕಿನ್ನರರೇನು, ಚಾರಣರೇನು, ಮಹಾರಾಜಾಧಿರಾಜರೇನು, ರಾಜಪತ್ನಿಯರೇನು, ಇವರೆಲ್ಲರಿಂದಲೂ ಅಲಂಕೃತವಾಗಿದ್ದ ಪಾಂಡುರಾಜನ ಜ್ಯೇಷ್ಠಪುತ್ರನಾದ ಧರ್ಮರಾಯನು, ತನ್ನ ತಮ್ಮಂದಿರಾದ ಪ್ರಚಂಡ ಪರಾಕ್ರಮಿಗಳಾದ ಭೀಮಾರ್ಜುನಾದಿಗಳ ಸಹಿತನಾಗಿ ಆಚರಿಸಿದ ಅತಿ ವೈಭವಯುತವಾದ ರಾಜಸೂಯಯಾಗದಲ್ಲಿ ಸಕಲ ಜ್ಞಾನಿವರೇಣ್ಯರ ಒಮ್ಮತದಾನಿರ್ಣಯದಂತೆ. ಅಗ್ರಪೂಜೆಯನ್ನು ಎಲ್ಲರಿಂದಲೂ ಸ್ತೋತ್ರಮಾಡಲ್ಪಟ್ಟ ಶ್ರೀಕೃಷ್ಣ ಪರಮಾತ್ಮನು ಸಕಲ ದೇವತೆಗಳ, ಋಷಿಗಳ ಸಾನ್ನಿಧ್ಯದಲ್ಲಿ ಸ್ವೀಕರಿಸುತ್ತಾನೆ. ಇಂತಹ ಸರ್ವಶ್ರೇಷ್ಠನಾದ ಶ್ರೀಕೃಷ್ಣ ಪರಮಾತ್ಮನು ಸರ್ವರಿಗೂ ನಿಯಾಮಕನಾದ ಈಶನಲ್ಲವೇ ? ಎಲ್ಲಾಪ್ರತಿವಾದಿಗಳು ಇದಕ್ಕೆ ಪ್ರತ್ಯುತ್ತರವನ್ನು ಕೊಡಲಿ ಎಂದು ಶ್ರೀಪಾದಂಗಳವರು ಈ ರಾಜಸೂಯಯಾಗದ ಅಗ್ರಪೂಜಾಪ್ರಸಂಗದಿಂದಲೂ ಶ್ರೀಹರಿಯ ಸರ್ವೋತ್ತಮತ್ವವನ್ನು ಪ್ರತಿಪಾದಿಸುತ್ತಾರೆ.

ಅಂಬರೀಷ ಮಹಾರಾಜನ ದ್ವಾದಶೀವ್ರತಾಚರಣೆಯ ಪ್ರಸಂಗದಿಂದಲೂ ಶ್ರೀಹರಿಯ ಪರಮೋತ್ಕರ್ಷವು ಅತ್ಯಂತಸ್ಪಷ್ಟವಾಗಿ ತಿಳಿದುಬರುತ್ತಿದೆ. ಇದು ಶ್ರೀಮದ್ಭಾಗವತದಲ್ಲಿ ಒಂಭತ್ತನೆಯ ಸ್ಕಂದದಲ್ಲಿನ ಕಥಾಭಾಗವಾಗಿದೆ.

"ವಯಂನತಾತಪ್ರಭವಾಮಭೂಮ್ನೋ
ಭವಂತಿಕಾಲೇ ನ ಭವಂತಿಹೀದೃಶಾಃ।
ಯಸ್ಮಿನ್ ಪರೇನ್ಯೇಽಪ್ಯಜಜೀವಕೋಶಾಃ
ಸಹಸ್ರಶೋ ಯತ್ರವಯಂ ಭ್ರಮಾಮಃ।।

(ಇದು ಭಾಗವತದಲ್ಲಿ ಉಮಾಪತಿಯಾದ ರುದ್ರನ ವಾಕ್ಯವಾಗಿದೆ.)

ಇಯಂ ಭಾಗವತೇ ಸ್ಕಂಧೇನವಮೇ ವಾಗುಮಾಪತೇಃ।
ಹರಿಚಕ್ರಾದ್ ಭೀತಚೇತಾಃ ಸುತಂ ದೂರ್ವಾಸಸಂ ಪ್ರತಿ ।।
ವಯಂತವಭಯಂ ಹರ್ತುಂ ತಾತ ನ ಪ್ರಭವಾಮಹೇ ।
ಸ್ವಸುತೇಽಪ್ಯನ್ಯತಿಸ್ನೇಹಾದ್ ತಾತೇತ್ಯಾಹತ್ರಿಲೋಚನಃ।
ಯತೋ ಭೂಮ್ನಃ ಸರ್ವಗುಣೈಃಪೂರ್ಣಾತ್ ನಾರಾಯಣಾತ್ ಪ್ರಭೋಃ।।
ಈದೃಶಾ ಯೇಮದ್ವಿಧಾಃ ಸುರಾ ಬ್ರಹ್ಮಪುರಸ್ಸರಾಃ।
ಸೃಷ್ಟಿಕಾಲೇತು ಸಂಪ್ರಾಪ್ತೇ ಭವಂತ್ಯದ್ಭುತಕರ್ಮಣಾಃ ।।
ತಥಾ ಸಂಹೃತಿಕಾಲೇತು ನ ಭವಂತ್ಯಸ್ಯಲೀಲಯಾ।
ಮೃತಾಃಸಂತಸ್ತದುದರಂ ಪ್ರವಿಶ್ಯಶಿಲ ಶೇರತೇ।।
ಇದಂತು ನಾದ್ಭುತಂ ತಾತ ಅಸ್ಯತ್ವೋಽನ್ಯೇಸಹಸ್ರಶಃ।
ಅಜಸ್ಯಬ್ರಹ್ಮಣೋ ಜೀವಕೋಶಾಃಬ್ರಹ್ಮಾಂಡರಾಶಯಃ।
ಯಥಾ ಧನಂ ಕೋಶಗೃಹೇ ರಕ್ಷತ್ಯೇವಂ ಮಹಾಪ್ರಭುಃ।
ಸ್ವತಾನ್ಯಸ್ಮಾನ್ ಜೀವಗಣಾನ್ ಅಂಡಾಂತಃಶಿಲರಕ್ಷತಿ।।
ತಸ್ಮಾದೇತೇ ಜೀವಕೋಶಾಃ ಇತ್ಯುಚ್ಯಂತೇ ವಿದೇಶಿಭಿಃ।
ಅಜಸ್ಯತೇಷುಪ್ರಾಧಾನ್ಯಾದ್ ಉಚ್ಯಂತೇತೇತದೀಯಕಾಃ।।
ಸೃಷ್ಟಿಕಾಲೇಭವಂತ್ಯೇತೇ ಲಯೇತುನಭವಂತಿ ಚ ।
ಕಲ್ಪೇಕಲ್ಪೇತು ಸೃಷ್ಟತ್ವಾದ್ ಸಹಸ್ರಶ ಇತೀರಿತಮ್ ।।
ಯತ್ರಯೇಷುವಯಂಸರ್ವೇಭ್ರಮಾಮಃಸ್ವಸ್ವಕರ್ಮಣಾ।
ಈದೃಗ್ ಬ್ರಹ್ಮಾಂಡಕೋಟೀನಾಂ ಕರ್ತುಃಸಂಹರ್ತುರೀಶಿತುಃ ।।
ತದಂತಸ್ಥಾಸ್ಮದಾದೀನಾಂ ಸೃಷ್ಟ್ವಾನಷ್ಟ್ವಾಚಕಾಕಥಾ।
ಈ ದೃಶಸ್ಯಹರೇಶ್ಚಕ್ರಂ ಕೋವಾದೇವೋ ನಿವಾರಯೇತ್ ।।
ಅತಸ್ತಮೇವಶರಣಂಯಾಹೀತ್ಯಾಹಶಿಲೇಶ್ವರಃ।
ಏವಂಚಹರಿಣಾಸಾಮ್ಯಮೈಕ್ಯಮಾಧಿಕ್ಯಮೇವವಾ।।
ಕಸ್ಯವಾಸ್ಯಾದಜಾಂಡಾನ್ತರ್ವದಂತು ಪ್ರತಿವಾದಿನಃ।। (ಇತಿಹರಿಭಕ್ತಿಂಚಿತಾ)

**ತಾತ್ಪರ್ಯ** :- ಶ್ರೀಮದ್ಭಾಗವತದಲ್ಲಿ ಒಂಭತ್ತನೆಯ ಸ್ಕಂಧದಲ್ಲಿ ನಾಲ್ಕನೆಯ ಅಧ್ಯಾಯದಲ್ಲಿ ಮಹಾರಾಜನ ಕಥಾಭಾಗವು ಬಂದಿದೆ.

ಅದರ ಸಾರಾಂಶವು ಈ ರೀತಿ ಇದೆ.

ಸರ್ವೋತ್ತಮನಾದ ಶ್ರೀಮನ್ನಾರಾಯಣನಲ್ಲಿ ಅಚಲವಾದ ಭಕ್ತಿಸಂಪನ್ನನಾದ ಅಂಬರೀಷಮಹಾರಾಜನು ಧರ್ಮದಿಂದ ರಾಜ್ಯವನ್ನು ಆಳುತ್ತಿದ್ದನು. ಪರಮ ವೈರಾಗ್ಯಶಾಲಿಯಾಗಿ ಕೇವಲ ಪರಮಾತ್ಮನಪಾದಾರವಿಂದದಲ್ಲಿ ಆಸಕ್ತವಾದ ಮನಸ್ಸನ್ನು ಉಳ್ಳವನಾಗಿದ್ದನು. ಧಾರ್ಮಿಕಗಳಾದ ಆಚಾರವಿಚಾರಗಳಲ್ಲಿ ಬಹಳ ನಿಷ್ಠೆಯುಳ್ಳವನಾಗಿದ್ದನು. ಏಕಾದಶ್ಯಾದಿ ವ್ರತಗಳ ಆಚರಣೆಯಲ್ಲಿ ಕಟ್ಟುನಿಟ್ಟಾದ ನಿಯಮತತ್ಪರನಾಗಿದ್ದನು.

ಹೀಗಿರುವಲ್ಲಿ ಒಂದುಸಲ ಸಾಧನ ದ್ವಾದಶೀ ದಿನಕ್ಕೆ ಸರಿಯಾಗಿ ಅಂಬರೀಷ ಮಹಾರಾಜನ ಅತಿಥಿಯಾಗಿ ರುದ್ರಾಂಶ ಸಂಭೂತರಾದ ದುರ್ವಾಸ ಮಹಾಮುನಿಗಳು ಆಗಮಿಸಿದರು. ಆದಿನ ಸಾಧನ ದ್ವಾದಶೀತಿಥಿಯು ಅರ್ಧಮೂಹುರ್ತ ಮಾತ್ರ ಬಾಕಿ ಇದ್ದಿತು ಸಾಧನ ದ್ವಾದಶೀ ಆಗಿದ್ದಿತು. ಅಂದು ಅತಿಥಿಯಾಗಿ ಬಂದಿದ್ದ ದುರ್ವಾಸಮುನಿಗಳು ಸಪರಿವಾರರಾಗಿ ಯಮುನಾ ನದಿಗೆ ಸ್ನಾನಕ್ಕಾಗಿ ಹೋದವರು ಸಕಾಲಕ್ಕೆ ಪಾರಣೆಯ ಸಮಯಕ್ಕೆ ಬರಲಿಲ್ಲ. ಸಾಧನ ದ್ವಾದಶೀ ಆದ ಪ್ರಯುಕ್ತ ಅಂಬರೀಷ ಮಹಾರಾಜನು ಧರ್ಮಸಂಕಟಕ್ಕೆ ಸಿಕ್ಕಿಹಾಕಿಕೊಂಡನು. ಅತಿಥಿಯಾಗಿ ಬಂದಿದ್ದ ಮಹಾಮುನಿಗಳನ್ನು ಅತಿಕ್ರಮಿಸಿ ಪಾರಣೆಮಾಡುವಂತಿಲ್ಲ. ಸಾಧನೆಯ ದ್ವಾದಶೀ ಆದುದರಿಂದ ಸಕಾಲಕ್ಕೆ ಪಾರಣೇಮಾಡದೇ ಇರುವಂತೆಯೂ ಇಲ್ಲ. ಹೀಗಾಗಿ ತುಂಬಾ ಮನಸ್ಸಿನಲ್ಲಿ ನೊಂದವನಾಗಿ ಪ್ರತೀಕ್ಷಿಸುತ್ತಿರಲು ದುರ್ವಾಸ ಮುನಿಗಳು ತಡವಾಗಿ ಬಂದುದರಿಂದ ಆದರೊಳಗಾಗಿ, ಸಾಧನದ್ವಾದಶೀ ವ್ರತವನ್ನು ಸಾಧಿಸಿಯೇ ಬಿಡೋಣವೆಂಬ ಧರ್ಮದ ಬುದ್ಧಿಯಿಂದ ನೀರಿನಿಂದಲೇ ಪಾರಣೆಯನ್ನು ಮುಗಿಸಿಬಿಟ್ಟನು. ಆದರೂ ಆತಂಕದಿಂದ ಶ್ರೀಹರಿಯನ್ನೇ ಮನಸ್ಸಿನಲ್ಲಿ ಅಪರಾಧ ಕ್ಷಮಾಪಣೆಗಾಗಿ ಪ್ರಾರ್ಥಿಸುತ್ತಲೇ ದುರ್ವಾಸಮುನಿಗಳಿಗಾಗಿ ಕಾಯುತ್ತಾ ಇದ್ದನು.

ಅಂದಿನ ಸಾಧನ ದ್ವಾದಶೀಕಾಲವನ್ನು ಅತಿಕ್ರಮಿಸಿ ದುರ್ವಾಸರು ಯಮುನೆಯಲ್ಲಿ ಸ್ನಾನಮಾಡಿ ತಮ್ಮನಿತ್ಯದ ಆಹ್ನಿಕವನ್ನು ಮುಗಿಸಿಕೊಂಡು ರಾಜನಲ್ಲಿಗೆ ಬಂದರು. ರಾಜನ ಹಣೆಯ ಮೇಲಿನ ಲಾಂಛನಾದಿಗಳಿಂದ ರಾಜನು ದ್ವಾದಶೀ ಪಾರಣೆಯನ್ನು ಮುಗಿಸಿರುವುದನ್ನು ಗಮನಿಸಿದರು. ಕೋಪೋದ್ರೇಕದಿಂದ ಹುಬ್ಬುಗಂಟಿಕ್ಕಿಕೊಂಡು ಎಲೈ ಮಹಾರಾಜನನೇ, ಅತಿಥಿಯಾಗಿ ಬಂದ ನನ್ನನ್ನು ಅತಿಕ್ರಮಿಸಿ ಪಾರಣೆಮಾಡಿಬಿಟ್ಟಿದ್ದೀಯೇ, ನೀನು ಐಶ್ವರ್ಯಮದದಿಂದ ಮತ್ತನಾಗಿದ್ದೀಯೇ- ಇತ್ಯಾದಿಯಾಗಿ ಆ ಅಂಬರೀಷ ಮಹಾರಾಜನನ್ನು ಧಿಕ್ಕರಿಸುತ್ತಾ ತನ್ನ ಜಟೆಯನ್ನು ಕಿತ್ತು ಹಾಕಿದರು. ಆಗ ಪ್ರಳಯಾಗ್ನಿಯಂತೆ ಪ್ರಜ್ವಲಿಸುತ್ತಿದ್ದ ಕತ್ತಿಯನ್ನು ಕೈಯಲ್ಲಿ ಝಳಪಿಸುತ್ತಿದ್ದ ಒಂದುಶಕ್ತಿಯು ಪ್ರಾದುರ್ಭವಿಸಿದಳು. ರಾಜನಾದರೋ ಭಯಭ್ರಾಂತನಾಗಿ ಗಡಗಡನೆ ನಡುಗುತ್ತಾ ಶ್ರೀಹರಿಯನ್ನೇ ನೆನೆಯುತ್ತಾ ಸ್ತಬ್ಧನಾಗಿ ನಿಂತುಬಿಟ್ಟನು. ಅಷ್ಟರಲ್ಲಿ ಶ್ರೀಹರಿಯು ಪರಮಭಕ್ತನಾಗಿದ್ದ ಅಂಬರೀಷ ಮಹಾರಾಜನಿಗೆ ಹಿಂದೆಯೇ ಶತ್ರುಪೀಡಾ ಪರಿಹಾರಕವಾಗಿ ಚಕ್ರಾಯುಧವೊಂದನ್ನು ಅನುಗ್ರಹಿಸಿದ್ದನು.

ಆ ಚಕ್ರವು ದುರ್ವಾಸ ನಿರ್ಮಿತವಾದ ಶಕ್ತಿಯನ್ನು ಸುಟ್ಟು ಭಸ್ಮಮಾಡಿದ್ದು ಮಾತ್ರವಲ್ಲದೆ ದುರ್ವಾಸರನ್ನು ಹಿಂಬಾಲಿಸಿತು. ಅದರ ಭಯದಿಂದ ದುರ್ವಾಸಮಹರ್ಷಿಯು ಓಡಲಾರಂಭಿಸಿದನು. ಆದರೆ ಚಕ್ರವು ದುರ್ವಾಸನ ಹಿಂದೆಯೇ ಅಟ್ಟಿಸಿಕೊಂಡುಹೋಯಿತು. ದುರ್ವಾಸಮುನಿಯು ಓಡಲಾರಂಭಿಸಿದನು. ಆದರೆ ಚಕ್ರವು ದುರ್ವಾಸನ ಹಿಂದೆಯೇ ಅಟ್ಟಿಸಿಕೊಂಡುಹೋಯಿತು. ದುರ್ವಾಸಮುನಿಯು ತನ್ನ ರಕ್ಷಣೆಗಾಗಿ ಸತ್ಯಲೋಕಕ್ಕೆ ಹೋಗಿ ಬ್ರಹ್ಮನಲ್ಲಿ

ರಕ್ಷಣೆಯನ್ನು ಬೇಡಿದನು. ಆಗ ಬ್ರಹ್ಮನು ಶ್ರೀಹರಿಯ ಮಹಿಮೆಯನ್ನು ದುರ್ವಾಸನಿಗೆ ತಿಳಿಸಿ ತನ್ನಿಂದ ರಕ್ಷಣೆಯು ಆಗಲಾರದೆಂದು ತಿರಸ್ಕರಿಸಿದನು. ಆಗ ದುರ್ವಾಸಮುನಿಯು ಹರನಲ್ಲಿಗೆ ವಿಷ್ಣುಚಕ್ರದಿಂದ ರಕ್ಷಣೆಗಾಗಿ ತೆರಳಿದನು. ಆಗ ರುದ್ರನು ದುರ್ವಾಸನಿಂದ ಹಿಂದೆ ನಡೆದುದನ್ನೆಲ್ಲಾ ಕೇಳಿದಮೇಲೆ

> ''ವಯಂ ನತಾತಪ್ರಭವಾಮಭೂಮ್ನಃ
> ಭವಂತಿ ಕಾಲೇ ನ ಭವಂತಿ ಹೀದೃಶಾಃ ।
> ಯಸ್ಮಿನ್ಪರೇಽನ್ಯೇಽಪ್ಯಜಜೀವಕೋಶಾಃ
> ಸಹಸ್ರಶೋಯತ್ರ ವಯಂ ಭ್ರಮಾಮಃ ।।

ಇತ್ಯಾದಿಯಾಗಿ ಶ್ರೀಹರಿಯ ಮಹಿಮೆಯನ್ನು ವಿಸ್ತಾರವಾಗಿ ದುರ್ವಾಸಮುನಿಗೆ ತಿಳಿಸಿದ ಕಥಾಭಾಗದ ಸಂದೆ ಉದಾಹರಿಸಿರುವ ಶ್ಲೋಕಗಳ ಒಟ್ಟು ಅಭಿಪ್ರಾಯವು ಈ ರೀತಿ ಇದೆ. ರುದ್ರದೇವನು ದುರ್ವಾಸನಿಗೆ ತಿಳಿಸಿದ ಶ್ರೀಹರಿಯ ಮಹಾಮಾಹಾತ್ಮ್ಯೆಯ ವಿವರ -

ಎಲೈ ದುರ್ವಾಸನೇ ! ದೇವತೆಗಳಾದ ನಾವೆಲ್ಲ ಶ್ರೀಹರಿಯ ದಾಸಾನುದಾಸರು. ಶ್ರೀಹರಿಯ ಮಹಿಮೆಯನ್ನು ಇತಿಮಿತಿಗಳನ್ನು ನಾವಾರೂ ಪೂರ್ತಿಯಾಗಿ ಕಂಡಿಲ್ಲ.. ಕೇಳಿಲ್ಲ. ಅವನ್ನು ಸಮಗ್ರವಾಗಿ ತಿಳಿಯುವ ಶಕ್ತಿಯೂ ನಮಗೆ ಇರುವುದಿಲ್ಲ. ಅತಿ ಸ್ನೇಹದಿಂದ ''ತಾತ'' ಎಂದು ಸಂಭೋದಿಸಿ ರುದ್ರನು ಹೇಳಿದ್ದಾನೆ. ಆ ಹರಿಯಾದರೋ ದೇಶದಿಂದಲೂ, ಕಾಲದಿಂದಲೂ ಮತ್ತು ಗುಣಗಳಿಂದಲೂ ಪರಿಪೂರ್ಣನಾಗಿದ್ದಾನೆ. ಅವನು ಸರ್ವತಂತ್ರ ಸ್ವತಂತ್ರ. ಸರ್ವರಿಗೂ ಸ್ವಾಮಿಯಾಗಿದ್ದಾನೆ. ಅವನ ಸೃಷ್ಟ್ಯಾದಿವ್ಯಾಪಾರಗಳು ಬಹಳ ಆಶ್ಚರ್ಯಕರಗಳಾಗಿವೆ. ಅತಿವೈಭವದಿಂದಕೂಡಿವೆ. ಅವುಗಳ ಆಳನೀಳಗಳನ್ನು ಯಾರೂ ಪೂರ್ತಿಯಾಗಿ ಬಲ್ಲವರಿಲ್ಲ.ಸೃಷ್ಟಿಕಾಲದಲ್ಲಿ ನಾವು ಬ್ರಹ್ಮಾದಿ ದೇವತೆಗಳೆಲ್ಲಾ ಆ ಅದ್ಭುತ ವ್ಯಾಪಾರವನ್ನುಳ್ಳ ಶ್ರೀಹರಿಯಿಂದ ಸೃಷ್ಟಿಸಲ್ಪಡುತ್ತೇವೆ. ಸಂಹಾರಕಾಲದಲ್ಲಿ ಎಲ್ಲರೂ ಮೃತರಾಗಿ ಅವನ ಉದರವನ್ನು ಸೇರುತ್ತೇವೆ. ಈ ಬಗೆಯಾದ ಸೃಷ್ಟಿಸಂಹಾರಾದಿ ವ್ಯಾಪಾರಗಳಿಂದ ಸರ್ವೋತ್ತಮನಾದ, ಪರಮಾತ್ಮನಾದ ಶ್ರೀಹರಿಗೆ ಕಿಂಚಿತ್ತಾದರು ಪ್ರಯೋಜನವಿಲ್ಲವಾದರೂ ಕೇವಲ ಆನಂದೋದ್ರೇಕದಿಂದ ಸೃಷ್ಟ್ಯಾದಿಗಳಲ್ಲಿ ಪ್ರವೃತ್ತಿಯು ಕಂಡುಬಂದಿದೆ.

ವೇದಾದಿ ಪುರಾಣಗಳು (''ಕೋಹ್ಯೇವಾನ್ಯಾತ್ಕಃಪ್ರಾಣ್ಯಾತ್ ಯದೇಷ ಆಕಾಶ ಆನಂದೋನಸ್ಯಾತ್ ಇತ್ಯಾದಿ'') ಹೀಗೆ ಶ್ಲಾಘಿಸುತ್ತಲಿವೆ ಪರಮಾತ್ಮನ ಎಲ್ಲಬಗೆಯಾದ ವ್ಯಾಪಾರಗಳೂ ಕೂಡ ಕೇವಲ ಲೀಲಾರೂಪಗಳಾಗಿವೆ. ಎಲೈ (ತಾತ) ಕುಮಾರನಾದ ದುರ್ವಾಸನೇ ! ಇದು ಏನೂ ಆಶ್ಚರ್ಯವಲ್ಲ. ನಮ್ಮಂತೆ ಅನಂತಸಂಖ್ಯಾತರಾದ ಸೃಷ್ಟಿಗೆ ಯೋಗ್ಯರಾದ ಜೀವರನ್ನು ಅನೇಕ ಸಂಖ್ಯಾಕಗಳಾದ ಬ್ರಹ್ಮಾಂಡಗಳನ್ನು ಸೃಷ್ಟಿಸಿ ಶ್ರೀಹರಿಯು ಲೋಕದಲ್ಲಿ ಧನಿಕನಾದವನು ತನ್ನ ಧನಸಮುದಾಯವನ್ನು ಸಿಧಿನಿಕ್ಷೇಪಗಳನ್ನು ಇತರತ್ರ ಕೋಶಗಳಲ್ಲಿಟ್ಟು ರಕ್ಷಿಸುವಂತೆ ನಮ್ಮನ್ನೆಲ್ಲಾ ಬ್ರಹ್ಮಾಂಡದಲ್ಲಿ ರಕ್ಷಿಸುತ್ತಿರುವುದರಿಂದ ಈ ಬ್ರಹ್ಮಾಂಡಗಳನ್ನು ಜೀವರಕೋಶಗಳೆಂದು ಜೀವಕೋಶಗಳೆಂದು ಜ್ಞಾನಿಗಳು ಕರೆಯುತ್ತಾರೆ. ಜೀವರಾದರೋ ಸೃಷ್ಟಿಕಾಲದಲ್ಲಿ ದೇಹದಿಂದ ಜನ್ಮತಾಳುತ್ತಾರೆ. ಲಯಕಾಲದಲ್ಲಿ ಮರಣ ಹೊಂದುತ್ತಾರೆ. ಕಲ್ಪಕಾಲಗಳಲ್ಲೂ ಸೃಷ್ಟಿಸಲ್ಪಡತಕ್ಕವರಾದುದರಿಂದ ಜೀವರು ಅನಂತಸಂಖ್ಯಾಕರಾದುದರಿಂದ ಸಹಸ್ರಶಃ ಎಂದು ಉಲ್ಲೇಖಿಸಲ್ಪಟ್ಟಿರುತ್ತಾರೆ.

ಅನಂತ ಸಂಖ್ಯಾಕಗಳಾದ ಬ್ರಹ್ಮಾಂಡಗಳಲ್ಲಿ ನಮ್ಮಂತಹ ಅಸ್ವತಂತ್ರರಾದ ಜೀವರು ವಿಧಿವಿಹಿತಗಳಾದ ನಮ್ಮ ನಮ್ಮ ಕರ್ಮಗಳನ್ನು ಆಚರಿಸುತ್ತಾ ಅಲೆಯುತ್ತಿರುತ್ತೇವೆ. ಇಂತಹ ಅನಂತಸಂಖ್ಯಾತರಾದ ಜೀವರಿಗೆ ಕೋಶಗೃಹಗಳಂತಿರುವ

ಬ್ರಹ್ಮಾಂಡಗಳನ್ನು ಅದರಲ್ಲಿರುವ ಜೀವರುಗಳನ್ನು ಸೃಷ್ಟಿಸುವುದರಿಂದಲೂ ಅವುಗಳ ನಾಶದಿಂದಾಗಲಿ ಆ ಶ್ರೀಹರಿಗೆ ಏನಾಗಬೇಕಾಗಿದೆ. ಈ ಬಗೆಯಾದ ಸೃಷ್ಟಿಸಂಹಾರ ಪ್ರವಾಹವು ಪರಮಾತ್ಮನ ಇಚ್ಛೆಯಿಂದಲೇ ನಡೆಯುವುದನ್ನು ಯಾವ ದೇವತೆಯೂ ತಾನೇ ತಪ್ಪಿಸಿಯಾನು ? ಯಾರಿಗೆ ತಾನೆ ಅಂತಹ ಶಕ್ತಿಯು ಇದೆ. ಸರ್ವೋತ್ತಮನಾದ ಶ್ರೀಹರಿಯೊಬ್ಬನೇ ಸರ್ವತಂತ್ರ ಸ್ವತಂತ್ರನು. ಮಿಕ್ಕನಾವೆಲ್ಲಾ ಅಸ್ವತಂತ್ರರು ಮತ್ತು ಅವನ ದಾಸಾನುದಾಸರು. ಆದುರಿಂದ ಅಂತಹ ಶ್ರೀಹರಿಯ ಚಕ್ರದಿಂದ ಉಂಟಾಗಿರುವ ನಿನ್ನ ಭಯವನ್ನು ಪರಿಹರಿಸುವ ಶಕ್ತಿಯು ಮತ್ತಾರಿಗೂ ಇರುವುದಿಲ್ಲ. ನನಗಂತೂ ಸರ್ವಥಾ ಇರುವುದಿಲ್ಲ. ಆದಕಾರಣ ಎಲೈ ದುರ್ವಾಸನೇ, ಪುತ್ರನೇ ! ನೀನು ಆ ಶ್ರೀಹರಿಯನ್ನೇ ಶರಣುಹೊಂದು ಎಂದು ರುದ್ರದೇವನು ದುರ್ವಾಸ ಮುನಿಗೆ ಹೇಳಿದ್ದನು. ಆದ್ದರಿಂದ ಈ ಬ್ರಹ್ಮಾಂಡದ ಒಳಗಿರತಕ್ಕ ಯಾವ ವ್ಯಕ್ತಿಗೇ ಆಗಲಿ ಆ ಶ್ರೀಹರಿಯ ಸಾಮ್ಯವಾಗಲಿ, ಐಕ್ಯವಾಗಲಿ. ಅಧಿಕ್ಯವೇ ಆಗಲಿ ಹೇಗೆ ತಾನೇ ಉಂಟಾದೀತು. ಪ್ರತಿವಾದಿಗಳೇ ಹೇಳಲಿ. ಎಂದು ಶ್ರೀವಾದಿರಾಜರು ಪ್ರಬಲವಾಗಿ ಶ್ರೀಹರಿಯ ಸರ್ವೋತ್ತಮತ್ವವನ್ನು ಪ್ರತಿಪಾದಿಸಿದ್ದಾರೆ.

> **ಏವಂಚಯಸ್ಯರೋಮಾಧಃಸ್ಥಿತ ಬ್ರಹ್ಮಾಂಡಕೋಣಗಾಃ ।**
> **ಕ್ವೇಮೇ ಸುರಾಃ ಸ ವಿಷ್ಣುಃಕ್ವವದಂತು ಪ್ರತಿವಾದಿನಃ ಹರಿಭಕ್ತಿಲತಾ)**

**ಅಭಿಪ್ರಾಯ** :- ಈ ವಿಧಗಳಾದ ಅನಂತ ಅಚಿಂತ್ಯ ಮಹಾಮಹಿಮೋಪೇತನಾದ ಯಾವ ಪರಮಾತ್ಮನ ರೋಮದ ಕೆಳಗಿರುವ ಬ್ರಹ್ಮಾಂಡಕೋಣದಲ್ಲಿರುವವರಾದ ಈ ದೇವತೆಗಳೆಲ್ಲಿ ! ಆ ಮಹಾಮಹಿಮೆಯಿಂದ ಕೂಡಿದ ವಿಷ್ಣುವೆಲ್ಲಿ ! ಪ್ರತಿವಾದಿಗಳೇ ಹೇಳಲಿ. ರುದ್ರದೇವನು ತಾನು ಮಾಡತಕ್ಕ ಎಲ್ಲಾ ವಿಧಗಳಾದ ವ್ಯಾಪಾರಗಳೂ ಕೂಡ ಶ್ರೀನಾರಾಯಣನ ಅನುಗ್ರಹ ಬಲದಿಂದಲೇ ಹೊರತು ಸ್ವತಂತ್ರವಾಗಿ ಯಾವುದೂ ಸಹ ಇಲ್ಲವೆಂದು ಹೇಳುತ್ತಿದ್ದಾನೆ.

> **"ಏತೇ ವಯಂ ಯಸ್ಯವಶೇ ಮಹಾತ್ಮನಃ**
> **ಸ್ಥಿತಾಃಶಕುಂತಾ ಇವ ಸೂತ್ರಯಂತ್ರಿತಾಃ ।**
> **ಮಹಾನಹಂ ವೈಕೃತತಾಮಸೇಂದ್ರಿಯಾಃ**
> **ಸೃಜಾಮಿಸರ್ವೇಯದನುಗ್ರಹಾದಿದಮ್ ।। (ಶ್ರೀಮದ್ಭಾಗವತ ೫ನೇ ಸ್ಕಂಧ)**

**ಅಭಿಪ್ರಾಯ** :- ದಾರದಿಂದ ಕಟ್ಟಲ್ಪಟ್ಟ ಪಕ್ಷಿಯಂತೆ ನಾವೆಲ್ಲ ದೇವತೆಗಳೂ ಆ ಮಹಾಮಹಿಮೆಯುಳ್ಳ ಶ್ರೀಹರಿಗೆ ನಿತ್ಯವೂ ಅಧೀನರಾಗಿದ್ದೇವೆ. ನಾನಾದರೋ ಆ ಪರಮಾತ್ಮನ ಇಚ್ಛೆಯಂತೆ ಅಹಂಕಾರತತ್ವಕ್ಕೆ ಅಭಿಮಾನಿಯಾಗಿರುತ್ತೇನೆ. ವೈಕಾರಿಕ ದೇವತೆಗಳು, ಪಂಚಭೂತಾಭಿಮಾನಿ ದೇವತೆಗಳು ಶಬ್ದಾದಿಗಳಿಗೆ ಅಭಿಮಾನಿಗಳಾದ ದೇವತೆಗಳು ಯಾರುಂಟೋ ಅವರನ್ನೆಲ್ಲಾ ನಾನು ಆ ಪರಮಾತ್ಮನ ಅನುಗ್ರಹದಿಂದಲೇ ಸೃಷ್ಟಿ ಮಾಡುತ್ತೇನೆ.

ಶ್ರೀಮದ್ಭಾಗವತದ ಐದನೆಯಸ್ಕಂಧದಲ್ಲಿ ಮತ್ತೂ ವಿಶೇಷವಾಗಿ ಶಿವನು ಸರ್ವೋತ್ತಮನಾದ ಶ್ರೀಹರಿಯ ಮಹಿಮಾತಿಶಯವನ್ನು ವಿವರಿಸುತ್ತಾನೆ.

> **ಇದಾನ್ಯಹಾಮ್ಯಹಂದಸ್ಯಃಶಶಿಖಂಡಧರೋ ಹರಃ ।**
> **ಬ್ರಹ್ಮವೀಂದ್ರೇಂದ್ರಪೂರ್ವಾಶ್ಚ ವಯಂ ಸರ್ವೇ ಸುರೇಶ್ವರಾಃ ।।**
> **ಮಹಾತ್ಮನೋ ಯಸ್ಯ ತಥಾ ವಶೇಶಕುಂತಃ ಇವ ಸೂತ್ರಯಂತ್ರಿತಾಃ ಸ್ಥಿತಾಸ್ತೇನ**
> **ತಸ್ಯೈವಾನುಗ್ರಹಾದಿದಮ್ ।**
> **ಯಥಾ ತಥಾ ಸ್ಥಿತಾಸ್ತೇನ ತಸ್ಯೈವಾನುಗ್ರಹಾದಿದಮ್ ।**
> **ಅಹಂಕೃತೇ ಸ್ತ್ರಿಭಿರ್ಭಾಗೈಃ ದೇಹೇಂದ್ರಿಯ ಮನೋಮಯಾನ್ ।**
> **ದೇವಾನ್ ದೇವಾಸುರಾನ್ ಪೂರ್ವದೇವಭೂದೇವಪೂರ್ವಕಾನ್ ।**

**ದೇವಾನ್ ಅದೇವಾಂಶ್ಚ ಜಡಾನ್ ಸೃಜಾಮೋ ನ ನಿಜೇಚ್ಛಯಾ**
**ಏವಂ ಚ ಸೂತ್ರಕಾರಾಜ್ಞಾವಶವರ್ತಿಶಕುಂತವತ್ ।**
**ಹರ್ಯಧೀನಂ ಹರೇರ್ಭಿನ್ನಂ ಹೃದಿಸ್ಥಹರಿಣೇರಿತಮ್ ।**
**ಚರಾಚರಾತ್ಮಕಂ ವಿಶ್ವಮಿತಿ ವಕ್ತಿ ಯತಃ ಶಿವಃ ॥**
**ಅತೋಽನ್ಯತೋ ನಃ ಕಸ್ಮಿಶ್ಚೇದ್ವದಂತು ಶ್ರುತಿವಾದಿನಃ ।**
**ಇತಿಸ್ಪಷ್ಟಂ ಭಾಗವತೇ ಯಃ ಶಿವಃ ಸ್ತೌತಿ ಕೇಶವಮ್ ।**
**ಸಕಥಂ ತಸ್ಯ ಸದೃಶೋ ವದಂತು ಶ್ರುತಿವಾದಿನಃ ॥**

ಇಲಾವೃತ ಎಂಬ ಖಂಡದಲ್ಲಿರುವ ಶಿವನು ಈ ಮುಂದೆ ತಿಳಿಸಿರುವಂತೆ ಆಡಿರುತ್ತಾನೆ. ಶ್ರೀಹರಿಯ ಅನುಗ್ರಹ ಬಲದಿಂದಲೇ ನಾವೆಲ್ಲಾ ಅಂದರೆ ಚತುರ್ಮುಖನನ್ನಾಗಲಿ, ನಾನಾಗಲಿ ಮತ್ತು ಇಂದ್ರ ಮೊದಲಾದ ಇತರ ಎಲ್ಲಾ ದೇವತೆಗಳೂ ಕೂಡ ದಾರದಿಂದ ಬಿಗಿಯಲ್ಪಟ್ಟ ಪಕ್ಷಿಯಂತೆ ಸರ್ವೋತ್ತಮನಾದ ಶ್ರೀಹರಿಗೆ ಸರ್ವರೀತಿಯಿಂದಲೂ ಅಧೀನರೇ ಆಗಿರುತ್ತೇವೆ.

ನಾವು ಯಾವ, ಸ್ಥಾನ ಮಾನ ಮರ್ಯಾದೆಯಿಂದ ಇರುತ್ತೇವೆಯೋ ಇದೆಲ್ಲವೂ ಸಹ ಶ್ರೀಹರಿಯ ಅನುಗ್ರಹದಿಂದಲೇ ಆಗಿರುತ್ತದೆ. ಮೂರು ಬಗೆಯಾದ ಅಹಂಕಾರತತ್ವದಿಂದ, ದೇಹದಿಂದಲೂ, ಇಂದ್ರಿಯಗಳಿಂದಲೂ, ಮನಸ್ಸಿನಿಂದಲೂ ಕೂಡಿರುವವರಾದ ದೇವತೆಗಳನ್ನು, ಆ ದೇವತೆಗಳನ್ನು ಅನುಸರಿಸುವವರನ್ನೂ, ರಾಕ್ಷಸರನ್ನೂ ಪೂರ್ವದೇವ, ಭೂದೇವ ಮೊದಲಾದವರನ್ನು, ಸಕಲ ಜೀವರನ್ನೂ, ಜಡಪದಾರ್ಥಗಳನ್ನೂ, ಸೃಷ್ಟಿಮಾಡುತ್ತೇವೆ. ಈ ಎಲ್ಲಾ ನಮ್ಮ ವ್ಯಾಪಾರಗಳೂ ಕೂಡ .ಆ ಶ್ರೀಹರಿಯ ಅನುಗ್ರಹದಿಂದಲೇ ನಡೆಯುತ್ತಿವೆ. ಸ್ವತಂತ್ರವಾಗಿ ನಮ್ಮ ಇಚ್ಛಾನುಸಾರ ಯಾವುದು ನಡೆಯುತ್ತಿಲ್ಲ. ಈ ರೀತಿ ದಾರಹಿಡಿಯುವವನ ಅಧೀನವಾಗಿ, ದಾರದಿಂದ ಕಟ್ಟಲ್ಪಟ್ಟಹಕ್ಕಿಯಂತೆ ನಾವೆಲ್ಲಾ ಶ್ರೀಹರಿಗೆ ಅಧೀನರು. ಕೇವಲ ಅಸ್ವತಂತ್ರರು. ಸರ್ವತಂತ್ರಸ್ವತಂತ್ರನಾದ ಶ್ರೀಹರಿಗಿಂತಲೂ ಅತ್ಯಂತ ಭಿನ್ನರು. ನಮ್ಮ ನಮ್ಮ ಹೃದಯಾಕಾಶದಲ್ಲಿರುವ ಪ್ರೇರಕನಾದ ಶ್ರೀಹರಿಯಿಂದ ಪ್ರೇರಿಸಲ್ಪಟ್ಟವರಾಗಿರುತ್ತೇವೆ. ಈ ಚರಾಚರಾತ್ಮಕವಾದ ಪ್ರಪಂಚವು ಆ ಸರ್ವೋತ್ತಮನಾದ ಶ್ರೀಹರಿಗೆ ಯಾವಾಗಲೂ ಎಲ್ಲ ಬಗೆಯಾಗಿಯೂ ಅಧೀನವಾಗಿದೆ ಎಂಬುದಾಗಿ ಶಿವನು ಪಂಚಮಸ್ಕಂಧ ಭಾಗವತದಲ್ಲಿ ಶ್ರೀಹರಿಯ ಮಹಿಮೆಯ ಅತಿಶಯವನ್ನು ಹೇಳಿರುತ್ತಾರೆ.

ಒಂಭತ್ತನೆಯ ಸ್ಕಂಧದ ಭಾಗವತದಲ್ಲಿ, ಅಂಬರೀಷ ಮಹಾರಾಜನಿಗೆ ರಕ್ಷಕವಾಗಿದ್ದ ಶ್ರೀವಿಷ್ಣುವಿನ ಚಕ್ರದಿಂದ ಪೀಡಿತನಾದವನು ಅದರಿಂದ ರಕ್ಷಣೆಯನ್ನು ಬೇಡಿ ತನ್ನ ಸಮೀಪಕ್ಕೆ ಬಂದಿದ್ದ ದುರ್ವಾಸನನ್ನು ಕುರಿತು ಚತುರ್ಮುಖ ಬ್ರಹ್ಮನು ಈ ರೀತಿ ಹೇಳಿರುವನು.

**ಹಿನ್ನೆಲೆಯ ವಿವರ** :- ಅಂಬರೀಷ ಮಹಾರಾಜನು ಏಕಾದಶೀ ವ್ರತನಿಷ್ಠನಾದ ಮಹಾವಿಷ್ಣುಭಕ್ತನು. ಆ ಮಹಾರಾಜನ ರಕ್ಷಣೆಗಾಗಿ ಶ್ರೀವಿಷ್ಣುವು ಚಕ್ರವನ್ನು ಅನುಗ್ರಹಿಸಿದ್ದನು. ಸಾಧನದ್ವಾದಶೀ ದಿನ, ಅತಿಥಿಯಾಗಿ ಬಂದಿದ್ದ ದುರ್ವಾಸ ಮುನಿಯು ಸಕಾಲಕ್ಕೆ ಪಾರಣೆಗಾಗಿ ಬಾರದಿರಲು, ವ್ರತದ ಲೋಪವು ಆಗಬಾರದೆಂಬ ಧರ್ಮದ ದೃಷ್ಟಿಯಿಂದ ಅಂಬರೀಷ ಮಹಾರಾಜನು ಕೇವಲ ನೀರಿನಿಂದ ಪಾರಣೆಯನ್ನು ಮುಗಿಸಿಬಿಟ್ಟನು. ತಡವಾಗಿ ಬಂದ ದುರ್ವಾಸಮುನಿಯು ಕೋಪಗೊಂಡು ತನ್ನ ಜಟೆಯನ್ನು ಎಳೆದು ಅದರಿಂದ ಆವಿರ್ಭವಿಸಿದ ಭಯಂಕರವಾದ ಶಕ್ತಿದೇವತೆಯಿಂದ ಅಂಬರೀಷ ಮಹಾರಾಜನನ್ನು ನಿಗ್ರಹಿಸಲು ಪ್ರಯತ್ನ ಮಾಡಿದಾಗ, ರಾಜನ ರಕ್ಷಣೆಗಾಗಿ ಮೀಸಲಾಗಿದ್ದ ಚಕ್ರಾಯುಧವು ಆ ಶಕ್ತಿ ದೇವತೆಯನ್ನು ನಾಶಮಾಡಿದ್ದಲ್ಲದೆ, ದುರ್ವಾಸಮುನಿಯನ್ನು ಹಿಂಬಾಲಿಸಿತು. ಅದರಿಂದ ಭಯಗೊಂಡ ಮುನಿವರೇಣ್ಯನು ತನ್ನ ರಕ್ಷಣೆಗಾಗಿ ಬ್ರಹ್ಮದೇವನನ್ನು ಮರೆಹೊಕ್ಕನು. ಆಗ ಬ್ರಹ್ಮನು ದುರ್ವಾಸಮುನಿಗೆ ಈ ಕೆಳಗೆ ಕಂಡಂತೆ ಶ್ರೀಹರಿಯ ಅದ್ಭುತಮಹಿಮೆಯನ್ನು ವಿವರಿಸಿದ್ದಾನೆ.

ಎಲೈ ಋಷಿವರ್ಯನೇ, ನಾನಾಗಲಿ, ಶಿವನಾಗಲಿ, ದಕ್ಷನಾಗಲಿ, ಭೃಗು ಮೊದಲಾದವರಾಗಲಿ, ಪ್ರದೇಶರಾಗಲಿ, ಭೂತೇಶರಾಗಲಿ, ಸುರಾಗ್ರಣಿಗಳಾಗಲಿ, ಎಲ್ಲರೂ ಸಹ ಯಾವ ಶ್ರೀಹರಿಯ ಅಪ್ಪಣೆಯನ್ನು ಶಿರಸಾವಹಿಸಿ, ಲೋಕಕ್ಕೆ ಹಿತವನ್ನು ಮಾಡುತ್ತಿದ್ದೇವೆಯೋ, ಮತ್ತು ಯಾವ ಪರಮಾತ್ಮನ ಜಗನ್ನಿರ್ಮಾಣ ಮತ್ತು ರಕ್ಷಣರೂಪವಾದ ಕ್ರೀಡೆಯ ಕಡೆಯಲ್ಲಿ ಅಂದರೆ ಮಹಾಪ್ರಳಯದ ಸಮಯದಲ್ಲಿ, ದ್ವಿಪರಾರ್ಧವೆಂದು ಕರೆಯಲ್ಪಡತಕ್ಕ ಸಮಯದಲ್ಲಿ ಆ ಪರಮಾತ್ಮನು ಜಗತ್ತನ್ನು ಸಂಹರಿಸುವ ಇಚ್ಛೆಯಿಂದ ಕಾಲನಾಮಕನಾದ ಆ ಮಹಾಮಹಿಮನ ಕೇವಲ ಹುಬ್ಬನ್ನು ಅಲ್ಲಾಡಿಸುವ ಮಾತ್ರದಿಂದ ಮಹಾಪ್ರಳಯಕಾರ್ಯವು ಅವ್ಯಾಹತವಾಗಿ ನಡೆಯುದಿರುತ್ತದೆಯೋ, ನನ್ನ ಸ್ಥಾನವಾದ ಸತ್ಯಲೋಕವೂ ಸಕಲ ಜಗತ್ತೂ ಕೂಡ ಕಣ್ಮರೆಯಾಗಿ ಬಿಡುವುದೋ ಅಂತಹ ಕಾಲನಾಮಕನಾದ ಸರ್ವೋತ್ತಮನಾದ ಪರಮಾತ್ಮನ ಚಕ್ರದಿಂದ ಕಾಡಿಸಲ್ಪಟ್ಟ ನಿನ್ನನ್ನು ನಾನು ರಕ್ಷಿಸಲಾರೆ ಎಂದು ಹೇಳಿ ತಿರಸ್ಕರಿಸಿದನು. ಮತ್ತು ಕೂಡ ಬ್ರಹ್ಮನ ವಾಕ್ಯವು ಈ ರೀತಿ ಇದೆ.

**ಸತ್ಯಲೋಕೇಶ್ವರಃ ಸೋಽಹಂ ಬ್ರಹ್ಮಾ ಕೈಲಾಸಗಃ ಶಿವಃ**
**ದಕ್ಷಾದ್ಯಾಶ್ಚ ಪ್ರಜೇಶಾದ್ಯಾಃ ಕಾರ್ತವೀರ್ಯಾದಯೋ ನೃಪಾಃ ।।**
**ಘಂಟಾಕರ್ಣಾದಯಃ ಸರ್ವೇ ಭೂತೇಶಾಶ್ಚ ತಥಾ ಸುರಾಃ ।**
**ಈಶಾ ಯೇಷಾಂ ಮಾನುಷಾಶ್ಚೈತ್ಯೇವಂ ಪ್ರಪನ್ನಾಃಶರಣಾಗತಾಃ ।।**
**ಮೂರ್ಧ್ನ್ಯರ್ಪಿತಾಂ ಲೋಕಹಿತಂ ವಹಾಮಃ ತದ್ರಮಾಪತೇಃ**
**ದಾಸಾ ಏವ ವಯಂ ಸರ್ವೇ ಕೋಽಪ್ಯತ್ಯೇತಿ ತಂ ಪ್ರಭುಮ್ ।।**

**ಅಭಿಪ್ರಾಯ** :- ಎಲೈ ದುರ್ವಾಸಮುನಿಯೇ, ನಾನು ಸತ್ಯಲೋಕಕ್ಕೆ ಅಧಿಪತಿಯಾಗಿರುತ್ತೇನೆ. ಶಿವನು ಕೈಲಾಸನಾಥನಾಗಿದ್ದಾನೆ.

ನಾನೂ, ಕೈಲಾಸಾಧಿಪತಿಯಾದ ರುದ್ರನೂ, ದಕ್ಷಪ್ರಜಾಪತಿಯೇ ಮೊದಲಾದ ಪ್ರದೇಶರೂ, ಕಾರ್ತವೀರ್ಯಾರ್ಜುನನೇ ಮೊದಲಾದ ರಾಜಾಧಿರಾಜರೂ ಘಂಟಾಕರ್ಣಾದಿಗಳೂ, ಎಲ್ಲಾ ಭೂತಾಭಿಮಾನಿಗಳಾದ ದೇವತೆಗಳೂ, ಇವರುಗಳನ್ನೇ ಒಡೆಯರನ್ನಾಗಿ ಉಳ್ಳ ಸಕಲಮಾನವರೂ, ಈ ರೀತಿ ಕ್ರಮವಾಗಿ ಎಲ್ಲರೂ ಸಹ ಯಾವ ಶ್ರೀರಮಾಪತಿಯ ಆಜ್ಞೆಗೆ ಬದ್ಧರಾಗಿರುತ್ತೇವೆ. ಶ್ರೀಹರಿಗೆ ಶರಣಾಗತರಾಗಿರುತ್ತೇವೆ. ಆ ಶ್ರೀಹರಿಯ ಆಜ್ಞಾಧಾರಕರಾಗಿಯೇ ಇದ್ದೇವೆ. ಶ್ರೀಹರಿಯು ನಮಗೆ ಯಾವ ಯಾವ ಕಾರ್ಯವನ್ನು ಮಾಡಲು ನಿಯಮನಮಾಡಿರುವನೋ ಅದನ್ನು ಚಾಚೂತಪ್ಪದಂತೆ ಭಯಭೀತರಾಗಿ ನಡೆಸುತ್ತಲಿರುತ್ತೇವೆ, ಶಿರಸಾವಹಿಸಿ ಅತ್ಯಂತ ಭಯಭಕ್ತಿಪೂರ್ವಕವಾಗಿ ಮಾಡುತ್ತಿರುತ್ತೇವೆ. ನಾವೆಲ್ಲಾ ಸರ್ವೇಶನಾದ ಶ್ರೀಹರಿಗೆ ದಾಸರೇ ಆಗಿರುತ್ತೇವೆ. ನಮ್ಮಲ್ಲಿ ಯಾರೂ ಸಹ ಆ ಪ್ರಭುವಿನ ಆಜ್ಞೆಯನ್ನು ಸ್ವಲ್ಪವೂ ಕೂಡ ಮೀರುವುದಿಲ್ಲ.

**"ಶಿಂಟೀಕೋಽಪಿಮಮುಖ್ಯಾಹಾ ಸಹ ಏತ್ವಂ ಚಲೀಲಯಾ । ಹರಾಮ್ಯಸ್ವವಿಮೇಹಾಂತೇ ಭ್ರೂಭಂಗೇ ಪರಿಧಕ್ಷ್ಯತಿ" ।।**

**ಅಭಿಪ್ರಾಯ** :- ಮತ್ತೂ ಏನೆಂದರೆ ಸರ್ವಸ್ವಾಮಿಯಾದ ಶ್ರೀಹರಿಯು ಲೀಲೆಯಿಂದ ನನ್ನ ಸ್ಥಾನವಾದ ಈ ಸತ್ಯಲೋಕವನ್ನು ಸಮಸ್ತ ಪ್ರಪಂಚದ ಜೊತೆಗೆ ನನ್ನ ಆಯುಷ್ಯದ ಕಡೆಯಭಾಗದಲ್ಲಿ ಕೇವಲ ಹುಬ್ಬಿನ ಚಾಲನೆಯಿಂದ ನಾಶಗೊಳಿಸುತ್ತಾನೆ.

**ಹರೇಶ್ಚಕ್ರಮಿದಂ ಹ್ಯೇವಾಜ್ಞಯಾಽಸ್ಮಾಗತಮುನ್ಮುನಿಮ್ ।**
**ಅತಸ್ತದಾಜ್ಞಾಭಂಗೋಽ ನ್ಯಸ್ಮದ್ಭೃತ್ಯಾನಾಂ ನ ಶೋಭತೇ ।।**

**ಅಭಿಪ್ರಾಯ** :- ಈ ಚಕ್ರವು, ಆ ಶ್ರೀ ವಿಷ್ಣುವಿನ ಆಜ್ಞೆಯಿಂದಲೇ ದುರ್ವಾಸಮುನಿಯನ್ನು ಹಿಂಬಾಲಿಸಿದೆ. ಆದಕಾರಣ ಆ ಹರಿಯ ಆಜ್ಞೆಯ ಭಂಗವನ್ನುಂಟುಮಾಡಲು ನಮಗೆ ಸಾಧ್ಯವಿಲ್ಲ. ಮತ್ತೂ ಅವನ ಭೃತ್ಯರಾದ ನಮಗೆ ಮಂಗಳಕರವೂ ಅಲ್ಲ.

**ಸ್ವಾಜ್ಞೋಲ್ಲಂಘನಕರ್ತಾರಂ ಮಾಂ ದಿಧಕ್ಷೇದಪಿ ಪ್ರಭುಃ ।**
**ಕಾಲಾತ್ಮನಸ್ತಸ್ಯ ಚಿತ್ತೇ ಭವಿಷ್ಯತ್ಕಾರ್ಯಮೀಶಿತುಃ ।।**
**ಕಃ ಪಶ್ಯತಿ ತತೋ ಗಚ್ಛ ತಮೇವ ಶರಣಂ ಪ್ರಭುಮ್ ।।**

**ಅಭಿಪ್ರಾಯ** :- ಎಲೈ ದುರ್ವಾಸಮುನಿಯೇ, ನಾನೇನಾದರೂ ಶ್ರೀಹರಿಯ ಆಜ್ಞೆಯನ್ನು ಮೀರಿದರೆ, ಅಂತಹ ನನ್ನನ್ನು ಪ್ರಭುವಾದ ಶ್ರೀಹರಿಯು ಸುಟ್ಟುಬಿಡುತ್ತಾನೆ. ಸರ್ವಸ್ವಾಮಿಯಾದ ಕಾಲಾತ್ಮಕನಾದ, ಆ ಪ್ರಭುವಿನ ಚಿತ್ತದಲ್ಲಿ ಮುಂದೆ ಏನೇನು ಆಗಬೇಕೆಂದಿರುವುದೋ ಅದನ್ನು ಯಾರು ತಾನೇ ಬಲ್ಲರು. ಆದುದರಿಂದ ಆ ಪ್ರಭುವಾದ ಶ್ರೀವಿಷ್ಣುವನ್ನೇ ನೀನು ಶರಣುಹೊಂದು. ಅದೇ ನಿನಗೆ ಶ್ರೇಯಸ್ಕರ" ಎಂದು ಬ್ರಹ್ಮದೇವನು ದುರ್ವಾಸಮುನಿಗೆ ಶ್ರೀಹರಿಯ ಮಹಿಮೆಯನ್ನು ಹೇಳಿ ಹಿತವನ್ನು ಉಪದೇಶಮಾಡಿದನು. ಶ್ರೀಮದ್ಭಾಗವತದಲ್ಲಿ ಚತುರ್ಮುಖ ಬ್ರಹ್ಮನು ತನ್ನ ಮಗನಾದ ರುದ್ರನನ್ನು ಕುರಿತು ಪರಮಾತ್ಮನ ಅಪಾರವಾದ ಮಹಿಮೆಯನ್ನು ಮತ್ತೂ ವಿವರವಾಗಿ ನಿರೂಪಿಸಿರುತ್ತಾನೆ.

**ಸೃಜಾಮಿ ತನ್ನಿಯುಕ್ತೋಽಹಂ ಹರೋ ಹರತಿ ತದ್ವಶಃ ।**
**ವಿಶ್ವಂ ಪುರುಷರೂಪೇಣ ಪರಿಪಾತಿ ತ್ರಿಶಕ್ತಿಧೃಕ್ ।।**
**ಸ ಏವ ಭಗವಾನ್ ಲಿಂಗೈಃ ತ್ರಿಭಿರೇತೈರಧೋಕ್ಷಜಃ**
**ಸ್ವಲಕ್ಷಿತಗತಿಃ ಬ್ರಹ್ಮನ್ ಸರ್ವೇಷಾಂ ಮಮ ಚೇಶ್ವರಃ ।।**
**ನಮಸ್ತಸ್ಮೈ ಭಗವತೇ ವಾಸುದೇವಾಯ ವೇಧಸೇ ।**
**ಯನ್ಮಾಯಯಾ ದುರ್ಜಯಯಾ ಮಾಂ ಬ್ರುವಂತಿ ಜಗದ್ಗುರುಮ್ ।**
**ಇತಿ ಸ್ಪಷ್ಟಂ ಭಾಗವತೇ ಸುತಂ ಪ್ರತ್ಯಾಹಪದ್ಮಭೂಃ ।।**

**ಅಭಿಪ್ರಾಯ** :- ಯಾವ ಶ್ರೀಹರಿಯಿಂದ ಪ್ರೇರಿಸಲ್ಪಟ್ಟವನಾಗಿ ನಾನು ಈ ಜಗತ್ತನ್ನು ಸೃಷ್ಟಿಮಾಡುತ್ತೇನೆ. ಅವನ ಅಧೀನನಾಗಿಯೇ ರುದ್ರನು ಸಂಹಾರವನ್ನೂ ಮಾಡುತ್ತಾನೆ. ಶ್ರೀಹರಿಯು ಸ್ವಯಂ ಪುರುಷರೂಪದಿಂದ ಪ್ರಪಂಚವನ್ನು ಕಾಪಾಡುತ್ತಾನೆ. ಆ ಭಗವಂತನೇ ಸೃಷ್ಟಿ, ಪರಿಪಾಲನ, ಸಂಹಾರ ರೂಪವಾದ ಮೂರು ಬಗೆಯಾದ ಶಕ್ತಿಯುಳ್ಳವನಾಗಿ ಸ್ವತಂತ್ರನಾಗಿ ತನ್ನ ಇಚ್ಛಾನುಸಾರವಾಗಿ ವ್ಯಾಪಾರವುಳ್ಳವನಾಗಿರುತ್ತಾನೆ. ಸರ್ವರಿಗೂ ಸ್ವಾಮಿಯಾಗಿರುತ್ತಾನೆ. ಅಷ್ಟು ಮಾತ್ರವಲ್ಲ ನನಗೂ ಸಹ ನಿಯಾಮಕನಾಗಿರುತ್ತಾನೆ. ಅಂತಹ ಸರ್ವೇಶ್ವರನಾದ ಭಗವಂತನಾದ ವಾಸುದೇವನಿಗೆ ನಮಸ್ಕಾರವು. ಯಾವ ಶ್ರೀವಾಸುದೇವನ ಮಾಯೆಯಿಂದಲೇ (ಇಚ್ಛೆಯಿಂದಲೇ) ನನ್ನನ್ನು ಜಗದ್ಗುರು ಎಂದು ಜ್ಞಾನಿಗಳು ಕರೆಯುತ್ತಾರೆ. ನಾನಂತೂ ಸ್ವತಂತ್ರನಲ್ಲ, ಸ್ವತಂತ್ರನಾದ ಆ ಶ್ರೀಹರಿಗೆ ನಾವೆಲ್ಲಾ ದಾಸರು ಎಂದು ಶ್ರೀಮದ್ಭಾಗವತದಲ್ಲಿ ಚತುರ್ಮುಖ ಬ್ರಹ್ಮನು ತನ್ನ ಮಗನಾದ ಶಿವನನ್ನು ಕುರಿತು ಹೇಳಿರುತ್ತಾನೆ. ಚತುರ್ಮುಖಬ್ರಹ್ಮದೇವನು ಪರಮಾತ್ಮನನ್ನೇ ಕುರಿತು ಈ ಕೆಳಗೆ ಕಂಡಂತೆ ವಿಜ್ಞಾಪಿಸಿಕೊಂಡಿರುತ್ತಾನೆ.

**"ನಿಮಿತ್ತಮಾತ್ರಂ ಈಶಸ್ಯ ವಿಶ್ವಸರ್ಗನಿರೋಧಯೋಃ।**
**ಹಿರಣ್ಯಗರ್ಭಃ ಶರ್ವಶ್ಚ ಕಾಲಾಖ್ಯಾರೂಪಿಣಸ್ತವ॥**

**ತಾತ್ಪರ್ಯ** :- ಎಲೈ ಪರಮಾತ್ಮನೇ! ಕಾಲನಾಮಕನಾದ ನಿನಗೆ ಈ ಪ್ರಪಂಚದ ಸೃಷ್ಟಿವ್ಯಾಪಾರಕ್ಕಾಗಲಿ, ಸಂಹಾರಕ್ರಿಯೆಗಾಗಲಿ ಇವುಗಳ ವಿಷಯದಲ್ಲಿ, ಹಿರಣ್ಯಗರ್ಭನಾದ ನಾನಾಗಲಿ, ರುದ್ರನಾಗಲಿ ಕೇವಲ ಹೆಸರಿಗೆ ಮಾತ್ರ ಕಾರಣರೆಂದು ಕರೆಯಲ್ಪಡುತ್ತೇವೆ. ಎಲ್ಲವೂ ಸಹ ಮುಖ್ಯವಾಗಿ ನಿನ್ನಿಂದಲೇ ಆಗುತ್ತಿವೆ. ಮಹಾನುಭಾವನಾದ ನೀನು ನಮ್ಮಲ್ಲಿ ಅಂತರ್ಯಾಮಿಯಾಗಿದ್ದು ನಮ್ಮ ಮೂಲಕ ಸೃಷ್ಟ್ಯಾದಿವ್ಯಾಪಾರಗಳನ್ನೂ ಸ್ವತಂತ್ರನಾಗಿ ಮಾಡುತ್ತಿರುತ್ತೀಯೇ" ಎಂದು ಶ್ರೀಹರಿಯ ಮಹಿಮೆಯನ್ನು ಚತುರ್ಮುಖನು ಶ್ಲಾಘಿಸಿರುತ್ತಾನೆ.

ಮತ್ತು ಶ್ರೀ ಮದ್ಭಾಗವತದಲ್ಲಿ ಶ್ರೀಹರಿಯ ಪ್ರಶಂಸೆಯು ನಾನಾಬಗೆಯಾಗಿ ವಿವರಿಸಲ್ಪಟ್ಟಿದೆ.

**"ಯಸ್ಯ ಪ್ರಸಾದಜೋ ಬ್ರಹ್ಮಾ ರುದ್ರಶ್ಚ ಕ್ರೋಧಸಂಭವಃ।**
**ಗುಣವ್ಯಲೀಕ್ಯರಜಶಂಕರಾದ್ಯೈಶ್ಚ ಪ್ರಶಸ್ಯತೇ॥**
**ತೀರ್ಥಾಸ್ಪದಂ ಶಿವವಿರಿಂಚನುತಂ ತೇ ಪದಾಂಬುಜಮ್।**
**ಇತಿ ಭಾಗವತೇ ತತ್ರ ತತ್ರ ಯಃ ಸ್ತೂಯತೇ ಹರಿಃ॥**

**ತಾತ್ಪರ್ಯ** :- ಯಾವ ಸರ್ವೋತ್ತಮನಾದ ಶ್ರೀಹರಿಯ ಅನುಗ್ರಹದಿಂದಲೇ ಬ್ರಹ್ಮನು ಹುಟ್ಟಿರುತ್ತಾನೆಯೋ ರುದ್ರನಾದರೋ ಪರಮಾತ್ಮನ ಮಗನಾದ ಚತುರ್ಮುಖನ ಕೋಪದಿಂದ ಅವನ ಹುಬ್ಬಿನಿಂದ ಹುಟ್ಟಿರುವನೋ, ಯಾವ ಬ್ರಹ್ಮಾದಿಗಳೂ ಸಹ ಆ ಪರಮಾತ್ಮನ ಸಮಗ್ರವಾದ ಸ್ವರೂಪವನ್ನು ಸರಿಯಾಗಿ ತಿಳಿದಿಲ್ಲವೋ, ಯಾರ ಪಾದೋದಕವು ಬ್ರಹ್ಮಾದಿಗಳಿಂದ ಹೊಗಳಲ್ಪಟ್ಟು ತೀರ್ಥವೆಂದು ವಿಖ್ಯಾತವಾಗಿರುವುದೋ, ಅಂತಹ ಮಹಾನುಭಾವನು ಶ್ರೀಹರಿಯು ಎಂದು ಶ್ರೀ ಮದ್ಭಾಗವತದಲ್ಲಿ ಅಲ್ಲಲ್ಲಿ ಶ್ರೀಹರಿಯು ಸ್ತುತಿಸಲ್ಪಟ್ಟಿರುತ್ತಾನೆ.

**"ಹಿರಣ್ಯಗರ್ಭಃ ಕಃ ಪ್ರೋಕ್ತಃ ಈಶಃ ಶಂಕರ ಏವ ಚ।**
**ಸೃಷ್ಟ್ಯಾದಿನಾ ವರ್ತಯತಿ ಯತಸ್ತೇಕೇಶವೋ ಭವಾನ್**

**ತಾತ್ಪರ್ಯ** :- ಕ ಎಂದರೆ ಹಿರಣ್ಯಗರ್ಭನು ಈಶನೆಂದರೆ ಶಂಕರನು. ಇವರಲ್ಲಿ ಬ್ರಹ್ಮನನ್ನು ಸೃಷ್ಟಿ ವ್ಯಾಪಾರದಲ್ಲೂ, ರುದ್ರನನ್ನು ಸಂಹಾರವ್ಯಾಪಾರಕ್ಕಾಗಿಯೂ ಪ್ರೇರಿಸುವವನಾಗಿರುವದರಿಂದ ಎಲೈ ವಿಷ್ಣುವೆ, ನೀನು "ಕೇಶವ" ಎಂಬ ಹೆಸರನ್ನುಳ್ಳವನಾಗಿರುತ್ತೀಯೆ.

ಪರಮಾತ್ಮನ ಚಕ್ರದ ಮಹಿಮೆಯನ್ನು ವರ್ಣಿಸುವ ಮೂಲಕವಾಗಿ ಶ್ರೀಹರಿಯ ಸರ್ವೋತ್ತಮತ್ವವು ಪ್ರತಿಪಾದಿಸಲ್ಪಟ್ಟಿದೆ.

**"ಬ್ರಹ್ಮೇಶಾದ್ಯಾನತೇಹಿತೋ ಯಸ್ಯ ಶಂಭೋಃ ಪಿತಾಮಹಃ।**
**ದುರ್ವಾಸಸಃ ಪ್ರಪನ್ನಸ್ಯ ಯಚ್ಚಕ್ರಂ ಬ್ರಹ್ಮಶಂಕರೌ॥**
**ಅಭೀಷಯತ್ ಕೋಽಸ್ಯ ಸಮೋ ವದಂತು ಪ್ರತಿವಾದಿನಃ॥**

**ಅಭಿಪ್ರಾಯ** :- ಯಾರು ಬ್ರಹ್ಮರುದ್ರೇಂದ್ರಾದಿಗಳಿಂದ ಭಕ್ತಿಪೂರ್ವಕವಾಗಿ ನಮಸ್ಕರಿಸಲ್ಪಟ್ಟಿರುವನೋ, ಶಂಭುವಿಗೆ ಯಾರು ತಾತನಾಗಿರುವನೋ, ಯಾರ ಚಕ್ರಾಯುಧವು, ದುರ್ವಾಸಮುನಿಯನ್ನು ಅಂಬರೀಷನ ಸಲುವಾಗಿ ಹಿಂಬಾಲಿಸಿತೋ, ಆ ದುರ್ವಾಸಮುನಿಯು ತನ್ನ ರಕ್ಷಣೆಗಾಗಿ ಬ್ರಹ್ಮನಹತ್ತಿರವೂ ರುದ್ರನಲ್ಲಿಗೂ ಹೋದಾಗ ಆ ವಿಷ್ಣುವಿನ ಚಕ್ರವು ಅವರನ್ನು ಸಹ ಹೆದರಿಸಿತೋ ಅಂತಹ ವಿಷ್ಣುವಿಗೆ ಯಾರು ತಾನೇ ಸಮರು ? ಪ್ರತಿವಾದಿಗಳೇ ಹೇಳಲಿ.

ಪರಮಾತ್ಮನ ಅಸಾಧಾರಣವಾದ ಮಹಿಮೆಯು ಈ ಕೆಳಗಿನ ಶ್ಲೋಕದಲ್ಲಿ ವರ್ಣಿತವಾಗಿದೆ.

"ಅಸಾವೇಕಾರ್ಣವೀಭೂತೇ ಮಾಯಾವಟದಲೇ ಪುಮಾನ್ ।
ಜಗತ್ ಸ್ವಜಠರೇ ಕೃತ್ವಾ ತಸ್ಮಿನ್ ಶೇತೇ ಜನಾರ್ದನಃ ।।

**ತಾತ್ಪರ್ಯ** :- ಈ ಜನಾರ್ದನನು ಮಹಾಪ್ರಳಯಕಾಲದಲ್ಲಿ ಪ್ರಳಯೋದಕದಲ್ಲಿ ಮಾಯಾವಟದಲದಲ್ಲಿ, ಈ ಚೇತನ ಮತ್ತು ಅಚೇತನಾತ್ಮಕವಾದ ಸಮಸ್ತ ಪ್ರಪಂಚವನ್ನು ತನ್ನ ಹೊಟ್ಟೆಯೊಳಗೆ ಇಟ್ಟುಕೊಂಡು ಮಲಗುತ್ತಾನೆ.

ಸರ್ವೋತ್ತಮನಾದ ಶ್ರೀಮನ್ನಾರಾಯಣನ ಸ್ವಾತಂತ್ರ್ಯಾದಿಮಹಾಮಹಿಮೆಯನ್ನು ಸ್ಮೃತಿವಾಕ್ಯಗಳೂ ಪ್ರತಿಪಾದಿಸುತ್ತಲಿವೆ.

"ಆಸೀದೇಕೋ ಹ ವೈ ಪೂರ್ವೇ ವಿಷ್ಣುರ್ನಾರಾಯಣೋಽವ್ಯಯಃ ।
ನ ಚ ಬ್ರಹ್ಮಾ ಚರುದ್ರಶ್ಚ ನ ದೇವಾ ನ ಮಹರ್ಷಯಃ ।।
ಇತಿ ಸ್ಮೃತೇ ಬೃಹತ್ಕಲ್ಪೇಽಪ್ಯೇಕೋ ನಾರಾಯಣೋಽಖಿಲಮ್ ।
ಸಂಹೃತ್ಯ ಜಠರೇ ಕೃತ್ವಾ ಶೇತೇ ವಟಪುಟೇ ಕಿಲ ।
ತದಾ ನ ಶ್ರೂಯತೇ ಬ್ರಹ್ಮಾ ನ ರುದ್ರೋ ನಾಪರೇ ಸುರಾಃ ।।
ತಸ್ಯ ವಿಷ್ಣೋಃ ಸಮಃ ಕೋ ವಾ ವದಂತು ಪ್ರತಿವಾದಿನಃ ।।

**ಅಭಿಪ್ರಾಯ** :- ಮಹಾಪ್ರಳಯದ ಕಾಲದಲ್ಲಿ ಅನಿತ್ಯತ್ವ, ದೇಹಹಾನಿ, ದುಃಖಪ್ರಾಪ್ತಿ, ಅಪೂರ್ಣತಾ ಎಂಬ ನಾಲ್ಕು ಬಗೆಗಳಾದ ನಾಶಗಳಿಂದ ರಹಿತನಾದ ಶ್ರೀಮನ್ನಾರಾಯಣನೊಬ್ಬನೇ ಸ್ವತಂತ್ರನಾಗಿದ್ದನು.

ಮತ್ತೆ ಬ್ರಹ್ಮನಾಗಲಿ, ರುದ್ರನೇ ಆಗಲಿ, ದೇವತೆಗಳಾಗಲಿ, ಮಹರ್ಷಿಗಳಾಗಲಿ ಸ್ವತಂತ್ರರಾಗಿ ಯಾರೂ ಇರಲಿಲ್ಲ.

ಅಂತಹ ಸರ್ವತಂತ್ರಸ್ವತಂತ್ರನಾದ ಶ್ರೀ ವಿಷ್ಣುವಿಗೆ ಸಮಾನರಾದವರು ಯಾರು ತಾನೇ ಇರುವರು ? ಪ್ರತಿವಾದಿಗಳೇ ಹೇಳಲಿ. ಪಾದ್ಮಪುರಾಣದ ವಾಕ್ಯದಿಂದಲೂ ಬ್ರಹ್ಮರುದ್ರಾದಿಗಳಿಗಿಂತಲೂ ಶ್ರೀಹರಿಯ ಹಿರಿಮೆಯನ್ನು ಭೃಗು ಮಹರ್ಷಿಗಳ ಮೂಲಕ ಆಗಿರುವುದನ್ನೂ ಹಂಭಕ್ತಿಲಾಕಾರರು ಉದಾಹರಿಸುತ್ತಾರೆ.

"ನಾರೀಸಂಗಮಮತ್ತೋಽಸೌ ಯಸ್ಮಾನ್ಮಾಮವಮನ್ಯತೇ ।
ಯೋನಿಲಿಂಗಸ್ವರೂಪಂ ವೈ ತಸ್ಮಾದಸ್ಯ ಭವಿಷ್ಯತಿ ।।
ಇತಿ ಪಾದ್ಮಪುರಾಣೋಕ್ತೇಃ ಶಿವಂ ಪಂಚಮುಖಂ ಪುರಾ ।
ಯಸ್ಯ ಭಕ್ತೋ ಭೃಗುಃ ಶಪ್ತ್ವಾ ಯೋನಿಲಿಂಗಂ ವ್ಯಧಾತ್ ಶಿವಮ್
ಯತೋ ಲಿಂಗಂ ಗಲೇ ಸರ್ವೇ ಧಾರಯಂತಿ ಶಿವಾನುಗಾ ।।
ಸ್ವಲಿಂಗಮೂಲಭೂತೇನ ಭೃಗುಣಾಪಿ ಹಿ ಯೋಽರ್ಚಿತಃ
ತಸ್ಯ ವಿಷ್ಣೋಃ ಸಮಃ ಕೋ ವಾ ವದಂತು ಪ್ರತಿವಾದಿನಃ ।।

**ಅಭಿಪ್ರಾಯ ಮತ್ತು ಹಿನ್ನೆಲೆ** :- ಹಿಂದೆ ಸರಸ್ವತೀನದೀತೀರದಲ್ಲಿ ನಡೆದ ಸತ್ರಯಾಗದಲ್ಲಿ ಭಾಗವಹಿಸಿದ್ದ ಋಷಿವರೇಣ್ಯರಲ್ಲಿ ಒಂದು ವಿವಾದವು ಉಂಟಾಯಿತು. ತ್ರಿಮೂರ್ತಿಗಳಲ್ಲಿ ಅಂದರೆ ಬ್ರಹ್ಮ ವಿಷ್ಣು ರುದ್ರ ಈ ಮೂರು ದೇವತೆಗಳಲ್ಲಿ ಯಾರು ಶ್ರೇಷ್ಠರು ಎಂಬುದಾಗಿ ಚರ್ಚೆಯು ನಡೆಯಿತು. ಅದನ್ನು ತಿಳಿದು ಬರುವುದಕ್ಕಾಗಿ ಋಷಿಗಳು ಯೋಗಿವರೇಣ್ಯರಾದ ಭೃಗುಮಹರ್ಷಿಗಳನ್ನು ಕಳುಹಿಸಿಕೊಟ್ಟರು. ಆ ಭೃಗುಮುನಿಗಳು ಮೊದಲು ಕೈಲಾಸಕ್ಕೆ ಹೋದರು. ಆಗ ರುದ್ರದೇವನು ಭೃಗುಮಹರ್ಷಿಗಳನ್ನೂ ಆಲಿಂಗಿಸಲು ಪ್ರಯತ್ನಪಟ್ಟಾಗ ಕಾಮಾತುರನಾದ ರುದ್ರನನ್ನು ತಿರಸ್ಕರಿಸಿದರು.

ಕೋಪ ಗೊಂಡ ರುದ್ರನು ಭೃಗುಮುನಿಗಳನ್ನು ಕೊಲ್ಲಲು ಮುಂದುವರೆದಾಗ ಪಾರ್ವತೀದೇವಿಯು ಅದನ್ನು ತಡೆಗಟ್ಟಿದಳು. ಆಗ ಭೃಗುವು ನಾರೀಸಂಗಮಮತ್ತನಾಗಿ ತನಗೆ ಅವಮಾನಗೊಳಿಸಿದ ರುದ್ರನಿಗೆ "ನಿನ್ನ ನಿಜವಾದ ಆಕಾರಕ್ಕೆ ಭೂಲೋಕದಲ್ಲಿ ಪೂಜೆಯು ಸಲ್ಲುವುದು ಬೇಡ. ಯೋನಿಲಿಂಗರೂಪದಲ್ಲಿಯೇ ಲೋಕದಲ್ಲಿ ನಿನಗೆ ಪೂಜೆ ಪುರಸ್ಕಾರಗಳು ದೊರಕಲಿ" ಎಂದು ಶಾಪವನ್ನಿತ್ತರು. ಆ ಶಾಪದ ನಿಮಿತ್ತವಾಗಿಯೇ ಶಿವನ ಭಕ್ತರಾದವರು ಇಂದಿಗೂ ಲಿಂಗವನ್ನು ತಮ್ಮ ಕುತ್ತಿಗೆಗೆ ಕಟ್ಟಿಕೊಳ್ಳುತ್ತಾರೆ.

ಯಾರು ಶಿವನಿಗೆ ಲಿಂಗರೂಪದಿಂದ ಪೂಜೆಯು ನಡೆಯಲಿ ಎಂದು ಶಾಪವನ್ನಿತ್ತನೊ ಅಂತಹ ಭೃಗುವಿನಿಂದಲೂ ಪೂಜಿಸಲ್ಪಟ್ಟ ಶ್ರೀ ವಿಷ್ಣುವಿಗೆ ಯಾರು ತಾನೇ ಸಮರು ಇರುತ್ತಾರೆ? ಪ್ರತಿವಾದಿಗಳೇ ಹೇಳಲಿ. ಮತ್ತೊಂದು ಕಥಾಪ್ರಸಂಗದಿಂದಲೂ ಶ್ರೀಹರಿಯ ಮಹಿಮೆಯನ್ನು ವಿವರಿಸುತ್ತಾರೆ.

**ವಿಪ್ರರೂಪಧರಃ ಶಕ್ರಃ ಚಟುಕಾರ್ಥಃಸ್ವಲೀಲಯಾ ।**
**ಶಿವೇನ ಸ್ಥಾಪಿತಪಿನಾಕಸ್ಯ ಜ್ಯಾಮಾಚ್ಛಿನತ್ಕಿಲ ।।**
**ಛಿನ್ನಜ್ಯೇನ ಸ್ವಧನುಷಾ ಛಿನ್ನೇ ಚ ಶಿವಮಸ್ತಕೇ ।**
**ಪ್ರವರ್ಗ್ಯ ವಿಧಯಾಹುತ್ವಾ ಹುತ್ವಾ ಶ್ರೀ ವಿಷ್ಣುಮವ್ಯಯಮ್ ।।**
**ಪ್ರತೋಷ್ಯ ತಸ್ಯ ಕೃಪಯಾ ಸುರಾಸ್ಸರ್ವೇ ಪುನರ್ಭುವಿ ।**
**ಪತಿತಂ ತಚ್ಛಿರಃ ಶಂಭೋಃ ಕಥಂ ತೇ ಸಂದಧುಃ ಕಿಲ ।।**
**ಸಮೋಽಸ್ತು ಸ ಕಥಂ ಶಂಭೋಃ ವದಂತು ಪ್ರತಿವಾದಿನಃ ।**

**ತಾತ್ಪರ್ಯ** :- ಒಂದಾನೊಂದು ರುದ್ರದೇವನು ಲೀಲೆಯಿಂದ ತನ್ನ ಗದ್ದವನ್ನು ತನ್ನ ಧನುಸ್ಸಿನ ಮೇಲಿಟ್ಟುಕೊಂಡು ಕುಳಿತ್ತಿದ್ದನು. ಆಗ ಇಂದ್ರನು ಬ್ರಹ್ಮಚಾರಿರೂಪದಿಂದ ಬಂದು ಆ ಧನುಸ್ಸಿನ ಹೆದೆಯನ್ನು ತುಂಡರಿಸಿದನು. ಆ ಕೂಡಲೆ ರುದ್ರನ ರುಂಡವು ಕತ್ತರಿಸಿ ದೇಹದಿಂದ ಬೇರ್ಪಟ್ಟಿತು. ಶಿವನ ಧನುಸ್ಸಿನಿಂದ ಶಿವನ ತಲೆಯ ಕತ್ತರಿಸಲ್ಪಟ್ಟಾಗ ದೇವತೆಗಳು ಗಾಬರಿಗೊಂಡು, ಮತ್ತೆ ಶಿವನ ಉಜ್ಜೀವನಕ್ಕಾಗಿ ಪ್ರವರ್ಗ್ಯಾಹುತಿಯಿಂದ ಸರ್ವಸ್ವಾಮಿಯಾದ ಶ್ರೀವಿಷ್ಣುವನ್ನು ಉದ್ದೇಶಿಸಿ ಹೋಮಮಾಡಿ ಸಂತೋಷಗೊಳಿಸಿ ಕತ್ತರಿಸಿ ಭೂಮಿಯಲ್ಲಿ ಬಿದ್ದಿದ್ದ ಆ ತಲೆಯನ್ನು ಮತ್ತೆ ಶಿವನ ಮುಂಡಕ್ಕೆ ಸೇರಿಸಿ ಶಿವನನ್ನು ಬದುಕಿಸಿದರು.

ಇಂತಹ ಶಿವನಿಗೆ ಪ್ರಾಣದಾನವನ್ನು ಮಾಡಿದ ಸರ್ವೋತ್ತಮದೇವತೆಯಾದ ಶ್ರೀಹರಿಗೆ ರುದ್ರನು ಹೇಗೆ ಸಮನಾಗುತ್ತಾನೆ? ಪ್ರತಿವಾದಿಗಳು ಹೇಳಲಿ

ಇನ್ನೊಂದು ಪ್ರಸಂಗದಿಂದಲೂ ಶ್ರೀಹರಿಯು ಸರ್ವೋತ್ಕೃಷ್ಟತೆಯನ್ನು ಶ್ರೀಪಾದಂಗಳವರು ಪ್ರತಿಪಾದಿಸುತ್ತಾರೆ.

**ಪುರಾಽಸುರೈಃ ಕೃತೇ ಯಸ್ಯ ಯಜ್ಞೇ ಪಶುಪತಿಃ ಪಶುಃ ।**
**ಇತಿ ಪುಂಸೂಕ್ತ ವಿಪ್ರೋಕ್ತಂ ಸರ್ವೇಷಾಂ ಸಂಮತಂ ಕಿಲ ।।**
**ಏವಂ ಚ ಯದ್ಭಕ್ತಾರೋ ಬ್ರಹ್ಮಾದ್ಯಾ ವಾ ಮಖೇ ಪಶುಃ ।**
**ಶಿವೋಽವಾಪ ಹರೇಃ ಪೂಜ್ಯೋ ವದಂತು ಪ್ರತಿವಾದಿನಃ ।।**

**ಅಭಿಪ್ರಾಯ** :- ಹಿಂದೆ ದೇವತೆಗಳೆಲ್ಲಾ ಒಟ್ಟುಗೂಡಿ ಶ್ರೀಹರಿಯನ್ನು ಉದ್ದೇಶಿಸಿ ಒಂದು ಯಾಗವನ್ನು ಆಚರಿಸಿದರು. ಆ ಯಜ್ಞಕ್ಕೆ ರುದ್ರನನ್ನು ಪಶುವನ್ನಾಗಿ ವಿನಿಯೋಗಿಸಲಾಯಿತು. ಇದು ಪುರುಷಸೂಕ್ತದಲ್ಲೇ ಉಕ್ತವಾಗಿದೆ.

ಇದು ಸರ್ವಸಮ್ಮತವಾದ ಸಂಗತಿಯಾಗಿದೆಯಷ್ಟೆ. ಬ್ರಹ್ಮಾದಿಗಳು ಆಚರಿಸಿದ ಯಜ್ಞದಲ್ಲಿ ಶಿವನೇ ಪಶುವಿನಂತಾಗಿರುವಾಗ ಸರ್ವೋತ್ತಮನಾದ ಪೂಜ್ಯನಾದ ದೇವತೆಯು ಹರನೋ ಅಥವಾ ಹರಿಯೋ ಪ್ರತಿವಾದಿಗಳೇ ಹೇಳಲಿ. ಶ್ರೀಹರಿಯು ಸರ್ವೋತ್ತಮದೇವತೆಯೆಂಬುದಕ್ಕೆ ಮತ್ತೊಂದು ಕಾರಣವೂ ಇರುವುದನ್ನು ಉಲ್ಲೇಖಿಸಿರುತ್ತಾರೆ.

**"ಯಂ ವಿಷ್ಣುಂ ಹವಿಷಾಭ್ಯರ್ಚ್ಯರುದ್ರೋರೌದ್ರಪದಂ ಕಿಲ ।**
**ಲೇಭೇ ಸ ಕಸ್ಮಾಚ್ಛ್ರೇಷ್ಠೋ ನ ವದಂತು ಪ್ರತಿವಾದಿನಃ ॥**

**ಅಭಿಪ್ರಾಯ** :- ಉಗ್ರತಪಾ ಎಂಬ ಹೆಸರಿನ ಮುಂದೆ ರುದ್ರಪದವಿಗೆ ಬರತಕ್ಕ ಯೋಗ್ಯತೆಯನ್ನುಳ್ಳ ದೇವತೆಯು ಭಕ್ತಿಪೂರ್ವಕವಾಗಿ ಹವಿಸ್ಸಿನಿಂದ ಯಾವ ವಿಷ್ಣುವನ್ನು ಆರಾಧಿಸಿ ರುದ್ರಪದವಿಯನ್ನೂ ಪಡೆದಿರುತ್ತಾನೆಯೋ ಅಂತಹ ವಿಷ್ಣುವು ಯಾರಿಗೆ ತಾನೇ ಪೂಜ್ಯನಲ್ಲ ಪ್ರತಿವಾದಿಗಳು ಹೇಳಲಿ.

ಶ್ರೀ ಮಹಾಲಕ್ಷ್ಮೀದೇವತೆಯ ವಾಕ್ಯದಿಂದಲೂ ಶ್ರೀಹರಿಯ ಸರ್ವೋತ್ತಮತ್ವವು ಅತಿದೃಢವಾಗಿ ವೇದವಾಣಿಯಿಂದ ವ್ಯಕ್ತವಾಗುತ್ತದೆ.

**"ಅತನೋಮಿ ಧನುರ್ಹಂತಃ ರುದ್ರಂ ಬ್ರಹ್ಮದ್ವಿಷಂ ಲಯೇ ।**
**ಯಂ ರುದ್ರಂ ಕಾಮಯೇ ಕರ್ತುಂ ತಂ ಕರೋಮಿ ಕ್ಷಣಾತ್ ಹರಂ ॥**
**ಮಮ ಯೋನಿಃ ಸಮುದ್ರೇಽಂತರಿತಿ ಯಸ್ಯ ವಧೂರ್ಜಗೌ ।**
**ಹರೇಸ್ತಸ್ಯ ಸಮಃ ಕಃ ಸ್ಯಾದ್ ವದಂತು ಪ್ರತಿವಾದಿನಃ ॥**

**ಅಭಿಪ್ರಾಯ** :- ಚತುರ್ಮುಖನ ಐದನೆಯ ತಲೆಯನ್ನು ಕತ್ತರಿಸಿದ ರುದ್ರನನ್ನೂ ಮಹಾ ಪ್ರಳಯದಲ್ಲಿ ಕೊಲ್ಲಲು ನಾನು ಧನಸ್ಸನ್ನು ಪ್ರಯೋಗಿಸುತ್ತೇನೆ. ರುದ್ರಪದವಿಗೆ ಬರಲು ಅರ್ಹನಾದ ಯೋಗ್ಯ ಜೀವನನ್ನು ಅತನ ಸಾಧನವು ಪೂರ್ತಿಯಾದ ನಂತರ ಕ್ಷಣಮಾತ್ರದಲ್ಲಿ ನಾನು ರುದ್ರನನ್ನಾಗಿ ಮಾಡುತ್ತೇನೆ. ಅದರಂತೆ ಸಾಧನಸಂಪತ್ತು ಪೂರ್ತಿಯಾದ ನಂತರ ಬ್ರಹ್ಮಪದವಿಗೆ ಬರಲು ಅರ್ಹನಾದ ಋಜುಜೀವನನ್ನು (ಪ್ರಧಾನವಾಯುದೇವನನ್ನು) ಬ್ರಹ್ಮನನ್ನಾಗಿ ಮಾಡುತ್ತೇನೆ. ಋಷಿಪದವಿಗೆ ಅರ್ಹನಾದ ಜೀವನನ್ನು ಋಷಿಯನ್ನಾಗಿಯೂ ಜ್ಞಾನಪದವಿಗೆ ಯೋಗ್ಯನಾದವನನ್ನು ಜ್ಞಾನಿಯನ್ನಾಗಿಯೂ ಮಾಡುತ್ತೇನೆ. ಹೀಗೆ ಬ್ರಹ್ಮಾದಿಗಳ ಪದವಿಗಳನ್ನು ಅನುಗ್ರಹಿಸತಕ್ಕ ಸಾಮರ್ಥ್ಯವನ್ನುಳ್ಳ ನನಗೂ ಸಹ ನಿಯಾಮಕನಾದವನು ಕಾರಣನಾದವನು ಸಮುದ್ರಮಧ್ಯದಲ್ಲಿ ಇದ್ದಾನೆ. ಎಂಬುದಾಗಿ ಶ್ರೀಹರಿಯ ಪತ್ನಿಯಾದ ಜಗನ್ಮಾತೆಯಾದ ಶ್ರೀಮಹಾಲಕ್ಷ್ಮಿಯೂ ಅಂಭೃಣೀಸೂಕ್ತದಲ್ಲಿ ಹೇಳಿರುತ್ತಾಳೆ. ಅಂತಹ ಶ್ರೀಹರಿಗೆ ಸಮರು ಯಾರು ಇರುತ್ತಾರೆ? ಪ್ರತಿವಾದಿಗಳು ಹೇಳಲಿ. ಶ್ರೀವಾದಿರಾಜರು ಯುಕ್ತಿಮಲ್ಲಿಕಾದಲ್ಲಿ ಶ್ರೀಹರಿಯ ಅಸಾಧಾರಣವಾದ ಸಾಮರ್ಥ್ಯವನ್ನು ವರ್ಣಿಸಿ, ಸರ್ವೋತ್ತಮತ್ವವನ್ನು ನಿರ್ಧರಿಸಿರುತ್ತಾರೆ.

**"ಯೋಽಸೌ ಮಂದರಭಾರೇಣ ಭಗ್ನಬಾಹೂರುಕಂಧರಾನ್ ।**
**ಸುರಾನ್ ಸಂಜೀವಯಾಮಾಸ ತತ್ಸಮೋಽಸ್ತು ಕೋ ವದೇತ್ ॥**

**ತಾತ್ಪರ್ಯ** :- ಯಾವ ಸರ್ವೋತ್ತಮನಾದ ಶ್ರೀವಿಷ್ಣುವು ಕ್ಷೀರಸಮುದ್ರವನ್ನು ಕಡೆಯುವ ಸಮಯದಲ್ಲಿ ಮಂದರಪರ್ವತವನ್ನು ಎತ್ತುವಾಗ ಅದರ ಅತಿಯಾದ ಭಾರದಿಂದ ದೇವತೆಗಳು ಮುರಿದುಹೋದ, ತೋಳು, ತೊಡೆ, ಮೊಣಕಾಲು, ಕುತ್ತಿಗೆಗಳನ್ನು ಉಳ್ಳವರಾಗಿ ಬಹಳದುಃಖಿ ತರಾದರು. ಆಗ ಅವರನ್ನೆಲ್ಲಾ ಶ್ರೀಹರಿಯು ಕಷ್ಟಗಳಿಂದ ಕಾಪಾಡಿ ಬದುಕಿಸಿದನು. ಅಂತಹ ಶ್ರೀವಿಷ್ಣುವಿಗೆ ಸಮಾನನಾದವನು ಇದ್ದಾನೆಂದು ಯಾರುತಾನೇ ಹೇಳಿಯಾರು ?

**ಯಶ್ಚವಾಮಕರೇಣೈವ ಲೀಲಯೋದ್ಧೃತ್ಯ ಮಂದರಮ್ ।**
**ಆರೋಪ್ಯ ಗರುಡೇ ಪ್ರಾಗಾತ್ ತತ್ಸಮೋಽಸ್ತೀತಿ ಕೋ ವದೇತ್ ।।**

**ತಾತ್ಪರ್ಯ** :- ಯಾವ ಶ್ರೀಹರಿಯು ಅನಾಯಾಸವಾಗಿ, ಲೀಲೆಯಿಂದಲೇ ತನ್ನ ಎಡದ ಕೈಯಿಂದಲೇ ಅತಿ ಭಾರವಾದ ಮಂದರಪರ್ವತವನ್ನು ಮೇಲಕ್ಕೆ ಎತ್ತಿ ಗರುಡನ ಮೇಲೆ ಕುಳಿತುಕೊಂಡು ಬಂದು ಸಮುದ್ರವನ್ನು ಕಡೆಯಲು ತಂದನೋ ಅಂತಹ ಅಚಿಂತ್ಯಶಕ್ತಿ ಸಂಪನ್ನನಾದ ಶ್ರೀವಿಷ್ಣುವಿಗೆ ಸಮನಾದವನು ಬೇರೊಬ್ಬನು ಇದ್ದಾನೆಂದು ಯಾರು ತಾನೇ ಹೇಳಿಯಾರು ?

**"ಯಶ್ಚ ದೇವಾಸುರಕರರೋತ್ಪತಿತಂ ಮಂದರಾಚಲಮ್ ।**
**ಉದ್ದಧ್ರೇ ಕೂರ್ಮರೂಪೇಣ ತತ್ಸಮೋಽಸ್ತೀತಿ ಕೋ ವದೇತ್ ।।**

**ತಾತ್ಪರ್ಯ** :- ಸಕಲ ದೇವತೆಗಳ ಮತ್ತು ಅಸುರರ ಗುಂಪಿನ ಕೈಗಳಿಂದ ಎತ್ತಲ್ಪಟ್ಟ ಮಂದರಪರ್ವತವನ್ನು ಯಾವ ಶ್ರೀವಿಷ್ಣುವು ಕೂರ್ಮರೂಪದಿಂದ ತನ್ನ ಬೆನ್ನಿನಮೇಲೆ ಧರಿಸಿ ಆ ಪರ್ವತದಿಂದ ಕ್ಷೀರಸಮುದ್ರವನ್ನು ಕಡೆಯಲು ಸೌಕರ್ಯವನ್ನು ಮಾಡಿಕೊಟ್ಟನೋ ಅಂಥಾ ಶ್ರೀಹರಿಗೆ ಸಮಾನನು ಇದ್ದಾನೆಂದು ಯಾರು ತಾನೇ ಹೇಳಿಯಾರು ?

**"ಯಶ್ಚ ನಾರಾಯಣೀ ಭೂತ್ವಾ ವಿಮೋಹ್ಯಾಸುರಮಂಡಲೀಮ್ ।**
**ಸುಧಾಮಪಾಯಯದ್ದೇವಾನ್ ತತ್ಸಮೋಽಸ್ತೀತಿ ಕೋ ವದೇತ್ ।।**

**ತಾತ್ಪರ್ಯ** :- ಯಾರು ಅತ್ಯದ್ಭುತವಾದ ಸ್ತ್ರೀಮಯವಾದ ಸೌಂದರ್ಯದಿಂದ ಕೂಡಿದ ಮೋಹಕವಾದ ಮೋಹಿನಿರೂಪವನ್ನು ಧರಿಸಿದವನಾಗಿ ಅಮೃತವನ್ನು ಪಾನಮಾಡಲು ಅನರ್ಹರಾದ ದೈತ್ಯರಗುಂಪನ್ನು ಮೋಹಗೊಳಿಸಿ, ಅದನ್ನು ಪಾನಮಾಡಲು ಅರ್ಹರಾದ ದೇವತೆಗಳಿಗೆ ಮಾತ್ರ ಅಮೃತವನ್ನು ಕುಡಿಸಿದನೋ ಅಂತಹ ಶ್ರೀಮನ್ನಾರಾಯಣನಿಗೆ ಸಮನಿದ್ದಾನೆಂದು ಯಾವನು ಹೇಳುತ್ತಾನೆ.

**"ಯಶ್ಚಾಶಕ್ತಾನ್ ಸುರವರಾನ್ ಶಕ್ತ್ಯಾವಿಶ್ಯ ಮಹಾಪ್ರಭುಃ ।**
**ಚಕ್ರೇಶಕ್ತಿಯುತಾನ್ ವಿಷ್ಣುಃ ತತ್ಸಮೋಽಸ್ತೀತಿ ಕೋ ವದೇತ್ ।।**

**ತಾತ್ಪರ್ಯ** :- ದೈತ್ಯರನ್ನು ನಾಶಮಾಡುವಿಕೆಯಲ್ಲಿ ಅಶಕ್ತರಾದ ತನ್ನಭಕ್ತರಾದ ದೇವತೆಗಳಲ್ಲಿ ತಾನು ಪ್ರವೇಶಮಾಡಿ ಅವರಿಗೆ ಶಕ್ತಿಯನ್ನು ಕೊಟ್ಟು ಯಾರು ಕಾಪಾಡುವನೋ ಅಂತಹ ಶ್ರೀವಿಷ್ಣುವಿಗೆ ಸಮಾನನಾದವನು ಇರುತ್ತಾನೆಂದು ಯಾರು ಹೇಳುವರು ?

**"ಯಂ ಶ್ರೀಃ ಸ್ವಯಂವರೇ ದೇವಾನ್ ಧಿಕ್ಕೃತ್ಯ ಭವಪೂರ್ವಕಾನ್ ।**
**ವವ್ರೇ ಗುಣಾಧಿಕಂ ಮತ್ವಾ ತತ್ಸಮೋಽಸ್ತೀತಿ ಕೋ ವದೇತ್ ।।**

**ತಾತ್ಪರ್ಯ** :- ಕ್ಷೀರಸಮುದ್ರದ ಮಥನಕಾಲದಲ್ಲಿ ಹುಟ್ಟಿದವಳಾದ ಯಾವ ಶ್ರೀಮಹಾಲಕ್ಷ್ಮಿಯು ಸ್ವಯಂವರ ಸಮಯದಲ್ಲಿ ರುದ್ರಮೊದಲಾದದೇವತೆಗಳಲ್ಲಿ ಒಬ್ಬೊಬ್ಬರಲ್ಲೂ ಒಂದೊಂದು ಬಗೆಯಾದ ದೋಷವಿರುವುದನ್ನು ಬಿಡಿಬಿಡಿಯಾಗಿ ಬಿಡಿಸಿ ಹೇಳಿ, ಸಕಲದೋಷರಹಿತನಾದ ಅನಂತಕಲ್ಯಾಣಗುಣಪರಿಪೂರ್ಣನಾದ ಶ್ರೀಮನ್ನಾರಾಯಣನನ್ನೇ ತನ್ನ ಪತಿಯನ್ನಾಗಿ ವರಿಸಿದಳು. ಅಂತಹ ಸರ್ವೋತ್ತಮನಾದ ಸಕಲದೋಷರಹಿತನಾದ ಶ್ರೀಮನ್ನಾರಾಯಣನಿಗೆ ಸಮನಿದ್ದಾರೆಂದು ಯಾರುಹೇಳುವರು ?

"ಇತ್ಥಂ ಭಾಗವತೇ ಗ್ರಂಥೇ ಬಹುಧಾ ಬಾದರಾಯಣಃ।
ಉತ್ತಮತ್ವೇನ ಯಂ ಸ್ತೌತಿ ತತ್ಸಮೋಽಸ್ತೀತಿ ಕೋ ವದೇತ್॥

**ತಾತ್ಪರ್ಯ** :- ಈ ರೀತಿ ಶ್ರೀಮದ್ಭಾಗವತಗ್ರಂಥದಲ್ಲಿ ಅನೇಕಬಗೆಯಾದ (ಬಹಳ ವಿಧವಾಗಿ) ಶ್ರೀಬಾದರಾಯಣರು (ಶ್ರೀವೇದವ್ಯಾಸರು) ಯಾವ ಶ್ರೀಮನ್ನಾರಾಯಣನನ್ನು ಸರ್ವೋತ್ತಮನೆಂದು ಸ್ತೋತ್ರಮಾಡಿರುತ್ತಾರೋ ಅಂತಹ ಶ್ರೀವಿಷ್ಣುವಿಗೆ ಸಮರು ಇರುತ್ತಾರೆಂದು ಯಾವನು ಹೇಳುತ್ತಾನೆ. ಯಾರೂ ಸಹ ಹೇಳುವಂತೆಯೇ ಇಲ್ಲ.

"ಯಂ ಚ ಸರ್ವೇಶ್ವರತ್ವೇನ ಸರ್ವಜ್ಞತ್ವಾದಿನಾ ಜಗೌ।
ಮಾಂಡೂಕೋಪನಿಷದ್ವಿಷ್ಣುಂ ತತ್ಸಮೋಽಸ್ತೀತಿ ಕೋ ವದೇತ್॥

**ತಾತ್ಪರ್ಯ** :- ಮಾಂಡೂಕೋಪನಿಷತ್ತಿನಲ್ಲಿ ಯಾರು ಸರ್ವೇಶ್ವರನೆಂಬುದಾಗಿಯೂ, ಸರ್ವಜ್ಞನೆಂಬುದಾಗಿಯೂ ಪ್ರತಿಪಾದಿಸಲ್ಪಟ್ಟಿರುವನೋ, ಅಂತಹ ಶ್ರೀಹರಿಗೆ ಸಮರಾರೂ ಇರುವುದಿಲ್ಲ.

"ಬಿಭರ್ತಿ ಮಸ್ತಕೇ ಯಸ್ಯ ಪಾದತೀರ್ಥಮಹರ್ನಿಶಮ್।
ಸ ಶಂಭುಸ್ತಸ್ಯ ಕೃಷ್ಣಸ್ಯ ಪೂಜಕೋ ನೇತಿ ಕೋ ವದೇತ್"॥

**ತಾತ್ಪರ್ಯ** :- ಯಾವ ರುದ್ರನು (ಶಂಭುವು) ಹಗಲೂ, ರಾತ್ರಿಯೂ ಯಾವಾಗಲೂ ಯಾವ ಶ್ರೀವಿಷ್ಣುವಿನ ಪಾದದಉದಕವನ್ನು ಸುಪ್ರಸಿದ್ಧವಾದ ಗಂಗೆಯನ್ನು ತನ್ನ ತಲೆಯ ಮೇಲೆ ಧರಿಸಿರುತ್ತಾನೆಯೋ ಅಂತಹ ಶಂಭುವು ಶ್ರೀಹರಿಯ ಪೂಜಕನೆಂದು ಯಾರು ಹೇಳುವುದಿಲ್ಲ ಯಾರು ಹೇಳುವುದಿಲ್ಲ ?

"ವಾರಾಣಸ್ಯಾಂ ಯಸ್ಯ ನಾಮ ಜಪನ್ ಆಟತಿ ಸಂತತಮ್।
ಸ ಶಂಕರೋ ರಾಮಪಾದಕಿಂಕರೋ ನೇತಿ ಕೋ ವದೇತ್॥

**ತಾತ್ಪರ್ಯ** :- ಕಾಶೀಕ್ಷೇತ್ರದಲ್ಲಿ ನಿರಂತರದಲ್ಲೂ "ರಾಮ ರಾಮ ರಾಮ" ಎಂಬುದಾಗಿ ರಾಮತಾರಕಮಂತ್ರವನ್ನು ಜಪಿಸುತ್ತಾ ತಿರುಗಾಡುತ್ತಿರುವ ಆ ಶಂಕರನನ್ನು (ರುದ್ರದೇವನನ್ನು) ರಾಮಪಾದಸೇವಕನಲ್ಲವೆಂದು ಯಾರು ಹೇಳುತ್ತಾರೆ ? ಶ್ರೀಮದ್ಭಾಗವತದಲ್ಲಿ ಹೇಳಿರುವ ಮತ್ತೊಂದು ವಿಚಾರದಿಂದಲೂ ಶ್ರೀಹರಿಯ ಹಿರಿಮೆಯನ್ನು ತೋರಿಸುತ್ತಾರೆ.

"ಯದ್ಯಜ್ಞವಾಸ್ತುಗತಂ ಸರ್ವಂ ಉಚ್ಛಿಷ್ಟಂ ಋಷಯಃ ಕ್ವಚಿತ್।
ಚಕ್ರುರ್ಹಿಭಾಗಂ ರುದ್ರಾಯ ಸ ದೇವಃ ಸರ್ವಮರ್ಹತಿ॥
ಇತಿ ಭಾಗವತೇ ಯಸ್ಮಾದ್ ಮನುರಾಹ ಸುತಂ ಪ್ರತಿ।
ತಸ್ಮಾದ್ಯಜ್ಞಭುಜೋ ವಿಷ್ಣೋಃ ಅತ್ಯುಚ್ಛಿಷ್ಟಂ ಹರಃಕಿಲ॥
ಈದೃಶಃ ಶಂಕರೋ ವಿಷ್ಣುಕಿಂಕರೋ ನೇತಿ ಕೋ ವದೇತ್॥

**ತಾತ್ಪರ್ಯ** :- ಋಷಿಗಳೆಲ್ಲರೂ ಕಲೆತು ಒಂದುಕಡೆ ಯಜ್ಞವನ್ನು ಆಚರಿಸಿದರು. ಆ ಸಮಯದಲ್ಲಿ ಯಜ್ಞದ ಎಲ್ಲಾ ಉಚ್ಛಿಷ್ಟಭಾಗವನ್ನೂ ರುದ್ರದೇವನಿಗೆ ಆಹುತಿಯಾಗಿ ಕೊಟ್ಟರು. ಅದಕ್ಕೆ ರುದ್ರನೇ ಅರ್ಹನೆಂದು ಆ ಉಚ್ಛಿಷ್ಟದ ಆಹುತಿವಿಚಾರವು ಶ್ರೀಮದ್ಭಾಗವತದಲ್ಲಿ ಸ್ವಾಯಂಭುವಮನುವು ತನ್ನ ಮಗಳಮಗನಾದ ಯಜ್ಞನಾಮಕನಾದ

ಪರಮಾತ್ಮನನ್ನು ಕುರಿತು ಹೇಳಿದ್ದಾನೆ. ಮತ್ತು ಯಜ್ಞದ ಮುಖ್ಯವಾದ ಭಾಗವು ಸರ್ವಯಜ್ಞಫಲಭೋಕ್ತನಾದ ವಿಷ್ಣುವಿಗೆ ಸೇರಿದೆಯೆಂಬ ವಿಚಾರವೂ ಉಕ್ತವಾಗಿದೆ. ಈ ರೀತಿಯಜ್ಞದ ಉಚ್ಛಿಷ್ಟಭಾಗಕ್ಕೆ ಭಾಗಿಯಾದ ಶಿವನು, ಸರ್ವೋತ್ಕೃಷ್ಟಭಾಗಕ್ಕೆ ಅರ್ಹನಾದ ಸರ್ವೋತ್ತಮನಾದ ಶ್ರೀಹರಿಗೆ ಕಿಂಕರನಲ್ಲವೆಂದು ಯಾರು ಹೇಳುವರು.

**ಅದ್ಯಾಪಿ ರುದ್ರಾಯೋಚ್ಛಿಷ್ಟಾಹುತಿದಾಃ ಶ್ರುತಿಕೋವಿದಾಃ ।**
**ಹಸ್ತಂ ಪ್ರಕ್ಷಾಲಯಂತ್ಯೇತದುಚ್ಛಿಷ್ಟಂ ನೇತಿ ಕೋ ವದೇತ್ ॥**

**ತಾತ್ಪರ್ಯ** :- ವೇದಪಂಡಿತರು ತಾವು ಆಚರಿಸುತ್ತಿರುವ ಯಜ್ಞಗಳಲ್ಲಿ ಉಚ್ಛಿಷ್ಟಾಹುತಿಯನ್ನು ರುದ್ರನಿಗೆ ಕೊಟ್ಟ ಮೇಲೆ ಈಗಲೂ ಸಹ ಕೈಯನ್ನುಶುದ್ಧಿಗಾಗಿ ತೊಳೆದುಕೊಳ್ಳುತ್ತಾರೆ. ಉಚ್ಛಿಷ್ಟಾಹುತಿಯನ್ನು ಕೊಟ್ಟ ನಂತರ ಕೈಯನ್ನುತೊಳೆದುಕೊಳ್ಳುವ ಆಚಾರವಿರುವುದರಿಂದ ಅವರು ರುದ್ರದೇವನಿಗೆ ಕೊಟ್ಟ ಆಹುತಿಯು ಉಚ್ಛಿಷ್ಟವಲ್ಲವೆಂದು ಯಾರು ಹೇಳುತ್ತಾರೆ.

**"ದಿಗಂಬರಶ್ಚ ಜಟಿಲಃ ತೀರ್ಥಸೇವೀ ನಿರಂತರಮ್ ।**
**ಭಿಕ್ಷಾನ್ನಭುಕ್ ಚಾಕ್ಷಮಾಲಾಂ ಬಿಭ್ರಾಣೋ ವ್ಯಾಘ್ರಚರ್ಮಗಃ ॥**
**ಉಪವಿಶ್ಯ ಜಪನ್ ಮಂತ್ರಂ ಶಿಷ್ಯಾಯೋಪದಿಶನ್ಮನುಮ್ ।**
**ತನ್ಮಂತ್ರದೇವತಾಂ ಧ್ಯಾಯನ್ ವ್ಯಾಖ್ಯಾಕಾಲೇ ಚ ಮಾಲಿಕಾಮ್ ॥**
**ದ್ವಿಗುಣೀಕೃತ್ಯ ಕರ್ಣೇ ವಾ ಕಂಠೇ ವಾ ಧಾರಯನ್ ಸದಾ ।**
**ಚರನ್ ಪರಮಹಂಸೋ ಯಃ ಸ ಗುರುರ್ನೇತಿ ಕೋ ವದೇತ್ ॥**
**ತನ್ಮಂತ್ರದೇವತಾಂ ತಾಂ ತು ದೇವೋ ನೇತಿಚ ಕೋ ವದೇತ್ ॥**

**ತಾತ್ಪರ್ಯ** :- ಪಾರ್ವತೀಪತಿಯಾದರುದ್ರದೇವನು ದಿಗಂಬರನು. ಜಟಾಧಾರಿಯು ಯಾವಾಗಲೂ ತೀರ್ಥ ಕ್ಷೇತ್ರನಿವಾಸಿಯು. ಭಿಕ್ಷೆಬೇಡಿತಿನ್ನತಕ್ಕವನು. ರುದ್ರಾಕ್ಷಮಾಲೆಯನ್ನು ಧರಿಸಿಕೊಂಡು ಹುಲಿಚರ್ಮದಮೇಲೆ ಕುಳಿತು, ತಾನೂ ಶ್ರೀ ರಾಮಮಂತ್ರವನ್ನು ಜಪಿಸುತ್ತಿರುವುದಲ್ಲದೆ ಶಿಷ್ಯರಿಗೂ ಉಪದೇಶಮಾಡುತ್ತಲಿರುತ್ತಾನೆ. ಆ ಮಂತ್ರ ಪ್ರತಿಪಾದ್ಯವಾದ ದೇವತೆಯಾದ ಶ್ರೀಹರಿಯನ್ನು ಧ್ಯಾನಮಾಡುತ್ತಾ, ಅದರ ಅರ್ಥವನ್ನು ವ್ಯಾಖ್ಯಾನಿಸುವಾಗ ರುದ್ರಾಕ್ಷದಮಾಲೆಯನ್ನು ಎರಡೆರಡುಸೇರಿಸಿ ಕಿವಿಯಲ್ಲೋ ಕುತ್ತಿಗೆಯಲ್ಲೋ ಯಾವಾಗಲೂ ಧರಿಸಿದವನಾಗಿ ಸಂಚರಿಸುತ್ತಾ ಪರಮಹಂಸವೇಷಧಾರಿಯಾದ ರುದ್ರನನ್ನುಗುರುವೆಂದು ಯಾರು ಹೇಳುವುದಿಲ್ಲ. ಅಂತಹ ರುದ್ರನಿಂದ ಜಪಿಸಲ್ಪಡುತ್ತಲಿರುವ ಮಂತ್ರಪ್ರತಿಪಾದ್ಯವಾದ ದೇವತೆಯನ್ನು ಶ್ರೀವಿಷ್ಣುವನ್ನು ಪರದೇವವೆಂದು ಯಾರು ಹೇಳುವುದಿಲ್ಲ.

**"ಏವಂ ಚ ಕಾಶ್ಯಾಂ ಸತತಂ ಜಪನ್ ರಾಮಷಡಕ್ಷರಮ್ ।**
**ಧ್ಯಾಯಂಶ್ಚ ತಂ ಹೃದಿ ಸದಾ ತಾರಕಬ್ರಹ್ಮಸಂಜ್ಞಿತಮ್ ॥**
**ಜಪಕಾಲೇ ತೂಪವಿಷ್ಟೋ ಭೂಮೌ ಶಾರ್ದೂಲಚರ್ಮಣಿ ।**
**ಆವರ್ತಯನ್ ಸ್ಫಾಟಿಕಾಕ್ಷಮಾಲಾಂ ದಕ್ಷಕರಾಂಗುಲೌ ॥**
**ವ್ಯಾಖ್ಯಾಕಾಲೇ ಚ ತಾಂ ಕರ್ಣೇ ದ್ವಿಗುಣೀಕೃತ್ಯ ಧಾರಯನ್ ।**
**ದಿಗಂಬರಶ್ಚ ಜಟಿಲಃ ತೀರ್ಥಕೋಭಿತಮಸ್ತಕಃ ॥**
**ವೀಥ್ಯಾಂ ವೀಥ್ಯಾಂ ಅಟನ್ ಚಾಪಿ ಸತಾಂ ಮುಕ್ತ್ಯೋಪದಿಶ್ಯಯಾ ।**
**ಮೃತಿಕಾಲೇ ವಿಮುಕ್ತ್ಯರ್ಥಂ ಕರ್ಣೇ ಕರ್ಣೇ ಜಪನ್ ಮನುಮ್ ॥**
**ಆದ್ವಿಜೇಭ್ಯಃ ಸ್ವಕ್ಷೇತ್ರವಾಸ್ಯಚಂಡಾಲಗರ್ದಭಮ್ ।**

ಸರ್ವಪ್ರಾಣಿಷು ಚೇತ್ಥಂ ಯೋ ಗುರುರೂಪಧರೋ ಹರಃ ।।
ಪಾಯಂ ಪಾಯಂ ಶ್ರುತಿಪುಟೇ ರಾಮನಾಮಾಮೃತಂ ತು ಯತ್ ।
ಧ್ಯಾಯಂ ಧ್ಯಾಯಂ ಮನಸಿ ತಂ ತಾರಕಬ್ರಹ್ಮಸಂಜ್ಞಿತಮ್ ।।
ಜಾಪಂ ಜಾಪಂ ಕರ್ಣಮೂಲೇ ಪ್ರಕೃತೇರ್ವಿಕೃತೌ ನೃಣಾಮ್ ।
ಜಟಿಲಸ್ಸನ್ನಟತಿ ಕೋಽಪೀತ್ಯರ್ಥಶ್ರುತಿಪಾದಕೇ ।।
ಕಾಶೀಖಂಡಸ್ಥವಚನೇ ಶ್ರೂಯತೇಽದ್ಯಾಪಿ ಯೋ ಹರಃ ।
ಸ್ಪಷ್ಟಂ ಗುರೋರಾಕೃತಿಮಾನ್ ಸ ಗುರುರ್ನೇತಿ ಕೋ ವದೇತ್ ।।

**ಅಭಿಪ್ರಾಯ** :- ಕಾಶೀಪಟ್ಟಣದಲ್ಲಿ "ಯಾವಾಗಲೂ ಓಂರಾಮಾಯನಮಃ" ಎಂಬುದಾಗಿ ಶ್ರೀರಾಮಚಂದ್ರ ದೇವರ ಆರು ಅಕ್ಷರಗಳನ್ನುಳ್ಳ ರಾಮಷಡಕ್ಷರಮಂತ್ರವನ್ನು ಜಪಿಸುತ್ತಾ ಶ್ರೀರಾಮಚಂದ್ರದೇವರನ್ನೇ ಧ್ಯಾನಿಸುತ್ತಾ ರುದ್ರದೇವರು ಇರುತ್ತಾರೆ. ಅಷ್ಟುಮಾತ್ರವಲ್ಲದೆ ಶ್ರೀರಾಮಷಡಕ್ಷರಮಂತ್ರವನ್ನು ಜಪಿಸುವಾಗ, ಹುಲಿಯ ಚರ್ಮದ ಮೇಲೆ ಕುಳಿತುಕೊಂಡು ಬಲದಕೈಯಲ್ಲಿ ಸ್ಫಟಿಕಾಕ್ಷಮಾಲೆಯ ಮಣಿಗಳನ್ನು ಎಣಿಸುತ್ತಾ ಇರುವರು. ಶಿಷ್ಯರಿಗೆ ಉಪದೇಶಮಾಡುತ್ತಿರುವಾಗ, ವ್ಯಾಖ್ಯಾನಮಾಡುತ್ತಿರುವಾಗ ಕಿವಿಯಲ್ಲಿ ಸ್ಫಟಿಕಾಕ್ಷಮಾಲೆಯನ್ನು ಎರಡೆರಡುಸುರುಳಿ ಧರಿಸಿರುವರು. ದಿಗಂಬರರಾಗಿ ಜಟಾಧಾರಿಗಳಾಗಿ ತಲೆಯ ಮೇಲೆ ವಿಷ್ಣು ಪಾದೋದಕವಾದ ಗಂಗೆಯನ್ನು ಧರಿಸಿರುತ್ತಾರೆ.

ತನ್ನ ಭಕ್ತರಿಗೆ ಮಂತ್ರೋಪದೇಶವನ್ನು ಮಾಡಲು ಕಾಶೀಪಟ್ಟಣದ ಬೀದಿ ಬೀದಿಯಲ್ಲೂ ಅಲೆದಾಡುತ್ತಿರುವರು. ಕಾಶೀಪಟ್ಟಣದಲ್ಲಿ ಮರಣವನ್ನು ಹೊಂದುವ ನಾಯಿ, ಚಂಡಾಲ, ಕತ್ತೆ, ಮೊದಲಾದ ಸಕಲಪ್ರಾಣಿಗಳ ಬಲದ ಕಿವಿಯಲ್ಲಿ ಅವರವರ ಘೋರವಾದ ಪಾಪದ ಮುಕ್ತಿಗಾಗಿ ಮತ್ತು ಇತರ ಸಕಲ ಸಾಧನಗಳನ್ನೆಲ್ಲಾ ಮಾಡಿಕೊಂಡು ಮೋಕ್ಷಕ್ಕೆ ಪ್ರತಿಬಂಧಕವಾದ ಕೆಲವು ಪಾಪಗಳ ಬಿಡುಗಡೆಗಾಗಿ ಕಾದಿರುವ ಚೇತನರಪಾಪಗಳ ಮೋಕ್ಷಕ್ಕಾಗಿ ಅವರವರ ಮೇಲಕ್ಕೆ ಎತ್ತಲ್ಪಟ್ಟ ಬಲದಕಿವಿಗಳಲ್ಲಿ ರಾಮತಾರಕಮಂತ್ರವನ್ನು ಜಪಿಸುತ್ತಾ ಇರುವವರಾಗಿ, ಸಕಲಪ್ರಾಣಿಗಳಿಗೂ ಗುರುಗಳೆನಿಸಿರುತ್ತಾರೆ. ರಾಮನಾಮಾಮೃತವನ್ನು ನಿರಂತರವಾಗಿ ಶ್ರುತಿಪುಟದಿಂದ ಪಾನಮಾಡುವವರಾಗಿಯೂ, ಅಂದರೆ ಯಾವಾಗಲೂ ಶ್ರೀ ರಾಮಷಡಕ್ಷರ ಮಂತ್ರವನ್ನು ಕಿವಿಯಿಂದ ಕೇಳುತ್ತಿರುವವರಾಗಿಯೂ, ತಾರಕಬ್ರಹ್ಮನೆಂದು ಕರೆಯಲ್ಪಡತಕ್ಕ ಶ್ರೀರಾಮನನ್ನೇ ಧ್ಯಾನಮಾಡುತ್ತಿರುವವರಾಗಿಯೂ, ಮಾನವರ ಬಲಕಿವಿಯಲ್ಲಿ ರಾಮನಾಮವನ್ನೂ ಜಪಿಸುತ್ತಿರುವವರಾಗಿಯೂ ಜಟಾಧಾರಿಗಳಾಗಿಯೂ, ಕಾಶೀಪಟ್ಟಣದಲ್ಲಿ ಇಂದಿಗೂ ಈ ಕ್ಷಣದಲ್ಲೂ ಸಂಚರಿಸುತ್ತಿರುವರೆಂಬುದಾಗಿ ಸ್ಕಾಂದಪುರಾಣದಲ್ಲಿನ ಕಾಶೀಖಂಡ ಎಂಬ ಗ್ರಂಥ ಭಾಗದಲ್ಲಿ ರುದ್ರದೇವರ ಚರ್ಯೆಯು ಉಕ್ತವಾಗಿದೆ. ಇಂತಹ ಸ್ಪಷ್ಟವಾದ ಗುರುಗಳ ಆಕಾರದಿಂದ ವಿಜೃಂಭಿತರಾಗಿರುವ ರುದ್ರದೇವರನ್ನು ಎಲ್ಲರಿಗೂ ಗುರುಗಳಲ್ಲ, ಅಂದರೆ, ಅವರಿಗಿಂತಲೂ ತಾರತಮ್ಯದಲ್ಲಿ ಕಮ್ಮಿಯಾಗಿರುವವರಿಗೆಲ್ಲಾ ಗುರುಗಳಲ್ಲವೆಂದು ಯಾರು ತಾನೇ ಹೇಳಿಯಾರು ?

"ತದ್ರಹಸ್ಯಮನೋರರ್ಥಭೂತೋ ನೀಲೋತ್ಪಲಪ್ರಭಃ ।
ರಾಮೋ ರಾಜೀವನೇತ್ರೋ ಯಃ ಸದೇವೋನೇತಿ ಕೋ ವದೇತ್ ।।

**ತಾತ್ಪರ್ಯ** :- ಹಿಂದೆ ಹೇಳಿದ ರೀತಿಯಲ್ಲಿ ಗುರುವೇಷಧಾರಿಗಳಾಗಿ ನಿರಂತರದಲ್ಲೂ ರಾಮಷಡಕ್ಷರಮಂತ್ರವನ್ನು ಜಪಿಸುತ್ತಿರುವವರಾಗಿರುವ ರುದ್ರ ದೇವರಿಂದ ಜಪ್ಯವಾದ ಆ ಮಂತ್ರದ ರಹಸ್ಯಾರ್ಥಭೂತನಾದ ಕನ್ನೈದಿಲೆಯಂತೆ ಮನೋಹರವಾದ ಕಾಂತಿಯುಕ್ತನಾದ, ಕಮಲದಂತೆ ಕಣ್ಣುಳ್ಳ, ಈ ಸರ್ವೋತ್ತಮನಾದ ಶ್ರೀರಾಮಚಂದ್ರ ಮೂರ್ತಿಯನ್ನು ಸರ್ವೋತ್ತಮ ದೇವತೆಯೆಂದು ಯಾರು ಹೇಳುವುದಿಲ್ಲ. ತಾರಕವಾದರಾಮಷಡಕ್ಷರಮಂತ್ರವನ್ನು ಎಲ್ಲರಿಗೂ ಉಪದೇಶಮಾಡುತ್ತಿರುವ ಗುರುವೇಷಧಾರಿಗಳಾದ ರುದ್ರದೇವನನ್ನು ಗುರುವೆಂದು ಕರೆಯುವಂತೆ ಆ ರುದ್ರನಿಂದ ನಿರಂತರದಲ್ಲೂ ಜಪಿಸಲ್ಪಡುತ್ತಿರುವ ಮಂತ್ರದಿಂದ ಪ್ರತಿಪಾದ್ಯನಾದ ಶ್ರೀರಾಮನನ್ನು ಸರ್ವೋತ್ತಮ ದೇವತೆಯೆಂದು ಎಲ್ಲರೂ ಒಪ್ಪಲೇ ಬೇಕೆಂದು ಪರಮಾಭಿಪ್ರಾಯವಾಗಿದೆ. ಸರ್ವಜನರಿಗೂ ಸಮ್ಮತವಾದ ವಿಶೇಷವಾಗಿ ಶೈವರಿಗೂ ಪರಮಸಮ್ಮತವಾದ ಕಾಶೀ ಖಂಡದಲ್ಲಿನ ಸುಪ್ರಸಿದ್ಧವಾದ ರುದ್ರದೇವರ ಚರ್ಯೆಯನ್ನು ವಿವರಿಸುವ ಶ್ಲೋಕವು ಈ ಕೆಳಗೆ ಕಂಡಂತಿದೆ. ಇದನ್ನು ಯಾರೂ ಅಪಲಾಪಮಾಡುವಂತಿಲ್ಲ, ಅದರ ಅರ್ಥವನ್ನು ಹಿಂದೆಯೇ ವಿವರಿಸಲಾಗಿದೆ.

**ಪಾಯಂ ಪಾಯಂ ಶ್ರುತಿಪುಟಲಿತಂ ರಾಮನಾಮಾಮೃತಂ ಯತ್ ।।**
**ಧ್ಯಾಯಂ ಧ್ಯಾಯಂ ಮನಸಿ ಸತತಂ ಬ್ರಹ್ಮತತ್ತಾರಕಾಖ್ಯಮ್ ।**
**ಜಾಪಂ ಜಾಪಂ ಪ್ರಕೃತಿವಿಕೃತೌ ಪ್ರಾಣಿನಾಂ ಕರ್ಣಮೂಲೇ ।**
**ವೀಥ್ಯಾಂ ವೀಥ್ಯಾಂ ಅಟತಿ ಜಟಿಲಃ ಕೋಽಪಿ**
**ಕಾಶೀನಿವಾಸೀ ।।**

ಶ್ರೀವಾದಿರಾಜರು ಹರಿಭಕ್ತಿಲತಾಗ್ರಂಥದಲ್ಲಿ ಶ್ರೀಹರಿಯ ಸರ್ವೋತ್ತಮತ್ವಕ್ಕೆ ಸಾಧಕಗಳಾದ ಅನೇಕ ವೇದವಾಕ್ಯಗಳನ್ನು ಸ್ಮೃತಿವಚನಗಳನ್ನು ಜ್ಞಾನಿಗಳ ಪ್ರತ್ಯಕ್ಷಗಳನ್ನು ಪೌರಾಣಿಕ ಆಖ್ಯಾನಗಳನ್ನು ಶ್ರೀಮನ್ಮಹಾಭಾರತದ ಮತ್ತು ಶ್ರೀಮದ್ಭಾಗವತದ ಮಹಾಪುರಾಣದ ಕಥಾ ಭಾಗಗಳನ್ನು ಉದಾಹರಿಸಿ ಶ್ರೀವಿಷ್ಣುವಿನ ಸರ್ವೋತ್ತಮತ್ವವನ್ನು ಅತ್ಯಂತರಂಜಕವಾಗಿ ಸಾತ್ವಿಕಮುಕ್ತಿಯೋಗ್ಯಚೇತನರ ದೃಢವಾದ ನಿಶ್ಚಯಕ್ಕಾಗಿ ಪ್ರತಿಪಾದಿಸಿರುತ್ತಾರೆ. ಅವುಗಳಲ್ಲಿ ಇರುವರೆವಿಗೆ ಕೆಲವನ್ನು ಮಾತ್ರ ಉದಾಹರಿಸಿರುತ್ತೇವೆ. ರಾಮಾವತಾರಕಾಲದಲ್ಲಿ ನಡೆದಿರುವ ಒಂದು ಘಟನೆಯೂ ಸಹ ಮೋಕ್ಷವನ್ನು ಕರುಣಿಸಿರುವ ಶ್ರೀವಾಸುದೇವನೇ ಶ್ರೀರಾಮನೆಂದೂ ಅವನು ಸರ್ವೋತ್ತಮನೆಂದೂ ಸಿದ್ಧಪಡುತ್ತಿದೆ.

**"ಅವತಾರೇಽಪಿ ರಾಮೋ ಯಃ ತಾರಕಬ್ರಹ್ಮಸಂಜ್ಞಿತಃ ।।**
**ಬ್ರಹ್ಮಲೋಕಾತ್ತೃಣಾಂತಾದ್ಯಶೇಷಪ್ರಾಣಿಸಾರ್ಥಗಃ ।।**
**ಸ್ವರ್ಗೇಽಸಗರದರ್ಭಾಹ್ವಾದಿಃ ಸರ್ವಾಭೀಷ್ಟಮಹಾಫಲಮ್ ।**
**ಪರಂ ಧಾಮ ನಯನ್ನಿತ್ಯಂ ದೈವಂ ವೇತ್ತಿ ನ ಕೋ ವದೇತ್ ।।**

**ತಾತ್ಪರ್ಯ** :- ತ್ರೇತಾಯುಗದಲ್ಲಿ ರಾಮಾವತಾರಕಾಲದಲ್ಲಿ, ಸಕಲ ಪ್ರಾಣಿವರ್ಗವನ್ನೂ ನೆಮ್ಮದಿಯಿಂದ ರಕ್ಷಿಸಿರುವವನಾದ, ತಾರಕಬ್ರಹ್ಮನೆಂದು ಹೆಸರುಳ್ಳ ಶ್ರೀರಾಮಚಂದ್ರದೇವನು "ಸಮಾಯಾತ, ಸಮಾಯಾತ, ಯೇ ಯೇ ಮೋಕ್ಷಫಲೇಚ್ಛವಃ" ಎಂದು ಡಂಗೂರ ಹೊಡಿಸಿ, ಸಾಧನಾಸಂಪತ್ತುಪೂರ್ತಿಯಾಗಿ ಮೋಕ್ಷಫಲಕ್ಕೆ ಅರ್ಹರಾದ ಕತ್ತೆ ಕುದುರೆ ಮೊದಲಾದ ಎಲ್ಲಾ ಪ್ರಾಣಿವರ್ಗಕ್ಕೂ ಮಹಾಫಲವೆನಿಸಿದ ಪರಂಧಾಮವೆಂದು ಕರೆಯಲ್ಪಟ್ಟ ಮೋಕ್ಷಫಲವನ್ನು ಕರುಣಿಸಿದ್ದಾನೆ. ಅಂತಹ ಶ್ರೀರಾಮನನ್ನು ಇಷ್ಟದೈವವೆಂದು ಎಲ್ಲರೂ ಕರೆಯಲೇಬೇಕು. ಇದನ್ನು ಅಪಲಾಪ ಮಾಡುವಂತೆಯೇ ಇಲ್ಲ.

**ಇಲಾವೃತೇ ಕಿಲ ಶಿವೋ ವಿಷ್ಣುಂ ಸಂಕರ್ಷಣಾಭಿಧಮ್ ।**
**ಅದ್ಯಾಪ್ಯರ್ಚಯತೀದೃಕ್ ಸ ತಸ್ಯ ದಾಸೋ ನ ಕಿಂ ವದ ।।**

**ತಾತ್ಪರ್ಯ** :- ಇಲಾವೃತಖಂಡದಲ್ಲಿ ರುದ್ರದೇವನು ಸಂಕರ್ಷಣರೂಪಿಯಾದ ಶ್ರೀವಿಷ್ಣುವನ್ನು ಈಗಲೂ ಪೂಜಿಸುತ್ತಾ ಇರುತ್ತಾನೆ. ಇಂತಹ ಶಿವನು ವಿಷ್ಣುವಿನದಾಸನೇ ಆಗಿರುತ್ತಾನೆ.

ಶ್ರೀಹರಿಯ ಸರ್ವೋತ್ತಮತ್ವವನ್ನು ನಿರ್ಧರಿಸುತ್ತಿರುವ ಪರಮಾತ್ಮನ ಮತ್ತೊಂದು ವಾಕ್ಯವೂ ಸಹ ಶ್ರೀಮದ್ಭಾಗವತದಲ್ಲಿ ಉದಾಹೃತವಾಗಿದೆ.

**"ಮಾಂವಿಧತ್ತೇಽಭಿಧತ್ತೇ ಮಾಂ ವಿಕಲ್ಪ್ಯಾಪೋಹ್ಯ ಇತ್ಯಹಮ್ ।**
**ಇತ್ಯಸ್ಯಾಹೃದಯಂ ಸಾಕ್ಷಾನ್ನಾನ್ಯೋಮದ್ವೇದಕಶ್ಚನ ।।**
**ಇತಿಸ್ಮೃತೇಃ ಶ್ರೌತಸರ್ವನಾಮಾನಿ ಜಗುರಚ್ಯುತಮ್ ।**
**ತನ್ನಾಮಧಾರಕಾಃ ಸರ್ವೇ ಬ್ರಹ್ಮರುದ್ರಾದಯಃ ಸುರಾಃ ।**
**ದಾಸಾ ಏವಾಭವಂಸ್ತಸ್ಯ ತಸ್ಯ ಕಃ ಸದೃಶೋ ವದ ।।**

**ತಾತ್ಪರ್ಯ** :- ಮಾಂವಿಧತ್ತೆ ಇತ್ಯಾದಿವಾಕ್ಯವು ಶ್ರೀಮದ್ಭಾಗವತ ಮಹಾಪುರಾಣದ ಹನ್ನೊಂದನೇ ಸ್ಕಂಧದಲ್ಲಿ ಉದ್ಧವನನ್ನು ಕುರಿತು ಶ್ರೀಕೃಷ್ಣಪರಮಾತ್ಮನಿಂದ ಹೇಳಲ್ಪಟ್ಟಿದೆ.

"ವಸಂತೇ ವಸಂತೇ ಜ್ಯೋತಿಷಾ ಯಜೇತ" ಇತ್ಯಾದಿಕರ್ಮಗಳನ್ನುವಿಧಿಸುತ್ತಿರುವ ಕರ್ಮಕಾಂಡದಲ್ಲಿನ ಸಕಲವಾಕ್ಯಗಳೂಕೂಡ ನನ್ನನ್ನು ಉದ್ದೇಶಿಸಿಯೇ ನನ್ನ ಪೂಜಾರೂಪವಾದ ಕರ್ಮಗಳನ್ನು ವಿಧಿಸುತ್ತಲಿವೆ. ವೇದದಲ್ಲಿರುವ ಇಂದ್ರ, ಚಂದ್ರ, ಅಗ್ನಿ ಮೊದಲಾದ ಸಕಲಶಬ್ದಗಳೂ ಕೂಡ ಪರಮಮುಖ್ಯವೃತ್ತಿಯಿಂದ ನನ್ನ ಗುಣಗಳನ್ನೇ ನನ್ನ ಐಶ್ವರ್ಯವನ್ನೇ ಹೇಳುತ್ತಲಿವೆ.

**ಚತ್ವಾರಿವಾಕ್ ಪರಿಮಿತಾ ಪದಾನಿ. ತಾನಿ. ವಿದುರ್ಬ್ರಾಹ್ಮಣಾ ಯೇ ಮನೀಷಿಣಃ ।**
**ಗುಹಾತ್ರೀಣಿ ನಿಹಿತಾನೇಂಗಯಂತಿ ತುರೀಯಂ ವಾಚೋ ಮನುಷ್ಯಾ ವದಂತಿ ।।**
**(ಋಗ್ವೇದ ೧-೧೬೪-೪೫)**

**ತಾತ್ಪರ್ಯ** :- ವಕ್ಷ್ಯಮಾಣನಿಮಿತ್ತದಿಂದ "ವಾಕ್" ಎಂಬುದಾಗಿಕರೆಯಲ್ಪಡತಕ್ಕವನು ಶ್ರೀಹರಿಯು ಅವನ ಯಾವಸ್ಥಾನಗಳುಂಟೋ ಅದರಿಂದಪರಿಮಿತಗಳಾದ, ಚತ್ವಾರಿ. ಪದಾನಿ = ವಾಸುದೇವಾದಿರೂಪಗಳನ್ನು ಬ್ರಹ್ಮಜ್ಞಾನಿಗಳು ಆಯಾಸ್ಥಾನಗಳಲ್ಲಿರುವವುಗಳನ್ನಾಗಿ ತಿಳಿಯುತ್ತಾರೆ. ಅವುಗಳಲ್ಲಿ ಶ್ರೀಹರಿಯ ವಾಸುದೇವಾದಿ ಮೂರು ರೂಪಗಳು ಹೃದಯಗುಹೆಯಲ್ಲಿರುತ್ತವೆ. ಅವುಗಳನ್ನು ಸಾಧಾರಣಮಾನವರು ತಿಳಿಯಲಾರರು. ನಾಲ್ಕನೆಯದಾದ ಅನಿರುದ್ಧವೆಂಬ ರೂಪವನ್ನು ಜ್ಞಾನಿಗಳು ತಿಳಿಯುತ್ತಾರೆ. ಈ ರೀತಿಯಾಗಿ ನಾನೇನೇ ನಾಲ್ಕುಸಂಖ್ಯೆಯಿಂದ ಕೂಡಿದ ವಾಸುದೇವಾದಿವಿವಿಧರೂಪವುಳ್ಳವನಾಗಿ ವೇದದಲ್ಲಿ ವಿವಿಧರೂಪದಿಂದ ಪ್ರತಿಪಾದಿಸಲ್ಪಟ್ಟಿದ್ದೇನೆ.

"ನ ಸುರಾಂ ಪಿಬೇತ" (ಮನು ೧೧-೯೪) ಇತ್ಯಾದಿವಾಕ್ಯಗಳಿಂದ ನಾನೇ ನಿಷೇಧ್ಯನಾಗಿರುತ್ತೇನೆ. "ನಿಷೇಧ ಬುದ್ಧಿವಿಷಯಂ ಅಪ್ರಿಯ ಹಿ ಹರೇಃ ಸ್ಮೃತಮ್" ಎಂಬ ವಚನದಂತೆ ಸುರಾಪಾನಾದಿಗಳು ಪರಮಾತ್ಮನ ಅಪ್ರೀತಿಗೆ ಕಾರಣಗಳಾದುದರಿಂದ ನಿಷೇಧಿಸಲ್ಪಡುತ್ತವೆ ಎಂಬ ಅಭಿಪ್ರಾಯದಿಂದ ಅಪ್ರಿಯನಿಷೇಧದ್ವಾರಾ "ನಸುರಾ ಪಿಬೇತ್"

ಎಂಬುದಾಗಿ ನಾನೇನೆ ನಿಷೇಧ್ಯನೆಂಬುದಾಗಿ ಶ್ರೀಕೃಷ್ಣಪರಮಾತ್ಮನ ಅಭಿಪ್ರಾಯವಾಗಿದೆ. ಅಥವಾ "ಅಹಂ ಅಪ್ರಿಯಾದ ಪ್ರೋಕ್ತ" ನನಗೆ ಅಪ್ರೀತಿಕರವಾದ ಸುರಾಪಾನಶಬ್ದದಿಂದ ಹೇಳಲ್ಪಡತಕ್ಕ ಸುರಾಃ "ಹರೇಃ ಗುಣಾಃ ಪ್ರೋಕ್ತಾಸ್ತೇಮೇ ಸ್ಮರಿತಿಚಿಂತನಂ। ಸುರಾಪಾನಮಿತಿಪ್ರೋಕ್ತಂ। ತನ್ನ ಕುರ್ಯಾತ್ಕದಾಚನ।" ಎಂಬ ರೀತಿಯಿಂದ ನಿಷೇಧ್ಯನು ಎಂದು ಅಭಿಪ್ರಾಯವು. ಇದೆಲ್ಲಾ ವಿಚಾರವನ್ನು ಶ್ರೀಮದ್ಭಾಗವತತಾತ್ಪರ್ಯದಿಂದ ತಿಳಿಯಬೇಕಾಗಿದೆ.

> ವಿಷ್ಣುಭಾಗೇ ಹರೇಃ ಪೂಜಾಪ್ರಧಾನೇ ಚ ತದ್ಗುಣೌಃ।
> ವಿಕಲ್ಪೇ ತದ್ವಹುತ್ವಂ ಚಾಪ್ಯಪೋಹೇ ತು ತದಪ್ರಿಯಮ್॥
> ಉಚ್ಯತೇ ಸರ್ವವೇದೇಷು ತಜ್ಞ ವೇದ ಸ ಏವ ಹಿ॥
>
> (ಇತಿ ಭಾಗವತ ತಾತ್ಪರ್ಯೇ)

ಶ್ರುತಿಯಲ್ಲಿನಸರ್ವನಾಮಗಳೂ ಸಹ ಪರಮಾತ್ಮನನ್ನೇ ಪರಮಮುಖ್ಯವೃತ್ತಿಯಿಂದ ಪ್ರತಿಪಾದಿಸುತ್ತಲಿವೆ. ಅಂದರೆ ಕರ್ಮಕಾಂಡದಲ್ಲಾಗಲಿ ದೇವತಾಕಾಂಡದಲ್ಲಾಗಲಿ ಇರುವ ಸಕಲಪದಗಳು ಪರಮಾತ್ಮನನ್ನೇ ಹೇಳುತ್ತಿವೆ. ಇತರ ಸಕಲಬ್ರಹ್ಮಾದಿದೇವತೆಗಳು ಪರಮಾತ್ಮನ ನಾಮಧಾರಕರಾಗಿದ್ದಾರೆ. ಆದಕಾರಣ ಪರಮಾತ್ಮನ ದಾಸರೇ ಆಗಿರುವರು ಎಂದು ಪರಮಾಭಿಪ್ರಾಯ. ಯೋ ದೇವಾನಾಂ ನಾಮಧಾ ಏಕಏವ। ತಂ ಸಂಪ್ರಶ್ನಂ ಭುವನಾ ಯಂತ್ಯನ್ಯಾ (ಋಗ್ವೇದಸಂಹಿತಾ ೧೦-೩) ಎಂಬವೇದವಾಣಿಯು ಸಹ ಅದೇ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಲಿದೆ ಮತ್ತು ನಾರದೀಯ ಪುರಾಣವಚನವೂ ಕೂಡ ಹಿಂದಿನ ವಿಷಯವನ್ನೇ ಸ್ಪಷ್ಟಪಡಿಸುತ್ತಲಿದೆ.

> ವೇದಾಕ್ಷರಾಣಿ ಯಾವಂತಿ ಪಠಿತಾನಿ ದ್ವಿಜಾತಿಭಿಃ।
> ತಾವಂತಿ ಹರಿನಾಮಾನಿ ಕೀರ್ತಿತಾನಿ ನ ಸಂಶಯಃ॥ (ಇತಿನಾರದೀಯೆ)
> ವೇದೈಶ್ಚ ಸರ್ವೈರಹಮೇವ ವೇದ್ಯಃ (ಇತಿ ಭಗವದ್ ಗೀತಾ)
> ತಾವಾ ಏತಾಃ ಸರ್ವಾಃ ಋಚಃ ಸರ್ವೇ ವೇದಾಃ ಸರ್ವೇ ಘೋಷಾಃ।
> ಏಕೈವ ವ್ಯಾಹೃತಿಃ ಪ್ರಾಣ ಏವ ಪ್ರಾಣಋಚ ಇತ್ಯೇವ ವಿದ್ಯಾತ್॥
> (ಐತರೇಯಆರಣ್ಯಕ ೩-೩-೩)
> ವ್ಯೋಮಕೇಶಸ್ಯ ಶಿರಸಿ ಸದಾ ವಿಷ್ಣುಪದಂ ನ ಕಿಮ್।
> ಅತಃ ಕೋಶಶಬ್ದಸಂಯುತ್ತಾ ಶಿವೋ ದಾಸೋ ನ ಕಿಂ ವದ॥

**ತಾತ್ಪರ್ಯ** :- ರುದ್ರದೇವನಿಗೆ ಕೋಶಗಳಲ್ಲಿ ವ್ಯೋಮಕೇಶ ಎಂಬ ಹೆಸರಿದೆ. ವ್ಯೋಮಕೇಶನೆದರೆ ಪರಮೇಶ್ವರ ಎಂದರ್ಥ. ಆಕಾಶಕ್ಕೆ ವಿಷ್ಣುಪದವೆಂಬ ಹೆಸರುಕೋಶದಲ್ಲಿದೆ. ಈಶ್ವರನ ಶಿರಸ್ಸಿನಲ್ಲಿ ಸದಾ ವಿಷ್ಣುವಿನ ಪಾದವಿರುವುದರಿಂದ ರುದ್ರದೇವನು ಸದಾ ಶ್ರೀಹರಿಯ ದಾಸನಾಗಿದ್ದಾನೆಂಬುದು ಸುಪ್ರಸಿದ್ಧಸಂಗತಿಯೇ ಆಗಿದೆ. ಇದು ರುದ್ರನ ಹೆಸರಿನಿಂದಲೇ ತಿಳಿದು ಬರುತ್ತಿದೆ.

ಗಂಗೆಯ ಹೆಸರುಗಳಲ್ಲಿ ವಿಷ್ಣುಪದೀ ಎಂಬುವದೂ ಕೋಶಗಳಲ್ಲಿ ಉಕ್ತವಾಗಿದೆ. ಅಂತಹ ವಿಷ್ಣುಪದಿಯಾದ ಗಂಗೆಯನ್ನು ತಲೆಯಲ್ಲಿ ಧರಿಸುವ ಕಾರಣದಿಂದಲೇ ಗಂಗಾಧರ ಎಂಬ ಹೆಸರು ರುದ್ರನಿಗೆ ಪ್ರಸಿದ್ಧವಾಗಿದೆ. ಈ ಹೆಸರಿನ ಪರಿಶೀಲನೆಯಿಂದಲೂ ರುದ್ರದೇವನು ವಿಷ್ಣುವಿನ ದಾಸನಾಗಿರುವನೆಂಬುದೂ ಸಹ ಅತ್ಯಂತ ಸ್ಪಷ್ಟವಾಗಿ ಗೊತ್ತಾಗುತ್ತಿದೆ. ಈ ಅಭಿಪ್ರಾಯವು ಮುಂದಿನ ಶ್ಲೋಕದಿಂದ ವ್ಯಕ್ತವಾಗುತ್ತಲಿದೆ.

"ಗಂಗಾಧರಃ ಕಿಲ ಶಿವೋ ಗಂಗಾ ವಿಷ್ಣುಪದೀ ಕಿಲ।
ಅತೋಽಪೀಶಃಕೋಽಶಮತಿ ವಿಷ್ಣೋರ್ದಾಸೋ ನ ಕಿಂ ವದ॥"
"ಅತಃ ಶ್ರುತಿವಿದಾಂ ಯುಕ್ತಿಸ್ಮೃತಿಕೋಶವಿದಾಂ ಸತಾಮ್।
ಸಭಾಂಗಣೇ ಶುಭಾ ನೃತ್ಯೇದಿಯಂ ಸತ್ಯಶ್ರುತಿನರ್ತಕೀ॥
ತತ್ಸತ್ಯಂ ವದ ನಾಸತ್ಯಂ ವದ ಮಾನೋದಿತಂ ವದ।
ಸತೋ ಮಾನಸ್ಯ ಯದ್ಯೋಗ್ಯಂ ತದ್ಧಿ ಸತ್ಯಂ ವಿದುರ್ಬುಧಾಃ॥
ತದ್ವಿರುದ್ಧಂ ಅಸತ್ಯಂ ಯತ್ತದ್ವಿಷ್ಣೋಃ ನ ಸಮಂ ವದ॥
ಕಿಂತೂಕ್ತಮಾನಸಿದ್ಧತ್ವಾದ್ ವಿಷ್ಣುಂ ಸರ್ವೇಶ್ವರಂ ವದ॥

**ಅಭಿಪ್ರಾಯ** :- ಆದುದರಿಂದ ಅಪೌರುಷೇಯಗಳಾದ ಸ್ವತಃ ಪ್ರಮಾಣಗಳಾದ ವೇದಗಳ ನಿಜವಾದ ಅರ್ಥವನ್ನು ಅರಿತವರೂ, ಪ್ರತ್ಯಕ್ಷಕ್ಕೆ ವಿಷಯಗಳಾಗತಕ್ಕ ವಸ್ತುಗಳ ವಿಚಾರವಾಗಿ ಪ್ರವರ್ತಿಸುವ ಯುಕ್ತಿಗಳನ್ನು ಚೆನ್ನಾಗಿ ಬಲ್ಲವರೂ, ಅತೀಂದ್ರಿಯಗಳಾದ ಪದಾರ್ಥಗಳ ವಿಷಯವಾಗಿ ಆಗಮಾನುಗುಣಗಳಾದ ಯುಕ್ತಿಗಳನ್ನು ಬಲ್ಲವರೂ ವೇದಾರ್ಥಗಳನ್ನೂ ಕಥಾರೂಪವಾಗಿ ದೃಷ್ಟಾಂತಗಳ ಮೂಲಕ ವಿವರಿಸುವ ಇತಿಹಾಸ ಪುರಾಣ ಮೊದಲಾದ ಸ್ಮೃತಿಗಳಲ್ಲಿ ಪಾರಂಗತರೂ,ಕೋಶಗಳ ಸರಿಯಾದ ಪರಿಚಯವುಳ್ಳವರೂ ಆದ ಸಜ್ಜನರ ಸಭಾಂಗಣದಲ್ಲಿ "ಸತ್ಯಂ ವದ" ಎಂಬುದಾಗಿ ವೇದವಾಣಿಯು ನರ್ತನಮಾಡುತ್ತಾ ಶಿಷ್ಯರನ್ನೆಲ್ಲಾ "ನಿಜವಾದುದನ್ನು ಹೇಳಿರಿ.ಸುಳ್ಳನ್ನು ಹೇಳಬೇಡಿರಿ ಪ್ರಮಾಣಪ್ರಸಿದ್ಧವಾದುದನ್ನೇ ಹೇಳಿರಿ. ಅಪ್ರಮಾಣವಾದುದನ್ನು ಆಡಬೇಡಿರಿ. ಯಾವುದು ವೇದಾದಿಗಳಿಗೆ ವಿರುದ್ಧಗಳೋ ಅವೆಲ್ಲಾ ಅಪ್ರಮಾಣಗಳು. ಆದಕಾರಣ ಸಕಲವೇದವೇದ್ಯನಾದ ವಿಷ್ಣುವಿಗೆ ಸಮರಿಲ್ಲವೆಂದು ಸಕಲ ಪ್ರಮಾಣಗಳು ಘೋಷಣೆಮಾಡುತ್ತಲಿವೆ. ಆದುದರಿಂದ ಶ್ರೀಹರಿಗೆ ಸಮರಾರು ಇರುವುದಿಲ್ಲ. ಅಂದಮೇಲೆ ಅಧಿಕರಂತೂ ಇಲ್ಲವೇ ಇಲ್ಲ, ಎಂಬುವುದೇ ಸಕಲಪ್ರಮಾಣಗಳಿಂದ ಸಿದ್ಧವಾದ ವಿಷಯವಾಗಿರುವ ಪ್ರಯುಕ್ತ ಶ್ರೀವಿಷ್ಣುವನ್ನೇ ಸರ್ವೋತ್ತಮದೇವತೆಯೆಂದು ಸರ್ವದಾಹೇಳು.

"ಪ್ರಮಾಣಶತಸಿದ್ಧತ್ವಾತ್ ಪುನಃ ಪುನರಿದಂ ವದ।
ವಿಷ್ಣೋಃ ಸರ್ವೋತ್ತಮತ್ವಂ ಯತ್ತದೇವಾನುದಿನಂ ವದ॥

**ಪರಮಾಭಿಪ್ರಾಯ** :- ಶ್ರೀಹರಿಯು ಸರ್ವೋತ್ತಮತ್ವವು, ನೂರಾರು, ಸಹಸ್ರಾರು, ಅನಂತಪ್ರಮಾಣಗಳಿಂದ ಸಿದ್ಧವಾದ ಪರಮಮುಖ್ಯವಾದ ಪ್ರಮೇಯವಾಗಿರುವುದರಿಂದ ಪ್ರತಿದಿನವೂ, ಪ್ರತಿಕ್ಷಣವೂ, "ಶ್ರೀವಿಷ್ಣುವೇ ಸರ್ವೋತ್ತಮನು" ಎಂದು ಸರ್ವದಾಹೇಳು. ಈ ಎಲ್ಲಾ ಅಭಿಪ್ರಾಯದಿಂದಲೇ ಶ್ರೀಮದಾನಂದತೀರ್ಥಭಗವತ್ಪಾದರು ಯತಿಪ್ರಣವಕಲ್ಪದಲ್ಲಿ ಅಂತಿಮವಾದ ಒಂದು ಸಂದೇಶವನ್ನು ಸೂಚಿಸಿದ್ದಾರೆ.

"ವಿಷ್ಣೋಃ ಸರ್ವೋತ್ತಮತ್ವಂ ಚ ಸರ್ವದಾ ಪ್ರತಿಪಾದಯ" ॥ ಇತಿ ॥

**ಅಭಿಪ್ರಾಯ** :- ಮುಕ್ತಿಯೋಗ್ಯನಾದ ಎಲೈ ಸಾತ್ವಿಕಚೇತನನೇ! ಯಾವಾಗಲೂ ಶ್ರೀವಿಷ್ಣುವಿನ ಸರ್ವೋತ್ತಮತ್ವವನ್ನೇ ಪ್ರತಿಪಾದಿಸು"॥ ಇತಿ ॥

ತಂತ್ರದೀಪಿಕೆಯ ಜಿಜ್ಞಾಸಾಧಿಕರಣದ ಅರ್ಥನಿರೂಪಣೆಯ ಸಮುತ್ತರಿಂದ ಇಡೀ ವೇದದಿಂದಲೂ ಬ್ರಹ್ಮಮೀಮಾಂಸಾಶಾಸ್ತ್ರದಿಂದಲೂ ವೇದ್ಯನಾದ ಸರ್ವೋತ್ತಮನಾದ ಶ್ರೀಮನ್ನಾರಾಯಣನ ಸರ್ವೋತ್ತಮತ್ವವನ್ನು

ಸಂಗ್ರಹವಾಗಿ ಕೆಲವು ಪ್ರಮಾಣಗಳನ್ನು ಉದಾಹರಿಸಿ ನಿರೂಪಿಸಲಾಗಿದೆ. ತಾಮಸಜನರ ಅನ್ಯಥಾಜ್ಞಾನಕ್ಕಾಗಿಯೇ ಶ್ರೀವರಾಹರೂಪಿ ಪರಮಾತ್ಮನ ಆಜ್ಞೆಯಪ್ರಕಾರ ಪ್ರವೃತ್ತವಾಗಿರುವ ತಾಮಸಗ್ರಂಥಗಳಲ್ಲಿ ಉಕ್ತವಾಗಿರುವ ಶಿವನ ಉತ್ಕರ್ಷೆಯನ್ನು ಆ ಶಿವನ ಮಾತುಗಳಿಂದಲೇ ನಿರಾಕರಿಸಿ, ಆ ತಾಮಸಗ್ರಂಥಗಳಲ್ಲಿ ಸಮಾಧಿಭಾಷಾದಿಂದ ಪ್ರವೃತ್ತವಾಗಿರುವ ವಾಕ್ಯಗಳಿಗೂ ಶ್ರೀಹರಿಯ ಸರ್ವೋತ್ತಮತ್ವದಲ್ಲಿಯೇ ಮುಖ್ಯತಾತ್ಪರ್ಯವೆಂಬುದನ್ನು ಸಮರ್ಥಿಸಿರುತ್ತೇವೆ. ಈ ರೀತಿಯಾಗಿ ನಿರೂಪಿಸಲ್ಪಟ್ಟಿರುವ ತಂತ್ರದೀಪಿಕೆಯಲ್ಲಿ ಜಿಜ್ಞಾಸಾಧಿಕರಣಕ್ಕೆ ಸಂಬಂಧಪಟ್ಟ ಸಾಮಾನ್ಯವಾದ ಮತ್ತು ವಿಶೇಷಾಕಾರವಾದ ವಾಕ್ಯಾರ್ಥಗಳ ವಿವರಣೆಯಿಂದ ಸಾತ್ವಿಕಜನತೆಗೆ ಸಂದೇಹಲೇಶವೂ ಉಂಟಾಗದಂತೆ ಪರಮಮುಖ್ಯಪ್ರಮೇಯವಾದ "ಶ್ರೀಹರಿಯ ಸರ್ವೋತ್ತಮತ್ವದ" ನಿಶ್ಚಯವು ಅತಿದೃಢವಾಗಿ ಆಗುವ ವಿಷಯದಲ್ಲಿ ಯಾವ ಸಂದೇಹವೂ ಇರುವುದಿಲ್ಲ. ಇಂತಹ ಅತಿದೃಢವಾದ ಶ್ರೀಹರಿಯ ಹಿರಿಮೆಯ ನಿಶ್ಚಯದಿಂದ ನಿರಂತರದಲ್ಲೂ ಯಾರು ಆ ಶ್ರೀಹರಿಯನ್ನೇ ಸರ್ವವಿಧದಿಂದಲೂ ನೆನೆಯುತ್ತಾರೆಯೋ ಅವರನ್ನು ವೇದವಾಣಿಯು ಮಹಾತ್ಮರೆಂದು ತಿಳಿಯುತ್ತಲಿದೆ.

ವೈಷ್ಣವದೀಕ್ಷಾಬದ್ಧರಾಗ ಊರ್ಧ್ವಪುಂಡ್ರಧಾರಿಗಳಾಗಿ ತಪ್ತಮುದ್ರಾಧಾರಿಗಳಾದ, ಸರ್ವದಾ ಹೃದಯಾಂತರಾಳದಲ್ಲಿರುವ ಬಿಂಬರೂಪಿಯಾದ ಪರಮಾತ್ಮನನ್ನು ತಾರಕವಾದ ತಾರ ಮಂತ್ರದಿಂದ ಧ್ಯಾನಮಾಡುವವರು ಮಹಾತ್ಮರೆಂದು ಅಪೌರುಷೇಯವಾದ ವೇದವಾಣಿಯು ಘೋಷಿಸುತ್ತಿದೆ. ಭಗವದ್ಗೀತೆಯಲ್ಲಿ ಶ್ರೀಕೃಷ್ಣಪರಮಾತ್ಮನೂ ಕೂಡ ಅಂತಹ ಭಗವದ್ಭಕ್ತರನ್ನು ಮಹಾತ್ಮರೆಂದೇ ಕರೆದಿರುತ್ತಾನೆ. ಆ ವಾಕ್ಯಗಳು ಈ ರೀತಿ ಇವೆ.

**"ಧೃತೋರ್ಧ್ವಪುಂಡ್ರಃ ಕೃತಚಕ್ರಧಾರೀ ।**
**ವಿಷ್ಣುಂ ಪರಂ ಧ್ಯಾಯತಿ ಯೋ ಮಹಾತ್ಮಾ ।**
**ತಾರೇಣ ಮಂತ್ರೇಣ ಸದಾ ಹೃದಿಸ್ಥಂ ।**
**ಪರಾತ್ಪರಂ ಯನ್ಮಹತೋ ಮಹಾಂತಮ್" ॥ (ಶೃಗಾಲೋಪನಿಷದ್ವಚನ)**

**(ಕೃತಾಕೀ) ಕೃತಚಕ್ರಧಾರೀ = ತಪ್ತಮುದ್ರಾಧಾರಣೆಯುಳ್ಳವನು)**

**ಅಭಿಪ್ರಾಯ** :- ಸಾತ್ವಿಕನಾದ (ಮುಕ್ತಿಯೋಗ್ಯನಾದ) ಅಧಿಕಾರಿಯಾದ, ವೈಷ್ಣವದೀಕ್ಷಾಬದ್ಧನಾದ ಚೇತನನು (ಮಾನವನು) ಊರ್ಧ್ವಪುಂಡ್ರಧಾರಿಯಾಗಿರಬೇಕು. (ತಪ್ತವಾದಮುದ್ರೆಗಳನ್ನು) ಸಂಪ್ರದಾಯದಂತೆ ಶ್ರೀಹಂಸ ನಾಮಕಪರಮಾತ್ಮನಿಂದ ಪ್ರಾರಂಭವಾಗಿರುವ ಶ್ರೀ ಮಧ್ವಾನಂದತೀರ್ಥಭಗವತ್ಪಾದಾಚಾರ್ಯರಿಂದ ಸುಪ್ರತಿಷ್ಠಿತಗಳಾದ ವೇದಾಂತಸಾಮ್ರಾಜ್ಯದ ದಿವ್ಯಪೀಠಗಳಲ್ಲಿ ಮುಂದುವರೆದಿರುವ ಪರಮಹಂಸಪರಿವ್ರಾಜಕಾಚಾರ್ಯೋತ್ತಮವಿಬುಧಾಂಕಿತರಾದ ಪೀಠಾಧಿಪತಿಗಳಿಂದ ತಪ್ತಮುದ್ರಾಂಕಿತನಾಗಿರಬೇಕು. ಇಷ್ಟು ಮಾತ್ರವಲ್ಲ ತನ್ನ ಹೃದಯಗುಹೆಯಲ್ಲಿರುವ ತನಗೆ ಬಿಂಬರೂಪಿಯಾದ ಸರ್ವೋತ್ತಮನಾದ ಶ್ರೀಹರಿಯನ್ನು ಸಂಸಾರತಾರಕವಾದ ಪರಮಪವಿತ್ರವಾದ ಮಂತ್ರದಿಂದ ಯಾವಾಗಲೂ ಧ್ಯಾನಮಾಡುತ್ತಿರುವವನಾಗಬೇಕು ಇಂತಹವನು ಮಹಾತ್ಮನೆಂದು ಉಪನಿಷತ್ತಿನ ಅಭಿಪ್ರಾಯವಾಗಿದೆ. ಶ್ರೀ ಕೃಷ್ಣಪರಮಾತ್ಮನು ಭಗವದ್ಗೀತೆಯ ಏಳನೆಯ ಅಧ್ಯಾಯದ ೧೯ನೆಯ ಶ್ಲೋಕದಲ್ಲಿ ಹಿಂದೆ ತಿಳಿಸಿದ ಅಭಿಪ್ರಾಯವನ್ನೇ ವ್ಯಕ್ತಪಡಿಸುತ್ತಾನೆ.

**"ಬಹೂನಾಂ ಜನ್ಮನಾಮಂತೇ ಜ್ಞಾನವಾನ್ ಮಾಂ ಪ್ರಪದ್ಯತೇ ।**
**ವಾಸುದೇವಃ ಸರ್ವಮಿತಿ ಸ ಮಹಾತ್ಮಾ ಸುದುರ್ಲಭಃ ॥**
**(ಭಗವದ್ಗೀತಾ ಅ. ೭ ಶ್ಲೋ ೧೯)**

**ಅಭಿಪ್ರಾಯ** :- ಮುಕ್ತಿಯೋಗ್ಯನಾದಸಾತ್ವಿಕಚೇತನನು ಅನೇಕಜನ್ಮಗಳು ಕಳೆದ ತರುವಾಯ, (ಬಹಳ ಜನ್ಮಗಳ ಕಡೆಯಲ್ಲಿ) ಸರ್ವಾಂತರ್ಯಾಮಿಯಾದ ವಾಸುದೇವನೇ ದೇಶ, ಕಾಲ, ಗುಣಗಳಿಂದ ಪರಿಪೂರ್ಣನು, ಸರ್ವಕ್ಕೂ ಸ್ವಾಮಿಯು, ಸಕಲಚೇತನ ಮತ್ತು ಅಚೇತನಾತ್ಮಕಗಳಾದ ಈ ಪ್ರಪಂಚಕ್ಕೆ ಯಥಾಯೋಗ್ಯವಾಗಿ ಸೃಷ್ಟ್ಯಾದಿಗಳಿಗೆ ನಿಮಿತ್ತಕಾರಣನು, ಸರ್ವವೂ ಅವನ ಅಧೀನ ಇತ್ಯಾದಿಯಾಗಿ ಚೆನ್ನಾಗಿತಿಳಿದು ನನ್ನನ್ನು ಕಡೆಯದಾಗಿ ಮೋಕ್ಷದಲ್ಲಿ ಹೊಂದುತ್ತಾನೆ. ಈ ರೀತಿಯಾಗಿ ನನ್ನನ್ನು ಹೊಂದಿದ ಜ್ಞಾನಿಯು ಮಹಾತ್ಮನು. ಅಂತಹ ಮಹಾತ್ಮರು ಪ್ರಪಂಚದಲ್ಲಿ ಬಹಳ ಅಪರೂಪ. (ದುರ್ಲಭರು) ಎಂದು ಶ್ರೀಕೃಷ್ಣಪರಮಾತ್ಮನ ವಾಕ್ಯದ ಅಭಿಪ್ರಾಯವಾಗಿದೆ.

ಶ್ರೀಮದಾನಂದತೀರ್ಥಭಗವತ್ಪಾದರು ತಮ್ಮ ಮೂವತ್ತೇಳು ಗ್ರಂಥಗಳಲ್ಲೂ (ಇತ್ತೀಚೆಗೆ ಬೆಳಕಿಗೆಬಂದಂತಿರುವ ಎರಡು ಗ್ರಂಥಗಳಲ್ಲೂ) ಮುಖ್ಯವಾಗಿ ಶ್ರೀಹರಿಯ ಸರ್ವೋತ್ತಮತ್ವವನ್ನು ಬಹಳ ರಂಜಕವಾಗಿ ನಿರೂಪಿಸಿರುತ್ತಾರೆ. ಆ ಪ್ರಮೇಯಕ್ಕೆ ಸಾಧಕವಾಗಿಯೇ ಮಿಕ್ಕವಿಷಯಗಳನ್ನೂ ಪ್ರತಿಪಾದಿಸಿರುತ್ತಾರೆ.

ಯಾವ ದರ್ಶನಾಚಾರ್ಯರುಗಳ ಗ್ರಂಥಗಳಲ್ಲೂ ಕಾಣದಿರುವಂತಹ ಪ್ರಮಾಣಗಳ ಪ್ರಣಾಲೆಯನ್ನೇ ಶ್ರೀಪ್ರಧಾನವಾಯುದೇವರು ಈ ಭಾರತಭೂಭಾಗದಲ್ಲಿ ಶ್ರೀಮನ್ಮಧ್ವರೂಪದಿಂದ ಅವತರಿಸಿ ಶ್ರೀವೇದವ್ಯಾಸರ ವಾಙ್ಮಯದ ನಿಜವಾದ ಅಭಿಪ್ರಾಯವನ್ನು ಪ್ರಕಟಿಸದೇ ಇದ್ದರೆ ಮುಕ್ತಿಯೋಗ್ಯರಾದ ಸಾತ್ವಿಕ ಜೀವವರ್ಗವು ಆಗ ಪ್ರಚಾರದಲ್ಲಿದ್ದ ಮತಗಳ ಅನ್ಯಥಾಜ್ಞಾನದಿಂದ ನರಕಾದ್ಯನರ್ಥಗಳಿಗೆ ಗುರಿಯಾಗಬೇಕಾಗಿತ್ತು. ಇಂತಹ ಘೋರವಾದ ದಾರುಣವಾದ ಪರಿಸ್ಥಿತಿಯನ್ನು ತಪ್ಪಿಸಿದ ಮಹಾನುಭಾವರು ಶ್ರೀಮನ್ಮಧ್ವಾಚಾರ್ಯರು ಈ ಅಭಿಪ್ರಾಯದಿಂದಲೇ ಹಿರಿಯರ ಬಾಯಿಂದ ಈ ಕೆಳಗಿನ ಮಾತು ಹೊರಟಿದೆ.

**ಯೇನಾಹಮಿಹ ದುರ್ಮಾರ್ಗಾದ್ ಉದ್ಧೃತ್ಯಾಭಿನಿವೇಶಿತಃ।**
**ಸಮ್ಯಕ್ ಶ್ರೀವೈಷ್ಣವೇ ಮಾರ್ಗೇ ಪೂರ್ಣಪ್ರಜ್ಞಂ ನಮಾಮಿ ತಮ್ ॥ ॥ ಇತಿ ॥**

**ಅಭಿಪ್ರಾಯ** :- ಶ್ರೀಮನ್ಮಧ್ವರ ಅವತಾರಕ್ಕಿಂತ ಮುಂಚೆ ಈ ಭಾರತ ಭೂಭಾಗದಲ್ಲಿ ಏಕ್ಯವಾದವು ವಿಶೇಷಾಕಾರವಾಗಿ ಪ್ರಚಾರದಲ್ಲಿತ್ತು. ಅದರಂತೆ ಜೀವವರ್ಗದಲ್ಲಿ ಮುಕ್ತಿಯೋಗ್ಯ, ನಿತ್ಯಸಂಸಾರಿ, ತಮೋಯೋಗ್ಯ ಎಂಬ ಪ್ರಮಾಣ ಪ್ರಸಿದ್ಧವಾದ ಮೂರು ಬಗೆಯಾದ ಜೀವರನ್ನು ಒಪ್ಪದಿರುವ ಮತ್ತು ಪ್ರಮಾಣಗಳಲ್ಲಿ ಖಚಿತವಾಗಿ ನಿರೂಪಿತಗಳಾದ ತಾರತಮ್ಯವನ್ನು ಪ್ರತಿಪಾದಿಸದಿರುವ, ಮೋಕ್ಷದಶೆಯಲ್ಲಿ ಮುಕ್ತಜೀವರಿಗೂ ಪರಮಾತ್ಮನಿಗೂ ಆನಂದದಲ್ಲಿ ಸಾಮ್ಯವನ್ನು ಪ್ರತಿಪಾದಿಸುವ ವಿಶಿಷ್ಟಾದ್ವೈತಮತವೂ ಸಹ ಅಲ್ಲಲ್ಲಿ ಪ್ರಚಾರದಲ್ಲಿತ್ತು. ಇವೆರಡರ ಮೂಲಭೂತವಾದ ಪ್ರಕ್ರಿಯೆಗಳೆಲ್ಲವೂ ಕೂಡ ಶ್ರೀವೇದವ್ಯಾಸರ ಸಿದ್ಧಾಂತಕ್ಕೆ ವಿರುದ್ಧಗಳೇ ಆಗಿವೆ. ಅಂದಿನ ದಿನದಲ್ಲಿ ವೇದಾಂತ ಪ್ರಪಂಚದಲ್ಲಿ ಪ್ರಚಾರದಲ್ಲಿದ್ದ ಅವಾದಗಳನ್ನು ಬಿಟ್ಟರೆ ಬೇರೆ ವಾದವನ್ನು ಪ್ರತಿಪಾದಿಸುವ ಶಕ್ತಿಯಾಗಲಿ ಧೈರ್ಯವಾಗಲಿ, ಜ್ಞಾನವಿಜ್ಞಾನಪ್ರೌಢಿಮೆಯಾಗಲಿ, ಇತರರಿಗೆ ಯಾರಿಗೂ ಇಲ್ಲದೆ ಸಾಮಾನ್ಯವಾಗಿ ಎಲ್ಲರೂ ಆ ಹಿಂದಿನ ಮತಗಳನ್ನೇ ಅನುಸರಿಸುತ್ತಿದ್ದರು ಅವರಲ್ಲೂ ಸಹ ಕೆಲವರು ಸಾತ್ವಿಕರಿಗೆ ಸಂದೇಹಗಳು ಆ ಇತರಮತಗಳ ವಿಷಯದಲ್ಲಿ ಉಂಟಾಗಿ ದೃಢವಾದ ನಿಶ್ಚಯವಿಲ್ಲದೆ ತಳಮಳಗೊಳ್ಳುತ್ತಿದ್ದರು. ಮತ್ತೆ ಕೆಲವರು ಮಹಾನುಭಾವರು ಶ್ರೀಹರಿಯ ಸರ್ವೋತ್ತಮತ್ವದ ನಿಶ್ಚಯವುಳ್ಳವರಾದಾಗ್ಯೂ,ವೈಷ್ಣವದೀಕ್ಷಾಬದ್ಧರಾದಾಗ್ಯೂ ಏಕವಾದಿಗಳ ಆ ಗುಂಪಿನ ಆಂದೋಳನದಿಂದ ದೂರಸರಿದು ಎಲ್ಲೆಲ್ಲೋ ಅಜ್ಞಾನವಾಸದಲ್ಲಿದ್ದರು. ಇಂತಹ ಪರಿಸ್ಥಿತಿಯಸನ್ನಿಧಿಯನ್ನು ನಾವು ಮಣಿಮಂಜರೀ ಮೊದಲಾದ ಗ್ರಂಥಗಳಿಂದ ತಿಳಿಯಬಹುದಾಗಿದೆ.

ಅಂತಹ ಪರ್ವಸಮಯದಲ್ಲಿಯೇ ಪರಮಾತ್ಮನ ಆಜ್ಞೆಯ ಪ್ರಕಾರ ಪ್ರಧಾನವಾಯುದೇವರು ಶ್ರೀಮನ್ಮಧ್ವ ರೂಪದಿಂದ ಅವತರಿಸಿದರು. ಶ್ರೀವೇದವ್ಯಾಸರಿಂದಲೇ ಸಾಕ್ಷಾತ್ತಾಗಿ, ಉಪದೇಶಪಡೆದು ಅವರ ಆಜ್ಞಾಧಾರಕರಾಗಿ ಬ್ರಹ್ಮಸೂತ್ರಭಾಷ್ಯ ಮೊದಲಾದ ಗ್ರಂಥರತ್ನಗಳನ್ನು ರಚಿಸಿ ದ್ವೈತ ಸಿದ್ಧಾಂತ ಪ್ರತಿಷ್ಠಾಪನಾಚಾರ್ಯರೆಂದು ವಿಶ್ವವಿಖ್ಯಾತರಾದರು.

ಮುಕ್ತಿಯೋಗ್ಯ ಜನತೆಯನ್ನು ದುರ್ಮಾರ್ಗದಿಂದ ತಪ್ಪಿಸಿ ಸನ್ಮಾರ್ಗಕ್ಕೆ ಕರೆತಂದು, ಸಮೀಚೀನವಾದ ವೈಷ್ಣವಮಾರ್ಗದಲ್ಲಿ ಮುಂದುವರೆಯುವಂತೆ ಅನುಗ್ರಹಿಸಿದರು.

ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಶ್ರೀವೇದವ್ಯಾಸರೂಪಿಯಾದ ಶ್ರೀಹರಿಯಿಂದ ನಿರ್ಣಯಿಸಲ್ಪಟ್ಟಿರುವ ಸಿದ್ಧಾಂತರಹಸ್ಯವನ್ನು ಪ್ರಕಾಶಗೊಳಿಸಿದರು. ಮೇಲಾಗಿ ಸರ್ವದಾ ಶ್ರೀಹರಿಯ ಪರಮಪ್ರಸಾದಕ್ಕೆ ಕಾರಣವಾದ ತತ್ವಜ್ಞಾನದ ಪ್ರಮೇಯಗಳಲ್ಲಿ ಪರಮಪ್ರಧಾನವಾದ "ಶ್ರೀಹರಿಸರ್ವೋತ್ತಮತ್ವವನ್ನು" ಸಕಲ ಪ್ರಮಾಣಗಳಿಂದಲೂ ವೇದಾನುಸಾರಿಗಳಾದ ಯುಕ್ತಿಗಳಿಂದಲೂ ಸಾಧಿಸಿ "ತಸ್ಮಾದ್ ವಿಷ್ಣೋಃ ಸರ್ವೋತ್ತಮತ್ವೇ ಏವಮಹಾತಾತ್ಪರ್ಯಂ ಸರ್ವಸದಾಗಮಾನಾಮ್ (ಅತೋವಿಷ್ಣೋಃ ಗುಣೋತ್ಕರ್ಷ ಏವಸರ್ವಶ್ರುತಿ ಸ್ಮೃತೀನಾಂ ಪ್ರಾಮಾಣ್ಯಂ) ಎಂಬುದಾಗಿ ನಿಶ್ಚಯಿಸಿರುತ್ತಾರೆ. ಹಿಂದೆ ಅಂತಹ ಪ್ರಮಾಣಗಳಲ್ಲಿ ಕೆಲವನ್ನು ಮಾತ್ರ ಉದಾಹರಿಸಿರುತ್ತೇವೆ. ಪ್ರಕೃತದಲ್ಲಿ ಆಗಮಾನುಸಾರಿಯಾದ ಯುಕ್ತಿಯಿಂದಲೂ ಶ್ರೀಮಧ್ವರು ನಿರ್ಣಯಿಸಿರುವ ಪ್ರಕಾರವನ್ನೂ ಸ್ಥೂಲವಾಗಿ ನಿರೂಪಿಸುತ್ತೇವೆ. ಅದರ ವಿವರಣೆಯು ಈ ರೀತಿ ಇದೆ.

"ವಿಷ್ಣುವಿನ ಸರ್ವೋತ್ತಮತ್ವವು ಸಕಲಶ್ರುತಿ ಸ್ಮೃತಿ ಇತಿಹಾಸ ಪುರಾಣ ಮೊದಲಾದ ಸಕಲಸದಾಗಮಗಳೆಂಬ ಪ್ರಮಾಣಗಳಲ್ಲಿ ನಿರವಕಾಶವಾಗಿ ಪರಮ ಪ್ರಧಾನವಾಗಿ ಪ್ರತಿಪಾದಿಸಲ್ಪಟ್ಟಿರುವ ವಿಷಯವೇ ಆಗಿದೆ.

ಸಕಲಸದಾಗಮಗಳಿಗೂ ಶ್ರೀಹರಿಯ ಸರ್ವೋತ್ತಮತ್ವದಲ್ಲಿಯೇ ಮಹಾತಾತ್ಪರ್ಯವೆಂಬುದು ಯುಕ್ತಿ ಸಿದ್ಧವೂ (ಯುಕ್ತವು) ಆಗಿದೆ. ಅಂದರೆ ಸಮೀಚೀನವಾಗಿ ಯುಕ್ತವಾಗಿದೆ. ಅದು ಹೇಗೆಂದರೆ:-

ಪುರುಷಾರ್ಥಗಳು, ಧರ್ಮ, ಅರ್ಥ, ಕಾಮ, ಮೋಕ್ಷಗಳೆಂದು ನಾಲ್ಕು ಬಗೆಯಾಗಿರುವುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಈ ನಾಲ್ಕರಲ್ಲಿ ಮೋಕ್ಷವೆಂಬುದು ಸರ್ವಪುರುಷಾರ್ಥಗಳಲ್ಲೂ ಶ್ರೇಷ್ಠವೆಂಬಲ್ಲಿ ವಿವಾದವೇ ಇಲ್ಲ. ಆದುದರಿಂದಲೇ ಮೋಕ್ಷವನ್ನು ಸರ್ವಪುರುಷಾರ್ಥಗಳಲ್ಲೂ ಉತ್ತಮವೆಂದು ಪ್ರಮಾಣಗಳು ಘೋಷಿಸುತ್ತವೆ.

ಸಕಲರೂ ಕೂಡ ಸಾಮಾನ್ಯವಾಗಿ 'ಸುಖಮೇವ ಮೇ ಸ್ಯಾದ್ ದುಃಖಂ ಮನಾಗಪಿ ಮಾಭೂತ್ (ನನಗೆ ಸುಖವೇ ಉಂಟಾಗಲಿ, ದುಃಖದ ಲೇಶವೂ ಸಹ ಆಗದಿರಲಿ' ಎಂದು ಹಾರೈಸುವ ನಿತ್ಯವಾದ ಮೋಕ್ಷಸುಖವನ್ನೇ ಅಪೇಕ್ಷಿಸುತ್ತಿರುತ್ತಾರೆ. ಅಪೌರುಷೇಯವಾದ ವೇದವಾಣಿಯೂ ಸಹ ಧರ್ಮ, ಅರ್ಥ, ಕಾಮಗಳೆಂಬ ಪುರುಷಾರ್ಥಗಳು, ಅನಿತ್ಯಪುರುಷಾರ್ಥಗಳೆಂದು, ಮೋಕ್ಷವೆಂಬ ಪುರುಷಾರ್ಥವು ಮಾತ್ರ ನಿತ್ಯ ಪುರುಷಾರ್ಥವೆಂದೂ ವಿವೇಕಿಯಾದ ಮಾನವನು ಅಂತಹ ನಿತ್ಯ ಪುರುಷಾರ್ಥವಾದ ಮೋಕ್ಷಕ್ಕಾಗಿ ಪ್ರಯತ್ನವನ್ನು ಮಾಡಬೇಕೆಂದು ನಮಗೆ ತಿಳಿಸುತ್ತಲಿದೆ.

ಧರ್ಮಾರ್ಥಕಾಮಾಃ ಸರ್ವೇಽಪಿ ನ ನಿತ್ಯಾಃ ಮೋಕ್ಷ ಏವ ಹಿ।
ನಿತ್ಯಃ ತಸ್ಮಾತ್ತದರ್ಥಾಯ ಯತೇತ ಮತಿಮಾನ್ನರಃ॥

(ಇತಿ ಭಾಲ್ಲವೇಯಶ್ರುತಿಃ)

**ತಾತ್ಪರ್ಯ** :- ಪುರುಷಾರ್ಥಗಳು ನಿತ್ಯ ಮತ್ತು ಅನಿತ್ಯಗಳೆಂದು ಎರಡು ಬಗೆಯಾಗಿವೆ. ಇವೆರಡರಲ್ಲಿ ಧರ್ಮ ಅರ್ಥ ಕಾಮಗಳು ಅನಿತ್ಯ ಪುರುಷಾರ್ಥಗಳು. ಮೋಕ್ಷವಾದರೋ ನಿತ್ಯಪುರುಷಾರ್ಥವು. ಆದಕಾರಣ ಬುದ್ಧಿವಂತನಾದ ಯುಕ್ತಾಯುಕ್ತ ವಿಚಾರವಿಮರ್ಶೆಯಿಂದ ಕಾರ್ಯಗಳಲ್ಲಿ ಪ್ರವರ್ತಿಸುವ ಮತಿವಂತನಾದ ಮಾನವನು ನಿತ್ಯಪುರುಷಾರ್ಥವಾದ ಮೋಕ್ಷಸುಖಕ್ಕಾಗಿ ಪ್ರಯತ್ನಶೀಲನಾಗಬೇಕೆಂದು ಭಾಲ್ಲವೇಯ ಶ್ರುತಿಯ ಅಭಿಪ್ರಾಯ.

ಈ ವಿಚಾರವಾಗಿ ಮಹಾಭಾರತವಚನವೂ ಸಂವಾದರೂಪವಾಗಿದೆ.

**ಅನಿತ್ಯತ್ವಾತ್ಸದುಃಖತ್ವಾನ್ನಧರ್ಮಾದ್ಯಾಃ ಪರಂ ಸುಖಮ್ ।**
**ಮೋಕ್ಷ ಏವ ಪರಾನಂದಃ ಸಂಸಾರೇ ಪರಿವರ್ತತಾಮ್ ।। (ಇತಿ ಮಹಾಭಾರತೇ)**

**ಅಭಿಪ್ರಾಯ** :- ಧರ್ಮ, ಅರ್ಥ, ಕಾಮಗಳು ಅದರಿಂದ ಸಾಧ್ಯವಾದ, ಅವುಗಳಿಂದ ದೊರೆಯಲ್ಪಡತಕ್ಕ ಸ್ವರ್ಗಾದಿ ಸುಖಗಳು ಅನಿತ್ಯಗಳು - ಶಾಶ್ವತಗಳಲ್ಲ. ಮತ್ತು ದುಃಖ ಸಹಿತಗಳಾಗಿವೆ. ಆದಕಾರಣ ಅವುಗಳು ಶ್ರೇಷ್ಠ ಪುರುಷಾರ್ಥಗಳಲ್ಲ. ಶಾಶ್ವತಸುಖರೂಪವಾದ ಅಂದರೆ ನಿತ್ಯಸುಖರೂಪವಾದಮೋಕ್ಷವು ಮಾತ್ರ - ಸರ್ವಶ್ರೇಷ್ಠವಾದ ಪುರುಷಾರ್ಥವಾಗಿದೆ.

ಅಂತಹ ಸರ್ವಪುರುಷಾರ್ಥಗಳಲ್ಲಿ ಸರ್ವೋತ್ತಮವಾದ ಮೋಕ್ಷಪ್ರಯೋಜನಕ್ಕೆ ಮೀಸಲಾದ ಶಾಸ್ತ್ರವು ''ವೇದಶಾಸ್ತ್ರಾತ್ ಪರಂ ನಾಸ್ತಿ ಇತ್ಯಾದಿಪ್ರಮಾಣಗಳಲ್ಲಿ ಉದಾಹೃತಗಳಾದ ವೇದಾದಿಸಚ್ಛಾಸ್ತ್ರಗಳೇ ಹೊರತು ಬೇರೆ ಇತರ ಶಾಸ್ತ್ರಗಳಲ್ಲ. ಸರ್ವಪುರುಷಾರ್ಥೋತ್ತಮವಾದ ಮೋಕ್ಷ ಪ್ರಯೋಜನವನ್ನುಳ್ಳ ಸರ್ವೋತ್ತಮಶಾಸ್ತ್ರಕ್ಕೆ ಸರ್ವೋತ್ತಮವಾದ ವಿಷಯವೇ ಆಗಬೇಕೇ ಹೊರತು ಮಿಕ್ಕವಿಷಯಗಳಾಗಲಾರವು. ಮಿಕ್ಕ ಎಲ್ಲಾ ವಿಷಯಗಳು ಅಂತಹ ಸರ್ವೋತ್ತಮವಾದ ವಿಷಯಕ್ಕೆ ಅಂಗಗಳಾಗಿ ನಿರೂಪಿಸಲ್ಪಟ್ಟಿದೆ. ಹೊರತು ಅವು ಪ್ರಧಾನಗಳಲ್ಲ.

ಯಾವ ಸರ್ವಶ್ರೇಷ್ಠವಾದ ಮೋಕ್ಷಪ್ರಯೋಜನವನ್ನುಳ್ಳ ಸರ್ವಶಾಸ್ತ್ರೋತ್ತಮವಾದ ವೇದಾದಿಗಳಿಗೆ ಯಾರು ವಿಷಯನೋ ಅವನು ಅಂತಹ ಶ್ರೇಷ್ಠಪುರುಷಾರ್ಥವನ್ನು ಕೊಡತಕ್ಕವನೇ ಆಗಿರಬೇಕು. ಹಾಗಿಲ್ಲದ ಪಕ್ಷದಲ್ಲಿ ಪ್ರಯೋಜನಕ್ಕೂ ಶಾಸ್ತ್ರವಿಷಯಕ್ಕೂ ಸಂಬಂಧವೇ ಇಲ್ಲದುದಾಗಿ ಶಾಸ್ತ್ರವು ಅಸಂಬದ್ಧಪ್ರಲಾಪವಾಗುತ್ತದೆ. ಅದರಿಂದ ಪ್ರೇಕ್ಷಾವಂತರಿಗೆ ಅನುಪಾದೇಯವಾಗುತ್ತದೆ.

ಸಕಲರಿಗೂ ಅಭಿಮತವಾದ ಮೋಕ್ಷವೆಂಬ ಪ್ರಯೋಜನಕ್ಕೆ ಸರ್ವೋತ್ಕೃಷ್ಟನಾಗಿ ತಿಳಿಯಲ್ಪಟ್ಟವನಾಗಿ ಸುಪ್ರಸನ್ನನಾದ ಭಗವಂತನಾದ ಶ್ರೀಹರಿಯೇ ಕಾರಣನೆಂಬುದು ಯುಕ್ತಿಯುಕ್ತವಾದ ವಿಚಾರವೇ ಆಗಿದೆ. ಆದಕಾರಣ ಅಂತಹ ಶ್ರೀವಿಷ್ಣುವೇ ಸರ್ವಸದಾಗಮಗಳಿಗೂ ಮಹಾತಾತ್ಪರ್ಯವಿಷಯನಾಗಿದ್ದಾನೆಂಬ ವಿಷಯವನ್ನೂ ಪ್ರಮಾಣಗಳ ಉದಾಹರಣೆಯಿಂದ ಬಹಳ ರಂಜಕವಾಗಿ ಶ್ರೀಮಧ್ವರು ನಿರೂಪಿಸಿ, ಸಮರ್ಥಿಸಿರುತ್ತಾರೆ.

ಈ ಮೇಲೆ ಕಂಡ ನಿರೂಪಣೆಯಲ್ಲಿನ ಒಂದೊಂದು ವಿಚಾರದಲ್ಲೂ ಪ್ರಮಾಣವಾಕ್ಯಗಳು ಮುಂದೆ ವಿವರಿಸಿರುವಂತಿವೆ. ಮೋಕ್ಷವು ಶ್ರೀಹರಿಯ ಪ್ರಸಾದವಿಲ್ಲದೆ ದೊರಕಲಾರದು. ಈ ವಿಷಯವನ್ನು ನಾರಾಯಣ ಶ್ರುತಿವಚನವು ಪ್ರತಿಪಾದಿಸುತ್ತಲಿದೆ.

**"ಯಸ್ಯ ಪ್ರಸಾದಾತ್ಪರಮಾರ್ತಿರೂಪಾತ್ಸಂಸಾರಾನ್ಮುಚ್ಯತೇ**
**ನಾಪರೇಣ। ನಾರಾಯಣೋಽಸೌ ಪರಮೋ ವಿಚಿಂತ್ಯೋ**
**ಮುಮುಕ್ಷುಭಿಃ ಕರ್ಮಪಾಶಾದಮುಷ್ಮಾತ್ ।। (ಇತಿ ನಾರಾಯಣಶ್ರುತಿಃ)**

**ಅಭಿಪ್ರಾಯ** :- ಮೋಕ್ಷವು ವಿಷ್ಣುವಿನಪ್ರಸಾದದಿಂದ ಮಾತ್ರಲಭಿಸತಕ್ಕದ್ದಾಗಿದೆ. ಮೋಕ್ಷಕ್ಕೆ ಸಾಕ್ಷಾತ್ತಾಗಿ ಕಾರಣವಾದ ಅಂತಹ ಆತ್ಯರ್ಥಪ್ರಸಾದದ ಹೊರತಾಗಿ ಬೇರೆ ಯಾವುದೂ ಸಾಕ್ಷಾತ್ತಾಗಿ ಸಾಧನವಲ್ಲ. ಈ ದುಃಖಮಯವಾದ ಸಂಸಾರದಿಂದ (ಕರ್ಮಪಾಶದಿಂದ) ಬಿಡುಗಡೆಯನ್ನು ಪಡೆಯಲು ಅಪೇಕ್ಷಿಸುವ ಮೋಕ್ಷಾಪೇಕ್ಷೆಯಾದ ಅಧಿಕಾರಿಯಾದ ಮಾನವನು ಆ ಸರ್ವೋತ್ತಮನಾದ ಪರಮಾತ್ಮನ ಪ್ರೀತಿಗಾಗಿ ಆ ಶ್ರೀಹರಿಯನ್ನು ಸರ್ವೋತ್ಕೃಷ್ಟನನ್ನಾಗಿ ತಿಳಿಯಬೇಕು ಎಂಬುದು ನಾರಾಯಣಶ್ರುತಿವಚನದ ಅಭಿಪ್ರಾಯ.

ಸರ್ವೋತ್ತಮನಾದ ಶ್ರೀಹರಿಯು ಯಾರನ್ನು ತನ್ನ ಭಕ್ತನನ್ನಾಗಿ ಪ್ರೀತಿಯಿಂದ ಸ್ವೀಕರಿಸುವನೋ ಅಂತಹ ತನ್ನ ಭಕ್ತನಿಂದ ಮಾತ್ರ ಲಭ್ಯನಾಗುತ್ತಾನೆ. ಭಕ್ತಿರಹಿತವಾದ ಕೇವಲ ಶಾಸ್ತ್ರಪ್ರವಚನದಿಂದಾಗಲಿ, ಭಕ್ತಿರಹಿತವಾದ ಮೇಧಾಶಕ್ತಿಯಿಂದಾಗಲಿ ಭಕ್ತಿರಹಿತವಾದ ಅನೇಕಾವರ್ತಿಶಾಸ್ತ್ರ ಶ್ರವಣದಿಂದಾಗಲಿ ಪರಮಾತ್ಮನು ಲಭ್ಯನಾಗುವುದಿಲ್ಲ. ಯಾರನ್ನು ಪ್ರೀತಿಯಿಂದ ತನ್ನಭಕ್ತನನ್ನಾಗಿ ಸ್ವೀಕರಿಸುವನೋ ಅಂದರೆ ಯಾರವಿಷಯದಲ್ಲಿ ಸುಪ್ರಸನ್ನನಾಗುವನೋ ಅಂತಹ ಜ್ಞಾನಿಯಾದ ಭಕ್ತನಿಗೆ ಮಾತ್ರ ತನ್ನಸಾಕ್ಷಾತ್ಕಾರವನ್ನೂ ಅನುಗ್ರಹಿಸಿ, ಅನಂತರದ ಆ ಭಕ್ತನ ಅನಾದಿಯಾದ ಭಾವರೂಪವಾದ ಅಜ್ಞಾನವನ್ನೂ ನಾಶಗೊಳಿಸಿ ಅಂತಹ ಯೋಗ್ಯಜೀವನಿಗೆ ಸ್ವರೂಪಾನಂದಾನುಭವದ ಶಕ್ತಿಯನ್ನು ಕರುಣಿಸುತ್ತಾನೆ. ತನ್ನನ್ನೇ ಸರ್ವೋತ್ತಮನನ್ನಾಗಿ ತಿಳಿದು ತನ್ನಲ್ಲಿ ಭಕ್ತಿಮಾಡತಕ್ಕವನ ವಿಷಯದಲ್ಲಿ ತಾನು ಪ್ರಸನ್ನನಾಗಿ ಅವನ ಸಂಸಾರಬಂಧನದಿಂದ ಆತನನ್ನು ಬಿಡುಗಡೆಮಾಡುತ್ತೇನೆಂದು ಶ್ರೀಕೃಷ್ಣಪರಮಾತ್ಮನು ಭಗವದ್ಗೀತೆಯಲ್ಲಿಯು ತಿಳಿಸಿದ್ದಾನೆ.

**ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್ ।**
**ಭವಾಮಿ ನ ಚಿರಾತ್ಪಾರ್ಥ ಮಯ್ಯಾವೇಶಿತಚೇತಸಾಮ್ ।**

**।। ಇತಿ ಭಗವದ್ವಚನಮ್ ।।**

**ಅಭಿಪ್ರಾಯ** :- ಭಕ್ತಿಪೂರ್ವಕವಾದ ಶ್ರವಣವೇನು ಮನನವೇನು ಪ್ರತ್ಯಭಕ್ತಿಪೂರ್ವಕವಾದ ಧ್ಯಾನವೇನು ಇವುಗಳ ಮೂಲಕವಾಗಿ ನಿರಂತರದಲ್ಲೂ ನನ್ನಲಿಟ್ಟ ಮನಸ್ಸುಳ್ಳವರಾಗಿ ಯಾವ ಯೋಗ್ಯಚೇತನರು ಇರುತ್ತಾರೋ ಅವರನ್ನು ಈ ದುಃಖಮಯವಾದ ಸಂಸಾರಸಮುದ್ರದಿಂದ ನಾನು ಬೇಗನೇ ಉದ್ಧಾರಮಾಡುತ್ತೇನೆ.

ಈ ಚೇತನ ಮತ್ತು ಅಚೇನಾತ್ಮಕವಾದ ಪ್ರಪಂಚಕ್ಕೆ, ಅದಾದರ ಯೋಗ್ಯತೆಗೆ ತಕ್ಕಂತೆ ಅಂದರೆ ಯಥಾ ಯೋಗ್ಯವಾಗಿ, ಉತ್ಪತ್ತಿಯನ್ನು ಸ್ಥಿತಿಯನ್ನೂ, ನಾಶವನ್ನೂ, ನಿಯಮನವನ್ನೂ, ಜ್ಞಾನವನ್ನೂ, ಅಜ್ಞಾನವನ್ನೂ, ಬಂಧವನ್ನೂ ಮೋಕ್ಷವನ್ನೂ ಯಾರು ಉಂಟುಮಾಡುವರೋ ಅಂತಹ ನಿರವಧಿಕೈಶ್ವರ್ಯ ಸಂಪನ್ನನಾದ ಸರ್ವತಂತ್ರ ಸ್ವತಂತ್ರನಾದ ಪುರುಷನು ಶ್ರೀಹರಿಯು ಎಂಬುದಾಗಿ ಸ್ಕಾಂದ ಪುರಾಣದ ವಚನವು ಹೇಳುತ್ತಲಿದೆ.

ಉತ್ಪತ್ತಿಸ್ಥಿತಿಸಂಹಾರಾ ನಿಯತಿರ್ಜ್ಞಾನಮಾವೃತಿಃ ।
ಬಂಧಮೋಕ್ಷೌ ಚ ಪುರುಷಾದ್ಯಸ್ಮಾತ್ಸಹರಿರೇಕರಾಟ್ ॥

(ಇತಿಸ್ಕಾಂದೇ)

ಮತ್ತೊಂದು ಪ್ರಮಾಣವಚನದಿಂದಲೂ ಮೇಲೆಕಂಡ ಅಭಿಪ್ರಾಯವೇ ಸ್ಪಷ್ಟವಾಗಿ ತಿಳಿದುಬರುತ್ತಿದೆ.

ಅಜ್ಞಾನಾಂ ಜ್ಞಾನದೋ ವಿಷ್ಣುಃ ಜ್ಞಾನಿನಾಂ ಮೋಕ್ಷದಶ್ಚ ಸಃ ।
ಆನಂದದಶ್ಚ ಮುಕ್ತಾನಾಂ ಸ ಏವೈಕೋ ಜನಾರ್ದನಃ ॥ (ಇತಿಚ)

**ಅಭಿಪ್ರಾಯ** :- ಅಜ್ಞಾನಿಗಳಿಗೆ ಜ್ಞಾನವನ್ನು ಅನುಗ್ರಹಿಸುವವನು ವಿಷ್ಣುವು. ಜ್ಞಾನಿಗಳಿಗೆ ಅನಾದಿಯಾದ ಭಾವರೂಪವಾದ ಅವಿದ್ಯೆಯಿಂದ ನಿವೃತ್ತಿಮಾಡತಕ್ಕವನು ಸಹ ಶ್ರೀಹರಿಯು. ಲಿಂಗಭಂಗವೆಂಬ ಮೋಕ್ಷವನ್ನು ಕರುಣಿಸಿದ ಮೇಲೆ ಸ್ವರೂಪಾನಂದಾನುಭವದ ಶಕ್ತಿಯನ್ನು ಕೊಡತಕ್ಕವನೂ ಸಹ ಸ್ವತಂತ್ರನಾದ ಆ ಜನಾರ್ದನನೇ ಹೊರತು ಬೇರೆಯವರು ಸ್ವತಂತ್ರರು ಯಾರೂ ಇರುವುದಿಲ್ಲ.

ಪರಬ್ರಹ್ಮನೆನಿಸಿದ ವಿಷ್ಣುವೇನೇ ಈ ಭವಪಾಶದಿಂದ ಬಂಧಕನೂ ಆಗಿದ್ದಾನೆ. ಇದರಿಂದ ಮೋಚಕನೂ ಆಗಿದ್ದಾನೆ. ಭವಪಾಶದಿಂದ ಬಿಡುಗಡೆಮಾಡಿದ ಮೇಲೆ ಅಂದರೆ ಲಿಂಗಭಂಗವನ್ನುಂಟುಮಾಡಿದ ತರುವಾಯ ನಿತ್ಯಸಿದ್ಧವಾದ ಯೋಗ್ಯಜೀವದ ಸ್ವರೂಪವು ಆನಂದರೂಪವೇ ಆಗಿದ್ದಾಗ್ಯೂ ಸಹ ಅಂತಹ ಸ್ವರೂಪಭೂತವಾದ ಆನಂದದ ಅನುಭವದ ಶಕ್ತಿಯನ್ನು ಕರುಣಿಸುವ ಮಹಾನುಭಾವನೂ ಸಹ ವಿಷ್ಣುವೇ ಆಗಿದ್ದಾನೆ. ಇದರಲ್ಲಿ ಯಾವ ಸಂದೇಹವೂ ಇಲ್ಲವೆಂಬ ಮತ್ತೊಂದು ಪ್ರಮಾಣವಚನವೂ ಅತ್ಯಂತಸ್ಪಷ್ಟವಾಗಿ ಶ್ರೀಹರಿಯ ಹಿರಿಮೆಯನ್ನು ಪ್ರತಿಪಾದಿಸುತ್ತಲಿದೆ. ಆ ವಚನವು ಈ ರೀತಿ ಇದೆ.

ಬಂಧಕೋ ಭವಪಾಶೇನ ಭವಪಾಶಾಚ್ಚ ಮೋಚಕಃ ।
ಕೈವಲ್ಯದಃ ಪರಂ ಬ್ರಹ್ಮ ವಿಷ್ಣುರೇವ ನ ಸಂಶಯಃ ॥ ॥ ಇತಿಚ ॥

ಪರಮಾತ್ಮನು ಸುಪ್ರೀತನಾಗದಿದ್ದರೆ ಅವನ ಅನುಗ್ರಹರೂಪವಾದ ಪ್ರಸಾದವು ಉಂಟಾಗುವಂತಿಲ್ಲ. ಅದಿಲ್ಲದೇ ಇದ್ದರೆ ಸಂಸಾರದಿಂದ ಬಿಡುಗಡೆಯು ಇಲ್ಲ. ಸ್ವರೂಪಭೂತವಾದ ಆನಂದದ ಅನುಭವಶಕ್ತಿಯು ಸಹ ದೊರೆಯಲಾರದು. ಲಿಂಗಭಂಗಪೂರ್ವಕವಾದ ಆನಂದಾನುಭವಶಕ್ತಿಯನ್ನು ಅವನು ಕೊಡಬೇಕಾದರೆ ಮುಖ್ಯವಾಗಿ ಆ ಪರಮಾತ್ಮನ ಪ್ರೀತಿಯು ವ್ಯಕ್ತವಾಗಬೇಕು. ಅಂತಹ ಪ್ರೀತಿಗೆ ಕಾರಣವು ಆತನ ಗುಣೋತ್ಕರ್ಷಜ್ಞಾನವು. ಯಾರು ತನ್ನ (ಪರಮಾತ್ಮನ) ಗುಣೋತ್ಕರ್ಷಜ್ಞಾನವುಳ್ಳವನೋ ಅವನ ವಿಷಯದಲ್ಲಿ ಮಾತ್ರ ಪರಮಾತ್ಮನ ಪ್ರೀತಿಯು ವ್ಯಕ್ತವಾಗುತ್ತದೆ. ಅಭೇದಜ್ಞಾನದಿಂದ ಪ್ರೀತಿಯು ಎಂದೆಂದಿಗೂ ಆಗುವಂತಿಲ್ಲ. ಲೌಕಿಕವ್ಯವಹಾರದಲ್ಲಿ ಇದು ಸುಪ್ರಸಿದ್ಧವಾದ ವಿಚಾರವೇ ಆಗಿದೆ. ರಾಜನಾದ ಪ್ರಭುವನ್ನು ಪ್ರಶಂಸೆಮಾಡಿದರೆ ಅಪೇಕ್ಷಿಸಿದುದನ್ನು ಕೊಡುತ್ತಾನೆ. ಅದನ್ನು ಬಿಟ್ಟು ''ನಾನೇ ರಾಜ'' ಎಂದು ತನಗೂ ರಾಜನಿಗೂ ಅಭೇದವನ್ನೂ ಪ್ರತಿಪಾದಿಸಿದರೆ ಕೋಪಗೊಂಡ ರಾಜನು ಆ ರೀತಿ ಹೇಳತಕ್ಕವನಿಗೆ ಜೈಲುವಾಸವನ್ನು ವಿಧಿಸುತ್ತಾನೆ. ಅಭೇದ ಚಿಂತನೆಯು ಮಹಾಪರಾಧಗಳಲ್ಲೊಂದಾಗಿದೆ. ನವವಿಧ ದ್ವೇಷಗಳಲ್ಲಿ ಅಭೇದಚಿಂತನೆಯಂತೂ ಅತಿಪ್ರಬಲವಾದ ನಿತ್ಯನರಕಕ್ಕೆ ಕಾರಣವಾದ ದ್ವೇಷರೂಪವಾದ ದೋಷವಾಗಿದೆ.

ಆದರಿಂದ ಪ್ರಕೃತದಲ್ಲೂ ಸಹ ಪರಮಾತ್ಮನ ಪ್ರೀತಿಯು ನಮ್ಮ ವಿಷಯದಲ್ಲಿ ಆಗಬೇಕಾದರೆ ನಾವು ಆ ಸರ್ವೋತ್ತಮನ ಗುಣೋತ್ಕರ್ಷದ ಜ್ಞಾನವುಳ್ಳವರಾಗಬೇಕು. ಪರಮಾತ್ಮನ ಗುಣೋತ್ಕರ್ಷಜ್ಞಾನದಿಂದಲೇ ಪ್ರೀತಿ. ಅವನು ಸುಪ್ರೀತನಾದರೇನೇ ಮೋಕ್ಷವು. ಆದುದರಿಂದ ಸಕಲವೇದಗಳೂ ಪರಮಾತ್ಮನ ಗುಣೋತ್ಕರ್ಷವನ್ನೇ ಪ್ರಧಾನ ಪರಮಮುಖ್ಯವೃತ್ತಿಯಿಂದ ತಿಳಿಸುತ್ತಲಿರುವ ವಿಚಾರವನ್ನು ಸೌಪರ್ಣಶ್ರುತಿ ವಚನವು ಬಹಳ ರಂಜಕವಾಗಿ ತಿಳಿಸುತ್ತಲಿದೆ.

**"ತಾದೃಶೀ ಪ್ರೀತಿರೀಶಸ್ಯ ವಿಷ್ಣೋಃ ಗುಣೋತ್ಕರ್ಷಜ್ಞಾನತಃ ।**
**ಯಾದೃಶೀ ಸ್ಯಾತ್ । ತತ್ಪ್ರೀಣನಾನ್ಮೋಕ್ಷಮಾಪ್ನೋತಿ ಸರ್ವಗ**
**ತತೋ ವೇದಾಸ್ತತ್ಪರಾಃ ಸರ್ವ ಏವ ।। ಇತಿ ಸೌಪರ್ಣಶ್ರುತಿಃ ।।**

**ಅಭಿಪ್ರಾಯ** :- ಪರಮಾತ್ಮನ ಗುಣೋತ್ಕರ್ಷವನ್ನು ತಿಳಿದವನಲ್ಲಿ ಪರಮಾತ್ಮನು ಹೆಚ್ಚು ಪ್ರೀತಿಯುಳ್ಳವನಾಗುತ್ತಾನೆ. ಬೇರೆಯವನಲ್ಲಿ ಪ್ರೀತಿಯುಳ್ಳವನಾಗುವುದಿಲ್ಲ. ಆದಕಾರಣ ಪರಮಾತ್ಮನ ಪ್ರೀತಿಗಾಗಿ ಅವನಗುಣಗಳನ್ನು ತಿಳಿಸುವುದಕ್ಕಾಗಿಯೇ ಸಕಲವೇದಗಳೂ ಮೀಸಲಾಗಿರುತ್ತವೆ.

ಸಕಲ ವೇದಗಳೂ ಕೂಡ ಯೋಗ್ಯ ಜೀವರ ಮೋಕ್ಷದ ಉದ್ದೇಶದಿಂದಲೇ ಕೂಡಿರುವ ಪ್ರಯುಕ್ತ ಇದಕ್ಕೆ ಸಾಧಕವಾದ ಪ್ರೀತಿಗಾಗಿ ಗುಣೋತ್ಕರ್ಷದ ಜ್ಞಾನಕ್ಕಾಗಿಯೇ ಇರುವಪ್ರಯುಕ್ತ ಅಂತಹ ಗುಣೋತ್ಕರ್ಷದಲ್ಲಿಯೇ ವೇದಗಳಿಗೆ ಮಹಾತಾತ್ಪರ್ಯವೆಂಬುದು ನಿರ್ವಿವಾದವಾದ ವಿಚಾರವಾಗಿದೆ.

ಗುಣೋತ್ಕರ್ಷದ ಜ್ಞಾನದಿಂದಲೇ ತನಗೆ (ಪರಮಾತ್ಮನಿಗೆ) ಅತಿಯಾದ ಪ್ರೀತಿಯೆಂಬುದನ್ನು ಸ್ವಯಂ ಭಗವಂತನೇ ಭಗವದ್ಗೀತೆಯಲ್ಲಿ ಹೇಳಿರುತ್ತಾನೆ.

ಆ ವಾಕ್ಯವು ಈ ರೀತಿ ಇದೆ.

**ಯೋ ಮಾಮೇವಮಸಂಮೂಢೋ ಜಾನಾತಿ ಪುರುಷೋತ್ತಮಮ್ ।**
**ಸ ಸರ್ವವಿದ್ ಭಜತಿ ಮಾಂ ಸರ್ವಭಾವೇನ ಭಾರತ ।। (ಭಗವದ್ಗೀತಾ)**

**ತಾತ್ಪರ್ಯ** :- ಎಲೈ ಅರ್ಜುನನೇ, ಯಾರು ನನ್ನನ್ನು, ಶರೀರನಾಶವನ್ನುಳ್ಳವರಾದ ಕ್ಷರಚೇತನರಿಗಿಂತಲೂ, ಶರೀರನಾಶರಹಿತಳಾದ ಅಕ್ಷರಚೇತನಳೆಂದೆನಿಸಿದ ರಮಾದೇವಿಗಿಂತಲೂ ಉತ್ತಮನಾದುದರಿಂದ, ಪುರುಷೋತ್ತಮನೆಂದು, ಸಕಲವೇದಗಳಲ್ಲಿಯೂ, ತದನುಸಾರಿಗಳಾದ ಸ್ಮೃತಿಗಳಲ್ಲಿಯೂ ಪ್ರಸಿದ್ಧನೆಂದು ಬೇರೆವಿಧವಾದ ಯಾವುದೇ ಬಗೆಯಾದ ಸಂದೇಹಕ್ಕಾಗಲಿ ಭ್ರಾಂತಿಗಾಗಲಿ ಒಳಗಾಗದೆ ಮಿಥ್ಯಾಜ್ಞಾನರಹಿತನಾಗಿ ತಿಳಿಯುತ್ತಾನೆಯೋ ಅವನು ಈ ರೀತಿಯಾದ ಶ್ರೀಹರಿಯ ಸರ್ವೋತ್ತಮತ್ವವೇ ಸರ್ವಶಾಸ್ತ್ರಾರ್ಥಗಳ ಸಾರತಮವಾದ ಪ್ರಮೇಯವೆಂದು ತಿಳಿದವನಾಗಿ ನನ್ನನ್ನು ಎಲ್ಲಬಗೆಯಿಂದಲೂ ಭಜಿಸುತ್ತಾನೆ, ಸೇವಿಸುತ್ತಾನೆ ಎಂದು ಶ್ರೀಕೃಷ್ಣಪರಮಾತ್ಮನ ವಾಕ್ಯದ ಅಭಿಪ್ರಾಯ. ಆದುದರಿಂದ ವಿಷ್ಣುವಿನ ಗುಣೋತ್ಕರ್ಷದಲ್ಲಿಯೇ ಸಕಲಶ್ರುತಿಗಳಿಗೂ ಮಹಾತಾತ್ಪರ್ಯವೆಂಬುದರಲ್ಲಿ ಯಾವ ಸಂದೇಹವೂ ಇಲ್ಲ.

ಇಲ್ಲಿಗೆ ಶ್ರೀಮದ್ರಾಘವೇಂದ್ರಗುರುಸಾರ್ವಭೌಮರವರಿಂದ ರಚಿತವಾಗಿರುವ ತಂತ್ರದೀಪಿಕೆಯ ಜಿಜ್ಞಾಸಾಧಿಕರಣದಲ್ಲಿನ ವಾಕ್ಯಗಳ ಸಾಮಾನ್ಯವಾದ ಮತ್ತು ವಿಶೇಷವಾದ ಅರ್ಥದ ನಿರೂಪಣೆಯು ಸಮಾಪ್ತವಾಯಿತು. ಜಿಜ್ಞಾಸಾಧಿಕರಣದ ಅರ್ಥವಿವರಣೆಯ ನಿಮಿತ್ತದಿಂದ ಮುಮುಕ್ಷುಗಳಾದ ಯೋಗ್ಯಚೇತನರಿಗೆ ಅತಿಮುಖ್ಯವಾಗಿ ಯಾವ ಸಂದೇಹವಾಗಲಿ,ಭ್ರಾಂತಿಯಾಗಲಿ ಉಂಟಾಗದಂತೆ ಅತಿದೃಢವಾಗಿ "ಶ್ರೀಹರಿಯ ಸರ್ವೋತ್ತಮತ್ವದ" ನಿಶ್ಚಯವು ಅತ್ಯಾವಶ್ಯಕವಾಗಿ ಆಗಬೇಕೆಂಬ ದೃಷ್ಟಿಯಿಂದ ನಾವು ಕೆಲವು ಪ್ರಮಾಣಗಳನ್ನು ಉದಾಹರಿಸಿ, ಶ್ರೀಮದಾನಂದತೀರ್ಥ

ಭಾಷ್ಯಕಾರರು ನಿರ್ಣಯಿಸಿರುವ, ತೋರಿಸಿರುವ ಕ್ರಮವನ್ನು ಅನುಸರಿಸಿ ಪ್ರತಿಪಾದಿಸುತ್ತೇವೆ. ಈ ನಿರೂಪಣೆಯಿಂದ ಮುಕ್ತಿಯೋಗ್ಯರಾದ ಗುಣಪಕ್ಷಪಾತಿಗಳಾದ ಸಜ್ಜನರು ಅತಿದೃಢವಾಗಿ "ಶ್ರೀಹರಿಯ ಸರ್ವೋತ್ತಮತ್ವದ" ನಿಶ್ಚಯವುಳ್ಳವರಾಗಿ ಶ್ರೀಹರಿವಾಯುಗಳ ಪರಮಾನುಗ್ರಹಕ್ಕೆ ಪಾತ್ರರಾಗಲೆಂದು ಹಾರೈಸುತ್ತೇವೆ. ಇನ್ನು ಮುಂದೆ ಶ್ರೀಹರಿಯ ಸರ್ವೋತ್ತಮತ್ವಕ್ಕೆ ಪ್ರತಿಪಾದಕವಾದ ಸಾಧಕವಾದ, ನಿತ್ಯವೂ ದೇವರಪೂಜಾಪ್ರಾರಂಭದಲ್ಲಿ ಹಿರಿಯರು, ಸಂಪ್ರದಾಯಪ್ರವರ್ತಕರು ಪಠಿಸುತ್ತಿರುವ "ಬ್ರಹ್ಮಪಾರಸ್ತೋತ್ರ" ವನ್ನು ಅರ್ಥಸಹಿತವಾಗಿ ನಿರೂಪಿಸುತ್ತೇವೆ. ಅದಕ್ಕೆ ಮುಂಚೆ ಆ ಸ್ತೋತ್ರದ ಹಿನ್ನೆಲೆಯಾಗಿರುವ ಕಂಡು ಮಹರ್ಷಿಗಳ ವಿಚಾರವನ್ನು ತಿಳಿಸಿ ಮುಂದುವರಿಸುತ್ತೇವೆ.

ಈ ಬ್ರಹ್ಮಪಾರಸ್ತೋತ್ರವು "ಏತದ್ವಿಷ್ಣುಪುರಾಣಂ ವೈ ಸರ್ವಶಾಸ್ತ್ರಾರ್ಥ ಸಂಗ್ರಹಂ" ಎಂದು ಹೇಳಿರುವಂತೆ, ಪರಾಶರ ಮತ್ತು ಮೈತ್ರೇಯರ ಸಂವಾದ ರೂಪವಾಗಿರುವ ಶ್ರೀಮದ್ವಿಷ್ಣುಪುರಾಣದ ಒಂದನೇ ಅಂಶದ ಹದಿನೈದನೆಯ ಅಧ್ಯಾಯದಲ್ಲಿ ಪ್ರಚೇತಸ ಮತ್ತು ಸೋಮರ ಪ್ರಶ್ನೋತ್ತರ ರೂಪವಾಗಿ ಐವತ್ತ ನಾಲ್ಕನೇ ಶ್ಲೋಕದಿಂದ ಐವತ್ತೊಂಭತ್ತರ ಶ್ಲೋಕದ ಪೂರ್ತಿಯಾಗಿ ನಿರೂಪಿಸಲ್ಪಟ್ಟಿದೆ. ಶ್ರೀಮದ್ವಿಷ್ಣುಪುರಾಣಕ್ಕೆ ಅದ್ವೈತಮತಾನುಸಾರಿಗಳಾದ "ಚಿತ್ಸುಖೀಯ" ಎಂಬ ವ್ಯಾಖ್ಯಾನವೂ, ಶ್ರೀಧರೀಯ ಎಂಬ ವ್ಯಾಖ್ಯಾನವೂ, ರತ್ನಗರ್ಭೀಯ ಎಂಬ ವ್ಯಾಖ್ಯಾನವೂ ಒಟ್ಟು ಮೂರು ವ್ಯಾಖ್ಯಾನಗಳು ಪ್ರಸಿದ್ಧವಾಗಿವೆ. ವಿಶಿಷ್ಟಾದ್ವೈತಮತಾನುಸಾರಿಯಾದ "ವಿಷ್ಣುಚಿತ್ತೀಯ" ಎಂಬ ವ್ಯಾಖ್ಯಾನವೂ ಪ್ರಕಟವಾಗಿದೆ. "ದತ್ತಾತ್ರೇಯೀಯ" ಎಂಬ ವ್ಯಾಖ್ಯಾನವು ಶ್ರೀಮನ್ಮಧ್ವಮತಾವಲಂಬಿಗಳಾದ ದತ್ತಾತ್ರೇಯಾಚಾರ್ಯರಿಂದ ವಿರಚಿತವಾಗಿ "ಸುಬೋಧಿನೀ" ಎಂಬ ಹೆಸರಿನಿಂದ ಪ್ರಕಟವಾಗಿದೆ.

ಈ ದತ್ತಾತ್ರೇಯಾಚಾರ್ಯರ ವಿಚಾರವಾಗಿ ಹೆಚ್ಚಿಗೆ ಏನೂ ತಿಳಿದು ಬಂದಿಲ್ಲ. ಆದರೆ ಇವರು ಶ್ರೀವಿಷ್ಣು ಪುರಾಣಕ್ಕೆ ರಚಿಸಿರುವ "ಸುಬೋಧಿನೀ" ಎಂಬ ವ್ಯಾಖ್ಯಾನದ ಪ್ರಾರಂಭದಲ್ಲಿ ಸರ್ವೋತ್ತಮನಾದ ಮುಕುಂದನ ನಮಸ್ಕಾರವನ್ನು ಮಾಡಿದ್ದಾರೆ. ಅನಂತರದಲ್ಲಿ ಶ್ರೀಮನ್ಮಧ್ವಾಚಾರ್ಯರಿಗೂ, ತರುವಾಯ ಶ್ರೀಮಟ್ಟೀಕಾಚಾರ್ಯರಿಗೂ ನಮಸ್ಕಾರಗಳನ್ನು ಆಚರಿಸಿ ವ್ಯಾಖ್ಯಾನಭಾಗವನ್ನು ಪ್ರಾರಂಭಿಸಿರುತ್ತಾರೆ.ಪ್ರಾಯಃ ಇವರು ಶ್ರೀಮಜ್ಜಯತೀರ್ಥರ ಸಮಯದ ಅನಂತರದಲ್ಲಿದ್ದವರೆಂದು ಹೇಳಬಹುದಾಗಿದೆ. ಸುಬೋಧಿನೀ ವ್ಯಾಖ್ಯಾನದ ಮಂಗಳಪದ್ಯಗಳು ಬಹಳ ರಮಣೀಯವಾಗಿದೆ. ಅವು ಈ ರೀತಿ ಇವೆ.

> **ಶ್ರೀಯಃಪತಿಂ ಪೂರ್ಣಗುಣೈಕಸಾರಂ ಭಕ್ತೇಷ್ಟದಂ ಭಕ್ತಭಯಾಪಹಂ ಪ್ರಭುಂ ।**
> **ಅಜಾದಿಸಂಸೇವಿತಪಾದಪಲ್ಲವಂ ವಂದೇ ಮುಕುಂದಂ ಮರುದಂತವಲ್ಲಭಮ್ ॥ ೧ ॥**
> **ಸುಜನಾಂಭೋರುಹಕೋರಕಾಣಾಂ ಯದುಕ್ತಯೋ ಭಾನುಕರಾ ವಿಕಾಸೇ ।**
> **ತಂ ಪೂರ್ಣಬೋಧಂ ಭುವನೈಕಬಂಧುಂ ವಂದೇ ಗುರುಂ ಬುದ್ಧಿವಿಕಾಸನಾಯ ॥ ೨ ॥**
> **ಅದ್ವೈತಸಿದ್ಧಾಂತಗಜಪ್ರಮಾಥೀ ಮಧ್ವಾರ್ಯಸಿದ್ಧಾಂತಮಹೀಧ್ರವಾಸೀ ।**
> **ವೇದಾಂತನಿರ್ಣೀತಗುಣಾನುವಾದಸಿಂಹಧ್ವನಿಃ ಪಾತು ಜಯಾರ್ಯಸಿಂಹಃ ॥ ೩ ॥**
> **ರಮಾರಮಣಮಾನಮ್ಯ ಪೂರ್ಣಬೋಧಾನ್ ಗುರೂನಪಿ ।**
> **ವ್ಯಾಖ್ಯಾಂ ವಿಷ್ಣುಪುರಾಣಸ್ಯ ಯಥಾಮತಿ ಕರೋಮ್ಯಹಮ್ ॥ ೪ ॥**

ಇಹ ಖಲು ಜಗತಿ, ನಾನಾವಿಧವ್ಯಸನಸಾಗರನಿಮಗ್ನಜನಾನುಕಂಪಯಾ ಬ್ರಹ್ಮರುದ್ರೇಂದ್ರಾದಿಭಿರರ್ಥಿತೋ ನಾರಾಯಣಃ ಸ್ವಯಂ ವ್ಯಾಸಸ್ಸೇನಾವತೀರ್ಯ ಅಶೇಷಾನಿಷ್ಟಪ್ರಾಪ್ತಿಪರಿಹಾರೋಪಾಯಮುಪದಿಶನ್ ತದುಪಾಯ ಪ್ರದರ್ಶನಾರ್ಥಂ ಶ್ರೀವಿಷ್ಣುಪುರಾಣಂ ಚಕಾರ ॥ ಇತ್ಯಾದಿನಾ ॥

ಶ್ರೀ

ಶ್ರೀಮನ್ಮೂಲರಾಮೋವಿಜಯತೇ

ಶ್ರೀಮದ್ರಾಘವೇಂದ್ರಗುರುಸಾರ್ವಭೌಮೋ ವಿಜಯತೇ

# ಶ್ರೀವಿಷ್ಣುಪುರಾಣೋಕ್ತವಾದ ಶ್ರೀಹರಿಸರ್ವೋತ್ತಮತ್ವಪ್ರತಿಪಾದಕವಾದ
# ಶ್ರೀ ಬ್ರಹ್ಮಪಾರಸ್ತೋತ್ರವು

*

ಶ್ರೀದತ್ತಾತ್ರೇಯಾಚಾರ್ಯರಿಂದ ವಿರಚಿತವಾದ

ಶ್ರೀಸುಬೋಧಿನೀವ್ಯಾಖ್ಯಾನದಿಂದವಿಜೃಂಭಿತವಾದುದು

*


ಕನ್ನಡಭಾಷಾನುವಾದಕರು ಮತ್ತು ಲೇಖಕರು:

**ಪಂಡಿತರಾದ ಮಾಗಡಿರಂಗನಾಥಾಚಾರ್ಯರು,**

ಕೇಂದ್ರ ಮತ್ತು ರಾಜ್ಯಪ್ರಶಸ್ತಿ ವಿಜೇತರು, ಅಧ್ಯಾಪಕಾಧ್ಯಾಪಕರು, ಶ್ರೀ ಗುರುಸಾರ್ವಭೌಮಸಂಸ್ಕೃತವಿದ್ಯಾಪೀಠ

ಶ್ರೀ ಗುರುಸಾರ್ವಭೌಮ ಪತ್ರಿಕಾ ಸಂಪಾದಕರು, ಮಂತ್ರಾಲಯಕ್ಷೇತ್ರ

ಶ್ರೀ ಹರಿಸರ್ವೋತ್ತಮತ್ವಕ್ಕೆ ಪರಿಪೋಷಕಗಳಾದ ಮತ್ತು ಸಾಕ್ಷಾತ್ತಾಗಿ ಶ್ರೀವಿಷ್ಣುವಿನ ಹಿರಿಮೆಯನ್ನು ಪ್ರಶಂಸೆಮಾಡುತ್ತಲಿರುವ ಪ್ರಮಾಣಗಳಲ್ಲಿ ಕೆಲವನ್ನು ಮಾತ್ರ ಇದುವರೆವಿಗೆ ವಾಚಕವೃಂದದ ಅವಗಾಹನೆಗಾಗಿ ಬರೆದಿರುತ್ತೇವೆ. ಪ್ರಕೃತದಲ್ಲಿ ಮುಕ್ತಿಯೋಗ್ಯರಾದ ಅಧಿಕಾರಿವರ್ಗದವರು ನಿತ್ಯವೂ ತಾವು ಆಚರಿಸುವ ದೇವತಾಪೂಜೆಯ ಕಾಲದಲ್ಲಿ ಸಂಪ್ರದಾಯಬದ್ಧರಾಗಿ ಯಾವ ಸ್ತೋತ್ರವನ್ನು ಪಠಿಸುತ್ತಾರೆಯೋ ಮತ್ತು ಯಾವ ಸ್ತೋತ್ರವನ್ನು ಜಪಿಸುತ್ತಾ ಶ್ರೀಹರಿಯನ್ನು ಕುರಿತು ಧ್ಯಾನಮಾಡುತ್ತಾ ಇದ್ದು ಆ ಸರ್ವೋತ್ತಮನಾದ ಶ್ರೀವಿಷ್ಣುವಿನ ಅನುಗ್ರಹ ವಿಶೇಷದಿಂದ ಕಂಡು ಮುನಿಯು ಪರಮಸಿದ್ಧಿಯನ್ನು ಪಡೆದು ಕೃತಕೃತ್ಯನಾದನೋ ಅಂತಹ ಪರಮಪವಿತ್ರವಾದ ಸಿದ್ಧಿ ಪ್ರದವಾದ ಶ್ರೀಹರಿಗೆ ಪ್ರೀತಿಕರವಾದ ಶ್ರೀಬ್ರಹ್ಮಪಾರಸ್ತೋತ್ರವನ್ನು ಮುಂದೆ ಅರ್ಥಸಹಿತವಾಗಿ ನಿರೂಪಿಸುತ್ತೇವೆ.

**ಹಿನ್ನೆಲೆ** :- ಈ ಬ್ರಹ್ಮಪಾರಸ್ತೋತ್ರವು ಹದಿನೆಂಟು ಸಂಖ್ಯೆಯ ಮಹಾಪುರಾಣಗಳಲ್ಲಿ ಪರಿಗಣಿತವಾಗಿರುವ ಶ್ರೀ ವಿಷ್ಣುವಿನ ಅಪಾರವಾದ ಮಹಿಮೆಗೆ ಆದರ್ಶಪ್ರಾಯವಾದ ಸಾತ್ವಿಕಪುರಾಣವರ್ಗಕ್ಕೆ ಸೇರಿದ ಶ್ರೀಮದ್ವಿಷ್ಣುಪುರಾಣದಲ್ಲಿ ಪರಾಶರ ಮತ್ತು ಮೈತ್ರೇಯರ ಸಂವಾದದಲ್ಲಿ ಪ್ರಸ್ತುತವಾದ ಪ್ರಚೇತಸರ ಮತ್ತು ಸೋಮ ಇವರ ಸಂವಾದದ ಪ್ರಸಂಗದಲ್ಲಿ ಉದಾಹರಿಸಲ್ಪಟ್ಟಿದೆ. ಇದನ್ನು ಅರ್ಥಸಹಿತವಾಗಿ ವಿವರಿಸುವುದಕ್ಕೆ ಮುಂಚಿತವಾಗಿ ಪುರಾಣಗಳ ಸ್ಥೂಲ ಪರಿಚಯಕ್ಕಾಗಿ ಮಹಾಪುರಾಣಗಳು ಉಪಪುರಾಣಗಳು ಇವುಗಳಲ್ಲಿ ಶ್ರೀಮದ್ವಿಷ್ಣುಪುರಾಣದ ಸ್ಥಾನ ಅದರ ಮಹಿಮಾತಿಶಯ ಇವುಗಳನ್ನು ನಿರೂಪಿಸಿ ಮುಂದುವರಿಯುತ್ತೇವೆ.

ಪುರಾಣಂ = ಪುರಾತನವಾದದ್ದು ಹಿಂದಿನ ಕಾಲಕ್ಕೆ ಸಂಬಂಧಿಸಿದ್ದು ಪುರಾಭವಂ ಪುರಾಣಂ, (ಪುರಾ ನೀಯತ ಇತಿ ಪುರಾಣಂ (ನಪ್ಪುಣತ್ವಂ) ಇದರ ಲಕ್ಷಣ ಸರ್ಗ - ಪ್ರತಿಸರ್ಗ - ವಂಶ ಮನ್ವಂತರ ವಂಶಾನುಚರಿತ ಎಂಬ ಇವು ಐದು ಸಾಮಾನ್ಯವಾಗಿ ಪುರಾಣದ ಲಕ್ಷಣವಾಗಿವೆ. ಪುರಾಣಗಳಲ್ಲಿ ಮಹಾಪುರಾಣವೆಂದೂ ಉಪಪುರಾಣಗಳೆಂದೂ ಪ್ರಸಿದ್ಧವಾಗಿವೆ. ಮಹಾಪುರಾಣಗಳು ಹದಿನೆಂಟು ಉಪಪುರಾಣಗಳೂ ಹದಿನೆಂಟು ಇವು ಸಾತ್ವಿಕಪುರಾಣಗಳೆಂದೂ ರಾಜಸ ಪುರಾಣಗಳೆಂದೂ ತಾಮಸಪುರಾಣಗಳೆಂದೂ ವಿಭಾಗಿಸಲ್ಪಟ್ಟಿವೆ ಇವುಗಳ ವಿವರವಾದ ವಿಭಾಗಗಳನ್ನು ಸಾತ್ವಿಕ, ರಾಜಸ, ತಾಮಸ ಪ್ರಭೇದಗಳನ್ನು ಮುಂದೆ ಉದಾಹರಿಸಲಾಗಿದೆ.

ವಿದ್ಯಾಸ್ಥಾನಗಳಲ್ಲಿ ಹದಿನೆಂಟು ಪುರಾಣವೂ ಪರಿಗಣಿತವಾಗಿದೆ. ಅಷ್ಟಾದಶವಿದ್ಯಾಸ್ಥಾನಾನಿ -

> **ಅಂಗಾನಿ ವೇದಾಶ್ಚತ್ವಾರೋ ಮೀಮಾಂಸಾ ನ್ಯಾಯವಿಸ್ತರಃ।**
> **ಧರ್ಮಶಾಸ್ತ್ರಂ ಪುರಾಣಂ ಚ ವಿದ್ಯಾಹ್ಯೇತಾಶ್ಚತುರ್ದಶ॥**
> **ಆಯುರ್ವೇದೋ ಧನುರ್ವೇದೋ ಗಾಂಧರ್ವಶ್ಚೇತಿ ತೇ ತ್ರಯಃ।**
> **ಅರ್ಥಶಾಸ್ತ್ರಂ ಚತುರ್ಥಂ ತು ವಿದ್ಯಾಹ್ಯಷ್ಟಾದಶೈವ ತು॥ (ಹೇಮಾದ್ರಿ)**

ಪುರಾಣಗಳ ಸಾಮಾನ್ಯಲಕ್ಷಣ -

> **ಸರ್ಗಶ್ಚ ಪ್ರತಿಸರ್ಗಶ್ಚ ವಂಶೋ ಮನ್ವಂತರಾಣಿ ಚ।**
> **ವಂಶಾನುಚರಿತಂ ಚೈವ ಪುರಾಣಂ ಪಂಚಲಕ್ಷಣಂ॥**

ಶ್ರೀಮದ್ಭಾಗವತಮಹಾಪುರಾಣದಲ್ಲಿನ ಎರಡನೇ ಸ್ಕಂಧದಲ್ಲಿ ಹತ್ತುಲಕ್ಷಣಗಳನ್ನು ಹೇಳಲಾಗಿದೆ.

ಶ್ರೀಮದ್ಭಾಗವತ ಎರಡನೇ ಸ್ಕಂಧ ಹತ್ತನೆಯ ಅಧ್ಯಾಯ ಶ್ಲೋಕ ೧ ರಿಂದ ೭ ಪೂರ್ತಿಯಾಗಿ ಸರ್ಗಾದಿಗಳ ಲಕ್ಷಣಗಳು ನಿರೂಪಿಸಲ್ಪಟ್ಟಿವೆ.

ಶ್ರೀ ಶುಕ ಉವಾಚ

**ಅತ್ರ ಸರ್ಗೋ ವಿಸರ್ಗಶ್ಚ ಸ್ಥಾನಂ ಪೋಷಣಮೂತಯಃ।**
**ಮನ್ವಂತರೇಶಾನುಕಥಾ ನಿರೋಧೋ ಮುಕ್ತಿರಾಶ್ರಯಃ॥**

ಅಂದರೆ - ೧) ಸರ್ಗ ೨) ವಿಸರ್ಗ ೩) ಸ್ಥಾನಂ ೪) ಪೋಷಣಂ ೫) ಊತಿಗಳು ೬) ಮನ್ವಂತರ ೭) ಈಶಾನುಕಥಾ ೮) ನಿರೋಧ ೯) ಮುಕ್ತಿ ೧೦) ಆಶ್ರಯ ಇವು ಹತ್ತು ಲಕ್ಷಣಗಳು ಶ್ರೀಮದ್ಭಾಗವತದಲ್ಲಿ ಉಕ್ತವಾಗಿವೆ.

೧) ಸರ್ಗ। - ಭೂತ ಮಾತ್ರೇಂದ್ರಿಯಧಿಯಾಂ ಜನ್ಮ ಸರ್ಗ ಉದಾಹೃತಃ ಇವುಗಳಲ್ಲಿ ಮೊದಲನೆಯದಾದ ಸರ್ಗದ ಲಕ್ಷಣ -

ಸೃಷ್ಟಿಕಾಲದಲ್ಲಿ ಪರಬ್ರಹ್ಮನಿಂದ ಉಂಟಾದ ಗುಣ ವೈಷಮ್ಯ, ಮಹತ್ತತ್ತ್ವ ಅಹಂಕಾರತತ್ತ್ವ, ಪಂಚತನ್ಮಾತ್ರ, ಪಂಚಮಹಾಭೂತಗಳು, ಶ್ರೋತ್ರಾದಿದಶೇಂದ್ರಿಯಗಳು, ಬುದ್ಧಿಮೊದಲಾದವುಗಳ ಬ್ರಹ್ಮಾಂಡಪರ್ಯಂತವಾದ ಇವುಗಳ ಯಾವ ಜನ್ಮವುಂಟೋ ಅದು ಸರ್ಗ ಎಂದೆನಿಸಿದೆ.

ಅಂದರೆ, ಬ್ರಹ್ಮಾಂಡದ ಹೊರಗಿನ ಸೃಷ್ಟಿ ಸೂಕ್ಷ್ಮವಾದ ಜಡಪ್ರಕೃತಿಯಿಂದ ಸತ್ತ್ವ ರಜಸ್ಸು ತಮಸ್ಸೆಂಬ ಗುಣತ್ರಯಗಳ ವೈಷಮ್ಯ, ಅದರ ಮೂಲಕವಾಗಿ ಆಗಲಿರುವ ಮಹತ್ತತ್ತ್ವ, ಅಹಂಕಾರತತ್ತ್ವ, ಪಂಚತನ್ಮಾತ್ರೆಗಳು ಪಂಚಮಹಾಭೂತಗಳು ಶ್ರೋತ್ರಾದಿ ಹತ್ತು ಇಂದ್ರಿಯಗಳು, ಬುದ್ಧಿವಿಷಯಗಳು ಬ್ರಹ್ಮಾಂಡಪರ್ಯಂತವಾದ ಮೇಲೆ ಕಂಡವುಗಳು ಬ್ರಹ್ಮಾಂಡದ ಹೊರಗಿನ ಪದಾರ್ಥಗಳ ಜನ್ಮವನ್ನು ಸರ್ಗವೆಂದು ಕರೆಯಲಾಗಿದೆ.

೨)ವಿಸರ್ಗದ ಲಕ್ಷಣ - ಬ್ರಹ್ಮಣೋ ಗುಣವೈಷಮ್ಯಾದ್ವಿಸರ್ಗ। ಪೌರುಷಃ ಸ್ಮೃತಃ ಬ್ರಹ್ಮಾಂಡದ ಒಳಗೆ ನಡೆಯುವ ಸೃಷ್ಟಿಯು ಅಂದರೆ ಬ್ರಹ್ಮಾಂಡದ ಒಳಗೆ ಶ್ರೀಹರಿಯ ದೆಸೆಯಿಂದ ಜೀವರ ನಾನಾ ಬಗೆಯಾದ ಜನ್ಮವು ವಿಸರ್ಗವು.

ಪ್ರಮಾಣ - ಮಹದಾದ್ಯಂಡಪರ್ಯಂತಃ ಸರ್ಗ।

ಅಂಡೇ ಬ್ರಹ್ಮಣಸ್ತು ಯ।। ಅನುಸರ್ಗ ಇತಿಪ್ರೋಕ್ತಃ ಪೌರುಷಶ್ಚೇತಿ ಕಥ್ಯತೇ,।। ಪಂಚಭೂತ ಸಮೂಹದಿಂದ ಕೂಡಿದ ಜೀವಸೃಷ್ಟಿಗೆ ಪುರುಷಬ್ರಹ್ಮ ಮೂಲನಾದ ಜೀವನ ಜನನಕ್ಕೆ ವಿಸರ್ಗವೆಂದು ಹೆಸರು.

೩) ಸ್ಥಾನದಲಕ್ಷಣ ಸ್ಥಿತಿರ್ವೈಕುಂಠವಿಜಯ। - ವೈಕುಂಠನಾಮಕನಾದ ಶ್ರೀಹರಿಯ ದುಷ್ಟನಿಗ್ರಹ ಶಿಷ್ಟಾನುಗ್ರಹ ಲಕ್ಷಣವಾದ ವಿಜಯವು (ಸ್ಥಿತಿ) ಸ್ಥಾನವೆಂದೆನಿಸಿದೆ.

೪) ಪೋಷಣಂ - ಆ ವೈಕುಂಠನಾದ ಶ್ರೀಹರಿಯ (ಅನುಗ್ರಹವಿಶೇಷವು) ಪ್ರಸಾದವಿಶೇಷವು ಪೋಷಣವೆಂದು ಕರೆಯಲ್ಪಟ್ಟಿದೆ. ಇದು ಭಾಗವತ್ಭಕ್ತರಿಗೆ ಮಾತ್ರ ಸಂಬಂಧಿಸಿದುದರಿಂದ ಹಿಂದಿನವುಗಳಿಂದಲೂ ಇದು ವಿಶೇಷವಾಗಿದೆ. ಅಂದರೆ ಭಗವಂತನು ಮಾಡುವ ಅನುಗ್ರಹಕ್ಕೆ (ಪ್ರಸಾದಕ್ಕೆ) ಪೋಷಣವೆಂದು ಹೆಸರು.

೫) ಊತಿಗಳು - ಜೀವರ ಕರ್ಮವಾಸನೆಗಳು. ಅನೇಕಬಗೆಗಳಾದ ಸೃಷ್ಟಿಗಳಿಗೆ ಕಾರಣಗಳಾದ ಜೀವರ ನಾನಾ ಬಗೆಗಳಾದ ಅನಾದಿಕರ್ಮಗಳಿಗೂ ಸಂಸ್ಕಾರಗಳಿಗೂ ಊತಿಗಳೆಂದು ಹೆಸರು.

೬) ಮನ್ವಂತರ - ಮನ್ವಂತರಗಳಲ್ಲಿರುವ ಸಜ್ಜನರಿಗೆ ಧಾರಕಗಳಾದ ಧರ್ಮಗಳಿಗೆ ಮನ್ವಂತರಗಳೆಂದು ಹೆಸರು.

೭) ಈಶಾನುಕಥಾ - ಶ್ರೀಹರಿಯ ಮತ್ಸ್ಯಾದಿ ಅವತಾರಗಳ ಚರಿತೆಗಳೂ ಶ್ರೀಹರಿಯಭಕ್ತರಾದ ಬ್ರಹ್ಮಾದಿಗಳ ಚರಿತೆಗಳೂ ನಾನಾಬಗೆಯಾದ ಆಖ್ಯಾನಗಳಿಂದ ಕೂಡಿದ ನಾನಾಬಗೆಗಳಾದ ಇತಿಹಾಸಗಳಿಂದ ಪರಿಪೂರ್ಣವಾದ ಪರಮಾತ್ಮನ ಅವತಾರಕಥೆಗಳಿಗೂ ಪರಮಾತ್ಮನಭಕ್ತರ ಕಥೆಗಳಿಗೂ ಈಶಕಥೆಯೆಂದು ಹೆಸರು. ಪರಮಾತ್ಮನ ಮಹಿಮೆ ಮತ್ತು ಭಗವಂತನ ಭಕ್ತರ ಮಹಿಮೆಯ ಕಥೆಗಳು ಎಂದು ಅಭಿಪ್ರಾಯ.

೮) ನಿರೋಧಕ್ಕೆ ಲಕ್ಷಣ - ಜೀವಸಮುದಾಯದ ಸುಷುಪ್ತಿಗೆ ಅಂದರೆ ಪ್ರಾಜ್ಞ ರೂಪಿಯಾದ ಪರಮಾತ್ಮನ ಪ್ರವೇಶಕ್ಕೆ ನಿರೋಧವೆಂದು ಹೆಸರು.

ಅಭಿವ್ಯಕ್ತವಾಗದ ಸ್ವರೂಪ, ಇಚ್ಛಾ, ಶಕ್ತ್ಯಾದಿಗಳಿಂದ ಕೂಡಿದ ಜೀವನು ಪ್ರಾಜ್ಞರೂಪಿ ಪರಮಾತ್ಮನನ್ನು ಪ್ರವೇಶಿಸಿರುವುದಕ್ಕೆ ಸುಷುಪ್ತಿಯೆಂದು ಕರೆಯುವರು. ಇದನ್ನೇ ಅನುಶಯನವೆಂದೂ ಹೇಳುತ್ತಾರೆ. ಅಂದರೆ ಜೀವರ ಸುಷುಪ್ತಿದಶಾಕ್ಕೆ ನಿರೋಧವೆನ್ನುವರು.

೯) ಮುಕ್ತಿ - ಮುಕ್ತಿರ್ಹಿತ್ವಾನ್ಯಥಾರೂಪಂ ಸ್ವರೂಪೇಣವ್ಯವಸ್ಥಿತಿಃ। ಜೀವನು ಪ್ರಾಕೃತಗಳಾದ ದೇಹೇಂದ್ರಿಯಾದಿಗಳಿಂದ ಬಿಡುಗಡೆಪಡೆದು ಲಿಂಗಭಂಗಾನಂತರದಲ್ಲಿ ತನ್ನ ನಿಜವಾದ ಸ್ವರೂಪದಿಂದಿರುವಿಕೆಗೆ ಮುಕ್ತಿಯೆಂದು ಹೆಸರು

೧೦) ಆಶ್ರಯದಲಕ್ಷಣ - ಆಭಾಸಶ್ಚ ನಿರೋಧಶ್ಚ ಯತಸ್ತತ್ರಯಮೀಯತೇ।
ಸ ಆಶ್ರಯಃ - ಯಾವ ಪರಮಾತ್ಮನ ದೆಶೆಯಿಂದ ಈ ಜಗತ್ತಿಗೆ ಮುಖ್ಯವಾದ ಮತ್ತು ಗೌಣವಾದ ವೃತ್ತಿಯಿಂದ ಸೃಷ್ಟಿಯೋ, ಸ್ಥಿತಿಯೋ, ನಾಶವೋ ಇವೆಲ್ಲಕ್ಕೂ ನಿಮಿತ್ತಕಾರಣನೆಂದು ವೇದಾದಿಗಳಿಂದ ಯಾರು ತಿಳಿಯಲ್ಪಡುತ್ತಾನೋ ಆ ಭಗವಂತನನ್ನು (ಅವನನ್ನು) ಆಶ್ರಯನೆಂದು ಕರೆಯಲಾಗಿದೆ.

ಮೇಲೆ ತಿಳಿಸಿದ ಹತ್ತು ಬಗೆಯಾದವುಗಳ ಸಂಗ್ರಹರೂಪವಾದ ಶ್ರೀಮದ್ಭಾಗವತದ ಶ್ಲೋಕಗಳು ಈ ರೀತಿ ಇವೆ.

**ಶ್ರೀ ಶುಕ ಉವಾಚ - ಅತ್ರಸರ್ಗೋ ವಿಸರ್ಗಶ್ಚ ಸ್ಥಾನಂ ಪೋಷಣಮೂತಯಃ।**
**ಮನ್ವಂತರೇಶಾನುಕಥಾ ನಿರೋಧೋ ಮುಕ್ತಿರಾಶ್ರಯಃ॥**
**ದಶಮಸ್ಯ ವಿಶುದ್ಧ್ಯರ್ಥಂ ನವಾನಾಮಿಹ ಲಕ್ಷಣಂ।**
**ವರ್ಣಯಂತಿ ಮಹಾತ್ಮಾನಃ ಶ್ರುತೇನಾರ್ಥೇನ ಚಾಂಜಸಾ॥**
**ಭೂತಮಾತ್ರೇಂದ್ರಿಯಧಿಯಾಂ ಜನ್ಮಸರ್ಗ ಉದಾಹೃತಃ।**
**ಬ್ರಹ್ಮಣೋ ಗುಣವೈಷಮ್ಯಾದ್ವಿಸರ್ಗಃ ಪೌರುಷಃ ಸ್ಮೃತಃ॥**
**ಸ್ಥಿತಿರ್ವೈಕುಂಠವಿಜಯಃ ಪೋಷಣಂ ತದನುಗ್ರಹಃ।**
**ಮನ್ವಂತರಾಣಿ ಸದ್ಧರ್ಮಾಃ ಊತಯಃ ಕರ್ಮವಾಸನಾಃ॥**
**ಅವತಾರಾನುಚರಿತಂ ಹರೇಶ್ಚಾಸ್ಯಾನುವರ್ತಿನಾಮ್।**
**ಪುಂಸಾಮೀಶಕಥಾಃ ಪ್ರೋಕ್ತಾಃ ನಾನಾಖ್ಯಾನೋಪಬೃಂಹಿತಾಃ॥**
**ನಿರೋಧೋಽಸ್ಯಾನುಶಯನಂ ಆತ್ಮನಃ ಸಹ ಶಕ್ತಿಭಿಃ।**
**ಮುಕ್ತಿರ್ಹಿತ್ವಾನ್ಯಥಾರೂಪಂ ಸ್ವರೂಪೇಣ ವ್ಯವಸ್ಥಿತಿಃ॥**

ಆಭಾಸಶ್ಚ ನಿರೋಧಶ್ಚ ಯತಶ್ಚಾಧ್ಯವಸೀಯತೇ
ಸ ಆಶ್ರಯಃ ಪರಂ ಬ್ರಹ್ಮ ಪರಮಾತ್ಮೇತಿ ಶಬ್ದ್ಯತೇ ।। ಇತಿ ।।

ಶ್ರೀ ಮದ್ಭಾಗವತ - ದ್ವಿ. ಸ್ಕಂಧ । ಅ. ೧೦ ಶ್ಲೋಕ ೧ ರಿಂದ ೭ ಪೂರ್ತಿ

**ಮಹಾಪುರಾಣಗಳು ಹದಿನೆಂಟು** :- ಬ್ರಾಹ್ಮ, ಪಾದ್ಮ, ವೈಷ್ಣವ, ಶೈವ, ಭಾಗವತ, ನಾರದೀಯ, ಮಾರ್ಕಂಡೇಯ, ಆಗ್ನೇಯ , ಭವಿಷ್ಯ, ಬ್ರಹ್ಮವೈವರ್ತ, ಲೈಂಗ, ವಾರಾಹ, ಸ್ಕಾಂದ, ವಾಮನ, ಕೌರ್ಮ, ಮಾತ್ಸ್ಯ, ಗಾರುಡ, ಬ್ರಹ್ಮಾಂಡ "ಪುರಾಣಲಕ್ಷಣ:- ಸರ್ಗಶ್ಚ ಪ್ರತಿಸರ್ಗಶ್ಚ ವಂಶೋ ಮನ್ವಂತರಾಣಿಚ । ವಂಶಾನುಚರಿತಂಚೈವ ಪುರಾಣಂಪಂಚಲಕ್ಷಣಂ ।।

**ಉಪಪುರಾಣಗಳು** :- ೧೮ ಸನತ್ಕುಮಾರ, ನಾರಸಿಂಹ, ಸ್ಕಾಂದ ಶಿವಧರ್ಮ, ದೌರ್ವಾಸಸ, ನಾರದೀಯ, ಕಾಪಿಲ, ವಾಮನ, ಔಶನಸ, ಬ್ರಹ್ಮಾಂಡ, ವಾರುಣ, ಕಾಲಿಕಾ, ಮಾಹೇಶ್ವರ, ಸಾಂಬ, ಸೌರ, ಪಾರಾಶರ, ಮಾರೀಚ, ಭಾರ್ಗವ (ಭಾಸ್ಕರ) ಎಂದು ಕೆಲವು ಕಡೆ ಉದಾಹೃತಗಳಾಗಿವೆ. ಪುರಾಣಗಳನ್ನು (೧) ಸಾತ್ವಿಕ ಪುರಾಣಗಳು (೨) ರಾಜಸ ಪುರಾಣಗಳು (೩) ತಾಮಸಪುರಾಣಗಳೆಂದು ವಿಂಗಡಿಸಲಾಗಿದೆ. ಪದ್ಮಪುರಾಣದಲ್ಲಿ ಎಲ್ಲಾ ವಿಭಾಗಗಳೂ ಉಕ್ತವಾಗಿವೆ.

(೧) ಸಾತ್ವಿಕ ಪುರಾಣಗಳು - ೬ ವೈಷ್ಣವಂ ನಾರದೀಯಂ ಚ ತಥಾ ಭಾಗವತಂ ಶುಭಮ್ । ಗಾರುಡಂ ಚ ತಥ ಪಾದ್ಮಂ ವಾರಾಹಂ ಶುಭದರ್ಶನೇ ।। ಷಡೇತಾನಿ ಪುರಾಣಾನಿ ಸಾತ್ವಿಕಾನಿ ಮತಾನಿ ವೈ ।। ೧) ವಿಷ್ಣು ಪುರಾಣ ೨) ನಾರದೀಯ ಪುರಾಣ ೩) ಶ್ರೀಮದ್ಭಾಗವತ ೪) ಗರುಡಪುರಾಣ ೫) ಪಾದ್ಮಪುರಾಣ ೬) ವಾರಾಹ ಪುರಾಣ, ಇವು ಆರು ಸಾತ್ವಿಕ ಪುರಾಣಗಳು.

(೨) ರಾಜಸ ಪುರಾಣಗಳು - ಆರು. ಬ್ರಹ್ಮಾಂಡಂ ಬ್ರಹ್ಮವೈವರ್ತಂ ಮಾರ್ಕಂಡೇಯಂ ತಥೈವಚ । ಭವಿಷ್ಯದ್ವಾಮನಂ ಬ್ರಾಹ್ಮಂ ರಾಜಸಾನಿ ನಿಬೋಧ ಮೇ ।। ೧) ಬ್ರಹ್ಮಾಂಡಪುರಾಣ ೨) ಬ್ರಹ್ಮವೈವರ್ತಪುರಾಣ ೩) ಮಾರ್ಕಂಡೇಯಪುರಾಣ ೪) ಭವಿಷ್ಯತ್ಪುರಾಣ ೫) ವಾಮನ ಪುರಾಣ ೬)ಬ್ರಾಹ್ಮಪುರಾಣ ಇವು ಆರು ರಾಜಸಪುರಾಣಗಳು. ತಾಮ ಪುರಾಣಗಳು ಆರು, ಮಾತ್ಸ್ಯಂ ಕೌರ್ಮಂ ತಥಾ ಲೈಂಗಂ ಶೈವಂ ಸ್ಕಾಂದಂ ತಥೈವ ಚ । ಆಗ್ನೇಯಂ ಚ ಷಡೇತಾನಿ ತಾಮಸಾ ನಿರಯಪ್ರದಾಃ ।। (ತಾಮಸಾನಿನಿಬೋಧತ, ನಿಬೋಧಮೇ)

ಇದೇ ರೀತಿಯಾಗಿ ಧರ್ಮಶಾಸ್ತ್ರಗಳಲ್ಲೂ ಮೂರು ಪ್ರಭೇದಗಳಿವೆ.

**೧. ಸಾತ್ವಿಕ ಧರ್ಮಶಾಸ್ತ್ರಗಳು** :- ವಾಸಿಷ್ಠಂ ಚೈವ ಹಾರೀತಂ ವ್ಯಾಸಂ ಪಾರಾಶರಂ ತಥಾ । ಭಾರದ್ವಾಜಂ ಕಾಶ್ಯಪಂಚ ಸಾತ್ವಿಕಾ ಮುಕ್ತಿದಾಯಿನಃ ।। ವಾಸಿಷ್ಠ, ಹಾರೀತಸ್ಮೃತಿ, ವ್ಯಾಸಸ್ಮೃತಿ, ಪಾರಾಶರಸ್ಮೃತಿ, ಭಾರದ್ವಾಜಸ್ಮೃತಿ,ಕಾಶ್ಯಪ ಇವಿಷ್ಟು ಸಾತ್ವಿಕಧರ್ಮಶಾಸ್ತ್ರಗಳೆನಿಸುವೆ.

**೨. ರಾಜಸಧರ್ಮಶಾಸ್ತ್ರಗಳು** :- ಮಾನವಂ ಯಾಜ್ಞವಲ್ಕ್ಯಂ ಚ ಆತ್ರೇಯಂ ದಾಕ್ಷಮೇವ ಚ । ಕಾತ್ಯಾಯನಂ ವೈಷ್ಣವಂ ಚ ರಾಜಸಾಃ ಸ್ವರ್ಗದಾಯಿನಃ ।। (ರಾಜಸಾಃ ಸ್ವರ್ಗದಾಃ ಶುಭಾಃ) ೧) ಮನುಸ್ಮೃತಿ ೨) ಯಾಜ್ಞವಲ್ಕ್ಯಸ್ಮೃತಿ ೩) ಆತ್ರೇಯಸ್ಮೃತಿ ೪) ದಾಕ್ಷ ೫) ಕಾತ್ಯಾಯನಸ್ಮೃತಿ ೬) ವೈಷ್ಣವ ಇವಿಷ್ಟೂ ಆರು ರಾಜಸಧರ್ಮಶಾಸ್ತ್ರಗಳು.

ತಾಮಸಗಳಾದ ಧರ್ಮಶಾಸ್ತ್ರಗಳು ಯಾವುವೆಂದರೆ - ಕಾರ್ದಮಂ (ಗೌತಮ) ಬಾರ್ಹಸ್ಪತ್ಯಂಚಸಾಂವರ್ತಂಚ ಯಮಸ್ಮೃತಿಃ। ಶಂಖ (ಶಾಂಖ) ಮೌಶನಸಂ ಚೇತಿತಾಮಸಾ ನಿರಯಪ್ರದಾಃ।।

೧) ಕರ್ದಮಸ್ಮೃತಿ ೨) (ಬಾರ್ಹಸ್ಪತ್ಯ) ಬೃಹಸ್ಪತಿಸ್ಮೃತಿ ೩) ಸಾಂವರ್ತಸ್ಮೃತಿ ೪) ಯಮಸ್ಮೃತಿ ೫) ಶಂಖಸ್ಮೃತಿ ೬) ಔಶನಸ್ಮೃತಿ ಇವಿಷ್ಟೂ ಆರು ತಾಮಸಧರ್ಮಶಾಸ್ತ್ರಗಳೆನಿಸಿವೆ.

ಶಾಸ್ತ್ರಗಳಲ್ಲೂ ಸಹ ಸಾತ್ವಿಕ, ರಾಜಸ, ತಾಮಸ ವಿಭಾಗಗಳಿವೆ.

**ಸಾತ್ವಿಕಗಳು :ಶಾಸ್ತ್ರಾಣ್ಯಪಿಚಸರ್ವಾಣಿ ಸಾತ್ವಿಕಾನಿ ಮತಾನಿ ವೈ।**
**ಯಾನಿ ಸುಸತ್ವವರಂ ವಿಷ್ಣುಂ ವದಂತಿ ಪರಮೇಶ್ವರಂ।**
**ತಾನಿ ಶಾಸ್ತ್ರಾಣಿ ಸರ್ವಾಣಿ ಸಾತ್ವಿಕಾನಿ ಮತಾನಿ ವೈ।।**

**ಅಭಿಪ್ರಾಯ** :- ಸರ್ವೋತ್ತಮನಾದ ಶ್ರೀವಿಷ್ಣುವನ್ನು ಮುಖ್ಯವಾಗಿ ಪ್ರತಿಪಾದಿಸುವ ಶಾಸ್ತ್ರಗಳು ಸಾತ್ವಿಕಗಳು.

**ರಾಜಸಶಾಸ್ತ್ರಗಳಾವುವೆಂದರೆ :-** ಪ್ರಜಾಪತಿಂ ಕೃಶಾನುಂ ಚ ತಥಾ ದೇವೀಂ ಸರಸ್ವತೀಮ್। ಪರತ್ವೇನ ವದಚ್ಛಾಸ್ತ್ರಂ ರಾಜಸಂ ಪರಿಚಕ್ಷತೇ।।

**ಅಭಿಪ್ರಾಯ** :- ಪ್ರಜಾಪತಿಯನ್ನು, ಅಗ್ನಿಯನ್ನು, ಸರಸ್ವತೀದೇವಿಯನ್ನು, ಸರ್ವೋತ್ತಮರೆಂದು ಪ್ರತಿಪಾದಿಸುವಶಾಸ್ತ್ರವು ರಾಜಸಶಾಸ್ತ್ರವೆಂದು ಕರೆಯಲ್ಪಟ್ಟಿದೆ.

**ತಾಮಸಶಾಸ್ತ್ರಗಳು ಯಾವುವೆಂದರೆ** :- ಯಚ್ಛಾಸ್ತ್ರಂ ಲಿಂಗಪಾರಮ್ಯಂ ವಾಮದೇವಮುಮಾಪತಿಂ। ತಮಃ ಪ್ರವರ್ತಕಂ ವಕ್ತಿ ತತ್ತಾಮಸಮುದಾಹೃತಮ್।। ಇತಿ ಪಾದ್ಮಪುರಾಣವಚನಾನಿ

ಯಾವ ಶಾಸ್ತ್ರವು, ಲಿಂಗಕ್ಕೆ = ಶಿವನಿಗೆ, ಸರ್ವೋತ್ತಮತ್ವವನ್ನು ತಿಳಿಸುತ್ತದೆಯೋ ಅದು ತಾಮಸಶಾಸ್ತ್ರವೆಂದು ಪದ್ಮಪುರಾಣದಲ್ಲಿ ಉಕ್ತವಾಗಿದೆ.

ಶ್ರೀಮನ್ನಾರಾಯಣನು ಶ್ರೀವೇದವ್ಯಾಸರೂಪದಿಂದ ವೇದಾರ್ಥಗಳ ಉಪಬೃಂಹಣರೂಪಗಳಾದ ದೃಷ್ಟಾಂತಗಳ ಮತ್ತು ಕಥಾ ಉಪಾಖ್ಯಾನಗಳ ಮೂಲಕವಾಗಿ ಸಜ್ಜನರಿಗೆ ತಿಳಿಸುವುದಕ್ಕಾಗಿ ನಾಲ್ಕು ಲಕ್ಷಶ್ಲೋಕಗಳಿಂದ ಸಂಗ್ರಹಿಸಿ ಹದಿನೆಂಟು ಪುರಾಣಗಳನ್ನು ಹಿಂದೆ ಉದಾಹರಿಸಿರುವುದನ್ನು ರಚಿಸಿ ಮಹೋಪಕಾರಮಾಡಿರುವುದು ಸುಪ್ರಸಿದ್ಧವಾದ ಸಂಗತಿಯಾಗಿದೆ.

ಪುರಾಣವಾಕ್ಯಗಳು ಈ ವಿಚಾರವನ್ನು ಸಮರ್ಥಿಸುತ್ತಲಿವೆ.

**''ಇತಿಹಾಸಪುರಾಣಾಭ್ಯಾಂ ವೇದಂಸಮುಪಬೃಂಹಯೇತ್ ।।** **(ಇತಿವಾಯುಪುರಾಣೇ)**

**''ವೇದಾಃ ಪ್ರತಿಷ್ಠಿತಾಃ ಸರ್ವೇ ಪುರಾಣೇ ನಾತ್ರಸಂಶಯಃ''** **(ಇತಿಸ್ಕಾಂದಪುರಾಣೇ)**

**''ಧನ್ಯಂ ಯಶಸ್ಯಮಾಯುಷ್ಯಂ ಪುಣ್ಯಂ ವೇದೈಶ್ಚ ಸಂಮಿತಮ್ ।।**

ಕೃಷ್ಣದ್ವೈಪಾಯನೇನೋಕ್ತಂ ಪುರಾಣಂ ಬ್ರಹ್ಮವಾದಿನಾ (ಇತಿಬ್ರಹ್ಮಾಂಡಪುರಾಣೆ) ಹೀಗೆಯೇ

**''ಆತ್ಮಾ ಪುರಾಣಂ ವೇದಾನಾಂ''**

ಅಥವಾ ''ಸರ್ವವೇದಾರ್ಥಸಾರಾಣಿ ಪುರಾಣಾನಿ'' (ಇತಿನಾರದೀಯೇ)

**"ಪುರಾಣಂ ಪಂಚಮೋ ವೇದಃ"।**

"ಪದ್ಮ ಪುರಾಣದಲ್ಲಿ" ನಿಸ್ತಾರಾಯ ತು ಲೋಕಾನಾಂ ಸ್ವಯಂ ನಾರಾಯಣಃ ಪ್ರಭುಃ।। ವ್ಯಾಸರೂಪೇಣ ಕೃತವಾನ್ ಪುರಾಣಾನಿ ಮಹೀತಲೇ (ಪದ್ಮಪುರಾಣೆ)

**ಪ್ರಾಚೀನರ ನುಡಿ -**

**ಕತಮಃ ಸ ಹಿ ಧರ್ಮೋಽಸ್ತು ಕಿಂ ವಾ ಜ್ಞಾನಂ ತಥಾವಿಧಮ್।**
**ಅನ್ಯದ್ವ್ಯಾಪಿಕಮತ್ರಾಹ ಪುರಾಣೇ ಯನ್ನ ದೃಶ್ಯತೇ।।**
**"ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್)**

ನಾರದೀಯ ಪುರಾಣದಲ್ಲಿ ವಿಶೇಷಾಕಾರವಾದ ಮತ್ತೊಂದುವಿಚಾರವೂ ಉಕ್ತವಾಗಿದೆ.

**ವೇದಾರ್ಥಾದಧಿಕಂ ಮನ್ಯೇ ಪುರಾಣಾರ್ಥಂ ವರಾನನೇ।**
**ವೇದಾಃ ಪ್ರತಿಷ್ಠಿತಾಃ ಸರ್ವೇ ಪುರಾಣೇ ನಾತ್ರ ಸಂಶಯ (ಇತಿನಾರದೀಯಪುರಾಣೇ)**

**ಮತ್ಸ್ಯಪುರಾಣದಲ್ಲಿ ಉಕ್ತವಾಗಿರುವಂತೆ ಪುರಾಣಗಳ ಗ್ರಂಥಸಂಖ್ಯಾ (೩೨ ಅಕ್ಷರಗಳಿಗೆ ಒಂದು ಗ್ರಂಥ)**

(ಗ್ರಂಥಸಂಖ್ಯಾವಿಷಯದಲ್ಲಿ ಕೆಲವು ಕಡೆ ಸ್ವಲ್ಪ ವ್ಯತ್ಯಾಸವಿದೆ)

೧. ಬ್ರಹ್ಮಪುರಾಣ - ಹದಿಮೂರುಸಹಸ್ರಗ್ರಂಥ (ಹತ್ತು ಸಹಸ್ರವೆಂದು ಕೆಲವು ಕಡೆ ಹೇಳಲಾಗಿದೆ)

೨. ಪದ್ಮಪುರಾಣ - ಐವತ್ತೈದುಸಹಸ್ರಗ್ರಂಥ
೩. ವಿಷ್ಣುಪುರಾಣ - ಇಪ್ಪತ್ತಮೂರುಸಹಸ್ರಗ್ರಂಥ
೪. ವಾಯುಪುರಾಣ - (ಶಿವಪುರಾಣ) ಇಪ್ಪತ್ತನಾಲ್ಕು ಸಹಸ್ರಗ್ರಂಥ
೫. ಭಾಗವತಮಹಾಪುರಾಣ - ಹದಿನೆಂಟುಸಹಸ್ರಗ್ರಂಥ
೬. ನಾರದೀಯಪುರಾಣ - ಇಪ್ಪತ್ತೈದುಸಹಸ್ರಗ್ರಂಥ
೭. ಮಾರ್ಕಂಡೇಯ ಪುರಾಣ - ಒಂಬತ್ತು ಸಹಸ್ರಗ್ರಂಥ
೮. ಅಗ್ನೇಯಪುರಾಣ - ಹದಿನಾರುಸಹಸ್ರಗ್ರಂಥ (ಹದಿನೈದುಸಹಸ್ರ ನಾಲ್ಕುನೂರು ಎಂದು ಕೆಲವು ಕಡೆ ಬಂದಿವೆ.)
೯. ಭವಿಷ್ಯತ್ - ಹದಿನಾಲ್ಕು ಸಹಸ್ರಐದುನೂರು ಕೆಲವು ಕಡೆ ಹದಿನೈದು ಸಹಸ್ರನಾಲ್ಕುನೂರು
೧೦. ಬ್ರಹ್ಮವೈವರ್ತಪುರಾಣ - ಹದಿನೆಂಟುಸಹಸ್ರ..
೧೧. ಲಿಂಗಪುರಾಣ - ಹನ್ನೊಂದು ಸಹಸ್ರ ಗ್ರಂಥ
೧೨. ವರಾಹಪುರಾಣ - ಇಪ್ಪತ್ತನಾಲ್ಕುಸಹಸ್ರಗ್ರಂಥ
೧೩. ಸ್ಕಾಂದಪುರಾಣ - ಎಂಬತ್ತೊಂದುಸಹಸ್ರಗ್ರಂಥ (ಎಂಬತ್ತು ಸಹಸ್ರದಮೇಲೆ ಒಂದನೂರು)
೧೪. ವಾಮನ - ಹತ್ತು ಸಹಸ್ರ ಗ್ರಂಥ
೧೫. ಕೂರ್ಮ - ಹದಿನೆಂಟು ಸಹಸ್ರ ಗ್ರಂಥ (ಹದಿನೇಳು ಸಹಸ್ರ)
೧೬. ಮತ್ಸ್ಯಪುರಾಣ - ಹದಿನಾಲ್ಕು ಸಹಸ್ರಗ್ರಂಥ
೧೭. ಗರುಡ ಪುರಾಣ - (ಹತ್ತೊಂಬತ್ತು ಸಹಸ್ರಗ್ರಂಥ
೧೮. ಬ್ರಹ್ಮಾಂಡಪುರಾಣ - ಹನ್ನೊಂದು ಸಹಸ್ರ ಇನ್ನೂರು (ಹನ್ನೆರಡು ಸಹಸ್ರ)

ದೇವೀ ಭಾಗವತದಲ್ಲಿ ಪರಿಗಣಿತವಾದ ಉಪಪುರಾಣಗಳು - ೧೮

೧. ಸನತ್ಕುಮಾರ ೨. ನಾರಸಿಂಹ ೩. ನಾರದೀಯ ೪. ಶಿವ ೫. ದೌರ್ವಾಸಸ ೬. ಕಾಪಿಲ ೭. ಮಾನವ ೮. ಔಶನಸ ೯. ವಾರುಣ ೧೦. ಕಾಲಿಕಾ ೧೧. ಸಾಂಬ ೧೨. ನಂದಿಕೃತ ೧೩. ಸೌರ ೧೪. ಪಾರಾಶರ ೧೫. ಆದಿತ್ಯ ೧೬. ಮಾಹೇಶ್ವರ ೧೭. ಭಾಗವತ ೧೮. ವಾಸಿಷ್ಠ.

೧. ವಾಯವ್ಯ ೨. ಭಾರ್ಗವ ೩. ಸೋಮ ೪. ಬ್ರಹ್ಮಾಂಡ ೫. ಕೌಶಿಕ ೬. ಪರಾಶರ ೭. ನಾರದೀಯ ೮. ನಾರಸಿಂಹ ೯. ಕಾಪಿಲ ೧೦. ವಾಸಿಷ್ಠ ೧೧. ಶಿವಧರ್ಮ ೧೨. ಮಾರೀಚ ೧೩. ಮಾನವ ೧೪. ಸ್ಕಾಂದ ೧೫. ದುರ್ವಾಸ ೧೬. ಆದಿತ್ಯ ೧೭. ವಾರುಣ ೧೮. ಸಾಂಬರ- ಈ ರೀತಿ ಉಪಪುರಾಣಗಳೆಂದು ಸ್ಮೃತಿಮುಕ್ತಾವಳೀಕಾರರು ಉದಾಹರಿಸಿರುತ್ತಾರೆ.

।। ಶ್ರೀ ಮನ್ಮೂಲರಾಮೋ ವಿಜಯತೆ।।

।। ಶ್ರೀ ಮದ್ರಾಘವೇಂದ್ರಗುರುಸಾರ್ವಭೌಮೋ ವಿಜಯತೇ।।

## ಶ್ರೀ ಬ್ರಹ್ಮಪಾರಸ್ತೋತ್ರದ ಹಿನ್ನೆಲೆ

### ಶ್ರೀ ಮಹಾವಿಷ್ಣುಪುರಾಣದ ಸ್ಥಾನಮಾನ

ಪುರಾಣಗಳಲ್ಲಿ ಸಾತ್ತ್ವಿಕಪುರಾಣಗಳು ಸಕಲಶ್ರೇಯಸ್ಸಿಗೂ ಕಾರಣಗಳು. ಅವುಗಳಲ್ಲೂ ಶ್ರೀಮದ್ಭಾಗವತವೂ, ಶ್ರೀವಿಷ್ಣುಪುರಾಣವೂ ಅತಿಶ್ರೇಷ್ಠಗಳೆಂದು ಪ್ರಸಿದ್ಧವಾಗಿದೆ. ಶ್ರೀವಿಷ್ಣುಪುರಾಣದ ಪ್ರಶಂಸೆಯು ವಿಶೇಷಾಕಾರವಾಗಿ ಅಲ್ಲಲ್ಲಿ ಉಕ್ತವಾಗಿದೆ. ಈ ಪುರಾಣದಲ್ಲಿ ಆದಿಯಲ್ಲಿಯೂ ಮಧ್ಯದಲ್ಲಿಯೂ ಮತ್ತೆ ಮತ್ತೆ ಮತ್ತೆ ಶ್ರೀಹರಿಯ ಸ್ತೋತ್ರವು ಮಾಡಲ್ಪಟ್ಟಿದೆ. ಈ ವಿಷ್ಣುಪುರಾಣದಲ್ಲಿ ವ್ಯಾಪಕಗಳಾದ ರಹಸ್ಯಗಳಾದ ಮಂತ್ರಗಳು ಅರ್ಥಸಹಿತವಾಗಿ ನಿರೂಪಿಸಲ್ಪಟ್ಟಿವೆ. ಅವುಗಳ ಪೈಕಿ ಬ್ರಹ್ಮಪಾರಸ್ತೋತ್ರದ ಅರ್ಥ ವಿವರಣೆಯನ್ನು ಮುಂದೆ ತೋರಿಸುತ್ತೇವೆ. ಆ ಪ್ರಶಂಸಾನುಡಿಯು ಈ ರೀತಿ ಇದೆ.

**"ಸಾತ್ತ್ವಿಕಾನಿ ಪುರಾಣಾನಿ ಶ್ರೇಯಾಂಸಿ ನಿಖಿಲಾನ್ಯಪಿ।**
**ತತ್ರ ಭಾಗವತಂ ಶ್ರೇಷ್ಠಂ ತತೋ ವೈಷ್ಣವಮುತ್ತಮಮ್।।**
**ಪುರಾಣಮೇತತ್ಸದೃಶಂ ನಹ್ಯನ್ಯದುಪಪದ್ಯತೇ।**
**ಆದೌ ಮಧ್ಯೇ ತಥಾಂತೇ ಚ ಗೀಯತೇಽತ್ರ ಹರಿರ್ಮುಹುಃ।।**
**ತಾವತ್ಪುರಾಣಖದ್ಯೋತಾ ಅನ್ಯೇ ಭಾಂತಿ ತತಸ್ತತಃ।**
**ಯಾವಚ್ಛ್ರೀವೈಷ್ಣವಾಖ್ಯಪುರಾಣಾರ್ಕೋ ನ ದೃಶ್ಯತೇ।।**
**ಭಾಂತ್ಯತ್ರ ವ್ಯಾಪಕಾ ಮಂತ್ರಾಃ ತದರ್ಥಾಶ್ಚ ಪದೇ ಪದೇ।**
**ತಸ್ಮಾನ್ಮುಮುಕ್ಷುಭಿಸ್ಸರ್ವೈಃ ಶ್ರೋತವ್ಯಮಿದಮಾದರಾತ್।।**
**ಷಡಕ್ಷರ ಸ್ವರೂಪಾಸ್ತೇ ಮೇ ಷಡಂಶಾಃ ಪ್ರಕೀರ್ತಿತಾಃ।**
**ಷಡಂಗ ಯೋಗದುಷ್ಪ್ರಾಪಾಂ ಪ್ರಯಚ್ಛಂತಿ ಗತಿಂ ನೃಣಾಮ್"।।**

೧. ಪುರಾಭವಂ ಪುರಾಣಂ = ಅಂದರೆ ಹಿಂದಿನ ಕಾಲದಲ್ಲಿ ಉಂಟಾದುದು ಎಂದರ್ಥವು.

೨. ಪುರಾಪಿ ನವಂ ಪುರಾಣಂ, ಹಿಂದಿನಕಾಲಕ್ಕೆ ಸಂಬಂಧಿಸಿದುದು, ಆದರೂ, ಅದರ ವಿಷಯದ ವೈಶಿಷ್ಟ್ಯದಿಂದ ಹೊಸಹೊಸದಾಗಿರುವಂತಹುದು.

೩. ಪುರಾ ನೀಯತ ಇತಿ ಪುರಾಣಾಮ್। ಹಿಂದಿನಕಾಲಕ್ಕೆ ಒಯ್ಯತಕ್ಕದ್ದು, ಸಂಬಂಧಿಸಿದುದು.

೪. ಪುರಾ ಪ್ರಾಚೀನ ಮತ್ತು ಭವಿಷ್ಯತ್ ಕಾಲಗಳಿಗೆ ಸಂಬಂಧಿಸಿದುದನ್ನು - ಅಣತಿ = ಕಥಯ ತೀತಿ ಪುರಾಣಂ, ಅಣ ಶಬ್ದೆ ಎಂಬ ಧಾತುವು.

ಈ ಕಲ್ಪದಲ್ಲಿ ಪುರಾ ಎಂಬ ಅವ್ಯಯಕ್ಕೆ ಪ್ರಾಚೀನ ಎಂಬುದು ಹೇಗೆ ಅರ್ಥವೋ, ಅವ್ಯಯಾನಾಂ ಅನೇಕಾರ್ಥತ್ವಾತ್‌ಭವಿಷ್ಯಕಾಲವೆಂದೂ ಅರ್ಥವನ್ನು ಹೇಳಲಾಗಿದೆ.

೫. ಪುರಾ ನವಂಭವತಿಪುರಾಣಂ ಎಂಬುದಾಗಿ ಯಾಸ್ಕನಿರುಕ್ತದಲ್ಲಿದೆ.

೬. ವಾಯುಪುರಾಣದಲ್ಲಿ ಈ ರೀತಿ ನಿರ್ವಚನವಿದೆ.

ಯಸ್ಮಾತ್‌ಪುರಾಹ್ಯನಕ್ತೀದಂ ಪುರಾಣಂ ತೇನ ವಾ ಸ್ಮೃತಮ್। ನಿರುಕ್ತಮಸ್ಯ ಯೋ ವೇದ ಸರ್ವಪಾಪೈಃ ಪ್ರಮುಚ್ಯತೇ।। ಇತಿವಾಯುಪುರಾಣಂ ಅಂದರೆ ಪುರಾ =ಪ್ರಾಚೀನಕಾಲದ ವರ್ತಮಾನವನ್ನು ಅನಕ್ತಿ = ವ್ಯಕ್ತಗೊಳಿಸುವುದು ಯಾವುದೋ, ತಿಳಿಸುವುದು ಯಾವುದೋ ಅದು ಪುರಾಣವು.

೭. ಬ್ರಹ್ಮಾಂಡಪುರಾಣದಲ್ಲಿ ಈ ರೀತಿ ಇದೆ.

ಯಸ್ಮಾದ್‌ಪುರಾಹ್ಯಭೂಚ್ಚೈತದ್‌ಪುರಾಣಂತೇನತತ್‌ಸ್ಮೃತಮ್। ಬ್ರಹ್ಮಾಂಡಪುರಾಣವಚನ.

೮. ಪುರಾಪರಂಪರಾಂ ವಷ್ಟಿಪುರಾಣಂತೇನವೈಸ್ಮೃತಮ್।। ಪದ್ಮಪುರಾಣದ ವಚನ.

೯. ಮಾತ್ಸ್ಯಪುರಾಣದಲ್ಲಿ ''ಪುರಾತನಸ್ಯಕಲ್ಪಸ್ಯ ಪುರಾಣಾನಿ ವಿದುರ್ಬುಧಾ।। (ಮಾತ್ಸ್ಯಪುರಾಣದಲ್ಲಿ)

೧೦. ಶುಕ್ರನೀತಿಯಲ್ಲಿ ''ಪ್ರಾಗ್‌ವೃತ್ತಕಥನಂಪುರಾಣಂ'' ಎಂದಿದೆ.

ಈ ರೀತಿ ನಿರ್ವಚನಗಳ ಪ್ರಭೇದಗಳಿಂದ ಕೂಡಿದ ಪುರಾಣಗಳ ಸಂಖ್ಯೆಯನ್ನು ಹದಿನೆಂಟು ಎಂದು ಹಿಂದೆಯೇ ತಿಳಿಸಲಾಗಿದೆ.

ಅವೆಲ್ಲವುಗಳ ಸಂಗ್ರಹ ರೂಪವಾಗಿರುವ ಒಂದು ಶ್ಲೋಕವು ಈ ಕೆಳಗೆ ಕಂಡಂತಿದೆ.

ಮದ್ವಯಂ, ಭದ್ವಯಂಚೈವ, ಬ್ರತ್ರಯಂ ವಚತುಷ್ಟಯಮ್।
ಅನಾಪಲ್ಲಿಂಗಕೂಸ್ಕಾನಿಪುರಾಣಾನಿಪೃಥಕ್ ಪೃಥಕ್।। ಇತಿ।।

ಅದರ ವಿವರಣೆಯು ಈ ಕೆಳಗಿನಂತಿದೆ.

೧. ಮದ್ವಯಂ = ಮಕಾರದಿಂದ ಆರಂಭವಾಗುವ ಹೆಸರಿನಿಂದ ಕೂಡಿದ ಎರಡು ಪುರಾಣಗಳು.

೧) ಮತ್ಸ್ಯಪುರಾಣ ೨) ಮಾರ್ಕಂಡೇಯ ಪುರಾಣ.

೨. ಭದ್ವಯಂ = ಭಕಾರದಿಂದ ಆರಂಭವಾಗುವ ಹೆಸರಿನಿಂದ ಕೂಡಿದ ಎರಡು ಪುರಾಣಗಳು

ಯಾವುವೆಂದರೆ ೧) ಭಾಗವತ ೨) ಭವಿಷ್ಯತ್‌ಪುರಾಣಗಳು.

೩. ಬ್ರತ್ರಯಂ = ಬ್ರ ಎಂಬವರ್ಣದಿಂದ ಆರಂಭವಾಗುವ ಹೆಸರಿನಿಂದ ಕೂಡಿದ ಮೂರು ಪುರಾಣಗಳು ಯಾವುವೆಂದರೆ :-

೧) ಬ್ರಹ್ಮ ಪುರಾಣ
೨) ಬ್ರಹ್ಮಾಂಡಪುರಾಣ
೩) ಬ್ರಹ್ಮವೈವರ್ತಪುರಾಣಗಳು ಒಟ್ಟು ಮೂರು ಪುರಾಣಗಳು.

೪. ವಚತುಷ್ಟಯಂ = ವಕಾರದಿಂದ ಆರಂಭವಾಗುವ ಹೆಸರಿನಿಂದ ಕೂಡಿದ ನಾಲ್ಕು ಪುರಾಣಗಳ ಯಾವುವೆಂದರೆ:-

೧) ವಿಷ್ಣು ಪುರಾಣ
೨) ವರಾಹಪುರಾಣ
೩) ವಾಯು ಪುರಾಣ
೪) ವಾಮನ ಪುರಾಣ, ಒಟ್ಟು ನಾಲ್ಕು ಪುರಾಣಗಳು.

೫. ಅನಾಪಲಿಂಗಕೂಸ್ಕಾನಿ = ಅ, ನಾ, ಪ, ಲಿಂ, ಗ, ಕೂ ಸ್ಕ ಎಂಬ ಅಕ್ಷರಗಳಿಂದ ಪ್ರಾರಂಭವಾಗುವ ಹೆಸರಿನಿಂದ ಕೂಡಿದ ಪುರಾಣಗಳು.

೧) ಅ = ಅಗ್ನಿಪುರಾಣ
೨) ನಾ = ನಾರದಪುರಾಣ
೩) ಪ = ಪದ್ಮಪುರಾಣ
೪) ಲಿಂ = ಲಿಂಗಪುರಾಣ
೫) ಗ = ಗರುಡಪುರಾಣ
೬) ಕೂ = ಕೂರ್ಮಪುರಾಣ
೭) ಸ್ಕಂದಪುರಾಣ

ಒಟ್ಟು ೧೮ ಪುರಾಣಗಳು ಸಂಗ್ರಹಿಸಲ್ಪಟ್ಟಿವೆ. ವಾಯುವೀಯಪುರಾಣವೇ ಶೈವ ಎಂಬ ಹೆಸರಿನಿಂದ ವ್ಯವಹರಿಸಲ್ಪಟ್ಟಿದೆ. ಈ ವಿಚಾರವು ಮತ್ಸ್ಯಪುರಾಣದಲ್ಲಿ ಉಕ್ತವಾಗಿದೆ. ''ಯತ್ರತದ್ವಾಯವೀಯಂಸ್ಯಾದ್ ರುದ್ರಮಾಹಾತ್ಮ್ಯಸಂಯುತಂ। ಚತುರ್ವಿಂಶತ್ಸಹಸ್ರಾಣಿಪುರಾಣಂಶೈವಮುಚ್ಯತೇ।।

(ಇತಿ ಮಾತ್ಸ್ಯಪುರಾಣವಚನಂ)

।। ಶ್ರೀ ಮನ್ಮೂಲರಾಮೋ ವಿಜಯತೆ।।

।। ಶ್ರೀ ಮದ್ರಾಘವೇಂದ್ರಗುರುಸಾರ್ವಭೌಮೋ ವಿಜಯತೇ।।

## ಶ್ರೀಬೃಹತ್ತಾರ ಸ್ತೋತ್ರದ ಹಿನ್ನೆಲೆ.

ಶ್ರೀ ಮಹಾವಿಷ್ಣುಪುರಾಣದ ಸ್ಥಾನಮಾನ.

ಪುರಾಣಗಳಲ್ಲಿ ಸಾತ್ವಿಕಪುರಾಣಗಳು ಸಕಲಶ್ರೇಯಸ್ಸಿಗೂ ಕಾರಣಗಳು. ಅವುಗಳಲ್ಲೂ ಶ್ರೀಮದ್ಭಾಗವತವೂ, ಶ್ರೀವಿಷ್ಣು ಪುರಾಣವೂ ಅತಿಶ್ರೇಷ್ಠಗಳೆಂದು ಪ್ರಸಿದ್ಧವಾಗಿವೆ. ಶ್ರೀವಿಷ್ಣುಪುರಾಣದ ಪ್ರಶಂಸೆಯು ವಿಶೇಷಾಕಾರವಾಗಿ ಅಲ್ಲಲ್ಲಿ ಉಕ್ತವಾಗಿದೆ. ಈ ಪುರಾಣದಲ್ಲಿ ಆದಿಯಲ್ಲಿಯೂ ಮಧ್ಯದಲ್ಲಿಯೂ ಮತ್ತೆ ಮತ್ತೆ ಶ್ರೀಹರಿಯ ಸ್ತೋತ್ರವು ಮಾಡಲ್ಪಟ್ಟಿದೆ. ಈ ವಿಷ್ಣು ಪುರಾಣದಲ್ಲಿ ವ್ಯಾಪಕಗಳಾದ ರಹಸ್ಯಗಳಾದ ಮಂತ್ರಗಳು ಅರ್ಥಸಹಿತವಾಗಿ ನಿರೂಪಿಸಲ್ಪಟ್ಟಿವೆ. ಅವುಗಳ ಪೈಕಿ ಬ್ರಹ್ಮಪಾರಸ್ತೋತ್ರದ ಅರ್ಥ ವಿವರಣೆಯನ್ನು ಮುಂದೆ ತೋರಿಸುತ್ತೇವೆ. ಆ ಪ್ರಶಂಸಾನುಡಿಯು ಈ ರೀತಿ ಇದೆ.

**"ಸಾತ್ವಿಕಾನಿ ಪುರಾಣಾನಿ ಶ್ರೇಯಾಂಸಿ ವಿವಿಧಾನ್ಯಪಿ ।**
**ತತ್ರ ಭಾಗವತಂ ಶ್ರೇಷ್ಠಂ ತತೋ ವೈಷ್ಣವಮುತ್ತಮಮ್ ॥**
**ಪುರಾಣಮೇತತ್ಸದೃಶಂ ನಹ್ಯನ್ಯದುಪಪದ್ಯತೇ ।**
**ಆದೌ ಮಧ್ಯೇ ತಥಾಂತೇ ಚ ಗೀಯತೇಽತ್ರ ಹರಿರ್ಮುಹುಃ ॥**
**ತಾವತ್ಪುರಾಣಖದ್ಯೋತಾ ಅನ್ಯೇ ಭಾಂತಿ ತತಸ್ತತಃ ।**
**ಯಾವದ್ವೈಷ್ಣವಾಭಿಖ್ಯಪುರಾಣಾರ್ಕೋ ನ ದೃಶ್ಯತೇ ॥**
**ಭಾಂತ್ಯತ್ರ ವ್ಯಾಪಕಾ ಮಂತ್ರಾಃ ತದರ್ಥಾಶ್ಚ ಪದೇ ಪದೇ ।**
**ತಸ್ಮಾನ್ಮುಮುಕ್ಷುಭಿಸ್ಸರ್ವೈಃ ಶ್ರೋತವ್ಯಮಿದಮಾದರಾತ್ ॥**
**ಷಡಕ್ಷರಸ್ವರೂಪಾಸ್ತೇ ಮೇ ಷಡಂಶಾಃ ಪ್ರಕೀರ್ತಿತಾಃ ।**
**ಷಡಂಗಯೋಗದುಷ್ಪ್ರಾಪಾಂ ಪ್ರಯಚ್ಛಂತಿ ಗತಿಂ ನೃಣಾಮ್" ॥**

ಬ್ರಹ್ಮಪಾರಸ್ತೋತ್ರವು ಕಂಡುಮುನಿಯಿಂದ ಜಪಿಸಲ್ಪಟ್ಟದ್ದಾಗಿ ಆ ಋಷಿವರೇಣ್ಯನಿಗೆ ಪರಮಸಿದ್ಧಿಯನ್ನು ಪರಮಾತ್ಮನ ಅನುಗ್ರಹದಿಂದ ಉಂಟುಮಾಡಿರುವುದಾಗಿ ಶ್ರೀ ವಿಷ್ಣುಪುರಾಣದಲ್ಲಿ ಉಕ್ತವಾಗಿದೆ.

ನಾರದೀಯಪುರಾಣದಲ್ಲಿ ಚತುರ್ಮುಖನಿಗೂ ಆತನ ಮಗನಾದ ಮರೀಚಿಗೂ ನಡೆದ ಸಂವಾದದಲ್ಲಿ ಬ್ರಹ್ಮದೇವನು ಮರೀಚಿಗೆ ಶ್ರೀವಿಷ್ಣುಪುರಾಣದ ಮಹಿಮೆಯನ್ನು ಈ ಕೆಳಗೆ ಕಂಡಂತೆ ವಿವರಿಸಿರುತ್ತಾನೆ.

**ಬ್ರಹ್ಮೋವಾಚ : -**

**ಶೃಣು ವತ್ಸ ಪ್ರವಕ್ಷ್ಯಾಮಿ ಪುರಾಣಂ ವೈಷ್ಣವಂ ಮಹತ್ ।**
**ತ್ರಯೋವಿಂಶತಿಸಾಹಸ್ರಂ ಸರ್ವಪಾತಕನಾಶನಮ್** ॥ ೧ ॥
**ಯತ್ರಾದಿಭಾಗೇ ನಿರ್ದಿಷ್ಟಾಃ ಷಡಂಶಾಃ ಶಕ್ತಿಜೇನ ಹಿ ।**
**ಮೈತ್ರೇಯಾಯಾದಿಮೇ ತತ್ರ ಪುರಾಣಸ್ಯಾವತಾರಿಕಾ** ॥ ೨ ॥
**ಅತಃ ಪರಂ ತು ಸೂತೇನ ಶೌನಕಾದಿಭಿರಾದರಾತ್ ।**
**ಪೃಷ್ಟೇನಚೋದಿತಾಃ ಶಶ್ವದ್ವಿಷ್ಣುಧರ್ಮೋತ್ತರಾಹ್ವಯಾಃ** ॥ ೩ ॥
**ನಾನಾಧರ್ಮಕಥಾಃ ಪುಣ್ಯಾಃ ವ್ರತಾನಿ ನಿಯಮಾಸ್ತಥಾ ।**
**ಧರ್ಮಶಾಸ್ತ್ರಂ ಚಾರ್ಥಶಾಸ್ತ್ರಂ ವೇದಾಂತಂ ಜ್ಯೋತಿಷಂ ತಥಾ** ॥ ೪ ॥
**ವಂಶಾಖ್ಯಾನಪ್ರಕರಣಂ ಸ್ತೋತ್ರಾಣಿ ಮನವಸ್ತಥಾ ।**

**ನಾನಾವಿದ್ಯಾಶ್ರಯಾಃ ಪ್ರೋಕ್ತಾಃ ಸರ್ವಲೋಕೋಪಕಾರಕಾಃ ॥ ೫ ॥**
**ಏತದ್ವಿಷ್ಣುಪುರಾಣಂ ವೈ ಸರ್ವಶಾಸ್ತ್ರಾರ್ಥಸಂಗ್ರಹಮ್ ।**

**(ಇತ್ಯಾದಿನಾರದೀಯೇ)**

**ಅಭಿಪ್ರಾಯ** :- ಚತುರ್ಮುಖಬ್ರಹ್ಮದೇವನು ತನ್ನ ಮಗನಾದ ಮರೀಚಿಮಹರ್ಷಿಯನ್ನು ಕುರಿತು ಹೇಳುತ್ತಿದ್ದಾನೆ. ಎಲೈ ಮಗನೇ ಕೇಳು,

ಶ್ರೀವಿಷ್ಣುಪುರಾಣದ ಮಹತ್ವವನ್ನು ವಿವರಿಸುತ್ತೇನೆ. ಶ್ರೀವಿಷ್ಣುಪುರಾಣವು ಶ್ರೇಷ್ಠವಾದುದು. ಇಪ್ಪತ್ತ ಮೂರು ಸಹಸ್ರ ಗ್ರಂಥ ಸಂಖ್ಯೆಯುಳ್ಳದ್ದಾಗಿದೆ. ಎಲ್ಲಾ ವಿಧಗಳಾದ ಪಾಪಗಳನ್ನೂ ನಾಶಮಾಡತಕ್ಕ ಮಹಿಮೆಯುಳ್ಳದ್ದಾಗಿದೆ. ಆದಿಭಾಗದಲ್ಲಿ ಆರುಅಂಶಗಳಿಂದ ಪರಾಶರರಿಂದ ಮೈತ್ರೇಯರಿಗೆ ಉಪದಿಷ್ಟವಾಗಿದೆ. ಮೊದಲು ಅವತಾರಿಕಾಭಾಗದಿಂದ ಕೂಡಿದೆ. ಅನಂತರದಲ್ಲಿ ಶೌನಕಾದಿಗಳಿಂದ ಆದರಪೂರ್ವಕವಾಗಿ ಪ್ರಶ್ನೆಮಾಡಲ್ಪಟ್ಟು ಸೂತರಿಂದ ವಿಷ್ಣುಧರ್ಮೋತ್ತರವೆಂಬ ಹೆಸರಿನಿಂದ ಅನೇಕಬಗೆಗಳಾದ ಧರ್ಮಪ್ರಬೋಧಕಗಳಾದ ಕಥೆಗಳು ಉದಾಹರಿಸಲ್ಪಟ್ಟವೆ. ಪುಣ್ಯಕರಗಳಾದ ವ್ರತಗಳು ನಿಯಮಗಳು, ಉಕ್ತವಾಗಿವೆ. ಧರ್ಮಶಾಸ್ತ್ರವೂ ಅರ್ಥಶಾಸ್ತ್ರವೂ, ವೇದಾಂತಶಾಸ್ತ್ರವೂ, ಜ್ಯೋತಿಷಶಾಸ್ತ್ರವೂ, ವಂಶಗಳ ಆಖ್ಯಾನಕಗಳೂ, ಸ್ತೋತ್ರಗಳೂ, ಮಂತ್ರಗಳೂ, ಅನೇಕ ವಿದ್ಯೆಗಳಿಗೆ ಸಂಬಂಧಿಸಿದ ವಿಷಯಗಳೂ ಉಕ್ತವಾಗಿವೆ. ಸರ್ವಲೋಕಕ್ಕೂ ಉಪಕಾರಕಗಳಾದ ಅನೇಕ ವಿಧಗಳಾದ ವಿದ್ಯೆಗಳೂ ನಿರೂಪಿತವಾಗಿವೆ. ಆದಕಾರಣ ಸಾತ್ವಿಕಪುರಾಣವರ್ಗಕ್ಕೆ ಸೇರಿದ ಈ ವಿಷ್ಣುಪುರಾಣವು ಸರ್ವಶಾಸ್ತ್ರಾರ್ಥ ಸಂಗ್ರಹವೇ ಆಗಿದೆ. (ಹೀಗೆ ನಾರದೀಯಪುರಾಣದಲ್ಲಿ ಚತುರ್ಮುಖನಿಂದ ತನ್ನ ಮಗನಾದ ಮರೀಚಿಗೆ ಉಪದಿಷ್ಟವಾದ ಶ್ರೀವಿಷ್ಣುಪುರಾಣದ ಮಹಿಮೆಯ ವರ್ಣನೆಯು ಕಂಡು ಬಂದಿದೆ.)

ಹಿಂದೆ ಉದಾಹರಿಸಲ್ಪಟ್ಟ ಪ್ರಶಂಸಾವಾಕ್ಯಗಳ ಅಭಿಪ್ರಾಯವು ಈ ರೀತಿ ಇದೆ. ಸಾತ್ತ್ವಿಕಗಳಾದ ಪುರಾಣಗಳೆಲ್ಲವೂ ಮಾನವನ ಶ್ರೇಯಸ್ಸಿಗೆ ಕಾರಣಗಳಾಗಿವೆ. ಅವುಗಳಲ್ಲೆಲ್ಲಾ ಶ್ರೀಮದ್ಭಾಗವತವೂ, ಶ್ರೀಮದ್ವಿಷ್ಣು ಪುರಾಣವೂ ಶ್ರೇಷ್ಠವೆಂಬುದಾಗಿ ಪರಿಗಣಿಸಲ್ಪಟ್ಟಿದೆ.

ಈ ವಿಷ್ಣುಪುರಾಣಕ್ಕೆ ಸಮಾನವಾದುದು ಮತ್ತೊಂದಿಲ್ಲ. ಈ ವಿಷ್ಣುಪುರಾಣದಲ್ಲಿ ಆರಂಭದಲ್ಲೂ, ಮಧ್ಯಭಾಗದಲ್ಲೂ, ಕಡೆಯ ಭಾಗದಲ್ಲೂ ಸರ್ವೋತ್ತಮನಾದ ಶ್ರೀಹರಿಯು ಮತ್ತೆ ಮತ್ತೆ ಮಹಿಮಾತಿಶಯವುಳ್ಳವನಾಗಿ ಪ್ರತಿಪಾದಿತನಾಗಿದ್ದಾನೆ, ಪ್ರಶಂಸಿಸಲ್ಪಟ್ಟಿರುತ್ತಾನೆ.

ಶ್ರೀಮದ್ವಿಷ್ಣುಪುರಾಣವೆಂಬ ಪ್ರಚಂಡಸೂರ್ಯನಮುಂದೆ ಮಿಕ್ಕ ಪುರಾಣಗಳೆಲ್ಲಾ (ಶ್ರೀಮದ್ಭಾಗವತವನ್ನು ಬಿಟ್ಟು) ಮಿಂಚಿನಹುಳುಗಳಂತಿವೆ. ಶ್ರೀ ಮದ್ವಿಷ್ಣುಪುರಾಣದಲ್ಲಿ ವ್ಯಾಪಕಗಳಾದ ಮಂತ್ರಗಳೂ, ಅವುಗಳ ಅರ್ಥಗಳೂ ಹೆಜ್ಜೆಹೆಜ್ಜೆಗೂ, ಮತ್ತೆ, ಮತ್ತೆ, ಪ್ರಕಾಶಮಾನವಾಗಿ ಪ್ರತಿಪಾದಿತಗಳಾಗಿವೆ.

ಆದಕಾರಣ ಮುಮುಕ್ಷುಗಳಾದ ಅಧಿಕಾರಿಚೇತನರು ಆತ್ಯಾದರದಿಂದ ಈ ಶ್ರೀಮದ್ವಿಷ್ಣುಪುರಾಣವನ್ನು ಶ್ರವಣಮಾಡಿ ಶ್ರೀಹರಿಯ ಕೃಪೆಗೆ ಪಾತ್ರರಾಗಬೇಕು.

ಶ್ರೀಮತ್ಪಾರಾಶರ್ಯೋಪಪುರಾಣೋಕ್ತವಾದ ಶ್ರೀಮದ್ವಿಷ್ಣುಪುರಾಣದ ಮಹಿಮೆಯು ಮುಂದಿನ ರೀತಿ ಇದೆ.

ಅಥೈಕದಾ ತು ಮುನಯಃ ಪ್ರಾತರ್ಹುತಹುತಾಶನಾಃ । ಪರಾಶರಂ ಮುನಿವರಂ ಪ್ರಪಚ್ಛುಃ ಪ್ರಣಾಮ

ಮುದಾ ॥೧॥

**ಅಭಿಪ್ರಾಯ** :- ಆಮೇಲೆ ಒಂದು ದಿನ ಬೆಳಿಗ್ಗೆ ಅಗ್ನಿಹೋತ್ರಾದಿನಿತ್ಯಕರ್ಮಗಳನ್ನೆಲ್ಲಾ ಆಚರಿಸಿದ ತರುವಾಯ ಮುನಿಗಳು ಮುನಿಶ್ರೇಷ್ಠರಾದ ಪರಾಶರರನ್ನು ನಮಸ್ಕರಿಸಿ ಈ ಕೆಳಗೆ ಕಂಡಂತೆ ಪ್ರಶ್ನೆಮಾಡಿದರು.

**ಮುನಯಃ ಊಚುಃ = ಮುನಿಗಳು ಹೇಳಿದರು ।**
**ಭಗವನ್ ಭವತಃ ಶ್ರುತ್ವಾ ಶ್ರೀರಾಮಾಯಣವೈಭವಂ ।**
**ವಿಭಾಗಂ ಚ ಪುರಾಣಾನಾಂ ಧನ್ಯಾಃ ಸ್ಮಃ ಮುನಿಸತ್ತಮ ॥೨॥**
**ಸಾತ್ತ್ವಿಕಾನಿ ಪುರಾಣಾನಿ ಯಾನ್ಯುಕ್ತಾನಿ ತ್ವಯಾ ಮುನೇ ।**
**ಕತಮೇಷ್ವಪಿ ತಚ್ಛ್ರೇಯಃ ತಚ್ಛ್ರಾವ್ಯಂ ಕಥಂ ಭವೇತ್ ॥೩॥**
**ಕಥಮಾರಾಧನಂ ತಸ್ಯ ಕಾ ವೃತ್ತಿಸ್ತತ್ಪ್ರವಕ್ತರಿ ।**
**ಉಪಕ್ರಮೇ ಕಥಾಂತೇಽಸ್ಯ ಕಿಂ ಕಾರ್ಯಂ ಶ್ರೋತೃಭಿಃ ಮುನೇ ॥೪॥**
**ಏತತ್ಸರ್ವಮಶೇಷೇಣ ಶುಶ್ರೂಷೂಣಾಂ ವದ ಪ್ರಭೋ ॥**

**ತಾತ್ಪರ್ಯ** :- ಒಂದು ದಿನ ಬೆಳಿಗ್ಗೆ ನಿತ್ಯವೂ ಆಚರಿಸಬೇಕಾದ ಅಗ್ನಿಹೋತ್ರಾದಿಗಳನ್ನು ಮುಗಿಸಿದ ಮುನಿಗಳು ಮುನಿವರೇಣ್ಯರಾದ ಪರಾಶರರಿಗೆ ನಮಸ್ಕಾರ ಮಾಡಿ ಪ್ರಶ್ನೆ ಮಾಡಿದರು.

ಎಲೈ ಪೂಜ್ಯರಾದ ಪರಾಶರರೇ ನಿಮ್ಮಿಂದ ಶ್ರೀಮದ್ರಾಮಾಯಣದ ವೈಭವವನ್ನು ಕೇಳಿದೆವು. ಪುರಾಣಗಳ ವಿಭಾಗಗಳನ್ನೂ ಕೇಳಿ ಧನ್ಯರಾಗಿದ್ದೇವೆ. ತಾವು ತಿಳಿಸಿದ ಸಾತ್ತ್ವಿಕ ಪುರಾಣಗಳಲ್ಲಿ ಯಾವ ಪುರಾಣವು ಶ್ರೇಯಸ್ಕರವು. ಅದನ್ನು ಹೇಗೆ ಕೇಳಬೇಕು. ಪ್ರಾರಂಭದಲ್ಲಿಯೂ ಕಡೆಯಲ್ಲಿಯೂ ಆ ಪುರಾಣವನ್ನು ಕೇಳಿದ ನಂತರ ಏನನ್ನೂ ಮಾಡಬೇಕು. ಈ ನಮ್ಮ ಪ್ರಶ್ನೆಗಳಿಗೆಲ್ಲಾ ದಯಮಾಡಿ ಸಮಾಧಾನವನ್ನು ಹೇಳಿರಿ. ನಾವು ಅದನ್ನೆಲ್ಲಾ ಕೇಳಲು ಬಹಳ ಉತ್ಸುಕರಾಗಿದ್ದೇವೆ ಎಂದು ಮುನಿಗಳು ಮುನಿವರೇಣ್ಯರಾದ ಪರಾಶರರನ್ನು ಕೇಳಿಕೊಂಡರು.

ಮುನಿಗಳ ಈ ಪ್ರಾರ್ಥನೆಗೆ ಸಮ್ಮತಿಸಿದ ಪರಾಶರರು ಈ ರೀತಿ ವಿವರವಾಗಿ ಉತ್ತರವನ್ನಿತ್ತಿದ್ದಾರೆ.

**ಶ್ರೀಪರಾಶರ ಉವಾಚ** - ಸಾಧು ಪೃಷ್ಟಂ ಮಹಾಭಾಗಾಃ ಶ್ರೂಯತಾಂ ಯದ್ಬ್ರವೀಮಿ ವಃ ।

**ಸಾತ್ತ್ವಿಕಾನಿ ಪುರಾಣಾನಿ ಶ್ರೇಯಾಂಸಿ ನಿಖಿಲಾನ್ಯಪಿ ॥**
**ತತ್ರ ಭಾಗವತಂ ಶ್ರೇಷ್ಠಂ ತತೋ ವೈಷ್ಣವಮುತ್ತಮಮ್ ॥**
**ಪುರಾಣಮೇತತ್ಪದ್ಮಕಂ ಪಶ್ಚನ್ನದುಪಪದ್ಯತೇ ।**
**ಆದೌ ಮಧ್ಯೇ ತಥಾಂತೇ ಚ ಗೀಯತೇಽತ್ರ ಹರಿಃ ಮುಹುಃ ॥**
**ತಾವತ್ಪುರಾಣಾನ್ಯುದ್ಯೋತಾ ಅನ್ಯೇ ಭಾಂತಿ ತತಸ್ತತಃ ।**
**ಯಾವಚ್ಛ್ರೀವೈಷ್ಣವಾಧ್ಯಕ್ಷಪುರಾಣಾರ್ಕೋ ನ ದೃಶ್ಯತೇ ॥**
**ಭಾಂತ್ಯತ್ರ ವ್ಯಾಪಕಾಃ ಮಂತ್ರಾಃ ತದರ್ಥಾಶ್ಚ ಪದೇ ಪದೇ ।**

ತಸ್ಮಾನ್ಮುಮುಕ್ಷುಭಿಸ್ಸರ್ವೈಃ ಶ್ರೋತವ್ಯಮಿದಮಾದರಾತ್ ॥
ವ್ಯಾಪಕೋ ವೈಷ್ಣವೋ ಮಂತ್ರೋ ಯಸ್ತು ಖ್ಯಾತಃ ಷಡಕ್ಷರಃ ।
ಭೂಯಸಾ ತದ್ವಿವರಣಂ ಪುರಾಣಂ ವೈಷ್ಣವಂ ವಿದುಃ ॥
ಷಡಕ್ಷರಸ್ವರೂಪಾಸ್ತೇ ಯೇ ಷಡಂಶಾಃ ಪ್ರಕೀರ್ತಿತಾಃ ।
ಷಡಂಗಯೋಗದುಃಪ್ರಾಪಾಂ ಪ್ರಯಚ್ಛಂತಿ ಗತಿಂ ನೃಣಾಮ್ ॥
ವರ್ಣದ್ವೈಗುಣ್ಯತೋಽಷ್ಟಾಭ್ಯ ದ್ವಾದಶಾಕ್ಷರಸಂಜ್ಞಿತಃ ।
ಮಂತ್ರಸ್ತು ವಾಸುದೇವಸ್ಯ ಷಡ್ವರ್ಣವಿವೃತಿರ್ಭವೇತ್ ॥
ದ್ವಾದಶಾಕ್ಷರಮಂತ್ರಸ್ಯಾಪ್ಯರ್ಥೋಽಸ್ಮಿನ್ ವಿವೃತೋ ಮುಹುಃ ।
ಯಸ್ಯ ಜ್ಞಾನಾತ್ ಕರಸ್ಥಂ ಸ್ಯಾತ್ತದ್ವಿಷ್ಣೋಃ ಪರಮಂ ಪದಮ್ ॥
ಅಷ್ಟಾರ್ಣಪ..ಕಂ ಸ್ಪಷ್ಟಂ ತತ್ರ ತತ್ರ ಸಮೀರಿತಮ್ ।
ತದೇತದ್ಭಗವತ್ಪ್ರಾಪ್ತಿಕಾಮೈಸ್ಸೇವ್ಯಮಿಹಾದರಾತ್ ।
ಆದೌ ಶ್ರೀವಿಷ್ಣುಮಾರಭ್ಯ ಪುಟನಿರ್ಯತಮಾನಸಃ ॥
ಶೃಣುಯಾನ್ನಿಯತಃ ಮಾತ್ಸ್ಯೋಕ್ತಮಾಚಾರ್ಯೇಣ ಮಹರ್ಷಿಯಃ ।
ನಾಲ್ಪೇನ ತಪಸಾ ಲಭ್ಯಂ ಪುರಾಣಮಿದಮುತ್ತಮಮ್ ॥
ಅಪ್ಯೇತದುಪದೇಷ್ಟಾಪಿ ನಾಲ್ಪಪುಣ್ಯೇನ ಲಭ್ಯತೇ ।
ಶ್ರೋತುಮೇತತ್ಪುರಾಣಂ ಚ ಬಹುಜನ್ಮತಪಃಫಲಮ್ ।
ಪ್ರಾಯೇಣ ಮಂದಭಾಗ್ಯಾನಾಂ ಉತ್ಕಂಠಾಪಿ ನ ಜಾಯತೇ ॥
ಲಬ್ಧ್ವಾ ಮಾನುಷ್ಯಕಂ ಜನ್ಮ ಶೃಣುಯಾದ್ಯೋ ನ ವೈಷ್ಣವಮ್ ।
ಮಂದಭಾಗ್ಯಃ ಕಥಂ ಸೋಽಪಿ ಪದಮಾಪ್ನೋತಿ ವೈಷ್ಣವಮ್ ॥
ಯಸ್ಯ ಸ್ಯಾಚ್ಚರಮಂ ಜನ್ಮ ಭಗವದ್ಭಕ್ತಿಶಾಲಿನಃ ।
ತಸ್ಯ ಶ್ರುತಿಪಥಂ ಯಾತಿ ಪುರಾಣಂ ವೈಷ್ಣವಂ ಪರಮ್ ॥
ಭೋಗ್ಯಂ ತದೇತದ್ಭಕ್ತಾನಾಂ ಪ್ರಪನ್ನಾನಾಂ ರಸಾಯನಂ ।
ತೈರೇತದಾದರಾಚ್ಛ್ರೇಯಂ ಯೈರ್ಲಭ್ಯಂ ವೈಷ್ಣವಂ ಪದಮ್ ॥
ಪುರಾಣಂ ವೈಷ್ಣವಂ ಸರ್ವೈಃ ಸರ್ವಾತ್ಮಾಖ್ಯಾಯತೇ ಸ್ವಭಿಃ ।
ತತ್ತ್ವಯಾಥಾತ್ಮ್ಯವೇದ್ಯಸ್ಮಿನ್ ದುರ್ಲಭ್ಯಸ್ತ್ವಿವಿಸ್ಮಹಮ್ ॥
ವರದಾನಾದ್ವಸಿಷ್ಠಸ್ಯ ದೇವತಾಪಾರಮಾರ್ಥ್ಯವಿತ್ ।
ಮೈತ್ರೇಯಾಯಾನ್ವಕಥಯಂ ತದೇತದಹಮಾದರಾತ್ ॥
ವೈಷ್ಣವಸ್ಯ ಪುರಾಣಸ್ಯ ತತ್ತ್ವವೇದ್ಯಹಮೇವ ಹಿ ।
ಮೈತ್ರೇಯಶ್ಚ ತಥಾವ್ಯಾಸೋ ಭುವನೇಽನ್ಯೋಽಸ್ತಿ ವಾ ನ ವಾ ॥
ಯೋವದೇದ್ವೈಷ್ಣವಂ ವಿದ್ವಾನ್ ಸೋಽಹಮೇವ ನ ಸಂಶಯಃ ।
ಶೃಣುಯಾದ್ಯಃ ಪುಮಾನ್ ಲೋಕೇ ಸ ಮೈತ್ರೇಯೋ ನ ಸಂಶಯಃ ॥
ಇದಂ ಯೇ ಶೃಣುಯುರ್ಭಕ್ತ್ಯಾ ನಾರಾಯಣಪರಾಯಣಾಃ ।

ಸ್ತ್ರಿಯೋ ವೈಶ್ಯಾಶ್ಚ ಶೂದ್ರಾಶ್ಚ ಸರ್ವೇ ಯಾಂತಿ ಪರಾಂ ಗತಿಂ ||
ನ ಸೇತುರ್ನ ಗಯಾ ಗಂಗಾ ನ ಕಾಶೀ ನ ಚ ಪುಷ್ಕರಮ್ ||
ಅರ್ಹಂತಿ ವೈಷ್ಣವಸ್ಯಾಸ್ಯ ಕಲಾಂ ಕೋಟಿತಮಾಮಪಿ ||
ಏಕತ್ರ ಯಜ್ಞಾನ್ ತೀರ್ಥಾನಿ ಪುರಾಣಮಿದಮೇಕತಃ ||
ವಿಷ್ಣುನಾ ತುಲಿತಂ ದೇವೈಃ ಪುರಾಣಂ ಗುರುತಾಮಗಾತ್ ||
ಸರ್ವಾತ್ಮಕಮಂತ್ರಾರ್ಥಯಾಥಾತ್ಮ್ಯಪರಿಪೋಷಣಂ |
ಕ್ವೇದಂ ಪುರಾಣಮಮಲಂ ಕ್ವೇಷ್ಟಾಪೂರ್ತಾದಿಕಂ ಫಲಮ್ ||
ಯಜ್ಞಾನ್ ಸಹಸ್ರಂ ಕುರ್ಯಾದ್ವಾ ಪರ್ಯಟೇದ್ವಾ ಧರಾತಲಮ್ |
ತೀರ್ಥೇಷು ವಿನಿಮಜ್ಜೇದ್ವಾ ಜ್ಞಾನಂ ತ್ವೇತತ್ಸುದುರ್ಲಭಮ್ ||
ವಸಂತಿ ಮತ್ಸ್ಯಾಸ್ತೀರ್ಥೇಷು ದಿವ್ಯಕ್ಷೇತ್ರೇಷು ಪಕ್ಷಿಣಃ |
ವಿನಾ ಜ್ಞಾನೇನ ಕಾಂ ಸಿದ್ಧಿಂ ಗತಾ ಬ್ರೂತ ತಪೋಧನಾಃ ||
ತಸ್ಮಾದಾರ್ಜಯಿತುಂ ಜ್ಞಾನಂ ಶುದ್ಧಂ ವೈಷ್ಣವಮುತ್ತಮಂ |
ಇತಿಹಾಸಪುರಾಣಾನಿ ಸದಾಶ್ರಾವ್ಯಾಣಿ ಮಾನವೈಃ |
ಇತಿಹಾಸಪುರಾಣಾನಾಂ ತತ್ವಂ ನಾರಾಯಣಃಪರಃ |
ಯೈರ್ನಜ್ಞಾತೋ ಮಂದಭಾಗ್ಯೈಃ ಪಶುಪ್ರಾಯಾ ಹಿ ತೇ ಮತಾಃ ||
ತೇಷಾಂ ದಾನಾನಿ ಸರ್ವಾಣಿ ಯಜ್ಞಾಃ ಸರ್ವೇ ತಪಾಂಸಿ ಚ |
ತೀರ್ಥಾಟನಂ ಚ ಪೂರ್ತಾಶ್ಚ ನಿಷ್ಫಲಾನಿ ನ ಸಂಶಯಃ ||
ದಾನಯಜ್ಞಾದಿಕಂ ಸರ್ವಂ ಯತ್ಕೃತಂ ಜ್ಞಾನಪೂರ್ವಕಂ |
ತದ್ವೀರ್ಯವತ್ತಮಂ ಪ್ರೋಕ್ತಂ ಸರ್ವವೇದೈಃ ಪುನಃ ಪುನಃ ||
ಕಿಮತ್ರ ಬಹುನೋಕ್ತೇನ ಪುರಾಣಸ್ಯಾಸ್ಯ ವೈಭವಮ್ |
ನಾರಾಯಣಃ ಪರಂಬ್ರಹ್ಮ ಯಃಸ ಶಕ್ನೋತ್ಯುದೀರಿತುಮ್ ||
ಪುರಾಣಂ ವೈಷ್ಣವಾದನ್ಯನ್ನಹನ್ಯನ್ನಾಸ್ತಿ ಕಿಂಚನ |
ನ ವಿಷ್ಣೋಃ ಪರಮಂ ದೈವಂ ಲೋಕೇ ವೇದೇ ಚ ದೃಶ್ಯತೇ ||
ಇತ್ಯೇತತ್ಸರ್ವಮುದ್ದಿಷ್ಟಂ ಯತ್ಪೃಷ್ಟಂ ಭಗವತ್ತಮೈಃ |
ಅತ್ರನಿಃಸಂಶಯೈರ್ಭಾವ್ಯಂ ಕಿಮನ್ಯತ್ ಶ್ರೋತುಮಿಚ್ಛಥ ||ಇತಿಕಿಲಪರಮಾರ್ಥತೋ
ಮಯೋಕ್ತಂ
ವಿತನುತ ಜಾತ್ವಿಹ ನಾರ್ಥವಾದಬುದ್ಧಿಂ |
ಪ್ರಭವತಿ ಮಹಿಮಾಪರೋಽಸ್ಯ ಯಾವಾನ್ ||
ಪ್ರಗದಿತುಂ ನ ತು ಶಕ್ಯತೇ ಹಿ ತಾವಾನ್

ಇತಿ ಶ್ರೀಮತ್ಪಾರಾಶರ್ಯೋಕ್ತಪುರಾಣೋಕ್ತ ಶ್ರೀ ಮದ್ವಿಷ್ಣುಪುರಾಣಮಹಿಮಾಸಾರಃ ಸಮಾಪ್ತಃ.

**ತಾತ್ಪರ್ಯ** :- ಪುಣ್ಯಾತ್ಮರಾದ ಮುನಿಗಳು ಪ್ರಶ್ನೆಮಾಡಿದುದಕ್ಕೆ, ಉತ್ತರರೂಪವಾಗಿ ಪರಮಧಾರ್ಮಿಕರೂ ಯೋಗಿವರೇಣ್ಯರೂ ಆದ ಶ್ರೀಪರಾಶರರು ಹೇಳಿದ ಉತ್ತರದ ಸಾರಾಂಶವು ಈ ಕೆಳಗೆ ಕಂಡಂತಿದೆ.

ವೈರಾಗ್ಯಭಾಗ್ಯಸಂಪನ್ನರಾದ ಮುನಿಗಳಿರಾ ನೀವು ಒಳ್ಳೆಯ ವಿಚಾರವಾಗಿ ಪ್ರಶ್ನೆಮಾಡಿದ್ದೀರಿ ನಿಮ್ಮ ಪ್ರಶ್ನೆಗಳಿಗೆ ನಾನು ಉತ್ತರವನ್ನು ಹೇಳುವೆನು ಸಾವಧಾನವಾಗಿ ಕೇಳಿರಿ.

ಸಾತ್ವಿಕಪುರಾಣಗಳೆಲ್ಲಾ ನಿಮ್ಮ ಶ್ರೇಯಸ್ಸಿಗೆ ಕಾರಣಗಳು ಇದರಲ್ಲಿ ಸಂದೇಹವೇ ಇಲ್ಲ. ಆ ಸಾತ್ವಿಕಪುರಾಣಗಳಲ್ಲೂ ಕೂಡ ಶ್ರೀಮದ್ಭಾಗವತವೂ ಶ್ರೀಮಹಾವಿಷ್ಣುಪುರಾಣವೂ ಶ್ರೇಷ್ಠವಾಗಿವೆ.

ಇವುಗಳಿಗೆ ಸರಿಸಮಾನವಾದ ಪುರಾಣವು ಮತ್ತೊಂದಿಲ್ಲ. ಇವೆರಡರಲ್ಲಿಯೂ ಪ್ರಾರಂಭದಲ್ಲಿಯೂ, ಮಧ್ಯದಲ್ಲಿಯೂ, ಕಡೆಯಲ್ಲಿಯೂ ಶ್ರೀಹರಿಯು ಮತ್ತೆ ಮತ್ತೆ ಸ್ತೋತ್ರಮಾಡಲ್ಪಟ್ಟಿರುತ್ತಾನೆ.

ಶ್ರೀಮಹಾವಿಷ್ಣುಪುರಾಣದ ಮುಂದೆ ಶ್ರೀಮದ್ಭಾಗವತದ ಹೊರತಾಗಿ ಯಾವ ಪುರಾಣವೂ ಸಹ ಪ್ರಕಾಶಿಸಲಾರದು. ಶ್ರೀವಿಷ್ಣುಪುರಾಣವೆಂಬ ಪ್ರಚಂಡಸೂರ್ಯನ ಮುಂದೆ ಮಿಕ್ಕ ಪುರಾಣಗಳು ಮಿಂಚುಹುಳುವಿನಂತಿವೆ.

ಈ ಮಹಾವಿಷ್ಣುಪುರಾಣದಲ್ಲಿ ವ್ಯಾಪಕಗಳಾದ ಮಂತ್ರಗಳೂ, ಅವುಗಳ ಅರ್ಥಗಳೂ ಪುನಃ ಪುನಃ ಹೇಳಲಾಗಿವೆ. ಆದಕಾರಣ ಮುಮುಕ್ಷುಗಳಾದ ಯೋಗ್ಯಚೇತನರು. ಈ ಮಹಾವಿಷ್ಣುಪುರಾಣವನ್ನು ಆದರದಿಂದ ಕೇಳಬೇಕು. ವ್ಯಾಪಕಗಳಾದ ಮಂತ್ರಗಳಲ್ಲಿ ಪ್ರಧಾನವಾದ ಷಡಕ್ಷರ ಶ್ರೀವಿಷ್ಣುಮಹಾಮಂತ್ರವೆಂದೇ ಸುಪ್ರಸಿದ್ಧವಾದ ಶ್ರೀವಿಷ್ಣು ಮಹಾಮಂತ್ರವು ''ಓಂವಿಷ್ಣವೇನಮಃ'' ಎಂಬುದು ಷಡಕ್ಷರದಿಂದಕೂಡಿದ ಮಹಾಮಂತ್ರವಾಗಿದೆ. ಇದರಲ್ಲಿ ''ವಿ, ಷ, ಣ, ನ, ಮಃ'' ಎಂಬುದಾಗಿ ''ಷ, ಣ,'' ಗಳು ಪ್ರತ್ಯೇಕವಾಗಿವರ್ಣಗಳೆಂದು ಪರಿಗಣಿತವಾಗಿರುವ ಪ್ರಯುಕ್ತ ಓಂ ವಿಷ್ಣವೇನಮಃ ಎಂಬುದೇ ಶ್ರೀವಿಷ್ಣುಮಹಾಮಂತ್ರವು. ಈ ಮಂತ್ರದ ವಿಸ್ತಾರವಾದ ವ್ಯಾಖ್ಯಾನರೂಪವಾಗಿಯೇ ಶ್ರೀಮಹಾವಿಷ್ಣುಪುರಾಣವು ಪ್ರವೃತ್ತವಾಗಿದೆ. ಈ ಆರು ಅಕ್ಷರಗಳ ಸ್ವರೂಪವಾಗಿಯೇ ಷಡಂಶಗಳು ಪೂರ್ವಖಂಡವಾಗಿ ಆರು ಶ್ಲೋಕಗಳಲ್ಲಿ ಹೇಳಲ್ಪಟ್ಟಿವೆ.

ಹದಿನೇಳು ಸಹಸ್ರಶ್ಲೋಕಗಳಿಂದ ಕೂಡಿದ ವಿಷ್ಣುಧರ್ಮೋತ್ತರಭಾಗವು ಉತ್ತರಖಂಡವೆನಿಸಿದೆ. ಷಡಕ್ಷರದಿಂದ ಕೂಡಿದ ವಿಷ್ಣುಮಹಾಮಂತ್ರದ ಅಕ್ಷರಗಳಿಗೆ ಎರಡು ಪಟ್ಟು ಜಾಸ್ತಿಯಾಗಿರುವ ಅಂದರೆ ಹನ್ನೆರಡು ಅಕ್ಷರಗಳಿಂದ ಕೂಡಿದ ''ಓಂ ಓಂ ನಮೋಭಗವತೇವಾಸುದೇವಾಯ ಓಂ'' ಎಂಬ ಶ್ರೀವಾಸುದೇವದ್ವಾದಶಾಕ್ಷರಮಹಾಮಂತ್ರವು. ಷಡಕ್ಷರದಿಂದ ಕೂಡಿದ ಶ್ರೀವಿಷ್ಣುಷಡಕ್ಷರ ಮಂತ್ರದ ವಿವರಣರೂಪವಾಗಿದೆ. ಈ ಪುರಾಣದಲ್ಲಿ ಷಡಕ್ಷರ ಶ್ರೀವಿಷ್ಣುಮಹಾ ಮಂತ್ರದ ಅರ್ಥವೂ ವಿವರಿಸಲ್ಪಟ್ಟಿದೆ.

ಈ ಮಹಾಮಂತ್ರಗಳ ಅರ್ಥಾನುಸಂಧಾನಪೂರ್ವಕವಾದ ಜಪದಿಂದ ವೈಕುಂಠಲೋಕವು ಕರಗತವಾಗುವುದು. ಅಲ್ಲಲ್ಲಿ ಈ ಪುರಾಣದಲ್ಲಿ ಈ ಮಂತ್ರಗಳ ಅರ್ಥಗಳು ವಿವರಿಸಲ್ಪಟ್ಟಿವೆ. ಪರಮಾತ್ಮನ ಪ್ರಾಪ್ತಿಯನ್ನು ಅಪೇಕ್ಷಿಸುವ ಸಜ್ಜನರು ಆದರದಿಂದ ಈ ಪುರಾಣವನ್ನು ಪುರಸ್ಕರಿಸಬೇಕು ಕೇಳಬೇಕು. ಭಗವಂತನನ್ನು ಆರಾಧಿಸಬೇಕು.

ಈ ಪುರಾಣವನ್ನು ಕೇಳುವಕ್ರಮವೇನೆಂದರೆ :-

ಮೊದಲು ಶ್ರೀಮಹಾವಿಷ್ಣುವಿನ ಆರಾಧನೆಯನ್ನು ಮಾಡಬೇಕು. ಶುಚಿರ್ಭೂತನಾಗಿ, ಏಕಾಗ್ರಮನಸ್ಸಿನಿಂದ ಕೂಡಿದ ಭಕ್ತಿಯಿಂದ ಈ ಪುರಾಣವನ್ನು ಶ್ರವಣಮಾಡಬೇಕು. ಇದನ್ನು ಕೇಳಲು ಬಹಳ ಪುಣ್ಯಮಾಡಿರಬೇಕು. ಅಲ್ಪಪುಣ್ಯದಿಂದ ಇದರ ಶ್ರವಣವು ಲಭಿಸಲಾರದು.

ಮಂದಭಾಗ್ಯರಿಗೆ ಇದರ ಸೇವಾಲಭಿಸಲಾರದು. ಪಾಪಿಗಳಿಗೂ, ಅಲ್ಪಪುಣ್ಯವಂತರಿಗೂ ಇದರ ವಿಷಯದಲ್ಲಿ ಆಸಕ್ತಿಯು ಸಹ ಹುಟ್ಟುವುದಿಲ್ಲ.. ಯಾವ ಯೋಗ್ಯನಾದ ಚೇತನನಿಗೆ ಈ ನರಜನ್ಮವು ಕಟ್ಟಕಡೆಯದಾಗಿರುತ್ತದೆಯೋ ಅಂತಹವನಿಗೆ ಈ ಮಹಾವಿಷ್ಣುಪುರಾಣವು ಕಿವಿಗೆ ಗೋಚರವಾಗುತ್ತದೆ.

ದುರ್ಲಭವಾದ ವೈಷ್ಣವಜನ್ಮವು ಬಂದಿರುವಾಗ ಭಗವಂತನ ಭಕ್ತರಾಗಿರುವ ಯೋಗ್ಯರಾದ ಮಾನವರು ಈ ಪುರಾಣವನ್ನು ಅವಶ್ಯತಿಳಿಯಲೇಬೇಕು. ಇದು ಪರಮದುರ್ಲಭವಾದುದೆಂಬುದನ್ನು ನಾನು ಮೂರು ಸಹ ಪ್ರತಿಜ್ಞೆಮಾಡಿ ಹೇಳುತ್ತೇನೆ. ಎಲೈ ಮುನಿಗಳಿರಾ -

ಹಿಂದೆ ಇದನ್ನು ಕೇಳಿಯೇ ವಶಿಷ್ಠರಿಗೆ ವರಪ್ರಾಪ್ತಿಯಾಯಿತು. ನಾನೂ ಸಹ ಮೈತ್ರೇಯರಿಗೆ ಇದನ್ನು ಹೇಳಿದ್ದೇನೆ.

ಇದರ ರಹಸ್ಯವನ್ನು ನಾನೊಬ್ಬನೇ ಬಲ್ಲೆ. ಮೈತ್ರೇಯನೂ ಬಲ್ಲ. ಶ್ರೀವೇದವ್ಯಾಸರೂ ಬಲ್ಲರು. ಈ ನಾವು ಮೂರು ಜನರು ಹೊರತು ಮತ್ತಾರಿಗೂ ಈ ಮಹಾವಿಷ್ಣು ಪುರಾಣದ ರಹಸ್ಯವು ತಿಳಿದಿಲ್ಲ. ಇದನ್ನು ಚೆನ್ನಾಗಿ ಅರಿತವರು ಭೂಲೋಕದಲ್ಲಿ ಮತ್ತೊಬ್ಬರು ಇದ್ದಾರೋ ಇಲ್ಲವೋ. ಈ ಮಹಾವಿಷ್ಣುಪುರಾಣವನ್ನು ಹೇಳಲು ವಿದ್ವಾಂಸನಾದ ನಾನೇ ಸಮರ್ಥನು ಎಂಬುದರಲ್ಲಿ ಸಂದೇಹವಿಲ್ಲ, ಇದನ್ನು ಭಕ್ತಿಯಿಂದ ಕೇಳಲು ಮೈತ್ರೇಯನ ಹೊರತು ಬೇರೆಯಾರೂ ಸಮರ್ಥರಿಲ್ಲ, ಇದರಲ್ಲಿ ಸಂದೇಹವಿಲ್ಲ. ಶ್ರೀಮನ್ನಾರಾಯಣನಲ್ಲಿ ಪರಾಯಣರಾಗಿ ಇದನ್ನು ಭಕ್ತಿಯಿಂದ ಕೇಳಿದವರು ಹೆಂಗಸಾಗಲಿ ವೈಶ್ಯರಾಗಲಿ, ಶೂದ್ರರೇ ಆಗಿರಲಿ, ಅವರೆಲ್ಲರಿಗೂ ಸದ್ಗತಿಯಾಗುತ್ತದೆ.

ಈ ಪುರಾಣದ ಕೋಟಿತಮವಾದ ಪುಣ್ಯ ಕಲೆಗೆ ಸಮಾನವಾದ ಪುಣ್ಯ ಸೇತು ಸ್ನಾನಕ್ಕಾಗಲಿ ಗಯಾಕ್ಕಾಗಲಿ ಗಂಗಾಕ್ಕಾಗಲಿ, ಕಾಶೀಗಾಗಲಿ, ಪುಷ್ಕರಕ್ಕಾಗಲಿ ಇರುವುದಿಲ್ಲ.

ಹಿಂದೆ ದೇವತೆಗಳೆಲ್ಲಾ ಸೇರಿ ತಕ್ಕಡಿಯಲ್ಲಿ ಒಂದುಕಡೆ ಸಕಲಯಜ್ಞಗಳನ್ನು, ಸಕಲತೀರ್ಥಗಳನ್ನು ಅಭಿಮಂತ್ರಿಸಿಟ್ಟರು. ಮತ್ತೊಂದು ತಕ್ಕಡಿಯಲ್ಲಿ ಈ ಪುರಾಣವನ್ನಿಟ್ಟು ತೂಗಿದರು. ಆಗ ಈ ಮಹಾವಿಷ್ಣುಪುರಾಣವು ಭಾರದಿಂದ ಅವೆಲ್ಲಕ್ಕಿಂತಲೂ ಅಧಿಕವಾಗಿ ತೂಕವುಳ್ಳದುದಾಗಿ ನಿಶ್ಚಯಿಸಲ್ಪಟ್ಟಿತು. ಸರ್ವವ್ಯಾಪಕಪರಮಾರ್ಥಗರ್ಭಿತವಾದ ಅತಿನಿರ್ಮಲವಾದ ಈ ಪುರಾಣವೆಲ್ಲಿ ! ಯಜ್ಞಯಾಗಾದಿಗಳೆಲ್ಲಿ !

ಸಹಸ್ರಯಜ್ಞಗಳನ್ನೇ ಮಾಡಿರಲಿ, ಇಡೀ ಭೂ ಭಾಗವನ್ನೆಲ್ಲ ಯುತ್ರೆಮಾಡಿರಲಿ, ಸಕಲ ತೀರ್ಥಗಳಲ್ಲಿ ಸ್ನಾನಮಾಡಿರಲಿ, ಅವೆಲ್ಲಾ ಈ ವಿಷ್ಣುಮಹಾ ಪುರಾಣದ ಜ್ಞಾನಕ್ಕೆ ಸಮನಾಗಲಾರವು. ಈ ಭೂಮಂಡಲದಲ್ಲಿರತಕ್ಕ ತೀರ್ಥಗಳಲ್ಲಿ ಮೀನುಗಳೆಷ್ಟೋ ಇವೆ. ದಿವ್ಯ ಕ್ಷೇತ್ರಗಳಲ್ಲಿ ಪಕ್ಷಿಗಳೆಷ್ಟೋ ಲೆಕ್ಕಕ್ಕೆ ಬಾರದಷ್ಟಿವೆ. ಆದಾಗ್ಯೂ ಜ್ಞಾನವಿಲ್ಲದೇ ಇದ್ದರೆ ಅವುಗಳಿಗೆ ಸಿದ್ಧಿಯು ಹೇಗೆ ಉಂಟಾದೀತು. ಎಲೈ ತಪೋಧನರೇ ತತ್ವಜ್ಞಾನದ ಮಹಿಮೆಯನ್ನರಿತ ಮುನಿಗಳಿರಾ; ಆದಕಾರಣ ಶುದ್ಧವಾದ ವಿಷ್ಣು ಸರ್ವೋತ್ತಮತ್ವದ ಜ್ಞಾನವನ್ನು ಪವಿತ್ರವಾದುದನ್ನು ಸಂಪಾದಿಸಲು ಇತಿಹಾಸಪುರಾಣಗಳನ್ನು ಸಮಾಧಿಭಾವಯಿಂದ ರಹಸ್ಯದ ಪ್ರಕಾರಗಳನ್ನು ಚೆನ್ನಾಗಿ ತಿಳಿದು ಶ್ರವಣಮಾಡಬೇಕು. ಅತಿದುರ್ಲಭವಾದ ಶ್ರೀಹರಿಯ ಸರ್ವೋತ್ತಮತ್ವಜ್ಞಾನವನ್ನು ಈ ಮಾನವ ಜನ್ಮವು ಇರುವಾಗಲೇ ಸಂಪಾದಿಸಿ ಕೃತಕೃತ್ಯನಾಗಬೇಕು.

ವೇದಾರ್ಥಪರಿಪೋಷಕಗಳಾದ ವೇದಾನುಗುಣಗಳಾದ ಇತಿಹಾಸ ಪುರಾಣಗಳ ಮೂಲಕವಾಗಿ ಸರ್ವೋತ್ತಮನಾದ ಶ್ರೀಮನ್ನಾರಾಯಣನನ್ನು ಯಾವಮಂದ ಭಾಗ್ಯರಾದ ಮಾನವರು ತಿಳಿದಿಲ್ಲವೋ ಅವರೆಲ್ಲರೂ ಪಶುಗಳಿದ್ದಂತೆ ಎಂಬುದರಲ್ಲಿ ಸಂದೇಹವೇ ಇಲ್ಲ. ಅವರ ಮಾನವ ಜನ್ಮವು ವ್ಯರ್ಥವೇ ಸರಿ.

ಶ್ರೀ ಹರಿಯ ಹಿರಿಮೆಯನ್ನು ಅರಿಯದವರ ದಾನಗಳಾಗಲಿ, ಸರ್ವಯಜ್ಞಗಳಾಗಲಿ, ಅವರು ಆಚರಿಸುವ ತಪಸ್ಸಾಗಲಿ, ತೀರ್ಥಕ್ಷೇತ್ರಸೇವನೆಗಳಾಗಲಿ ಯಜ್ಞಗಳಾಗಲಿ ಎಲ್ಲವೂ ನಿರರ್ಥಕವು ನಿಷ್ಪ್ರಯೋಜನವು.

ದಾನಯಜ್ಞಾದಿಗಳೆಲ್ಲವನ್ನೂ ಸಹ ಜ್ಞಾನಪೂರ್ವಕವಾಗಿಯೇ ಆಚರಿಸಬೇಕು. ಹಾಗೆ ಮಾಡಿದಪಕ್ಷದಲ್ಲಿ ಅವೆಲ್ಲವೂ ವೀರ್ಯವತ್ತಾಗಿ ಫಲಪ್ರದಗಳಾಗುತ್ತವೆಯೆಂದು ಸಕಲ ವೇದಗಳು ಪುನಃ ಪುನಃ (ಮತ್ತೆ ಮತ್ತೆ) ಎಚ್ಚರಿಸುತ್ತಲಿವೆ.

**ಎಲೈಮುನಿಗಳಿರಾ** :- ಈ ಮಹಾವಿಷ್ಣು ಪುರಾಣದ ಮಹಿಮೆಯನ್ನು ಇನ್ನೆಷ್ಟು ವರ್ಣಿಸಲಿ, ಹೆಚ್ಚು ಎಷ್ಟು ಹೇಳಿದರೂ ಅದು ಅಲ್ಪವೆ ಸರಿ. ಮುಖ್ಯವಾಗಿ ನಾವು ತಿಳಿಯಬೇಕಾದ ತತ್ವರಹಸ್ಯವೇನೆಂದರೆ :-

ಶ್ರೀಮನ್ನಾರಾಯಣನೇ ಅನಂತಕಲ್ಯಾಣಗುಣಪರಿಪೂರ್ಣನಾದ ಸಕಲದೋಷರಹಿತನಾದ ಪರಬ್ರಹ್ಮನು. ಅವನೇ ಇದರ ಮಹಿಮೆಯನ್ನು ಹೇಳಲು ಸಮರ್ಥನು. ಇದಕ್ಕಿಂತ ಹೆಚ್ಚಾದ ವಿಷ್ಣುಮಹಿಮಾ ಬೇರೊಂದಿಲ್ಲ.

ಶ್ರೀವಿಷ್ಣುವಿಗೆ ಸಮನಾಗಲಿ, ಅಧಿಕನಾಗಲಿ ಬೇರೊಬ್ಬನಾರೂ ಇರುವುದಿಲ್ಲ. ಲೌಕಿಕಗಳಾದ ಪೌರುಷೇಯಗಳಾದ ವಾಙ್ಮಯದಲ್ಲೂ, ಸಕಲವೇದಗಳಲ್ಲೂ ಈ ವಿಷಯವು ನಿಶ್ಚಯಿಸಲ್ಪಟ್ಟಿದೆ.

ಈ ಮೇಲೆ ಕಂಡಂತೆ ನಾನು ನಿಮ್ಮ ಪ್ರಶ್ನೆಗಳಿಗೆಲ್ಲಾ ಉತ್ತರವನ್ನು ಹೇಳಿದುದಾಗಿದೆ. ಈ ಶ್ರೀಹರಿಯ ಸರ್ವೋತ್ತಮತ್ವದ ವಿಷಯದಲ್ಲಿ ಲೇಶಮಾತ್ರವೂ ಸಂದೇಹವಿಲ್ಲದೆ ಇರಬೇಕೆಂಬ ಅಭಿಪ್ರಾಯದಿಂದ ಇಷ್ಟುದೀರ್ಘವಾಗಿ ನಿಮಗೆಲ್ಲ ತಿಳಿಸಿದ್ದೇನೆ. ಇನ್ನೇನಾದರೂ ಕೇಳಬೇಕೆಂಬ ಅಪೇಕ್ಷೆ ಇದ್ದರೆ ಕೇಳಿರಿ.

ಇದಿಷ್ಟನ್ನು ಪರಮರಹಸ್ಯವಾದ ಪರಮಪವಿತ್ರವಾದ ಸತ್ಯಸಂಗತಿಯನ್ನು ನಿಮಗೆ ಹೇಳಿದ್ದೇನೆ. ಇದನ್ನೆಲ್ಲಾ ಅರ್ಥವಾದವೆಂದೂ ಕಲ್ಪನೆಯೆಂದೂ ತಿಳಿಯಬೇಡಿರಿ.

ಆ ಮಹಾ ಪ್ರಭುವಾದ (ಶ್ರೀಹರಿಯ) ಶ್ರೀ ವಿಷ್ಣುವಿನ ಅಪಾರವಾದ ಅಚಿಂತ್ಯಗಳಾದ ಯಾವತ್ತೂ ಮಹಿಮೆಗಳುಂಟೋ ಅವೆಲ್ಲವನ್ನೂ ಚೆನ್ನಾಗಿ ಸಮಗ್ರವಾಗಿ ಬಾಯಿಬಿಡದಂತೆ ಹೇಳಲೂವರ್ಣಿಸಲು ಸಾಧ್ಯವೇ ಇಲ್ಲ. ಅದನ್ನೂ ಹೇಳಲೂ ನಾವು ಅಶಕ್ತರಾಗಿರುತ್ತೇವೆ ಎಂದು ಶ್ರೀ ವಿಷ್ಣು ಪುರಾಣದ ಮಹಿಮೆಯು ಉಕ್ತವಾಗಿದೆ.

ಹಿಂದೆ ತಿಳಿಸಿದ ಸರ್ವಶ್ರೇಷ್ಠವಾದ ಶ್ರೀಮದ್ವಿಷ್ಣುಪುರಾಣಕ್ಕೆ ಚಿತ್ಸುಖಮುನಿಯವರು ಚಿತ್ಸುಖೀಯವೆಂಬ ವ್ಯಾಖ್ಯಾನವನ್ನು, ಹಾಗೂ ಶ್ರೀಧರಸ್ವಾಮಿ ಎಂಬುವರು ಶ್ರೀಧರೀಯ ಅಥವಾ ಆತ್ಮಪ್ರಕಾಶ ಎಂಬ ವ್ಯಾಖ್ಯಾನವನ್ನೂ ರಚಿಸಿದ್ದಾರೆ. ಶ್ರೀವಿಷ್ಣುಚಿತ್ತಾಚಾರ್ಯರೆಂಬುವವರು ಶ್ರೀವೈಷ್ಣವಮತಾವಲಂಬಿಗಳು, ವಿಷ್ಣುಚಿತ್ತೀಯವೆಂಬ ವ್ಯಾಖ್ಯಾನವನ್ನೂ ರಚಿಸಿದ್ದಾರೆ. ಅವೆಲ್ಲಕ್ಕಿಂತಲೂ ಸಹ ಅತಿಶಯವಾಗಿ ಶ್ರೀಮನ್ಮಧ್ವಮತಾವಲಂಬಿಗಳಾದ ದತ್ತಾತ್ರೇಚಾರ್ಯರೆಂಬುವರು ಸುಬೋಧಿನೀ ಎಂಬ ಅತಿಶ್ರೇಷ್ಠವಾದ ವ್ಯಾಖ್ಯಾನವನ್ನು "ದತ್ತಾತ್ರೇಯೀಯ" ಎಂಬ ಹೆಸರಿನಿಂದ ರಚಿಸಿರುತ್ತಾರೆ.

ಇದರಂತೆ ರತ್ನಗರ್ಭಭಟ್ಟಾಚಾರ್ಯರೆಂಬುವವರು ರಚಿಸಿರುವ ರತ್ನಗರ್ಭೀಯವೆಂಬ ಮತ್ತೊಂದು ವ್ಯಾಖ್ಯಾನವೂ ಅಚ್ಚಾಗಿಪ್ರಕಟಿತವಾಗಿದೆ.

ಶ್ರೀ ದತ್ತಾತ್ರೇಯಾಚಾರ್ಯರಿಂದ ವಿರಚಿತವಾದ (ದತ್ತಾತ್ರೇಯೀಯ) ಸುಬೋಧಿನೀ ಎಂಬ ಹೆಸರಿನ ವ್ಯಾಖ್ಯಾನಕಾರರಾದ ಶ್ರೀ ದತ್ತಾತ್ರೇಯರ ವಿಚಾರ :

ಶ್ರೀ ದತ್ತಾತ್ರೇಯಾಚಾರ್ಯರು ಸುಬೋಧಿನೀ ವ್ಯಾಖ್ಯಾನದ ಪ್ರಾರಂಭದಲ್ಲಿ ಚತುರ್ಮುಖ ಬ್ರಹ್ಮಾದಿಗಳಿಂದ ಸೇವಿತವಾದ ಪಾದಪದ್ಮವನ್ನುಳ್ಳ ಶ್ರೀ ಮುಕುಂದನಿಗೆ ನಮಸ್ಕರಿಸಿದ ತರುವಾಯ ಶ್ರೀಮನ್ಮಧ್ವಾಚಾರ್ಯರಿಗೆ ನಮಸ್ಕಾರ ಮಾಡಿರುವ ಮಂಗಳ ಪದ್ಯವನ್ನು ಮೊದಲು ರಚಿಸಿ ವ್ಯಾಖ್ಯಾನ ಗ್ರಂಥದ ಆದಿಯಲ್ಲಿ ನಿಬಂಧನೆ ಮಾಡಿರುತ್ತಾರೆ. ಅದು ಈ ರೀತಿ ಇದೆ :

**ಶ್ರೀಯಃಪತಿಂಪೂರ್ಣಗುಣೈಕಸಾರಂ ಭಕ್ತೇಷ್ಟದಂ ಭಕ್ತಭಯಾಪಹಂ ಪ್ರಭುಂ।**
**ಅಜಾದಿಸಂಸೇವಿತಪಾದಪಲ್ಲವಂ ವಂದೇ ಮುಕುಂದಂ ಮರುದಂಶವಲ್ಲಭಮ್।।**
**ಸದಾಗಮಾಂಭೋರುಹಕೋರಕಾಣಾಂ ಯದುಕ್ತಯೋ ಭಾನುಕರಾ ವಿಕಾಸೇ।**
**ತಂಪೂರ್ಣಬೋಧಂ ಭುವನೈಕಬಂಧುಂ ವಂದೇ ಗುರುಂ ಬುದ್ಧಿವಿಕಾಸನಾಯ।।**

ಮೇಲೆ ಕಂಡಂತೆ ಶ್ರೀಮನ್ಮೂಲವಾಯುದೇವರ ಅಂಶಸಂಭೂತರಾದ ಶ್ರೀಮನ್ಮಧ್ವಗುರುಗಳಿಗೆ ನಮಸ್ಕರಿಸಿದ ಮೇಲೆ ಶ್ರೀಮಟ್ಟೀಕಾಕೃತ್ಪಾದರನ್ನು ಸಿಂಹಕ್ಕೆ ಹೋಲಿಸಿ ವರ್ಣಿಸಿರುವ ಪದ್ಯವು ಅತಿರಂಜಕವಾಗಿದೆ, ಆಕರ್ಷಕವಾಗಿದೆ. ಆ ಪದ್ಯವು ಈ ರೀತಿ ಇದೆ.

**ಅದ್ವೈತ ಸಿದ್ಧಾಂತಗಜಪ್ರಮಾಥೀ ಮಧ್ವಾರ್ಯಸಿದ್ಧಾಂತಮಹೀಧ್ರವಾಸೀ।**
**ವೇದಾಂತನಿರ್ಣೀತಗುಣಾನುವಾದಸಿಂಹಧ್ವನಿಃ ಪಾತು ಜಯಾರ್ಯಸಿಂಹಃ।।**

**ತಾತ್ಪರ್ಯ** :- ಅದ್ವೈತ ಸಿದ್ಧಾಂತವೆಂಬ ಗಜವನ್ನು ನಾಶಗೊಳಿಸುವ ಶ್ರೀಮನ್ಮಧ್ವಸಿದ್ಧಾಂತವೆಂಬ ಪರ್ವತದಲ್ಲಿ ವಾಸಮಾಡುತ್ತಲಿರುವ ವೇದಾಂತಶಾಸ್ತ್ರದಲ್ಲಿ ನಿಶ್ಚಯಿಸಲ್ಪಟ್ಟ ಸರ್ವೋತ್ತಮನಾದ ಶ್ರೀಮನ್ನಾರಾಯಣ ಗುಣಗಳನ್ನು ಹೊಗಳುತ್ತಾ ಘರ್ಜಿಸುತ್ತಲಿರುವ ಸಿಂಹಧ್ವನಿಯನ್ನು ಉಂಟುಮಾಡುತ್ತಲಿರುವ ಶ್ರೀಮಜ್ಜಯಾರ್ಯರೆಂಬ ಸಿಂಹವು ನಮ್ಮನ್ನು ಕಾಪಾಡಲಿ.

**ರಮಾರಮಣಮಾನಮ್ಯ ಪೂರ್ಣಬೋಧಾನ್ ಗುರೂನಪಿ।**
**ವ್ಯಾಖ್ಯಾಂ ವಿಷ್ಣು ಪುರಾಣಸ್ಯ ಯಥಾಮತಿ ಕರೋಮ್ಯಹಮ್।।**

ಈ ದತ್ತಾತ್ರೇಯಾಚಾರ್ಯರು ಪ್ರಾಯಃ ಶ್ರೀಮಟ್ಟೀಕಾಚಾರ್ಯರ ಕಾಲದಲ್ಲೋ ಅವರ ಕಾಲದ ಅನಂತರದಲ್ಲೋ ಅಂತೂ ಶ್ರೀ ವ್ಯಾಸರಾಯರ ಕಾಲಕ್ಕೆ ಮುಂಚಿತವಾಗಿದ್ದವರೆಂಬುದನ್ನು ಊಹಿಸಬೇಕಾಗಿದೆ.

ಇವರು ಶ್ರೀ ವ್ಯಾಸರಾಜರ ಕಾಲದ ಅನಂತರದಲ್ಲಿ ಇದ್ದುದಾದರೆ ಖಂಡಿತವಾಗಿಯೂ ದ್ವೈತವೇದಾಂತ ವಿಗ್ರಹವೆನಿಸಿರುವ ವ್ಯಾಸತ್ರಯವೆಂಬ ಮೇರುಕೃತಿಕಾರರಾದ ಶ್ರೀವ್ಯಾಸರಾಜರನ್ನು ಸ್ಮರಿಸದೇ ನಮಸ್ಕಾರ ಮಾಡದೇ ಇರುತ್ತಿರಲಿಲ್ಲ.

ಸುಬೋಧಿನೀ ವ್ಯಾಖ್ಯಾನದಲ್ಲಿ (ದತ್ತಾತ್ರೇಯೀಯ) ಸರ್ವಮೂಲದ ಅನೇಕ ವಾಕ್ಯಗಳನ್ನು ಉದಾಹರಿಸುತ್ತಾರೆ. ಶ್ರೀಮಟ್ಟೀಕಾಚಾರ್ಯರ ಶೈಲಿಯನ್ನು ಅನುಸರಿಸುವಂತೆ ಇವರ ವ್ಯಾಖ್ಯಾನ ವಾಕ್ಯಗಳಲ್ಲಿ ಕಾಣುತ್ತೇವೆ. ಈ ವ್ಯಾಖ್ಯಾನವನ್ನು ಅನುಸರಿಸಿ "ಶ್ರೀ ವಿಷ್ಣು ಪುರಾಣದ ಮೊದಲನೆಯ ಭಾಗದಲ್ಲಿ ಮೊದಲನೆಯ ಅಂಶದಲ್ಲಿ ಹದಿನೈದನೇ

ಅಧ್ಯಾಯದಲ್ಲಿ ಐವತ್ತೈದನೇ ಶ್ಲೋಕದಿಂದ ಅರವತ್ತನೇ ಶ್ಲೋಕದವರೆಗೆ ಇರತಕ್ಕ ಕಂಡುಮಹರ್ಷಿಗೆ ಸಿದ್ಧಿಪ್ರದವಾದ ಶ್ರೀವಿಷ್ಣು ಸರ್ವೋತ್ತಮತ್ವಪ್ರತಿಪಾದಕವಾದ "ಶ್ರೀ ಬ್ರಹ್ಮಪಾರಸ್ತೋತ್ರ" ವನ್ನು ಸುಬೋಧಿನೀ ವ್ಯಾಖ್ಯಾನದೊಂದಿಗೆ ಅರ್ಥ ತಾತ್ಪರ್ಯ ಸಹಿತವಾಗಿ ಜಿಜ್ಞಾಸುವರ್ಗಕ್ಕೆ ಉಪಕಾರವಾಗಲೆಂದು ಪ್ರಕಟಿಸುತ್ತೇವೆ.

## ಶ್ರೀಮನ್ಮೂಲರಾಮೋ ವಿಜಯತೇ

## ಶ್ರೀಮದ್ರಾಘವೇಂದ್ರ ಗುರು ಸಾರ್ವಭೌಮೋ ವಿಜಯತೇ

ಕಂಡುಮಹರ್ಷಿಕೃತವಾದ, ಸರ್ವಸಿದ್ಧಿಪ್ರದವಾದ ಶ್ರೀವಿಷ್ಣು ಸರ್ವೋತ್ತಮತ್ವ ಪ್ರತಿಪಾದಕವಾದ ಬ್ರಹ್ಮಪಾರಸ್ತೋತ್ರವು,

**ಹಿನ್ನೆಲೆ** :- ಹಿಂದೆ ವೇದ ವೇದಾಂಗ ಪಾರಂಗತರಲ್ಲಿ ಪ್ರಸಿದ್ಧನಾದ ಕಂಡು ಎಂಬ ಓರ್ವ ಮುನಿಯು ಇದ್ದನು. ಅವನು ರಮಣೀಯವಾದ ಗೋಮತೀ ನದೀ ತೀರದಲ್ಲಿ ಪವಿತ್ರವಾದ ತಪಸ್ಸನ್ನು ಆಚರಿಸಿದನು. ಕಂಡು ಮಹರ್ಷಿಯ ಶ್ರೇಷ್ಠವಾದ ತಪಸ್ಸನ್ನು ತಿಳಿದ ದೇವೇಂದ್ರನು ಅವನ ತಪಸ್ಸನ್ನು ಭಂಗಗೊಳಿಸಲು ಪ್ರಮ್ಲೋಚೆಯೆಂಬ ಅಪ್ಸರ ಸ್ತ್ರೀಯನ್ನು ಕಳುಹಿಸಿದನು. ಕಂಡುಮಹರ್ಷಿಯು ಆ ಅಪ್ಸರಾಂಗನೆಯ ಹಾವ, ಭಾವ, ಭಂಗಿ, ವಿಲಾಸ, ಸೌಂದರ್ಯ, ವೈಯ್ಯಾರ, ಮಂದಹಾಸಾದಿ ಚಮತ್ಕಾರಗಳನ್ನು ನೋಡಿ ಕಾಮಬಾಧಾಪೀಡಿತನಾಗಿ ತನ್ನ ತಪಸ್ಸನ್ನು ಬಿಟ್ಟು ಅವಳೊಡನೆ ವಿಷಯಾಭಿಲಾಷೆಗೆ ಮಾರುಹೋಗಿ, ಮಂದರ ಪರ್ವತದ ಕಂದರದಲ್ಲಿ ತನ್ನ ಆಶ್ರಮದಲ್ಲಿ ನೂರು ವರ್ಷಗಳಿಗೂ ಮೀರಿ ರಮಿಸುತ್ತಾ ಕಾಲವನ್ನು ಕಳೆದನು. ಹೀಗಿರುವಲ್ಲಿ ಒಂದು ದಿನ ಆ ಅಪ್ಸರೆಯು ಕಂಡುಮಹರ್ಷಿಯನ್ನು ಕುರಿತು, ಮಹಾನುಭಾವರೇ ನಾನು ದೇವಲೋಕಕ್ಕೆ ಮತ್ತೆ ಹೋಗಲು ಅಪೇಕ್ಷೆಯುಳ್ಳವಳಾಗಿದ್ದೇನೆ. ನನಗೆ ಅನುಗ್ರಹಿಸಿ ಹೊರಡಲು ಅನುಮತಿಯನ್ನು ಕೊಡಿರಿ ಎಂದು ಕೇಳಿದಳು. ಅವಳಲ್ಲಿ ಆಸಕ್ತಿಯಿಂದ ಕೂಡಿದ ಮುನಿವರ್ಯನು ಮಂಗಳಾತ್ಮಳೇ ಕೆಲವು ದಿನಗಳು ಇಲ್ಲಿಯೇ ನನ್ನೊಡನೆ ಇರು ಎಂದು ಹೇಳಿದನು. ಮತ್ತೆ ನೂರು ವರ್ಷಗಳ ಕಾಲ ಅವಳೊಡನೆ ಭೋಗಸುಖವನ್ನು ಅನುಭವಿಸುತ್ತಾ ಕಾಲ ಕಳೆದನು. ಆಗ ಪ್ರಮ್ಲೋಚಳು ಪುನಃ ಕಂಡುಮುನಿಯನ್ನು ಕುರಿತು ಪೂಜ್ಯರೇ ನಾನು ದೇವಲೋಕಕ್ಕೆ ಹೋಗಲು ಉತ್ಸುಕಳಾಗಿದ್ದೇನೆ. ನನಗೆ ಅನುಜ್ಞೆಯನ್ನು ದಯಪಾಲಿಸಿ ಎಂದು ಕೇಳಿದಳು.

ಈ ಸಲವೂ ಸಹ ಕಂಡುಮುನಿಯು ಇಲ್ಲೇ ಇರು ಎಂದು ಮತ್ತೆ ಹಿಂದಿನಂತೆಯೇ ಹೇಳಿದನು. ಹೀಗೆಯೇ ಇನ್ನೂ ಒಂದು ಸ್ವಲ್ಪ ಅಧಿಕವಾದ ನೂರು ವರ್ಷಗಳು ಅವಳೊಡನೆ ಸ್ತ್ರೀ ಸುಖವನ್ನು ಅನುಭವಿಸುವ ಭರದಲ್ಲಿ ಕಳೆದುಹೋದವು.

ಆ ಅಪ್ಸರಾಂಗನೆಯು ತಾನು ದೇವಲೋಕಕ್ಕೆ ತೆರಳಲು ಪುನಃ ಕಂಡುಮುನಿಯ ಅಪ್ಪಣೆಯನ್ನು ಕೇಳಿದಳು ಆಗ ಮಹರ್ಷಿಯು ವಿಶಾಲಾಕ್ಷಿಯಾದ ಅವಳನ್ನು ಕುರಿತು ಇನ್ನೂ ಬಹಳ ಕಾಲ ಇಲ್ಲಿಯೇ ಇರು ಎಂದು ಹೇಳಿ ಅವಳಿಗೆ ದೇವಲೋಕಕ್ಕೆ ಹೋಗಲು ಅವಕಾಶವನ್ನು ಕೊಡಲಿಲ್ಲ. ಸ್ವಲ್ಪ ಕಮ್ಮಿಯಾದ ಇನ್ನೂರು ವರ್ಷಗಳು ಮತ್ತೆ ಕಳೆದುಹೋದವು. ಆದರೆ ಅವಳು ಮತ್ತೆ ಮತ್ತೆ ತಾನು ದೇವಲೋಕಕ್ಕೆ ಹೋಗಲು ಎಷ್ಟು ಸಲ ಕೇಳಿದರೂ ಕೂಡ ಅವಳಿಗೆ ಕಂಡುಮುನಿಯು ಅನುಮತಿಯನ್ನು ಕೊಡದೆ ಅವಳನ್ನು ಬಿಡದೆ ಅವಳಲ್ಲಿ ನೆಟ್ಟ ಮನಸ್ಸುಳ್ಳವನಾಗಿ ಕಾಮಪೀಡಾ ಪರಿವೃತನಾಗಿ ಅವಳನ್ನು ಭೋಗಿಸುತ್ತಾ ಹಗಲು ರಾತ್ರಿ ಎನ್ನದೇ ಅವಳಲ್ಲಿನ ಪ್ರೇಮಪಾಶದಿಂದ ದಿನ ದಿನಕ್ಕೂ ಹೊಸ ಹೊಸದಾದ ಕಾಮಚೇಷ್ಟೆಗಳಿಂದ ತಲ್ಲೀನನಾಗಿದ್ದುಬಿಟ್ಟನು. ಮುನಿಯ ಮಾತನ್ನು ಮೀರಿದರೆ ಶಾಪವನ್ನು ಕೊಟ್ಟಾನೆಂಬ ಭಯದಿಂದ ಅವಳು ಅವನಿಚ್ಛೆಯಂತೆಯೇ ಇದ್ದುಬಿಟ್ಟಳು. ಹೀಗಿರುವಲ್ಲಿ ಒಂದು ದಿನ ಪರ್ಣಶಾಲೆಯಿಂದ ಆತುರವಾಗಿ ಕಂಡುಮುನಿಯು ಹೊರಗೆ ಹೊರಟನು. ಆಗ ಅವಳು ಎಲೈ ಮುನಿವರ್ಯರೇ ! ಇದೇನು ಈ ದಿನ ಇಷ್ಟು ಅವಸರದಿಂದ ಹೊರಗೆ ಹೊರಟಿರಿ ಎಂದು ಕೇಳಿದಳು.

ಅದಕ್ಕೆ ಆ ಮುನಿಯು ಎಲೈ ಶುಭಾಂಗಿಯೇ ! ನಾನು ಸಂಧ್ಯೋಪಾಸನೆಗಾಗಿ ಹೊರಗೆ ಹೊರಟಿರುತ್ತೇನೆ. ಕಾಲ ಕಾಲಕ್ಕೆ ತಕ್ಕಂತೆ ಸರಿಯಾಗಿ ಸಂಧ್ಯಾವಂದನಾದಿಗಳನ್ನು ಆಚರಿಸದೇ ಇದ್ದರೆ ಕ್ರಿಯಾಲೋಪವು ಆಗುತ್ತದೆ. ಆದಕಾರಣ ಸಕಾಲಕ್ಕೆ ಸಂಧ್ಯೆಯನ್ನು ಆಚರಿಸಲು ಹೊರಗೆ ಹೊರಟಿರುತ್ತೇನೆಂದು ಉತ್ತರವನ್ನು ಕೊಟ್ಟನು.

ಇದನ್ನು ಕೇಳಿದ ಆ ಅಪ್ಸರಾಂಗನೆಯು ಗಟ್ಟಿಯಾಗಿ ನಗುತ್ತಾ ಹಾಸ್ಯ ಗರ್ಭಿತವಾಗಿ ಈ ರೀತಿ ಹೇಳಿದಳು ಎಲೈ ಬ್ರಾಹ್ಮಣ ಶ್ರೇಷ್ಠರೇ ! ಎಲ್ಲಾ ಬಗೆಯಾದ ಧರ್ಮಗಳನ್ನು ಅರಿತವರೇ ಆದ ತಾವು ಇದುವರೆವಿಗೆ ನೂರಾರು ವರ್ಷಗಳಕಾಲ ಸಂಧ್ಯಾದಿಗಳಿಲ್ಲದಂತೆ ನನ್ನೊಡನೆ ಕಾಮಪೀಡಿತರಾಗಿ ವ್ಯರ್ಥವಾಗಿ ಕಾಲವನ್ನು ಕಳೆದಿರಿ ಈಗ ನಿಮಗೆ ಧರ್ಮದ ಬುದ್ಧಿಯು ಉಂಟಾಯಿತೇ ಎಂದು ವ್ಯಂಗ್ಯವಾಗಿ ಹಾಸ್ಯ ಗರ್ಭಿತವಾಗಿ ನುಡಿದಳು. ಮನಸ್ಸಿಗೆ ನಾಟುವಂತೆ ಮಾತಿನಿಂದಲೇ ಚುಚ್ಚಿದಳು.

ಆಗ ಆ ಮುನಿಯು ಅವಳನ್ನು ಕುರಿತು ಇಂತೆಂದನು. ಎಲೈ ಮಂಗಳಾತ್ಮಳೇ ! ಪವಿತ್ರವಾದ ಈ ನದೀ ತೀರದಲ್ಲಿ ನಾನು ಬೆಳಗ್ಗೆ ಎದ್ದಾಗ ನಿನ್ನನ್ನು ಇಲ್ಲಿ ನೋಡಿದ್ದೆನು. ಆಮೇಲೆ ನನ್ನ ಆಶ್ರಮಕ್ಕೆ ಕರೆದುಕೊಂಡು ಹೋದೆ ಈಗ ಸಂಧ್ಯಾಕಾಲವಾಗಿದೆ. ಸಂಧ್ಯಾವಂದನೆಯನ್ನು ಆಚರಿಸಲು ಹೊರಟಿದ್ದೇನೆ. ಇದರಲ್ಲಿ ತಪ್ಪೇನಿದೆ. ಏತಕ್ಕಾಗಿ ನನ್ನ ವರ್ತನೆಗೆ ಹಾಸ್ಯ ಮಾಡುತ್ತಿದ್ದೀಯೇ ಎಂದು ಕೇಳಿದನು.

ಅದಕ್ಕೆ ಪ್ರಮ್ಲೋಚೆಯು ಹೇಳಿದಳು: ಎಲೈ ಬ್ರಾಹ್ಮಣನೇ, ಬೆಳಗಿನ ಝಾವ ನಾನು ಇಲ್ಲಿಗೆ ಬಂದುದು ನಿಜ. ಇದರಲ್ಲಿ ಯಾವ ಸುಳ್ಳು ಇಲ್ಲ. ಆದರೆ ಈಗಾಗಲೇ ನನ್ನೊಡನೆ ನೀವು ರಮಿಸುತ್ತಾ ನೂರಾರು ವರ್ಷಗಳಾಗಿವೆ ಎಂದಳು. ಆಗ ಗಾಬರಿಗೊಂಡು ಆ ಮುನಿಯು ಎಲೈ ಸುಂದರಾಂಗಿಯೇ ಭಯಶೀಲಳೇ ನಿಜವಾಗಿ ಹೇಳು. ನಿನ್ನೊಡನೆ ರಮಿಸುತ್ತಾ ಎಷ್ಟು ವರ್ಷಗಳು ಕಳೆದು ಹೋಗಿವೆ ಎಂದು ಕೇಳಿದನು. ಅದಕ್ಕೆ ಅವಳು ಒಂಬೈನೂರು ಏಳು ವರ್ಷಗಳು ಆರು ತಿಂಗಳು ಮೂರು ದಿನಗಳು ಕಳೆದಿವೆ ಎಂದಳು. ಇದನ್ನು ಕೇಳಿದ ಮುನಿಗೆ ಆಶ್ಚರ್ಯವಾಗಿ ಪುನಃ ಅವಳನ್ನು ಪ್ರಶ್ನೆ ಮಾಡಿದನು. ನೀನು ಹಾಸ್ಯ ಮಾಡುತ್ತಿಲ್ಲವಷ್ಟೆ ! ನಾನಂತೂ ನಿನ್ನೊಡನೆ ರಮಿಸುತ್ತಾ ಕಳೆದ ಕಾಲವನ್ನು ಒಂದು ದಿನವಂತೆ ತಿಳಿದಿದ್ದೇನೆ ಎಂದನು. ಅದಕ್ಕೆ ಅವಳು ಎಲೈ ಬ್ರಾಹ್ಮಣರೇ ನಿಮ್ಮೊಡನೆ ನಾನು ಏತಕ್ಕೆ ಸುಳ್ಳನ್ನು ಹೇಳಲಿ ನಾನು ಹೇಳಿದುದು ನಿಜವೆಂದಳು.

ಅದನ್ನು ಕೇಳಿದ ಕೂಡಲೇ ಮುನಿಗೆ ಜ್ಞಾನೋದಯವಾಗಿ "ಧಿಕ್ ಧಿಕ್" ಎಂದು ತನ್ನನ್ನು ತಾನು ನಿಂದಿಸಿ ಕೊಳ್ಳುತ್ತಾ, ಪಶ್ಚಾತ್ತಾಪದಿಂದ ತಪ್ತನಾಗಿ ಅಯ್ಯೋ ನನ್ನ ತಪಸ್ಸೆಲ್ಲಾ ಹಾಳಾಗಿಹೋಯಿತು. ಯುಕ್ತಾಯುಕ್ತ ವಿವೇಕದಿಂದ ಭ್ರಷ್ಟನಾದೆ.

ನನ್ನ ತಪಸ್ಸನ್ನು ನಾಶ ಮಾಡಲಿಕ್ಕಾಗಿಯೇ ಇವಳನ್ನು ಯಾರು ಸೃಷ್ಟಿಸಿದ್ದಾರೋ ತಿಳಿಯಲಾರೆ. ಹಸಿವು, ಬಾಯಾರಿಕೆ, ಶೋಕ, ಮೋಹ, ಮುಪ್ಪು, ಮರಣಗಳೆಂಬ ಆರು ಅಲೆಗಳಿಗೆ ದೂರವಾಗಿರುವ ಪರಬ್ರಹ್ಮನು ಮನುಷ್ಯನ ದಯದಿಂದ ಮಾತ್ರ ಲಭ್ಯನು ಎಂಬ ವಿವೇಕವು ನನಗೆ ನಷ್ಟವಾಯಿತಲ್ಲ. ಇಂತಹ ದುರ್ದಶೆಗೆ ಕಾರಣನಾದ ಕಾಮ ಬಾಧೆಗೆ

ಧಿಕ್ಕಾರವಿರಲಿ, ವೇದವಿದ್ಯಾಪಾರಂಗತರಾದವರಿಗೆ ಇರಬೇಕಾದ ವ್ರತನಿಯಮಾದಿಗಳಿಂದ ಭ್ರಷ್ಟನಾದೆನಲ್ಲಾ, ಅಯ್ಯೋ ದೇವರ್‍ದೇ! ನರಕಕ್ಕೆ ಹೋಗುವ ಮಾರ್ಗವನ್ನು ಅನುಸರಿಸಿಬಿಟ್ಟೆನಲ್ಲಾ! ಛೆ ಎಂತಹ ಪಾಪಕಾರ್ಯವನ್ನು ಮಾಡಿಬಿಟ್ಟೆ" ಎಂದು ತನ್ನಲ್ಲಿ ತನ್ನನ್ನು ಹೀಯಾಳಿಸಿಕೊಳ್ಳುತ್ತಾ ಹತ್ತಿರದಲ್ಲೆ ಕುಳಿತಿರುವ ಆ ಅಪ್ಸರಾಂಗನೆಯನ್ನು ಕುರಿತು ಹೇಳಿದನು.

"ಎಲೈ ಪಾಪಿಷ್ಠಳೆ! ಇಲ್ಲಿಂದ ನೀನು ಹೊರಗೆ ಹೊರಡು. ನೀನು ದೇವರಾಜನಾದ ಇಂದ್ರನಿಂದ ಪ್ರೇರಿತಳಾಗಿ ಬಂದು ನಿನ್ನ ಹಾವ ಭಾವ ವಿಲಾಸಗಳಿಂದ ನನ್ನ ತಪಸ್ಸಿಗೆ ಭಂಗವನ್ನು ತಂದುಬಿಟ್ಟದ್ದೀಯೇ ನನ್ನ ಕೋಪಾಗ್ನಿಯಿಂದ ನಿನ್ನನ್ನು ಈಗ ಸುಟ್ಟು ಬೂದಿ ಮಾಡಬಲ್ಲೆ. ಆದರೆ ಹಾಗೆ ಮಾಡುವುದಿಲ್ಲ. ಏಳು ಹೆಜ್ಜೆ ನಡಿಗೆಯ ಸಹವಾಸದಿಂದಲೇ ಸ್ನೇಹವು ಬೆಳೆಯುತ್ತದೆಯೆಂದು ಹೇಳುವರು. ನೀನಾದರೋ ಬಹಳ ವರ್ಷಗಳ ಕಾಲ ನನ್ನೊಡನೆ ಇದ್ದೀಯೇ! ಅಥವಾ ನಿನ್ನದೇನೂ ತಪ್ಪಿಲ್ಲ. ಇಂದ್ರಿಯ ಜಯವಿಲ್ಲದೆ ನಿನ್ನೊಡನೆ ಇದ್ದುದು ನನ್ನದೇ ತಪ್ಪು. ಇಂದ್ರನಿಗೆ ಪ್ರೀತಿಯನ್ನು ಉಂಟುಮಾಡಲು ನೀನು ಬಂದು ನನ್ನ ತಪಸ್ಸನ್ನು ಹಾಳುಮಾಡಿದ್ದೀಯೇ" ಎಂದು ಕೋಪಾ ವಿಷ್ಟನಾಗಿ ಹೇಳಿದನು ಕ್ರೋಧಾಗ್ನಿಯಿಂದ ಕಡುಕೋಪಿಯಾದ ಮುನಿಯ ಮಾತಿಗೆ ಮೈಬೆವರಿ ನಡುಗುತ್ತಿರುವವಳನ್ನು ಕುರಿತು ಮತ್ತೆ ಹೇಳಿದನು. 'ಹೊರಡು, ಹೊರಡು' ಎಂದು ಗದರಿಸಿ ಹೇಳಿದನು. ಆಗ ಅವಳು ಆಕಾಶಮಾರ್ಗದಲ್ಲಿ ಹೊರಟಳು. ಇದಿಷ್ಟು ಕಥಾಭಾಗವು ಕಂಡುಮಹರ್ಷಿಯ ಮುಂದಿನ ತಪಸ್ಸಿಗೆ ಸಂಬಂಧಿಸಿದ ಹಿನ್ನೆಲೆಯಾಗಿದೆ.

ಕಂಡುಮಹರ್ಷಿಯು ಜಪಿಸುತ್ತಾ ಶ್ರೀ ಕೇಶವನ ಅನುಗ್ರಹದಿಂದ ಸಿದ್ಧಿಪಡೆದ

## ಶ್ರೀಬೃಹತ್ಪಾರ ಸ್ತೋತ್ರದ ಸ್ಥೂಲವಾದ ಅರ್ಥದ ನಿರೂಪಣೆ

**ಮೂಲ:**
**ಪಾರಂ ಪರಂ ವಿಷ್ಣು ರಪಾರಪಾರಃ**
**ಪರ�ः ಪರೇಭ್ಯಃ ಪರಮಾರ್ಥರೂಪೀ (ಪರಮಾತ್ಮರೂಪೀ) (ಪರಮಾಪ್ತರೂಪೀ)**
**ಸ ಬ್ರಹ್ಮಪಾರಃ ಪರಪಾರಭೂತಃ**
**ಪರಃ ಪರಾಣಾಮಪಿ ಪಾರಪಾರಃ ।। ೧ ।।**

ಅರ್ಥ। ಸಃ = ಆ ಪ್ರಸಿದ್ಧನಾದ, ವಿಷ್ಣುಃ = ವಿಷ್ಣುವು, ಪಾರಂಪರಂ = ಪರಂಪರೆಯಿಂದ, ಗುರು ಸಂಪ್ರದಾಯಪರಂಪರೆಯಿಂದ ಉಪದೇಶದಿಂದ ಪ್ರಾಪ್ಯನು. ಪರಂ ಬ್ರಹ್ಮ = ಪರಬ್ರಹ್ಮನು ಅಥವಾ ಪರಂ ನಿರ್ದೋಷನು ಗುಣಪೂರ್ಣನು, ಪಾರಂ = ಸಂಸಾರದ ಮಾರ್ಗಕ್ಕೆ ಅವಧಿಭೂತನು. ಸಂಸಾರವನ್ನು ದಾಟಿದ ನಂತರ ಕಟ್ಟಕಡೆಯದಾಗಿ ಮುಕ್ತಿಯೋಗ್ಯ ಚೇತನರಿಂದ ಹೊಂದಲ್ಪಡತಕ್ಕವನು. ಅಪಾರಪಾರಃ = ಅಪಾರ = ಪರಿಮಿತಿಯಿಲ್ಲದ ಅಪರಿಮಿತವಾದ, ಪಾರಃ = ಶಕ್ತಿಯುಳ್ಳವನು ಅಪರಿಮಿತವಾದ ಶಕ್ತಿ ಸಂಪನ್ನನು.

ಅಥವಾ = ಅಪಾರವಾದ ಅಸಂಪೂರ್ಣವಾದ ಕರ್ಮಗಳಿಗೆ ಪಾರಃ = ಪೂರಕನು. ಅಥವಾ = ಪಾರ। ಸಂಸಾರ ತರಣವು ಅದಿಲ್ಲದಿರುವವರು ಸಂಸಾರಿಗಳು ಅಪಾರರು. ಅಂತಹ ಸಂಸಾರಿಗಳನ್ನು ಪಾರಾಗಿಸುತ್ತ ದಾಟಿಸುವವನಾದುದರಿಂದ ಅಪಾರಪಾರನು ಶ್ರೀವಿಷ್ಣುವು.

ಪರೇಭ್ಯಃ = ಬ್ರಹ್ಮಾದಿಗಳ ದೆಶೆಯಿಂದ ಪರಃ = ಉತ್ತಮನು, ಪರಮಾರ್ಥರೂಪೀ = ಪರಮಾರ್ಥ = ನಾಶ ರಹಿತವಾದ ಶರೀರವನ್ನುಳ್ಳವನು (ಶ್ರೀಹರಿ) ಅಥವಾ ಸ್ವತಂತ್ರವಾದ (ಪರಮಾರ್ಥವಾದ = "ಸ್ವತಂತ್ರಂ ಪರಮಾರ್ಥಾಖ್ಯಂ" ಎಂಬ ಪ್ರಮಾಣದಂತೆ ಸರ್ವತಂತ್ರ ಸ್ವತಂತ್ರವಾದ ದೇಹವನ್ನುಳ್ಳವನು.

ಸುಬ್ರಹ್ಮಪಾರಃ = ಸಃ ಆವಿಷ್ಣುವು ಬ್ರಹ್ಮನಿಗೂ, ಪಾರಃ = ಆಶ್ರಯನು ಅಥವಾ ಬ್ರಹ್ಮ = ವೇದವು ಪ್ರತಿಪಾದಿತವಾದವು ಅದರ ಅರ್ಥ ವಿಚಾರ ತತ್ಪರರಾದ ಸಾತ್ವಿಕ ವೈದಿಕ ಚೇತನರು ಸುಬ್ರಹ್ಮರು ಅವರಿಗೆಲ್ಲಾ ಪಾರಃ = ಹೊಂದಲು ಯೋಗ್ಯನು ಆ ಸಾ ಅಂತಹವರನ್ನೆಲ್ಲಾ ಪಾರಃ = ಪಾಲಃ ರಲಯೋರ ಭೇದಾತ್, ಕಾಪಾಡತಕ್ಕವನು.

ಪರಪಾರಭೂತಃ = ಪರಃ ಉತ್ತಮವಾದ ಸರ್ವ ಜಗತ್ತಿಗೆ ಉಪಾದಾನ ಕಾರಣವಾದ ಪ್ರಧಾನಕ್ಕೆ, ಜಡಪ್ರಕೃತಿಗೆ ಪಾರಭೂತಃ = ಆಶ್ರಯನು ಎಂದರ್ಥ. ಅಥವಾ ಪರೇಷಾಂ = ತನ್ನ ಹೊರತು ಇತರರಿಗೆ ಪಾರಭೂತಃ = ಮರ್ಯಾದಾ ಭೂತನು ಎಂದರ್ಥ. ಪರಃ ಪರಾಣಾಮಪಿ = ಪರಾಣಾಮಪಿ =ಮುಕ್ತರಿಗಿಂತಲೂ ಪರಃ = ಉತ್ತಮನು. ಪಾರ ಪಾರಃ = ಪಾಲಕನು, ಅಪೇಕ್ಷಿತವಾದುದಕ್ಕೆ ಪೂರಕನೂ ಆಗಿರುತ್ತಾನೆ. (ಪೄಪಾಲನ ಪೂರಣಯೋಃ ಎಂಬುದು ಧಾತುವು)

ಅಥವಾ ಪಾರಃ = ಪಾಲಕರೂ, ಪೂರಕರೂ ಆದ ಬ್ರಹ್ಮಾದಿಗಳಿಗೂ ಕೂಡ ಪಾಲಕನೂ ಆಗಿದ್ದಾನೆ. ಪೂರಕನೂ ಆಗಿರುತ್ತಾನೆಂದರ್ಥವು.

**ಮೊದಲನೆಯ ಶ್ಲೋಕ ತಾತ್ಪರ್ಯ :-**

ಪರಬ್ರಹ್ಮನಾದ ಶ್ರೀವಿಷ್ಣುವಿನ ಗುಣಪೂರ್ಣತೆಯನ್ನು ಪ್ರತಿಪಾದಿಸುವ ಸ್ತೋತ್ರವೇ ಬ್ರಹ್ಮಪಾರ ಸ್ತೋತ್ರವು

ಶ್ರೀವಿಷ್ಣುವು ಸುಪ್ರಸಿದ್ಧನು. ವೇದಾದಿಶಾಸ್ತ್ರಗಳಲ್ಲಿ ಪ್ರಸಿದ್ಧನಾಗಿದ್ದಾನೆ. ಗುರುಸಂಪ್ರದಾಯದಿಂದ ಪರಂಪರೆಯಿಂದ ತಿಳಿಯಲ್ಪಡತಕ್ಕವನಾಗಿ ಪ್ರಾಪ್ಯನಾಗಿರುತ್ತಾನೆ. ತಾರತಮ್ಯ ಕ್ರಮದಿಂದ ಹೊಂದಲ್ಪಡತಕ್ಕವನಾಗಿರುವನು. ಸಕಲ ದೋಷರಹಿತನು ನಿರವಧಿ ಅನುತಾನಂತ ಕಲ್ಯಾಣ ಗುಣಪರಿಪೂರ್ಣನು, ಸಂಸಾರ ಮಾರ್ಗಕ್ಕೆ ಅಂತಿಮವಾದ ಅವಧಿಭೂತನು ಅಪರಿಮಿತವಾದ ಶಕ್ತಿಸಂಪನ್ನನು ಅಪೂರ್ಣವಾದ ಕರ್ಮವನ್ನು ತನ್ನ ಸ್ಮರಣೆಯಿಂದ ಪೂರ್ತಿಗೊಳಿಸತಕ್ಕವನು, ಸಜ್ಜನರುಗಳನ್ನು ದುಃಖಮಯವಾದ ಸಂಸಾರದಿಂದ ದಾಟಿಸತಕ್ಕವನು, ಬ್ರಹ್ಮಾದಿಗಳಿಗಿಂತಲೂ ಶ್ರೇಷ್ಠನು.

ಅಪ್ರಾಕೃತವಾದ ನಾಶರಹಿತವಾದ ಜ್ಞಾನಾನಂದಾತ್ಮಕವಾದ ದೇಹವುಳ್ಳವನು. ಸರ್ವರಿಗೂ ಆಶ್ರಯನಾದುದರಿಂದ ತೀರದಂತೆ ದಡದಂತೆ ಆಶ್ರಯಭೂತನು, ಸರ್ವಜಡಜಗತ್ತಿಗೂ ಉಪಾದಾನ ಕಾರಣವಾದ ಜಡಪ್ರಕೃತಿಗೂ ಆಶ್ರಯನು ತನಗಿಂತಲೂ ಬೇರೆಯದೆಲ್ಲಕ್ಕೂ ಅಂತಿಮವಾದ ಮರ್ಯಾದೆಯಾಗಿರುವನು. ಮುಕ್ತರಿಗಿಂತಲೂ ಶ್ರೇಷ್ಠನು ಉತ್ತಮನು ಭಕ್ತರ ಪರಿಪಾಲಕನು ಭಕ್ತರ ಇಷ್ಟಾರ್ಥಗಳನ್ನು ಕರುಣಿಸುವವನು ಬ್ರಹ್ಮಾದಿ ದೇವತೆಗಳನ್ನೂ ಸಹ ಕಾಪಾಡತಕ್ಕವನು ಮತ್ತು ಅವರ ಇಷ್ಟಾರ್ಥಗಳನ್ನು ದಯಪಾಲಿಸುವವನು ಶ್ರೀಹರಿಯು ಎಂದು ತಾತ್ಪರ್ಯ.

**ಎರಡನೆಯ ಶ್ಲೋಕ :**

**ಮೂಲ:**

> **ಸಕಾರಣಂ ಕಾರಣತಸ್ತತೋಽಪಿ ತಸ್ಮಾತ್ ಹೇತುಃ ಪರಹೇತುಹೇತುಃ ಕಾರ್ಯೇಷು ಚೈವಂ**
> **ಸಹಿ ಕರ್ಮಕರ್ತೃರೂಪೈರಶೇಷೈರವತೀಹಸರ್ವಮ್ ॥ ೨ ॥**

**ಈ ಎರಡನೆಯ ಶ್ಲೋಕದ ಸ್ಥೂಲವಾದ ಅರ್ಥ ಮತ್ತು ತಾತ್ಪರ್ಯ.**

ಅರ್ಥ। ಸಃ = ಆ ವಿಷ್ಣುವು, ಕಾರಣತಃ = ಕಾರಣಕ್ಕೆ (ಷಷ್ಠ್ಯರ್ಥದಲ್ಲಿ ತಸಿಪ್ರತ್ಯಯವು ಬಂದಿದೆ) ಕಾರಣಂ = ಬ್ರಹ್ಮಾಂಡಕ್ಕೂ ಕಾರಣವಾದ ಪಂಚಭೂತಗಳಲ್ಲಿಯೂ ಕಾರಣನೆನಿಸಿರುತ್ತಾನೆ. ತತೋಽಪಿ = ಅದಕ್ಕಿಂತಲೂ ತಸ್ಮಾತ್ = ಅದಕ್ಕೂ ಸಹ ಹೇತುಃ = ಅದಕ್ಕೂ ಕಾರಣವಾದುದು ಅಹಂಕಾರ ತತ್ತ್ವವು ಅದರಲ್ಲಿಯೂ ಕಾರಣನೆನಿಸಿರುತ್ತಾನೆ.

ಪರಹೇತುಹೇತುಃ = ಪರ = ಎಂದು ಅಹಂಕಾರತತ್ತ್ವವು, ತದ್ಧೇತುಃ = ಅದಕ್ಕೆ ಕಾರಣವಾದುದು ಮಹತ್ತತ್ತ್ವವು ತದ್ಧೇತುಃ = ಅದಕ್ಕೂ ಕಾರಣವಾದುದು ಮೂಲವಾದ ಅತಿ ಸೂಕ್ಷ್ಮವಾದ ಜಡ ಪ್ರಕೃತಿಯೂ ಸಹ ಸಃ = ಅವನೇ ಆಗಿದ್ದಾನೆ. ಅಂದರೆ ಏತತ್ಸರ್ವಂ = ಬ್ರಹ್ಮಾಂಡಾದಿ ಪ್ರಕೃತಿಪರ್ಯಂತವಾದ ಸಕಲ ಕಾರಣಗಳ ಸಮೂಹವು ಏನುಂಟೋ ಅದೆಲ್ಲವೂ ಸಹ ಸಃವಿಷ್ಣು = ಆ ವಿಷ್ಣುವೇ ಆಗಿದ್ದಾನೆ. ಅಂದರೆ ಸಕಲ ಕಾರಣಗಳೂ ಸಹ ಆ ವಿಷ್ಣುವಿನ ಅಧೀನವಾಗಿರುವುದರಿಂದ "ಯದಧೀನಾ ಯಸ್ಯ ಸತ್ತಾ ತತ್ತದಿತ್ಯೇವ ಭಣ್ಯತೇ" ಎಂಬ ಪ್ರಮಾಣದಂತೆ, ಇಲ್ಲಿ ಎಲ್ಲ ಕಾರಣಗಳೂ ಭಗವಂತನ ಅಧೀನವಾಗಿರುವ ಪ್ರಯುಕ್ತ ಸ ವಿಷ್ಣುಃ ಎಂದು ಹೇಳಲಾಗಿದೆ.

ಕಾರ್ಯೇಷು ಚೈವಂ = ಮಹದಾದಿದೇಹಾಂತವಾದ ಕಾರ್ಯಗಳಲ್ಲೂ ಸಹ ಹೀಗೆಯೇ ತಿಳಿಯಬೇಕು.

ಮಹದಾದಿ ಕಾರ್ಯಗಳೂ ಸಹ ವಿಷ್ಣುವಿನ ಅಧೀನವೇ ಆಗಿರುವುದರಿಂದ ಆ ಕಾರ್ಯಗಳೂ ಸಹ ಸಃ ವಿಷ್ಣುವೆಂಬ ಅಭಿಪ್ರಾಯದಿಂದ ಕಾರ್ಯೇಷು ಚೈವಂ = ಎಂದು ಹೇಳಲಾಗಿದೆ. ಈ ರೀತಿ ಸಕಲ ಕಾರಣಗಳು ಸಕಲ ಕಾರ್ಯಗಳೂ ಭಗವಂತನಾದ ಶ್ರೀ ವಿಷ್ಣುವಿನ ಅಧೀನವೆಂದು ಹೇಳಿರುವುದರಿಂದ ಸ್ವತಂತ್ರವಾಗಿ ಸಕಲ ಜಗತ್ತಿಗೂ ನಿಮಿತ್ತ ಕಾರಣನು ಭಗವಂತನೇ ಎಂದು ಹೇಳಿದಂತಾಗಿದೆ.

ಪಾಲಕತ್ವವೂ ಸಹ ಭಗವಂತನ ಅಧೀನವೆಂದು ಈ ಸ್ತೋತ್ರವು ಹೇಳುತ್ತಲಿದೆ. ಸಃ = ಆ ವಿಷ್ಣುವು ಕರ್ಮಕರ್ತೃರೂಪೈರಶೇಷೈಃ =ಪಾಲಕರಾಗಿರುವ ದೇವತೆಗಳಲ್ಲಿಯೂ ಸಕಲ ವಿಧಗಳಾದ ಕ್ರಿಯೆಗಳನ್ನೂ ನಡೆಸುತ್ತಾ ಇರುವವನಾಗಿ ನಿಯಮ್ಯರಾದವರಲ್ಲಿ ನಿಯಾಮಕನಾಗಿ ಬಹುರೂಪಗಳಿಂದ, ಇಹ ಸರ್ವಂ ಅವತಿ ಇಲ್ಲಿ ಎಲ್ಲವನ್ನೂ ಕಾಪಾಡುತ್ತಾನೆ. ಪರಮಾತ್ಮನೇ ಮುಖ್ಯ ಪಾಲಕನು ಮಿಕ್ಕವರೆಲ್ಲ ಅವನ ಅಧೀನರಾದ ಪಾಲಕರು ಎಂದರ್ಥ.

**ತಾತ್ಪರ್ಯ** :- ಭಗವಂತನಾದ ಶ್ರೀವಿಷ್ಣುವು ಸಕಲ ಕಾರಣಗಳಿಗೂ ಕಾರ್ಯಗಳಿಗೂ ನಿಯಾಮಕನಾಗಿದ್ದಾನೆ. ಜಗತ್ತಿಗೆ ಕಾರಣಗಳಾದ ಪಂಚಭೂತಗಳು ಅಹಂಕಾರತತ್ತ್ವ ಮಹತ್ತತ್ತ್ವ ಮೂಲ ಜಡಪ್ರಕೃತಿಗಳೇನು ಮತ್ತು ಕಾರ್ಯಗಳಾದ ಮಹದಾದಿ ದೇಹಾಂತಗಳಾದ ಕಾರ್ಯಗಳೇನು ಇವೆಲ್ಲವೂ ಆ ವಿಷ್ಣುವಿನ ಅಧೀನಗಳೇ ಆಗಿರುವುದರಿಂದ "ಯದಧೀನಾ ಯಸ್ಯ ಸತ್ತಾ" ಎಂಬ ನ್ಯಾಯದಂತೆ ಅದೆಲ್ಲವೂ ವಿಷ್ಣುವೇ ಎಂದು ಸ್ತೋತ್ರದಲ್ಲಿ ಹೇಳಲಾಗಿದೆ. ಜಗತ್ತಿಗೆ ಪಾಲಕರಾದ ಸಕಲ

ದೇವತೆಗಳಲ್ಲೂ ಇದ್ದು, ಸಕಲ ಕಾರ್ಯಗಳಿಗೆ ಪ್ರವರ್ತಕನಾಗಿ ಸರ್ವ ಪ್ರಪಂಚವನ್ನು ಕಾಪಾಡುತ್ತಲಿರುತ್ತಾನೆ. ಮುಖ್ಯವಾಗಿ ಶ್ರೀಹರಿಯು ಸರ್ವವನ್ನೂ ಪಾಲಿಸುವವನಾಗಿರುತ್ತಾನೆ. ದೇವತೆಗಳು ಅಮುಖ್ಯ ಪಾಲಕರು. ಪರಮಾತ್ಮನ ಅಧೀನರಾಗಿ ಪಾಲಕರು ಎಂಬುದು ಪರಮಾಭಿಪ್ರಾಯವಾಗಿದೆ.

**ಮೂಲ:- ಬ್ರಹ್ಮಪ್ರಭುಃ ಬ್ರಹ್ಮ ಸ ಸರ್ವಭೂತೋ ಬ್ರಹ್ಮಪ್ರಜಾನಾಂ ಪತಿರಚ್ಯುತೋಽಸೌ ।।**
**ಬ್ರಹ್ಮಾವ್ಯಯಂ ನಿತ್ಯಮಜಂ ಸವಿಷ್ಣುರಪಕ್ಷಯಾದ್ಯೈರಖಿಲೈರಸಂಗೀ ।। ೩ ।।**

ಬ್ರಹ್ಮಪಾರಸ್ತೋತ್ರದಲ್ಲಿನ ಮೂರನೇ ಶ್ಲೋಕದ ಅರ್ಥ ಮತ್ತು ತಾತ್ಪರ್ಯಗಳು

**ಅರ್ಥ :-** ಬ್ರಹ್ಮಪ್ರಭುಃ = ಪ್ರಭುವೆಂದರೆ ಸಮರ್ಥನು ಸಕಲ ಜೀವರಿಗಿಂತಲೂ ಸಮರ್ಥನು ಬ್ರಹ್ಮಸಃ = ಬ್ರಹ್ಮ = ವೇದವೂ ಸಃ = ಆ ವಿಷ್ಣುವೇನೇ ಆಗಿದೆ. ಅಂದರೆ ವೇದಗಳಿಗೆ ಸೃಷ್ಟಿಯ ಆದಿಯಲ್ಲಿ ಪ್ರಪ್ರಥಮ ವಕ್ತೃವಾಗಿರುವ ಕಾರಣ ಬ್ರಹ್ಮಸು ಎಂದು ಹೇಳಲಾಗಿದೆ. ವೇದವಾದಿಗಳೂ ಹೀಗೆಯೇ ಹೇಳುತ್ತಾರೆ.

**ಸರ್ವಭೂತಃ** ಚರ ಅಚರಾತ್ಮಕಗಳಾದ ಸರ್ವಪದಾರ್ಥಗಳಲ್ಲಿ ಇದ್ದು ನಿಯಾಮಕನಾಗಿ ಸರ್ವಾಂತರ್ಯಾಮಿಯು ಬ್ರಹ್ಮ = ಚತುರ್ಮುಖನಿಗೂ ಪ್ರಜಾನಾಂ = ಆಚತುರ್ಮುಖನ ಪ್ರಜೆಗಳಾದ ರುದ್ರಾದಿಗಳಿಗೂ ಪತಿಃ = ಸ್ವಾಮಿಯಾಗಿರುವನು. ನಿಯಾಮಕನು. ಇದಕ್ಕೆ ಕಾರಣ - ಅಚ್ಯುತಃ = ಚ್ಯುತಿರಹಿತನು, ನಾಶರಹಿತನು, ನಿತ್ಯಾನಂದಾತ್ಮಕನಾದವನು.

ಸ ವಿಷ್ಣುಃ = ಆ ವಿಷ್ಣುರು ಅವ್ಯಯಂ = ಪ್ರಕೃತಿಯಂತೆ ಅಲ್ಲ. ವಿಕಾರರಹಿತನು ಹ್ರಾಸರಹಿತನು - ಅವ್ಯಯನು - ನಿತ್ಯಂ = ಅವಿನಾಶಿಯು ನಿತ್ಯನು, ಅಜಂ = ದೇಹಸ್ವೀಕಾರರೂಪವಾದ ಜನನರಹಿತನು - ಅಪಕ್ಷಯಾದ್ಯೈರ ಖಿಲೈಂಸಂಗೀ = ವೃದ್ಧಿಹ್ರಾಸ, ಕ್ಷಯ, ಕಾರ್ಶ್ಯ ಮೊದಲಾದ ನ್ಯೂನತೆಗಳಿಂದ ರಹಿತನು ಅವುಗಳ ಸಂಗವಿಲ್ಲದವನು. ಆದುದರಿಂದಲೇ ಪರಬ್ರಹ್ಮನೆನಿಸಿದ್ದಾನೆ.

**ತಾತ್ಪರ್ಯ :-** ಶ್ರೀಹರಿಯು ಸರ್ವಸಮರ್ಥನು, ಸಕಲ ವೇದಗಳಿಗೂ ಪ್ರಪ್ರಥಮವಾಗಿ ಉಪದೇಶಕನು, ಸರ್ವಾಂತರ್ಯಾಮಿಯು, ಚತುರ್ಮುಖ ಬ್ರಹ್ಮರುದ್ರಾದಿ ಸಕಲ ದೇವತೆಗಳಿಗೂ ಪತಿಯು ಸ್ವಾಮಿಯು, ಪ್ರಕೃತಿಯಂತೆ ವಿಕಾರ ಉಳ್ಳವನಲ್ಲ. ವಿಕಾರರಹಿತನು, ನಾಶರಹಿತನು, ನಮ್ಮಂತೆ ದೇಹಗ್ರಹಣ, ತ್ಯಾಗರೂಪಗಳಾದ ಜನನ ಮರಣಗಳಿಂದ ರಹಿತನು, ವೃದ್ಧಿ ಹ್ರಾಸ ಕ್ಷಯ ಅಪಸ್ಮಾರ ಇತ್ಯಾದಿ ಸಕಲ ದೋಷಗಳಿಂದಲೂ ರಹಿತನು, ಇಂತಹ ಯಾವುದೇ ಬಗೆಯಾದ ನ್ಯೂನತೆಗಳ ಸಂಗವಿಲ್ಲದವನು.

ಈ ಮೇಲೆ ಕಂಡಂತೆ ಬ್ರಹ್ಮಪಾರ ಸ್ತೋತ್ರದಲ್ಲಿನ ಗುಣಗಳನ್ನು ಕಂಡು, ಕಂಡುಮುನಿಯು ಧ್ಯಾನಮಾಡುತ್ತ ಮತ್ತೆ ಮತ್ತೆ ಸ್ಮರಿಸುತ್ತಾ ತನ್ನಲ್ಲಿನ ದೋಷಗಳ ಪರಿಹಾರವನ್ನು ಪ್ರಾರ್ಥಿಸುತ್ತಾನೆ. ಬ್ರಹ್ಮಾಕ್ಷರಂ ಇತ್ಯಾದಿ ಶ್ಲೋಕದಲ್ಲಿ ಪ್ರಾರ್ಥನೆಯು ಕಂಡುಬಂದಿದೆ.

**ಬ್ರಹ್ಮಾಕ್ಷರಮಜಂ ನಿತ್ಯಂ ಯಥಾಸೌ ಪುರುಷೋತ್ತಮಃ ।।**
**ತಥಾ ರಾಗಾದಯೋದೋಷಾಃ ಪ್ರಯಾಂತು ಪ್ರಶಮಂ ಮಮ ।। ೪ ।।**

**ಅಭಿಪ್ರಾಯ** :- ಹೇಗೆ ಈ ಪುರುಷೋತ್ತಮನಾದ ಶ್ರೀ ವಿಷ್ಣುವು ಗುಣಪರಿಪೂರ್ಣನೋ, ನಾಲ್ಕು ಬಗೆಗಳಾದ ನಾಶಗಳಿಂದ ರಹಿತನೋ, ನಿತ್ಯನೋ ಹಾಗೆಯೇ ನನ್ನ ಸಕಲ ದೋಷಗಳೂ ಆ ಪರಮಾತ್ಮನ ಮಹಿಮೆಯ ಜ್ಞಾನಪೂರ್ವಕವಾದ ಅವನ ಧ್ಯಾನದಿಂದ ಅವನು ಸುಪ್ರಸನ್ನನಾಗಿ ನನ್ನ ದೋಷಗಳನ್ನು ಪರಿಹರಿಸಲಿ. ಆ ನನ್ನ ದೋಷಗಳು ಅವನ ದಯೆಯಿಂದ ನಾಶವಾಗಲಿ.

ಈ ರೀತಿ ಧ್ಯಾನವನ್ನು ಮಾಡಿದ ಕಂಡುಋಷಿಯು ಪಡೆದ ಸಿದ್ಧಿಯನ್ನು ಹೇಳುತ್ತಿರುವ ಶ್ಲೋಕವು ಈ ರೀತಿ ಇದೆ.

**ಏತದ್ಬ್ರಹ್ಮಪಾರಾಖ್ಯಂ ಚ ಸಂಸ್ತವಂ ಪರಮಂ ಜಪನ್ ॥**
**ಅವಾಪ ಪರಮಾಂ ಸಿದ್ಧಿಂ ಸತಮಾರಾಧ್ಯ ಕೇಶವಮ್ ॥ ೫ ॥**

**ಅಭಿಪ್ರಾಯ** :- ಆ ಕಂಡುಋಷಿಯು ಬ್ರಹ್ಮಪಾರವೆಂಬ ಪರಮ ಪವಿತ್ರವಾದ ಸ್ತೋತ್ರವನ್ನು ಜಪಿಸುತ್ತಾ ಕೇಶವನನ್ನೂ ಆರಾಧಿಸಿ ಆ ಕೇಶವನ ಕೃಪೆಗೆ ಪಾತ್ರನಾಗಿ ಶ್ರೇಷ್ಠವಾದ ಸಿದ್ಧಿಯನ್ನು ಪಡೆದನು.

ಈ ಪರಮ ಪವಿತ್ರವಾದ ಬ್ರಹ್ಮಪಾರಸ್ತೋತ್ರದ ಫಲವನ್ನು ವಿವರಿಸಲಾಗಿದೆ.

**ಇಮಂ ಸ್ತವಂ ಯಃ ಪಠತಿ ಶೃಣುಯಾದ್ವಾಪಿ ನಿತ್ಯಶಃ ।**
**ಸ ಕಾಮದೋಷೈರಖಿಲೈರ್ಮುಕ್ತಃ ಪ್ರಾಪ್ನೋತಿ ವಾಂಛಿತಮ್ ॥**

**ತಾತ್ಪರ್ಯ** :- ಕಂಡುಮಹರ್ಷಿಗೆ ಪರಮಸಿದ್ಧಿಯನ್ನು ಉಂಟುಮಾಡಿದ ಅತ್ಯಂತ ಪವಿತ್ರವಾದ ಸರ್ವೋತ್ತಮವಾದ ಶ್ರೀಹರಿಯ ಗುಣಪರಿಪೂರ್ಣತೆಯನ್ನು ಪ್ರತಿಪಾದಿಸುತ್ತಿರುವ ಈ ಬ್ರಹ್ಮಪಾರಸ್ತೋತ್ರವನ್ನು ಯಾರು ನಿತ್ಯರೂ ಪಠಿಸುತ್ತಾರೆಯೋ ನಿತ್ಯವೂ ಪಾರಾಯಣ ಮಾಡುವರೋ ಅಥವಾ ನಿತ್ಯವೂ ಶ್ರವಣ ಮಾಡುವರೋ ಅಂತಹ ಭಗವಂತ ಭಕ್ತರು ಕಾಮಕ್ರೋಧಾದಿ ಸಕಲದೋಷಗಳಿಂದಲೂ ಮುಕ್ತರಾಗಿ ಇಷ್ಟಾರ್ಥಗಳನ್ನು ಪಡೆಯುತ್ತಾರೆ.

ಶ್ರೀಕೃಷ್ಣಾರ್ಪಣಮಸ್ತು

**ಶ್ರೀಮೂಲರಾಮೋ ವಿಜಯತೇ**
**ಶ್ರೀಮದ್ರಾಘವೇಂದ್ರಗುರುಸಾರ್ವಭೌಮೋ ವಿಜಯತೇ ।**
**ಕಂಡುಮುನಿಕೃತ ಬ್ರಹ್ಮಪಾರಸ್ತೋತ್ರಮ್ ॥**

ಶ್ರೀ ದತ್ತಾತ್ರೇಯಾಚಾರ್ಯ ವಿರಚಿತ ಸುಬೋಧಿನ್ಯಾಖ್ಯವ್ಯಾಖ್ಯಾನ ವಿಜೃಂಭಿತಮ್ ॥ ಶ್ರೀ ಪರಾಶರ, ಮೈತ್ರೇಯ ಸಂವಾದ ರೂಪವಾಗಿ ಕಂಡುಮುನಿ ವಿಚಾರವು

**ಮುನ್ನುಡಿ** :- ಕಂಡುಮುನಿಯು ತನ್ನಿಂದ ಆಚರಿಸಲ್ಪಟ್ಟ ಪಾಪಕ್ಕೆ ಪ್ರಾಯಶ್ಚಿತ್ತ ರೂಪವಾಗಿರುವ ಪರಮಾತ್ಮನ ಸ್ತೋತ್ರವನ್ನು ಮಾಡಿರುವನು. ಏಕಾಗ್ರಚಿತ್ತನನಾಗಿ ಊರ್ಧ್ವಬಾಹುವಾಗಿ ನಿಂತು ಬ್ರಹ್ಮಪಾರಮಯವಾದ ಅಂದರೆ ಶ್ರೀವಿಷ್ಣುವಿನ ಸರ್ವೋತ್ತಮತ್ವ ಪ್ರತಿಪಾದಕವಾದ ಸ್ತೋತ್ರವನ್ನು ಭಕ್ತಿಪೂರ್ವಕವಾಗಿ ಜಪಿಸುತ್ತಾ ಘೋರವಾದ ತಪಸ್ಸನ್ನು

ಆಚರಿಸಿ, ಪರಮಾತ್ಮನ ಅನುಗ್ರಹ ವಿಶೇಷ ಪಾತ್ರನಾಗಿ ಪರಮ ಸಿದ್ಧಿಯನ್ನು ಪಡೆದನು. ಈ ಸಂಗತಿಯನ್ನು ಪರಾಶರ ಮತ್ತು ಮೈತ್ರೇಯರು, ಇವರಿಬ್ಬರ ಪ್ರಶ್ನೋತ್ತರ ರೂಪವಾಗಿ ತಿಳಿಸಿದ್ದಾರೆ. ಶ್ರೀ ಪರಾಶರರು ಶ್ರೀಮದ್ವಿಷ್ಣುಪುರಾಣದ ಭಾಗ-೧ ಅಂಶ-೧ ಅಧ್ಯಾಯ ೧೫ ರಲ್ಲಿ ಶ್ಲೋಕ ೫೪ ರಿಂದ ೫೮ ಪೂರ್ತಿಯಾಗಿ ಈ ಸ್ತೋತ್ರವನ್ನು ನಿರೂಪಿಸಿದ್ದಾರೆ.

**ದತ್ತಾತ್ರೇಯ ವ್ಯಾಖ್ಯಾನ :-**

**ಪ್ರಮ್ಲೋಚಾಭೋಗಮನಾನಂತರಂ ಸ್ವಕೃತದುಷ್ಕೃತ ಪ್ರಾಯಶ್ಚಿತ್ತ ರೂಪಭಗವತ್ ಸ್ತೋತ್ರಂ ಕಂಡುಃ ಕೃತವಾನಿತಿ ಪ್ರಸಂಗಾದಾಹ ಸಚಾಪೀತ್ಯಾದಿನಾ ।।**

**ಶ್ಲೋಕ :- ಸಚಾಪಿ ಭಗವಾನ್ ಕಂಡುಃ ಕ್ಷೀಣೇ ತಪಸಿ ಸತ್ತಮಃ ।**
**ಪುರುಷೋತ್ತಮಾಖ್ಯಂ ಮೈತ್ರೇಯ ವಿಷ್ಣೋರಾಯತನಂ ಯಯೌ ।। ೧ ।।**

ಶ್ರೀ ಪರಾಶರರು ಹೇಳುತ್ತಾರೆ :-

**ತಾತ್ಪರ್ಯ** :- ಎಲೈ ಮೈತ್ರೇಯನೇ ಕೇಳು: ಪೂಜ್ಯನಾದ ಆ ಕಂಡುಮಹರ್ಷಿಯಾದರೋ, ತನ್ನ ತಪಸ್ಸಿನ ವಿಘ್ನಕ್ಕಾಗಿ ಇಂದ್ರನಿಂದ ಪ್ರೇರಿತಳಾಗಿ ಬಂದ ಪ್ರಮ್ಲೋಚೆಯೆಂಬ ಅಪ್ಸರ ಸ್ತ್ರೀಯನ್ನು ಕಂಡು ಕಾಮೋಪದ್ರವಪೀಡಿತನಾಗಿ ಯೋಗಭ್ರಷ್ಟನಾಗಿ ಬಹಳ ಕಾಲ ಅವಳೊಡನೆ ರಮಿಸಿದನು. ಕಡೆಗೆ ದೈವಾನುಗ್ರಹದಿಂದ ವಿವೇಕವನಾಗಿ ತನ್ನನ್ನು ತಾನು ಧಿಕ್ ಧಿಕ್ ಎಂದು ನಿಂದಿಸಿಕೊಳ್ಳುತ್ತಾ, ಪಶ್ಚಾತ್ತಾಪದಿಂದ ಅವಳನ್ನು ತ್ಯಜಿಸಿ ಕಾಮಾಂಧನಾಗಿ ತಾನು ಮಾಡಿದ ತಪ್ಪಿಗಾಗಿ ಪಾಪಪರಿಹಾರಕ್ಕಾಗಿ ವ್ರತನಿಷ್ಠನಾಗಿ ಸ್ಥಿರಮನಸ್ಕನಾಗಿ ಪುರುಷೋತ್ತಮನೆಂಬ ಹೆಸರಿನ ವಿಷ್ಣುವಿನ ದೇವಾಲಯಕ್ಕೆ ಹೋದನು. ಅಲ್ಲಿ ಅವನು ಏನು ಮಾಡಿದನೆಂಬುದನ್ನು ಪರಾಶರರು ಹೇಳುತ್ತಾರೆ :-

**ಶ್ಲೋಕ :- ತತ್ರೈಕಾಗ್ರಮತಿರ್ಭೂತ್ವಾ ಚಕಾರಾರಾಧನಂ ಹರೇಃ ।**
**ಬ್ರಹ್ಮಪಾರಮಯಂ ಕುರ್ವನ್ ಜಪಮೇಕಾಗ್ರಮಾನಸಃ ।**
**ಊರ್ಧ್ವಬಾಹುರ್ಮಹಾಯೋಗೀ ಸ್ಥಿತ್ವಾಸೌ ಭೂಪನಂದನಾಃ ।। ೫೩ ।।**

**ತಾತ್ಪರ್ಯ** :- ಪುರುಷೋತ್ತಮವೆಂಬ ವಿಷ್ಣುವಿನ ಆಲಯಕ್ಕೆ ಹೋಗಿ ಅಲ್ಲಿ ಕಂಡುಮುನಿಯು ಏಕಾಗ್ರಚಿತ್ತನಾಗಿ ಶ್ರೀಹರಿಯ ಆರಾಧನೆಯನ್ನು ಮಾಡಿದನು. ಏಕಾಗ್ರಚಿತ್ತನಾಗಿ ಬ್ರಹ್ಮಪಾರಮಯವಾದ (ಅನಂತಕಲ್ಯಾಣಗುಣಪರಿಪೂರ್ಣನಾದ, ಪರಬ್ರಹ್ಮನಾದ) "ಶ್ರೀಹರಿಯ ಸ್ತೋತ್ರವನ್ನು ಜಪಿಸುತ್ತಾ, ಎರಡೂ ತೋಳುಗಳನ್ನೂ ಮೇಲಕ್ಕೆತ್ತಿಕೊಂಡು, ಮಹಾಯೋಗಿಯಾದ ಕಂಡುಮಹರ್ಷಿಯು ಘೋರವಾದ ತಪಸ್ಸನ್ನು ಆಚರಿಸಿದನು (ಎಲೈ ರಾಜಕುಮಾರರೇ ಎಂದು ಪ್ರಚೇತಸರ ಸಂಬೋಧನೆ).

ಪ್ರಚೇತಸಊಚುಃ - ಪ್ರಚೇತಸರು ಹೇಳಿದರು.

**ಬ್ರಹ್ಮಪಾರಂ ಮುನೇ ಶ್ರೋತುಂ ಇಚ್ಛಾಮಃ ಪರಮಂ ಸ್ತವಮ್ ।**
**ಜಪತಾ ಕಂಡುನಾ ದೇವೋ ಯೇನಾರಾಧ್ಯತ ಕೇಶವಃ ।। ೫೪ ।।**

ಶ್ರೀರಾಘವೇಂದ್ರ ಗುರುಸಾರ್ವಭೌಮ ವಿರಚಿತ ತಂತ್ರದೀಪಿಕಾ · ಶ್ರೀಬ್ರಹ್ಮಪಾರಸ್ತೋತ್ರಂ

**ಅರ್ಥ:-** ಎಲೈ ಮುನಿಯೇ! ಕಂಡುಮಹರ್ಷಿಯು ಯಾವ ಶ್ರೇಷ್ಠವಾದ, ಪರಮ ಪವಿತ್ರವಾದ, ಬ್ರಹ್ಮಪಾರ ಸ್ತೋತ್ರವನ್ನು ಜಪಿಸುತ್ತಾ ಕೇಶವನನ್ನು ಆರಾಧಿಸಿದನೋ ಆ ಬ್ರಹ್ಮಪಾರಸ್ತೋತ್ರವನ್ನು ಕೇಳಲು ನಾವು ಅಪೇಕ್ಷಿಸುತ್ತಿದ್ದೇವೆ. ಅದನ್ನು ನಮಗೆ ಶ್ರವಣ ಮಾಡಿಸಿರಿ ಎಂದು ಪ್ರಚೇತಸರು ಕೇಳಿಕೊಂಡರು.

**ಸೋಮ ಉವಾಚ** :- ಸೋಮನು ಹೇಳಿದನು.

> **ಪಾರಂ ಪರಂ ವಿಷ್ಣುರಪಾರಪಾರಃ**
> **ಪರಃ ಪರೇಭ್ಯಃ ಪರಮಾರ್ಥರೂಪೀ ।**
> **ಸ ಬ್ರಹ್ಮಪಾರಃ ಪರಪಾರಭೂತಃ ।**
> **ಪರಃ ಪರಾಣಾಮಪಿ ಪಾರಪಾರಃ ॥ ೫೫ ॥**

**ಪದ ವಿಭಾಗ** :- ಪಾರಂ, ಪರಂ, ಪಾರಂಪರಂ! ವಿಷ್ಣುಃ ಅಪಾರಪಾರಃ, ಪರಃ, ಪರೇಭ್ಯಃ ಪರಮಾರ್ಥರೂಪೀ ಸಃ, ಬ್ರಹ್ಮಪಾರಃ, ಪರಪಾರಭೂತಃ, ಪರಃ, ಪರಾಣಾಂ, ಅಪಿ, ಪಾರಪಾರಃ।

**ದತ್ತಾತ್ರೇಯೀಯ ವ್ಯಾಖ್ಯಾನ** :- ಬ್ರಹ್ಮಪಾರಮಯಂ, ಬ್ರಹ್ಮಣಃ, ಪಾರತ್ವಂ = ಪೂರ್ಣತ್ವಂ, ತತ್ಪ್ರತಿಪಾದಕತ್ವೇನ, ಬ್ರಹ್ಮಪಾರಾತ್ಮಕಂ, ಜಪ್ಯತ ಇತಿ ಜಪಃ =ಸ್ತೋತ್ರಮ್ ॥ ೫೩ ॥ ಆರಾಧ್ಯತ =ಆರಾಧಿತಃ ಆರಾಧಿಸಲ್ಪಟ್ಟನು ॥ ೫೪ ॥

**ಅರ್ಥ:-** ಬ್ರಹ್ಮಪಾರಮಯಂ ಎಂಬುದಕ್ಕೆ ವ್ಯಾಖ್ಯಾನ ಮಾಡುತ್ತಾರೆ. ಬ್ರಹ್ಮಣಃ ಪರಬ್ರಹ್ಮನ, ಪಾರತ್ವಂ = ಪೂರ್ಣತ್ವಂ = ಪಾರತ್ವಂ ಎಂದರೆ ಪೂರ್ಣತ್ವವು, ಗುಣದಿಂದಲೂ, ದೇಶದಿಂದಲೂ ಕಾಲದಿಂದಲೂ ಪೂರ್ಣತ್ವವು ಏನುಂಟೋ, ತತ್ಪ್ರತಿಪಾದಕತ್ವೇನ = ಅಂತಹ ಪೂರ್ಣತ್ವವನ್ನು ಪ್ರತಿಪಾದಿಸುವುದರಿಂದ ಬ್ರಹ್ಮಪಾರಾತ್ಮಕವೆಂಬ, ಜಪ್ಯತಇತಿಜಪಃ = ಸ್ತೋತ್ರವು, ಜಪಿಸಲ್ಪಡತಕ್ಕ ಸ್ತೋತ್ರವು ಎಂದರ್ಥ.

**ದತ್ತಾತ್ರೇಯ ವ್ಯಾಖ್ಯಾನ** :- ಪಾರಂ ಪರಂ ಇತಿಶ್ಲೋಕತ್ರಯೇಣ ಸ್ತುತ್ವಾ, ಪುರುಷೋತ್ತಮಂ ಪ್ರಸನ್ನೀಕೃತ್ಯ, ತುರೀಯೇಣ ಜರಾದಿದೋಷಪರಿಹಾರಃ ಪ್ರಾರ್ಥ್ಯತ ಇತ್ಯಾಶಯೇನ, ಪ್ರಶ್ನೋತ್ತರಮಾಹ ಪಾರಂಪರಂ ಇತ್ಯಾದಿನಾ ॥

**ಅರ್ಥ:-** ಪಾರಂಪರಂ ಇತಿಶ್ಲೋಕತ್ರಯೇಣ - ಪಾರಂಪರಂ ಇತ್ಯಾದಿ ಮುಂದಿನ ಮೂರು ಶ್ಲೋಕಗಳಿಂದ ಸ್ತುತ್ವಾ = ಸ್ತೋತ್ರ ಮಾಡಿ, ಪುರುಷೋತ್ತಮಂ = ಪುರುಷೋತ್ತಮನಾದ ಶ್ರೀಮನ್ನಾರಾಯಣನನ್ನು, ಪ್ರಸನ್ನೀ ಕೃತ್ಯ = ಪ್ರಸನ್ನನನ್ನಾಗಿ ಮಾಡಿಕೊಂಡು, ಅನುಗ್ರಹೋನ್ಮುಖನನ್ನಾಗಿ ಮಾಡಿಕೊಂಡು, ತುರೀಯೇಣ ನಾಲ್ಕನೇ ಶ್ಲೋಕದಿಂದ ಜರಾದಿದೋಷ ಪರಿಹಾರಃ = ಮುಪ್ಪು ಮೊದಲಾದ ದೋಷಗಳ ಪರಿಹಾರವು, ಆಗಬೇಕೆಂದು, ಪ್ರಾರ್ಥ್ಯತೆ = ಪ್ರಾರ್ಥಿಸಲ್ಪಡುತ್ತದೆ, ಇತ್ಯಾಶಯೇನ = ಈ ಅಭಿಪ್ರಾಯದಿಂದ, ಪ್ರಶ್ನೋತ್ತರಮಾಹ = ಪ್ರಚೇತಸರ ಪ್ರಶ್ನೆಗೆ ಉತ್ತರವನ್ನು ಹೇಳುತ್ತಾರೆ. ಪಾರಂಪರಂ = ಇತ್ಯಾದಿನಾ = ಪಾರಂಪರಂ ಇತ್ಯಾದಿ ಶ್ಲೋಕದಿಂದ ಎಂದರ್ಥವು.

**ಅನ್ವಯಕ್ರಮ** :- ಸಃ (ಪ್ರಸಿದ್ಧಃ), ವಿಷ್ಣುಃ ಪಾರಂಪರಂ ಬ್ರಹ್ಮ, ಪರಂ ಬ್ರಹ್ಮ। ಯದ್ವಾಪಾರಂ ಪರಂ ಇತಿಪದದ್ವಯಂ। ಪರಂ = (ನಿರ್ದೋಷಂ - ಗುಣಪರಿಪೂರ್ಣಂ) ಪಾರಂ = ಬ್ರಹ್ಮ। ಅಪಾರಪಾರಃ = ಅಪಾರಃ = (ಅಪರಿಮಿತಶಕ್ತಿಃ) ಪಾರಃ ಅಥವಾ ಅಪಾರಃ।

ಪರೇಭ್ಯಃ ಪರಃ, ಪರಮಾರ್ಥರೂಪೀ, ಪಾರಃ ಯದ್ವಾ ಸಬ್ರಹ್ಮಪಾರಃ ಇತ್ಯೇಕಂ ಪದಂ ಅಸ್ಮಿನ್ ಪಕ್ಷೇ ಪಾರಂಪರಂ ಇತ್ಯತ್ರಾಪ್ಯು ಪದಾಧ್ಯಾಹಾರಃಕಾರ್ಯಃ। ಪರಪಾರಭೂತಃ ಪರಾಣಾಮಪಿ ಪರಃ। ಪಾರಪಾರಃ।

**ದತ್ತಾತ್ರೇಯೀಯ ವ್ಯಾಖ್ಯಾನ ಭಾಗಃ** - ಸಃ (ಪ್ರಸಿದ್ಧೋ) ವಿಷ್ಣುಃ ಪಾರಂಪರಂ ಬ್ರಹ್ಮ ಪರಂಪರಯಾ, ಗುರುಸಂಪ್ರದಾಯಪರಂಪರಯಾ ಉಪದೇಶಪ್ರಾಪ್ಯಂ ಪರಂ ಬ್ರಹ್ಮ। "ಏವಂ ಪರಂಪರಾಪ್ರಾಪ್ತಮಿಮಂ ರಾಜರ್ಷಯೋವಿದುಃ" ಇತಿ ವಚನಾತ್। ಯದ್ವಾ ಪಾರಂ ಪರಂ ಇತಿ ಪದದ್ವಯಮ್। ಪರಂ = ನಿರ್ದೋಷಂ ಗುಣಪೂರ್ಣಂ "ನಿರ್ದೋಷಗುಣಪೂರ್ಣತ್ವಾತ್ ಪರಂ ಚಾಹ ಜನಾರ್ದನಂ" ಇತಿ ತಂತ್ರಭಾಗವತವಚನಾತ್ ಪಾರಂ ಸಂಸಾರಾಧ್ವನಃ ಪಾರಂ = ಅವಧಿಸ್ವಭೂತಂ ಬ್ರಹ್ಮ। "ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಂ" ಇತಿಶ್ರುತೇಃ। "ಯಮಧ್ವನಃ ಪಾರಮುಶಂತಿಯೋಗಿನಃ" ಇತಿ ಭಾಗವತವಚನಾಚ್ಚ ಅಪಾರಪಾರಃ "ಪಾರತೀರ ಕರ್ಮಸಮಾಪ್ತಾವಿತಿಧಾತೋಃ" "ಯದ್ವಕ್ತುಂ ನೈವಪಾರ್ಯತೇ" ಇತ್ಯಾದೌಶ ಕ್ಯರ್ಥೇಽಪಿ ಪ್ರಯೋಗದರ್ಶನಾತ್ ದ್ವಿತೀಯಃ ಪಾರಶಬ್ದಃ ಶಕ್ತ್ಯರ್ಥಕಃ ಪ್ರಥಮಃ ಪಾರಶಬ್ದಃ ಪರಿಮಿತವಾಚಕಃ "ಅಂತೋ ವಿನಾಶಃ ಸಂಪ್ರೋಕ್ತಃ ಪಾರಃ ಪರಿಮಿತಸ್ತಥಾ" ಇತಿ ವಚನಾತ್। ತಥಾ ನ ವಿದ್ಯತೇ ಪಾರಃ ಪರಿಮಿತಿಃ ಯಸ್ಯ ಸಃ = ಅಪಾರಃ, ಅಪಾರಃ = ಪಾರಶಕ್ತಿಃ ಯಸ್ಯಸಃ = ಅಪರಿಮಿತಶಕ್ತಿರಿತ್ಯರ್ಥಃ।

"ಅನಂತಶಕ್ತಿರ್ಭಗವಾನನಂತಃ" ಇತಿ ಭಾಗವತವಚನಾತ್ । ಯದ್ವಾ ಅಪಾರಸ್ಯ = ಅಸಮಾಪ್ತಸ್ಯ = ಅಪೂರ್ಣಸ್ಯ ಕರ್ಮಣಃ = ಪಾರಃ ಸ್ವಸಂಕೀರ್ತನಸ್ಮರಣಾದಿನಾ, ಪಾರಯಿತಾ = ಸಮಾಪಕಃ। ಪೂರಕೋ ವಾ । "ವಿಷ್ಣುರ್ವೈ ಯಜ್ಞಸ್ಯ ದುರಿಷ್ಟಂ ಪಾತಿ"ಇತ್ಯಾದಿಶ್ರುತೇಃ । "ವಿದುಃಕೃಷ್ಣಂ ಬ್ರಾಹ್ಮಣಾಃ ತತ್ವತೋ ಯೇ ತೇಷಾಂ ರಾಜನ್ ಸರ್ವಯಜ್ಞಾಃ ಸಮಾಪ್ತಾಃ" ಇತಿ ವಚನಾತ್ । "ಮಂತ್ರತಃ ತಂತ್ರ ತಃ ಛಿದ್ರಂ ದೇಶಕಾಲಾರ್ಹವಸ್ತುತಃ । ಸರ್ವಂ ಕರೋತಿನಿಶ್ಛಿದ್ರಮನು ಸಂಕೀರ್ತನಂ ತವ।" ಇತಿ ಭಾಗವತ ವಚನಾತ್ । ಪಾರಃ = ಸಂಸಾರತರಣಂ, ನ ವಿದ್ಯತೇ ಯೇಷಾಂ ತೇ = ಅಪಾರಾಃ, ಸಂಸಾರಿಣಃ ತಾನ್ ಪಾರಯತಿ, ಸಂಸಾರಾತ್ತಾರಯತೀತಿ, ಅಪಾರಪಾರಃ ಇತಿವಾ। ಪರೇಭ್ಯಃ ಪರಃ = ಪರೇಭ್ಯಃ=ಬ್ರಹ್ಮಾದಿಭ್ಯಃ ಪರಃ =ಉತ್ತಮಃ ಉಕ್ತಾರ್ಥೋಪಪಾದನಾಯೋಕ್ತಂ ಪರಮಾರ್ಥರೂಪೀತಿ ಪರಮಾರ್ಥಂ = ಅವಿನಾಶಿರೂಪಂ ದೇಹೋ, ಅಸ್ಯಾಸ್ತೀತಿ ಪರಮಾರ್ಥರೂಪೀ । "ಸರ್ವೇ ನಿತ್ಯಾಃ ಶಾಶ್ವತಾಶ್ಚ ದೇಹಾಸ್ತಸ್ಯ ಮಹಾತ್ಮನಃ "ಇತಿ ವಚನಾತ್ । ಪಾರಃ = ಸರ್ವೇಷಾಂ, ಆಶ್ರಯತ್ವೇನ ತೀರ ಭೂತಃ । " ಪಾರತೀರ ಕರ್ಮಸಮಾಪ್ತೌ " ಇತಿಧಾತುಃಯದ್ವಾ "ಸಬ್ರಹ್ಮಪಾರಃ" ಇತ್ಯೇಕಂಪದಂ । ಬ್ರಹ್ಮ =ವೇದಃ ತತ್ಸಹಿತಾಃ ತದರ್ಥವಿಚಾರವಂತಃ ಸಬ್ರಹ್ಮಾಣಃ ತೇಷಾಂಪಾರಃ ಪ್ರಾಪ್ಯಂಶ್ಚ। । ತಾನ್, ಪಾಲಯತೀತಿವಾ ರಲಯೋರ ಭೇದಾತ್ । ಅಸ್ಮಿಂಶ್ಚಪಕ್ಷೇ ಪಾರಂಪರಂ ಇತ್ಯತ್ರ ಪಸ್ತ್ಯಪದಾಧ್ಯಹಾರಃ ಕಾರ್ಯಃ । ಪರಪಾರ ಭೂತಃ = ಸರ್ವಜಗನ್ಮೂಲಕಾರಣತ್ವೇನ ಪರಂ= ಉತ್ತಮಂ= ಪ್ರಧಾನಂ, ತಸ್ಯ ಪಾರಭೂತಃ "ಏಷಸೇತುರ್ವಿಧರಣಃ " ಇತಿ ವಚನಾತ್ । ಪರಾಣಾಮಪಿ ಪೃಪಾಲನಪೂರಣಯೋಃ" ಇತಿಧಾತೋಃ ಪಾರ ಇತಿರೂಪಂ । ಭಕ್ತಾನಾಂ ಪಾಲನಾತ್ ಪಾರಃ ಅಪೇಕ್ಷಿತಪೂರಣಾಚ್ಚ ಪಾರಃ ಇತಿ ದ್ವಿತೀಯಪಾರಶಬ್ದಾರ್ಥಃ । ಯದ್ವಾ ಪಾರಾಃ =ಪಾಲಕಾಃ, ಪೂರಕಾಶ್ಚಯೇ ಬ್ರಹ್ಮಾದಯಃ ತೇಷಾಮಪಿಪಾಲಕಃ ಪೂರಕಶ್ಚೇತ್ಯರ್ಥಃ।

**ದತ್ತಾತ್ರೇಯೀಯ ವ್ಯಾಖ್ಯಾನದ ಅರ್ಥಾನುವಾದ :**

ಸಃ ಪ್ರಸಿದ್ಧಃ ವಿಷ್ಣುಃ = ಆ ಪ್ರಸಿದ್ಧನಾದ ವಿಷ್ಣುವು, ಪಾರಂಪರಂ =ಬ್ರಹ್ಮ = ಪಾರಂಪರಯಾ ಗುರುಸಂಪ್ರದಾಯಪರಂಪರಯಾ = ಗುರು ಸಂಪ್ರದಾಯಪರಂಪರೆಯಿಂದ, ಉಪದೇಶಪ್ರಾಪ್ಯಂ = ಉಪದೇಶದಿಂದ ಹೊಂದಲ್ಪಡತಕ್ಕವನಾದ ಪರಂಬ್ರಹ್ಮ = ಶ್ರೇಷ್ಠನಾದ, ಉತ್ತಮನಾದ, ಪೂರ್ಣನಾದ ಬ್ರಹ್ಮನು. "ಏವಂ ಪರಂಪರಾ

ಪ್ರಾಪ್ತಂ ಇಮಂ ರಾಜರ್ಷಯೋ ವಿದುಃ" ಇತಿವಚನಾತ್ = ಹೀಗೆ ಪರಂಪರೆಯಿಂದ ಸಂಪ್ರದಾಯಬದ್ಧವಾದ ಗುರು ಪರಂಪರೆಯಿಂದ ಇವನು ಹೊಂದಲ್ಪಡತಕ್ಕವನು" ಎಂದು "ರಾಜರ್ಷಿಗಳು ತಿಳಿದರು" ಎಂಬ ವಚನವಿರುತ್ತದೆಯಾದ್ದರಿಂದ ಪರಮಾತ್ಮನನ್ನು ಗುರುಸಂಪ್ರದಾಯಪರಂಪರೆಯಿಂದಲೇ ತಿಳಿದು, ಪಡೆಯಬೇಕೆಂದು ಪರಮಾಭಿಪ್ರಾಯ. ಯದ್ವಾ = ಅಥವಾ, ಪಾರಂ, ಪರಂ, ಇತಿ ಪದದ್ವಯಂ = ಅಥವಾ ಪಾರಂಪರಂ ಎಂಬುದಕ್ಕೆ ಮತ್ತೊಂದು ಅರ್ಥವಿದೆ. ಪಾರಂ ಪರಂ ಎಂಬುದು ಎರಡು ಪ್ರತ್ಯೇಕ ಪದಗಳಾಗಿವೆ. ಪರಂ = ನಿರ್ದೋಷಂ, ಗುಣಪೂರ್ಣಂ = ಪರಂ = ಎಂದರೆ ನಿರ್ದೋಷಂ = ದೋಷರಹಿತ, ಗುಣಪೂರ್ಣಂ = ಗುಣಪೂರ್ಣಂ ಎಂದರ್ಥವು.

"ನಿರ್ದೋಷಗುಣಪೂರ್ಣತ್ವಾತ್ಪರಂಬಾಹುರ್ಜನಾರ್ದನಂ" ಇತಿ ತಂತ್ರಭಾಗವತವಚನಾತ್ = ಇದು ತಂತ್ರ ಭಾಗವತವಚನವಾಗಿದೆ ಇದರಲ್ಲಿ "ಜನಾರ್ದನನನ್ನು, ದೋಷರಹಿತನಾದುದರಿಂದ ಗುಣಪರಿಪೂರ್ಣನಾದುದರಿಂದ "ಪರಂ" ಎಂದು ಹೇಳುವರು ಎಂದು ಉಕ್ತವಾಗಿದೆ.

ಪಾರಂ ಬ್ರಹ್ಮ = ಪಾರಂ = ಸಂಸಾರಾಧ್ವನಃ ಪಾರಂ ಅವಧೀಷ್ಟಭೂತಂ = ಬ್ರಹ್ಮ = ಸಂಸಾರ ಮಾರ್ಗಕ್ಕೆ ಅವಧಿ ಎಂದರೆ ಎಲ್ಲೆಯಾದ ಇಷ್ಟನಾದವನು ಪರಬ್ರಹ್ಮನು ಎಂದರ್ಥವು "ಸೋಽಧ್ವನಃಪಾರಮಾಪ್ನೋತಿ ತದ್ವಿಷ್ಣೋಃ ಪರಮಂಪದಂ =ಇತಿಶ್ರುತೇಃ"। ಸಂಸಾರಕ್ಕೆ ಮಾರ್ಗಕ್ಕೆ ಅವಧಿಭೂತವಾದುದು ಹೊಂದಲ್ಪಡುವುದು ಯಾವುದುಂಟೋ ಅದು ವಿಷ್ಣುವಿನ ಪವಿತ್ರವಾದ ಶ್ರೇಷ್ಠವಾದ ಸ್ಥಾನವು ಎಂದು ಶ್ರುತಿಯ ಅರ್ಥವು "ಯಮಧ್ವನಃ ಪಾರಂ ಉಶಂತಿ ಯೋಗಿನಃ" ಇತಿ ಭಾಗವತವಚನಾಚ್ಚ =ಯೋಗಿಗಳು ಯಾವ ಸಂಸಾರಮಾರ್ಗದ ಅಂತಿಮ ಎಲ್ಲೆಯನ್ನು ಹೊಂದುತ್ತಾರೋ" ಎಂದು ಭಾಗವತದ ವಚನವೂ ಇದೆ.

ಅಪಾರಪಾರಃ = ಪಾರತೀರಕರ್ಮಸಮಾಪ್ತಾವಿತಿಧಾತೋಃ = ಪಾರ ಎಂಬುದಕ್ಕೆ ತೀರ = ದಡ ಎಂದೂ ಕರ್ಮಗಳ ಸಮಾಪ್ತಿಯೆಂದು ಧಾತುವಿನ ಅರ್ಥಗಳಿವೆ.

"ಯದ್ವಕ್ತುಂ ನೈವ ಪಾರ್ಯತೇ" ಇತ್ಯಾದೌ ಶಕ್ತ್ಯರ್ಥೇಽಪಿ ಪ್ರಯೋಗದರ್ಶನಾತ್ -

"ಯಾವುದನ್ನು ಹೇಳಲು ಶಕ್ತಿಯಿಲ್ಲ" ಇತ್ಯಾದಿಪ್ರಯೋಗಗಳಲ್ಲಿ "ಶಕ್ತಿ" ಯೆಂಬ ಅರ್ಥದಲ್ಲೂ "ಪಾರ" ಶಬ್ದವು ಪ್ರಯೋಗಿಸಲ್ಪಟ್ಟಿದೆ. ಆದಕಾರಣ ಅಪಾರ-ಪಾರಃ ಎಂಬಲ್ಲಿರುವ ಎರಡನೇ ಪಾರಶಬ್ದಕ್ಕೆ "ಶಕ್ತಿ" ಎಂಬ ಅರ್ಥವು. ಅಪಾರ = ಎಂಬಲ್ಲಿರುವ ಮೊದಲನೆಯ ಪಾರಶಬ್ದಕ್ಕೆ "ಪ್ರಥಮಃ ಪಾರಶಬ್ದಃ = ಪರಿಮಿತಿವಾಚಕಃ = ಮೊದಲನೆಯ ಪಾರಶಬ್ದವು ಪರಿಮಿತಿ ಎಂಬ ಅರ್ಥಕ್ಕೆ ವಾಚಕವಾಗಿದೆ.

"ಅಂತೋ ವಿನಾಶಃ ಸಂಪ್ರೋಕ್ತಃ ಪಾರಃ ಪರಿಮಿತಿಸ್ತಥಾ" ಇತಿ ವಚನಾತ್. ಅಂತ ಎಂದರೆ, ವಿನಾಶ ಎಂದರ್ಥವು. ಪಾರ = ಎಂದರೆ ಪರಿಮಿತಿ ಎಂದರ್ಥವು.

ತಥಾ ನ ವಿದ್ಯತೆ, ಪಾರಃ = ಪರಿಮಿತಿಃಯಸ್ಯಸಃ = ಅಪಾರಃ = ಅಪಾರಶಕ್ತಿಃ = ಅಪರಿಮಿತಶಕ್ತಿರಿತ್ಯರ್ಥಃ = ಪರಿಮಿತವಾದ ಶಕ್ತಿಯಿಲ್ಲದವನು ಅಪರಿಮಿತವಾದ ಶಕ್ತಿಯುಳ್ಳವನು ಪರಬ್ರಹ್ಮನು ಎಂದರ್ಥ. ಇದಕ್ಕೆ ಪ್ರಮಾಣವೇನೆಂದರೆ :-

"ಅನಂತಶಕ್ತಿಃ ಭಗವಾನನನ್ತಃ" ಇತಿ ಭಾಗವತವಚನಾತ್ = ಪರಮಾತ್ಮನು ಅನಂತಶಕ್ತಿಯುಳ್ಳವನೆಂಬುದಾಗಿ ಭಾಗವತ ವಚನವಿರುವುದರಿಂದ ಪರಮಾತ್ಮನಿಗೆ "ಅಪಾರಪಾರಃ" ಎಂದು ಹೇಳಲಾಗಿದೆ.

ಅಥವಾ ಅಪಾರಸ್ಯ = ಅಸಮಾಪ್ತಸ್ಯ = ಅಪೂರ್ಣಸ್ಯ, ಕರ್ಮಣಃ ಪಾರಃ ಸ್ವಸಂಕೀರ್ತನಸ್ಮರಣಾದಿನಾ ಪಾರಯಿತಾ ಸಮಾಪಕಃ =ಅಥವಾ ಬೇರೊಂದು ರೀತಿಯಲ್ಲಿಯೂ ಅಪಾರಪಾರಃ = ಎಂಬ ಶಬ್ದಕ್ಕೆ ಅರ್ಥವುಂಟು. ಅಸಮಾಪ್ತವಾದ ಅಂದರೆ ಅಪೂರ್ಣವಾದ ಕರ್ಮಕ್ಕೆ ತನ್ನ ಸ್ತೋತ್ರ ಮಾಡುವಿಕೆಯಿಂದ ಪೂರ್ತಿಯಾಗುವಿಕೆಯನ್ನು ಉಂಟುಮಾಡುವವನು ಎಂದರ್ಥ.

ಪೂರಕೋ ವಾ = "ಈ ವಿಷಯದಲ್ಲಿ ಶ್ರುತಿಯನ್ನು ಉದಾಹರಿಸುತ್ತಾರೆ.

"ವಿಷ್ಣುರ್ವೈ ಯಜ್ಞಸ್ಯ ದುರಿಷ್ಟಂ ಪಾತಿ" ಇತ್ಯಾದಿಶ್ರುತೇಃ = ವಿಷ್ಣುವು ತನ್ನ ಸ್ಮರಣೆಯಿಂದ ಆಚರಿಸಲ್ಪಡತಕ್ಕ ಯಜ್ಞಾದಿಕರ್ಮಗಳ ಲೋಪವನ್ನು ದುರಿಷ್ಟವನ್ನು ಹೋಗಲಾಡಿಸಿ ಕಾಪಾಡುತ್ತಾನೆಂದು ಶ್ರುತ್ಯರ್ಥವಾಗಿದೆ.

"ಭಾಗವತವಚನವೂ ಇದಕ್ಕೆ ಸಾಧಕವಾಗಿದೆ"

**"ವಿದುಃಕೃಷ್ಣಂ ಬ್ರಾಹ್ಮಣಾಃ ತತ್ತ್ವತೋ ಯೇ ತೇಷಾಂ ರಾಜನ್ ಸರ್ವಯಜ್ಞಾಃ ಸಮಾಪ್ತಾಃ"** ಇತಿ ವಚನಾತ್ = ಎಲೈ ರಾಜನೇ! ಯಾವ ಬ್ರಾಹ್ಮಣರು ಪ್ರಾಮಾಣಿಕವಾಗಿ ಶ್ರೀಕೃಷ್ಣಪರಮಾತ್ಮನನ್ನು ತಿಳಿದು ಕರ್ಮವನ್ನು ಆಚರಿಸುವರೋ ಅವರು ಆಚರಿಸುವ ಎಲ್ಲಾ ಯಜ್ಞಾದಿಕರ್ಮಗಳೂ ಸಮಗ್ರವಾಗಿ ಪೂರ್ತಿಗೊಳ್ಳುತ್ತವೆ ಎಂದು ವಚನವಿರುವುದರಿಂದ ಯಾವ ಕರ್ಮವನ್ನು ಆಚರಿಸಿದರೂ ಅದನ್ನು ಭಗವದರ್ಪಣ ದೃಷ್ಟಿಯಿಂದ ಆಚರಿಸಿದರೆ ಮಾತ್ರ ಅದು ಪೂರ್ಣಫಲಪ್ರದವಾಗುವುದು ಎಂದು ಅಭಿಪ್ರಾಯ.

"ಮಂತ್ರತಃ ತಂತ್ರತಃ ಛಿದ್ರಂ ದೇಶಕಾಲಾರ್ಹವಸ್ತುತಃ। ಸರ್ವಂ ಕರೋತಿ ನಿಶ್ಛಿದ್ರ ಮನುಸಂಕೀರ್ತನಂ ತವ" ಇತಿ ಭಾಗವತವಚನಾತ್ -

**ಅಭಿಪ್ರಾಯ** :- ಎಲೈ ಪರಮಾತ್ಮನೇ ನಾವು ಆಚರಿಸುವ ಯಾವುದೇ ಕರ್ಮವಾಗಲಿ ಅದರಲ್ಲಿ ಮಂತ್ರ ಲೋಪವಿದ್ದರೂ, ತಂತ್ರಲೋಪವಿದ್ದರೂ, ದೇಶ ಮತ್ತು ಕಾಲ, ವಸ್ತು ಸ್ವರೂಪದಲ್ಲಿ ಛಿದ್ರವಿದ್ದರೂ, ಲೋಪವಿರುವುದಾದರೂ, ನಿನ್ನ ಸಂಕೀರ್ತನಸಹಿತವಾಗಿದ್ದರೆ ಅದನ್ನು ಭಕ್ತಿಪೂರ್ವಕವಾದ ನಿನ್ನ ನಾಮ ಸಂಕೀರ್ತನವು ಲೋಪರಹಿತವಾದುದನ್ನಾಗಿ ಮಾಡುತ್ತದೆ ಎಂಬುದಾಗಿ ಶ್ರೀಮದ್ಭಾಗವತದಲ್ಲಿ ಉಕ್ತವಾಗಿದೆ.

ಅಪಾರಪಾರಃ ಎಂಬುದಕ್ಕೆ ಮತ್ತೊಂದು ಅರ್ಥವನ್ನು ಹೇಳುತ್ತಾರೆ.

ಅಪಾರಪಾರಂ = ಪಾರಃ = ಸಂಸಾರಾಂತರಂ = ಪಾರ ಎಂದರೆ ಸಂಸಾರದಿಂದ ದಾಟುವಿಕೆಯು ನ ವಿದ್ಯತೇ ಯೇಷಾಂ ತೇ ಅಪಾರಾಃ = ಸಂಸಾರಿಣಃ = ಅಂತಹ ಸಂಸಾರದಿಂದ ದಾಟುವಿಕೆಯು ಯಾರಿಗೆ ಇಲ್ಲವೋ ಅವರು ಸಂಸಾರಿಗಳು ಅಪಾರಾಃ ಎಂಬ ಶಬ್ದದಿಂದ ಹೇಳಲ್ಪಡುತ್ತಾರೆ. ತಾನ್ = ಪಾರಯತಿ, ಸಂಸಾರಾತ್ತಾರಯತೀತಿ ಅಪಾರಪಾರ ಇತಿ ವಾ" ಅಂತಹ ಅಪಾರವಾದ (ಸಂಸಾರಿಗಳನ್ನು) ದುಃಖಮಯವಾದ ಸಂಸಾರದಿಂದ ದಾಟಿಸುವವನಾದುದರಿಂದ ಶ್ರೀಹರಿಗೆ ಅಪಾರಪಾರನೆಂದು ಹೆಸರು.

ಪಾರಃಪರೇಭ್ಯಃ = ಪರೇಭ್ಯಃ ಬ್ರಹ್ಮಾದಿಭ್ಯಃ ಪರಃ ಉತ್ತಮಃ = ಇತರರಿಗಿಂತಲೂ ಪರರಾದ ಶ್ರೇಷ್ಠರಾದ ಪರಮಾತ್ಮನಿಗಿಂತಲೂ ಭಿನ್ನರಾದ ಬ್ರಹ್ಮಾದಿದೇವತೆಗಳಿಗಿಂತಲೂ, ಪರಃ = ಉತ್ತಮನು ಎಂದರ್ಥವು.

ಹಿಂದೆ ಹೇಳಿದ ಈ ಅರ್ಥಕ್ಕೆ ಉಪಪಾದಕವಾಗಿ ಮುಂದಿನ ವಿಶೇಷಣವು ಉಕ್ತವಾಗಿದೆ. ಉಕ್ತಾರ್ಥೋಪಪಾದನಾಯೋಕ್ತಂ ಪರಮಾರ್ಥರೂಪೀತಿ।। ಪರಮಾರ್ಥಂ = ಅವಿನಾಶಿರೂಪಂ ದೇಹಃ ಅಸ್ಯಾಸ್ತೀತಿ ಪರಮಾರ್ಥರೂಪೀ = ಯಾವ ನಾಲ್ಕು ಬಗೆಯಾದ ನಾಶರಹಿತವಾದ ದೇಹವುಳ್ಳವನಾದುದರಿಂದ ಪರಮಾತ್ಮನು ಪರಮಾರ್ಥ ರೂಪೀ ಎನಿಸಿರುತ್ತಾನೆ.

ಈ ವಿಷಯದಲ್ಲಿ ಪ್ರಮಾಣವನ್ನೂ ವ್ಯಾಖ್ಯಾನಕಾರರು ಉದಾಹರಿಸುತ್ತಾರೆ.

"ಸರ್ವೇ ನಿತ್ಯಾಃ ಶಾಶ್ವತಾಶ್ಚ ದೇಹಾಸ್ತಸ್ಯ ಮಹಾತ್ಮನಃ" ಇತಿ ವಚನಾತ್ = ಪರಮಾತ್ಮನ ಸಕಲ ದೇಹಗಳೂ ನಿತ್ಯಗಳೂ ಏಕಪ್ರಕಾರವಾಗಿರತಕ್ಕವುಗಳೂ ಆಗಿವೆ ಎಂಬ ವಚನವಿದೆ. ಆದರಿಂದ ನಶ್ವರ ದೇಹವನ್ನುಳ್ಳ ಬ್ರಹ್ಮಾದಿಗಳಿಗಿಂತಲೂ ಉತ್ತಮನು ಎಂಬುದು ಸಮರ್ಥಿತವಾಗಿದೆ.

ಮತ್ತೊಂದು ಅರ್ಥವನ್ನೂ ವಿವರಿಸುತ್ತಾರೆ. ಯದ್ವಾ "ಸ್ವತಂತ್ರರೂಪತ್ವಾತ್" "ಸ್ವತಂತ್ರಂ ಪರಮಾರ್ಥಾಖ್ಯಂ" ಇತಿ ವಚನಾತ್ = ಪರಮಾರ್ಥರೂಪೀ ಎಂಬಲ್ಲಿರುವ ಪರಮಾರ್ಥ ಶಬ್ದಕ್ಕೆ ವಚನಪ್ರಮಾಣಾನುಸಾರವಾಗಿ, ಸ್ವತಂತ್ರವಾದ ದೇಹವುಳ್ಳವನು ಎಂದರ್ಥವು. ಮಿಕ್ಕವರೆಲ್ಲರ ದೇಹಗಳು ಪರಮಾತ್ಮಾಧೀನವಾಗಿವೆ. ಆದ್ದರಿಂದ ಮಿಕ್ಕವರೆಲ್ಲಾ ಅಸ್ವತಂತ್ರ ದೇಹವುಳ್ಳವರು ಎಂದು ಅಭಿಪ್ರಾಯ.

ಸುಬ್ರಹ್ಮಪಾರಃ = ಎಂಬುದಕ್ಕೆ ವ್ಯಾಖ್ಯಾನ ಮಾಡುತ್ತಾರೆ ಸಃ = ಆ ಸುಪ್ರಸಿದ್ಧನಾದ ವಿಷ್ಣುವು ಪಾರಃ ಸರ್ವೇಷಾಂ ಆಶ್ರಯತ್ವೇನ ತೀರಭೂತಃ = ಪಾರತೀರಕರ್ಮಸಮಾಪ್ತಾವಿತಿಧಾತುಃ = ಈ ಧಾತುವಿನ ಅರ್ಥದಂತೆ ಪಾರಃ ಎಂದರೆ ಆಶ್ರಯನು ಎಲ್ಲಕ್ಕೂ ತೀರದಂತೆ ಆಶ್ರಯಭೂತನು ಎಂದರ್ಥ. ಇದಕ್ಕೆ ಮತ್ತೊಂದು ಅರ್ಥವೂ ಇದೆ. "ಸುಬ್ರಹ್ಮಪಾರಃ" ಎಂಬುದು ಒಂದೇ ಪದವು "ಸುಬ್ರಹ್ಮಪಾರಃ" ಇತ್ಯೇಕಂಪದಂ। ಬ್ರಹ್ಮ = ವೇದಾಃ, ತತ್ಸಹಿತಾಃ, ತದರ್ಥವಿಚಾರವಂತಃ = ಸುಬ್ರಹ್ಮಾಣಃ (ಸಕಲ ವೇದಾನುಸಾರಿಗಳಾದ ವಾಙ್ಮಯವು) ಹಾಗೂ ಸಕಲ ವೈದಿಕ ವೃಂದವು, ಮುಕ್ತಿಯೋಗ್ಯರಾದ ವೈದಿಕರು, ತೇಷಾಂ = ಅವರಿಗೆ, ಪಾರಃ = ಪ್ರಾಪ್ತುಂಶಕ್ಯಃ = ಅವರಿಂದ ಹೊಂದಲೂ ಯೋಗ್ಯನು, ಶಕ್ಯನು ಎಂದರ್ಥ.

ಅಥವಾ ಸುಬ್ರಹ್ಮರಾದವರನ್ನು = ಮುಕ್ತಿಯೋಗ್ಯ ವೇದಾನುಸಾರಿಗಳಾದ ಸಾತ್ವಿಕ ಚೇತನರನ್ನೂ ಪಾಲಯ ತೀತಿ = ರಲಯೋರಭೇದಾತ್ = ಸುಬ್ರಹ್ಮಪಾರಃ, ಅಸ್ಮಿಂಶ್ಚಪಕ್ಷೇ = ಈ ಪಕ್ಷದಲ್ಲಿ, ಪಾರಂಪರಂ = ಇತ್ಯತ್ರ ವಸ್ತು ಪದಾಧ್ಯಾಹಾರಃ ಕಾರ್ಯಃ = ಈ ಪಕ್ಷದಲ್ಲಿ ಪಾರಂಪರಂ = ಎಂಬಲ್ಲಿ "ವಸ್ತು" ಎಂಬ ಪದವನ್ನು ಅಧ್ಯಾಹಾರ ಮಾಡಿಕೊಂಡು "ಪಾರಂಪರಂವಸ್ತು" ಎಂದು ಅರ್ಥ ಮಾಡಬೇಕೆಂದು ಅಭಿಪ್ರಾಯ.

ಪರಪಾರಭೂತಃ = ಸರ್ವಜಗನ್ಮೂಲಕಾರಣತ್ವೇನ ಪರಂ = ಉತ್ತಮಂ, ಪ್ರಧಾನಂ ಸಕಲಜಡಜಗತ್ತಿಗೂ ಉಪಾದಾನಕಾರಣಭೂತವಾಗಿರುವುದರಿಂದ ಉತ್ತಮವಾದುದು ಜಡಪ್ರಕೃತಿಯೆಂಬ ಪ್ರಧಾನವು. ತಸ್ಯಪಾರಭೂತಃ = ಆಶ್ರಯಭೂತಃ = ಅದಕ್ಕೆ ಅಜಡಪ್ರಕೃತಿಯೆಂಬ ಪ್ರಧಾನಕ್ಕೆ ಮೂಲ ಜಡಪ್ರಕೃತಿಗೆ ಆಶ್ರಯಭೂತನು ಎಂದರ್ಥವು.

ಮತ್ತೊಂದು ಅರ್ಥವನ್ನು ತೋರಿಸುತ್ತಾರೆ. ಯದ್ವಾ = ಅಥವಾ, ಪರೇಷಾಂ = ಸ್ವೇತರೇಷಾಂ, ಪಾರಃ = ಪಾರಭೂತಃ = ಅಸಂಕರ್ಷ್ಯಶ್ಚಮರ್ಯಾದಾಭೂತಃ "ಏಷಸೇತುರ್ವಿಧಾರಣಃ ಇತಿವಚನಾತ್ = "ಏಷಸೇತುರ್ವಿಧಾರಣಃ" ಎಂಬ ಪ್ರಮಾಣವಚನದಂತೆ ತನ್ನಿಂದ ಹೊರತಾದ ಎಲ್ಲಕ್ಕೂ ಪರಮಾತ್ಮನು ಅಂತಿಮ ಅವಧಿಭೂತನಾದ ಮರ್ಯಾದಾಭೂತನಾಗಿ ಎಲ್ಲವನ್ನೂ ಧರಿಸಿರುವವನಾಗಿದ್ದಾನೆ ಎಂದರ್ಥವು. ಪರಃಪರಾಣಾಮಪಿ = ಪರಾಣಾಂ = ಅಪಿ ಮುಕ್ತಾನಾಂ = ಸಂಸಾರಿಚೇತನರಿಗಿಂತಲೂ ಶ್ರೇಷ್ಠರಾದ ಮುಕ್ತವರ್ಗಕ್ಕಿಂತಲೂ ಪರಃ = ಉತ್ತಮನು = ಶ್ರೇಷ್ಠನು ಸಕಲಮುಕ್ತ ಚೇತನರಿಗಿಂತಲೂ ಉತ್ತಮನು.

ಪಾರಪಾರಃ = ಪಾರಶ್ಚಾಸೌ + ಪಾರಶ್ಚ = ಪಾರಪಾರಃ ಇತಿ ಸಮಾಸಃ = "ಪೃಪಾಲನ ಪೂರಣಯೋಃ" ಇತಿಧಾತೋಃ ಪಾರ ಇತಿರೂಪಂ। ಭಕ್ತಾನಾಂ ಪಾಲನಾತ್ = ಪಾರಃ, ಅಪೇಕ್ಷಿತಪೂರಣಾಚ್ಚ ಪಾರಃ = ಪಾರಶ್ಚಾಸೌ ಪಾರಶ್ಚ = ಎಂಬುದಾಗಿ ಕರ್ಮಧಾರಯಸಮಾಸವು, ಪೃಪಾಲನ ಪೂರಣಯೋಃ ಎಂಬ ಧಾತುವಿನ ಎರಡು ಅರ್ಥಗಳಂತೆ ಪ್ರಕೃತದಲ್ಲಿ ಭಕ್ತರನ್ನು ಪಾಲನೆ ಮಾಡುವುದರಿಂದ, ಕಾಪಾಡುವುದರಿಂದ ಪಾರಶಬ್ದವಾಚ್ಯನು, ಹಾಗೆಯೇ ಭಕ್ತರ ಅಪೇಕ್ಷೆಗಳನ್ನು ಪೂರ್ತಿಗೊಳಿಸುವವನಾದುದರಿಂದ ಪಾರಶಬ್ದವಾಚ್ಯನೂ ಆಗಿರುವ ಕಾರಣ ಪಾರಪಾರ ಶಬ್ದದಿಂದಲೂ ಹೇಳಲ್ಪಟ್ಟಿರುತ್ತಾನೆ. ಅಪೇಕ್ಷಿತಪೂರಣಾಚ್ಚ ಪಾರಇತಿ ದ್ವಿತೀಯಪಾರಶಬ್ದಾರ್ಥಃ = ಮತ್ತೊಂದು ಅರ್ಥವಿದೆ = ಯದ್ವಾ = ಅಥವಾ, ಪಾರಾಃ = ಪಾಲಕಾಃ ಪೂರಕಾಶ್ಚ = ಬ್ರಹ್ಮಾದಯ = ಪಾರರು ಎಂದರೆ ಪಾಲಕರು, ಹಾಗೆಯೇ ಪೂರಕರೂ ಆಗಿರುವವರು ಬ್ರಹ್ಮಾದಿ ದೇವತೆಗಳು, ಪಾಲಕಾಃಪೂರಕಾಶ್ಚಯೇ ಬ್ರಹ್ಮಾದಯಃ ತೇಷಾಂ ಪಾಲಕಃ ಪೂರಕಶ್ಚೇತ್ಯರ್ಥಃ = ತಾರತಮ್ಯದಲ್ಲಿ ತಮಗಿಂತಲೂ ನ್ಯೂನರಾದವರನ್ನು ಪಾಲಿಸುವವರೂ, ಭಕ್ತರಿಗೆ ಅಪೇಕ್ಷಿತ ಪೂರಕರೂ ಆಗಿರುವ ಬ್ರಹ್ಮಾದ ದೇವತೆಗಳಿಗೂ ಕೂಡ, ಸರ್ವೋತ್ತಮನಾದ ವಿಷ್ಣುವು ಪಾಲಕನೂ ಆಗಿದ್ದಾನೆ. ಆ ಬ್ರಹ್ಮಾದಿಗಳ ಇಷ್ಟಾರ್ಥಗಳನ್ನು ಪೂರ್ತಿಗೊಳಿಸುವವನಾದುದರಿಂದ ಪೂರಕನೂ ಆಗಿರುತ್ತಾನೆಂಬ ಅರ್ಥದಲ್ಲಿ "ಪಾರಪಾರಃ" ಎಂಬ ಶಬ್ದವಾಚ್ಯನಾಗಿರುವವನು ಎಂದು ಅಭಿಪ್ರಾಯ.

ಇಲ್ಲಿಗೆ ಮೊದಲನೆಯ ಶ್ಲೋಕದ ವ್ಯಾಖ್ಯಾನವು ಅರ್ಥಸಹಿತವಾಗಿ ಸಮಾಪ್ತವಾಯಿತು.

## ಬ್ರಹ್ಮಪಾರ ಸ್ತೋತ್ರದಲ್ಲಿನ ಎರಡನೇ ಶ್ಲೋಕವು

**ಸ ಕಾರಣಂ ಕಾರಣತಸ್ತತೋಽಪಿ ತಸ್ಯಾಪಿ ಹೇತುಃ ಪರಹೇತುಹೇತುಃ।**
**ಕಾರ್ಯೇಷು ಚೈವಂ ಸಹ ಕರ್ಮಕರ್ತೃ ರೂಪೈರಶೇಷೈರವತೀಹ ಸರ್ವಮ್ ॥ ೨॥**

**ಪದ ವಿಭಾಗ** :- ಸಃ, ಕಾರಣಂ, ಕಾರಣಾತ್। ತತಃ, ಅಪಿ, ತಸ್ಯ, ಅಪಿ, ಹೇತುಃ, ಪರಹೇತುಹೇತುಃ। ಕಾರ್ಯೇಷು, ಚ, ಏವಂ, ಸ, ಹ, ಕರ್ಮಕರ್ತೃ, ರೂಪೈಃ, ಅಶೇಷೈಃ, ಅವತಿ, ಇಹ, ಸರ್ವಮ್॥

**ಅನ್ವಯಕ್ರಮ** :- "ಕಾರಣಾತ್" ಇತ್ಯತ್ರ ಷಷ್ಠ್ಯರ್ಥೇ ತಸಿಃ, ಚರಮಕಾರ್ಯಸ್ಯ ದೇಹಾದೇಃ, ಕಾರಣಸ್ಯ (ಸಃ) ಕಾರಣಂ, (ಭೂತರೂಪಃ) ತತೋಽಪಿ ತಸ್ಯಾಪಿ, ಹೇತುಃ, (ಅಹಂಕಾರಃ) ಪರಹೇತುಹೇತುಃ, (ಏತತ್ಸರ್ವಂ) ಸಃ (ವಿಷ್ಣುಃ) ಕಾರ್ಯೇಷುಚೈವಂ, ಸಃ (ವಿಷ್ಣುಃ) ಸಹ ಕರ್ಮಕರ್ತೃ ರೂಪೈರಶೇಷೈಃ ಇಹ ಸರ್ವಂ ಅವತಿ ಹಿ

**ಸುಬೋಧಿನೀ ವ್ಯಾಖ್ಯಾನ ಭಾಗ** :- "ಕಾರಣಾತ್" ಇತಿಷಷ್ಠ್ಯರ್ಥೇತಸಿಃ। ಚರಮಕಾರ್ಯಸ್ಯ ದೇಹಾದೇಃ ಕಾರಣಸ್ಯ ಬ್ರಹ್ಮಾಂಡಸ್ಯ ಕಾರಣಂ ಭೂತರೂಪಃ ತತೋಽಪಿ, ತಸ್ಯಾಪಿ, ಹೇತುಃ = ಅಹಂಕಾರಃ, ಪರಹೇತುಹೇತುಃ = ಪರಃ ಅಹಂಕಾರಃ, ತದ್ಧೇತುಃ = ಮಹಾನ್, ತದ್ಧೇತುಃ = ಪ್ರಕೃತಿಃ। ಏತತ್ಸರ್ವಂ = ಬ್ರಹ್ಮಾಂಡಾದಿಪ್ರಕೃತಿ ಪರ್ಯಂತಂ

ಕಾರಣಜಾತಂ, ಸುವಿಷ್ಣೋಃ =ತದಧೀನಮೇವೇತ್ಯರ್ಥಃ। ಕಾರ್ಯೇಷ್ವಪ್ಯೇವಂ = ಮಹದಾದಿದೇಹಾಂತ ಕಾರ್ಯೇಷ್ವಪ್ಯೇವಂ ಮಹದಾದಿದೇಹಾಂತಕಾರ್ಯಮಪಿ ಸ ವಿಷ್ಣೋಃ ತದಧೀನಮೇವೇತ್ಯರ್ಥಃ। "ಯದಧೀನಾ ಯಸ್ಯ ಸತ್ತಾ ತತ್ತದಿತ್ಯೇವ ಭಣ್ಯತೇ।। ಇತ್ಯಾದೇಃ। ಏವಂ ಕಾರಣಕಾರ್ಯಾಣಾಂ ಭಗವದಧೀನತ್ವೋಕ್ತ್ಯಾ ಸ್ವಾತಂತ್ರ್ಯೇಣ ಅಶೇಷಜಗತ್ಸ್ರಷ್ಟೃತ್ವಂ ಭಗವತ ಏವೇತ್ಯುಕ್ತಂ, ಪಾಲಕತ್ವಮಪಿ ತಸ್ಯೈವೇತ್ಯಾಹ। ಸಹೇತಿ। ಸುವಿಷ್ಣೋಃ ಕರ್ಮಾಣಿ ಪಾಲ್ಯಾನಿ ಕರ್ತಾರಃಪಾಲಕಾಃತೇಷುಸ್ಥಿತೈರಶೇಷೈಃ ಸರ್ವೈಃಸ್ವಕೀಯೈಃಸರ್ವಂ ಅವತಿ। ಲೌಕಿಕಪಾಲಕವೈಲಕ್ಷಣ್ಯ ಜ್ಞಾಪನಾರ್ಥಂ ಕರ್ಮರೂಪತ್ವೋಕ್ತಿ।। ಹೇತ್ಯನೇನ ಉಕ್ತಾರ್ಥೇ ಆಗಮಪ್ರಸಿದ್ಧಿಂ ದರ್ಶಯತಿ ।। ೨।।

**ಅರ್ಥ** :- "ಕಾರಣಾತು" ಇತಿಷಷ್ಠ್ಯರ್ಥೇ ತುಃ = ಕಾರಣಾತು ಎಂಬಲ್ಲಿ ಕಾರಣಸ್ಯ ಎಂಬ ಷಷ್ಠೀವಿಭಕ್ತಿಯ ಅರ್ಥದಲ್ಲಿ "ಸಾರ್ವವಿಭಕ್ತಿಕಸ್ತುಃ" ಎಂಬಂತೆ ತುಃಪ್ರತ್ಯಯವು ಬಂದು ಕಾರಣಾತು ಎಂದಾಗಿದೆ. ಅದಕ್ಕೆ ಕಾರಣಸ್ಯ ಎಂಬರ್ಥವು ಚರಮಕಾರ್ಯಸ್ಯ ದೇಹಾದೇಃ = ಅಂತಿಮವಾದ ಕಾರ್ಯವೆನಿಸಿದ ದೇಹಾದಿರೂಪವಾದ ಕಾರ್ಯಕ್ಕೆ ಕಾರಣಸ್ಯ - ಕಾರಣವಾದ, ಬ್ರಹ್ಮಾಂಡಸ್ಯ = ಬ್ರಹ್ಮಾಂಡಕ್ಕೆ, ಕಾರಣಂ =ಕಾರಣವಾದುದು, ಭೂತರೂಪೀ = ಭೂತರೂಪವಾದುದು- ತತೋಽಪಿ = ಅದಕ್ಕಿಂತಲೂ, ತಸ್ಯಾಪಿ = ಅದಕ್ಕೂ ಸಹ ಹೇತುಃ ಅಹಂಕಾರಃ = ಅದಕ್ಕೂ ಸಹ ಕಾರಣವಾದುದು ಅಹಂಕಾರತತ್ತ್ವವು, ಪರಹೇತುಹೇತುಃ = ಪರಃ = ಅಹಂಕಾರಃ = ಪರಶಬ್ದದಿಂದ ಅಹಂಕಾರ ತತ್ತ್ವವು - ತದ್ಧೇತುಃ ಮಹಾನ್ = ಆ ಅಹಂಕಾರತತ್ತ್ವಕ್ಕೆ ಕಾರಣವಾದುದು ಮಹತ್ತತ್ತ್ವವು ತದ್ಧೇತುಃ = ಆ ಮಹತ್ತತ್ತ್ವಕ್ಕೂ ಕಾರಣವಾದುದು - ಪ್ರಕೃತಿಃ = ಜಡಪ್ರಕೃತಿಯು ಏತತ್ಸರ್ವಂ = ಬ್ರಹ್ಮಾಂಡಾದಿ ಪ್ರಕೃತಿಪರ್ಯಂತಂ ಕಾರಣಜಾತಂ = ಈ ಸಮಸ್ತವಾದ ಬ್ರಹ್ಮಾಂಡ ಮೊದಲುಗೊಂಡು ಮೂಲ ಜಡಪ್ರಕೃತಿಪರ್ಯಂತವಾದ, ಕಾರಣ ಸಮುದಾಯವು ಸುವಿಷ್ಣೋಃ = ಆ ವಿಷ್ಣುವು =ತದಧೀನಮೇವೇತ್ಯರ್ಥಃ = ಆ ವಿಷ್ಣುವಿನ ಅಧೀನವೇನೇ ಎಂದು ಅರ್ಥವು. ಕಾರ್ಯೇಷು ಚೈವಂ =ಮಹದಾದಿಕಾರ್ಯೇಷ್ವಪ್ಯೇವಂ = ಮಹದಾದಿಕಾರ್ಯಗಳಲ್ಲೂ ಸಹ ಹೀಗೆಯೇ ಮಹದಾದಿದೇಹಾಂತಕಾರ್ಯಮಪಿ = ಮಹದಾದಿದೇಹಾಂತಕಾರ್ಯವೂ ಕೂಡ, ಸುವಿಷ್ಣೋಃ = ಆ ವಿಷ್ಣುರೇನೇ ತದಧೀನಮೇವೇತ್ಯರ್ಥಃ = ಆ ವಿಷ್ಣುವಿನ ಅಧೀನವೆಂದೇ ಅರ್ಥವು ಈ ವಿಷಯದಲ್ಲಿ ಪ್ರಮಾಣವಾಕ್ಯವನ್ನು ಉದಾಹರಿಸುತ್ತಾರೆ. "ಯದಧೀನಾ ಯಸ್ಯ ಸತ್ತಾ ತತ್ತದಿತ್ಯೇವ ಭಣ್ಯತೆ" ಇತ್ಯಾದೇಃ ಯಸ್ಯ = ಯಾವುದರ, ಸತ್ತಾ ಇರುವಿಕೆಯು:, (ಸ್ವರೂಪಸತ್ತಾ, ಪ್ರಮಿತಿಸತ್ತಾ, ಪ್ರವೃತ್ತಿಸತ್ತೆಯು) ಯದಧೀನಾ = ಯಾರ ಅಧೀನವಾಗಿರುವುದೋ, ತತ್ತದಿತ್ಯೇವ ಭಣ್ಯತೇ =ಅದು ಅದೇನೇ ಎಂದು ಹೇಳಲ್ಪಡುತ್ತದೆ. ಏವಂ =ಹೀಗೆ, ಕಾರಣಕಾರ್ಯಾಣಾಂ = ಕಾರಣಗಳೇನು, ಕಾರ್ಯಗಳೇನು ಇವೆಲ್ಲವುಗಳಿಗೂ ಭಗವದಧೀನತ್ವೋಕ್ತ್ಯಾ =ಪರಮಾತ್ಮನ ಅಧೀನತ್ವವನ್ನು ಹೇಳಿರುವುದರಿಂದ, ಸ್ವಾತಂತ್ರ್ಯೇಣ =ಸ್ವತಂತ್ರವಾಗಿ, ಅಶೇಷಜಗತ್ಸ್ರಷ್ಟೃತ್ವಂ =ಅಶೇಷ ಜಗತ್ತಿನ ಸ್ರಷ್ಟೃತ್ವವು, ಜಗಜ್ಜನ್ಮಾದಿ ಕಾರಣತ್ವವು, ಭಗವತಏವೇತ್ಯುಕ್ತಂ = ಭಗವಂತನಾದ ವಿಷ್ಣುವಿಗೇನೇ ಇರುತ್ತದೆಯೆಂದು ಹೇಳಲ್ಪಟ್ಟಿದೆ.

ಪಾಲಕತ್ವಮಪಿ =ಪಾಲಕತ್ವವೂ ಕೂಡ, ಸಂರಕ್ಷಣೆಯೂ ಸಹ, ತಸ್ಯೈವೇತ್ಯಾಹ =ಆ ವಿಷ್ಣುವಿಗೇನೇ ಇರುವುದೆಂದು ಹೇಳಲಾಗಿದೆ. ಸಹೇತಿ = ಸಹ ಇತ್ಯಾದಿ ಮುಂದಿನ ವಾಕ್ಯದಲ್ಲಿ -

ಸುವಿಷ್ಣೋಃ = ಆ ವಿಷ್ಣುವು ಕರ್ಮಾಣಿ ಪಾಲ್ಯಾನಿ ಕರ್ತಾರಃ ಪಾಲಕಾಃ ತೇಷುಸ್ಥಿತೈರಶೇಷೈಃಸರ್ವೈಃ ಸ್ವಕೀಯೈಃ ರೂಪೈಃ = ಜಗತ್ತಿಗೆ ಪಾಲಕರಾದ ಬ್ರಹ್ಮಾದಿ ದೇವತೆಗಳಲ್ಲಿರತಕ್ಕ ತನ್ನದೇ ಆದ ಸಕಲ ರೂಪಗಳಿಂದಲೂ, ಅವನೇನೇ ಆ ವಿಷ್ಣುವೇನೇ ಆಯಾ ಕ್ರಿಯಾರೂಪಗಳಿಂದಲೂ, ಆಯಾ ಕರ್ತೃರೂಪಗಳಿಂದಲೂ, ತನ್ನದೇ ಆದ ರೂಪಗಳಿಂದಲೂ ಸರ್ವಂ = ಎಲ್ಲವನ್ನು ಅವತಿ = ಕಾಪಾಡುತ್ತಾನೆ. ಸರ್ವಪಾಲಕತ್ವವೂ ಸಹ ಆ ವಿಷ್ಣುವಿಗೇನೇ ಇರುತ್ತದೆ.

ತತ್ರತ್ಯಪಾಲಕೇಷು ಚಸ್ಥಿತ್ವಾ = ಆಯಾಪಾಲಕದೇವತೆಗಳಲ್ಲಿ ತಾನೇ ಇದ್ದು, ಸರ್ವಂ ಪಾಲಯತೀತಿ ಎಲ್ಲವನ್ನೂ ರಕ್ಷಿಸುತ್ತಾನೆ. ಇತ್ಯನೇನ = ಹೀಗೆ ಹೇಳಿರುವುದರಿಂದ, ಭಗವತಏವ = ಭಗವಂತನಾದ ವಿಷ್ಣುವಿಗೇನೇ, ಮುಖ್ಯಪಾಲಕತ್ವಂ = ಮುಖ್ಯವಾದ ಪಾಲಕತ್ವವು, ತದನ್ಯೇಷಾಂತು ಚ = ವಿಷ್ಣುವಿಗಿಂತಲೂ ಬೇರೆಯವರಾದ ಬ್ರಹ್ಮಾದಿ ದೇವತೆಗಳಿಗಾದರೋ ತದಧೀನತ್ವಮಿತ್ಯುಕ್ತಂಭವತಿ = ಪರಮಾತ್ಮನ ಅಧೀನತೆಯಿಂದ ಪಾಲಕತ್ವವು ಉಂಟೆಂದು ಹೇಳಿದಂತಾಗುತ್ತದೆ.

ಲೌಕಿಕಪಾಲಕವೈಲಕ್ಷಣ್ಯಜ್ಞಾಪನಾರ್ಥಂ = ಲೌಕಿಕ ಪಾಲಕರಾದ ರಾಜಾದಿಗಳಿಗಿಂತಲೂ ಅತ್ಯಂತ ವ್ಯತ್ಯಾಸವನ್ನು ತಿಳಿಸುವುದಕ್ಕಾಗಿ (ಲೌಕಿಕರಾದ ರಾಜಾದಿಗಳು ಹೊರಗಡೆಯಿಂದ ಪಾಲಕರಾಗಿರುತ್ತಾರೆ.) ಪರಮಾತ್ಮನಾದರೋ ಅಂತರ್ಯಾಮಿಯಾಗಿ ಪ್ರೇರಕನಾಗಿ ಪಾಲಕನಾಗಿರುತ್ತಾನೆ. ಈ ವ್ಯತ್ಯಾಸವನ್ನು ತಿಳಿಸುವುದಕ್ಕಾಗಿ ಸ್ವಕರ್ಮಕರ್ತೃ ಇತ್ಯಾದಿಯಾಗಿ, ಕರ್ಮರೂಪತ್ವೋಕ್ತಿಃ = ಕರ್ಮರೂಪತ್ವದಕಥನವು ಕಂಡು ಬಂದಿದೆ.

ಸ್ವಕರ್ಮಕರ್ತಾ ಎಂಬಲ್ಲಿರುವ "ಹ" ಎಂಬುದರಿಂದ ಹಿಂದೆ ಹೇಳಿದ ಅರ್ಥದಲ್ಲಿ ಆಗಮದ ಪ್ರಸಿದ್ಧಿಯು ಉಂಟೆಂಬುದನ್ನು ತೋರಿಸಲಾಗಿದೆ. ।। ೨ ।।

**ಎರಡನೇ ಶ್ಲೋಕದ ತಾತ್ಪರ್ಯ :-**

ಸರ್ವೋತ್ತಮನಾದ ಶ್ರೀವಿಷ್ಣುವು ಸಕಲ ಕಾರಣಗಳಿಗೂ ನಿಯಾಮಕನು. ಸೂಕ್ಷ್ಮವಾದ ಜಡಪ್ರಕೃತಿ ಮೊದಲುಗೊಂಡು ಈ ಬ್ರಹ್ಮಾಂಡದಲ್ಲಿನ ಸಕಲ ಕಾರಣಗಳೂ ಪರಮಾತ್ಮನ ಅಧೀನವಾಗಿವೆ. ಪ್ರಕೃತ್ಯಾದಿ ಕಾರಣಗಳಲ್ಲಿ ತಾನಿದ್ದು ಅವರ ವಿಕಾರಕ್ಕೆ ತಕ್ಕ ಶಕ್ತಿಪ್ರದನಾಗಿ, ಪ್ರೇರಕನಾಗಿ, ನಿಮಿತ್ತಕಾರಣನೆನಿಸಿರುತ್ತಾನೆ. ಹಾಗೆಯೇ ಸಕಲಕಾರ್ಯಗಳಲ್ಲಿಯೂ ತಾನಿದ್ದು ಅದರದರ ಕಾರ್ಯಪ್ರೇರಕನಾಗಿ ನಿಯಾಮಕನಾಗಿದ್ದಾನೆ. ಜಗತ್ತಿಗೆ ಪಾಲಕರೂ, ಆಗಿರುವ ಬ್ರಹ್ಮಾದಿಗಳಿಗೂ ಕೂಡ ಪಾಲಕನಾಗಿದ್ದಾನೆ. ಲೌಕಿಕರಾದ ಪಾಲಕರು ಹೊರಗಿನಿಂದ ಪಾಲಕರಾದಾಗ್ಯೂ ಕೂಡ ಅದಕ್ಕೆ ವಿಲಕ್ಷಣನಾಗಿ ಅಂತಃ ಒಳಗೆ ತಾನಿದ್ದು ಪಾಲಕನೂ ಪ್ರೇರಕನೂ ಆಗಿರುತ್ತಾನೆ. ಮಹತ್ತತ್ತ್ವ ಮೊದಲುಗೊಂಡು ದೇಹಾಂತವಾದ ಸಕಲ ಕಾರಣಗಳೂ ಕಾರ್ಯಗಳೂ ಸಹ ಪರಮಾತ್ಮನ ಅಧೀನತೆಗೆ ಒಳಪಟ್ಟಿವೆ. ಇಂತಹ ಅಪಾರವಾದ ಶ್ರೀ ವಿಷ್ಣುವನ ಮಹಿಮೆಯನ್ನು ಶ್ರುತಿ ಮೊದಲಾದ ಪ್ರಮಾಣಗಳು ಪ್ರತಿಪಾದಿಸುತ್ತಲಿವೆ.

**ಮೂರನೇ ಶ್ಲೋಕವು ಈ ರೀತಿ ಇದೆ :-**

**ಬ್ರಹ್ಮಕೃದ್ಭೂಃ ಬ್ರಹ್ಮ ಸ ಸರ್ವಭೂತೋ**
**ಬ್ರಹ್ಮ ಕೃಶಾನಾಂ ಪರಿರಕ್ಷಿತೋಽಪಿ ।**
**ಬ್ರಹ್ಮಾನ್ವಯಂ ನಿತ್ಯಮಜಂ ಸ ವಿಷ್ಣುಃ**
**ಅಪ ಕ್ರಿಯಾದ್ಯೈರವಿಶೇಷಣಾಗಃ ।। ೩ ।।**

**ಪದ ವಿಭಾಗ** :- ಬ್ರಹ್ಮ, ಪ್ರಭುः ಬ್ರಹ್ಮ, ಸः ಸರ್ವಭೂತः, ಬ್ರಹ್ಮಪ್ರಜಾನಾಂ, ಪತಿः, ಅಚ್ಯುತः, ಅಸೌ, ಬ್ರಹ್ಮ ಅವ್ಯಯಂ, ನಿತ್ಯಂ, ಅಜಂ, ಸः, ವಿಷ್ಣುः, ಅಪಕ್ಷಯಾದ್ಯೈः, ಅಖಿಲೈः, ಅಸಂಗಿ ।

**ಅನ್ವಯಕ್ರಮ** :- ಬ್ರಹ್ಮಪ್ರಭುः, ಬ್ರಹ್ಮ ಸः, ಸರ್ವಭೂತः ಬ್ರಹ್ಮಪ್ರಜಾನಾಂ, ಪತಿः, ಅಸೌ, ಅಚ್ಯುತः ಸः ವಿಷ್ಣುः, ಅವ್ಯಯಂ, ನಿತ್ಯಂ, ಅಜಂ, ಅಪಕ್ಷಯಾದ್ಯೈः ಅಖಿಲೈः ಅಸಂಗಿ, ಬ್ರಹ್ಮ, (ಪರಂಬ್ರಹ್ಮ)

**ಸುಬೋಧಿನೀ ವ್ಯಾಖ್ಯಾನ ಭಾಗः** :- ಬ್ರಹ್ಮಪ್ರಭುः. ಬ್ರಹ್ಮಭ್ಯः ಜೀವೇಭ್ಯः, ಪ್ರಭುः, ಸಮರ್ಥः। "ಬ್ರಹ್ಮಾಣ ಜೀವಾः ಸರ್ವೇಽಪಿ ಪರಬ್ರಹ್ಮಾಣಮುಕ್ತಿಗಾः" ಇತಿ ಶ್ರುತೇः। ಬ್ರಹ್ಮಾದಿಸರ್ವಜೀವೇಭ್ಯः ಉತ್ತಮ ಇತ್ಯರ್ಥः। ಬ್ರಹ್ಮಸः ವೇದೋಽಪಿ ಸः। "ಬ್ರಹ್ಮವೇದಃ ತಪಸ್ತತ್ತ್ವಂ" ಇತ್ಯಭಿಧಾನಾತ್ । ವೇದಾನಾಂ ಪ್ರಥಮವಕ್ತೃತ್ವೇನ ವೇದಾತ್ಮತ್ವೋಕ್ತೇः । ತದುಕ್ತಂಶಬ್ದನಿರ್ಣಯೇ। "ವೇದಾನಾಂ ಪ್ರಥಮೋ ವಕ್ತಾ ಹರಿರೇವ ಯತೋವಿಭುः। ಅತೋವಿಷ್ಣ್ವಾತ್ಮಕಾ ವೇದಾः, ಇತ್ಯಾಹುರ್ವೇದವಾದಿನः" ಇತಿ ।

ಸರ್ವಭೂತः = ಸರ್ವೇಷುಚರಾಚರೇಷು ಭೂತः = ವಿದ್ಯಮಾನः । ಸರ್ವಾಂತರ್ಯಾಮೀ। ಬ್ರಹ್ಮ ಪ್ರಜಾನಾಂ ಪತಿः ಬ್ರಹ್ಮಣಶ್ಚತುರ್ಮುಖಸ್ಯ, ತತ್ಪ್ರಜಾನಾಂ = ರುದ್ರಾದೀನಾಂಚ ಪತಿः = ನಿಯಾಮಕः ತತ್ರ ಹೇತುः ಇತಿ । ಪ್ರಕೃತಿವತ್ ವಿಕಾರರಹಿತಂ ।ನಿತ್ಯಂ = ಅವಿನಾಶಿ। ಅಜಂ = ದೇಹಗ್ರಹಣಲಕ್ಷಣಜನ್ಮರಹಿತಂ ಅಪಕ್ಷಯವೃದ್ಧ್ಯಾದಿ ಸಂಗರಹಿತಮ್ ।।

**ಅರ್ಥ** :- ಬ್ರಹ್ಮಪ್ರಭುः = ಬ್ರಹ್ಮಭ್ಯः ಜೀವೇಭ್ಯः ಪ್ರಭುः = ಸಮರ್ಥः = ಬ್ರಹ್ಮಶಬ್ದವಾಚ್ಯರಾದ ಜೀವರಿಗಿಂತಲೂ ಅತ್ಯಂತ ಸಮರ್ಥನಾದ ವಿಷ್ಣುವು ಬ್ರಹ್ಮಪ್ರಭುವೆನಿಸಿದ್ದಾನೆ. ಜೀವರಿಗೆ ಬ್ರಹ್ಮಶಬ್ದವಾಚ್ಯತ್ವದ ವಿಷಯದಲ್ಲಿ ಶ್ರುತಿವಾಕ್ಯವನ್ನೂ ಉದಾಹರಿಸುತ್ತಾರೆ. ಬ್ರಹ್ಮಾಣ ಜೀವಾಸ್ಸರ್ವೇಽಪಿ ಪರಬ್ರಹ್ಮಾಣ ಮುಕ್ತಿಗಾः ।। ಇತಿಶ್ರುತಿः ।' ಅಮುಕ್ತಜೀವರು ಬ್ರಹ್ಮಶಬ್ದವಾಚ್ಯರು. ಮುಕ್ತಜೀವರು ಪರಬ್ರಹ್ಮ ಶಬ್ದದಿಂದ ಹೇಳಲ್ಪಡತಕ್ಕವರು. ಮುಖ್ಯವೃತ್ತಿಯಿಂದ ಈ ರೀತಿ ಹೇಳರತಕ್ಕುದಾಗಿದೆ. ಪರಮ ಮುಖ್ಯ ವೃತ್ತಿಯಿಂದ ಬ್ರಹ್ಮಾದಿ ಶಬ್ದಗಳಿಂದ ಸರ್ವೋತ್ತಮನಾದ ನಾರಾಯಣನೇ ಬ್ರಹ್ಮಶಬ್ದವಾಚ್ಯನೆಂದು ತಿಳಿಯಬೇಕು.

ಬ್ರಹ್ಮಾದಿ ಸರ್ವಜೀವೇಭ್ಯः ಉತ್ತಮ ಇತ್ಯರ್ಥः = ಜೀವೋತ್ತಮರಾದ ಬ್ರಹ್ಮದೇವರೇನು ಅವರಿಗಿಂತಲೂ ನ್ಯೂನರಾದ ಇತರ ಜೀವರೇನು ಇವರೆಲ್ಲರಿಗಿಂತಲೂ ಶ್ರೀವಿಷ್ಣುವು ಉತ್ತಮನು ಎಂದು ಅಭಿಪ್ರಾಯ.

ಬ್ರಹ್ಮ ಸः =, ಬ್ರಹ್ಮ = ವೇದವು, ಸः = ಅವನು, ಬ್ರಹ್ಮಶಬ್ದವು ವೇದಕ್ಕೂ ವಾಚಕವಾಗಿದೆ. ಅದಕ್ಕೆ ಪ್ರಮಾಣವು ಈ ರೀತಿ ಇದೆ. "ಬ್ರಹ್ಮ = ವೇದः, ತಪः ತತ್ತ್ವಂ" ಇತ್ಯಭಿಧಾನಾತ್ । ಅಭಿಧಾನವೆಂಬ ನಿಘಂಟುವಿನಲ್ಲಿ ವೇದ, ತಪಸ್ಸು, ತತ್ತ್ವ ಇವುಗಳೂ ಸಹ ಬ್ರಹ್ಮಶಬ್ದದಿಂದ ಉಕ್ತವಾಗಿದೆ.

"ವೇದಾನಾಂ ಪ್ರಥಮವಕ್ತೃತ್ವೇನ ವೇದಾತ್ಮತ್ವೋಕ್ತೇः = ಹರಿः"ಸೃಷ್ಟಿಯ ಆದಿಯಲ್ಲಿ ಪ್ರಪ್ರಥಮದಾಗಿ ವೇದಗಳನ್ನು ಹೇಳಿದವನಾದುದರಿಂದ, ವೇದಗಳಿಗೆ ವಕ್ತೃವಾಗಿರುವುದರಿಂದ. "ಯೋ ವೇದಾಂಶ್ಚಪ್ರಹಿಣೋತಿತಸ್ಮೈ" ಇತ್ಯಾದಿ ವೇದಪ್ರಮಾಣಗಳಲ್ಲಿ ಮೊದಲು ತನ್ನ ಜ್ಯೇಷ್ಠ ಪುತ್ರನಾದ ಚತುರ್ಮುಖನಿಗೆ ಶ್ರೀಹರಿಯು, ವೇದಗಳನ್ನು ಉಪದೇಶ ಮಾಡಿರುವುದು ಪ್ರಮಾಣ ಪ್ರಸಿದ್ಧವೇ ಆಗಿದೆ. ತದುಕ್ತಂ ಶಬ್ದನಿರ್ಣಯೇ "ವೇದಾನಾಂ ಪ್ರಥಮೋವಕ್ತಾ ಹರಿರೇವ

ಯತೋ ವಿಭುಃ । ಅತೋವಿಷ್ವಾತ್ಮಕಾ ವೇದಾಃ ಇತ್ಯಾಹುರ್ವೇದವಾದಿನಃ'' ಇತಿ =ಯಾವ ಕಾರಣದಿಂದ ಸರ್ವಸ್ವಾಮಿಯಾದ ಶ್ರೀಹರಿಯು ಪ್ರಪ್ರಥಮವಾಗಿ ವೇದಗಳಿಗೆ ವಕ್ತೃವಾಗಿದ್ದಾನೆಯೋ ಆದಕಾರಣ ವೇದಗಳನ್ನು ವಿಷ್ವಾತ್ಮಕಗಳೆಂದು ವೇದವಾದಿಗಳು ಹೇಳುತ್ತಾರೆಂದು ಶಬ್ದನಿರ್ಣಯವೆಂಬ ಕೋಶದಲ್ಲಿ ವಿವರಿಸಲ್ಪಟ್ಟಿದೆ.

ಸರ್ವಭೂತಃ = ಸರ್ವೇಷು ಚರಾಚರೇಷುಭೂತಃ = ವಿದ್ಯಮಾನಃ = ಸಕಲ ಚೇತನರಲ್ಲಿಯೂ ಅಚೇತನ ವಸ್ತುಗಳಲ್ಲಿಯೂ ನಿಯಾಮಕನಾಗಿ ಇರತಕ್ಕವನಾದುದರಿಂದ ಶ್ರೀಹರಿಯು ಸರ್ವಭೂತನೆಂದು ಹೇಳಲ್ಪಟ್ಟಿರುತ್ತಾರೆ. ಅಂದರೆ, ಸರ್ವಾಂತರ್ಯಾಮೀ =ಸರ್ವವನ್ನೂ, ಒಳಗೆ ತಾನು ಇದ್ದು ನಿಯಮಿಸತಕ್ಕವನು, ಪ್ರೇರಿಸತಕ್ಕವನು ಎಂದರ್ಥ.

ಬ್ರಹ್ಮಪ್ರಜಾನಾಂಪತಿಃ = ಬ್ರಹ್ಮಣಶ್ಚ ಚತುರ್ಮುಖಸ್ಯ, ತತ್ಪ್ರಜಾನಾಂ = ರುದ್ರಾದೀನಾಂಚಪತಿಃ = ನಿಯಾಮಕಃ = ಚತುರ್ಮುಖ ಬ್ರಹ್ಮನಿಗೂ ಅವನ ಪ್ರಜೆಗಳಾದ ರುದ್ರಾದಿಗಳಿಗೂ ನಿಯಾಮಕನು ಎಂದರ್ಥ. ತತ್ರಹೇತುಃ ಅಚ್ಯುತಃ ಇತಿ = ದೇಹತೋಽಪಿನಾಶರಹಿತಃ = ಬ್ರಹ್ಮಾದಿಗಳಿಗೂ ಅವನ ಪ್ರಜೆಗಳಾದ ರುದ್ರಾದಿಗಳಿಗೂ ನಿಯಾಮಕನೆಂಬಲ್ಲಿ ಕಾರಣವಾಗಿ ಅಚ್ಯುತಃ ಎಂಬುದನ್ನು ಹೇಳಲಾಗಿದೆ. ಅಚ್ಯುತ ಎಂದರೆ ಚ್ಯುತಿರಹಿತನೆಂದು ಅರ್ಥ; ನಾಶರಹಿತನೆಂದು ಪರಮಾತ್ಮನ ದೇಹವು ನಿತ್ಯ, ನಿರತಿಶಯ, ಅಪ್ರಾಕೃತಜ್ಞಾನಾನಂದಾತ್ಮಕವಾದುದು. ಅದಕ್ಕೆ ಅನಿತ್ಯತ್ವಂ, ದೇಹಹಾನಿಃ, ಅಸ್ವಾತಂತ್ರ್ಯಂ ಅಪೂರ್ಣತಾ ನಾಶಃ ಚತುರ್ವಿಧಃ ಪ್ರೋಕ್ತಃ ತದಭಾವೋ ಹರೇಃ ಸದಾ।। ಎಂಬ ಪ್ರಮಾಣವಚನಾನುಸಾರವಾಗಿ ಪರಮಾತ್ಮನಿಗೆ, ಈ ಬಗೆಯಾದ ನಾಲ್ಕು ವಿಧಗಳಾದ ನಾಶಗಳ ಪೈಕಿ ಯಾವುದೂ ಇಲ್ಲವಾದುದರಿಂದಲೇ ಮುಖ್ಯವಾಗಿ ಅಕ್ಷರಶಬ್ದವಾಚ್ಯನೆಂದೂ, ಅಚ್ಯುತ ಶಬ್ದವಾಚ್ಯನೆಂದೂ ಪ್ರಮಾಣಗಳೂ ಹೇಳುತ್ತಲಿವೆ.

ಸಃವಿಷ್ಣುಃ = ಆ ವಿಷ್ಣುವು, ಅವ್ಯಯಂ, ನಿತ್ಯಂ, ಅಜಂ, ಅಪಕ್ಷಯಾದ್ಯೈರಖಿಲೈರಸಂಗಿ, ಬ್ರಹ್ಮ = ಪರಂಬ್ರಹ್ಮ।
ಅವ್ಯಯಂ = ಪ್ರಕೃತಿವದ್ವಿಕಾರರಹಿತಂ।
ನಿತ್ಯಂ = ಅವಿನಾಶಿ, ಅಜಂ = ದೇಹಗ್ರಹಣಲಕ್ಷಣಜನ್ಮರಹಿತಂ। ಅಪಕ್ಷಯವೃದ್ಧ್ಯಾದಿಸಂಗರಹಿತಂ।। ೫೩ ।।

**ಅರ್ಥ** :- ಅವ್ಯಯಂ = ಪ್ರಕೃತಿಯಂತೆ ವಿಕಾರರಹಿತನು, ಪ್ರಕೃತಿಗೆ ವಿಕಾರವಿದೆ. ಪರಬ್ರಹ್ಮನಿಗೆ ಅದು ಇಲ್ಲ. ನಿತ್ಯಂ = ನಾಶರಹಿತನು, (ಅವಿನಾಶಿ) ಅಜಂ = ನಶ್ವರವಾದ ದೇಹವನ್ನು ಸ್ವೀಕರಿಸುವ (ಹೊಂದುವ) ಲಕ್ಷಣದಿಂದ ಕೂಡಿದ ಜನ್ಮದಿಂದ ರಹಿತನು. ಅಪಕ್ಷಯವೃದ್ಧಿ ಇತ್ಯಾದಿಯಾದ ಕ್ಷೀಣತೆ, ವೃದ್ಧಿ ಮೊದಲಾದುವುಗಳ ಸಂಗದಿಂದ, ಸಂಬಂಧದಿಂದ ರಹಿತನು ಎಂದರ್ಥ.

ಹಿಂದೆ ಹೇಳಿದ ಅರ್ಥವನ್ನು ಸ್ಮರಿಸುತ್ತಾ ತನ್ನ ದೋಷದ ಉಪಶಮವನ್ನು ಪ್ರಾರ್ಥಿಸುತ್ತಾನೆ (ಕಂಡು ಋಷಿಯು ಬ್ರಹ್ಮಸಾರ ಸ್ತೋತ್ರದಲ್ಲಿನ ಮೂರನೇ ಶ್ಲೋಕದ ತಾತ್ಪರ್ಯ :-

ಪರಬ್ರಹ್ಮನೆನಿಸಿದ ಶ್ರೀವಿಷ್ಣುವು ಸಕಲಜೀವರಿಗೂ ಸ್ವಾಮಿಯಾಗಿರುತ್ತಾನೆ. ಸರ್ವಸಾಮರ್ಥ್ಯವುಳ್ಳವನಾಗಿದ್ದಾನೆ. ಚತುರ್ಮುಖನೇ ಮೊದಲಾದ ಸಕಲ ದೇವತೆಗಳಿಗೂ ಉತ್ತಮನಾಗಿದ್ದಾನೆ. ಸೃಷ್ಟಿಯ ಆದಿಯಲ್ಲಿ ತನ್ನ ಜ್ಯೇಷ್ಠಪುತ್ರನಾದ, ಜೀವೋತ್ತಮನಾದ ಚತುರ್ಮುಖನಿಗೆ ನಿತ್ಯವಾದ ಅಪೌರುಷೇಯವಾದ ತನ್ನ ಅನಾದಿಬುದ್ಧಿಗತವಾದ ವೇದವಾಣಿಯನ್ನು ಪ್ರಪ್ರಥಮವಾಗಿ ಉಪದೇಶವಿತ್ತಿದ್ದಾನೆ. ಸಕಲಚರಾಚರ ವಸ್ತುಗಳಲ್ಲಿದ್ದು ಪ್ರೇರಕನಾಗಿ ಅಂತರ್ಯಾಮಿಯೆಂದು ಕರೆಯಲ್ಪಡತಕ್ಕವನಾಗಿದ್ದಾನೆ. ಚತುರ್ಮುಖನಿಗೂ ಅವನ ಮಕ್ಕಳಾದ ರುದ್ರ ಮೊದಲಾದ ದೇವತೆಗಳಿಗೂ,

ನಿಯಾಮಕನಾಗಿದ್ದಾನೆ. ಸ್ವಯಂ ತಾನು ಯಾವುದೇ ಬಗೆಯಾದ, ನಾಶವಿಂದಲೂ ಕ್ಷೀಣತೆಯಿಂದಲೂ, ನ್ಯೂನತೆಯಿಂದಲೂ ನಿತ್ಯವೂ ರಹಿತನಾಗಿ. ಮುಖ್ಯವಾಗಿ ಅಕ್ಷರನೆಂದು ವೇದ ಮೊದಲಾದ ಪ್ರಮಾಣಗಳಲ್ಲಿ ಪ್ರತಿಪಾದ್ಯನಾಗಿರುತ್ತಾನೆ. ಜೀವರಂತೆ ದೇಹಯೋಗ, ವಿಯೋಗಾದಿರೂಪವಾದ ಜನನಮರಣಗಳಿಂದ ರಹಿತನಾಗಿದ್ದಾನೆ. ಪರಮಾತ್ಮನೆಂದು ಪ್ರಸಿದ್ಧನಾಗಿದ್ದಾನೆ.

**ನಾಲ್ಕನೆಯ ಶ್ಲೋಕವು :-**

**ಬ್ರಹ್ಮಾಕ್ಷರಂ ಅಜಂ ನಿತ್ಯಂ ಯಥಾಽಸೌ ಪುರುಷೋತ್ತಮಃ।**
**ತಥಾ ರಾಗಾದಯೋ ದೋಷಾಃ ಪ್ರಯಾಂತು ಪ್ರಶಮಂ ಮಮ ।। ೪ ।।**

**ಪದಚ್ಛೇದ** :- ಬ್ರಹ್ಮ, ಅಕ್ಷರಂ, ಅಜಂ, ನಿತ್ಯಂ, ಯಥಾ, ಅಸೌ, ಪುರುಷೋತ್ತಮಃ। ತಥಾ, ರಾಗಾದಯಃ, ದೋಷಾಃ, ಪ್ರಯಾಂತು, ಪ್ರಶಮಂ, ಮಮ ।।

**ಅನ್ವಯಕ್ರಮ** :- ಅಸೌ, ಪುರುಷೋತ್ತಮಃ, (ದೇಹೇ ಸ್ಥಿತಃ) ಪುರುಷೋತ್ತಮಃ, ಯಥಾ, ಅಕ್ಷರಂ, ಅಜಂ, ನಿತ್ಯಂ, ಬ್ರಹ್ಮೈವ, ತಥಾ (ತತ್ಪ್ರಸಾದಾತ್), ಮಮ, ರಾಗಾದಯಃ, ದೋಷಾಃ, ಪ್ರಶಮಂ, ಪ್ರಯಾಂತು ।।

**ಸುಬೋಧಿನೀ ವ್ಯಾಖ್ಯಾನ ಭಾಗ** :- ಅಸೌ, ಪುರುಷೋತ್ತಮಃ, ದೇಹೇ, ಸ್ಥಿತಃ, ಪುರುಷೋತ್ತಮಃ, ಯಥಾ, ಅಕ್ಷರಂ, ಅಜಂ, ನಿತ್ಯಂ, ಬ್ರಹ್ಮೈವ, ತಥಾ, ತದನುಸಾರೇಣ, ತತ್ಪ್ರಸಾದಾತ್, ಮಮ, ರಾಗಾದಯಃ, ರಾಗಃ = ಅಶೋಭನಾಧ್ಯಾಸಃ, ಆದಿಃ ಕಾರಣಂ, ಯೇಷಾಂ, ಕ್ರಿಯಾಲೋಪಧ್ಯಾನಭಂಗವಿಸ್ಮರಣಾದೀನಾಂ ತೇ ದೋಷಾಃ। ಪ್ರಶಮಂ = ಪ್ರಕರ್ಷೇಣ = ಶಮಂ = ನಾಶಂ = ಸಮೂಲನಾಶಂ ಪ್ರಯಾಂತು ।।

**ಅರ್ಥ** :- ಅಸೌ ಪುರುಷೋತಮಃ = ಈ ಪುರುಷೋತ್ತಮನಾದ ಶ್ರೀವಿಷ್ಣುವು, ದೇಹೇಸ್ಥಿತಃ = (ನನ್ನ) ದೇಹದಲ್ಲಿರುವವನಾಗಿರುವ, ಪುರುಷೋತ್ತಮನು, = ಕ್ಷರಚೇತನರಿಗಿಂತಲೂ (ಬ್ರಹ್ಮಾದಿಗಳಿಗಿಂತಲೂ) ಅಕ್ಷರ ಚೇತನಳಾದ (ದೇಹನಾಶರಹಿತಳಾದ ರಮಾದೇವಿಗಿಂತಲೂ) ಉತ್ತಮನಾದುದರಿಂದಲೇ ಪುರುಷೋತ್ತಮನೆಂದು ಪ್ರಮಾಣ ಪ್ರಸಿದ್ಧನಾದ ಶ್ರೀವಿಷ್ಣುವು, (ಪುರುಷಶ್ಚ - ಪುರುಷಶ್ಚ ಪುರುಷೌ - ತಾಭ್ಯಾಂ - ಉತ್ತಮಃ = ಪುರುಷೋತ್ತಮಃ) ಯಥಾ - ಹೇಗೆ, ಅಕ್ಷರಂ (ಚತುರ್ವಿಧನಾಶರಹಿತನೋ, ಅಜಂ = ಕರ್ಮಾಧೀನವಾಗಿರುವ ದೇಹಸಂಬಂಧರೂಪವಾದ ಜನನರಹಿತನೋ, ನಿತ್ಯಂ =ಸರ್ವದಾ ಏಕಪ್ರಕಾರನಾಗಿ ಸತ್ಯನಾಗಿ ಅವಿನಾಶಿಯಾಗಿರುವವನಾಗಿ, ಬ್ರಹ್ಮೈವ =ಪರಬ್ರಹ್ಮನಾಗಿ, ಪರಪೂರ್ಣನಾಗಿರುವನೋ ತಥಾ = ಹಾಗೆಯೇ, ತದನುಸ್ಮರಣೇನ = ಅಂತಹ ಶ್ರೀಹರಿಯ ಅನುಸ್ಮರಣದಿಂದ, ತದನುಗುಣವಾದ (ಧ್ಯಾನದಿಂದ) ಸ್ಮರಣೆಯಿಂದ, ತತ್ಪ್ರಸಾದಾತ್ = ಆ ಪರಮಾತ್ಮನ ಅನುಗ್ರಹದಿಂದ, ಮಮ = ನನ್ನ, ರಾಗಾದಯಃ = ನನ್ನ ರಾಗಾದಿಗಳು, ರಾಗೋ ಅಶೋಭನಾಧ್ಯಾಸಃ ಆದಿಃ ಕಾರಣಃ ಯೇಷಾಂ = ಕ್ರಿಯಾಲೋಪ, ಧ್ಯಾನಭಂಗ, ವಿಸ್ಮರಣಾದೀನಾಂ ತೇ ದೋಷಾಃ = ರಾಗ ಎಂದರೆ ಯಾವುದು ತನ್ನ ಹಿತಕರವೋ ಮಂಗಳಕರವೋ ಅದರಲ್ಲಿ ಅಮಂಗಳವೆಂದು ತಿಳಿದು ಕ್ರಿಯಾಲೋಪವನ್ನು ಮಾಡಿಕೊಳ್ಳೋಣ. ಇದೇ ಮೊದಲಾದುವುಗಳು ಯಾವ ವಿಹಿತಗಳಾದ ನಿಯತಗಳಾದ ಕ್ರಿಯೆಗಳಿಗೆ ಲೋಪ, ಧ್ಯಾನಕ್ಕೆ ಭಂಗ, ಪರಮಾತ್ಮನ ವಿಸ್ಮರಣಗಳಿಗೆ ಕಾರಣಗಳಾಗಿರುವ ರಾಗಾದಿದೋಷಗಳುಂಟೋ ಅಂದರೆ, ಕಾಮ ಕ್ರೋಧ, ಲೋಭ, ಮೋಹ, ಮದಮಾತ್ಸರ್ಯಗಳೆಂಬ ಅರಿಷಡ್ವರ್ಗಗಳಿವೆಯೋ ಅವೆಲ್ಲಾ ದೋಷಗಳೂ - ಪ್ರಶಮಂ = ಪ್ರಕರ್ಷೇಣ ಶಮಂ =

ನಾಶಂ, ಸಮೂಲ ನಾಶಂ = ಪ್ರಕರ್ಷವಾಗಿ ನಾಶವನ್ನು, ಅಂದರೆ ಸಮೂಲನಾಶವನ್ನು ಪ್ರಯಾಂತು =ಹೊಂದಲಿ ಎಂದು ಕಂಡು ಋಷಿಯು ಪ್ರಾರ್ಥಿಸಿರುತ್ತಾನೆ. ಈ ವಿಧವಾದ ಪರಮಪವಿತ್ರವಾಗಿ ಭಗವಂತನ ಗುಣಗಳ ಸ್ತೋತ್ರವನ್ನು, ಒಳಗೊಂಡ ಬ್ರಹ್ಮಪಾರಸ್ತೋತ್ರದ ಜಪದ ಫಲವನ್ನು ಮುಂದಿನ ಎರಡು ಶ್ಲೋಕದಲ್ಲಿ ವಿವರಿಸಲಾಗಿದೆ.

**"ಏತದ್ಬ್ರಹ್ಮಪಾರಾಖ್ಯಂ ವೈ ಸಂಸ್ತವಂ ಪರಮಂ ಜಪನ್ ।**
**ಅ ವಾಪ, ಪರಮಾಂ, ಸಿದ್ಧಿಂ, ಸ ತಮಾರಾಧ್ಯಕೇಶವಮ್ ।। ೫ ।।**

**ಪದ ವಿಭಾಗ :-** ಏತದ್, ಬ್ರಹ್ಮಪಾರಾಖ್ಯಂ, ವೈ, ಸಂಸ್ತವಂ, ಪರಮಂ, ಜಪನ್, ಅವಾಪ, ಪರಮಾಂ, ಸಿದ್ಧಿಂ, ಸಃ, ತಂ, ಆರಾಧ್ಯ, ಕೇಶವಮ್।।

**ಅನ್ವಯಕ್ರಮ :-** ಏತದ್ಬ್ರಹ್ಮಪಾರಾಖ್ಯಂ, ವೈ ಪರಮಂ. ಸಂಸ್ತವಂ, ಜಪನ್, ತಂ, ಕೇಶವಮ್, ಸಮಾರಾಧ್ಯ, ಸಃ, ಪರಮಾಂ, ಸಿದ್ಧಿಂ, ಅವಾಪ।

**ಅರ್ಥ :-** ಏತದ್ಬ್ರಹ್ಮಪಾರಾಖ್ಯಂವೈ =ಈ ಬ್ರಹ್ಮಪಾರವೆಂಬ ಹೆಸರಿನಿಂದ ಪ್ರಸಿದ್ಧವಾದ, ಪರಮಂ = ಶ್ರೇಷ್ಠವಾದ, ಸಂಸ್ತವಂ = ಈ ಸ್ತೋತ್ರವನ್ನು, ಜಪನ್ = ಜಪಿಸುತ್ತಿರುವವನಾಗಿ, ತಂ = ಆ, ಕೇಶವಂ = ಬ್ರಹ್ಮ ರುದ್ರರಿಗೆ ನಿಯಾಮಕನಾದ ಶ್ರೀಹರಿಯನ್ನು ಸಮಾರಾಧ್ಯ = ಚೆನ್ನಾಗಿ ಆರಾಧಿಸಿ, ಸಃ = ಆ ಕಂಡುಮಹರ್ಷಿಯು, ಪರಮಾಂ ಸಿದ್ಧಿಂ = ಶ್ರೇಷ್ಠವಾದ ಸಿದ್ಧಿಯನ್ನು, ಅವಾಪ = ಹೊಂದಿದನು. (ಪಡೆದನು) ಈ ಬ್ರಹ್ಮಪಾರ ಸ್ತೋತ್ರವ ಪಠನದಿಂದಲೂ ನಿರಂತರ ಶ್ರವಣದಿಂದಲೂ ಆಗತಕ್ಕ ಫಲವನ್ನು ಮುಂದಿನ ಶ್ಲೋಕದಲ್ಲಿ ಹೇಳಲಾಗಿದೆ.

**ಇಮಂ ಸ್ತವಂ ಯಃ ಪಠತಿ ಶೃಣುಯಾದ್ವಾಪಿ ನಿತ್ಯಶಃ।**
**ಸಕಾಮದೋಷೈರಖಿಲೈರ್ಮುಕ್ತ:ಪ್ರಾಪ್ನೋತಿವಾಂಛಿತಮ್ ।। ೬ ।।**

**ಅಭಿಪ್ರಾಯ :-** ಯಾರು ನಿತ್ಯವೂ ಈ ಬ್ರಹ್ಮಪಾರಸ್ತೋತ್ರವನ್ನು ಪಠಿಸುತ್ತಾನೆಯೋ, ಪಾರಾಯಣ ಮಾಡುತ್ತಾನೆಯೋ ಅಥವಾ ನಿತ್ಯವೂ ಕಿವಿಯಿಂದ ಕೇಳುತ್ತಾನೆಯೋ ಅವನು ಸಕಲಕಾಮಾದಿದೋಷಗಳಿಂದ ಬಿಡುಗಡೆ ಪಡೆದವನಾಗಿ ತನ್ನ ಇಷ್ಟಾರ್ಥಗಳನ್ನು ಶ್ರೀಹರಿಯ ಅನುಗ್ರಹದಿಂದ ಪಡೆಯುತ್ತಾನೆ.

**ಸರ್ವೇಂದ್ರಿಯಪ್ರೇರಕೇಣ ಶ್ರೀಪ್ರಾಣಪತಿನೇರಿತ:।**
**ಯದವೋಚಮಹಂತೇನ ಪ್ರೀಯತಾಂಕಮಲಾಲಯ:।।**

।। ಇತಿ ಶ್ರೀಕೃಷ್ಣಾರ್ಪಣಮಸ್ತು ಇತಿಶಮ್।।

ಬ್ರಹ್ಮಪಾರ ಸ್ತೋತ್ರದಲ್ಲಿರುವ ಪದಗಳ ನಿರ್ವಚನ, ಅರ್ಥ ಪ್ರಮಾಣಗಳ ಸಂಗ್ರಹ -

**ಪದಗಳು - ನಿರ್ವಚನ - ಅರ್ಥ - ಪ್ರಮಾಣಗಳು**

೧) ಬ್ರಹ್ಮಪಾದಮಯಂ - ಬ್ರಹ್ಮಣ; ಪಾರತ್ವಂ - ಪೂರತ್ವಂ - ತತ್ಪ್ರತಿಪಾದಕತ್ವೇನ ಬ್ರಹ್ಮಪಾರಾತ್ಮಕಂ ಜಪ್ಯತ ಇತಿಜಪಃಸ್ತೋತ್ರಂ - ಬ್ರಹ್ಮಪಾರಸ್ತೋತ್ರವು.

೨) ಆರಾಧ್ಯತ - ಆರಾಧಿತಃ।

೩) ಪಾರಂಪರಂ - ಬ್ರಹ್ಮ - ಪರಂಪರಯಾ - ಗುರುಸಂಪ್ರದಾಯಪರಂಪರಯಾ, ಉಪದೇಶಪ್ರಾಪ್ಯಂ ಪರಂಬ್ರಹ್ಮ। ಇದಕ್ಕೆ - ಪ್ರಮಾಣ - ''ಏವಂಪರಂಪರಾಪ್ರಾಪ್ತಂ, ಇಮಂ, ರಾಜರ್ಷಯೋ ವಿದುಃ।। ಇತಿವಚನಾತ್।।

೨) ಅಥವಾ ಪಾರಂ, ಪರಂ, ಇತಿಪದದ್ವಯಂ। ಪರಂ - ನಿರ್ದೋಷಂ - ಗುಣಪೂರ್ಣಂ - ಪರಬ್ರಹ್ಮ ನಾರಾಯಣಃ - ಪರಃ - ಇದಕ್ಕೆ ಪ್ರಮಾಣ - ''ನಿರ್ದೋಷಗುಣಪೂರ್ಣತ್ವಾತ್‌ಪರಂಬಾಹ ಜನಾರ್ದನಂ'' ಇತಿ ತಂತ್ರ ಭಾಗವತವಚನಾತ್'' ಪರಂ = ಎಂದರೆ ಗುಣಪೂರ್ಣನೆಂದು ಅರ್ಥ.

ಪಾರಂ :- ಅವಧೀಪ್ರಭೂತಂ - ಸಂಸಾರಧ್ವನಃ ಪಾರಂ ಅವಧೀಪ್ರಭೂತಂ ಬ್ರಹ್ಮ - ಇದಕ್ಕೆ ಪ್ರಮಾಣ-

೧) ''ಸೋಟಧ್ವನಃಪಾರಮಾಪ್ನೋತಿ ತದ್ವಿಷ್ಣೋಃ ಪರಮಂಪದಂ'' ಇತಿಶ್ರುತಿಃ

೨) ''ಯಮಧ್ವನಃಪಾರಂ, ಉಶಂತಿ ಯೋಗಿನಃ'' ಇತಿ ಭಾಗವತವಚನಮ್। ಪಾರಂ - ಸಂಸಾರ ಮಾರ್ಗಕ್ಕೆ ಪರಮಾವಧಿಭೂತನಾದವನು ಪರಬ್ರಹ್ಮನು, (ಮುಕ್ತಿಯೋಗ್ಯ ಚೇತನರಿಗೆ ಮಾತ್ರ ಲಭ್ಯನು)

೩) ಪಾರಶಬ್ದಕ್ಕೆ ಅರ್ಥಗಳು, ಪಾರತೀರಕರ್ಮ ಸಮಾಪ್ತೌ = ಶಕ್ತಿ = ಇದರಲ್ಲಿ ಪ್ರಮಾಣ-

೧) ''ಪಾರತೀರ ಕರ್ಮಸಮಾಪ್ತೌ'' ಇತಿಧಾತುಃ।

೪) ಪಾರ ಎಂಬ ಶಬ್ದವು ಶಕ್ತಿ ಎಂಬ ಅರ್ಥದಲ್ಲೂ ಉಂಟು. ''ಯದ್ವಕ್ತುಂನೈವಪಾರ್ಯತೇ'' ಎಂದು ಶಕ್ತಿ ಎಂಬ ಅರ್ಥದಲ್ಲೂ ಪ್ರಯೋಗವಿದೆ.

೫) ಅಪಾರಪಾರಃ ಎಂಬಲ್ಲಿರುವ ಎರಡನೇ ಪಾರಶಬ್ದವು ಶಕ್ತ್ಯರ್ಥಕವು. ಮೊದಲನೆಯ ಪಾರಶಬ್ದವು ಪಾರಃ = ಪರಿಮಿತಿ ವಾಚನವು - ಇದಕ್ಕೆ ಪ್ರಮಾಣ = ''ಅಂತೋ, ವಿನಾಶಃ, ಸಂಪ್ರೋಕ್ತಃಪಾರಃಪರಿಮಿತಿಸ್ತಥಾ'' ಇತಿವಚನವು

ಅಪಾರ ಎಂಬುದಕ್ಕೆ - ಅಪರಿಮಿತಶಕ್ತಿ ಎಂದರ್ಥವು - ನ ವಿದ್ಯತೆಪಾರಃ ಪರಿಮಿತಿಃ ಯಸ್ಯಸಃ = ಅಪಾರಃ, ಅಪಾರಃ - ಪಾರಃ (ಶಕ್ತಿಃ) ಯಸ್ಯಸಃ = ಅಪರಿಮಿತಶಕ್ತಿಃ ಎಂದು ತಾತ್ಪರ್ಯವು. ಇದಕ್ಕೆ ಪ್ರಮಾಣವು - ''ಅನಂತಶಕ್ತಿರ್ಭಗವಾನನ್ತಃ'' ಎಂಬ ಭಾಗವತ ವಚನ.

೬) ಅಥವಾ - ಅಪಾರಪಾರಃ - ಅಪಾರಸ್ಯ - ಅಸಮಾಪ್ತಸ್ಯ - ಅಪೂರ್ಣಸ್ಯಕರ್ಮಣಃ ಪಾರಃ = ಸಮಾಪಕಃ ಪಾರಃ = ಸ್ವಸಂಕೀರ್ತನಸ್ಮರಣಾದಿಗಳಿಂದ ಪೂರಕನು. ಇದಕ್ಕೆ ಪ್ರಮಾಣಃ - ''ವಿಷ್ಣುರ್ವೈಯಜ್ಞಸ್ಯದುರಿಷ್ಟಂ ಪಾತಿ'' ಇತಿಶ್ರುತಿಃ।

''ವಿದುಃಕೃಷ್ಣಂ ಬ್ರಾಹ್ಮಣಾಃತತ್ವತೋ ಯೇ ತೇಷಾಂ ರಾಜನ್‌ಸರ್ವಯಜ್ಞಾಃಸಮಾಪ್ತಾಃ'' ವಚನವು ಪ್ರಮಾಣವು. ಮತ್ತು ಭಾಗವತ ವಚನವೂ ಪ್ರಮಾಣವು.

**''ಮಂತ್ರತಃತಂತ್ರತಶ್ಛಿದ್ರಂ ದೇಶಕಾಲಾರ್ಹವಸ್ತುನಃ।**
**ಸರ್ವಂಕರೋತಿ ನಿಶ್ಛಿದ್ರಂ, ಅನುಸಂಕೀರ್ತನಂ ತವ''**

೭) ಅಥವಾ ಅಪಾರಪಾರಃ - ಪಾರಃ = ಸಂಸಾರತರಣವು - ನ ವಿದ್ಯತೇ ಯೇಷಾಂ ತೆ = ಅಪಾರಾಃ ಸಂಸಾರಿಣಃ ತಾನ್ ಪಾರಯತಿ = ಸಂಸಾರಾತ್ತಾರಯತೀತಿ = ಅಪಾರಪಾರಃ = ಸಂಸಾರದಿಂದ ಬಿಡುಗಡೆ ಮಾಡುವವನು.

೮) ಪರಮಾರ್ಥರೂಪೀ = ಪರಮಾರ್ಥಂ = ಅವಿನಾಶರೂಪಂ - ದೇಹೋ - ಅಸ್ಯಾಸ್ತೀತಿ = ಪರಮಾರ್ಥರೂಪೀ ಇದಕ್ಕೆ ಪ್ರಮಾಣ:- ''ಸರ್ವೇ ನಿತ್ಯಾಃಶಾಶ್ವತಾಶ್ಚ ದೇಹಾಸ್ತಸ್ಯಪರಮಾತ್ಮನಃ'' ಎಂಬ ವಚನ ಅಥವಾ ಪರಮಾರ್ಥ ರೂಪೀಶಃ = ಸ್ವತಂತ್ರರೂಪವಾನ್ ಎಂದರ್ಥ.

ಇದಕ್ಕೆ ಪ್ರಮಾಣಃ -''ಸ್ವತಂತ್ರಂಪರಮಾರ್ಥಃಖ್ಯಂ'' ಎಂಬ ವಚನವು ಪ್ರಮಾಣ.

೯) ಸರ್ವೇಷಾಂ (ಎಲ್ಲರಿಗೂ) ಪಾರಃ = ಆಶ್ರಯತ್ವೇ, ತೀರಭೂತಃ, ಇದಕ್ಕೆ ಪ್ರಮಾಣಃ - ''ಪಾರತೀರ ಕರ್ಮಸಮಾಪ್ತೌ'' ಎಂದು ಧಾತುಪಾಠವಿದೆ.

೧೦) ''ಸ ಬ್ರಹ್ಮಪಾರಃ'' ಎಂಬುದು ಒಂದೇ ಪದವು.

೨) ಬ್ರಹ್ಮ = ವೇದವೆಂದು ಅರ್ಥ. ತತ್ಪರಿತಾಃ = ತದರ್ಥವಿಚಾರವಂತಃ = ಸಬ್ರಹ್ಮಾಣಃ (ವೇದಾರ್ಥ ಜ್ಞಾನವನ್ನುಳ್ಳ ವೈದಿಕರು) ತೇಷಾಂಪ್ರಾಪ್ತುಂಶಕ್ಯಃ। ತಾನ್ = ಪಾಲಯತೀತಿ - ರಲಯೋರಭೇದಾತ್

೧೧) ಪರಪಾರಭೂತಃ = ಪರಂ = ಉತ್ತಮವಾದುದು, ಸರ್ವಜಗತ್ಕಾರಣವಾದ ಪ್ರಧಾನವು ಅದಕ್ಕೆ ಪಾರ ಭೂತಃ = ಆಶ್ರಮಭೂತನು ಎಂದರ್ಥವು. ಜಡಪ್ರಕೃತಿಗೆ ಆಶ್ರಯನು.

೧) ಅಥವಾ ಪರೇಷಾಂ = ಸ್ವೇತರೇಷಾಂ ಪಾರಃ ಅಸಂಕರಕೃತ್ ಮರ್ಯಾದಾಭೂತನು ಎಂದರ್ಥವು. ಇದಕ್ಕೆ ಪ್ರಮಾಣವು ''ಏಷಸೇತುರ್ವಿಧರಣಃ'' ಎಂಬ ಶ್ರುತಿಯು ಪ್ರಮಾಣವು ಅದರ ಅರ್ಥ.

೧೨) ಪಾರಪಾರಃ = ಪೃಪಾಲನ ಪೂರಣಯೋಃ ಎಂಬ ಧಾತುವಿನಂತೆ

೧) ಭಕ್ತಾಂನಾಂ ಪಾಲನಾತ್ಪಾರಃ, ಭಕ್ತಾನಾಂ ಅಪೇಕ್ಷಿತಪೂರಣಾತ್ ಪಾರಃ। ಪಾರಶ್ಚಾಸೌಪಾರಶ್ಚ ಎಂದು ವಿಗ್ರಹ.

೨) ಅಥವಾ ಪಾರಾಃ = ಪಾಲಕರು, ಪೂರಕರು ಬ್ರಹ್ಮಾದಿಗಳು ತೇಷಾಮಪಿ ಅವರಿಗೂ ಪಾರಃ = ಪಾಲಕನೂ ಪೂರಕನೂ ಆಗಿರುವ ಕಾರಣನಾಗಿರುವ, ಪಾರಪಾರಃ ಪರಬ್ರಹ್ಮನಾದ ನಾರಾಯಣನು ಪಾರಪಾರನು.

ಬ್ರಹ್ಮಪಾರಸ್ತೋತ್ರದಲ್ಲಿನ ಎರಡನೇ ಶ್ಲೋಕದಲ್ಲಿರುವ ಪದಗಳ ಅರ್ಥ ನಿರೂಪಣೆಗಳು.

| ಪದಗಳು - ಅರ್ಥಗಳು | ನಿರ್ವಚನಗಳು - ಪ್ರಮಾಣಗಳು |
|---|---|
| ೧) ಸಃಕಾರಣಸ್ಯಕಾರಣಂ = ಬ್ರಹ್ಮಾಂಡಕ್ಕೆ ಕಾರಣನು | ಬ್ರಹ್ಮಾಂಡಾದಿ ಪ್ರಕೃತಿಪರ್ಯಂತವಾದ |
| ತತೋSಪಿ ತಸ್ಯಾಪಿ ಹೇತುಃ | ಕಾರಣ ಸಮೂಹವೆಲ್ಲಾ - ಸಃ = ವಿಷ್ಣುವು. |
| ಪರಹೇತುಹೇತುಃ | ಅಂದರೆ ತದಧೀನವೆಂದರ್ಥವು. |

ಇದಕ್ಕೆ ಪ್ರಮಾಣವು ''ಯದಧೀನಾಯಸ್ಯಸತ್ತಾತತ್ತದಿತ್ಯೇವಭಣ್ಯತೇ ='' ಇತ್ಯಾಧಿ ಪ್ರಮಾಣವು.

ಮೂರನೇ ಶ್ಲೋಕದ ವಿಚಾರವು

೧) ಬ್ರಹ್ಮಪ್ರಭುಃ = ಬ್ರಹ್ಮಭ್ಯಃ = ಜೀವೇಭ್ಯಃ = ಪ್ರಭುಃ। ಬ್ರಹ್ಮ ಶಬ್ದಕ್ಕೆ ಜೀವ ಎಂಬರ್ಥದಲ್ಲಿ ಪ್ರಮಾಣವು ''ಬ್ರಹ್ಮಾಣಿ ಜೀವಾಃ ಸರ್ವೇಽಪಿ ಪರಬ್ರಹ್ಮಾಣಿ ಮುಕ್ತಿಗಾಃ'' ಇತಿಶ್ರುತಿಃ।

೨) ಬ್ರಹ್ಮಸಃ = ಸಃ ಆ ವಿಷ್ಣುವು, ಬ್ರಹ್ಮ = ವೇದವು, ವಿಷ್ಣುವನ್ನೇ ವೇದವೆಂದು ಕರೆದುದಕ್ಕೆ ಪ್ರಮಾಣವು ಮುಂದೆ ಉದಾಹರಿಸಲಾಗಿದೆ ''ಬ್ರಹ್ಮ ಶಬ್ದಕ್ಕೆ ವೇದವೆಂದು ಅರ್ಥ, ಪ್ರಮಾಣ'' ''ಬ್ರಹ್ಮವೇದಃತಪಃತತ್ವಂ'' ಇತ್ಯಾದಿ

ಇತ್ಯಭಿದಾನಕೋಶವು

''ವೇದಾನಾಂಪ್ರಥಮವಕ್ತ್ಯತ್ವೇನವೇದಇತ್ಯುಚ್ಯತೇಹರಿಃ''

ಶಬ್ದನಿರ್ಣಯ ಕೋಶದಲ್ಲೂ ಇದಕ್ಕೆ ನಿರೂಪಣೆಯೂ ಇದೆ :- ವೇದಾನಾಂ ಪ್ರಥಮೋ ವಕ್ತಾ ಹರಿರೇವ ಯತೋವಿಭುಃ। ಅತೋವಿಷ್ಣಾತ್ಮಕಾವೇದಾಇತ್ಯಾಹುರ್ವೇದವಾದಿನಃ।। ಇತಿ ಶಬ್ದನಿರ್ಣಯಃ।।

ಇಲ್ಲಿಯವರೆವಿಗೆ ತಂತ್ರದೀಪಿಕೆಯಲ್ಲಿನ ಜಿಜ್ಞಾಸಾಧಿಕರಣದ ಸಾಮಾನ್ಯವಾದ ಅರ್ಥ, ವಿಶೇಷ ವಾಕ್ಯಾರ್ಥಗಳು ಮತ್ತು ಮುಖ್ಯವಾಗಿ ಶ್ರೀಹರಿಸರ್ವೋತ್ತಮತ್ವಕ್ಕೆ ಸಾಧಕಗಳಾದ ಪ್ರಮಾಣಗಳಲ್ಲಿ ಕೆಲವನ್ನು ಮಾತ್ರ ಉದಾಹರಿಸಿದ್ದಾಗಿದೆ. ಕಡೆಯದಾಗಿ ಬ್ರಹ್ಮಪಾರ ಸ್ತೋತ್ರವನ್ನು ಅರ್ಥಸಹಿತವಾಗಿ ಬರೆಯಲಾಗಿದೆ ಇನ್ನು ಮುಂದೆ ತಂತ್ರದೀಪಿಕಾದಲ್ಲಿನ ಜನ್ಮಾಧಿಕರಣವನ್ನು ಪ್ರಾರಂಭಿಸುವುದಕ್ಕೆ ಮುಂಚೆ ವಾಚಕವೃಂದಕ್ಕೆ ಸುಲಭವಾಗಿ ತಿಳಿಯುವಂತೆ ಶ್ರೀಬ್ರಹ್ಮಪಾರಸ್ತೋತ್ರದ ಸಾರಾಂಶವನ್ನು ವಿವರಿಸಿ ಮುಂದುವರಿಯುತ್ತೇವೆ.

ಬ್ರಹ್ಮಪಾರಸ್ತೋತ್ರದ ಸಾರಾಂಶ.

ಅಪೌರುಷೇಯವಾದ ವೇದದಲ್ಲೂ, ಅದಕ್ಕೆ ಅನುಸಾರಿಗಳಾದ ಸ್ಮೃತಿಗಳಲ್ಲೂ, ಪುರಾಣ, ಇತಿಹಾಸಗಳಲ್ಲೂ ಸುಪ್ರಸಿದ್ಧನಾದ ಅನಂತಕಲ್ಯಾಣಗುಣಪರಿಪೂರ್ಣನಾದ ಸಕಲದೋಷರಹಿತನಾದ ಚೇತನ, ಅಚೇತನಾತ್ಮಕವಾದ ಸಕಲಜಗತ್ತಿಗೂ ಯಥಾಯೋಗ್ಯವಾಗಿ ಅದರ ಜನ್ಮಾದಿಗಳಿಗೆ ನಿಮಿತ್ತಕಾರಣನಾದ ಸರ್ವತಂತ್ರಸ್ವತಂತ್ರನಾದ, ಸರ್ವೋತ್ತಮನಾದ ಶ್ರೀಮಹಾವಿಷ್ಣುವು ತಾರತಮ್ಯಾನುಸಾರವಾಗಿ ಗುರುಪರಂಪರೆಯಿಂದ ಮಾತ್ರ ಸಂಪ್ರದಾಯ ಕ್ರಮದಿಂದ ತಿಳಿಯಲ್ಪಡತಕ್ಕವನಾಗಿರುತ್ತಾನೆ. ಟೇಬಲ್ಲಿನ ಮೇಲೆ ಪುಸ್ತಕವನ್ನಿಟ್ಟು ಓದುವುದರಿಂದ ಸಂಪ್ರದಾಯ ಬದ್ಧವಾದ ಅರ್ಥದ ಜ್ಞಾನವು ಹುಟ್ಟುವುದಿಲ್ಲ ಶ್ರೀಹರಿಯು ಆಯಾ ಚೇತನದ ಯೋಗ್ಯತಾನುಸಾರವಾಗಿ ತಾರತಮ್ಯಾನು ಗುಣವಾಗಿ ಹೊಂದಲ್ಪಡತಕ್ಕವನಾಗಿರುವನು. ರಮಾಬ್ರಹ್ಮಾದಿಗಳಿಗಿಂತಲೂ ಉತ್ತಮನಾಗಿರುವನು. ಆದ್ದರಿಂದ ಪರಬ್ರಹ್ಮನೆನಿಸಿರುತ್ತಾನೆ. ಸಕಲದೋಷರಹಿತನು, ಅನಂತಕಲ್ಯಾಣಗುಣಪರಿಪೂರ್ಣನು, ದುಃಖಮಯವಾದ ಈ ಸಂಸಾರಮಾರ್ಗಕ್ಕೆ ಪರಮಾವಧಿಭೂತನಾಗಿರುವನು. ಈ ಸಂಸಾರವನ್ನು ದಾಟಿದ ನಂತರ ಮುಕ್ತಿಯೋಗ್ಯ ಚೇತನರಿಂದ ಹೊಂದಲ್ಪಡತಕ್ಕವನು. ಅಪರಿಮಿತವಾದ ಶಕ್ತಿ ಸಂಪನ್ನನು. ಅಪಾರವಾದ ಅಸಂಪೂರ್ಣವಾದ ಕರ್ಮಗಳಿಗೆ ಪೂರಕನೂ ಆಗಿದ್ದಾನೆ. ಸಂಸಾರಿಗಳೆಂಬ ಅಪಾರರಿಗೆ ತಾರಕನೂ ಆಗಿದ್ದಾನೆ. ರಮಾಬ್ರಹ್ಮಾದಿ ದೇವತೆಗಳಿಗಿಂತಲೂ ಉತ್ತಮನೂ, ನಾಲ್ಕು ಬಗೆಗಳಾದ ನಾಶಗಳಿಲ್ಲದಿರುವ ಅಪ್ರಾಕೃತವಾದ ಜ್ಞಾನಾನಂದಾತ್ಮಕವಾದ ಶರೀರವುಳ್ಳವನೂ ಆಗಿರುತ್ತಾನೆ.

ಪರಮಾಖ್ಯವೆನಿಸಿದ, ಸರ್ವತಂತ್ರಸ್ವತಂತ್ರವಾದ ದೇಹವನ್ನುಳ್ಳವನೂ ಆಗಿರುವನು. ಜೀವೋತ್ತಮನಾದ ಚತುರ್ಮುಖ ಬ್ರಹ್ಮನಿಗೂ ಆಶ್ರಯಭೂತನಾಗಿದ್ದಾನೆ. ವೇದಪಾರಂಗತರಾದ ಸಾತ್ವಿಕ ಚೇತನರಿಂದ ಹೊಂದಲ್ಪಡತಕ್ಕವನೂ ಮತ್ತು ಸರ್ವದಾ ತನ್ನ ಭಕ್ತರಾದ ಸಾತ್ವಿಕ ಚೇತನರನ್ನು ಕಾಪಾಡತಕ್ಕವನೂ ಆಗಿರುತ್ತಾನೆ.

ಜಡವಾದ ಜಗತ್ತಿಗೆ ಉಪಾದಾನ ಕಾರಣವಾದ (ಮೂಲ ಪ್ರಕೃತಿಗೆ) ಜಡಪ್ರಕೃತಿಗೂ ಸಹ ಆಶ್ರಯವಾಗಿರುವನು.

ಅಮುಕ್ತರಿಗಿಂತಲೂ, ಮುಕ್ತವರ್ಗಕ್ಕಿಂತಲೂ ಸಹ ಉತ್ತಮನಾಗಿದ್ದಾನೆ. ಜಗತ್ತಿಗೆ ಪಾಲಕರಾಗಿರುವ ಬ್ರಹ್ಮಾದಿ ದೇವತೆಗಳಿಗೂ ಸಹ ರಕ್ಷಕನೂ ಅವರವರ ಕರ್ಮಾನುಗುಣವಾಗಿ, ಅವರವರ ಅಪೇಕ್ಷೆಗಳಿಗೆ ಪೂರಕನೂ ಆಗಿರುತ್ತಾನೆ.

ಈ ಜಡವಾದ ಜಗತ್ತಿಗೆ ಕಾರಣಗಳಾದ ಸಕಲ ಜಡಪದಾರ್ಥಗಳಲ್ಲಿಯೂ ತಾನಿದ್ದು ಪ್ರೇರಕನಾಗಿ ಅದರದರ ಪರಿಣಾಮಕ್ಕೆ ತಕ್ಕ ಶಕ್ತಿಯನ್ನು ಕೊಟ್ಟು ತನ್ನ ಅಧೀನವಾಗಿರುವುದರಿಂದ ಸಕಲಕ್ಕೂ ತಾನೇ ಕಾರಣನೆನಿಸಿರುತ್ತಾನೆ. ಮೂಲ ಜಡಪ್ರಕೃತಿ, ಗುಣತ್ರಯ, ಮಹತ್ತತ್ವ, ಅಹಂಕಾರತತ್ವ, ಪಂಚತನ್ಮಾತ್ರೆಗಳು, ಪಂಚಭೂತಗಳು, ಅದರ ಪರಿಣಾಮಭೂತಗಳಾದ, ಸಕಲದೇಹಗಳು. ಈ ರೀತಿ ಇತರಕ್ಕ ಸಕಲಕಾರ್ಯಕಾರಣಸಮೂಹಕ್ಕೆ ತಾನೇ ಮುಖ್ಯ ನಿಯಾಮಕನಾಗಿರುವುದರಿಂದ ಅದೆಲ್ಲವೂ ಸಹ ವಿಷ್ಣುವೆಂದೇ ''ಯದಧೀನಾ ಯಸ್ಯ ಸತ್ತಾತತ್ತದಿತ್ಯೇವ ಭಣ್ಯತೆ'' ಎಂಬ ನ್ಯಾಯದಂತೆ ಪ್ರಶಂಸೆ ಮಾಡಲ್ಪಡುತ್ತಿದ್ದಾನೆ.

ಜಗತ್ತಿಗೆ ಪಾಲಕರಾದ ದೇವತೆಗಳಲ್ಲಿ ತಾನೇ ನಿಯಾಮಕನಾಗಿದ್ದೂ ಅನೇಕ ರೂಪಗಳಿಂದ ತಾನೇ ಜಗತ್ತಿಗೆ ಮುಖ್ಯವಾಗಿ ಪಾಲಕನಾಗಿ ಎಲ್ಲವನ್ನೂ ಅದರದರ ಇತಿಮಿತಿಗೆ ತಕ್ಕಂತೆ ರಕ್ಷಣೆ ಮಾಡುತ್ತಿರುತ್ತಾನೆ.

ಇತರ ಎಲ್ಲಾ ಚೇತನರಿಗಿಂತಲೂ ನಿರವಧಿಕವಾದ ಶಕ್ತಿಸಂಪನ್ನನಾಗಿರುವುದರಿಂದ ತಾನೇ ಸರ್ವಕ್ಕೂ ಪ್ರಭುವೆನಿಸಿರುತ್ತಾನೆ.

ಅನಾದಿಯಾದ ಅಪೌರುಷೇಯವಾದ ವೇದಕ್ಕೂ ಸಹ ತಾನೇ ಪ್ರಪ್ರಥಮ ವಕ್ತೃವಾಗಿರುವುದರಿಂದ ವೇದವಾದಿಗಳೂ ಸಹ ಪರಮಾತ್ಮನನ್ನು ಅನಾದಿಯಾದ ವೇದಗಳಿಗೂ ಸ್ವಾಮಿಯೆಂದೇ ಕರೆಯುತ್ತಾರೆ. ಶ್ರೀಹರಿಯನ್ನೇ ವೇದವೆಂದು ಪ್ರಶಂಸೆ ಮಾಡುತ್ತಿರುತ್ತಾರೆ. ಚರಾಚರಾತ್ಮಕವಾದ ಸರ್ವಪದಾರ್ಥಗಳಲ್ಲೂ ತಾನಿದ್ದು ನಿಯಾಮಕನಾಗಿರುವುದರಿಂದ ಸರ್ವಾಂತರ್ಯಾಮಿಯೆಂದು ಕರೆಯಲ್ಪಡತಕ್ಕವನಾಗಿರುವನು.

ದೇಶದಿಂದಲೂ, ಕಾಲದಿಂದಲೂ, ಗುಣಗಳಿಂದಲೂ, ಸರ್ವದಾಪರಿಪೂರ್ಣನಾಗಿರುವ ಕಾರಣ ವಿಷ್ಣುವೆಂದು ಹೊಗಳಲ್ಪಟ್ಟಿರುವ ಶ್ರೀಹರಿಯು ಯಾವ ಬಗೆಯಾದ ವಿಕಾರವೂ ಇಲ್ಲದವನು. ನಾಶವಿಲ್ಲದವನು, ದೇಹಯೋಗವಿಯೋಗ ರೂಪವಾದ ಜನನಮರಣವಿಲ್ಲದವನು. ವೃದ್ಧಿ, ಕ್ಷಯ ಮೊದಲಾದ ಸಕಲ ಅಪಕ್ಷಯಾದಿಗಳಿಂದಲೂ ರಹಿತನು. ಅದರ ಸಂಬಂಧವಿಲ್ಲದವನಾಗಿದ್ದಾನೆ. ಸಕಲ ವಿಧಗಳಾದ ನ್ಯೂನತೆಗಳಿಲ್ಲದ ಸರ್ವದಾ ಸರ್ವವಿಧವಾದ ಪರಿಪೂರ್ಣತೆಯುಳ್ಳವನಾಗಿ, ಸರ್ವದಾ ಅಪರಿಮಿತವಾದ ಶಕ್ತಿಸಂಪನ್ನನಾಗಿ ತನಗೆ ಲೇಶಮಾತ್ರ ಪ್ರಯೋಜನವಿಲ್ಲದಿದ್ದಾಗ್ಯೂ ಕೂಡ ಕೇವಲ ಲೀಲಾ ಮಾತ್ರದಿಂದಲೇ ಆನಂದೋದ್ರೇಕದಿಂದ ಜಗತ್ತಿನ ಸೃಷ್ಟ್ಯಾದಿ ವ್ಯಾಪಾರವನ್ನು ಚೇತನರ ಅನುಗ್ರಹಕ್ಕಾಗಿ ಮಾಡುತ್ತಿರುವ, ಸರ್ವೋತ್ತಮನಾದ ಪುರುಷೋತ್ತಮನಾದ ಶ್ರೀಮನ್ನಾರಾಯಣನನ್ನು ಕಂಡುಮುನಿಯು ಬ್ರಹ್ಮಪಾರಸ್ತೋತ್ರದಿಂದ ಪ್ರಶಂಸೆ ಮಾಡುತ್ತಾ ಧ್ಯಾನ ಮಾಡುತ್ತಾ ಪರಮಸಿದ್ಧಿಯನ್ನು ಪಡೆದು ಕೃತಕೃತ್ಯನಾದನೆಂದು ಶ್ರೀಮಹಾವಿಷ್ಣು ಪುರಾಣವು ಶ್ರೀಹರಿಯ ಮಹಾಮಹಿಮೆಯನ್ನು ಹೇಳುತ್ತಲಿದೆ.

ಇಂತಹ ಅತ್ಯಂತ ಪವಿತ್ರವಾದ ಬ್ರಹ್ಮಪಾರ ಸ್ತೋತ್ರವನ್ನು ನಿತ್ಯವೂ ಯಾರು ಪಠಿಸುತ್ತಾರೆಯೋ ಅಥವಾ ನಿತ್ಯವೂ ಕೇಳುತ್ತಾರೆಯೋ ಅವರು ಕಾಮಾದಿ ದೋಷಗಳಿಂದ ಬಿಡುಗಡೆ ಪಡೆದವರಾಗಿ ತಮ್ಮ ಯೋಗ್ಯತೆಗಳಿಗೆ ತಕ್ಕಂತೆ ಇಷ್ಟಾರ್ಥಗಳನ್ನು ಸುಪ್ರಸನ್ನನಾದ ಶ್ರೀಹರಿಯಿಂದ ಪಡೆಯುತ್ತಾರೆ.

ಬ್ರಹ್ಮಪಾರ ಸ್ತೋತ್ರದಲ್ಲಿ ಮೊದಲನೆಯ ಶ್ಲೋಕದಲ್ಲಿ, ಪಾರ ಎಂಬ ಶಬ್ದವು ಆರು ಸಲ ಪ್ರಯುಕ್ತವಾಗಿದೆ. ಪರಶಬ್ದವು ಐದಾವರ್ತಿ ಕಂಡುಬಂದಿದೆ.

ಮೊದಲನೆಯದಾಗಿ ಪಾರಂಪರಃ = ಎಂಬುದಕ್ಕೆ ದತ್ತಾತ್ರೇಯೀಯ ವ್ಯಾಖ್ಯಾನಕಾರರು, ಸುಪ್ರಸಿದ್ಧೋ ವಿಷ್ಣುಃ ಪಾರಂಪರಂ =ಬ್ರಹ್ಮ, ಪರಂಪರಯಾ =ಗುರುಸಂಪ್ರದಾಯ ಪರಂಪರಯಾ =ಉಪದೇಶಪ್ರಾಪ್ಯಂ = ಎಂಬುದಾಗಿಸಿದ್ಧಾಂತ ರಹಸ್ಯಾರ್ಥವನ್ನು ನಿರೂಪಿಸಿದ್ದಾರೆ. ಇದು ಪಾರಂಪರಂ =ಎಂಬುದು ಏಕಪದ ಎಂಬ ವಿವಕ್ಷೆಯಿಂದ ತಿಳಿಸಿರತಕ್ಕ ಅರ್ಥವಾಗಿದೆ. ಪರಮಾತ್ಮನ ಜ್ಞಾನವಾಗಲಿ, ಸಾಕ್ಷಾತ್ಕಾರವಾಗಲಿ ಆ ಸರ್ವೋತ್ತಮನಾದ ನಾರಾಯಣ ಪ್ರಸಾದವಾಗಲಿ ಆಗಬೇಕಾದರೆ, ಗುರುಸಂಪ್ರದಾಯ ಪರಂಪರೆಯಿಂದಲೇ ಆಗಬೇಕೆಂಬ ವೇದಾಂತ ಸಿದ್ಧಾಂತಾರ್ಥವು ಇಲ್ಲಿ ಉಕ್ತವಾಗಿದೆ.

**ಇದಕ್ಕೆ ಪ್ರಮಾಣಗಳು :- "ಅಪ್ಯಚ್ಯುತೋ ಗುರುದ್ವಾರಾಪ್ರಸಾದಕೃತ್"**
**ಸಮ್ಯಗ್ ಲಕ್ಷಣಸಂಪನ್ನೋಯದ್ ದದ್ಯಾತ್ಸುಪ್ರಸನ್ನಧೀಃ ।।**
**ಶಿಷ್ಯಾಯಸತ್ಯಂ ಭವತಿ ತತ್ಸರ್ವಂನಾತ್ರಸಂಶಯಃ।।**
**ಆಗಮ್ಯತ್ವಾದ್ ಹರಿಸ್ತಸ್ಮಿನ್ ಅವಿಷ್ಟೋವಿಮುಕ್ತಿದೋಭವೇತ್ ।।**
**(ಇತಿತಾತ್ಪರ್ಯನಿರ್ಣಯೇ)**

ಗುರುಪ್ರಸಾದವು - ನಾತಿಪ್ರಸನ್ನಹೃದಯೋಯದ್‌ದದ್ಯಾದ್ಗುರುರಪ್ಯಸೌ।
ಅವಶ್ಯಸಂಪಾದನೀಯವು ..... ನತತ್ಸರ್ವಂಭವೇತ್ತಸ್ಮಾದ್ ಅರ್ಚನೀಯೋ ಗು ರುಸ್ಸದಾ।।

ಆದುದರಿಂದಲೇ ಚತುರ್ಮುಖನ ಅನುಗ್ರಹವು ಇಂದ್ರನಿಗೆ ಇದ್ದುದರಿಂದಲೇ ಇಂದ್ರನು ಸಮೀಚೀನ ಜ್ಞಾನವುಳ್ಳವನಾದನು. ವಿರೋಚನನೆಂಬ ದೈತ್ಯನ ವಿಷಯದಲ್ಲಿ ಗುರುಪ್ರಸಾದವು ಇಲ್ಲವಾದುದರಿಂದ ವಿರೋಚನನೆಂಬ ದೈತ್ಯನಿಗೆ ಅನ್ಯಥಾಜ್ಞಾನವು, ಅವನ ಸ್ವರೂಪಕ್ಕೆ ತಕ್ಕಂತೆ ಉಂಟಾಯಿತು. ವಿರೋಚನನ ವಿಷಯದಲ್ಲಿ ಗುರು ಪ್ರಸಾದವು ಇರಲಿಲ್ಲ. ಆದರೆ ಕೆಲವು ಸಂದರ್ಭದಲ್ಲಿ ತಮಗಿಂತಲೂ ತಾರತಮ್ಯದಿಂದ ಕಮ್ಮಿಯಾದವರೂ ಸಹ ಗುರುಗಳಾಗಿರುವುದರಿಂದ ಅವರಿಗೆ ಉತ್ತಮ ವ್ಯಕ್ತಿಯಾಗಿರುವ ಶಿಷ್ಯನು ಹೇಗೆ ನಡೆದುಕೊಳ್ಳಬೇಕೆಂದರೆ :-

**ಸ್ಥಾವರಾಣಾಂ ಗುರುತ್ವಂ ತು ಭವೇತ್ ಕಾರಣತಃ ಕ್ವಚಿತ್।**
**ಮರ್ಯಾದಾರ್ಥಂ ತೇಽಪಿ ಪೂಜ್ಯಾಃನತುಯದ್ವತ್ಪರೋ ಗುರುಃ।।**
**ಇತ್ಯೇತತ್ಪಂಚರಾತ್ರೋಕ್ತಂ ಪುರಾಣೇಷ್ವನುಮೋದಿತಂ।।**
**ಯದಾಮುಕ್ತಿಪ್ರದಾನಾಯ ಸ್ವಯೋಗ್ಯಂ ಪಶ್ಯತಿ ಧ್ರುವಮ್।**
**ರೂಪಂ ಹರೇಸ್ತದಾತಸ್ಯ ಸರ್ವಪಾಪಾನಿ ಭಸ್ಮಸಾತ್।।**
**ಯಾಂತಿ ಪೂರ್ವಾಣ್ಯುತ್ತರಾಣಿ ನಕ್ಲೇಶಂ ಯಾಂತಿಕಾನಿಚಿತ್।**
**ಮೋಕ್ಷಶ್ಚ ನಿಯತಸ್ತಸ್ಮಾದ್ ಸ್ವಯೋಗ್ಯಹರಿದರ್ಶನೇ।।**
**ಭವಿಷ್ಯತ್ಪರ್ವವಚನಂ ಇತ್ಯೇತತ್ಸೂತ್ರಗಂ ತಥಾ।**

ಹಿಂದಿನ ವಾಕ್ಯದ ಅಭಿಪ್ರಾಯವು ಈ ರೀತಿ ಇದೆ:

**ಅಭಿಪ್ರಾಯ** :- ಸಮೀಚೀನಗಳಾದ ಶಾಸ್ತ್ರದಲ್ಲಿ ಹೇಳಿರುವ ಲಕ್ಷಣಗಳಿಂದ ಕೂಡಿರುವ ಗುರುವು ಸುಪ್ರಸನ್ನನಾಗಿ ಶಿಷ್ಯನಿಗೆ ಏನನ್ನು ಉಪದೇಶ ಮಾಡುವನೋ ಅದೆಲ್ಲವೂ ಸತ್ಯವೇ ಆಗುತ್ತದೆ. ಈ ವಿಷಯದಲ್ಲಿ ಲೇಶಮಾತ್ರವೂ ಸಂದೇಹವೇ ಇಲ್ಲ. ಆದರೆ ಆ ಗುರುಗಳಲ್ಲಿ ಅಂತರ್ಯಾಮಿಯಾಗಿ ಪ್ರೇರಕನಾಗಿರುವ ಶ್ರೀಹರಿಯಿಂದಲೇನೇ ಮುಖ್ಯವಾಗಿ ಎಲ್ಲ ಬಗೆಯಾದ ಫಲಗಳು ಶಿಷ್ಯನಿಗೆ ಲಭಿಸುತ್ತವೆಯೆಂಬುದೇ ಮುಖ್ಯ ತಾತ್ಪರ್ಯವಾಗಿದೆ. ಶ್ರೀಹರಿಯು ಗುರುಗಳ ಮೂಲಕವಾಗಿ ಶಿಷ್ಯನಿಗೆ ಅನುಗ್ರಹಿಸುತ್ತಾನೆ.

ಕೆಲವು ಸಂದರ್ಭದಲ್ಲಿ ಶಿಷ್ಯನು ತಾರತಮ್ಯದಲ್ಲಿ ಉತ್ತಮನಾಗಿಯೂ ಗುರುವು ಕಮ್ಮಿಯ ಮಟ್ಟದವನಾಗಿದ್ದಾಗ್ಯೂ ಕೂಡ (ಇಂದ್ರಬೃಹಸ್ಪತಿಯರಂತೆ) ಅಂತಹ ಸಂದರ್ಭದಲ್ಲೂ ಸಹ ಲೋಕಮರ್ಯಾದೆ, ಶಾಸ್ತ್ರಮರ್ಯಾದೆಯಂತೆ ಅಂತಹವರೂ ಕೂಡ ಮರ್ಯಾದೆಗಾಗಿ ಪೂಜ್ಯರೇ ಆಗಿರುವರು. ಆದರೆ ಉತ್ತಮರಾದ ಗುರುಗಳು ಹೇಗೆ ಪೂಜ್ಯರೋ ಆದರಂತೆ ಅಲ್ಲವೆಂಬುದನ್ನು ತಿಳಿಯಬೇಕು. ಈ ಎಲ್ಲಾ ವಿಷಯಗಳು ಪಂಚರಾತ್ರದಲ್ಲಿ ಹೇಳಲ್ಪಟ್ಟಿವೆ. ಪುರಾಣಗಳಲ್ಲೂ ಕಥಾರೂಪವಾಗಿ ಅನುಮೋದಿಸಲ್ಪಟ್ಟಿವೆ.

ಅವತಾರ ಕಾಲದಲ್ಲಿನ ರಾಮಕೃಷ್ಣಾದಿ ಭಗವಂತನ ರೂಪಗಳನ್ನು ತಮೋಯೋಗ್ಯರಾದ ಅಧಮ ಜೀವರೂ ಸಹ ಕಂಡಿರುತ್ತಾರೆ. ಆದರೆ ಅವರಿಗೆ ಪರಮಾತ್ಮನ ವಿಷಯದಲ್ಲಿ ಸರಿಯಾದ ಜ್ಞಾನವೂ ಇಲ್ಲ. ಭಕ್ತಿಯ ಲೇಶವೂ ಇರುವುದಿಲ್ಲ. ಮೇಲಾಗಿ ಭಗವಂತನ ವಿಷಯದಲ್ಲಿ ದ್ವೇಷವೇ ಇರುತ್ತದೆ. ಬಿಂಬಸಾಕ್ಷಾತ್ಕಾರವಂತೂ ಸರ್ವಥಾ ಇಲ್ಲ. ಆದುದರಿಂದ ರಾಮಕೃಷ್ಣಾದಿ ಅವತಾರ ರೂಪಗಳ ದರ್ಶನ ಮಾತ್ರದಿಂದ ಮೋಕ್ಷವಿಲ್ಲ. ಮುಕ್ತಿಯೋಗ್ಯ ಚೇತನನಿಗೂ ಕೂಡ, ಅವನವನ ಸ್ವಯೋಗ್ಯವಾದ, ನಿಯತ ಗುರುವಿನಿಂದ ಉಪದಿಷ್ಟವಾದ ಬಿಂಬಸಾಕ್ಷಾತ್ಕಾರದಿಂದಲೇ ಮುಕ್ತಿಯೆಂಬುದು ಪ್ರಮಾಣಗಳಿಂದ ತಿಳಿದುಬರುವ ವಿಷಯವಾಗಿದೆ.

ಬ್ರಹ್ಮಮೀಮಾಂಸಾ ಶಾಸ್ತ್ರದಲ್ಲೂ ಸಹ ಈ ವಿಷಯವು ಮೂರನೇ ಅಧ್ಯಾಯದ ಮೂರನೇ ಪಾದದ 26ನೆಯ ಅಧಿಕರಣದಲ್ಲಿ (ಪ್ರದಾನಾಧಿಕರಣದಲ್ಲೂ) ಇಪ್ಪತ್ತೇಳನೇ ಅಧಿಕರಣವಾದ ಲಿಂಗಭೂಯಸ್ತ್ವಾಧಿಕರಣದಲ್ಲೂ ಪ್ರತಿಪಾದಿತವಾಗಿದೆ.

ಆಚಾರ್ಯವಾನ್ ಪುರುಷೋ ವೇದ (ಛಾಂದೋಗ್ಯ ೬-೧೪-೨) ಆಚಾರ್ಯವಾನ್ = ನಿಯತಗುರುಗಳಾದ ಆಚಾರ್ಯರ ಅನುಗ್ರಹಕ್ಕೆ ಪಾತ್ರನಾದ ಮುಕ್ತಿಯೋಗ್ಯ ಪುರುಷನು ಅವಿದ್ಯಾಪಟಲದಿಂದ ಮುಕ್ತನಾಗಿ ಬ್ರಹ್ಮನನ್ನು ಸಾಕ್ಷಾತ್ಕರಿಸುತ್ತಾನೆ.

''ಓಂ ಪ್ರದಾನವದೇವಹಿತದುಕ್ತಂ ಓಂ = ಪ್ರದಾನವತ್ = ಪ್ರಸಾದಪೂರ್ವಕವಾಗಿರುವ = ಪ್ರಕೃಷ್ಟವಾದ ದಾನದಿಂದ ಕೂಡಿದ = ಅಂದರೆ = ಪ್ರಕೃಷ್ಟ ಗುರೂಪದೇಶವೆಂಬ ದಾನಯುಕ್ತವಾದ ಶ್ರವಣಾದಿಗಳೇ ಬ್ರಹ್ಮಸಾಕ್ಷಾತ್ಕಾರಕ್ಕೆ ಸಾಧನವು, ಕೇವಲ ಶ್ರವಣಾದಿಗಳಲ್ಲ. ಗುರುಪ್ರಸಾದವು ಜ್ಞಾನಸಾಧನಗಳಲ್ಲಿ (ಅಪರೋಕ್ಷ ಜ್ಞಾನಸಾಧನಗಳಲ್ಲಿ) ಬಲಿಷ್ಠವೆಂಬುದೂ ಸಹ ಬ್ರಹ್ಮಸೂತ್ರದಲ್ಲಿ ನಿರ್ಣಯ ಮಾಡಲ್ಪಟ್ಟಿದೆ.

**''ಓಂ ಲಿಂಗಭೂಯಸ್ತ್ವಾದ್ ತದ್ಧಿಬಲೀಯಃತದಪಿ ಓಂ =**
**ವರಾಹ ಪುರಾಣ ವಾಕ್ಯವೂ ಇದನ್ನು ಸಮರ್ಥಿಸುತ್ತಲಿದೆ.**

**"ಗುರುಪ್ರಸಾದೋ ಬಲವಾನ್ ನ ತಸ್ಮಾದ್ಬಲವತ್ತರಮ್।**
**ತಥಾಪಿ ಶ್ರವಣಾದಿಶ್ಚ ಕರ್ತವ್ಯೋ ಮೋಕ್ಷಸಿದ್ಧಯೇ।। (ಇತಿವಾಯುಹೇ)**

ಗುರುಪರಿತ್ಯಾಗಕ್ಕೆ ದೋಷವು ಉಕ್ತವಾಗಿದೆ.

**ಗುರುತ್ಯಾಗೇ ಭವೇನ್ಮೃತ್ಯುಃ ಮಂತ್ರತ್ಯಾಗೇದರಿದ್ರತಾ।**
**ಗುರುಮಂತ್ರಪರಿತ್ಯಾಗೀ ರೌರವಂ ನರಕಂ ವ್ರಜೇತ್।। ಇತ್ಯಾದಿ.**

ಮೇಲೆ ವಿವರಿಸಿದ ಗುರುಸಂಪ್ರದಾಯದ ವಿಚಾರವನ್ನೆಲ್ಲಾ ಸಂಗ್ರಹವಾಗಿ ಶ್ರೀಬ್ರಹ್ಮಪಾದಸ್ತೋತ್ರದಲ್ಲಿನ ಒಂದೇ ಪದದಿಂದ ಸೂಚಿತವಾಗಿರುವುದನ್ನು ಅದಕ್ಕೆ ವ್ಯಾಖ್ಯಾತ್ರೇಯಾಚಾರ್ಯರು ''ಪಾರಂಪರಂ'' ಎಂಬ ಪದದ ವ್ಯಾಖ್ಯಾನದಲ್ಲಿ ತಿಳಿಸಿದ್ದಾರೆ.

೧) ಪಾರಂಪರಂ = ಗುರುಸಂಪ್ರದಾಯಪರಂಪರಯಾ, ಉಪದೇಶಪ್ರಾಪ್ತಂ,

ಇದಕ್ಕೆ ಪ್ರಮಾಣವನ್ನು ''ಏವಂಪರಂಪರಾಪ್ರಾಪ್ತಂ ಇಮಂರಾಜರ್ಷಯೋವಿದುಃ'' ।। ಇತಿ ವಚನಾತ್।।

೨) ಪಾರಂಪರಂ ಎಂಬಲ್ಲಿ ಎರಡು ಪದಗಳು ಎಂಬ ಕಲ್ಪದಲ್ಲಿ ಪರಂ =''ನಿರ್ದೋಷಗುಣಪೂರ್ಣತ್ವಾತ್ ಪರಂಭಾವ ಜನಾರ್ದನಂ'' ಎಂಬುದಾಗಿ ತಂತ್ರಭಾಗವತ ವಚನವನ್ನು ಉದಾಹರಿಸುವರು, ಪರಂ = ಗುಣಪೂರ್ಣ ಎಂದರ್ಥ. ಪರಂ = ಎಂಬ ಪದವು ಶ್ರೀಮದ್ಭಾಗವತದಲ್ಲಿ ಮೊದಲನೆಯ ಶ್ಲೋಕದಲ್ಲೇ ಉದಾಹೃತವಾಗಿದೆ.

''ಸತ್ಯಂ ಪರಂ ಧೀಮಹಿ'' ಪರಂ = ಪೂರ್ಣಂ ಗುಣೈರಿತಿಶೇಷಃ (ಶ್ರೀ ವಿಜಯಧ್ವಜೀಯ)

(ಪೃಪಾಲನಪೂರಣಯೋಃ ಇತಿಧಾತೋಃ (ಶ್ರೀ ವಿ. ಧ್ವಜೀಯ)

ಶ್ರೀಮದ್ಭಾಗವತದ ಕಡೆಯ ಪದ್ಯದಲ್ಲೂ ಪರಶಬ್ದವು ಕಂಡುಬಂದಿದೆ. ''ಯಸ್ಯ ಸ್ಮರಣಮಾತ್ರೇಣ ಸರ್ವ ಪಾಪಪ್ರಣಾಶನಮ್। ಪ್ರಣಾಮೋದುಃಖಶಮನಃತಂ ನಮಾಮಿ ಹರಿಂ ಪರಮ್'' ಶ್ರೀಭಾಗವತದ ಕಡೆಯ ಶ್ಲೋಕ. ಪರಂ = ಬ್ರಹ್ಮ ನಾರಾಯಣಃ, ಹರಿವಂಶದಲ್ಲಿ ''ಯದೇತತ್ಪರಮಂ ಬ್ರಹ್ಮ ವೇದವಾದೇಷು ಪಠ್ಯತೇ। ಸದೇಷ ಪುಂಡರೀಕಾಕ್ಷಃ ಸ್ವಯಂ ನಾರಾಯಣಃ ಪರಂ''. (ಇತಿ ಹರಿವಂಶ)

''ಬ್ರಹ್ಮವಿದಾಪ್ನೋತಿ ಪರಂ'' (ಇತಿಶ್ರುತೇಶ್ಚ)

೨) ಪಾರಂ = ಸಂಸಾರಾಧ್ವನಃಪಾರಂ = ಅವಧೀಭೂತಂ ಬ್ರಹ್ಮ (ಸೋಽಧ್ವನಃಪಾರಮಾಪ್ನೋತಿ ತದ್ವಿಷ್ಣೋಃ ಪರಮಂಪದಂ (ಇತಿಶ್ರುತೇಃ) ಯಮಧ್ವನಃ ಪಾರಮುಶಂತಿಯೋಗಿನಃ (ಇತಿ ಭಾಗವತವಚನಮ್)

೩)ಪಾರಂ = ಶಕ್ತ್ಯರ್ಥೇಪಿ ಪ್ರಯೋಗಃ = (ಪಾರತೀರಕರ್ಮಸಮಾಪ್ತೌ ಇತಿಧಾತುಃ)

ಶಕ್ತಿ ಎಂಬ ಅರ್ಥದಲ್ಲೂ ಪಾರಶಬ್ದದ ಪ್ರಯೋಗವಿದೆ. ''ಯದ್ವಕ್ತುಂ ನೈವಪಾರ್ಯತೇ'' ಎಂಬುದಾಗಿ ಪ್ರಯೋಗವಿದೆ.

೪) ಪಾರಃ = ಪರಿಮಿತಿ ಎಂಬುದಾಗಿಯೂ ಅರ್ಥವಿದೆ. (ಅಂತೋ ವಿನಾಶಃ ಸಂಪ್ರೋಕ್ತಃ ಪಾರಃ ಪರಿಮಿತಿಸ್ತಥಾ) ಇತಿವಚನಾತ್।।

೫) ಪಾರಃ = ಕರ್ಮಣಃ = ಪಾರಃ = ಸ್ವಸಂಕೀರ್ತನಸ್ಮರಣಾದಿನಾ ಪಾರಯಿತಾ = ಸಮಾಪಕಃ ಪೂರ ಕೋಃಪಾ (ವಿಷ್ಣುರ್ವ್ಯೆದುರಿಪ್ಸಂಪಾತಿ ಇತಿಶ್ರುತೇಃ)

೬) ಪಾರಃ = ಸಂಸಾರತರಣಂ, ನ ವಿದ್ಯತೇ ಯೇಷಾಂ ತೇ ಅಪಾರಾಃ

ಪಾರಃ = ಸರ್ವೇಷಾಂ ಆಶ್ರಯತ್ವೇನ ತೀರಭೂತಃ (ಪಾರತೀರಕರ್ಮಸಮಾಪ್ತೌ ಇತಿಧಾತುಃ

೮) ಪಾರಃ = ಪ್ರಾಪ್ತುಂ ಶಕ್ಯಃ =

೯) ಪಾರಃ = ಆಶ್ರಯಭೂತಃ

೧೦) ಪಾರಃ = ಭಕ್ತಾನಾಂ ಪಾಲನಾತ್ಪಾರಃ = ಪಾಲಕಃ

ಅಪೇಕ್ಷಿತಪೂರಣಾಚ್ಚ = ಪಾರಃ = ಪೂರಕಃ

(ಪೃಪಾಲನ ಪೂರಣಯೋಃ ಇತಿಧಾತೋಃ)

ಪಾರಾಃ = ಪಾಲಕಾಃ, ಪೂರಕಾಶ್ಚ ಇತ್ಯಾದಿ - ಒಟ್ಟಿನಲ್ಲಿ ಹನ್ನೆರಡು ತರಹ ಅರ್ಥಗಳಿವೆ. ಈ ರೀತಿ ಪಾರ ಶಬ್ದಕ್ಕೆ =

೧) ಪಾರಂಪರಂ ಎಂಬಲ್ಲಿ ಗುರುಸಂಪ್ರದಾಯ ಪರಂಪರೆಯಿಂದ ಪ್ರಾಪ್ಯನೆಂದೂ

೨) ಪಾರಂ = ನಿರ್ದೋಷ ಗುಣಪೂರ್ಣನೆಂದು

೩) ಪಾರಂ = ಸಂಸಾರ ಮಾರ್ಗಕ್ಕೆ ಅವಧಿಭೂತ ಬ್ರಹ್ಮನೆಂದೂ

೪) ಪಾರಂ = ತೀರನೆಂದೂ,

೫) ಪಾರಃ = ಆಶ್ರಯನೆಂದೂ

೬) ಪಾರಃ = ಶಕ್ತಿಯೆಂದೂ, ಅಚಿಂತ್ಯಾದ್ಭುತಶಕ್ತಿಸಂಪನ್ನನೆಂದೂ

೭) ಪಾರಃ = ಪರಿಮಿತಿಯೆಂದೂ

೮) ಪಾರಃ = ಪಾರಯಿತಾ = ಸಮಾಪಕನೆಂದೂ

೯) ಪಾರಃ = ಸಂಸಾರತರಣವೆಂದೂ

೧೦) ಪಾರಃ = ಪ್ರಾಪ್ತುಂ ಶಕ್ಯನೆಂದೂ

೧೨) ಪಾರಃ = ಭಕ್ತಪಾಲಕನೆಂದೂ

ಒಟ್ಟು ಸಾಮಾನ್ಯವಾಗಿ ಪಾರಶಬ್ದವು ಶ್ರೀಬ್ರಹ್ಮಪಾರಸ್ತೋತ್ರದ ಮೊದಲನೆಯ ಶ್ಲೋಕದಲ್ಲಿ ಅನೇಕಾರ್ಥಗಳಲ್ಲಿ ವ್ಯಾಖ್ಯಾನ ಮಾಡಲ್ಪಟ್ಟಿದೆ.

ಇನ್ನು ಪರ ಎಂಬ ಶಬ್ದವು ಐದಾರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ.

ಪರಃ = ೧) ಪಾರಂಪರಂ = ಪರಂಪರೆಯಿಂದ ಪ್ರಾಪ್ಯನು
೨) ಪರಃ = ನಿರ್ದೋಷಗುಣಪೂರ್ಣಬ್ರಹ್ಮನು
೩) ಪರಃ = ಉತ್ತಮನು,
೪) ಪರರು = ಪರರಾದ ಬ್ರಹ್ಮಾದಿಗಳು = ಪರೇಭ್ಯಃ ಪರರಾದ ಬ್ರಹ್ಮಾದಿಗಳಿಗೆ - ಪಾರನು.

ಇತ್ಯಾದಿ ಅರ್ಥಗಳಲ್ಲಿ ಪರಶಬ್ದದ ಪ್ರಯೋಗವಿದೆ. ಒಟ್ಟು ಅಭಿಪ್ರಾಯವನ್ನು ಪರಿಶೀಲಿಸಿದರೆ - ಓಂ ಅಥಾತೋಬ್ರಹ್ಮಜಿಜ್ಞಾಸಾ ಓಂ ಎಂಬ ಬ್ರಹ್ಮಮೀಮಾಂಸಾ ಶಾಸ್ತ್ರದ ಮೊದಲನೆಯ ಸೂತ್ರದಲ್ಲಿನ ಬ್ರಹ್ಮಶಬ್ದಾರ್ಥದ ವಿವರಣೆಯು ಕಂಡುಬಂದಿದೆ. ಅದೂ ಅಲ್ಲದೆ ಇಡೀ ಬ್ರಹ್ಮಮೀಮಾಂಸಾಶಾಸ್ತ್ರದ ಮೊದಲನೆಯ ಅಧ್ಯಾಯದ ಗುಣಪರಿಪೂರ್ಣತ್ವದ ಅರ್ಥದ ಸಂಗ್ರಹವೇ ಬ್ರಹ್ಮಪಾರಸ್ತೋತ್ರದ ಮೊದಲನೆಯ ಶ್ಲೋಕದಲ್ಲಿ ಅಡಗಿದೆ. ಎರಡನೇ ಪದ್ಯದಲ್ಲಿ ''ಸಕಾರಣಂ'' ಇತ್ಯಾದಿ ವಿಶೇಷಣಗಳಿಂದ ''ಓಂ ಜನ್ಮಾದ್ಯಸ್ಯಯತಃ ಓಂ'' ಎಂಬ ಎರಡನೇ ಸೂತ್ರದ ಅರ್ಥವು ಬ್ರಹ್ಮಾಂಡಾದಿ ಪ್ರಕೃತಿಪರ್ಯಂತವಾದ ಕಾರಣಸಮುದಾಯಗಳೆಲ್ಲಾ ಸಕಲ ಕಾರ್ಯಗಳೂ ಸಹ, ಪರಮಾತ್ಮನಾದ ವಿಷ್ಣುವಿಗೆ ಅಧೀನಗಳೆಂಬ ಪರಮಾರ್ಥವು ''ಯದಧೀನಾ ಯಸ್ಯಸತ್ತಾತತ್ತದಿತ್ಯೇವ ಭಣ್ಯತೆ'' ಎಂಬ ನ್ಯಾಯದಿಂದ ಸಮರ್ಥಿಸಲ್ಪಟ್ಟಿದೆ.

ಮೂರನೇ ಪದ್ಯದಲ್ಲಿ :- ಇಡೀ ಅಪೌರುಷೇಯವಾದ ವೇದಕ್ಕೆ ಪ್ರಥವಕ್ತೃವೆಂಬ ಪ್ರಮೇಯವು ''ವೇದಾನಾಂ ಪ್ರಥಮವಕ್ತೃತ್ವೇನವೇದಇತ್ಯುಚ್ಯತೇ ಹರಿಃ''

**ವೇದಾನಾಂ ಪ್ರಥಮೋ ವಕ್ತಾ ಹರಿರೇವ ಯತೋ ವಿಭುಃ।**
**ಅತೋ ವಿಷ್ಣಾತ್ಮಕಾ ವೇದಾಃ ಇತ್ಯಾಹುಃವೇದವಾದಿನಃ।।**

(ಇತಿಶಬ್ದನಿರ್ಣಯೇ) ಎಂಬುದಾಗಿ ಸಮರ್ಥಿಸಲ್ಪಟ್ಟಿದೆ.

ಈ ರೀತಿಯಾಗಿ ಸಮಸ್ತಪ್ರತಿಪಾದ್ಯವಾದ ಶ್ರೀಹರಿಯ ಮಹಿಮೆಗೆ ಶ್ರೀಬ್ರಹ್ಮಪಾರಸ್ತೋತ್ರವು ಆದರ್ಶಪ್ರಾಯವಾಗಿರುವುದರಿಂದ ಸಕಲ ಮುಕ್ತಿಯೋಗ್ಯಚೇತನರು ದೇವರ ಪೂಜಾಕಾಲದಲ್ಲಿ ನಿತ್ಯವೂ ಪಠಿಸುವ ಸಂಪ್ರದಾಯವು ಇಂದಿಗೂ ರೂಢಿಯಲ್ಲಿದೆ.

ಎರಡನೇ ಪದ್ಯದಲ್ಲಿನ ರೂಪೈರಶೇಷೈರವತೀಹ ಸರ್ವಂ = ಎಂಬುದರಿಂದ ಪರಮಾತ್ಮನು ಸಕಲ ಜಗತ್ತಿನ ರಕ್ಷಣೆಯನ್ನು ನಾನಾ ರೂಪಗಳಿಂದ ಮಾಡುತ್ತಿರುವ ವಿಷಯವು ಸೂಚಿತವಾಗಿದೆ. ಮೂರನೇ ಪದ್ಯದಲ್ಲಿ ಬ್ರಹ್ಮ ಪ್ರಜಾನಾಂಪತಿರಚ್ಯುತೋಽಸೌ =ಎಂಬಲ್ಲಿ ಸರ್ವಸ್ವಾಮಿತ್ವವೂ ಉಕ್ತವಾಗಿದೆ. ಇದು ಕರ್ಮಕ್ಷಯಪಾದದಲ್ಲಿ ಓಂ ಆತ್ಮೇತಿರೂಪಗಚ್ಛಂತಿಗ್ರಾಯಂತಿಚ'' ಎಂಬ ಸೂತ್ರಾರ್ಥದ ಸಂಗ್ರಹರೂಪವಾಗಿದೆ.

ಬ್ರಹ್ಮಾವ್ಯಯಂ ನಿತ್ಯಮಜಂ ಸವಿಷ್ಣುಃ = ಎಂಬಲ್ಲಿ ಪರಮಾತ್ಮನಿಗೆ ಚತುರ್ವಿಧ ನಾಶವು ಇರುವುದಿಲ್ಲವೆಂಬ ಪ್ರಮೇಯವೂ ಮತ್ತು ಅಪಕ್ಷಯಾದ್ಯೈರವಿಲೈರಸಂಗಿ'' ಎಂಬ ವಿಶೇಷಣದಿಂದ ಇಡೀ ಬ್ರಹ್ಮಸೂತ್ರದ ಎರಡನೇ ಅಧ್ಯಾಯದ ನಿರ್ದೋಷತ್ವಪ್ರಮೇಯದ ನಿರೂಪಣೆಯನ್ನು ಮಾಡಲಾಗಿದೆ.

ಶ್ರೀಬ್ರಹ್ಮಪಾರಸ್ತೋತ್ರದಲ್ಲಿನ ಒಂದೊಂದು ವಿಶೇಷಣದಿಂದಲೂ ಸೂಚಿತವಾದ ಬ್ರಹ್ಮಸೂತ್ರಗಳ ಅರ್ಥದ ನಿರೂಪಣೆ.

೧) ಪಾರಂಪರಂ = ಪರಂ = ಪೂರ್ಣಂ = ದೇಶದಿಂದಲೂ, ಗುಣಗಳಿಂದ ಪೂರ್ಣ, ಅಂದರೆ ವಿಷ್ಣುಃ

೧) ಬ್ರಹ್ಮಶಬ್ದಾರ್ಥದ ನಿರೂಪಣೆ.

೨) ಸಂಪ್ರದಾಯಪರ ಪರೆಯಿಂದ ಉಪದೇಶಪ್ರಾಪ್ಯಂ = ಎಂಬುದರಿಂದ,

''ಪ್ರದಾನವದೇವ ಹಿ ತದುಕ್ತಂ ಓಂ

ಓಂ ಲಿಂಗಭೂಯಸ್ತ್ವಾತ್ತದ್ಧಿ ಬಲೀಯಸ್ತದಪಿ ಓಂ ಎಂಬ ಎರಡು ಸೂತ್ರಗಳ ಅರ್ಥದ ಸಂಗ್ರಹ ರೂಪವಾದ ಪ್ರತಿಪಾದನೆ.

೩) ವಿಷ್ಣು ಶಬ್ದದಿಂದ ಅನುವ್ಯಾಖ್ಯಾನದಲ್ಲಿ ಉಕ್ತವಾಗಿರುವ ಸ್ವಯಂ ಭಗವತಾ ವಿಷ್ಣುರ್ಬ್ರಹ್ಮೇತ್ಯೇ ತತ್ಪುರೋದಿತಂ। ಸ ವಿಷ್ಣುರಾಹ ಹೀತ್ಯಂತೇ ದೇವಶಾಸ್ತ್ರಸ್ಯ ತೇನ ಹಿ।।

**ವಿಷ್ಣುನಾಮಾರ್ಥರೂಪತ್ವಂ ಸಂಹಿತಾದೇರಥಾಬ್ರವೀತ್।**
**ಣಕಾರಂ ಚ ಷಕಾರಂಚ ಬಲಚೇಷ್ಟಾತ್ಮಕಂ ವದನ್।।**
**ತಜ್ಞಾನಪೂರ್ವಕತ್ವೇನ ಸಂಹಿತಾಧ್ಯಯನಂ ತಥಾ।**
**ಉಪಸರ್ಗತ್ವತೋ ವೇಸ್ತು ತಾತ್ಪರ್ಯಾರ್ಥಾದುನ್ತಥಾ**
**ಣಕಾರಶ್ಚ ಷಕಾರಶ್ಚನಾಮರೂಪತಯಾಮತೌ**

ತಸ್ಮಾತ್ಸಮನ್ವಯೋವಿಷ್ಣೌಸ್ವರವರ್ಣಪದಾತ್ಮನಃ =ಎಂಬ ಅನುವ್ಯಾಖ್ಯಾನದ ವಾಕ್ಯಾರ್ಥವು ಕೇವಲ ವಿಷ್ಣು ಪದದಿಂದ ಸೂಚಿತವಾಗಿದೆ.

೨) ಸವಿಷ್ಣುರಾಹಹಿ ತಂಬ್ರಹ್ಮೇತ್ಯಾಚಕ್ಷತೇ = ಎಂಬ ದೈವೀಮೀಮಾಂಸಾ ಶಾಸ್ತ್ರದಲ್ಲಿನ ಅಂತಿಮವಾದ ಎರಡು ಸೂತ್ರಗಳುಅರ್ಥದ ಸೂಚನೆ.

೩) ಪರಂ = ನಿರ್ದೋಷಂ, ಗುಣಪೂರ್ಣಂ = ಎಂಬುದರಿಂದ ಅವಿರೋಧ್ಯಾಯನ ಮತ್ತು ಪ್ರಥಮಾಧ್ಯಾಯದ ಅರ್ಥ ನಿರೂಪಣೆ.

೪) ಪಾರಂ = ಸಂಸಾರಾಬ್ಧನಃಪಾರಭೂತಂ = ಎಂಬುದರಿಂದ ''ಓಂಮುಕ್ತೋಪಸೃಪ್ಯವ್ಯಪದೇಶಾತ್ ಓಂ ಎಂಬ ಸೂತ್ರಾರ್ಥದ ನಿರೂಪಣೆ.

೫) ''ಅಪಾರಪಾರಃ'' ಅಪರಿಮಿತಶಕ್ತಿಃ'' ಅನಂತಶಕ್ತಿರ್ಭಗವಾನ್ ಅನಂತ ಇತಿವಚನಾತ್ = ಎಂಬುದರಿಂದ ''ಪರಾಸ್ಯಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾಚ'' ಇತ್ಯಾದಿ ಶ್ರುತ್ಯರ್ಥವನ್ನು ಸಂಗ್ರಹಿಸಲಾಗಿದೆ.

೬) ಅಪಾರಸ್ಯ, ಅಸಮಾಪ್ತಸ್ಯಕರ್ಮಣಃಪಾರಃ = ಸ್ವಸಮರ್ಪಣೇನಪೂರಕಃ = ಇದರಿಂದ ''ಮಾಂವಿಧತ್ತೇ ಅಭಿಧತ್ತೇ ಮಾಂ'' ಇತ್ಯಾದಿ ಭಾಗವತದ ಏಕಾದಶ ಸ್ಕಂಧದಲ್ಲಿನ ಶ್ರೀಕೃಷ್ಣ ಪರಮಾತ್ಮನ ವಾಕ್ಯಾಭಿಪ್ರಾಯದ ಸೂಚನೆ.

೭) ಪರಃ ಪರೇಭ್ಯಃ = ಬ್ರಹ್ಮಾದಿಭ್ಯಃ ಉತ್ತಮಃ = ಎಂಬುದರಿಂದ ಇಂದ್ರಿಯೇಭ್ಯಃ ಪರಾಹ್ಯರ್ಥಾಃ ಇತ್ಯಾದಿ ಕಾಠಕೋಪನಿಷತ್ತಿನಲ್ಲಿ ಉಕ್ತವಾಗಿರುವ, ಸಾಕಾಷ್ಠಾಸಾಪರಾಗತಿಃ'' ಎಂಬ ಸರ್ವೋತ್ತಮತ್ವ ಸಮರ್ಥನೆ ಮತ್ತು ತಾರತಮ್ಯ ಪ್ರತಿಪಾದನೆ.

೮) ಪರಮಾರ್ಥರೂಪೀ = ಪರಮಾರ್ಥಂ = ಅವಿನಾಶಿರೂಪಂ ದೇಹೋ ಅಸ್ಯಾಸ್ತೀತಿ, ಪರಮಾರ್ಥರೂಪೀ ಎಂಬುದರಿಂದ ''ಓಂ ಆಹಚತನ್ಮಾತ್ರಂಓಂ ಓಂ ಅರೂಪವದೇವಹಿತತ್ಪ್ರಧಾನತ್ವಾತ್ ಓಂ ಎಂಬ ಸೂತ್ರಾರ್ಥಗಳ ಸೂಚನೆ.

೯) ಯದ್ವಾಸ್ವತಂತ್ರರೂಪವಾನ್ = ಎಂಬುದರಿಂದ "ಸ್ವತಂತ್ರಂಪರತಂತ್ರಂಚ" ಇತ್ಯಾದಿ ಸಿದ್ಧಾಂತಾರ್ಥದ ನಿರೂಪಣೆ.

೧೦) ಪಾರಃ = ಸರ್ವೇಷಾಂ, ಆಶ್ರಯತ್ವೇನ ತೀರಭೂತಃ = ಎಂಬುದರಿಂದ "ಸರ್ವಾಶ್ರಯಃ" ಇತ್ಯಾದಿ ಭಾಷ್ಯಾರ್ಥದ ಸಂಗ್ರಹದ ಸೂಚನೆ.

೧೧) ಪರಪಾರಭೂತಃ = ಸರ್ವಜಗನ್ಮೂಲಕಾರಣಭೂತಪ್ರಧಾನಸ್ಯ ಪಾರಭೂತಃ ಆಶ್ರಯೀಭೂತಃ = ಎಂಬುದರಿಂದ ಪ್ರಕೃತ್ಯಧಿಕರಣದ ವಾಕ್ಯಾರ್ಥವನ್ನು ಸಂಗ್ರಹಿಸಿದಂತಾಗಿದೆ.

೧೨) ಸ್ವೇತರೇಷಾಂ ಅಸಂಕರಕೃದ್ಧರ್ಮಮರ್ಯಾದಾಭೂತಃ = ಎಂಬುದರಿಂದ "ಏಷಸೇತುರ್ವಿಧಾರಣಃ" ಇತ್ಯಾದಿ ಶ್ರುತ್ಯರ್ಥವನ್ನು ಸಂಗ್ರಹಿಸಲಾಗಿದೆ.

ಇದರಿಂದ ಓಂ ಪರಮತಃ ಸೇತೂನ್ಮಾನಸಂಬಂಧಭೇದವ್ಯಪದೇಶೇಭ್ಯಃಓಂ ಎಂಬ ಸೂತ್ರಾರ್ಥದ ಸಂಗ್ರಹದ ಸೂಚನೆಯು ಕಂಡುಬಂದಿದೆ.

೧೩) ಪಾರಪಾರಃ = ಬ್ರಹ್ಮಾದೀನಾಂಪಾಲಕಃಪೂರಕಶ್ಚ = ಎಂಬುದರಿಂದ ಜನ್ಮಾದ್ಯಧಿಕರಣವಾಕ್ಯಾರ್ಥದ ನಿರೂಪಣೆ.

೧೪) ಸಕಾರಣಂ = ಎಂಬುದರಿಂದ ಪ್ರಕೃತ್ಯಧಿಕರಣವಾಕ್ಯಾರ್ಥದಂತೆ ಪರಮಾತ್ಮನಿಗೆ ನಿಮಿತ್ತ ಕಾರಣತ್ವವನ್ನು ನಿರೂಪಿಸಿದಂತಾಗಿದೆ. ಬ್ರಹ್ಮಪರಿಣಾಮವು ಜಗತ್ತೆಂಬ ವಾದವೂ ವಿವರ್ತವಾದಿಗಳಾದ ಐಕ್ಯವಾದಿಗಳ ಮತವೂ ಖಂಡಿಸಲ್ಪಟ್ಟಿದೆ.

೧೫) ರೂಪೈರಶೇಷೈರವತೀತಸರ್ವಂ = ಓಂ ಯೋನಿಶ್ಚ ಹೀಗೀಯತೇಓಂ ಇತ್ಯಾದಿ ಸೂತ್ರಗಳನ್ನು ಸಂಗ್ರಹಿಸಿ ತಿಳಿಸಿದಂತಾಗಿದೆ.

೧೬) ಬ್ರಹ್ಮ = ವೇದಃ ಸಃ = ವೇದೋಽಪಿ ಸಃ = ವೇದಾನಾಂ ಪ್ರಥಮವಕ್ತೃತ್ವೇನ ವೇದ ಇತ್ಯುಚ್ಯತೆ, ವೇದಾನಾಂಪ್ರಥಮೋವಕ್ತಾವೇದ ಇತ್ಯುಚ್ಯತೇ ಹರಿಃ = ಇತ್ಯಾದಿ ವಾಕ್ಯದಲ್ಲಿ ಪ್ರಥಮವಕ್ತೃತ್ವೇನ ಎಂದು ಹೇಳಲಾಗಿದೆಯೇ ಹೊರತು ವೇದಾನಾಂ ಕರ್ತೃತ್ವೇನ ಎಂದು ಹೇಳಲಿಲ್ಲವಾದ್ದರಿಂದ "ವೇದಾಪೌರುಷೇಯತ್ವ" ವಾಕ್ಯಾರ್ಥವನ್ನು ಸೂಚಿಸಿದಂತಾಗಿದೆ. ವೇದಕ್ಕೆ ಕರ್ತೃಪ್ರಸಿದ್ಧಿಯು ಇರುವುದಿಲ್ಲ. ವೇದಾಪೌರುಷೇಯತ್ವದ ವಾಕ್ಯಾರ್ಥವನ್ನು ತಾತ್ಪರ್ಯಚಂದ್ರಿಕಾಕಾರರು ಬಹು ರಮಣೀಯವಾಗಿ ನಿರೂಪಿಸಿದ್ದಾರೆ. ತಾತ್ಪರ್ಯ ಚಂದ್ರಿಕಾವ್ಯಾಖ್ಯಾಕಾರರಾದ ಪ್ರಕಾಶವ್ಯಾಖ್ಯಾನವನ್ನು ರಚಿಸಿರುವ ಶ್ರೀ ರಾಘವೇಂದ್ರ ಗುರುಸಾರ್ವಭೌಮರು ನಿರ್ಣಯಿಸಿರುವ ವೇದಾಪೌರುಷೇಯತ್ವದ ಮಾರ್ಮಿಕವಾದ ಅರ್ಥವೇ ಸಂಗ್ರಹವಾಗಿ ಇಲ್ಲಿ ಸೂಚಿತವಾಗಿದೆ.

೧೭) ಅಪಕ್ಷಯಾದ್ಯೈರಖಿಲೈರಸಂಗಿ = ಎಂಬುದರಿಂದ ಸಮಗ್ರವಾದ ಅವಿರೋಧಾಧ್ಯಾಯದಲ್ಲಿ ಪ್ರತಿಪಾದ್ಯವಾದ ನಿರ್ದೋಷತ್ವದ ಪ್ರತಿಪಾದನೆಯನ್ನು ಮಾಡಿದಂತಾಗಿದೆ.

೧೮) ಬ್ರಹ್ಮಾಕ್ಷರಂ = ಎಂಬುದರಿಂದ ''ಓಂ ಅಕ್ಷರಂ, ಅಂಬರಾಂತಧೃತೇಃಓಂ ಎಂಬ ಅಕ್ಷರಾಧಿಕರಣ ವಾಕ್ಯಾರ್ಥವು ಸಂಗ್ರಹಿಸಲ್ಪಟ್ಟಿದೆ.

೧೯) ಪುರುಷೋತ್ತಮಃ =ಪುರುಷಶ್ಚ + ಪುರುಷಶ್ಚ =ಪುರುಷೌತಾಭ್ಯಾಂಉತ್ತಮಃ ಎಂಬುದರಿಂದ ಶ್ರೀಭಗವದ್ಗೀತೆಯಲ್ಲಿನ ''ಯೋ ಮಾಮೇವಮಸಂಮೂಢೋ ಜಾನಾತಿ ಪುರುಷೋತ್ತಮಂ'' ಎಂಬ ಗೀತೆಯ ಹದಿನೈದನೇ ಅಧ್ಯಾಯದ ಅರ್ಥವೆಲ್ಲಾ ಸಂಗ್ರಹಿಸಲ್ಪಟ್ಟಿದೆ.

೨೦) ''ಅವಾಪಪರಮಾಂ ಸಿದ್ಧಿಂ ಸತಮಾರಾಧ್ಯಕೇಶವಂ'' = ಎಂಬುದರಿಂದ ''ಮೋಕ್ಷಪ್ರದೋವಾಸುದೇವಃ'' ಎಂಬ ವಚನವಂತೆ, ಬ್ರಹ್ಮರುದ್ರಾದಿ ಸಕಲ ದೇವತೆಗಳಿಗೂ ಪ್ರೇರಕನಾಗಿರುವ ಸರ್ವೋತ್ತಮನಾದ ಪರಮಾತ್ಮನಿಗೆ ಪರಮಸಿದ್ಧಿರೂಪವಾದ ಮೋಕ್ಷಪ್ರದತ್ವವು ಸೂಚಿತವಾಗಿದೆ.

೨೧) ''ತಥಾರಾಗಾದಯೋದೋಷಾಃ ಪ್ರಯಾಂತುಪ್ರಶಮಂಮಮ'' = ಎಂಬ ಭಾಗದಿಂದ, ಪರಮಾತ್ಮನ ಪ್ರಸಾದದಿಂದ ರಾಗಾದಿಲಿಂಗಶರೀರಾಂತ ಸಕಲ ಅನಿಷ್ಟನಿವೃತ್ತಿ (ಲಿಂಗಭಂಗರೂಪ) ಗಳೂ ಆಗುತ್ತವೆಯೆಂಬುದು ಸೂಚಿಸಲ್ಪಟ್ಟಿದೆ.

೨೨) ''ಯಸ್ಯಪ್ರಸಾದಾತ್, ಪರಮಾರ್ತಿರೂಪಾತ್, ಅಸ್ಮಾತ್ಸಂಸಾರಾನ್ಮುಚ್ಯತೇನಾಪರೇಣ। ನಾರಾಯಣೋಽಸೌಪರಮೋವಿಚಿಂತ್ಯೋಮುಮುಕ್ಷುಭಿಃಕರ್ಮಪಾಶಾದಮುಷ್ಮಾ ತ್'' ಇತ್ಯಾದಿಶ್ರುತಿಯ ಅರ್ಥ ವಿಶೇಷವೂ ಸಹ ಮೇಲೆ ಉದಾಹರಿಸಿದ ಬ್ರಹ್ಮಪಾರಸ್ತೋತ್ರದ ಮಂತ್ರ ಭಾಗದಿಂದ ಸೂಚಿಸಲ್ಪಟ್ಟಿದೆ. ಅಂತೂ ಈ ರೀತಿಯಾಗಿ ''ಪಾರಂಪರಂ ಇತ್ಯಾದಿಯಾದ ಕಂಡುಮುನಿಗೆ ಪರಮಸಿದ್ಧಿಯನ್ನು ತಂದುಕೊಟ್ಟ ಬ್ರಹ್ಮಪಾರಸ್ತೋತ್ರವು ಶ್ರೀಮನ್ಮಧ್ವಾಚಾರ್ಯರಿಂದ ವಿರಚಿತಗಳಾದ ಬ್ರಹ್ಮಸೂತ್ರ ಭಾಷ್ಯ, ಅನುವ್ಯಾಖ್ಯಾನಗಳಿಂದ ನಿರ್ಣೀತವಾದ ಶ್ರೀವೇದವ್ಯಾಸರಿಗೆ ಪರಮಸಮ್ಮತವಾದ ವೇದಾಂತ ಸಿದ್ಧಾಂತ ಪ್ರತಿಪಾದ್ಯಗಳಾದ ಅತಿಗಹನಗಳಾದ ಅರ್ಥಗಳಿಂದ ಅತಿ ಗಂಭೀರವಾದ ಸಾರಸಂಗ್ರಹವಾದ ಸ್ತೋತ್ರವಾಗಿದೆ. ಇದನ್ನು ಶ್ರೀಮದ್ಗೀತಾತಾತ್ಪರ್ಯದಲ್ಲಿ ಶ್ರೀಮದಾಚಾರ್ಯರು ಉದಾಹರಿಸಿರುವ ಪ್ರಮಾಣದಲ್ಲಿ ಉಕ್ತವಾಗಿರುವಂತೆ ಪ್ರಮೇಯ ವಿಶೇಷಗರ್ಭಿತವಾದ ಶ್ರೀವಿಷ್ಣು ಭಕ್ತಿಯಿಂದ ಅರ್ಥಾನುಸಂಧಾನ ಪೂರ್ವಕವಾಗಿ ಪಠಿಸುವವರಿಗೆ ಪರಮಾತ್ಮನ ಪರಮಾನುಗ್ರಹದಿಂದ ಪರಮಸಿದ್ಧಿಯು ಉಂಟಾಗುತ್ತದೆಯೆಂಬುದರಲ್ಲಿ ಯಾವ ಸಂದೇಹವೂ ಇರುವುದಿಲ್ಲ. ಸ್ತೋತ್ರದಲ್ಲಿ ಶಬ್ದಗಳ ಮತ್ತು ಅರ್ಥಗಳ ಪೌನರುಕ್ತ್ಯವು ದೋಷಾಧಾಯಕವಲ್ಲವೆಂಬುದು ಸರ್ವಸಂಮತ. ಈ ಬ್ರಹ್ಮಪಾರಸ್ತೋತ್ರದಲ್ಲಿ ಇನ್ನೂ ಸಿದ್ಧಾಂತ ಸಮ್ಮತಗಳಾದ ಅನೇಕ ರಹಸ್ಯ ಸ್ವಾರಸ್ಯಾಂಶಗಳು ನಿಗೂಢವಾಗಿವೆ. ಲೇಖನ ವಿಸ್ತಾರ ಭಯದಿಂದ ಅವೆಲ್ಲವನ್ನೂ ನಿರೂಪಿಸಿಲ್ಲ.

ಇಲ್ಲಿಗೆ ಶ್ರೀಹರಿಸರ್ವೋತ್ತಮತ್ವಕ್ಕೆ ಸಾಧಕವಾದ ಅಂಶಗಳಿಂದ ವಿಖ್ಯಾತವಾದ ನಿತ್ಯವೂ ದೇವರಪೂಜಾ ಪ್ರಾರಂಭದಲ್ಲಿ ಪಠಿಸಲ್ಪಡತಕ್ಕುದಾದ -

ಶ್ರೀಬ್ರಹ್ಮಪಾರಸ್ತೋತ್ರದ ಅರ್ಥವಿವರಣೆಯು ಸಮಾಪ್ತವಾಯಿತು.

**"ಸರ್ವೇಂದ್ರಿಯ ಪ್ರೇರಕೇಣ ಶ್ರೀ ಪ್ರಾಣಪತಿನೇರಿತಃ।**
**ಯದವೋಚಮಹಂತೇನಪ್ರೀಯತಾಂ ಕಮಲಾಲಯಃ।।**

**ಇತಿ ಕೃಷ್ಣಾರ್ಪಣಮಸ್ತು**

"ಶ್ರೀಹರಿಸರ್ವೋತ್ತಮತ್ವ" ದ ಪ್ರತಿಪಾದನೆಯ ಅಂಗವಾಗಿ ಇನ್ನು ಕೆಲವೇ ವಾಕ್ಯಗಳನ್ನು ಬರೆದು ಮುಂದೆ ಶ್ರೀರಾಘವೇಂದ್ರ ಗುರುಸಾರ್ವಭೌಮರಿಂದ ವಿರಚಿತವಾಗಿರುವ ಗ್ರಂಥದ ಜನ್ಮಾದಿಕರಣದ ಕನ್ನಡಾನುವಾದವನ್ನು ಪ್ರಾರಂಭಿಸುತ್ತೇವೆ.

ಅಪೌರುಷೇಯವಾದ ವೇದವು ಆಪ್ತ ಬಂಧುವಿನಂತೆ ಸಕಲಮುಕ್ತಿಯೋಗ್ಯಚೇತನರ ದುಃಖಪರಿಹಾರಕ್ಕಾಗಿ ಸರ್ವೋತ್ತಮನಾದ ಶ್ರೀಹರಿಯನ್ನು ಪರಮ ಮುಖ್ಯ ವೃತ್ತಿಯಿಂದ ಪ್ರತಿಪಾದಿಸುತ್ತಲಿದೆ. ಇದನ್ನು "ಅದುಃಖಮಿತ ರತ್ನರ್ವಂಜೀವಾಪವತುದುಃಖಿನಃ। ತೇಷಾಂದುಃಖಪ್ರಹಾಣಾಯ ಶ್ರುತಿರೇಷಾಪ್ರವರ್ತತೇ" ಎಂದು ಶ್ರುತಿಯೇ ಹೇಳುತ್ತಲಿದೆ.

"ತಾವಾ ಏತಾಃ ಸರ್ವಾಋಚಃಸರ್ವೇವೇದಾಃಸರ್ವೇಘೋಷಾಃ ಪ್ರಾಣಏವ ಪ್ರಾಣಾಋಚಏವೇತಿ" ಇತ್ಯಾದಿ ಐತರೇಯ ವಚನವೂ ಸಹ ಅದನ್ನೇ ಪುಷ್ಟೀಕರಿಸುತ್ತಲಿದೆ.

"ವೇದೈಶ್ಚಸರ್ವೈರಹಮೇವವೇದ್ಯಃ" ಎಂದು ಗೀತಾಚಾರ್ಯನಾದ ಶ್ರೀಕೃಷ್ಣಪರಮಾತ್ಮನು ತನಗೆ ಸಕಲ ವೇದವೇದ್ಯತ್ವವನ್ನು ಘೋಷಣ ಮಾಡಿದ್ದಾನೆ.

**ಒಂದು ಲಕ್ಷ ಶ್ಲೋಕಾತ್ಮಕವಾದ ಶ್ರೀಮನ್ಮಹಾಭಾರತವೂ ಸಹ ಆದಿ, ಮಧ್ಯ, ಅಂತ್ಯಗಳಲ್ಲಿ ಶ್ರೀಹರಿಯ ಸರ್ವೋತ್ತಮತ್ವವನ್ನೇ ಪ್ರತಿಪಾದಿಸುತ್ತಲಿರುವ ವಿಷಯವನ್ನು ಶ್ರೀಮದಾಚಾರ್ಯರು ಶ್ರೀ ಮಹಾಭಾರತ ತಾತ್ಪರ್ಯ ನಿರ್ಣಾಯದಲ್ಲಿ ನಿರ್ಣಯಿಸಿರುತ್ತಾರೆ. ಆ ಶ್ಲೋಕಗಳು ಈ ರೀತಿ ಇವೆ.**

**"ಸತ್ಯಂ ಸತ್ಯಂ ಪುನಃ ಸತ್ಯಂ ಉದ್ಧೃತ್ಯ ಭುಜಮುಚ್ಯತೇ।**
**ವೇದಶಾಸ್ತ್ರಾತ್ಪರಂನಾಸ್ತಿನದೈವಂ ಕೇಶವಾತ್ಪರಮ್।। (ಅಂತಿಮ ಮಹಾಭಾರತ ವಚನ)**

(ಆದಿಯಲ್ಲಿ) ಪ್ರಾರಂಭದಲ್ಲಿ ಶ್ರೀವೇದವ್ಯಾಸರು ಶ್ರೀಮನ್ಮಹಾಭಾರತದಲ್ಲಿ

**"ನಾಸ್ತಿ ನಾರಾಯಣಸಮಂ ನಭೂತಂ ನಭವಿಷ್ಯತಿ।**
**ಏತೇನಸತ್ಯವಾಕ್ಯೇನ ಸರ್ವಾರ್ಥಾನ್ ಸಾಧಯಾಮ್ಯಹಮ್।।**
**(ಎಂಬುದಾಗಿ ಆದ್ಯ ಶ್ಲೋಕವು)"**

**ಆದ್ಯಂತಯೋರಿತ್ಯವದತ್ಸಯಸ್ಮಾದ್ ವ್ಯಾಸಾತ್ಮಕೋವಿಷ್ಣುರುದಾರಶಕ್ತಿ: ।**
**ತಸ್ಮಾತ್ಸಮಸ್ತಾಹರಿಸದ್ಗುಣಾನಾಂ ನಿರ್ಣೀತಯೇ ಭಾರತಗಾಕಥೈಷಾ ।।**
**(ಇತಿ ಮಹಾಭಾರತ ತಾತ್ಪರ್ಯ ನಿರ್ಣಯ.)**

ಈ ಶ್ಲೋಕಗಳಿಗೆ ವ್ಯಾಖ್ಯಾನ ಮಾಡುವಾಗ ಶ್ರೀವಾದಿರಾಜಸ್ವಾಮಿಗಳು ತಮ್ಮ "ಗುರುಭಾವ ಪ್ರಕಾಶಿಕಾ" ಎಂಬ ವ್ಯಾಖ್ಯಾನದಲ್ಲಿ ಈ ಕೆಳಗೆ ಕಂಡಂತೆ ವಿವರಣೆಯನ್ನು ನಿರೂಪಿಸಿರುವರು.

"ಅಧುನಾ ಗ್ರಂಥೋಪಕ್ರಮೇ ಮಂಗಳಪದ್ಯೇ ಪ್ರಸ್ತಾವಿತಪ್ರಮೇಯಾನುಕೂಲ ಪ್ರಮೇಯ ಮೇವೋತ್ತರಗ್ರಂಥೇವಿಸ್ತರೇಣ ದರ್ಶನೀಯಮ್ । ನತುತದ್ವಿರುದ್ಧಮ್।।

**ಅರ್ಥ** :- ಗ್ರಂಥದ ಆರಂಭದಲ್ಲಿರುವ ಮಂಗಳ ಪದ್ಯದಲ್ಲಿ ಯಾವ ಪ್ರಮೇಯವು ಪ್ರಸ್ತಾಪಿಸಲ್ಪಟ್ಟಿದೆಯೋ ಅದಕ್ಕೆ ಅನುಕೂಲವಾದ ಪ್ರಮೇಯವನ್ನೇನೆ ಮುಂದಿನ ಗ್ರಂಥ ಭಾಗದಲ್ಲಿ ತೋರಿಸಬೇಕು. ಮೊದಲು ಮಂಗಳ ಪದ್ಯದಲ್ಲಿ ನಿರೂಪಿಸಲ್ಪಟ್ಟ ಪ್ರಮೇಯಕ್ಕೆ ವಿರುದ್ಧವಾಗಿ ಮುಂದಿನ ಗ್ರಂಥದಲ್ಲಿ ಪ್ರತಿಪಾದಿಸಬಾರದು. ಆದ್ಯ ಮೂಲ ಶ್ಲೋಕದ ವ್ಯಾಖ್ಯಾನವು ಈ ರೀತಿ ಇದೆ.

ಆದ್ಯಂತಯೋ = ಆದೌ = ಮಂಗಳಪದ್ಯಾನಾಂ ಆದೌ, ಅಂತೇಚೇತ್ಯರ್ಥಃ ಇದಂಚೋಪಲಕ್ಷಣಂ

**ಅರ್ಥ** :- ಗ್ರಂಥದ ಪ್ರಾರಂಭದಲ್ಲಿರುವ ಮಂಗಳ ಪದ್ಯಗಳ ಆದಿಯಲ್ಲೂ, ಕೊನೆಯ ಭಾಗದಲ್ಲೂ ಹಾಗೂ ಮಧ್ಯದಲ್ಲೂ ಸಹ ಎಂದು ಅಭಿಪ್ರಾಯ.

**ಆದೌ = ನಾಸ್ತಿನಾರಾಯಣ ಸಮಂನಭೂತಂನಭವಿಷ್ಯತಿ ।**
**ಏತೇನಸತ್ಯವಾಕ್ಯೇನ ಸರ್ವಾರ್ಥಾನ್ ಸಾಧಯಾಮ್ಯಹಮ್ ।।**

ಇತ್ಯಂತ್ಯೇಃಪದ್ಯೇಃ ಹರಿಸರ್ವೋತ್ತಮತ್ವಂ ಉಪಕ್ರಮ್ಯ

**ಮಧ್ಯೆ ಮಧ್ಯೆ ಚ =**

**೧) ಮಯಿಸರ್ವಮಿದಂಪ್ರೋತಂಸೂತ್ರೇಮಣಿಗಣಾಇವ ।**
**೨) ಮತ್ತ: ಪರತರಂನಾನ್ಯತ್ಕಿಂಚಿದಸ್ತಿಧನಂಜಯ ।**
**೩) ಯಸ್ಮಾದ್ ಕ್ಷರಮತೀತೋಟಹಂಅಕ್ಷರಾದಪಿಚೋತ್ತಮ: ।**
**ಅತೋಟಸ್ಮಿಲೋಕೇವೇದೇಚಪ ಥಿತ: ಪುರುಷೋತ್ತಮ: ।।**
**೪) ಸಸುರಾಸುರಗಂಧರ್ವಂಸಯಕ್ಷೋರಗರಾಕ್ಷಸಮ್ ।**
**ಜಗದ್ವಶೇವರ್ತತೇದಂ ಕೃಷ್ಣಸ್ಯಸಚರಾಚರಮ್ ।।**
**೫) ವಿಶ್ವಂವಿಷ್ಣುರ್ವಷಟ್ಕಾರೋ ಭೂತಭವ್ಯಭವತ್ಪ್ರಭು:**
**ಪೂತಾತ್ಮಾ ಪರಮಾತ್ಮಾಚ ಮುಕ್ತಾನಾಂಪರಮಾಗತಿ: ।।**
**೬) ಏಷ ನಿಷ್ಕಂ ಟಕಃಪಂಥಾಃಯತ್ರಸಂಪೂಜ್ಯತೇಹರಿ: ।**
**ಕುಪಥಂ ತಂವಿಜಾನೀಯಾತ್ ಗೋವಿಂದರಹಿತಾಗಮಮ್ ।।**
**೭) ಅನಾಶ್ರಿತ್ಯೋಚ್ಛ್ರಯೋನಾಸ್ತಿಮುಖ್ಯಮಾಶ್ರಯಮತ್ರಹಿ ।।**

**೮) ರುದ್ರಂಸಮಾಶ್ರಿತಾದೇವಾ: ರುದ್ರೋಬ್ರಹ್ಮಾಣಮಾಶ್ರಿತ:।**
**ಬ್ರಹ್ಮಾಮಾಮಾಶ್ರಿತೋ ನಿತ್ಯಂ ನಾಹಂಕಂಚಿದುಪಾಶ್ರಿತ:"।।**
**ಇತ್ಯಾದಿನಾ ಹರಿಸರ್ವೋತ್ತಮತ್ವಸ್ಯೈವ ಪ್ರಪಂಚಿತತ್ವಾತ್।।**

**ಅಭಿಪ್ರಾಯ** :- ಶ್ರೀವೇದವ್ಯಾಸರು ಉಪಕ್ರಮವಲ್ಲಿ ಪ್ರಾರಂಭದಲ್ಲಿ "ನಾರಾಯಣನಿಗೆ ಸಮರು ಹಿಂದೂ ಇರಲಿಲ್ಲ - ಇಂದೂ ಇಲ್ಲ - ಮುಂದೆಂದೂ ಇರುವುದಿಲ್ಲ. ಇದು ಸತ್ಯವಾದ ವಾಕ್ಯವು. ಇದರಿಂದ ಮಿಕ್ಕೆಲ್ಲಾ ಪ್ರಮೇಯಗಳನ್ನೂ ಸಾಧಿಸುತ್ತೇನೆಂದು ಪ್ರತಿಜ್ಞಾಪೂರ್ವಕವಾಗಿ ಪ್ರಾರಂಭಿಸಿ ಮಹಾಭಾರತದಲ್ಲಿ ಮಧ್ಯಭಾಗದಲ್ಲಿ ಭಗವದ್ಗೀತೆಯಲ್ಲಿಯೂ, ಬೇರೆ ಕಡೆಯೂ ಕೂಡ, ಮತ್ತಃಪರತರಂನಾನ್ಯತ್ಕಿಂಚಿದಸ್ತಿ ಇತ್ಯಾದಿ ವಾಕ್ಯದಿಂದ, ಎಲೈ ಧನಂಜಯೇ (ಅರ್ಜುನನೇ) "ಮತ್ತೋ ಅನ್ಯತ್‌ಪರತರಂ ಕಿಂಚಿನ್ನಾಸ್ತಿ" ನನಗಿಂತಲೂ ಉತ್ತಮವಾದುದು ಬೇರೆ ಯಾವುದೂ ಇಲ್ಲವೆಂದು ಭೂಮಿ ಮೊದಲಾದ ಜಡಪದಾರ್ಥಗಳನ್ನು ಅಪರವೆಂದೂ, ಚೇತನಪ್ರಕೃತಿಯಾದ ರಮಾದೇವಿಯನ್ನು ಪರತತ್ವವೆಂದೂ ನಿರೂಪಿಸಿ, ತಾನು "ಪರತರ" ಸರ್ವೋತ್ತಮನು, ನನ್ನನ್ನು ತೊರತು ಬೇರೆ ಯಾವುದೂ ಪರತರವಿಲ್ಲ. ಸರ್ವೋತ್ತಮ ವಸ್ತುವು ಇಲ್ಲವೆಂದು ಶ್ರೀಹರಿಯಾದ ತನ್ನ ಸರ್ವೋತ್ತಮತ್ವವನ್ನು ಶ್ರೀಕೃಷ್ಣಪರಮಾತ್ಮನು ಪ್ರತಿಪಾದಿಸಿದ್ದಾನೆ. ಮಿಕ್ಕ ಶ್ಲೋಕಗಳ ಅರ್ಥವು ಸ್ಪಷ್ಟವಾಗಿದೆ.

ಇತ್ಯಾದಿ ವಾಕ್ಯಗಳಲ್ಲಿ "ಶ್ರೀಹರಿಯ ಸರ್ವೋತ್ತಮತ್ವವೇ ವಿಸ್ತಾರವಾಗಿ ನಿರೂಪಿಸಲ್ಪಟ್ಟಿದೆ. ಕಡೆಯ ಭಾಗದಲ್ಲೂ ಕೂಡ ಶ್ರೀವೇದವ್ಯಾಸರು,

**ವ್ಯಾಖ್ಯಾನ ಭಾಗ** :- "ಸತ್ಯಂ ಸತ್ಯಂ ಪುನಃ ಉದ್ಧೃತ್ಯಭುಜಮುಚ್ಯತೇ। ವೇದಶಾಸ್ತ್ರಾತ್ಪರಂನಾಸ್ತಿ ನದೈವಂ ಕೇಶವಾತ್ಪರಮ್।। ಇತಿ ಅಂತೇ ಆಶ್ಚರ್ಯಪರ್ವಣಿ ಸದೃಷ್ಟಾಂತಂ ಶಪಥಪೂರ್ವಂ ಉಚ್ಛ್ರಿತಬಾಹುಯುಗಂ ಯಥಾ ಭವತಿಕಥಾ ಶ್ರೀಹರಿಸರ್ವೋತ್ತಮತ್ವಸ್ಯೈವ ಉಪಪಾದಿತತ್ವಾಚ್ಚ।।

**ಅಭಿಪ್ರಾಯ** :- ಕಡೆಯ ಭಾಗದಲ್ಲಿ ಮಹಾಭಾರತದ ಆಶ್ಚರ್ಯಪರ್ವದಲ್ಲಿ ದೃಷ್ಟಾಂತಪೂರ್ವಕವಾಗಿ ಶ್ರೀವೇದವ್ಯಾಸರು ಎರಡೂ ತೋಳುಗಳನ್ನು ಮೇಲೆತ್ತಿಕೊಂಡು "ಶ್ರೀಹರಿಯ ಸರ್ವೋತ್ತಮತ್ವವನ್ನೇ ಘೋಷಣೆ ಮಾಡುತ್ತಾರೆ.

**ವ್ಯಾಖ್ಯಾನ ಭಾಗ** :- ಇತ್ಯಾದಿಮದ್ಯಾವಸಾನಪದ್ಯಾನುಸಾರೇಣ ಸರ್ವಸ್ಯಾಪಿಗ್ರಂಥಸ್ಯ ಯೋಜನೀಯತ್ವಾತ್।

**ಅಭಿಪ್ರಾಯ** :- ಈ ರೀತಿ ಶ್ರೀಮನ್ಮಹಾಭಾರತದ "ನಾಸ್ತಿನಾರಾಯಣಸಮಂ" ಎಂಬ ಆದಿಭಾಗಕ್ಕೂ, "ಮತ್ತಃ ಪರತರಂನಾನ್ಯದ್‌ಕಿಂಚಿದಸ್ತಿಧನಂಜಯ" ಇತ್ಯಾದಿ ಮಧ್ಯ ಭಾಗದ ಗ್ರಂಥಕ್ಕೂ, ಸತ್ಯಂಸತ್ಯಂ ಇತ್ಯಾದಿ ಅಂತ್ಯ ಭಾಗದ "ಸತ್ಯಂಸತ್ಯಂ ಪುನಃ ಸತ್ಯಂ" ಎಂಬ ಘೋಷಣೆಗೂ ತಕ್ಕಂತೆಯೇನೇ ಸಮಗ್ರ ಭಾರತ ಗ್ರಂಥ ಭಾಗದ ಅರ್ಥವನ್ನು ಶ್ರೀಹರಿಯ ಸರ್ವೋತ್ತಮತ್ವಕ್ಕೆ ತಕ್ಕಂತೆ ಯೋಜನೆ ಮಾಡಿ ಅರ್ಥವನ್ನು ನಿರ್ಧರಿಸಬೇಕು.

**ವ್ಯಾಖ್ಯಾನ ಭಾಗ** :- ಪಾದಾಧಿಕಲಕ್ಷ ಭಾರತ ವಾಕ್ಯನ್ಯಪಿಹರೇಃ ಸರ್ವೋತ್ತಮತ್ವೇಏವ ತಾತ್ಪರ್ಯಮಂತಿ।

**ತಾತ್ಪರ್ಯ** :- ಒಂದೂಕಾಲು ಲಕ್ಷ (ಶ್ರೀಹರಿವಂಶದ ಖಿಲಾಖಿಲ ಪಾರಿಜಾತವೆಂಬ ಭಾಗತ್ರಯವೂ ಸೇರಿ ೨೫ ಸಾವಿರ ಶ್ಲೋಕಗಳೂ ಸೇರಿ) ಗ್ರಂಥದ ಸಮಗ್ರ ಭಾರತದ ವಾಕ್ಯಗಳೆಲ್ಲವೂ ಕೂಡ ಶ್ರೀಹರಿಯ ಸರ್ವೋತ್ತಮತ್ವದಲ್ಲಿಯೇ ತಾತ್ಪರ್ಯವುಳ್ಳವುಗಳಾಗಿವೆ.

**ವ್ಯಾಖ್ಯಾನ ಭಾಗ** :- ಉಪಕ್ರಮೋಪಸಂಹಾರಾಭ್ಯಾಸಾಪೂರ್ವತಾಫಲಾರ್ಥ ವಾದೋಪಪತ್ತೀನಾಂ ಮಹಾ ತಾತ್ಪರ್ಯನಿರ್ಣಾಯಕತ್ವಸ್ಯಸಕಲವಿದ್ವಜ್ಜನಸಂಮತತ್ವಾದಿತ್ಯಪಿಜ್ಞೇಯಮ್। ಉಪಕ್ರಮಾದಿ ಲಿಂಗಗಳಿಗೆ ಮಹಾ ತಾತ್ಪರ್ಯ ನಿರ್ಣಯಕತ್ವವು ಇದೆಯೆಂಬುದು ಸರ್ವರಿಗೂ ಸಂಮತವಾದ ವಿಚಾರವಾಗಿದೆ. ಆದಕಾರಣ ಸಕಲವೈದಿಕ ವಾಙ್ಮಯವೂ ಅದಕ್ಕೆ ವ್ಯಾಖ್ಯಾನರೂಪವಾದ ಸಕಲಸ್ಮೃತೀತಿಹಾಸ, ಪುರಾಣಗಳೂ ಪರಮಮುಖ್ಯ ವೃತ್ತಿಯಿಂದಲೂ, ಸಮಾಧಿ ಭಾಷೆಯಿಂದಲೂ ಶ್ರೀಹರಿಯ ಸರ್ವೋತ್ತಮತ್ವದಲ್ಲಿಯೇ ಮಹಾತಾತ್ಪರ್ಯವುಳ್ಳವುಗಳಾಗಿವೆಯೆಂಬುದನ್ನು ಬಹಳ ರಮಣೀಯವಾದ ಸಕಲ ಪ್ರಮಾಣಪೂರ್ವಕವಾದ ನಿರೂಪಣೆಯಿಂದ ಪರಶುಕ್ಲತ್ರಯದಲ್ಲಿ ಸೇರಿದ ಪ್ರಧಾನ ವಾಯುದೇವರ ಮೂರನೇ ಅವತಾರಭೂತರಾದ ಶ್ರೀಮದಾನಂದತೀರ್ಥಭಗವತ್ಪಾದರು ಸಕಲಮುಕ್ತಿಯೋಗ್ಯ ಚೇತನರ ಉಪಕಾರ ದೃಷ್ಟಿಯಿಂದ, ಅನುಗ್ರಹಪೂರ್ವಕವಾಗಿ ''ವಿಷ್ಣೋಃ ಸರ್ವೋತ್ತಮತ್ವಏವ ಮಹಾತಾತ್ಪರ್ಯಂ ಸರ್ವಸದಾ ಗಮಾನಾಮ್'' ಎಂದು ಘೋಷಣೆ ಮಾಡಿರುತ್ತಾರೆ. ಜಗಜ್ಜನನಿಯಾದ ಇತರ ಜೀವರಿಗಿಂತಲೂ ಅಪಾರಮಹಿಮೋ ಪೇತಳಾದ ರಮಾದೇವಿಗೂ ಸಹ ಪೂರ್ತಿಯಾಗಿ ತಿಳಿಯಲು ಅಶಕ್ಯವಾದ ಮಹಿಮೋಪೇತನಾದ ಶ್ರೀಹರಿಯ ಹಿರಿಮೆಯನ್ನು ಎಷ್ಟು ವರ್ಣಿಸಿದರೂ ಅದು ಅಲ್ಪವೇ ಸರಿ. ಕೆಲವನ್ನು ಮಾತ್ರ ನಾವು ವಿವರಿಸುತ್ತೇವೆ. ಇಲ್ಲಿಗೆ ಶ್ರೀಹರಿ ಸರ್ವೋತ್ತಮತ್ವ ನಿರೂಪಣೆಯು ಸಮಾಪ್ತವಾಯಿತು.

**ಕಲ್ಯಾಣಗುಣಪೂರ್ಣಾಯದೋಷದೂರಾಯ ವಿಷ್ಣವೆ।**
**ನಮಃ ಶ್ರೀಪ್ರಾಣನಾಥಾಯ ಭಕ್ತಾಭೀಷ್ಟಪ್ರದಾಯನೇ।।**
**ಸರ್ವೇಂದ್ರಯ ಪ್ರೇರಕೇಣ ಶ್ರೀಪ್ರಾಣಪತಿನೇರಿತಃ।**
**ಯದವೋಚಮಹಂತೇನ ಪ್ರೀಯತಾಂಕಮಲಾಲಯಃ।। ಇತಿ।।**

**ಇತಿ ಶ್ರೀಕೃಷ್ಣಾರ್ಪಣಮಸ್ತು**

ಇನ್ನು ಮುಂದೆ ಶ್ರೀಮದ್ರಾಘವೇಂದ್ರ ಗುರುಸಾರ್ವಭೌಮರು ರಚಿಸಿರುವ ತಂತ್ರದೀಪಿಕಾ ಗ್ರಂಥದಲ್ಲಿನ ಜನ್ಮಾಧಿಕರಣದ ಕನ್ನಡಾನುವಾದವನ್ನು ಪ್ರಾರಂಭಿಸುತ್ತೇವೆ.

# ಶುದ್ಧಾಶುದ್ಧ ತಿದ್ದುಪಡಿ

| ಪುಟ | ಪಂಗ್ತಿ | ಅಶುದ್ಧ | ಶುದ್ಧ |
|---|---|---|---|
| ೧೮ | ೧೦ | ಕುಮೋ | ಕುರ್ಮೋ |
| ೨೪ | ೧೧ | ಬೇದೇನ | ಭೇದೇನ |
| ೨೭ | ೧೮ | ಶಾಸ್ತ್ರಯೋನನತ್ವಾತ್ | ಶಾಸ್ತ್ರಯೋನಿತ್ವಾತ್ |
| ೨೮ | ೨೧ | ಕ್ರಮುವನ್ನನನು | ಕ್ರಮುವನ್ನು |
| ೩೪ | ೧೮ | ಕರಣದಲಿ | ಧಿಕರಣದಲ್ಲಿ |
| ೩೭ | ೨೩ | ೩೧ | ೩೯ |
| ೫೮ | ೨೩ | ವಿವ್ರೋದಕ್ಕೂ | ವಿರೋಧಕ್ಕೂ |
| ೫೯ | ೬ | ವಿ೩ | ವಿ |
| ೬೫ | ೮ | ಪರರ್ಥಾ | ಪರಾರ್ಥಾ |
| ೬೬ | ೧೧ | ಕಾತಸ್ಯ | ಕಾರ್ತ್ಸ್ಯ |
| ೬೯ | ೫ | ಽನ್ಯತ್ರ | ಽನ್ಯತ್ರ |
| ೭೦ | ೮ | ತ್ಯಚಕ್ಷತೆ | ತ್ಯಾಚಕ್ಷತೆ |
| ೭೨ | ೫ | ತಸಮಾಸಃ | ಸಮಾಸಃ |
| ೭೬ | ೬ | ಪ್ರಸನ್ನಬ್ರಹ್ಮಣಃ | ಪ್ರಸನ್ನಾತ್ ಬ್ರಹ್ಮಣಃ |
| ೭೮ | ೧೫ | ಸೋಽ | ಸೋಽ |
| ೮೬ | ೨೫ | ಪರೋಕ್ಷರ್ಥ | ಪರೋಕ್ಷಾರ್ಥ |
| ೯೫ | ೩ | ತ್ವೇಽಪಿ | ತ್ವೇಽಪಿ |
| ೯೬ | ೨ | ತ್ವೇಟಪಿ | ತ್ವೇಽಪಿ |
| ೧೧೪ | ೪ | ರರ್ಥವು | ರಾರ್ಥವು |
| ೧೨೨ | ೫ | ಭಗನ್ಮಾತ್ರ | ಭಗವನ್ಮಾತ್ರ |
| ೧೩೩ | ೧ | ಜಿಜ್ಞಾಸಯಾಃ | ಜಿಜ್ಞಾಸಾಯಾಃ |
| ೧೪೫ | ೨೩ | ದಿಪ | ದೀಪ |
| ೧೫೧ | ೧೩ | ಳಿಲ್ಲವೆಂಬುದನ್ನು | ಗಳೆಂಬುದನ್ನು |
| ೨೫೪ | ೧೨ | ವೇದಜ್ಯ | ವೇದಜ |
| ೨೬೮ | ೨೩ | ಜಿಜ್ಞಾಸ್ಯ | ಜಿಜ್ಞಾಸ್ಯ |
| ೨೮೮ | ೩ | ಏ | ಏಕ |
| ೨೯೯ | ೧೬ | ಪರಮಾ | ಪರಮ |
| ೩೦೩ | ೨೦ | ಪಪ್ಪಲಾದ | ಪಿಪ್ಪಲಾದ |
| ೩೧೭ | ೨೧ | | |
| ೩೨೬ | ೪ | ಏನ | ಏನಂ |
| ೩೩೫ | | ಶ್ರುತಿಯ | ಶ್ರುತಿಯು |
| ೩೩೬ | | ಭಾಗಃ | ನಭಾಗಃ, ಅಸ್ತಿ |
| ೩೩೬ | ೭ | ಶಂಕನ | ಶಂಸನ |

| ಪುಟ | ಪಂಗ್ತಿ | ಅಶುದ್ಧ | ಶುದ್ಧ |
|---|---|---|---|
| ೩೩೬ | ೭ | ಕ್ರಿಯಾಜನ | ಕ್ರಿಯಾಜನ್ಯ |
| ೩೪೫ | | | |
| ೩೪೯ | ೧೮ | ಬ್ರಹ್ಮನಲ್ಲಿಲ | ಬ್ರಹ್ಮನಲ್ಲಿ |
| ೩೫೫ | ೨ | ಶೇಷೋಟಪಿ | ಶೇಷೇಶೋಽಪಿ |
| ೩೬೯ | ೧೮ | ನೇಯು | ನೇಹ |
| ೩೭೯ | ೧೮ | ವಿಸ್ಮೃದಬ | ವಿಷ್ಣುವೂ |
| ೩೮೫ | ೧೫ | ನಶದಸ್ತಿ | ನತದಸ್ತಿ |
| ೪೨೦ | ೧೮ | ಮುಗಿನಿ | ಮುಗಿಸಿ |
| ೪೨೮ | ೧೬ | ತನನ್ನ | ತನ್ನ |
| ೪೩೨ | ೧೦ | ವ್ಯಾಪ್ರ | ವ್ಯಾಘ್ರ |
| ೪೫೦ | ೨೩ | ಹೀರೀತ | ಹಾರೀತ |
| ೪೫೧ | ೭ | ಸಸತ್ಯವರಂ | ಸತ್ಯವರಂ |
| ೪೬೭ | ೨೫ | ಪಾತಾಯತೀತಿ | ಪಾರಯತೀತಿ |
| ೪೬೮ | ೧೮ | ಅನುತಾನಂತ | ಅನಂತಾನಂತ |
| ೪೭೪ | ೨೪ | ವಸ್ತ | ವಸ್ತು |
| ೪೮೧ | ೨೬ | ಶ್ಟಾ | ಶ್ಟ |
| ೪೯೫ | ೧೭ | ವೇದೋಟಪಿ | ವೇದೋಽಪಿ |
| ೪೯೭ | ೧೩ | ಪರಾಣ | ಪ್ರಾಣ |
| ೪೯೮ | ೨೨ | ಆಟೋತಸ್ಮಿ | ಆತೋಽಸ್ಮಿ |

**ವಿಶೇಷ ಸೂಚನೆ:—** ಸೂತ್ರಭಾಷ್ಯದಲ್ಲಿಯೂ, ಅಣುಭಾಷ್ಯದಲ್ಲಿಯೂ ಮಂಗಳ ಪದ್ಯವು ಸಮಾನವಾದ ಅನುಪೂರ್ವಿಯಿಂದ ಇದ್ದಾಗ್ಯೂಸಹ – "ಸೂತ್ರಾರ್ಥಉಚ್ಯತೆ" ಎಂಬುದಾಗಿ ಸೂತ್ರಭಾಷ್ಯದಲ್ಲಿರುವ ಅರ್ಥಶಬ್ದಕ್ಕೆ ಅವ್ಯಕ್ತತರ್ಕತತಿರೂಪವಾದ ಅರ್ಥವೆಂದೂ, (ಅನುವ್ಯಾಖ್ಯಾನದ ಅರ್ಥವು ವ್ಯಕ್ತತರ್ಕತತಿರೂಪವಾದ ಅರ್ಥವೆಂದೂ) ಅಣುಭಾಷ್ಯದಲ್ಲಿ ಮಾತ್ರ ಸೂತ್ರಾರ್ಥವೆಂಬಲ್ಲಿ ಅರ್ಥಶಬ್ದಕ್ಕೆ, ಕೇವಲನಿರ್ಗಳಿತವಾದ ತಾತ್ಪರ್ಯಾರ್ಥವೆಂದೂ (ಫಲಾರೀಯವ್ಯಾಖ್ಯಾನ ರೀತ್ಯಾ) ಶ್ರೀನಾರಾಯಣಪಂಡಿತಾಚಾರ್ಯರ ವ್ಯಾಖ್ಯಾನ ರೀತ್ಯಾ ಪಿಂಡೀಕೃತವಾದ ಅರ್ಥವೆಂದೂ ವಿವೇಚಿಸಿ ಭಿನ್ನಭಿನ್ನಾರ್ಥಗಳಾಗಿ ವ್ಯಾಖ್ಯಾಕಾರರು ವ್ಯಾಖ್ಯಾನಿಸಿರುವುದನ್ನು ಅರಿಯಬೇಕು. ಆದ್ದರಿಂದಲೇ "ಅನಂತೋಽರ್ಥಃಪ್ರಕಟಿತಃತ್ಪಯಾಹಾ ಭಾಷ್ಯ ಸಂಗ್ರಹೇ ಆಹೋಅತ್ರಪರಿಜ್ಞಪ್ತ್ಯೈ ಕೃಷ್ಣೇನೇವಾನನಾಂತರೇ ಎಂದು ಶ್ರೀನಾರಾಯಣ ಪಂಡಿತಾಚಾರ್ಯರು ಪ್ರಶಂಸಿಸಿರುವರು.

ಶ್ರೀಕೃಷ್ಣಪರಮಾತ್ಮನು ತನ್ನ ಪುಟ್ಟ ಬಾಯಲ್ಲಿ ಇಡೀ ಬ್ರಹ್ಮಾಂಡವನ್ನು ತೋರಿಸಿದಂತೆ ಶ್ರೀಮಧ್ವರು ಅತಿಚಿಕ್ಕ ಪದಗಳಿಂದ ಸಮಗ್ರ ಬ್ರಹ್ಮಮೀಮಾಂಸಾ ಶಾಸ್ತ್ರಾರ್ಥದ ಅನಂತಾರ್ಥಗಳನ್ನು ಕ್ರೋಡೀಕರಿಸಿ ಪಿಂಡೀಕೃತವಾಗಿ ತೋರಿಸಿರುವುದು ಅತ್ಯಾಶ್ಚರ್ಯ, ಆಶ್ಚರ್ಯವೆಂಬುದಾಗಿ ಅಹೋ ಎಂದು ಆಶ್ಚರ್ಯವನ್ನು ವ್ಯಕ್ತಪಡಿಸಿದ್ದಾರೆ. ಶ್ರೀಮದಾಚಾರ್ಯರ ರಚನಾಚಾತುರ್ಯಕ್ಕೆ ಆಶ್ಚರ್ಯವನ್ನು ವ್ಯಕ್ತಪಡಿಸಿರುತ್ತಾರೆ.

